*HARIDASA ANDOLANA : ONDU ADHYAYANA*
*by Dr. N. K. Ramasheshan,*
*1574, Krishnamurthypuram, Mysore-570 004.*

*First Edition : 1991, Pp. xii + 538. 1000 Copies*

ಮೊದಲ ಮುದ್ರಣ 1991









ಬೆಲೆ : ರೂ. 150-00

55729

ಮುದ್ರಣ : ಮಿತ್ರ ಪ್ರಿಂಟರ್ಸ್, ವಿದ್ಯಾರಣ್ಯಪುರಂ, ಮೈಸೂರು-8

ಅರ್ಪಣೆ

ಗುರು ವೃಂದಕ್ಕೆ

ತಾಯಿಗೆ

ಹಾಗೂ

ಸೌ|| ಭಾರತಿಗೆ

# ಕೃತಜ್ಞತೆಯ ಎರಡು ಮಾತು

ಭಗವಂತನ ಕೃಪೆ ನೇರವಾಗಿ ಪ್ರವರ್ತಿಸದಿದ್ದರೂ ಬೇರೆ ಬೇರೆ ಮಾಧ್ಯಮಗಳ ಮೂಲಕ ಪ್ರವರ್ತಿಸುತ್ತದೆ ; ಕಾರ್ಯವನ್ನು ಆಗ ಮಾಡಿಸುತ್ತದೆಂಬುದು ಉಪನಿಷದ್ ವಾಕ್ಯವೊಂದರ ಸಾರ. ನನ್ನ ವಿಚಾರದಲ್ಲಿ ಈ ಮಾತು ನಿಜವೆಂದೆ ಹೇಳಬೇಕಾಗಿದೆ. ಅಂದೊಂದು ಸಂಜೆ, (೧೯೮೧ ಮಾರ್ಚ್ ಕೊನೆಯವಾರ) ನನ್ನ ಜೀವವಿಮಾ ಕಛೇರಿ ಕೊನಿಕೆಯ ನಡುವೆ ನಾನು ಇದ್ದಾಗ,ನನ್ನ ವಿದ್ಯಾಗುರುಗಳಾದ ಕಾರ್ಯನಿಮಿತ್ತವಾಗಿ ಬಂದ ಪೂಜ್ಯ ಡಾ|| ಜಿ. ಎಸ್. ಶಿವರುದ್ರಪ್ಪನವರು ನನ್ನಲ್ಲಿ ಬೂದಿಯಾಗದೆ ಇನ್ನೂ ಸ್ವಲ್ಪ ಉಳಿದಿದ್ದ ಕಾರ್ಯೋತ್ಸಾಹಕ್ಕೆ ಚೇತನ ತುಂಬದಿದ್ದರೆ, ನನ್ನ ಇನ್ನೊಬ್ಬ ಗುರುಗಳಾದ ಪೂಜ್ಯ ಡಾ|| ಎಂ. ಚಿದಾನಂದಮೂರ್ತಿಗಳ ಹಾಗೂ ಪೂಜ್ಯ ಡಾ|| ಪಿ. ವಿ. ನಾರಾಯಣರವರ ಮೂಲಕ ಕೆಲವು ವಿಚಾರ ಚರ್ಚೆಗೆ ಪ್ರೋತ್ಸಾಹ, ಬೆಂಬಲ, ಕಾರ್ಯದ ರೂಪುರೇಷೆಗಳ ಬಗ್ಗೆ ತಂತಮ್ಮ ಅಮೂಲ್ಯ ಸಲಹೆಗಳನ್ನು ಅವರು ನೀಡದಿದ್ದರೆ, ಈ ಕಾರ್ಯ ಸರ್ವಥಾ ನೆರವೇರುತ್ತಿರಲಿಲ್ಲ.

ಡಾ|| ಶಿವರುದ್ರಪ್ಪನವರು ತಾವೇ ಕೆಲವು ವಿಷಯ ಸೂಚಿಸಿದುದಲ್ಲದೆ, ಕರ್ನಾಟಕ ಹರಿದಾಸರ ಕೃತಿಗಳ ಸಾಂಸ್ಕೃತಿಕ ಅಧ್ಯಯನವನ್ನೇಕೆ ನಡೆಸಬಾರದೆಂಬ ಸಲಹೆಯಿತ್ತರು. ಡಾ|| ಎಂ. ಚಿದಾನಂದಮೂರ್ತಿಯವರು ಅದನ್ನೊಪ್ಪಿದಂತೆಯೆ ನನ್ನ ಒಂದು ಅನಿಸಿಕೆಗೆ ಮನ್ನಣೆ ನೀಡಿದ ಡಾ|| ನಾರಾಯಣ ಅವರು, ಹರಿದಾಸ ಆಂದೋಲನವೆಂದೇಕೆ ಕೃತಿಗಳ ಅಧ್ಯಯನಗೈಯಬಾರದೆಂದು ಸೂಚಿಸಿದರು. ಅದರಂತೆಯೆ 'ಹರಿದಾಸ ಆಂದೋಲನ–ಒಂದು ಅಧ್ಯಯನ' ನಿಬಂಧದ ರೂಪುರೇಷೆ ಮನದಲ್ಲಿ ಕೊನರಿ, ಬೆಳೆಯತೊಡಗಿತು. ಅದು ಈ ಸ್ವರೂಪ ಪಡೆದಿದೆ. ಜಗತ್ತಿನ ವಿವಿಧೆಡೆ ನಡೆದ ಭಕ್ತಿಯ ಆಂದೋಲನಗಳಲ್ಲಿ ವಚನ ಆಂದೋಲನ ಹರಿದಾಸ ಆಂದೋಲನ ಸ್ಥಾಯಿ ಆಗಿವೆ. ಅವುಗಳು ವಿಶ್ವ ಸಂಸ್ಕೃತಿಗೆ ಒಂದು ಸ್ಥಿರ ಕೊಡುಗೆ. ಹರಿದಾಸ ಆಂದೋಲನ, ಸಾತ್ವಿಕ ಸೌಮ್ಯ ಸ್ವರೂಪದ ಆಂದೋಲನ. ಈ ಅಧ್ಯಯನ ನಡೆಸುವ ಪ್ರಯತ್ನ ಕೈಗೊಂಡಿದ್ದೇನೆ.

ನಾನು ವೃತ್ತಿಯಲ್ಲಿ ಕಾರಕೂನಿಕೆ ಪ್ರವೃತ್ತಿ ಸಾಹಿತ್ಯ ಪರಿಚರ್ಯೆ, ಓದುವುದು, ತಿಳಿದವರ ಬಳಿ ತಿಳಿಯಲೆತ್ನಿಸುವ ಹಂಬಲ ನನ್ನದು. ಅಂತೆಯೇ ನನ್ನ ಅಧ್ಯಯನದಲ್ಲಿ ಆಳ, ಅಳವು ಇಲ್ಲವೇನೊ ಎಂಬ ಕೊರತೆ ಅನೇಕ ಬಾರಿ ಬಾಧಿಸಿದೆ. ಆ ಸಂದರ್ಭ

ದಲ್ಲೆಲ್ಲ ಡಾ॥ ಪಿ. ವಿ. ನಾರಾಯಣರು ನನಗೆ ಕೇವಲ ನಿಬಂಧ ಮಾರ್ಗದರ್ಶ
ಆಗದೆ, ನನ್ನ ಹಿರಿಯ ಸೋದರನಂತೆ ವಾತ್ಸಲ್ಯದಿಂದ ಕಂಡು, ತಿದ್ದಿ, ಅಭಿ
ತಮ್ಮ ಅಭಿಪ್ರಾಯದ ಜೊತೆ ನನ್ನ ಅನಿಸಿಕೆಗಳಿಗೂ ಅಭಿವ್ಯಕ್ತಿ ನೀಡಿದ್ದಾ
ಚಿದಾನಂದಮೂರ್ತಿಗಳವರಂತೂ ತಮ್ಮ ಅನೇಕ ವರ್ಷಗಳ ಸಂಶೋಧನೆಯ
ಪಡೆದಿರುವ ಪ್ರಗಲ್ಭ ಪಾಂಡಿತ್ಯದ ಬೆಳಕಿನಲ್ಲಿ ಅನೇಕ ಸಲಹೆ ನೀಡಿದ್ದಾರೆ
ಜಿ. ಎಸ್. ಎಸ್. ಅವರು ತಮ್ಮ ಕಾವ್ಯಮೀಮಾಂಸೆ, ಕಾವ್ಯಾಭ್ಯಾಸ
ಬೆಳಕಲ್ಲಿ ನನಗೆ ಅನೇಕ ವಿಷಯ ತಿಳಿಸಿದ್ದಾರೆ. ಅಧ್ಯಯನದ ಬಗ್ಗೆ ದೂರದ ಧ
ಡಾ॥ ಎಂ. ಎಂ. ಕಲ್ಬುರ್ಗಿಯವರು ಪ್ರಖ್ಯಾತ ವಿದ್ವಾಂಸರು. ಅವರ ಕೀ
ನಾನು ಪಡೆದಿದ್ದೇನೆ. ಡಾ॥ ಕೆ.ಎಂ.ಕೃ. ಅವರನ್ನೂ ಸಂಪರ್ಕಿಸಿದ್ದೇನೆ.
ಪೇಜಾವರ ಶ್ರೀಗಳವರ ಅಮೂಲ್ಯ ಪತ್ರ, ನನಗೆ ಅವರ ಆಶೀರ್ವಚನ ಒದಗ
ಹಿರಿಯರಂತೆಯೇ ಇನ್ನೊಬ್ಬರು ಹಿರಿಯರು ಮೈಸೂರಿನ ಡಾ॥ ಪಿ.
ರಾಯರು (ಈಗ ದಿವಂಗತರು) ಅವರಿಗೆ ಆರೋಗ್ಯ ಸರಿಯಿರದ ಸಮಯ
ಅವರು ನನ್ನನ್ನು ಕೂರಿಸಿಕೊಂಡು ತಮ್ಮ ಅಮೂಲ್ಯ ಪಾಂಡಿತ್ಯದ ಬೆಳಕ
ರೀತಿಯಲ್ಲಿ ತಿಳುವಳಿಕೆ ನೀಡಿದರು. ನಾನು ಈ ಮಹನೀಯರ ಬಳಿ ಅನೇ
ವನ್ನು ಮುಕ್ತ ಮನದಿಂದ ಚರ್ಚಿಸಿದ್ದೇನೆ. ನನಗೆ ತಮಿಳು ತಾಯಿ ಭಾಷೆಯ
ಒಳ್ಳೆ ತಮಿಳಿನ ಭಾಷಾ ಪ್ರವೇಶವಿರದಕಾರಣ ವರದರಾಜರಾಯರು ಸೂಚಿಸಿದ
'ಆಳ್ವಾರರ ನಾಲಾಯಿರ' ದಿವ್ಯಪ್ರಬಂಧ ಹಾಗೂ ಹರಿದಾಸರ ಕೃತಿ ಕುರಿತ
ಅಧ್ಯಯನವನ್ನು ನಡೆಸಲು ಆಗಲಿಲ್ಲ. ಇದರೊಂದಿಗೆ, ಮೈಸೂರಿನ ಶಾರ
ಕಾಲೇಜಿನಲ್ಲಿ ಸಂಸ್ಕೃತ ಅಧ್ಯಾಪಕರಾಗಿರುವ ಡಾ॥ ಎಸ್. ಶ್ರೀನಿವಾಸಮೂರ್ತಿ
ಮಧ್ವ ಸಂಪ್ರದಾಯ ಕುರಿತು ಕೆಲವು ದಿನ ತಿಳಿಸಿಕೊಟ್ಟಿದ್ದಾರೆ. ಕಟ್ಟೀಮ
ಪ್ರಸಿದ್ಧವಾದ. ಹರಿದಾಸರಾದ ಅಪ್ಪಾಜಿ ವೆಂಕಟರಾಯರ ಅನುಯಾಯಿಗ
ಜಗನ್ನಾಥರಾಯರು (ಅಡ್ವೊಕೇಟ್ ರಾಮಚಂದ್ರರಾಯರ ಮಕ್ಕಳು)
ಅಪ್ರಕಟಿತ ಕೃತಿಗಳನ್ನು ಒದಗಿಸಿದ್ದಾರೆ. ಶ್ರೀ ಗುರುಗೋವಿಂದ ವಿಠಲರನ್ನ
ಕಾಣುವ ಭಾಗ್ಯ (ನಾನು ನವಂಬರ್ 1982ರಲ್ಲಿ ಚಾಮರಾಜನಗರದಿಂದ
ಮೈಸೂರಿಗೆ ಬರುವಾಗ್ಗೆ ಆಗಲೇ ಶ್ರೀ ಗುರುಗೋವಿಂದರಾಯರು
ಸೇರಿದ್ದರು.) ಸನ್ನದಾಗದಿದ್ದರೂ ಅವರ ಮಗ ಶ್ರೀ ಗುರುರಾಜಾಚಾರ
ಪುಸ್ತಕ ನೀಡಿದ್ದಾರೆ. ಈ ಎಲ್ಲ ಹಿರಿಯರಿಗೂ, ನೆರವಾದ ಆತ್ಮೀಯ ಸ್ನೇ
ಕೃತಜ್ಞತೆಯ ನಮಸ್ಕಾರಗಳನ್ನು ನಮ್ರತೆಯಿಂದ ಅರ್ಪಿಸುತ್ತೇನೆ.

ಅಧ್ಯಯನದ ವಿಚಾರದಿಂದ ಹಿಡಿದು ಕೊನೆಗೆ ನರಸಿ, ಹರಸಿರು
ಜಿ.ಎಸ್.ಎಸ್, ಪಿ. ವಿ. ನಾರಾಯಣರಿಗೆ ಮತ್ತೆ ವಂದಿಸಬೇಕೆನಿಸುತ್ತದೆ.
ಗ್ರಂಥಾಲಯದ ಅನುಕೂಲತೆಯೊದಗಿಸಲು ನೆರವುನೀಡಿ ಸಲಹೆಗಳಿತ್ತ ಡಾ॥ ಪ್ರ

ಶ್ರೀ ರಾಮಕೃಷ್ಣ ವೇದಾಂತ ಕಾಲೇಜಿನ ಪೂಜ್ಯ ಹರ್ಷಾನಂದಜೀ, ಡಾ|| ಆರ್. ಎಸ್. ಸುಂದರಂ ಅವರಿಗೂ ಕೃತಜ್ಞತೆಯ ನಮನ.

ಈ ಅಧ್ಯಯನಕ್ಕೆ ಅವಕಾಶ ನೀಡಿದ ಬೆಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಕೇಂದ್ರಕ್ಕೂ, ವಿಶ್ವವಿದ್ಯಾನಿಲಯಕ್ಕೂ ನಾನು ಕೃತಜ್ಞ "ಎಂದರೊ ಮಹಾನು ಭಾವುಲು ಅಂದರಿಕಿ ವಂದನಮು" ಎಂಬ ವಾಗ್ಗೇಯಕಾರವಾಣಿಯನುಸರಿಸಿ ಹಿರಿಯ ಹರಿದಾಸ ಪರಂಪರೆಗೆ ನಮಿಸುತ್ತ ಈ ಎರಡು ನುಡಿ ನಮನವನ್ನರ್ಪಿಸುತ್ತಿದ್ದೇನೆ. ಕೊನೆಯದಾಗಿಯಲ್ಲದಿದ್ದರೂ, ನೆನೆಸಬೇಕಾದ ವ್ಯಕ್ತಿ ಶ್ರೀ ಮಾಧುಸಂಬೋಧ ಅವರು ಹರಿದಾಸಸಾಹಿತ್ಯ, ಸನಾತನ ಧರ್ಮ ಸಂಸ್ಕೃತಿಗಳನ್ನು ಸಾಹಿತ್ಯ ಕೃತಿಗಳ ಮೂಲಕ ಪ್ರತಿಬಿಂಬಿಸುವ, ಒಡಮೂಡಿಸುವ ಕಾರ್ಯಕವನ್ನು ಅನೇಕ ವರ್ಷಕಾಲ ನಡೆಸಿದ ಹಿರಿಯರಾದ ಶ್ರೀ ಸುಬೋಧ ರಾಮರಾಯರ ಮೊಮ್ಮಕ್ಕಳು ಇವರು. ನನ್ನ ಮೇಲೆ ಪ್ರೀತಿಯಿರಿಸಿ, ಈ ನಿಬಂಧವನ್ನು ಸುಂದರವಾಗಿ ಕನ್ನಡದಲ್ಲಿ ಬೆರಳಚ್ಚು ಮಾಡಿಕೊಟ್ಟು, ನಿಬಂಧವನ್ನು ರಕ್ಷಾಕವಚದಲ್ಲಿ ಬೈಂಡ್ ಮಾಡಿಸುವ ತನಕ ನೆರವಾಗಿದ್ದಾರೆ. ಈ ಸ್ನೇಹಿತರಿಗೂ ನನ್ನ ವಂದನೆ ಸಲ್ಲುತ್ತವೆ. ಈ ನಿಬಂಧವನ್ನು ಪರಾಮರ್ಶಿಸಿ ತಮ್ಮ ಅಮೂಲ್ಯ ಅಭಿಪ್ರಾಯ ನೀಡಿದ ಡಾ|| ಜಿ. ವರದರಾಜಾರಾವ್ ಅವರಿಗೂ, ಡಾ|| ಕಲ್ಬುರ್ಗಿ ಅವರಿಗೂ ಪಿಎಚ್.ಡಿ., ಪದವಿ ನೀಡಿದ ಬೆಂಗಳೂರು ವಿ. ವಿ. ನಿಲಯಕ್ಕೂ ನನ್ನ ನಮನ.

ನಿಬಂಧ ಸಾದರಪಡಿಸಿದನಂತರ ಪಿಎಚ್.ಡಿ. ಪದವಿ ಪಡೆದು, ಅದನ್ನು ತಿಳಿಯಪಡಿಸುವ ಸಮಯದಲ್ಲಿ ಪೂಜ್ಯ ವರದರಾಜಾರಾವ್ ಅವರು ವಿಧಿವಶವಾದದ್ದು ನನ್ನ ದುರಾದೃಷ್ಟವೇ ಸರಿ. ಈ ದಿಸೆಯಲ್ಲಿ ನಾನು ನನ್ನ ಗುರು ಸ್ವರೂಪರಾದ ಡಾ|| ಹಾ. ಮಾ. ನಾಯಕ್ ಅವರಲ್ಲಿ ಹಾಗೂ ಸಿ. ಪಿ. ಕೆ. ಯವರಲ್ಲಿ ನನ್ನ ಅಳಲು ತೋಡಿಕೊಂಡದುಂಟು. ನಿಬಂಧ ಪ್ರಕಟ ಆಗಬೇಕೆಂದೆ ಪರೀಕ್ಷಕರು ವರದಿಯಲ್ಲಿ ಸೂಚಿಸಿದ್ದು ನನಗೆ ಈ ವಿಚಾರದಲ್ಲಿ ಒತ್ತಾಸೆ ಮೂಡಿಸಿತು. ಈ ದಿಸೆಯಲ್ಲಿ ತಿರುಪತಿ ಶ್ರೀ ಶ್ರೀನಿವಾಸನ ದಯೆಯಿಂಬಂತೆ ಅಲ್ಲಿನ ಹರಿದಾಸ ಯೋಜನೆಯ ಅಧಿಕಾರಿಗಳು ಸ್ವಲ್ಪಮಟ್ಟಿಗೆ ಆರ್ಥಿಕ ನೆರವು ನೀಡಿದ ಅವರಿಗೂ ನನ್ನ ನಮನ ಸಲ್ಲುತ್ತವೆ.

ನಿಬಂಧಕ್ಕೆ ತಮ್ಮ ಹರಕೆಯ ಪರಿವೇಷ ನೀಡಬೇಕೆಂದು ಡಾ|| ಹಾ ಮಾ ನಾಯಕ್ ಅವರಲ್ಲಿ ಪ್ರಾರ್ಥಿಸಿದೆ, ಅವರು ಒಪ್ಪಿ ತಮ್ಮ ಅಮೂಲ್ಯ ಸಮಯವನ್ನು ವಿನಿಯೋಗಿಸಿ ಬರೆದುಕೊಟ್ಟಿದ್ದಾರೆ. ಡಾ. ಸಿಪಿಕೆಯವರನ್ನು ಪ್ರಾರ್ಥಿಸಿದುದಕ್ಕೆ ಅವರು ಕೂಡ ಬೆಲೆಯುಳ್ಳ ಅಭಿಮತ ನೀಡಿ ಹರಸಿದಾರೆ. ಮಿತ್ರರಾದ ಶ್ರೀ ಎನ್. ಎಸ್. ಶಾರದಾ ಪ್ರಸಾದರು ನನ್ನ ಕೋರಿಕೆಗೆ ಮನ್ನಣೆಯಿತ್ತು, ಕರಡಚ್ಚು ತಿದ್ದಿ ಪರಿಷ್ಕರಿಸಿದಾರೆ. ಇವರೆಲ್ಲರಿಗೂ ನನ್ನ ಕೃತಜ್ಞತೆಯ ನಮನ.

ನನ್ನ ಈವರೆಗಿನ ಬದುಕಿನಲ್ಲಿ ಸಂಕಷ್ಟದ ದಿನಗಳಲ್ಲಿ ಜತೆ ನಿಂತು ಸಹಕರಿಸುತ್ತಿರುವ ನನ್ನಾಕೆ ಭಾರತಿಗೆ ನನ್ನ ವಂದನೆ ಸಲ್ಲುತ್ತವೆ.

ನಿಬಂಧ ಮುದ್ರಿಸಿರುವ 'ಮಿತ್ರಪ್ರಿಂಟರ್ಸ್'ನ ಶ್ರೀ ರಘುವೀರ್ ಅವರಿಗೆ ನನ್ನ ನನ್ನ ವಂದನೆಗಳು ಸಲ್ಲುತ್ತವೆ.

**ಡಾ|| ನಿ. ಕೃ. ರಾಮಶೇಷನ್**

# ಪರಿವಿಡಿ

# ಪ್ರವೇಶಿಕೆ – ಅಧ್ಯಯನದ ಉದ್ದೇಶ ಮತ್ತು ಹರಹು

ಮನುಷ್ಯನ ಹುಟ್ಟಿನೊಂದಿಗೇ ಬಂದ ಧರ್ಮ—ಅದನ್ನನುಸರಿಸಿ ಬಂದ ಮತ ಅವನಷ್ಟೆ ಪ್ರಾಚೀನವಾದದ್ದು. ಯಾವುದು ಧಾರಣಶಕ್ತಿ, ಧರಿಸುವ ಚೈತನ್ಯ ಪಡೆದಿದೆಯೋ ಅದನ್ನೆ ಧರ್ಮವೆಂದೂ, ಯಾರು ಧರ್ಮವನ್ನು ರಕ್ಷಿಸುತ್ತಾರೆಯೊ ಅದು ಅವವನ್ನು ರಕ್ಷಿಸುತ್ತದೆ, ಎಂದೆಲ್ಲ ತಿಳಿಸುವ ಸೂಕ್ತಿಗಳುಂಟು. ಮತ ಎಂದರೆ ಅರಿವಿನ ಬೆಳಕು. ಅದನ್ನು ತಿರುಗು ಮುರುಗು ಓದಿದಾಗ ಬರುವುದು ತಮವೆಂದಾಗಿ ಬಿಡುತ್ತದೆ. ಧರ್ಮ–ಮತಗಳ ತವರೂರಾದ ಭಾರತದಲ್ಲಿ ಪ್ರಾಗೈತಿಕಾಸಿಕ ಕಾಲದಿಂದಲೂ ದೈವೀ ಅಸ್ತಿತ್ವವಾದದ ಬಗ್ಗೆ, ದೇವತಾರಾಧನೆ ಬಗ್ಗೆ ಕುರುಹುಗಳನೇಕ ಸಂಶೋಧಕರಿಗೆ ಕಾಣಬಂದಿರುವುದಲ್ಲದೆ, ಭಾರತೀಯನ ಬದುಕೇ ಧರ್ಮಕ್ಕೆ ಅನುಸಾರ ಆಗಿದ್ದುದಾಗಿತ್ತು ಎಂಬುದೂ ತಿಳಿಯಬರುತ್ತದೆ. ಇಲ್ಲಿ ಹುಟ್ಟಿ ಬೆಳೆದು ನೆಲೆನಿಂತು ಕರಗಿದ, ಇರುವ, ಮತ–ಧರ್ಮಗಳಂತೆಯೆ ಹೊರಗಿನಿಂದ ಬಂದು ನೆಲೆನಿಂತ ಧರ್ಮ—ಮತಗಳೂ ಭಾರತದಲ್ಲಿವೆ. ಯಾವುದೆ ಮತೀಯ-ಧಾರ್ಮಿಕ ಚಟುವಟಿಕೆ-ಚಲನೆ-ಅದರ ಸ್ವರೂಪ, ವಿಚಾರ ಒಪ್ಪತಕ್ಕ ವ್ಯಕ್ತಿ–ಸಮುದಾಯ–ಬಣವಿರಲಿ, ಅಲ್ಲಿ ಆ ಮತ–ಧರ್ಮದ ಒಂದು ಆಂದೋಲನದ ಸುಳಿಗಾಳಿಯೆದ್ದಿರುವುದು, ಅನಂತರ ಅದು ತನ್ನದೆ ಆದ ಬೃಹತ್ ಸ್ವರೂಪ ಪಡೆದಿರುವಂಥದು, ತಿರುತಿರುಗಿ ದೇಶಾದ್ಯಂತ ಪ್ರಸರಿಸಲು ಶ್ರಮಿಸಿರುವುದು, ಇರುವುದು–ಸೋತಂತೆ ಕಾಣುವುದು, ಎಲ್ಲವೆಲ್ಲ ತಿಳಿಯಬರುತ್ತದೆ-ಆಯಾಯ ದೇಶದ ಮತ–ಧರ್ಮದ ಇತಿಹಾಸಗಳಿಂದ. ಅಂತೆಯೆ ಆಯಾಯ ಮತ ಧರ್ಮದ ಪ್ರವರ್ತಕರೂ, ಹರಿಕಾರರೂ ಅನೇಕ. ಇತಿಹಾಸ, ಬರಿಯ ರಾಜರ, ರಾಜ್ಯಗಳ, ಅವರು ತಮ್ಮ ಸಾಮ್ರಾಜ್ಯ ವಿಸ್ತಾರಕ್ಕಾಗಿಯೊ, ಸ್ವರಕ್ಷಣೆಗಾಗಿಯೊ ನಡೆಸಿದ ಕದನ ಸಮೀಕ್ಷೆ ಮಾತ್ರ ಆಗದೆ ಜನತೆಯ ಬದುಕಿನೆಳೆಗಳನ್ನು ಪ್ರತಿಬಿಂಬಿಸುವ ಪುಟಗಳೂ ಆಗಿರುತ್ತದೆ. ಆಗ ಇತಿಹಾಸವನ್ನು ಹಿಡಿದಿಡುವ ಸಾಹಿತ್ಯ ಜನತೆಯ ಬದುಕಿನ ಪ್ರತಿಬಿಂಬ ಆಗುತ್ತದೆ. ಅದಕ್ಕೇ ದೊಡ್ಡವರು ಸಾಹಿತ್ಯವನ್ನು ಬದುಕಿನ ಪ್ರತಿಬಿಂಬವೆನ್ನುವುದು. ಹಾಗೂ ಸಾಹಿತ್ಯ–ಬದುಕನ್ನು ಪರಸ್ಪರ ಅವಳಿಜವಳಿ, ಹತ್ತಿರದವು, ಅನ್ಯೋನ್ಯತೆ ಅವುಗಳಲ್ಲಿದೆಯೆಂದೂ ಹೇಳುವುದುಂಟು.

ಭಾರತೀಯರ ಬದುಕು, ಸಾಹಿತ್ಯ ಮೊದಲಿಂದ ಧಾರ್ಮಿಕವಾದದ್ದೆ. ಧರ್ಮದ ನೆಲೆ ಸಾಹಿತ್ಯವನ್ನೂ ಹಿತ ಆಗಿಸಿದ್ದು ಮಾತ್ರ ಅಲ್ಲ, ತತ್ಕಾಲೀನ ಜೀವನದ ಸಾಕ್ಷ್ಯವನ್ನಾಗಿಸಿತು ಕೂಡ. ಇದೇ ಸಾಹಿತ್ಯವೆ ಶಾಸನ, ಕಾವ್ಯ, ಶಾಸ್ತ್ರ ಗ್ರಂಥ–ಇವುಗಳಲ್ಲಿ ಒಡಮೂಡಿಬಂದಿರುವಂಥದು. ಸಾಹಿತ್ಯದಲ್ಲಿ ಆಯಾಯ ಕಾಲದ ಬದುಕಿನ ಮೌಲ್ಯ (ಉದಾ 9ನೇ ಶ.ದ. ಪಂಪನ ಕಾಲದ ವೀರ, ಚಾಗ, ನನ್ನಿ........)ಗಳು ಪ್ರತಿಬಿಂಬಿಸಲಾಗಿದ್ದರೂ,

ಎಲ್ಲದಕ್ಕೂ ಧಾರ್ಮಿಕತೆಯ ಕವಚವಿದ್ದೇ ಇವೆ. ಧರ್ಮ, ಭಾರತೀಯರ ನೇತ್ರರೊಂದಿಗೆ ಹರಿದು ಬಂದದ್ದೆನ್ನಬಹುದು.

ಯಾವುದೇ ಮತಧರ್ಮದ ಪ್ರಸಾರ, ಪ್ರಚಲಿತಗೊಳಿಸುವ, ಜನತೆಯ ಸಂಪರ್ಕ ಏರಿಸಿಕೊಳ್ಳುವ ಸಾಧನ ಭಾಷೆಯೆಂಬುದು ವಿವರವಿಂತಿಲ್ಲ. ಸಾಹಿತ್ಯವನ್ನು ಹಿಡಿದಿಡುವ ಸಾಧನ ಭಾಷೆ. ಸಾಹಿತ್ಯ ಬೆಳೆದಂತೆ, ಮುಂದುವರಿದಂತೆ, ಭಾಷೆಯೂ ಬೆಳೆಯುತ್ತದೆ. ತನ್ನ ನಿಲುವುಗಳನ್ನು ಗುರುತಿಸಿಕೊಳ್ಳುತ್ತದೆ. ಆದರಿಂದಲೆ ಭಾಷೆ ನಿಂತ ನೀರಲ್ಲವೆನ್ನುವುದು ಇದು ಭಾಷೆ ಬೆಳೆದು ಬಂದಿರುವ ಇತಿಹಾಸದಿಂದಲೂ ತಿಳಿದು ಆಡುವ ಮಾತು.

ಮತಧರ್ಮ, ಅದರ ಪ್ರಸಾರ ಸಾಧನ ಸಾಹಿತ್ಯ–ಅದರ ಭಾಷೆ ಎಂದೆಲ್ಲ ತಿಳಿಸಿದ್ದೇವೆ. ಹಾಗೆಯೇ ಆಯಾಯ ಮತ–ಧರ್ಮ ಜನತೆಯ ಸಮಾಜದ ಮುಂದಿಡಲು ಆರಂಭ ಆದ ಶ್ರಮ ಸಾಧ್ಯಪ್ರಯತ್ನವೆ ಆಂದೋಲನ, ಚಳುವಳಿ, ಎಂದೆನ್ನಬಹುದಾಗಿದೆ. ಯಾವುದೇ ಚಲಿಸಂತ್ರದೆಯೊ,ಚಲನೆಯುಂಟೊ ಸಮಾಜದ ಒಂದು ಬಣ,ವ್ಯಕ್ತಿ,ಎಲ್ಲರೂ ಯಾವುದೋ ಒಂದು ಧ್ಯೇಯ, ತತ್ವ–ಸಿದ್ಧಾಂತ–ಪದ್ಧತಿ, ತಮ್ಮ ಒಲವಿನ ಜತೆಗೆ ಜನರ ಒಲವು, (ಅಳುವ ರಾಜನ ಒಲವು, ಆಸರೆ), ಯಾವುದೋ ಒಂದು ಆದರ್ಶವಾದಕ್ಕಾಗಿ ಹೋರಾಡುತ್ತಾರೂ, ತಮ್ಮ ಧ್ಯೇಯ, ಇಷ್ಟಾದಿಗಳನ್ನು ಪ್ರಚುರಪಡಿಸಲು, ಜನತೆಯನ್ನಾಕರ್ಷಿಸಿ ಕೊಳ್ಳಲು ಶ್ರಮಿಸುತ್ತಾರೆಯೊ, ಅದು ಆಂದೋಲ(ಳ)ನ, ಚಳುವಳಿ ಎಂದೆಲ್ಲ ಅನಿಸಿಕೊಳ್ಳುತ್ತದೆ. ಇಂಥ ಮತೀಯ–ಧಾರ್ಮಿಕ ಆಂದೋಲನ ಭಾರತದಲ್ಲಿ ತುಂಬ ನಡೆದಿವೆ. ಇಲ್ಲಿಯ ಜನರ ಧರ್ಮಸಹಿಷ್ಣು, ಮನೋಧರ್ಮ, ವೈಚಾರಿಕತೆ, ಪರಮತ ನೋಯಿಸದ ರೀತಿ ನೀತಿ, ಇಲ್ಲಿಯಷ್ಟೆ ಹೊರಗಿನ ಮತ–ಧರ್ಮ ಪ್ರವರ್ತಕರನ್ನೂ ಆಕರ್ಷಿಸಿವೆ. ಈ ಮತ–ಧರ್ಮದ ಆಂದೋಲನ ಸಾಧಾರಣವಾಗಿಯೇ ಸಮಾಜದ ಸಾಮಾಜಿಕ ಬದುಕಿನ ಮೇಲೆಯೂ ಪ್ರಭಾವ ಬೀರುತ್ತದೆ. ಜನತೆಯನ್ನು ತಮ್ಮ ಪರಿವಲಯ, ಪ್ರಭಾವಕ್ಕೊಳಗಾಗಿಸಿಕೊಳ್ಳಲು, ತೊಡಗಿಸಿಕೊಳ್ಳಲು ಆಯಾಯ ಆಂದೋಲನ ಪ್ರವರ್ತಕರು ಶ್ರಮಿಸಿದ್ದಾರೆ. ಇದು ಭಾರತದ ಮತ–ಧರ್ಮದ ಇತಿಹಾಸ ಅದನ್ನು ಹಿಡಿದಿರಿಸಿರುವ ಭಾಷೆ ಸಾಹಿತ್ಯಗಳ ಮೂಲಕ ತಿಳಿದುಬರುವ ಅಂಶ. ಹಾಗೂ ವೈಚಾರಿಕ ಮನೋಭಾವವನ್ನು ಪ್ರತಿಬಿಂಬಿಸುವ ಅಂಶವಿದು.

ಬುದ್ಧನಿಂದ, ಗಾಂಧೀಜಿಯವರೆಗೆ, ಜಗತ್ತಿನ ಇತರೆಡೆ ನೋಡಿದರೆ ರೋಮನ್ ಕ್ಯಾಥೊಲಿಕ್–ಅದಕ್ಕೆ ಪ್ರತಿಭಟನಾತ್ಮಕ ಆಂದೋಲನ ಹೂಡಿದ ಪ್ರಾಟೆಸ್ಟೆಂಟ್ ಮಾರ್ಟಿನ್ ಲೂಥರ್, ರಷ್ಯಾದಲ್ಲಿಯಂತೂ ಮತ–ಧರ್ಮದ ವಿರುದ್ಧವೆ ನಡೆದ ಕ್ರಾಂತಿ, ಇವೆಲ್ಲ ಭಾರತದ ಹಾಗೂ ವಿಶ್ವವಿದ್ಯಾಮಂತ ನಡೆದಿರುವ ಆಂದೋಲನಗಳು. ಇಲ್ಲೆಲ್ಲ ಧರ್ಮ–ಮತದೆಳೆಯಿರುವುದು, ಅದರಲ್ಲಿ ಪರಂಪರಾನುಗತವಾಗಿ ಕಂಡುಬಂದ ಸಂಪ್ರದಾಯದ ಪಾಚಿ, ಅದರ ಶುದ್ಧೀಕರಣ–ಪ್ರತಿಭಟನಾತ್ಮಕ ಆಂದೋಲನ–ಸುಧಾರಣಾ ಮನೋಭಾವ ಕ್ರಮೇಣ ▪ ಸುಧಾರಣೆಯ ತನ್ನ ಆಂದೋಲನದ ಸತ್ವ ಕಳೆಕೊಂಡು, ಒಂದು ಮತವಾಗಿ

ಕವಲೊಡೆದಿರುವ ಪರಿ. ಇದು ಸೂಕ್ಷ್ಮವಾಗಿ ಭಾರತದಲ್ಲಿ ನಡೆದ ಎಲ್ಲ ಮತ ಧರ್ಮಾಂದೋಲನಗಳ ಸ್ವರೂಪ ಎಂದು ತಿಳಿಸಬಹುದು.

ಮತ ಧರ್ಮ ಪ್ರಸಾರ ಸಾಧನ ಆದ ಸಾಹಿತ್ಯ–ಭಾಷೆ ಪರಿಸರಕ್ಕೆ, ಕಾಲಕ್ಕೆ ತಕ್ಕಂತೆ ಬದಲಾಗುತ್ತ ಬಂದಿದೆ. ತಮ್ಮ ಧರ್ಮ–ಮತತತ್ವಗಳನ್ನು ಶ್ರೀಸಾಮಾನ್ಯನಿಗೂ ಅರ್ಥ ಆಗುವ ರೀತಿಯಲ್ಲಿ ಸ್ಥಳೀಯ ಭಾಷೆಯನ್ನು ಬಳಸಿಕೊಂಬುವುದು ಬೌದ್ಧ ಧರ್ಮದಿಂದಲೂ ನಡೆದುಬಂದಿದೆ. ಪಾಲೀ, ಮಾಗಧಿ, ಹಾಗೆಯೆ ಜೈನರು ಪ್ರಾಕೃತ, ಕನ್ನಡ ಭಾಷೆಗಳನ್ನು ಬಳಸಿ ತಮ್ಮ ಮತ-ತತ್ವ ಪ್ರಸಾರಮಾಡಲು ಕಾರಣ, ತಮ್ಮ ಆಂದೋಲನದ ಧ್ಯೇಯ ಎಲ್ಲರಿಗೂ ಅರ್ಥ ಆಗಲೆಂದು ಕನ್ನಡ ಭಾಷೆಯಲ್ಲಿ ಧರ್ಮ ಗ್ರಂಥಗಳನ್ನು ವಿರಚಿಸಿದ ಜೈನ ರಿಂದ ಆರಂಭಗೊಂಡ ಈ ಭಾಷಾ ಬಳಕೆಯು ಯುಕ್ತಿ ಕ್ರಿ.ಶ. ಹನ್ನೆರಡನೆ ಶತಮಾನದ ವಚನ ಕಾರರಲ್ಲಿ ಸಮರ್ಥ ಆಗಿ ಪ್ರಯೋಗಿತ ಆದದ್ದು ಕಂಡುಬರುತ್ತದೆ. ಕನ್ನಡ ಸಾಹಿತ್ಯ ತನ್ನ ಬಿಗಿಯಾದ ಮಾರ್ಗದ ಹಾದಿಯಿಂದ ಕವಲೊಡೆದು ನಡುಗನ್ನಡ ದೇಸಿ ರೂಪದಲ್ಲಿ ವಚನಕಾರರು ರಚಿಸಿದ ವಚನಗಳ ಮೂಲಕ ಜನತೆಯ ಮನವೊಲಿಸಿದುದು ಸುವಿದಿತವೆ ಆಗಿದೆ. ಇದು ಸಾಹಿತ್ಯ ಭಾಷೆಗಳ ದೃಷ್ಟಿಯಿಂದ ಸಂಕ್ರಮಣ ಕಾಲದಂತೆಯೆ ಮತ-ಧರ್ಮ ಸಾಮಾನ್ಯನಿಗೆ, ಹಾಗೂ ಸಮಾಜದ ಎಲ್ಲ ಸ್ತರಗಳವರಿಗೆ ತಲುಪಲು ಹೋರಾಟ ನಡೆದ ಸಂಧಿ ಸಮಯ. ವರ್ಣಾಶ್ರಮ ವ್ಯವಸ್ಥೆ ಸಡಿಲಾಗಿ, ಜಾತಿಗಳೊಡೆದು, ಅಭೇದ್ಯ ಗೋಡೆ –ನಿರ್ವಾಕ-ವೇರ್ಪಟ್ಟುದು ಸಮಾಜದ ಶೋಚನೀಯ ವಿಚಾರವಾದರೂ ಇದರ ವಿರುದ್ಧ ಸುಮಾರು 3000 ವರ್ಷದಿಂದ ಪ್ರತಿಭಟನೆ, ಸುಧಾರಣಾತ್ಮಕ ಹೋರಾಟ ನಡೆದ ಇದೆ. ವಚನಕಾರರಲ್ಲಿಯಂತೂ ಇದು ತುಂಬ ಚೆನ್ನಾಗಿ ಎದ್ದು ಕಂಡಿತು. ಕ್ರಾಂತಿಯೆ ನಡೆಯಿತು. ಸಾಮಾಜಿಕ-ಕ್ರಾಂತಿಯ ಜತೆ ಸಾಹಿತ್ಯ ಕ್ರಾಂತಿ, ವೈಚಾರಿಕ ಕ್ರಾಂತಿಯೂ, ಸನಾತನ ವೈದಿಕ ಧರ್ಮದ ವಿರುದ್ಧ ಮತೀಯ ಕ್ರಾಂತಿಯೂ ನಡೆಯಿತು

ವಚನಕಾರರ ಚಳುವಳಿ, ವಿಶ್ವದಲ್ಲಿ ನಡೆದ ಒಂದು ಸಂವ್ಯವಸ್ಥಿತ ಜನತಾ ಆಂದೋಲನ. ಶಿವಭಕ್ತಿ, ಶೈವಮತ, ವೀರಶೈವ ಧರ್ಮ ಪರಿಷ್ಕರ ಆದ ಜತೆಗೇ ಸಮಾಜದ ರೂಢಮೂಲ ಪದ್ಧತಿಗಳ ವಿರುದ್ಧ ಹೋರಿದ್ದೂ ಸಾಹಸವೇ.

ವೀರಶೈವ ವಚನಕಾರರ ಈ ಕ್ರಾಂತಿಯಿಂದ ತತ್ತರಿಸಿದ ವೈದಿಕಧರ್ಮ, ವಿಷ್ಣು ಭಕ್ತಿ, ಹರಿಪಾರಮ್ಯ ಪ್ರತಿಪಾದಿಸಿ, ಮತ್ತೆ ವೇದೋಪನಿಷತ್ತುಗಳ ಪ್ರಾಮಾಣ್ಯ ಪ್ರತಿ ಪಾದನೆ, ಸಮರ್ಥನೆ ಮಾಡಲು ಉದಯಿಸಿದ ಮತ್ತೊಂದು ಜನತಾ ಚಳುವಳಿಯು ಹದಿ ನಾಲ್ಕನೆ ಶತಮಾನದ ಹರಿದಾಸ ಆಂದೋಲನ ಹರಿಸರ್ವೋತ್ತಮತೆ ವಿಷ್ಣುಭಕ್ತಿಯ ಪ್ರಚಾರ, ಪ್ರತಿಪಾದನೆ ರಾಮಾನುಜಾಚಾರ್ಯರಿಂದ ಈ ಮೊದಲೆ ನಡೆದು, (1017-1137) ತಮಿಳು ನಾಡಿನಲ್ಲಿ ಭಕ್ತಿಪಂಥ-ಭಕ್ತಿಮಾರ್ಗ ಪ್ರಚಾರ ಆಗಿದ್ದಂತಾದರೂ, ಅವರ ಶ್ರೀ ವೈಷ್ಣವ ಧರ್ಮ ಕರ್ಣಾಟಕದಲ್ಲಿ ನೆಲೆಗೊಂಡಿದ್ದರೂ, ಹರಿದಾಸರು ನಡೆಸಿದ ಧಾರ್ಮಿಕ ಆಂದೋಲನ, ಹರಿಭಕ್ತಿ ಪ್ರಸರಣ ಕಾರ್ಯ, ತಮಿಳುನಾಡಿನ ವೈಷ್ಣವ ಸಂತರ ಪ್ರಭಾವ –ವಚನಕಾರರ ಕನ್ನಡತನದ ಪ್ರಭಾವವೂ ಆಯಿತೆಂಬುದರಲ್ಲಿ ಸಂದೇಹವಿಲ್ಲ.

ಪ್ರಸ್ತುತ ಅಧ್ಯಯನ, ಹರಿದಾಸ ಆಂದೋಲನದ ಅಧ್ಯಯನವನ್ನು ಕೈಗೊಂಡಿರುವ ಒಂದು ಪ್ರಯತ್ನ ಆಗಿದೆ. ಇಲ್ಲಿ ಹರಿದಾಸ ಸಾಹಿತ್ಯ–ಅವರ ಕೃತಿಗಳನ್ನು ಆಂದೋಲನ ವೆಂದೂ, ಅವರು ತಮ್ಮ ಮತ ಪ್ರಸಾರ ನಡೆಸಲು ಸ್ಥಳೀಯ ಆಡುನುಡಿಯನ್ನು (ತೀಗನ್ನಡ-ಹೊಸಗನ್ನಡ)ಬಳಸಿಕೊಂಡದ್ದರ ಬಗ್ಗೆ ವಿವೇಚಿಸುವ ಪ್ರಯತ್ನವೂ ನಡೆದಿದೆ. ಅಂತೆಯೆ ನಿಬಂಧದಲ್ಲಿ ವಿವಿಧ ಅಧ್ಯಾಯಗಳಾಗಿ ವಿಂಗಡಿಸಿಕೊಂಡಿದೆ. ಅಧ್ಯಯನದ ವಿಚಾರ ಆಂದೋಲನವೆಂದಾದರೂ, ಹರಿದಾಸ ಸಾಹಿತ್ಯದ ಉಗಮ, ಸ್ವರೂಪ, ಭಕ್ತಿ ವೈವಿಧ್ಯ, ಸಾಹಿತ್ಯಿಕ ಮೌಲ್ಯ, ಜತೆಗೇ ತಮಿಳುನಾಡಿನ ವೈಷ್ಣವ ಸಂತರ (ಆಳ್ವಾರರ) ಪ್ರಭಾವ, ವಚನಕಾರರ ವಚನ ರಚನೆಗಳ ಪ್ರಭಾವಗಳನ್ನೂ ಗುರುತಿಸುವ ಸವಿಶಾಕ್ಷೆ ನಡೆದಿದೆ.

ಪ್ರಸ್ತುತ ಅಧ್ಯಯನದ ಕಾಲವ್ಯಾಪ್ತಿಯನ್ನು ಕ್ರಿ.ಶ. 14ನೇ ಶತಮಾನದ ಉತ್ತರಾರ್ಧದಿಂದ 19ನೆ ಶತಕದವರೆಗೆಂದು ಇರಿಸಿಕೊಂಡರೂ ಹರಿದಾಸ ಆಂದೋಲನ ಇನ್ನೂ ಮುಂದುವರಿದಿರುವುದರಿಂದ, ಜೀವಂತ ಆಗಿ ತನ್ನ ಭಕ್ತಿ ಪ್ರಸಾರ ಕಾರ್ಯ ನಡೆಸುತ್ತಿರುವುದರಿಂದಾಗಿ, 20ನೇ ಶತಕದ ಹರಿದಾಸರನ್ನು ಹೆಸರಿಸಿದ್ದೇವಷ್ಟೆ. ಮಧ್ವಾಚಾರ್ಯರ (ಕ್ರಿ. ಶ. 13 ನೆ. ಶ) ಸಾಕ್ಷಾತ್ ಶಿಷ್ಯರಾದ ನರಹರಿತೀರ್ಥರ ಮೂರು ಕೃತಿಗಳು ದೊರೆತಿರುವುದರಿಂದ, ಅವರನ್ನೆ ಹರಿದಾಸ ಸಾಹಿತ್ಯದ ಪ್ರವರ್ತಕರಾಗಿ ಸ್ವೀಕರಿಸಿರುವುದನ್ನು ನಾವು ವಿನಯವಂತರಾಗಿ ಅನುಮೋದಿಸದೆ, ಶ್ರೀಪಾದರಾಜರನ್ನೆ ಹರಿದಾಸ ಆಂದೋಲನದ ಮೊದಲ ಪ್ರವರ್ತಕರನ್ನಾಗಿ ಸ್ವೀಕರಿಸಿದ್ದೇವೆಂದು ತಿಳಿಸ ಬೇಕಾಗಿದೆ.[1] ಶ್ರೀಪಾದರಾಜರಿಗೆ ಇದ್ದ ಆಳ್ವಾರರ ಪ್ರಭಾವ, ಪೂಜಾ ಸಮಯದಲ್ಲಿ ಕನ್ನಡದಲ್ಲಿ ದೇವರನಾಮ–ಅವರ ವಿವಿಧ ಅವತಾರ–ಕಾರ್ಯ, ವರ್ಣನೆ, ಕ್ರಮೇಣ ಒಂದು ಪಂಥ, ಸಂಪ್ರದಾಯ, ಆಂದೋಲನವೆ ಆಗಿ ಬೆಳೆಯಿತು. ಹರಿದಾಸ ಸಂಪ್ರದಾಯ, ಆಂದೋಲನವಾದದ್ದು ಹೀಗೆ.

ಹರಿದಾಸ ಸಾಹಿತ್ಯದ ಅಧ್ಯಯನ ಇಲ್ಲಿಯವರೆಗೂ ಅನೇಕ ರೀತಿಯಲ್ಲಿ ನಡೆದಿದೆ. ಪ್ರೊ : ಆರ್. ಎಸ್. ಪಂಚಮುಖಿಯವರ "ಕರ್ನಾಟಕ ಹರಿದಾಸ ಸಾಹಿತ್ಯ", ಕಮಲ ದಾನಿಯವರ, Mystic Teachings of the Haridasas of Karnatak ಹೆಚ್. ಕೆ. ವೇದವ್ಯಾಸಚಾರ್ಯರ "ಕರ್ನಾಟಕ ಹರಿದಾಸರು", ಅಲ್ಲದೆ, ವಿವಿಧ ಹರಿದಾಸರ ಬಿಡಿಯಾದ ಅಧ್ಯಯನವೂ ನಡೆದಿದೆ. ಡಾ. ಪಾಟೀಲರ (ಪ್ರಸನ್ನ ವೆಂಕಟ ದಾಸರು), ಡಾ. ಕೆ. ಎಂ. ಕೃಷ್ಣರಾಯರ "ಜಗನ್ನಾಥದಾಸರು", ಡಾ. ಗೋಕುಲ ನಾಥ್ ಅವರ "ಶ್ರೀ ವಿಜಯದಾಸರು" ಹಾಗೂ ದಿವಾಣಜಿಯವರ "ಪ್ರಸಾದಯೋಗ" (ಪುರಂದರದಾಸರ ಕೃತಿ ಸಮೀಕ್ಷೆ)–ಮೊದಲಾದವು ಬಿಡಿ ಅಧ್ಯಯನಗಳು.[2] ಇದರೊಂದಿಗೇ ಹರಿದಾಸ ಸಾಹಿತ್ಯದ ಭಾಷಿಕ ಅಧ್ಯಯನವೂ ನಡೆದಿದೆ.[3] ಇಷ್ಟಾದರೂ ಹರಿದಾಸ ಸಾಹಿತ್ಯದ ಅಧ್ಯಯನ ಸಂಪೂರ್ಣವಾಗಿ ನಡೆದಿದೆಯೆಂದು ತಿಳಿಸಲಾಗುವುದಿಲ್ಲ. ದಾಸ ಸಾಹಿತ್ಯದ ಧ್ರುವ ತಾರೆಗಳಾದ ಕನಕದಾಸರು, ಗೋಪಾಲದಾಸರು, ಹಾಗೂ ಜಗನ್ನಾಥದಾಸರ ನಂತರ ಬಂದ ಪ್ರಾಣೇಶದಾಸರ ಕೃತಿಗಳ ಕುರಿತ ಅಧ್ಯಯನ ಇನ್ನೂ

ನಡೆಯಬೇಕಾಗಿದೆ. ಹರಿದಾಸರ ಎಲ್ಲ ಕೃತಿಗಳನ್ನು ಸಾಮಾಜಿಕ, ಧಾರ್ಮಿಕ. ಮಂತೀಯ ಹೀಗೆ ವಿಂಗಡಿಸಿಕೊಂಡು ಅಧ್ಯಯನ ನಡೆಸಲು ಅವಕಾಶವಿದೆ. ವಚನಗಳೊಂದಿಗೆ ತುಲನಾತ್ಮಕ ಸಮೀಕ್ಷೆ ನಡೆಸಲು ಅವಕಾಶವುಂಟು. ಸುಳಾದಿ, ಉಗಾಭೋಗಗಳ ವ್ಯಾಪಕ ಅಧ್ಯಯನ ಇನ್ನೂ ನಡೆದಿಲ್ಲವೆಂದೆ ತಿಳಿಸಬೇಕಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ನಡೆದಿರುವುದು ಮೊದಲೇ ತಿಳಿಸಿರುವ ಪ್ರಕಾರ, ಹರಿದಾಸ ಆಂದೋಲನ ದೃಷ್ಟಿ. ಅಧ್ಯಯನವನ್ನು ನಡೆಸುವಲ್ಲಿ ಈಗಿನ ವೈಜ್ಞಾನಿಕ ವಿಧಾನವಾದ ಪಟ್ಟಿಕಾ ವಿಧಾನವನ್ನೆ ಅನುಸರಿಸಿದೆ. ಮೂರು ಬಣ್ಣ (ಹಳದಿ, ಕೆಂಪು, ನೀಲಿ)ದ ಕಾರ್ಡು (Catalogues)ಗಳನ್ನು ಮಾಡಿಸಿ ಅದರಲ್ಲಿ ಅಧ್ಯಯನದ ಅಧ್ಯಾಯಗಳಿಗನುಗುಣವಾಗಿ ವಿಷಯ ಸಂಗ್ರಹ ಮಾಡಿ, ಟಿಪ್ಪಣಿ ಮಾಡಿಕೊಂಡು, ಅದನ್ನು ಬಳಸುವಲ್ಲಿ ಈ ವಿಧಾನ ನೆರವಿತ್ತಿದೆ. ಪ್ರಥಮತಃ ಹರಿದಾಸರ ಕೃತಿಗಳು ಅನಂತರ ಉಳಿದ ಸಾಹಿತ್ಯ, ತತ್ಕಾಲೀನ ಶಾಸನ ಇತ್ಯಾದಿ ಸಾಮಗ್ರಿಗಳ ಕೊಡುಗೆ ಎಲ್ಲವನ್ನು ಪರಿಶೀಲಿಸಿದ್ದೇವೆ. ಇಷ್ಟಾದರೂ ಅಧ್ಯಯನದ ವ್ಯಾಪ್ತಿಯು ತುಂಬ ವಿಶಾಲ ಆದುದರಿಂದ ಪ್ರಮುಖ ಹರಿದಾಸರ ಕೃತಿಗಳನ್ನು ಮಾತ್ರ ಅಧ್ಯಯನಕ್ಕೆ ಸ್ವೀಕರಿಸಿದೇವೆಂದು ಹೇಳಬೇಕಾಗಿದೆ. (ಜಗನ್ನಾಥದಾಸರವರೆಗೆ ಮಾತ್ರ).

ಹರಿದಾಸ ಸಾಹಿತ್ಯ, ವಚನ ಸಾಹಿತ್ಯಗಳನ್ನು ಕನ್ನಡ ಸಾಹಿತ್ಯ ಸರಸ್ವತಿಯ ಎರಡು ಕಣ್ಣುಗಳು, ಜನಮನವೊಲಿಸಿದ ಸಾಹಿತ್ಯ, ಸಾಹಿತ್ಯ ತವನಿಧಿ........ ಎಂದೆಲ್ಲ ವಿದ್ವಾಂಸರು ಕರೆದಿದ್ದಾರೆ. ಇಲ್ಲಿ ನಡೆದಿರುವ ಆಂದೋಲನ ದೃಷ್ಟಿಯ ಅಧ್ಯಯನ, ಹರಿದಾಸ ಸಾಹಿತ್ಯದ ಒಂದು ಪಕ್ಷಿನೋಟವನ್ನೀಯುವ ಪ್ರಾಮಾಣಿಕ ಪ್ರಯತ್ನ ಮಾತ್ರ ವೆಂದು ವಿನಯ ಪೂರ್ವಕವಾಗಿ ಹೇಳಬೇಕಾಗಿದೆಯಷ್ಟೆ.

## ಅಡಿಟಿಪ್ಪಣಿ

1 ಶ್ರೀಪಾದರಾಜರ ರಚನೆಗಳಲ್ಲಿ ಕಂಡು ಬರುವ ಪದಬಂಧ ಮಾಧುರ್ಯ, ಲಾಲಿಕ್ಯ, ಗೇಯತೆ, ಸಂಗೀತ ಬಳಕೆ ಎಲ್ಲ ಸೂಕ್ಷ್ಮವಾಗಿ ಗಮನಿಸಿದಾಗ ಅವರಿಗಿಂತ ಮೊದಲು ಹರಿದಾಸ ಸಾಹಿತ್ಯ ಬಹು ಮುಂಚಿನಿಂದ ಇತ್ತೆಂಬುವ ಸಂದೇಹ ಬಾರದಿರದು. ಶ್ರೀಪಾದ ರಾಜರ ರಚನೆಗಳಲ್ಲಿ ಅಂಥ ಪರಿಪಕ್ವತೆ ಕಂಡಾಗ ಈ ಸಾಹಿತ್ಯಕ್ಕೆ ಉಗಮ ಇನ್ನೂ ಮೊದಲೆ ಆಗಿದ್ದಿತೆ ಎಂದೂ ಅನಿಸುತ್ತದೆ. ಈ ಬಗ್ಗೆ ಸಂಶೋಧನೆ ಇನ್ನೂ ನಡೆಯ ಬೇಕಿದೆ.

2 ಇದಲ್ಲದೆ, ಡಾ : ಟಿ. ಎಸ್. ನಾಗರತ್ನ ಅವರ "ಹರಿದಾಸರಲ್ಲಿ ಭಕ್ತಿಸ್ವರೂಪ" (ಅಪ್ರಕಟಿತ) ವೂ ಸೇರುತ್ತದೆ.

3 ಶ್ರೀ. ರಾಮಚಂದ್ರ ಅವರು : ಮೈಸೂರಿನ ಡಾ : ಜಿ. ವರದರಾಜರಾವ್ ಅವರ ನೇತೃತ್ವದಲ್ಲಿ ಸಿದ್ಧಪಡಿಸಿರುವ ನಿಬಂಧ.

# ಹರಿದಾಸ ಆಂದೋಲನ

ಸುಮಾರು ಒಂದುವರೆ ಸಾವಿರ ವರ್ಷಗಳ ಪ್ರಾಚೀನತೆ-ಇತಿಹಾಸ ಉಳ್ಳ ಕನ್ನಡ ಸಾಹಿತ್ಯ ತನ್ನ ಹೊಸ ತಿರುವು ಪಡೆದುಕೊಂಡದ್ದು ಕ್ರಿ. ಶ. 12ನೆಯ ಶತಮಾನದಿಂದ ಎಂಬುದು ಸುವಿದಿತ ಅಂಶವೆ ಆಗಿದೆ. ಪಂಡಿತ-ಅರಸೊತ್ತಿಗೆಯ ಮಾನ್ಯ ಆಗಿದ್ದ ಸಾಹಿತ್ಯ ಸಾಮಾನ್ಯ ಮಾನ್ಯ (ಸಾಮಾನ್ಯನಿಂದ ಸಾಮಾನ್ಯನಿಗಾಗಿ) ಸಾಹಿತ್ಯ ಆಗಿದ್ದು ಇದೇ ಸಂಕ್ರಮಣ ಕಾಲದಲ್ಲಿ. ಹಳಗನ್ನಡ ನಡುಗನ್ನಡವಾಗಿ ಮಾರ್ಪಾಟಾದಂತೆಯೇ ಸಾಹಿತ್ಯದ ಪಥವೂ ಹೊಸ ಆಯಾಮ ಪಡೆದುದು ಇದೇ ಅವಧಿಯಲ್ಲೇ. ಈ ನಡುಗಾಲದ ಕನ್ನಡನಾಡಿನ ಇತಿಹಾಸ-ಸಂಸ್ಕೃತಿ, ಇದರ ಕಂಠಿತವಾದ ಅಧ್ಯಯನಕ್ಕೆ ಸಾಮಗ್ರಿ ದೊರೆವುದೂ ಅಪಾರ. ಇಷ್ಟೇ ಅಲ್ಲದೆ, ಈ ಕಾಲದ ಇತಿಹಾಸ-ಸಂಸ್ಕೃತಿ, ಜನತೆಯ ಸಾಮಾಜಿಕ-ಧಾರ್ಮಿಕ ಬದುಕಿನ ಮೇಲೆಯೂ ಪ್ರಭಾವ ಬೀರಿರುವುದು, ಅದನ್ನು ಪ್ರತಿಪಾದಿಸುವ ಸಾಹಿತ್ಯ ಕೃತಿಗಳಲ್ಲಿ ಗೋಚರಿಸಿದೆ. ಕನ್ನಡ ಸಾಹಿತ್ಯ ಸಮಗ್ರ ಚರಿತ್ರೆಯಲ್ಲಿ ಇಂದಿಗೂ ಪ್ರಮುಖ ಘಟ್ಟಗಳೆನಿಸಿರುವ ವಚನಸಾಹಿತ್ಯ-ಹರಿದಾಸಸಾಹಿತ್ಯ ಸಂಪದ ಕ್ರಮೇಣ ಕ್ರಿ. ಶ. 12ರಿಂದ ಹಾಗೂ ಕ್ರಿ. ಶ. 15ನೇ ಶತಮಾನದಿಂದ ಒಡ ಮೂಡಿ ಬಂದ ಫಲಗಳೆ ಆಗಿವೆ.[1] ಕನ್ನಡಸಾಹಿತ್ಯದ ತವನಿಧಿ........ಜನತೆಯ ಜೀವನಾಡಿ ಪರಿಶುದ್ಧಗೊಳಿಸಿ ಕನ್ನಡದ ಭಾಷಿಕ ಶಕ್ತಿಯ ಬಹು ಆಯಾಮಗಳನ್ನು ತೆರೆದು ತೋರಿರುವ, ಭಾರತೀಯ ಸಂಗೀತ ಶಾಸ್ತ್ರದ ಇತಿಹಾಸದಲ್ಲಿ ಕರ್ಣಾಟಕವನ್ನು ಅಮರ ಆಗಿಸಿರುವ, ಸಾಹಿತ್ಯ ಸಂಗೀತ ಸಾಮರಸ್ಯ ಮೆರೆದಿರುವ ಹರಿದಾಸ ಸಾಹಿತ್ಯ ವಿಶ್ವ ಸಾಹಿತ್ಯಕ್ಕೇ ಕನ್ನಡನಾಡಿನ ವಿಶಿಷ್ಟ ಕೊಡುಗೆ, ಎಂದರೆ ಹೆಚ್ಚಿನದಲ್ಲ. ವಚನಸಾಹಿತ್ಯ ದಾಸಸಾಹಿತಿಗಳನ್ನು ಕನ್ನಡ ಸಾಹಿತ್ಯ ಸರಸ್ವತಿಯ ಎರಡು ಕಣ್ಣುಗಳಿದ್ದಂತೆಯೆಂಬುದಾಗಿ ಭಾವಿಸುವುದೂ ವಿದ್ವಾಂಸರ ಅಭಿಮತವಾಗಿದೆ. ಅನೇಕ ಮತ-ಧರ್ಮಗಳ ನೆಲೆಯಾದ ಕರ್ನಾಟಕದಲ್ಲಿ ವಚನಕಾರರು (ಶಿವಶರಣರು)-ಹರಿದಾಸರಿಗೂ ಉನ್ನತ ಗೌರವವಿದೆ. ಹಾಗೂ ಪ್ರಾಮುಖ್ಯತೆಯನ್ನು ಪಡೆಯಲು ಕಾರಣ ಅವರಿಂದ ಉಗಮಗೊಂಡು ಬೆಳೆದು ಇಂದಿಗೂ ಕೆಲವು ರೀತಿಗಳಲ್ಲಿ ಮಾರ್ಗದರ್ಶಿ, ದಿಕ್ಸೂಚಿ ಆಗಿರುವ ಈ ಆಂದೋಲನ ಗಳಿಂದಾಗಿ-ಅಲ್ಲಿನ ವೈಶಿಷ್ಟ್ಯ, ವೈಚಾರಿಕತೆಗಳಿಂದಾಗಿ, ಹರಿದಾಸ ವಾಙ್ಮಯದ ಬಗ್ಗೆ ಹೇಳುತ್ತ,........ "ಹಿಂದಿನ ಯುಗದಲ್ಲಿ ಮೊಳೆತ ದಾಸವಾಙ್ಮಯವು, ಈ ಯುಗದಲ್ಲಿ (ಕುಮಾರವ್ಯಾಸ ಯುಗ) ಸಮೃದ್ಧವಾಗಿ ಬೆಳೆಯಿತು, ಸ್ಥಿರವಾದ ಪರಂಪರೆಯುಳ್ಳ ದಾಸಕೂಟವೆಂಬ ಒಂದು ಸಂಸ್ಥೆ, ಜನಸಂಸ್ಕಾರಕವಾದ ಒಂದು ಆಂದೋಲನ ಎಂಬ ಸ್ವರೂಪ ತಾಳಿತೆ"[2] ಎಂದಿದ್ದಾರೆ. ವೈಷ್ಣವಧರ್ಮ, ಮಧ್ವಮತ ತತ್ವ ಹಾಗೂ ಅದರ

ಆಚಾರವಿಚಾರಗಳನ್ನು ಕನ್ನಡದಲ್ಲಿ ಪ್ರಸಾರ ಮಾಡಿದ ಹರಿದಾಸ ಆಂದೋಲನ, ವಿಶಾಲಾರ್ಥದಲ್ಲಿ ಭಾಗವತ ಮನೋಧರ್ಮವನ್ನೂ ಸಾಮಾಜಿಕ ನೀತಿಯನ್ನೂ ಬೋಧಿಸಿತು. ಅಲ್ಲಿನತನಕ ಮಠಗಳಲ್ಲಿದ್ದ ಶಾಸ್ತ್ರವನ್ನು ಕಲೆಯ ರಂಜಕತೆಗೆ ಇಳಿಸಿತು.[4] ಕ್ರಿ. ಶ. 12ನೆ ಶ.ದಲ್ಲಿಂದ ಹರಿದು ಬಂದ ವಚನಸಾಹಿತ್ಯದ ಪ್ರವಾಹದ ನಂತರ, ಅದರ ಬೆನ್ನಿಗೇ ಮೂಡಿ ಬಂದ ಹರಿದಾಸರ ಆಂದೋಲನ (ಸಾಹಿತ್ಯ)ದ ಮೇಲೆ ಮೊದಲಿದ್ದ ಆಂದೋಲನ (ವಚನ ಚಳುವಳಿ)ದ ಪ್ರಭಾವ ಸ್ವಲ್ಪ ಮಟ್ಟಿಗೆ ಉಂಟಾಗಿರಬಹುದಾದರೂ, ಹರಿದಾಸ ಸಾಹಿತ್ಯ-ಹರಿದಾಸ ಆಂದೋಲನ ತನ್ನದೆ ಆದ ಹಲವಾರು ವೈಶಿಷ್ಟ್ಯಗಳನ್ನು ಪಡೆದಿದೆಯೆಂಬುದು ಮರೆಯಂಥದಲ್ಲ.[5] ಎಲ್ಲ ಕಾಲದ ಭಕ್ತರಲ್ಲಿ ಕೆಲವು ಭಾವಗಳು ಸಮಾನವೆನ್ನಬಹುದಾದರೂ ದಾಸಸಾಹಿತ್ಯದ ಮೇಲೆ ಶರಣ ವಚನಗಳ ವರ್ಚಸ್ಸು ಆಗಿದೆ ಎಂಬುದು ದಿಟ. ಈ ಅನ್ಯೋನ್ಯ ಭಾವ ಕನ್ನಡಿಗರಿಗೆ ಹೆಮ್ಮೆಯ ಮಾತು. ಅಂಕಿತವನ್ನು ಬದಲಿಸಿದರೆ ಅಂತಃಕರಣ ಒಂದೇ, ಅಭಿವ್ಯಕ್ತಿ ಒಂದೇ ಎಂದು ಕಾಣುತ್ತದೆ. ವಿಷಯ ನಿರೂಪಣೆ, ಪ್ರತಿಪಾದನೆ, ನಡುಗನ್ನಡ ಬಳಕೆ, ಇವುಗಳೆಲ್ಲ ಹರಿದಾಸ ಸಾಹಿತ್ಯ ತನ್ನದೆ ಆದ ವಿಶಿಷ್ಟತೆಯುಳ್ಳದ್ದಾಗಿದೆ. ವಚನಕಾರರಿಂದ ಪರಿಷ್ಕೃತಗೊಂಡ ವೀರಶೈವಧರ್ಮ ಶಿವೋತ್ಕೃಷ್ಟತೆಯನ್ನು ಪ್ರತಿಪಾದಿಸಿ, ಕನ್ನಡನಾಡಿನಲ್ಲಿ ಹುಟ್ಟಿ ಸ್ಥಳೀಯರನ್ನೂ ಒಳಗೊಂಡು ಬೆಳೆದು, ಹರಡಿದ ಮೊತ್ತಮೊದಲ ಜನತೆಯ ಚಳುವಳಿಯೆ ಆಯಿತು. ಹರಿದಾಸ ಪರಂಪರೆ ಹುಟ್ಟಿದುದೂ ಕರ್ಣಾಟಕದಲ್ಲಿ. ಮಧ್ವಾಚಾರ್ಯ ಪ್ರಣೀತ ಹರಿಸರ್ವೋತ್ತಮತೆಯ ಪ್ರತಿಪಾದಿತ ಧರ್ಮ ಆದ ವೈಷ್ಣವ ಧರ್ಮದ ಅನುಯಾಯಿಗಳಾದ ಹರಿದಾಸರದ್ದೂ ಇನ್ನೊಂದು ಸರ್ವೋದಯ ಚಳುವಳಿಯೆ. ಹರಿ ಭಕ್ತಿ ಪ್ರಸಾರ ಮಾಡಿದುದೊಂದೆ ಅಲ್ಲದೆ, ತಮ್ಮ ಸಮಕಾಲೀನ ಸಮಾಜವನ್ನು ಶುದ್ಧ ಗೊಳಿಸಲು, ಸಚ್ಚಾರಿತ್ರ್ಯ ಬೋಧಿಸಿದರು, ನೀತಿ-ಸಮಾಜ ಸ್ವಾಸ್ಥ್ಯ ಕಾಪಾಡುವುದರ ದಿಸೆಯಲ್ಲಿ ಶ್ರಮಿಸಿದರು, ಊರೂರುಸುತ್ತಿದರು, ಜನಮನಗಳನ್ನು ತಲುಪಿಸಿದರು, ಸುತ್ತಣ ಬದುಕು ಹಸನಾಗಬೇಕೆಂಬ ತುಡಿತ, ಕಳಕಳಿಯಿಂದ. ಹರಿದಾಸರು ತಮ್ಮ ಕೃತಿಗಳ ಮೂಲಕ ಭಗವಂತನೆದುರು ಲೋಕದ ಸಂಗತಿಗಳನ್ನು ನಿವೇದಿಸಿಕೊಂಡಿದಾರೆಂದೆ ನಿಸಿದರೆ ಅದು ಕೇವಲ ವಿಗ್ರಹರೂಪಿ ದೇವರೆದುರು ಮಾತ್ರವೆಂದಲ್ಲ. ಸಚೇತನರಾದ ಜೀವರುಗಳ ಹೃದಯವಾಸಿ ಅಂತರ್ಯಾಮಿಯಲ್ಲಿ. ಅಂದರೆ, ಜನತೆಯು ಸಮಾಜದ ಉದ್ಧಾರಕ್ಕೆ ತಾವೇ ಟೊಂಕಕಟ್ಟಿ ನಿಲ್ಲಬೇಕೆಂಬುದೆ ದಾಸರ ಮೊರೆ. ಅವರ ವಿಶ್ಲೇಷಣೆ, ಟೀಕೆ, ಮರುಕ, ಪ್ರಶ್ನೆ, ಎಲ್ಲ ಇದೇ ದಿಸೆಯಲ್ಲಿ ಇರುವಂಥದು. ಶರಣ-ದಾಸರ ಮುಖ್ಯೋದ್ದೇಶ, ಸಾಮಾನ್ಯರ-ಸಮಾಜದ ಬದುಕಿನ ಹಿತಬಯಸುವುದರಿಂದಾದ್ದರಿಂದ ಅವರ ಹಾದಿಯೂ ಒಂದೇ. ಅವರು ವಚನ ರೂಪಗಳನ್ನಾಡಿದರೆ, ಹರಿದಾಸರು ಇನ್ನೂ ಮುಂದರಿದು, ಜನತೆಗೆ ಸುಲಭಗೊಳಿಸಲು ತಮ್ಮ ಸಂದೇಶವನ್ನು ಹಾಡಿ, ಹೃದಯದ ಬಾಗಿಲು ತಟ್ಟಿದರು. ಕೇವಲ ಬೌದ್ಧಿಕಪ್ರಜ್ಞೆ-ಬುದ್ಧಿಮಂತಿಕೆ (ಶುಷ್ಕ ತರ್ಕವೆ ಎಂದೂ ಹೇಳಬಹುದು) ಆಧ್ಯಾತ್ಮದ ತಿಳಿವನ್ನು, ನೀಡದೆಂದು ಪರಮಾರ್ಥ

ಸಾಧನೆಗೆ ಸಾಧಕ ಅಲ್ಲ ಎಂಬ ಸಂಧಿಸಮಯದಲ್ಲಿ ಯಜ್ಞ-ಯಾಗಾದಿಗಳು, ಪೂಜೆ-ಮಂತ್ರ ಜಪ (ಕರ್ಮಕಾಂಡ), ಧರ್ಮಗ್ರಂಥ ಪಠಣ ಹಾಗೂ ನೂರೆಂಟು ಜಟಿಲ ನಿಯಮಗಳಿಂದಲೆ ದೈವ ಸಾಕ್ಷಾತ್ಕಾರವಾಗುವದೆಂದು ಹೇಳಂತ್ಹ ಭಕ್ತಿಯ ಬಂಧುರತೆಗಿಂತಲೂ ಭೀತಿಯ ತೆರೆಯನ್ನೆಬ್ಬಿಸುವ, ಪುರೋಹಿತಶಾಹಿಯ ದಬ್ಬಾಳಿಕೆ-ದರ್ಪದ ಪ್ರವೃತ್ತಿ, ಆಗಿನ ಕಾಲದಲ್ಲಿ ಪ್ರಚಲಿತ ಆಗಿದ್ದ ಕಾಲ. ಇದರಿಂದ ಬೇಸತ್ತು, ನೊಂದು, ತಂಡಿಯಂತ್ತಿದ್ದ ಸಾಮಾನ್ಯ ಜನತೆಗೆ ಸಾಮಂದಾಯಿಕ ಅಂತಃಪ್ರೇರಣೆ, ಪ್ರಚೋದಕ ಆಗಿ ಪ್ರಭಾವ ಬೀರಿದ್ದ ವಚನ-ಹರಿದಾಸ ಪರಿಕಾರದಿಂದ. ಇದರಿಂದಾಗಿ ಕನ್ನಡನಾಡಿನ ಸಾಹಿತ್ಯಿಕ-ಸಾಂಸ್ಕೃತಿಕ ಇತಿಹಾಸದಲ್ಲಿ ಕಾಣುವ ಎರಡು ಸರ್ವೋದಯ ಚಳುವಳಿಗಳು ನಡೆಯಲು ಕಾರಣವಾಯಿತು (ಕಾಲಾವಧಿ ಬೇರೆಯೆ ಆದರೂ)-ಮೊದಲಿನದು 12 ನೆ ಶ. ದ ವಚನಕಾರರದಾದರೆ, ಎರಡನೆಯದು ಕ್ರಿ. ಶ. 15 ನೆ. ಶ. ದ ಹರಿದಾಸರದು. ಹಾಗೆಯೆ ಹೆಸರೆ ಸೂಚಿಸುವಂತೆ, ಹರಿಯ ಭಕ್ತ ದಾಸರೆಂದು ಕರೆದುಕೊಂಡವರ ರಚನೆ ಹರಿದಾಸಸಾಹಿತ್ಯ ಪ್ರಾಚೀನ ಭಾಗವತ ಧರ್ಮ ಮಧ್ವಮತ ತತ್ತ್ವಗಳ ಸಂಭದ್ರ ಬುನಾದಿ ಪಡೆದುಕೊಂಡು, ಅದನ್ನೇ ಪ್ರಸರಿಸಲು ಕಂಕಣಬದ್ಧ ಆದ ಭಕ್ತಿಯ ಆಂದೋಲನ.

ವಚನ-ದಾಸಸಾಹಿತ್ಯದ ಆಂದೋಲನಗಳ ಸೃಜನೆ-ಉಗಮಗಳ ಹಿನ್ನೆಲೆ, ಸಮಾಜೊಧಾರ್ಮಿಕ ಪರಿಸರ (Socio-religious atmsophere)ಅಲ್ಲಿದ್ದ ಪರಸ್ಪರ ಧರ್ಮ ಸಂಘರ್ಷ, ಆಗ್ಗೆ ನಡೆದಂಥ ಕ್ರಾಂತಿ-ಚಳುವಳಿ-ಆಂದೋಲನ ಸ್ವರೂಪ ಮಾತ್ರ ವಿಭಿನ್ನ ರೀತಿಯವೆ ಆಗಿವೆಯೆಂಬುದು ಆಯಾ ಕಾಲದ ಸಾಹಿತ್ಯೇತಿಹಾಸದಿಂದ ಗುರುತಿಸಬಹುದಾಗಿದೆ. ವಚನ ಚಳುವಳಿಯ ಗತಿ (speed) ವೇಗ, ಹರಿದಾಸ ಆಂದೋಲನದಲ್ಲಿ ಕಾಣಬರುವುದಿಲ್ಲ. ಅಲ್ಲಿನ ಆವೇಶ, ಆವೇಗ, ತೀವ್ರ ಕಳಕಳಿ ಅಭಿವ್ಯಕ್ತಿ ತೀವ್ರತೆ, ಸಮಾಜದ ರೂಢ ಮೂಲ ವ್ಯವಸ್ಥೆ-ಸಮಸ್ಯೆಯ ವಿರುದ್ಧ ಒಮ್ಮೆಲೆ ಅಗ್ನಿ ಪರ್ವತದಂತೆ ಸಿಡಿದೆದ್ದ ಪ್ರತಿಭಟನೆಯೂ (ಹರಿದಾಸಸಾಹಿತ್ಯದಲ್ಲಿ) ಕಾಣಬರುವುದಿಲ್ಲ. ಇದಕ್ಕೆ ಕಾರಣ ಸುಸ್ಪಷ್ಟ, ವಚನ ಚಳುವಳಿ ನಡೆದದ್ದೆ ಸಮಾಜದ ವ್ಯವಸ್ಥೆ-ಧರ್ಮದ ಹೆಸರು-ಸೋಗಿನಲ್ಲಿ ನಡೆಯುತ್ತಿದ್ದ ವೈದಿಕ ಧರ್ಮಾಚರಣೆಗಳ ವಿರುದ್ಧ ಪ್ರತಿಭಟಿಸಲು ಹಾಗೂ ತೊಡೆದು ಹಾಕಲು ಆದರ ಸಾಹಿತ್ಯಾಭಿವ್ಯಕ್ತಿ ಫಲವೆ ವಚನ ಸಾಹಿತ್ಯ. ಅವೇ ಅಂದಿನ ಬದುಕಿನ ಕೈಗನ್ನಡಿ-ಭಕ್ತಿ-ವಿಚಾರ ಸಂಗಮ ವಚನಗಳೆಂದರೆ ಉತ್ಪ್ರೇಕ್ಷೆಯಲ್ಲವೆನಿಸುತ್ತದೆ. ತದನಂತರ ಬಂದ ದಾಸಸಾಹಿತ್ಯದ ಕಾಲ ಕೂಡ ಒಂದು ಸಂಧಿಸಮಯವೆ. ವಚನಕಾರರ ವೀರಶೈವ ಧರ್ಮದಿಂದಾಗಿ ತತ್ತರಿಸಿದ ವೈದಿಕಧರ್ಮ-ವೇದಾಗಮ ಪ್ರಮಾಣಗಳು-ವಿಷ್ಣುಭಕ್ತಿ-ವೈಷ್ಣವಧರ್ಮ-ಇವುಗಳನ್ನು ಪುನಶ್ಚೇತನಗೊಳಿಸುವಿಕೆ ಹಾಗೂ ಪುನರ್‌ಸ್ಥಾಪನೆ, ಸಂಸ್ಕೃತ ಪ್ರಧಾನ ಆಗಿದ್ದ ಪಂಡಿತಮಾನ್ಯ ಸಾಹಿತ್ಯ-ಅದು ಅರ್ಥ ಆಗದ ಮುಗ್ಧ ಜನತೆಯ ಮನದಲ್ಲಿ ಮತ-ಧರ್ಮ-ಭಕ್ತಿ-ಶ್ರದ್ಧೆ- ಒಲವು

ಬಿತ್ತರಿಸುವಲ್ಲಿ ಕೈಗೊಂಡ ಆಂದೋಲನವೆ ಹರಿದಾಸರ ಆಂದೋಲನ. ಜನಭಾಷೆಯ, ಸಾಮಾನ್ಯ ಮಾನ್ಯ ಸಾಹಿತ್ಯ ಸಂಪದ-ಕೀರ್ತನ ಸಾಹಿತ್ಯವೆ ಆ ಆಂದೋಲನದ ಫಲ ಹಾಗೂ ಸಾಹಿತ್ಯಿಕ ಅಭಿವ್ಯಕ್ತಿ. ವಚನ ಚಳುವಳಿ ಸಮಾಜದ ಎಲ್ಲ ಸ್ತರಗಳನ್ನೂ ಒಳಗೊಂಡಷ್ಟು ಹರಿದಾಸ ಸಾಹಿತ್ಯ ಒಳಕೊಳ್ಳಲಿಲ್ಲವೆಂಬುದೇನೊ ಸೂಚಿತವೆ. ಆದಕ್ಕೆ ಕಾರಣ, ಆಯಾಯ ಆಂದೋಲನಗಳ ಉದ್ದೇಶ, ಪರಿಸರ, ಧಾರ್ಮಿಕ-ಮತೀಯ ಸ್ವರೂಪ, ಸ್ವಭಾವ ಅಂತಃಪ್ರೇರಣೆ ಹಾಗೂ ವೈಚಾರಿಕ ಧೋರಣೆ. ಹರಿದಾಸಸಾಹಿತ್ಯ ಆರಂಭಗೊಂಡುದು ಸಮಾಜದ ಉನ್ನತ ವರ್ಗದವರೆನಿಸಿಕೊಂಡ ಬ್ರಾಹ್ಮಣರಿಂದ-ಹಾಗೂ ಅವರ ಸಂಘಟಿತಗೊಂಡ ಸಮುದಾಯದಿಂದ (ಕನಕದಾಸರು ಹೊರತಾಗಿ) ಆದರಿಂದಾಗಿ, ಅದರ ವ್ಯಾಪ್ತಿ-ಸಾಮಾಜಿಕ ದೃಷ್ಟಿಯಲ್ಲಿ ಕಡಿಮೆಯೆಂದೆನ್ನಿಸಬಹುದು. ಹೀಗಾಗಿ ಹರಿದಾಸ ಆಂದೋಲನದ ತೀವ್ರತೆ, ಗತಿ, ಕಳಕಳಿ, ಮನೋಭಾವಗಳ ವಂಜಲುಗಳು ಭುಗಿಲೆದ್ದ ವಚನಕ್ರಾಂತಿಯಂತಾಗಲಿಲ್ಲ ಬರಿಯ ದೈವಭಕ್ತಿ ಪ್ರಸರಣದ ಮತೀಯ ಆಂದೋಲನವಾಯಿತು. ಸೌಮ್ಯ ರೂಪದ್ದಾಯಿತು. ಆದರೆ, ಹರಿದಾಸಪಂಥ ಆಂದೋಲನವಾದ-ಬೆಳೆದಪರಿ, ಹರಿದಾಸ ಸಂಪ್ರದಾಯ, ಹರಿದಾಸರ ಪರಂಪರೆಯವರು ನಡೆಸಿದ ಪವಿತ್ರಜೀವನಪಥ, ಅವರಿತ್ತ ಸಾಹಿತ್ಯಿಕ ಕೊಡುಗೆ, ಇವುಗಳೆಲ್ಲವನ್ನೂ ಗಮನಿಸಿದಾಗ, ಹರಿದಾಸ ಆಂದೋಲನದ್ದು ಒಂದು ಸಮಾಜ ಸಂಧಾರಕ ಹಾಗೂ ಭಕ್ತಿ ಪ್ರಸಾರಕ ಆದ ವಿಶಿಷ್ಟತೆ, ಸ್ವಭಾವ ಉಳ್ಳದ್ದು ಎಂದೆನಿಸುತ್ತದೆ. ಬಹುಶಃ ಅಭಿಮತ 'ಹರಿದಾಸರ ಕೃತಿಗಳು ನೀತಿಬೋಧೆಯ ಪಾತಳಿಯಲ್ಲಿ ಮಡುಗಟ್ಟಿ ನಿಂತಿವೆ'[6] ಅದನ್ನು ಆಂದೋಲನವೆಂದು ಕರೆಯಲಾದೀತೆ ಎಂಬ ಪ್ರಶ್ನೆ ಗಮನದಲ್ಲಿರಿಸಿಕೊಂಡು, ಹರಿದಾಸ ಸಾಹಿತ್ಯವನ್ನು ಹಾಗೂ ಆ ಪರಂಪರೆಯವರು ನಡೆಸಿದ (ನಡೆಸುತ್ತಿರುವ) ವೈಚಾರಿಕ-ಭಕ್ತಿಪಂಥವನ್ನು ಆಂದೋಲನದ ದೃಷ್ಟಿಯಲ್ಲಿ ಅಧ್ಯಯನ ನಡೆಸುವ ಪ್ರಯತ್ನ ಇಲ್ಲಿನದಾಗಿದೆ.

ಹರಿದಾಸ ಸಾಹಿತ್ಯವನ್ನು ಒಂದು(movement-a religious movement) ಆಂದೋಲನ – ಮತೀಯ – ಧಾರ್ಮಿಕ ಆಂದೋಲನವೆಂದೆಲ್ಲ ಅನೇಕ ವಿದ್ವಾಂಸರು ಕರೆದಿದ್ದಾರೆ. ಶಂತವ್ವ ನಿಟ್ಟನಿಂದ ವ್ಯಾಖ್ಯಾನಿಸಿದ್ದಾರೆ.[7] Movement ಎಂಬ ಇಂಗ್ಲಿಷ್ ಪದಕ್ಕೆ ಕನ್ನಡ ನಿಕಟ ಸಂವಾದಿ ಪದ ಆಗಿ ಚಳುವಳಿ, ಆಂದೋಲನ ಎಂದೆಲ್ಲ ಅರ್ಥಯಿಸುವುದರಿಂದ, ಹರಿದಾಸ ಆಂದೋಲನವೆಂದೆ ಗುರುತಿಸಲಾಗಿದೆ. ಹರಿದಾಸ ಆಂದೋಲನದಲ್ಲಿಯೂ ಅನೇಕ ಹರಿದಾಸರು-ಹರಿಭಕ್ತರು,[8] ಹರಿದಾಸರ ದೀಕ್ಷಾಗುರುಗಳು, ಧರ್ಮಾಭಿಮಾನಿಗಳಾದ ರಾಜರು, ಮಠಾಧೀಶರೆಲ್ಲ ಪಾಲ್ಗೊಂಡಿದ್ದಾರೆ. ಗಂಡು ಹೆಣ್ಣೆಂಬ ಭೇದವಿಲ್ಲದೆ, ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ ಹಾಗೂ ಇನ್ನೂ ಅನೇಕ ಮಹಿಳೆಯರೂ ಹರಿದಾಸ ದೀಕ್ಷೆ ವಹಿಸಿ ಹರಿದಾಸ ಪಂಥದಲ್ಲಿ ಮುನ್ನಡೆದಿರುವುದಲ್ಲದೆ, ಆಂದೋಲನವನ್ನು ಮುನ್ನಡೆಸಿದ್ದಾರೆ. ಇದು,ಈಭಕ್ತಿಯ ಆಂದೋಲನದ ವ್ಯಾಪ್ತಿಯನ್ನು ಹೆಚ್ಚುಗೊಳಿಸಿದೆ ಸಮಾಜದ ಪ್ರಮುಖ ಸಮಸ್ಯೆಗಳಲ್ಲೊಂದಾದ ಜಾತಿ

ಪದ್ಧತಿ ಮೇಂತಾದದ್ದರ ವಿರುದ್ಧ ಹರಿದಾಸರು ಸೌಮ್ಯವಾಗಿ ನಿರಾಕರಿಸಿದರೂ, ಅವರದ್ದು ಭಕ್ತಿಸಾಹಿತ್ಯ ಮಾತ್ರವೆ ಆದರೂ, ಅಲ್ಲಿಯ ಆ ಗುಂಪಿನವರ ಸುವ್ಯವಸ್ಥಿತ ಆಂದೋಲನ ಸ್ವರೂಪ, ಅವರು ಸೃಜಿಸಿಕೊಂಡ ಪರಿಸರ, ಹಿನ್ನೆಲೆ, ಬಳಸಿ ಬಿತ್ತರಿಸಿದ ಸಾಹಿತ್ಯ ಪ್ರಕಾರ, ಸಾಹಿತ್ಯಿಕ ಕೊಡುಗೆಗಳ ವೈಶಿಷ್ಟ್ಯ, ಹಾಗೂ ಕರ್ನಾಟಕ ಸಂಗೀತಕ್ಕೆ ಹರಿದಾಸ ಸಾಹಿತ್ಯದ (ವಿಶೇಷವಾಗಿ ಶ್ರೀಪುರಂದರದಾಸರ) ಕೊಡುಗೆ ಶಂಸನೀಯ ಹಾಗೂ ಗಮನಾರ್ಹವೆ. ಈ ಕೆಲವು ದೃಷ್ಟಿ, ಹರಿದಾಸ ಆಂದೋಲನದ ಅಧ್ಯಯನ ನಡೆಸಲು ಪ್ರೇರಿಸಿದೆ ಹಾಗೂ ಇದೊಂದು ಪ್ರಯತ್ನವಾಗಿದೆ. ಇಲ್ಲಿ ನಮ್ಮ ಅಧ್ಯಯನದ ಅವಧಿ ಕಾಲವನ್ನು ಕ್ರಿ. ಶ. 14ನೇ ಶತಮಾನದಿಂದ 19ರ ವರೆಗಿರಿಸಿಕೊಂಡು, ಪ್ರಮುಖ ಹರಿದಾಸರ ಕೆಲವು ಕೊಡುಗೆಗಳನ್ನು ಮಾತ್ರ ಆಂದೋಲನದ ದೃಷ್ಟಿಯಿಂದ ಪರಿಶೀಲಿಸಿದೆ. ಹರಿದಾಸರ ರಚನೆ, ಸಾಹಿತ್ಯ, ಕೀರ್ತನದಂಕಿತ ಪ್ರಧಾನ, ಎಲ್ಲ ಮೇಂದಿ ವರಿದಿದ್ದರೂ ದಾಸಸಾಹಿತ್ಯದ ಮೊದಲ ಹಂತ (14-16ನೇ ಶ.) ಹಾಗೂ (17-19ನೇ ಶ.) ದ್ವಿತೀಯ ಹಂತದಲ್ಲಿ ಬಂದು ಬೆಳಗಿದ ಹರಿದಾಸರಂಥ ಅಪರೋಕ್ಷಜ್ಞಾನಿಗಳು, ಕಾಣಬರುವುದಿಲ್ಲ. ಕೃತಿ-ವರ್ಣನೆಗಳು ಚರ್ವಿತ ಚರ್ವಣದಂತಿವೆ. ಇದು ಆಂದೋಲನ ಮೇಂದುವರಿಕೆಯನ್ನು ಸೂಚಿಸುವುದಾದರೂ ಕೃಷಿ ಪುಷ್ಟಿ ಪ್ರತಿಭೆ ಸೃಜನ ಸಹಜತೆಯ ದೃಷ್ಟಿಯಲ್ಲಿ ಪರಿಗಣಿಸಲು ಕಷ್ಟವಾಗುತ್ತದೆ.

**ಹರಿದಾಸ ಪಂಥದ ಕಾಲವ್ಯಾಪ್ತಿ[9]**

ಹರಿದಾಸ ಆಂದೋಲನ ಅಂಕುರಿಸಿ ಬಂದುದು, ಸಂಘಟಿತಗೊಂಡುದು ಕ್ರಿ. ಶ. 15ನೇ ಶತಕದಿಂದ ಎಂಬುದು ಈಗ ವಿದ್ವಾಂಸರಿಂದ ನಿರ್ಧಾರ ಆಗಿದೆ. ಹರಿದಾಸ ಪಂಥ ಒಂದು (cult-to-worship) ಪದ್ಧತಿಯಾಗಿ ಬೆಳೆದು ಬಂದಿರುವುದೂ ಎಲ್ಲರೂ ತಿಳಿದಂಥ ವಿಚಾರ. ಈ ಭಕ್ತಿಪಂಥವೆ ಆಂದೋಲನವಾಗಿ, ಇದರ ನೆಲೆ ಭದ್ರಗೊಂಡು, ಬೆಳೆದು, ದ್ರುತಗತಿ ತಲುಪಿದ್ದು ಕನಕದಾಸರ ಕಾಲದವರೆಗೆ.[10] ಅನಂತರ ಸುಮಾರು 2 ಶತಮಾನ ಕಾಲ, ಹರಿದಾಸ ಆಂದೋಲನ-ಸಾಹಿತ್ಯ ಇಳಿಮೊಗ ಆಗಿದ್ದ ಕಾಲ. ಈ ಸಂಧಿಸಮಯದಲ್ಲಿ ಬಿಜಾಪುರದ ಕಾಖಂಡಿಕೆಯ ಮಹೀಪತಿದಾಸರು[11] ಹರಿದಾಸ ಪರಂಪರೆಯ ಪ್ರತಿನಿಧಿಗಳಾಗಿ ಈ ಭಕ್ತಿಯ ಆಂದೋಲನ ಗಂಗೆಯ ಹೊನಲು ಮೇಂದುವರಿಸಿದರೆಂಬುದು ಈಗ ದೃಢಪಟ್ಟಿದೆ (16ನೆ ಶತಮಾನದ ಮೊದಲ ಅರ್ಧದ ತನಕ). ಅಮೇಲೆ ಸುಮಾರು 17ನೇ ಶತಕ (ಕ್ರಿ. ಶ. 1671) ದಲ್ಲಿ ಮಂತ್ರಾಲಯ ಕ್ಷೇತ್ರದಲ್ಲಿ ನೆಲೆನಿಂದ ಶ್ರೀರಾಘವೇಂದ್ರತೀರ್ಥರ ನೇತೃತ್ವದಲ್ಲಿ ಹರಿದಾಸ ಪಂಥ-ಸಾಹಿತ್ಯದ ದ್ವಿತೀಯ ಘಟ್ಟ ಆರಂಭ ಆಯಿತು. ವ್ಯಾಸ-ದಾಸಕೂಟಗಳವರಿಗೆ ಸ್ಫೂರ್ತಿದಾಯಕರಾದ ಶ್ರೀರಾಯರು ಈಗಲೂ ಆಗಮ್ಯಮಹಿಮಾಲೋಕರೆಂದೆ ಪ್ರಸಿದ್ಧ. ಶ್ರೀರಾಘವೇಂದ್ರರ ಮಧ್ವತತ್ವ ಪ್ರಸಾರ, ಹರಿಭಕ್ತಿ ಪ್ರಸಾರಗಳಿಗೆ ಕಂಕಣಕಟ್ಟಿ ನಿಂತು ಹರಿದಾಸ ದೀಕ್ಷಾಬದ್ಧರಾದ ಪ್ರಮುಖರು ವಿಜಯದಾಸರು, ಗೋಪಾಲದಾಸರು,

ಜಗನ್ನಾಥದಾಸರು ಹಾಗೂ ಬಾಗಲಕೋಟೆಯ ಪ್ರಸನ್ನವೆಂಕಟದಾಸರು. ಹೀಗೆ ಹರಿದಾಸ ಆಂದೋಲನದ ಹರಹು 19 ನೆ ಶ. ದ (ಜಗನ್ನಾಥದಾಸರು) ವರೆವಿಗೂ ಇದ್ದು ಆನಂತರ ಜಗನ್ನಾಥದಾಸರು ಅವರ ಶಿಷ್ಯ ಪ್ರಶಿಷ್ಯರಿಂದ ಪುನಃ ಮುಂದುವರಿದಿದೆ. ಈಗಲೂ ಅಲ್ಲಲ್ಲಿ ಹರಿದಾಸದೀಕ್ಷೆ ಅಂಕಿತ ಸ್ವೀಕರಿಸಿದವರಿದ್ದಾರೆ, ಕೃತಿ ರಚಿಸುತ್ತಿರುವವರಿದಾರೆ.[12] ಈ ಭಕ್ತಿಯ ಆಂದೋಲನದ ಸೆಲೆ ಇನ್ನೂ ಬತ್ತಿಲ್ಲ. ಅದೇ ಸಂತೋಷದ ವಿಚಾರ ಹಾಗೂ ಆಂದೋಲನ ಪ್ರಗತಿಪರ ಅಂಶ.

ಮಧ್ವಾಚಾರ್ಯರ ಭಕ್ತಿಯುತ ರಚನೆಯಾದ ದ್ವಾದಶಸ್ತೋತ್ರದ ಭಾವಪ್ರಕ ಸಾಲುಗಳು ಹರಿದಾಸಸಾಹಿತ್ಯದ ಮೊದಲ ಭಕ್ತಿ ಕುಸುಮವೆಂದು ಕೆಲವರು ಹೇಳುವಂತೆಯೆ, ನರಹರಿತೀರ್ಥರ ಮೂರು ರಚನೆಗಳ ಮೂಲಕ ಅವರೆ ಹರಿದಾಸಸಾಹಿತ್ಯದ ಮೊದಲ ಪ್ರವರ್ತಕರೆಂದೂ, ಒಟ್ಟಾರೆ ಭಕ್ತಿ ಪಂಥದ, ಉಗಮ ಮೊದಲೆ ಆಗಿತ್ತೆಂಬುದಂತೂ ತಿಳಿದಿರುವ ವಿಚಾರವೆ. ಈ ಹರಿಭಕ್ತಿ ಪ್ರಸಾರಕ್ಕಾಗಿ, ಒಂದು ಹೊಸ ಮಾಧ್ಯಮವನ್ನೇ ಪ್ರಯೋಗಕ್ಕೆ ತಂದವರು ಶ್ರೀಪಾದರಾಜರು. ಅವರ ಆ ಪ್ರಯೋಗ ಮಾಧ್ಯಮ, ತಿಳಿದ ನುಡಿ ಬಳಕೆ, ಹರಿಭಕ್ತಿ ಪಂಥ ಮುಂದುವರಿಸುವುದರೊಂದಿಗೇ ಹರಿದಾಸ[13] ಪಂಥಕ್ಕೂ ನಾಂದಿಯಾಯಿತು. ಅಂತೆಯೆ ಹರಿದಾಸಸಾಹಿತ್ಯದ ಆದ್ಯ ಪ್ರವರ್ತಕರು ಶ್ರೀಪಾದರಾಜರೆ. ಶ್ರೀಪಾದರಾಜರ ಶಿಷ್ಯರಾದ ವ್ಯಾಸರಾಯರ ವೀರ್ಯವತ್ತಾದ ದೀಶಕ್ತಿ ಸಂಘಟಿಸಿದ್ದು ಪುರಂದರ, ಕನಕದಾಸಾರ್ಯರಂಥವರನ್ನು. ಇದು ಹರಿದಾಸ ಪಂಥ, ಒಂದು ಭಕ್ತಿ ಪ್ರಸರಣ ಬಣ ಯಾ ಪಂಥ ಯಾ ಸಮುದಾಯ ಆಗಿದದ್ದು, ಸಮಾಜದಲ್ಲಿ ವಿವಿಧ ವೃತ್ತಿ-ಮನೆತನದವರನ್ನೂ ಒಳತೊಡಗಿಸಿಕೊಂಬುದರ ಮೂಲಕ (ಚಿನಿವಾರ–ಪುರಂದರರು, ಪಾಳೆಯಗಾರ–ಅರಸುತನ–ಕನಕದಾಸರು, ಹೀಗೆ) ಹಾಗೂ ತನ್ನ ಆದರ್ಶವಾದ ಹರಿಭಕ್ತಿ–ಮಧ್ವಮತತತ್ತ್ವ–ಹರಿಪಾರಮ್ಯಬೋಧೆ – ಪ್ರತಿಪಾದನೆ – ಮಂಡನ – ಸಮರ್ಥನೆಗಳ ಮೂಲಕ, ಒಂದು ಆಂದೋಲನವೆ ಆಯಿತು. ಆ ಆಂದೋಲನ ಜನಪ್ರಿಯ ಸಾಹಿತ್ಯ ಪ್ರಕಾರದ ಮೂಲಕ ತನ್ನ ಧ್ಯೇಯಗಳನ್ನು ಅಭಿವ್ಯಕ್ತಗೊಳಿಸಬೇಕಿತ್ತು. (ವಚನಕಾರರು, ತಮಿಳುನಾಡಿನ ಆಳ್ವಾರ್ ಸ್ಫೂರ್ತಿ ಇದಕ್ಕಿತ್ತು). ಆ ರೀತಿಯ ಅಭಿವ್ಯಕ್ತಿಗಳೆ ಕೀರ್ತನೆಗಳು ಹಾಗೂ ಇನ್ನಿತರ ವಸ್ತುಕ-ವರ್ಣಕ ಕೊಡುಗೆಗಳು. ಭಕ್ತಿ ಪ್ರಸಾರಕ ಹರಿದಾಸಸಂತರು, ಸಾಹಿತಿಗಳೂ ಆದರು. ಅವರು ಹಾಡಿದ ಮಾತು ಜನಮನದಲ್ಲಿ ನೆಲೆಯೂರಿ ದೃಢಗೊಳ್ಳಲು, ಮಾತಿನ ಜತೆಗೂಡಿದ ಗೇಯತೆ (ಸಂಗೀತ), ಲಯ, ಇವೆಲ್ಲ ಇನ್ನೂ ಪ್ರಿಯ ಆಗಿ ಆಂದೋಲನ ದೃಢಗೊಂಡಿತು. ಪರಂಪರೆಯೆ ಆಗಿ ಮುಂದುವರಿಯಿತು. ಹಿಂದಿದ್ದ ವಚನಕಾರರಿಗೆ ಷಟ್‌ಸ್ಥಳ ಸಿದ್ಧಾಂತವಿದ್ದಂತೆ) ಮಧ್ವಮತ ತತ್ವ ಹರಿದಾಸರ ಭಕ್ತಿಯ ಆಂದೋಲನಕ್ಕೆ ಧಾರ್ಮಿಕ-ಮತೀಯ ಆಂದೋಲನ ಸ್ವರೂಪಗಳನ್ನೂ ಜತೆಗೂಡಿಸಿ, ಮುಪ್ಪುರಿಗೊಂಡು, ಆ ಆಂದೋಲನದ ಸತ್ವ ಇನ್ನೂ ಪುಷ್ಟ ಆಯಿತು. ಒಂದು ಪಂಥ, ಒಂದು ಆಂದೋಲನ ಆಗಲು ಆ ಬಣ, ಗುಂಪು, ಅವರ ಸಂಘಟಿತ

ವ್ಯಕ್ತಿತ್ವ, ವಿಶಿಷ್ಟತೆಯ, ಆನಿಷ್ಟವಾದದ ಹೋರಾಟ, ಇದೆಲ್ಲ ಅಗತ್ಯ. ಹಾಗೂ ಆ ಆಂದೋಲನ, ಜನಮಾನ್ಯ ಆಗಲು ಜನಭಾಷೆಯಲ್ಲಿಕೆ-ಬೆಳೆವಣಿಗೆಯೂ ಅಗತ್ಯವಿದೆ. ಗೀರ್ವಾಣ ಭಾಷೆ ಬಿಟ್ಟು, ಅಲ್ಲಿನ ರಹಸ್ಯ (ಮತ-ಧರ್ಮಗ್ರಂಥಗಳ ರಹಸ್ಯ)ವನ್ನು ಜನ ಭಾಷೆಯಲ್ಲಿ ತಿಳಿಯಾಗಿ ತಿಳಿಸುವುದರ ಮೂಲಕ ಮತ ಪ್ರವಾದಿಗಳೆ ಆದರೂ ಹರಿದಾಸರು. ಜನಭಾಷೆಯನ್ನು ದೇವಭಾಷೆಗೇರಿಸಿದ ಹರಿಕಾರರೂ ಆದರು. ಇದೂ ಹರಿದಾಸ ಪಂಥವನ್ನು ಆಂದೋಲನವಾಗಿ ಪರಿಗಣಿಸಲು ಇಂಬುಗೊಡುವ ಅಂಶವೆ. ಹರಿದಾಸ ಆಂದೋಲನ ಇನ್ನೂ ಮುಂದುವರಿದಿದೆ. ಈಗಲೂ ಅಲ್ಲಲ್ಲಿ ಏರ್ಪಡುವ ಕೆಲವು ಧಾರ್ಮಿಕ ಸಮಾರಂಭಗಳಲ್ಲಿ ಮಠಾಧೀಶರಿಂದ ಹರಿದಾಸದೀಕ್ಷೆ, ಅಂಕಿತ ಸ್ವೀಕರಿಸುತ್ತಲಿರುವವರಿದಾರೆ.[14] ಹರಿಭಕ್ತಿಯ ಪ್ರಸಾರ, ತಾವು ನಂಬಿರುವ ಮಧ್ವಮತ ತತ್ವದಲ್ಲಿ ಅಚಲ ವಿಶ್ವಾಸ, ಹಾಗೂ ಅದರ ಪ್ರಸಾರ, ಮಾನವ ಕೋಟಿಯು ಚಂಚಲದಂಕನ್ನು ಬದಲಿಸಬಲ್ಲ ಸದ್ಭಾವನೆ-ಅದಕ್ಕಾಗಿ ಈ ಆಂದೋಲನ ಪಥ ಇನ್ನು ಮುಂದುವರಿಯುತ್ತಲೆ ಇದೆ. ಹರಿದಾಸವೃತ್ತಿ ಕಣ್ಮರೆಯಾಗುತ್ತಿದ್ದರೂ, ಹರಿದಾಸ ಬದುಕು, ಭಕ್ತಿಪರ ಪಥ ಗಮನ ಮುಂದುವರಿದಿರುವುದು ಆಂದೋಲನದ ಇರವಿಗೆ ನಿದರ್ಶನವಾಗಿದೆ. ಹರಿದಾಸ ಪಂಥದವರು ಕೇವಲ ನಾಡಾಡಿ ಪಂಥದವರಲ್ಲ. ಅವರದ್ದು ವಿಶಿಷ್ಟ ಮಾರ್ಗ. ಎಂಥ ವೃತ್ತಿಗಾಗಿಯೊ ಅವರು ಹರಿದಾಸ್ಯ ವೃತ್ತಿ ಅವಲಂಬಿಸುವವರಲ್ಲ. ಮನೆಗಳ ಮುಂದೆ ನಿಂತು ಗೊಟಾವಾಮವ ಪ್ರದರ್ಶಿಸುತ್ತ, ಬೇಡುವವರಲ್ಲ. ಹರಿಯ ಭಕ್ತರಾದ ಅವರಿಗೆ ಹರಿಭಕ್ತಿ ಪ್ರಸಾರ, ಹಾಗೂ ಜನತೆಗೆ ಒಳ್ಳೆಯ ಹಾದಿ ತೋರಿಕೊಡುವುದೆ ಉದ್ದೇಶ. "ದಾಸನಾಗುವುದಕ್ಕೆ ಏಸು ಜನ್ಮದ ಸುಕೃತ" ವೆನ್ನುವ ಶ್ರೀವ್ಯಾಸರಾಯರು, "ಶ್ರೀಕೃಷ್ಣ ಎನ್ನನು ಕಾಯಬೇಕೆ ತಂದೆ : ಆಳಿದ ನೀನು ನಿನ್ನಾಳು ನಾನು" ಎನ್ನುವ ದಾಸರದಾಸ್ಯ ಸ್ವೀಕರಿಸುವಷ್ಟು ವಿನಯವಂತಿಕೆಯುಳ್ಳವರು. ಪುರಂದರ-ಕನಕರಲ್ಲಿಯೂ ಇದೇ ಭಾವನೆ ಮಾರ್ದನಿಗೊಡುತ್ತದೆ. ಹರಿದಾಸರೆಂಬ ಹೆಸರು ಅನ್ವರ್ಥ ಆಗಲು ಅವರ ನಡೆ-ನುಡಿ-ಸ್ವಭಾವ, ಭಕ್ತಿಯ ಭರ ಎಲ್ಲವನ್ನೂ ವಿಜಯದಾಸರು ಚಿತ್ರಿಸುತ್ತ, ತಿಳಿಸುವ ನುಡಿಗಳಿವು:-

ಹರಿಯ ಪೊಳಗಿಪ್ಪರುಹರಿಯ ಪೊತ್ತಿಪರು:
ಹರಿಯ ಅಂತರದಲ್ಲಿ ನಿಲಿಸಿಕೊಂಡಿಹರು:
ಹರಿಯ ಬಲ್ಲಿದವಾಗಿ ಸುತ್ತಿಇರು
ಹರಿಯ ಲಕ್ಕಿಸದಲೆ ಹರಿಹರಿದಾಡೋನು
ಹರಿನಾಮ ಜೀವನ ಪಾವನ ತ್ರಿಭುವನ
ಹರಿನಾಮ ಸರ್ವದ ಜಪತಪನೇಮ ನಿಷ್ಠ
ಹರಿಗೆ ಸಾಮ್ಯಾಧಿಕ್ಯ ಇಲ್ಲವಿಲ್ಲವೆಂದು
ಕರಣಶುದ್ಧಿಯಲ್ಲಿಂದ ಕೊಂಡಾಡಿ ಕೊಂಡಾಡಿ
ಪರಮೈಶ್ವರ್ಯಮೂರ್ತಿ ವಿಜಯವಿಠಲರೇಯ

ಸರಿ ಸರಿ ಸರಿ ಬೆಳಕಾದಂತಿಪ್ಪರು ಎಂಬುವಲ್ಲಿ ಹರಿದಾಸರ ಆಂದೋಲನ ಅತ್ಮಗತ್ಮವಾದ ಹರಿಭಕ್ತಿ ಲಕ್ಷಣವನ್ನೇ ಕಾಣಬಹುದಾಗಿದೆ. ಇಲ್ಲಿ "ಬೂಟಕೆಯಿಂ ಗೂಟನಾಮ ಜಡ್ಡಿದು ಪಟ್ಟೆಧೋತರ ಮಡಿಯುಟ್ಟು ಕಾಸುವೀಸಕೆಂದು" ವಂಸಗೊಡಂ ಹರಿದಾಸ ಚಿತ್ರಣವಿಲ್ಲ. ಅದು ಧಾಂಭಿಕತೆಯಿಂದ ವ್ಯಾಸರಾಯರ ಪರಿಗಣಿಸಿದ್ದರ ಇದು ಹರಿದಾಸ ಭಕ್ತಿಪಂಥ ಒಂದು ಆಂದೋಲನವೇ ಆಗಿ ಮುಂದರಿದದ್ದರ ಸೂಚ ಹಾಗೂ ಹರಿಭಕ್ತಿ ಪ್ರಸರಣದ ಧ್ಯೇಯಕ್ಕಾಗಿ ತಮ್ಮ ಬದುಕನ್ನೆ ತೇದ ಚಿತ್ರಣ, ಹ ದಾಸರ ಅನೇಕ ಕೃತಿಗಳಲ್ಲಿ ದೊರೆವ ವಿಚಾರವೆ ಆಗಿದೆ.

## ಮುಖ್ಯ ಪ್ರೇರಣೆಗಳು

ಹರಿದಾಸ ಸಾಹಿತ್ಯ-ಆಂದೋಲನದ ನಡೆದು ಬಂದ ಹಾದಿಯನ್ನು ಗಮನಿಸಿ ದಾಗ, ಕೆಲವು ಅಂಶ ತಿಳಿಯಬರುತ್ತದೆ. ಅದು ಈ ಭಕ್ತಿಪಂಥದಲ್ಲಿ ಆಂದೋಲನದ ಶಕ್ತಿತರಲು ಪ್ರೇರಕ, ಪೋಷಕವೂ ಆಗುತ್ತವೆ. ಆ ಅಂಶಗಳನ್ನು ಹೀಗೆ ಗುರುತಿಸ ಬಹುದು

1. ಮಧ್ವಮತ-ತತ್ವ : ವೈಷ್ಣವಧರ್ಮ-ವಿಷ್ಣುಭಕ್ತಿ, ಹರಿಸರ್ವೋತ್ತಮತ್ವ, ಈ ಹಿನ್ನೆಲೆಯಲ್ಲಿ ಜನಸಾಮಾನ್ಯರಿಗೂ ತಿಳಿಯುವಂತೆ ಭಕ್ತಿಸ್ವರೂಪ ಮಹತಿಗಳನ್ನು ತಿಳಿಸುವ ಧ್ಯೇಯ. ಹರಿದಾಸರದು, ಅವರ ಸಾಹಿತ್ಯ ಕೃತಿಗಳದ್ದು, ಎನ್ನಬಹುದು. ಸಾಹಿತ್ಯ-ಸಾಹಿತ್ಯಕ್ಕಾಗಿ ಎಂಬ ನಿಲುವಿನಿಂದ ಅವರು ಕೃತಿ ರಚನೆ ಮಾಡಲಿಲ್ಲ. ಆದರೆ ಅವರ ಅಭಿವ್ಯಕ್ತಿ ಮಾಧ್ಯಮ, ಆ ಸಾಹಿತ್ಯಿಕ ಅಭಿವ್ಯಕ್ತಿಯಲ್ಲಿ ಕಾಣಬರುವ ಸಹಜ ಗೇಯಗುಣ, ಕಾವ್ಯ ಸೌಂದರ್ಯ, (ಉಪಮೆ, ರೂಪಕ, ಪ್ರತಿಮೆ, ಅಲಂಕಾರ, ವರ್ಣನೆ, ಇತ್ಯಾದಿ ...) ಅನುಭವ-ಅಪರೋಕ್ಷಜ್ಞಾನದ ಕಳಕಳಿ, ಆತ್ಮಸಾಕ್ಷಾತ್ಕಾರ-ದೈವಸಾಕ್ಷಾತ್ಕಾರದ ಹಂಬಲ ತೀವ್ರತೆ, ಸುಪ್ರಕಟಗೊಂಡು ದಾಸ ಸಾಹಿತ್ಯವನ್ನು ಸಾಹಿತ್ಯ ಮೌಲ್ಯಗಳುಳ್ಳದ್ದಾಗಿ ಮಾಡಿದೆ. ಯಾವುದೆ ಕಡಗ-ಅಗ್ರಹಾರಗಳ ಆಶಯ ಆಮಿಷಗಳು ಹರಿಭಕ್ತರಾದ ಹರಿದಾಸರಿಗೆ ಇರಲಿಲ್ಲ. ಇನ್ನೂ ಇದ್ದದ್ದು ತೂರಿದಂ ಬಂದವರವರು. ಹರಿದಾಸಸಾಹಿತ್ಯದಲ್ಲಿ ತೀವ್ರತೆ, ಪ್ರಾಮಾಣಿಕತೆ, ಕಾವ್ಯಾಂಶವನ್ನು ಪ್ರಕಟಗೊಳಿಸುತ್ತದೆ. ಪುರಂದರದಾಸರ ಸಹಜಸರಳತೆ, ಶ್ರೀಪಾದರಾಜರ ಸಾಹಿತ್ಯಿಕ ಪ್ರಯೋಗ (ವೃತ್ತನಾಮ, ಭ್ರಮರಗೀತೆ, ದಂಡಕ ಹೀಗೆ), ವ್ಯಾಸರಾಯರ ಭಕ್ತಿ, ವಾದಿರಾಜರ ಕವಿಹೃದಯ, ಕನಕನ ಜಾಣ್ಮೆ, ವಿಜಯದಾಸರ-ಗೋಪಾಲದಾಸರ-ಜಗನ್ನಾಥ ದಾಸರ ಮಧ್ವ ನಿಷ್ಠೆ-ಸಂಸ್ಕೃತ ಪರಿಣತಿ, ಸಾಮಾಜಿಕ ವಿಚಾರ-ಸಮಸ್ಯೆಗಳಿಗೆ ಇವರಲ್ಲ ತುಡಿಯುವ ರೀತಿ, ಎಲ್ಲವೂ ಹರಿದಾಸಸಾಹಿತ್ಯವನ್ನು ಚಿರಂತನ ಆಗಿಸುತ್ತವೆ. ಇದೇ ಭಕ್ತಿಪಂಥ ಆಂದೋಲನ ಆಗಿದ್ದರ ಕುರುಹಾಗುತ್ತದೆ. ಪುರಂದರ-ಕನಕದಾಸರ ಕೃತಿಗಳು ಉತ್ಕೃಷ್ಟ ಸಾಹಿತ್ಯವೆ ಆಗಿಹುದೆಂಬುದು ಸುವಿದಿತ.

2. ಮೊದಮೊದಲು ದಾಸಸಾಹಿತ್ಯ ಕೇವಲ ದೇವರ ಪೂಜಾ ಕಾಲದ ಕೈಂಕರ್ಯ ಕಾರ್ಯ, ಭಗವಂತನ ನಾಮಸಂಕೀರ್ತನೆಗಷ್ಟೆ ಮೀಸಲಾಗಿದ್ದು, ಅನಂತರ ಬರಬರುತ್ತ ಪುರಂದರರಿಂದಾಚೆಗೆ ಭಕ್ತಿಯ ಸಂಗಡ ಸಾಮಾಜಿಕ ಅಂಶದ ಅಭಿವ್ಯಕ್ತತೆಯನ್ನು ಧ್ಯೇಯ ಆಗಿಸಿಕೊಂಡದ್ದು ಅದರ ಒಂದು ವಿಶಿಷ್ಟತೆ. ಇದು ಕಾರಣಾಂತರಗಳಿಂದಾಗಿ, ಸ್ವಲ್ಪ ಕಾಲ ಕುಗ್ಗಿ, ಮತ್ತೆ ಮಧ್ವಮತ ಪ್ರಸಾರದಿಂದ ಪುನಶ್ಚೇತನಗೊಂಡು, ಅಲ್ಲಲ್ಲಿ ಮಿನುಗಿತು. ಈಗ ಸೊರಗುತ್ತ ಬಂದಿದೆ. ಆದರೂ ಉಳಿದಿದೆ, ಮೊದಮೊದಲಲ್ಲಿನ ಅಂತಃಚೈತನ್ಯವಿರದಿದ್ದರೂ ಕೂಡ.

3. ಮೂರನೆಯ ವಿಚಾರ, ಹರಿದಾಸಸಾಹಿತ್ಯ ಮಧ್ವಮತ ಬದ್ಧ ಸಾಹಿತ್ಯವಷ್ಟೆ ಅಲ್ಲ ಎಂಬುದು. ಕನಕದಾಸರದಲ್ಲಿಯಂತೂ ಭಾಗವತ ಧರ್ಮದ ವಿಶಾಲತೆ, ಸಮನ್ವಯ ಮನೋಭಾವ ಎದ್ದು ತೋರುತ್ತದೆ. ಪುರಂದರದಾಸರು, ಮೊದಲಿಗೆ ವೈಷ್ಣವ ಸಂಪ್ರದಾಯವರಾಗಿದ್ದವರು. ಶ್ರೀಕೃಷ್ಣಭಕ್ತಿ, ಶ್ರೀವ್ಯಾಸರಾಯಸ್ವಾಮಿಗಳನ್ನು ಕಂಡರೆ ತುಂಬ ಗೌರವಾದರ–ಮಾಧ್ವದೀಕ್ಷೆ ಕೈಗೊಳ್ಳಲು ಸ್ಫೂರ್ತಿಯಾಯಿತು. ಒಟ್ಟಾರೆ ಹರಿದಾಸರ ಈ ಸಾಮಾಜಿಕ ಕಳಕಳಿ, ದಾಸಸಾಹಿತ್ಯವನ್ನು ಕೇವಲ ಮತೀಯ ಸಾಹಿತ್ಯವೆಂಬುದರಿಂದ ಭಿನ್ನ ಆಗಿಸಿದೆ. ಅದರಿಂದಾಗಿ ಅದು ಸರ್ವಜನಾದರಣೀಯ ಎಂದೆನ್ನಿಸಿಕೊಂಡಿತು. ಮಹಿಳೆಯರಿಗೂ ಸ್ಫೂರ್ತಿಬಿಂದು ಆಗಿ ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವನಂಥ ರತ್ನಗಳನ್ನು ಕೊಡುಗೆಯಾಗಿತ್ತಿತು.

4. ಹರಿದಾಸಸಾಹಿತ್ಯ ವಿಶೇಷವಾಗಿ ಮಧ್ವಮತ ಪರಂಪರೆ, ಗುರು–ಶಿಷ್ಯ ಪರಂಪರೆಯ ಚೌಕಟ್ಟಿನಲ್ಲಿ ಬಂದ ಹರಿದಾಸರಿಂದ ರಚಿತ ಆಗಿದೆ.[18] (ಇಲ್ಲಿ ಮಧ್ವ ಸಂಪ್ರದಾಯ ಅನುಸರಿಸಿದ ಮಠಾಧೀಶರು ವ್ಯಾಸತೀರ್ಥರು ಸ್ವತಃ ಪಂಡಿತರು, ಕವಿಗಳು ಸಂಸ್ಕೃತ-ಕನ್ನಡ ಚೆನ್ನಾಗಿ ತಿಳಿದವರು. ಶಾಸ್ತ್ರನಿಷ್ಠ ಆದ ವ್ಯಾಸಕೂಟ, ಹರಿದಾಸನಿಷ್ಠೆಯುಳ್ಳ ದಾಸಕೂಟ ಎರಡನ್ನೂ ಎತ್ತಿ ಹಿಡಿದವರು, ಸಂಘಟಕರು. ಕನಕದಾಸರ ಮೇಲೆ ಅಪಾರ ಕರುಣೆ, ಅವರನ್ನು ಕುರಿತು ಗೌರವ ತೋರಿದ ಸುಧಾರಕ ಮನೋಧರ್ಮದವರು ಯತಿಪುಂಗವರು ಸೇರಿ ಹರಿದಾಸರೊಂದಿಗೆ ಅನುಭವಗೋಷ್ಠಿಗಳಲ್ಲಿ ಕಲೆತು, ಅನೇಕ ವೇಳೆ ತಮ್ಮ ಮತದ ಎಲ್ಲೆ ಮೀರಿ ಸಾಮಾಜಿಕ ಚಿಂತನೆಯನ್ನು ವಿಶಾಲ ಮನೋಭಾವದಿಂದಲೇ ನಡೆಸಿದ್ದಾರೆ. ವಾದಿರಾಜರ ತುಳು ಕೀರ್ತನೆಗಳು ಅವರಿಗೆ ಸಾಮಾನ್ಯ ಜನತೆಯ ಬಗ್ಗೆ ಇದ್ದ ಕಳಕಳಿ, ಹಾಗೂ ವ್ಯಾಸರಾಯರ ಕ್ರಾಂತದರ್ಶಿತ್ವ ಇವೆಲ್ಲ ದಾಸಸಾಹಿತ್ಯದಲ್ಲಿ ಗುರುತಿಸಬಹುದಾದಂಥವು. ಆದರೆ, ಮೊದಮೊದಲು ಎಂಥ ಉನ್ನತಜ್ಞಾನ–ಚಿಂತನ ನಡೆಸಿದ ಹರಿದಾಸ ಶಿಷ್ಯರು ಬಂದರೂ, ಅವರ ಸಂಖ್ಯೆ ಇಳಿಮುಖ ಆಯಿತು. ಹರಿದಾಸರ ಲಕ್ಷ್ಯ ಕ್ರಮೇಣ, ಬರೀ ಮಧ್ವಮತ ಸಮರ್ಥನೆ, ಪ್ರಸಾರದತ್ತಲೆ ಹೊರಳಿದುದು ವಿಜಯದಾಸರಿಂದತ್ತ ಗಮನಿಸಿದಾಗ ಸ್ಪಷ್ಟ ಆಗುತ್ತದೆ. ಒಟ್ಟಾರೆ ಹರಿದಾಸ ಆಂದೋಲನ ಮುಂದುವರಿಯಿತೆಂದು ಹೇಳಬಹುದು.

5. ಸಾಹಿತ್ಯ ಸಾಮಾನ್ಯ ಜನಮಾನ್ಯ ಆಗಿದ್ದು ಹರಿದಾಸರ ಉದಾರ ಮನೋಭಾವದಿಂದ ಹಾಗೂ ಶ್ರೀಪಾದರಾಜ, ವಾದಿರಾಜರಿಂದ ಜಗನ್ನಾಥದಾಸರ ತನಕ ಸಂಸ್ಕೃತ ಪರಿಣತಿ, ವಿದ್ವತ್ತು ಗಾಢವಾಗುಳ್ಳವರೂ ಕನ್ನಡ ಸಾಹಿತ್ಯ ಸಾಂಸ್ಕೃತಿಕ ಸಂಪದಕ್ಕೆ ಕೊಡುಗೆಯಿತ್ತದ್ದು, ಹರಿದಾಸ ಆಂದೋಲನದ ಆದರ್ಶ ಎಲ್ಲರನ್ನೂ ತಲುಪಲು ಸಾಧ್ಯ ಆಯಿತು. (ವಚನಕಾರರ ಪ್ರಭಾವ ಇಲ್ಲಿ ಆಗಿದೆಯೆಂಬುದು ಅಲ್ಲಲ್ಲಿ ಗಮನಾರ್ಹ.)

6. ಗುರು-ಶಿಷ್ಯ ಪರಂಪರೆ. ಗುರುಭಕ್ತಿ, ವ್ಯಾಸರಾಯರು, ಪುರಂದರರನ್ನು ಕೊಂಡಾಡಿದಂಥವೂ ಅಪರೂಪವಾಗಿದೊರೆತಿವೆ. ಇದು ಪರಸ್ಪರ ಅನ್ಯೋನ್ಯತೆ ಹೆಚ್ಚಿಸಲು ಕಾರಣ ಆಯಿತು.

7. ಹರಿದಾಸ ಆಂದೋಲನಕ್ಕೆ ತನ್ನದೆ ಆದ ಸಂಪ್ರದಾಯ ವೈಶಿಷ್ಟ್ಯ ನೀಡಿದವರು ಶ್ರೀಪಾದರಾಜರು. ಕಾಲಿಗೆ ಗೆಜ್ಜೆಕಟ್ಟಿ, ತಂಬೂರಿ ಮೀಟಿ, (ಕನಕದಾಸರು ಏಕತಾರ ಹಿಡಿದ ಚಿತ್ರ ಸಾಮಾನ್ಯ. ಬಹುಶಃ ಅವರು ಅದನ್ನೆ ಉಪಯೋಗಿಸುತ್ತಿದ್ದಿರಬೇಕು) ಚಿಟಿಕೆ ಬಡಿಯುತ್ತ, ದೇವರ ಪೂಜಾ ಕಾಲದಲ್ಲಿ ಸಂಗೀತದೊಡಗೂಡಿದ ಕೃತಿ ರಚನೆ ಮಾಡುತ್ತ ನರ್ತಿಸುತ್ತಿದ್ದರಂತೆ. ಇಲ್ಲಿ ಸಾಹಿತ್ಯ, ಗೇಯತೆ, ನರ್ತನ ಎಲ್ಲವೂ ಬಂದವು. ಇಲ್ಲಿಯ ರಾಗ-ತಾಳ-ಲಯ ಜನಸಾಮಾನ್ಯರನ್ನು ಆಕರ್ಷಿಸಿ ಅವರ ಮನದಲ್ಲಿ ಭಕ್ತಿಯ ಬೀಜ, ಬಿತ್ತಿ, ಮೊಳೆಯಿಸಿತು. ಇದು ಹರಿದಾಸರ ಅನುನಿತ್ಯ ಕಾಯಕ, ಅದೇ ಕಾರ್ಯ ಕೂಡ.

8. ಮೇಲ್ಕಾಣಿಸಿದ ಪ್ರಕಾರ, ಹರಿದಾಸ ಆಂದೋಲನ, ಸಂಗೀತಶಾಸ್ತ್ರಕ್ಕೂ ಮಹತ್ವದ ಕೊಡುಗೆ ನೀಡಿದೆ. ಪುರಂದರದಾಸರ ಪಿಳ್ಳಾರಿಗೀತೆ, ಮಾಯಾಮಾಳವಗೌಳ-ರಾಗ ಪ್ರಾಧಾನ್ಯ, ಸರಳೆವರಸೆಗಳು, ಇವೆಲ್ಲ ಅವರಿಗೆ ಕರ್ನಾಟಕ ಸಂಗೀತ ಸಾರ್ವಭೌಮ, ಪಿತಾಮಹರೆನ್ನಿಸಿವೆ. ತ್ಯಾಗರಾಜರೂ ಅವರ ಸ್ಫೂರ್ತಿ ಪಡೆದಿರುವುದನ್ನು

ುಬರುವ ಜಾನಪದ ಅಂಶ ಅಲ್ಲಿ ಜನಪದ
ತ್ತದೆ. ಶ್ರೀಪಾದರಾಜರ ಸುಳಾದಿ, ಉಗಾ
ಮು ಎಲ್ಲವೂ ಒಂದು ಪರಂಪರೆ ಸೃಷ್ಟಿಗೆ
ರ ಕೋಲು – ಸುವ್ವಿಪದ, ಶ್ರೀಪ್ರಸನ್ನ
ರ ಅನೇಕ ಕೃತಿಗಳು – ಇವೆಲ್ಲ ಜನಪದ
ವೆ. ಇದು ಈ ಆಂದೋಲನ ತನ್ನ ಆದರ್ಶ
ಸಹಕಾರಿಯಾಗಿದೆ.

ನಸಾಮಾನ್ಯರ 'ಆಡುಮನುಡಿ' ಅಥವಾ ಆಡು
ಗನ್ನಾಥದಾಸರಂಥವರಲ್ಲಿ ಸಂಸ್ಕೃತ ಪ್ರೌಢಿಮೆ

ಕಂಡು ಬಂದರೂ ವಿಜಯದಾಸರಂಥವರಲ್ಲಿ ಮಧ್ವಪಂತ ತತ್ವ ನಿರೂಪಣೆಗಳಲ್ಲಿ ಸ್ಥಳೀಯ (ಉತ್ತರ ಕರ್ನಾಟಕ) ಭಾಷೆಯ ಸಮರ್ಥ ಬಳಕೆಯಿದೆ. ಜನಪದ ಸೂಕ್ತಿ,ನುಡಿಗಟ್ಟು, ನಾಣ್ಣುಡಿಗಳನ್ನು ಹರಿದಾಸರು ತುಂಬ ಜಾಣ್ಮೆಯಿಂದ ಬಳಸಿಕೊಂಡಿದಾರೆ. ಇದು ಈ ಆಂದೋಲನದ ಯಶಸ್ಸಿಗೆ ಕಾರಣಕೂಡ.

11. ಹರಿದಾಸ ಸಾಹಿತ್ಯದ ಇತಿಹಾಸ, ಬಹುತೇಕ ಹರಿದಾಸರೆಲ್ಲ ಉತ್ತರ ಕರ್ನಾಟಕದಲ್ಲಿ ಇದ್ದರೆಂಬುದನ್ನು ತಿಳಿಯಪಡಿಸುತ್ತದೆ. ದಾಸಕೂಟದ ಹಂಪೆ-ಮಂತ್ರಾಲಯ ಅದೇ ಪ್ರದೇಶದಲ್ಲಿರುವುದು ಇದಕ್ಕೆ ಕಾರಣ-ಉತ್ತೇಜಕ ಆಗಿದ್ದಾತು. ಇದರ ಜೊತೆಗೆ ಪಂಡರಿಗೆಯ ವಿಠಲ ಭಕ್ತಿಯನ್ನು ಮನಗಾಣಬಹುದು.

12. ಹರಿದಾಸ ಆಂದೋಲನದಿಂದ ಒಡಮೂಡಿ ಬಂದಿರುವ ಸಾಹಿತ್ಯ ಕೃತಿಗಳಲ್ಲಿ ತತ್ಕಾಲೀನ (ಮಧ್ಯ ಕಾಲ ಯುಗದ) ಸಾಮಾಜಿಕ-ಧಾರ್ಮಿಕ, ಸಾಂಸ್ಕೃತಿಕ ಜೀವನ ಚಿತ್ರಣಕ್ಕೆ ಆಕರ ಸಾಮಗ್ರಿ ಇವೆ. ಕನಕದಾಸರ ಮೋಹನ ತರಂಗಿಣಿ, ರಾಮಧಾನ್ಯ ಚರಿತೆ, ಕೀರ್ತನೆಗಳು ಇದಕ್ಕೆ ನಿದರ್ಶನ.

13. ಹರಿದಾಸ ಪರಂಪರೆಯಲ್ಲಿ ಹೆಚ್ಚುಮಂದಿ ಸ್ತ್ರೀಯರು ಕೃತಿ ರಚನೆ ಮಾಡದಿದ್ದರೂ ಅಲ್ಲಲ್ಲಿ ಮಹಿಳಾ ಕೃತಿಕಾರರು ಬಂದಿರುವುದು ಹರಿದಾಸ ಆಂದೋಲನದ ವಿಶಿಷ್ಟ ಗುಣ. ನೀತಿ, ಭಕ್ತಿ, ಸಮಾಜ ಸ್ವಾಸ್ಥ್ಯ ಈ ಬಗ್ಗೆ ಜನತೆಯಲ್ಲಿ ಜಾಗೃತಿ ಉಂಟು ಮಾಡುವುದೆ ಹರಿದಾಸರ ಧ್ಯೇಯವಾಗಿತ್ತು. ಅವರು ಹಾಡಿ, ಕುಣಿದದ್ದು ಸಾಹಿತ್ಯ-ಧರ್ಮಪ್ರಸಾರ, ಎರಡನ್ನೂ ಏಕಕಾಲಕ್ಕೆ ಆಗಮಾಡಿಸಿತು. ಮಹಿಳೆಯರ ಕೊಡುಗೆ ಇಲ್ಲಿ ವಿರಳ.

ಮೇಲೆ ಗುರುತಿಸಿರುವ ಕೆಲವಾರು ಅಂಶಗಳಿಂದಾಗಿ, ಹಾಗೂ ಹರಿದಾಸರಲ್ಲಿರುವ ಅಭಿವ್ಯಕ್ತ ಕಳಕಳಿಯಿಂದಾಗಿ, ಹರಿದಾಸ ಆಂದೋಲನವನ್ನು ಪ್ರಧಾನತಃ ಭಕ್ತಿಯ ಆಂದೋಲನವೆಂದೇ ಗುರುತಿಸಲಾಗಿದೆ. ಹರಿದಾಸ ಸಾಹಿತ್ಯ ಪ್ರಧಾನವಾಗಿ ಹರಿಭಕ್ತಿ-ಜತೆಗೆ ಗುರುಭಕ್ತಿಯ ಹೊನಲೆಂಬುದು, ಅದನ್ನು ಇಡಿಯಾಗಿ ಅವಲೋಕಿಸಿದಾಗ ತಿಳಿದು ಬರುವ ಅಂಶ. ಶಿವಶರಣರಿಗೆ ಶಿವಸರ್ವೋತ್ತಮನಾದಂತೆ, ಹರಿದಾಸರಿಗೆ ಹರಿಯೇ ಸರ್ವೋತ್ತಮ. ಹರಿಸರ್ವೋತ್ತಮತ್ವ ಸಮರ್ಥಿಸುವುದು, ಹರಿಭಕ್ತಿಯ ಪ್ರಸಾರವೆ ಹರಿದಾಸರ ಧ್ಯೇಯ, ಒದುಕೇ ಇದಾಗಿತ್ತು: ಭಕ್ತಿ ಈ ಎರಡು ಆಂದೋಲನಕ್ಕೂ ಸಮಾನವಾದ ತೀವ್ರ ಮನೋಭಾವ. "ದಾಸವಾಙ್ಮಯದಲ್ಲಿ ಈ ಭಕ್ತಿಯು ಸಂಸಾರದಲ್ಲಿ ಕಾಣುವ ವಿವಿಧ ರೀತಿಯ ಉತ್ಕಟ ಪ್ರೀತಿಯಾಗಿ ತುಂಬಿದೆ. ಅನುಭಾವ ಮಾರ್ಗದಲ್ಲಿ ದೇವರನ್ನು ಕಾಣುವ ರೂಪ ವೈವಿಧ್ಯಕನುಗುಣವಾಗಿ ಈ ಪ್ರೀತಿ ವ್ಯಕ್ತದೋರಿದೆ. ಮಗು, ತಾಯಿ ತಂದೆ, ಆಳು-ಒಡೆಯ, ಸತಿ-ಪತಿ, ಆಪ್ತ-ಮಿತ್ರ ಈ ವಿವಿಧ ರೀತಿಯ



ಸಂಬಂಧವನ್ನು ಭಕ್ತನು ಪರಮಾತ್ಮನಲ್ಲಿ ಕಾಣುವುದು ಸಾಧ್ಯ. ದಾಸಸಾಹಿತ್ಯ ಈ ಮಾದರಿಯ ಭಕ್ತಿಭಾವದ ಅಭಿವ್ಯಕ್ತಿಯಲ್ಲಿ ಯಾವ ಕೊರತೆಯನ್ನೂ ತೋರಿಸುವುದಿಲ್ಲ. ನಿಜವಾಗಿ ದಾಸಸಾಹಿತ್ಯಕ್ಕೆ ಭಕ್ತಿಭಾವದ ಅಭಿವ್ಯಕ್ತಿ ಶ್ರೀನಿವಾಸವಾದ ವೈಕುಂಠವಾಗಿದೆ[16] ಎಂಬ ಮಾತು ಇಲ್ಲಿ ಗಮನೀಯ. ವಚನಕಾರರಿಗೆ ವೀರಶೈವ ಧರ್ಮ ಹೇಗೊ ಹಾಗೆಯೆ ಹರಿದಾಸರಿಗೆ ತಮ್ಮ ವೈಷ್ಣವಧರ್ಮ ಪ್ರಚಾರವು ಮುಖ್ಯ ಉದ್ದೇಶವಾಗಿತ್ತು. ಆಗಿನ ಕಾಲಕ್ಕೆ ಹಾಗೂ ತಮ್ಮ ಹಿಂದಿನಿಂದ ಪ್ರಸಿದ್ಧವೆನಿಸಿದ್ದ, ನಿರ್ದುಷ್ಟವೆನಿಸಿದ ಮಧ್ವಾಚಾರ್ಯರ ತತ್ವ ಅವರಿಗೆ ಸರಿಯೆನಿಸಿದ್ದು, ಅವುಗಳನ್ನು ತಮ್ಮ ಕೃತಿಗಳಲ್ಲಿ ಹಾಳತವಾಗಿ ಅಳವಡಿಸಿಕೊಂಡರು. ಇದರಿಂದ, ಹರಿದಾಸರು ತತ್ವ ಪ್ರಸಾರದ ಪ್ರವಾದಿ (ವಿಂಪನರಿ) ಗಳೆಂದರೂ ಹೆಚ್ಚಲ್ಲ. ಇನ್ನೂ ಒಂದು ಮಾತನ್ನು ನಾವು ಇಲ್ಲಿ ಗಮನಿಸಬೇಕು. ಧರ್ಮ ಕ್ರಾಂತಿ, ವೈಚಾರಿಕ ಕ್ರಾಂತಿಗಳಿಗೆ ಸಾಮಾನ್ಯ ಜನತೆಯ ಮನಸ್ಸು ಸಾಧನವೆ ವಿನಾ ಕೇವಲ ಪಂಡಿತ ಬೋಧಕರು ಮಾತ್ರ ಅಲ್ಲ. ನಮ್ಮ ದೇಶದಲ್ಲಿ ನಡೆದಷ್ಟು, ಮತಧರ್ಮ ಕ್ರಾಂತಿ, ಪುನಃ ಪುನಃ ಆಲೋಚನೆ ಪ್ರಪಂಚದಲ್ಲೆಲ್ಲೂ ನಡೆದಿಲ್ಲ. ಹಾಗೆಯೆ, ನಮ್ಮಲ್ಲಿ ನಡೆದ ಅನೇಕ ರಾಜ್ಯ ಕ್ರಾಂತಿಗಳು ಸಾಮಾನ್ಯ ಜನತೆಯ ಬದುಕಿನ ಮೇಲೆ ಅಷ್ಟೊಂದು ಗಾಢ ಪರಿಣಾಮ ಬೀರಿಲ್ಲ. ಆದರೆ, ರಾಜ್ಯಕ್ರಾಂತಿಗಳ ಪರಿಣಾಮದಿಂದಾಗಿ ಸಾಹಿತ್ಯರಂಗ ಕದಡಿದ್ದರೂ, ಕೃತಿರಚನೆ-ಸಂರಕ್ಷಣೆ, ಪೋಷಣೆಗೆ ರಾಜ್ಯ ವಿಪ್ಲವಗಳೂ ಕಾರಣವಾಗಿವೆ.[17] ಕರ್ನಾಟಕದಲ್ಲಿ ಧರ್ಮಕ್ರಾಂತಿಗಳನೇಕ ನಡೆದಿವೆ.[18] ಜೈನ, ಬೌದ್ಧ, ಶಾಕ್ತ-ತಾಂತ್ರಿಕ, ವೀರಶೈವ, ಶಂಕರ, ರಾಮಾನುಜ, ಮಧ್ವರಿಂದ ಮತಗಳ (ವಿವಿಧ ಧರ್ಮಗಳ) ಆಂದೋಲನ ಎಡೆಬಿಡದೆ ನಡೆದವು. ಈ ಧರ್ಮಕ್ರಾಂತಿಗಳ ಪರಿಣಾಮ ಸಾಮಾನ್ಯ ಜನತೆಯ ಮೇಲೆಯೂ ಆಯಿತು. ಅದು ಆಯಾಯ ಪರಿಸರದಲ್ಲಿರಚಿತ ಸಾಹಿತ್ಯ ಕೃತಿಗಳ ಮೂಲಕವೂ ಪ್ರತಿಬಿಂಬಿಸಿದೆ. ವಚನ ಚಳವಳಿಯನ್ನು ಬೆಂಬತ್ತಿ ಉಗಮಗೊಂಡ ಹರಿದಾಸ ಆಂದೋಲನ ಬೆಳೆದು ವರ್ಧಿಸಿದರೂ ಭಾಷೆ-ಅದರ ಬಳಕೆ, ಕಾವ್ಯ ಸ್ವರೂಪ ಪ್ರಕಾರ-ಪ್ರಭೇದದಲ್ಲಿ ತನ್ನದೆ ಆದ ವಿಶಿಷ್ಟ ಹಾದಿ ಕಂಡುಕೊಂಡಿತು. ನಡುಗನ್ನಡ ಜನತೆಯ ಆಡುಭಾಷೆಯ ಬಳಕೆಯನ್ನು ಎರಡು ಗುಂಪಿನವರೂ (ವಚನ-ದಾಸ) ಚೆನ್ನಾಗಿ ಉಪಯೋಗಿಸಿಕೊಂಡರು. ಮತಧರ್ಮದ ವಿಚಾರದಲ್ಲಿ ಜೈನರು ಜಿನಭಕ್ತಿ ಹರಡಿದಂತೆ, ಶರಣರು ಶಿವಭಕ್ತಿ ಸಾರಿದಂತೆ, ಹರಿದಾಸರು ವಿಷ್ಣುಭಕ್ತಿಯನ್ನು ಸಂವರ್ಧಿಸಿ, ಸಾರಿ, ವೇದ-ಆಗಮ, ಉಪನಿಷತ್ತು-ಶ್ರುತಿಸ್ಮೃತಿ ಪ್ರಮಾಣ, ಪುರಾಣ ದರ್ಶನಗಳ ಮೂಲಕ ಪ್ರತಿಪಾದಿಸಿ, ಧರ್ಮರಹಸ್ಯ-ಗಹನ ತತ್ವಗಳನ್ನು ಪುರಾಣದ ಅನೇಕ ಉಪಮೆ, ದೃಷ್ಟಾಂತಗಳ ಮೂಲಕ ಎಲ್ಲರಿಗೂ ತಿಳಿವ ಜನಭಾಷೆ-ಆಡುಮಾತಿನಲ್ಲಿಯೆ ಚಿತ್ರಿಸಿದರು. ಆವರ ಕವಿ ಹೃದಯವೂ ಭಾವನೆಗಳಿಗೆ ಎಡೆಯಿತು. ಇದರಿಂದ ಹರಿದಾಸ ಆಂದೋಲ ಸಾಮಾನ್ಯಮಾನ್ಯ ಆಗಿ ದೃಢಗೊಂಡದಷ್ಟೆ ಅಲ್ಲದೆ, ಭಕ್ತಿರಸಭರಿತ ಆದ ಅವರ ಕೀರ್ತನ ಸಂಪದ, ಅಂದಿನಿಂದ ಇಂದಿನ ವರೆಗೂ ಜನತೆಯ ಒಲವರ ಪಡೆದ ಸಾಹಿತ್ಯವಾಗುಳಿದಿದೆ. ಜನರಿಗೆ ತುಂಬ ಹಿತವೆನಿಸಿ, ಸಮಾಜ ಹಿತಕ್ಕಾಗಿ ತನ್ನನ್ನು ತಾನು ಅರ್ಪಿಸಿಕೊಂಡಿದೆ.

ಯಾವುದೇ ಹೊಗಳಿಕೆ, ಬಯಕೆಗಳ ಕಟ್ಟಿಲ್ಲದೆ ಸ್ವತಂತ್ರ ಸಹಜತೆ ಅಲ್ಲಿ ತಾನೆ ತಾನಾಗಿ ಮೆರೆದಿದೆ.

ಹರಿದಾಸರ ಸೌಮ್ಯರೀತಿಯ ಆಂದೋಲನ, ಕನ್ನಡ ನಾಡು-ನುಡಿಗಳಿಗೆ ಉಪಕಾರ ಮಾಡಿರುವುದನ್ನು ಯಾರೂ ತಳ್ಳಿ ಹಾಕಲಾಗುವಂತಿಲ್ಲ. ಅಂದಿನ ಸಮಾಜ-ಪರಿಸರದ ಶ್ರೀಸಾಮಾನ್ಯರ ಭಾಷೆಯಾದ ಕನ್ನಡದಲ್ಲಿ ಅನೇಕ ಕೃತಿಗಳನ್ನು ರಚಿಸಿ, ಗೀರ್ವಾಣ ಭಾಷೆ (ಸಂಸ್ಕೃತ) ಅರಿಯದವರಿಗೆ ಸುಲಭ ಆಗುವಂತೆ ಆಚಾರ್ಯ ಪ್ರಣೀತ ಧರ್ಮತತ್ವಗಳನ್ನೂ, ಗ್ರಂಥಸಾರಗಳನ್ನು ತಿಳಿಯಪಡಿಸಿ ಮನದಟ್ಟು ಮಾಡಿದುದು ಸಾಮಾನ್ಯ ವಿಚಾರವಲ್ಲ. ಅದಕ್ಕೆ ಬೇಕಾದ ವಿದ್ವತ್ತು, ಭಾಷಾ ಪ್ರಭುತ್ವ ಅವರಲ್ಲಿದ್ದಿತು.[19] ವೇದಾಂತ ತತ್ವಗಳನ್ನು ಚೆನ್ನಾಗಿ ಅರಿತ ಒಬ್ಬ ಕನ್ನಡಿಗ, ಸಂಸ್ಕೃತದಲ್ಲಿ ಅವನಿಗೆ ತಿಳುವಳಿಕೆಯಿರದಿದ್ದರೂ, ಅವನು ತಿಳಿದುಕೊಂಡಿರುವುದಕ್ಕೆ ಪ್ರಧಾನ ಆಕರ ಆದ ದಾಸಸಾಹಿತ್ಯಕ್ಕೆ ಪೂರಾ ಚಿರಋಣಿಯಾಗಿರಬೇಕಾಗುತ್ತದೆ. ಅವರ ಎಲ್ಲ ಕಾವ್ಯರಚನೆಗಳೂ ಹೊಸಗನ್ನಡದ ಮಾದರಿಗಳೆ ಆಗಿವೆ ಎಂಬ ಬೆಂಗೇರಿಯವರ ಅಭಿಮತ ಅಕ್ಷರಶಃ ನಿಜ. ದಾಸರ ಪದಗಳು ಇಂದು ಭಕ್ತಿಯುತ ಭಾವಗೀತೆಗಳೆ ಆಗಿವೆ. ಹಾಗೂ ಹೃದಯತಲಸ್ಪರ್ಶಿಭಾವ, ಅನೇಕ ಕೃತಿಗಳಲ್ಲಿ ನಿಚ್ಚಳ ಹೊಸತಾಗಿ ಸ್ಪಂದಿಸುತ್ತದೆ.

ಹರಿದಾಸ ಪರಂಪರೆಯವರ ಸಾಹಿತ್ಯ ಸೃಜನೆಯೂ ಅಪಾರ.[20] ಅವುಗಳಲ್ಲಿ ಅವರು ಕೈಕೊಂಡ ಆಂದೋಲನ ಪಥ-ಭಕ್ತಿಪಂಥ-ಆದರ್ಶ ಎಲ್ಲವೂ ಹಂತ ಹಂತವಾಗಿ ಬಿತ್ತರಗೊಳ್ಳುತ್ತವೆ. ಇಲ್ಲಿ ಉದಾಹರಣೆಗಾಗಿ ನಾಲ್ಕು ಕೃತಿಗಳ ಕೆಲವು ಸಾಲು ಮಾತ್ರ ನೀಡಲಾಗಿದೆ :

ಅ. ಗುರುಭಕುತಿ ಬೇಕು, ಹಿರಿಯರ ಕರುಣಬೇಕು :
ಹರಿಕಥೆಗಳ ನಿತ್ಯ ಕೇಳುತ ಇರಬೇಕು :
ವಿರಕುತಿಬೇಕು ವಿಷ್ಣುವಿನಾರಾಧನೆಬೇಕು :
ವರಮಂತ್ರಜಪಬೇಕು ತಪಬೇಕು ಪರಗತಿಗೆ :
ಪರಿಪರಿವ್ರತಬೇಕು ಸಿರಿ ಹಯವದನನ :
ಪರಮಾನುಗ್ರಹಬೇಕು ವಿಷಯನಿಗ್ರಹಬೇಕು :........

ಆ. ಸಲಿಲ, ಭೂ, ಗಿರಿ, ಲತೆ, ನಾನಾ ವೃಕ್ಷ
ಫಲ, ಮೃಗ, ಪಕ್ಷಿ, ಕಾನನ, ಮುಕ್ತ
ಸ್ಥಳಗಳ ವ್ಯಾಕೃತ ಗಗನ, ತೃಣ,
ಜಲ, ಪಾವಕ, ತರು, ಪವನ, ಆಹ
ಒಳಗೆ ಹೊರಗೆ ಎಲ್ಲ ಸ್ಥಳದಲ್ಲಿ ಹರಿಮಯ (ವಿಜಯವಿಠಲ)

ಇ. ಧ್ಯಾನವನೆ ಮಾಡು ಬಿಂಬಮೂರುತಿಯ :
ಆನಂದದಲ್ಲಿ ಕುಳಿತು ಅಂತರಂಗದಲಿ (ವಿಜಯವಿಠಲ)

ಈ. ವೇದ ಓದಿದರೇನು ಶಾಸ್ತ್ರನೋಡಿದರೇನು :
ಕಾದಿಕಾದಾಡಿ ಗೆದ್ದರೇನು ಜ್ಞಾನವಿಲ್ಲದೆ :
ಕಾಶಿಗೆ ಪೋದರೇನು, ಕಾನನ ಸೇರಿದರೇನು
ಕಾಶಿಪೀತಾಂಬರ ಉಟ್ಟರೇನು ಜ್ಞಾನವಿಲ್ಲದೆ
ಜಪತಪವಮಾಡಲೇನು, ಜಾಣತನ ಮೆರೆದರೇನು
ವಿಜಯವಿಠಲನ ಸಾರಿದರೇನು ಜ್ಞಾನವಿಲ್ಲದೆ........

ಈ ಸಾಲುಗಳನ್ನವಲೋಕಿಸಿದಲ್ಲಿ ಹರಿದಾಸ ಪರಂಪರೆಯವರ ಸಾಹಿತ್ಯ ಸೃಜನೆಯ ಮಹತ್ವ ತಿಳಿಯುಬರುತ್ತದೆ. ಭಾಷೆ ಎಷ್ಟು ಲಲಿತವಾಗಿದೆಯೊ, ಅದರರ್ಥ ಅಷ್ಟೆ ಗಹನ ತತ್ವವನ್ನು ಅರಿವು ಮಾಡಿಕೊಡುವುದರ ಆಕರವೂ ಆಗಿದೆ. ವಾದಿರಾಜರಂಥ ಅಪರೋಕ್ಷ ಜ್ಞಾನಿಗಳು, ಜ್ಞಾನಾನಂದಮಯನಾದ ಹಯಗ್ರೀವಮೂರ್ತಿಯನ್ನು ಸಾಕ್ಷಾತ್ಕರಿಸಿ ಕೊಂಡವರು, ಗುರುಭಕುತಿ ಹಾಗೂ ಹರಿದಾಸನ-ಪರಿಭಕ್ತನ ದಿನಚರ್ಯೆ ಹೇಳುವುದರೊದಿಗೆ, ತಮ್ಮ ಧ್ಯೇಯ ಆದ ಹರಿಭಕ್ತಿ-ಹರಿಸರ್ವೋತ್ತಮತ್ವವನ್ನು ಪ್ರಸಾರ ಮಾಡಿದ್ದಾರೆ. ಅದನ್ನೆ ಶ್ರೀವಿಜಯದಾಸರು 'ಸರ್ವಸ್ಥಳದಿ ವ್ಯಾಪ್ತನಾದ'ವನೆಂದೂ ಹಾಡಿದ್ದಾರೆ. ಹಾಗೆಯೆ ಪರಿದಾಸ ಆಂದೋಲನದ ಒಂದು ವಿಶಿಷ್ಟ ಉಪಾಸನ ಕ್ರಮ ಆದ ಬಿಂಬೋಪಾಸನೆ ಮಾಡುವುದರ ಬಗ್ಗೆ ವಿಜಯದಾಸರು ತಿಳಿಸುತ್ತ, ಭಕ್ತಿ ದೃಢಗೊಳ್ಳಲು, ಭಕ್ತರ ಶರೀರ-ಮನಸ್ಸು-ದೃಢ-ಶಾಂತವಾಗಿ ಇರಲು ಸಹಾಯಕ, ಪೋಷಕ ಆಗುವ ಯೌಗಿಕ ಮಾರ್ಗದ ಅರಿವನ್ನು ಸರಳಗನ್ನಡದ ನುಡಿಗಳಲ್ಲಿ ನೀಡುತ್ತಾರೆ. ಕೊನೆಯ ಉದಾಹರಣೆ, ವಿಡಂಬನವನ್ನು ವ್ಯಕ್ತಪಡಿಸುವಂಥದು. ಅಂಥ ಪಂಡಿತರೆನ್ನಿಸಿ ಕೊಳ್ಳುವವರು-ಬೂಟಾಟಿಕೆಯವರು ನಮ್ಮಲ್ಲಿ ಅನೇಕ. ಅವರು ವಿಜಯದಾಸರ ಕಾಲದಲ್ಲಿಯೂ ಇದ್ದರೆಂಬುವುದು ಕೃತಿಯ ಸಾಲುಗಳಿಂದ ತಿಳಿದುಬರುವ ಅಂಶ. ಜ್ಞಾನದ ಬೆಳಕು ಇರದೆ, ಅರಿವಿನ ಆಕರ ಆಗದೆ, ಬರೀ ಕಾಶೀಪೀತಾಂಬರ ಉಟ್ಟರೆ, ಕತ್ತಿ ಸಿಂಹದ ಚರ್ಮ ಹೊದ್ದು ನಿಂತಂತಾಯಿತೆಂದೆನಿಸುತ್ತದೆ. ಅದೇ ರೀತಿಯಲ್ಲಿ ತರ್ಕದಲ್ಲಿ ಗೆಲ್ಲುವ ಪಾಂಡಿತ್ಯವಿದ್ದರೇನು, ಮಂಕ್ರಿಸಾಧಿಸುವ ಭಕ್ತಿಯಂತ ಭಾವಶುದ್ಧಿ ಇರವಿದ್ದರೆ, ಎಂಬುದು ದಾಸರ ಅನಿಸಿಕೆ. ಹೀಗೆ ಅನೇಕ ಅಪರೋಕ್ಷಜ್ಞಾನಿಗಳ-ಹರಿದಾಸರ ಕೃತಿಗಳ ಮೂಲಕ ಹರಿದಾಸ ಆಂದೋಲನ ದಾಂಗುಡಿಯಿರಿಸಿ, ಕನ್ನಡ ನಾಡಲ್ಲೆಲ್ಲ ಪ್ರಸರಿಸಿ, ಹರಿ ಭಕ್ತಿ, ಹರಿಪಾರಮ್ಯ, ಪರಿಶುದ್ಧ ಬದುಕು, ಸಮಾಜ ಹಿತ, ಸರ್ವಹಿತ-ಕಲ್ಯಾಣಕ್ಕಾಗಿ ದುಡಿದ ಸಾಮೂಹಿಕ ಆಂದೋಲನವೆ ಆಯಿತೆಂಬುದು ತಿಳಿಯ ಬರುವ ವಿಚಾರವಾಗಿದೆ. ಹರಿದಾಸರ ಸಾಹಿತ್ಯ ಹೇಗೊ ಹಾಗೆಯೆ ಅವರ ಮಾನವೀಯಗುಣ ತಾವು ದೇಶ

ಪರ್ಯಟನೆ ಮಾಡಿದ ಲೋಕಾನುಭವ, ಭಕ್ತಿಯ ಮಜಲಿನಲ್ಲಿ ಕಾಣುವ ದೈವದ ಅನಂತ ಸ್ವರೂಪಗಳ ವಿವಿಧ ಬಗೆ, ತೀರ್ಥಕ್ಷೇತ್ರ ಸಂದರ್ಶನದ ಅನುಭವ ವೈವಿಧ್ಯ, ಇವೆಲ್ಲವನ್ನೂ ತಮ್ಮ ಕೀರ್ತನ ಸಾಹಿತ್ಯದ ಮೂಲಕ ನೀಡುವುದರೊಂದಿಗೆ ಅವರ ಜ್ಞಾನ, ನಿಷ್ಠೆ, ವೈರಾಗ್ಯ ಪರಾಕಾಷ್ಠೆ, ಎಲ್ಲಿಗೂ ಮುಕುತಿ ದೊರಕಿಸುವ ಹಂಬಲಿಕೆ, ಪೌರುಷೇಯ ಪ್ರಮಾಣಗಳಾದ ವೇದಾಗಮ, ಪುರಾಣ ಪುಣ್ಯಕಥೆಗಳ ಅರಿವನ್ನು ಸಾಮಾನ್ಯ ಸರ್ವರಿಗೂ ಮಾಡಿಕೊಡುವ ವಿಶಾಲಮನೋಧರ್ಮ ಎಲ್ಲವೂ ನಿಚ್ಚಳವಾಗಿ ಅಭಿವ್ಯಕ್ತ ಗೊಂಡಿವೆ. ತಾವೊಬ್ಬರೆ ಉದ್ಧಾರ ಆಗಬೇಕೆಂಬ, ಬದುಕಬೇಕೆಂಬ ಸ್ವಾರ್ಥಿಗಳಲ್ಲ ಅವರು. ಹರಿಭಕ್ತಿಪಂಥ ಹರಿದಾಸ ಆಂದೋಲನವೇ ಆಗಲು ಅವರ ಇಡೀ ಸಾಹಿತ್ಯದಲ್ಲಿ ಪರಂಪರಾನುಗತ ಆಗಿ ಶತಮಾನಗಟ್ಟಲೆ ಸಾರುವ ಏಕಮುಖವಾದ ವಿಚಾರಧಾರೆ-ನಿರ್ದಿಷ್ಟ ಧ್ಯೇಯ, ಖಚಿತ ನಿರ್ಧಾರ, ತಾನು ನಂಬಿದ ಆದರ್ಶದಲ್ಲಿ ದೃಢ ನಂಬುಗೆ, ಅಚಲ ವಿಶ್ವಾಸ, ಹಾಗೂ ಸಮುದಾಯಿಕ ಆಗಿ ತಾವು ಕಂಡನುಭವಿಸಿ, ಅನುಭಾವಿಸಿದುದನೆಲ್ಲ ಹಂತ ಹಂತವಾಗಿ ಅಭಿವ್ಯಕ್ತಗೊಳ್ಳುವ ಅವರ ವ್ಯಕ್ತಿ ವಿಕಸನ, ಇವೆಲ್ಲ ಕಾರಣ ಆಗುತ್ತವೆ. ಇದರಿಂದ ವ್ಯಕ್ತಿಯ ಅನುಭವ-ಅನುಭಾವ (ಅಪರೋಕ್ಷಜ್ಞಾನ) ಕ್ಷಿತಿಜ ವಿಸ್ತಾರ ಆಗುತ್ತ ಆಗುತ್ತ, ಸಂಸಾರದಲ್ಲಿದ್ದ-ನೋವು ನಲಿವುಗಳ ಇಹದ ಪ್ರಾಣ್ಮಯ ಬದುಕಲ್ಲಿ ಚಿನ್ಮಯನನ್ನರಸುತ್ತ, ತುಮುಲ-ತುಡಿತವನನುಭವಿಸಿ, ಕಡೆಗೆ ಭಗವದನುಭವ ವಿಶೇಷ ಸಾಕ್ಷಾತ್ಕಾರ ಸನಿಹಾಗಲು, ಸಂದೇಹವಿಲ್ಲವೆಂದು ತಿಳಿಯಬರುತ್ತದೆ. ಇದಕ್ಕೆಲ್ಲ ಅನುಸರಿಸಬೇಕಾದುದಿಬ್ಬೆ : ದೃಢಭಕುತಿ ಮಾರ್ಗ. ಮಹಾತ್ಮ್ಯಜ್ಞಾನವನ್ನು ಗುರುವಿನಿಂದರಿತು ಆದರೊಡಗೂಡಿದ, ಸುದೃಢ ಸ್ನೇಹವುಳ್ಳ, ಭಗವಂತನೊಬ್ಬನೇ[1] ಎಂಬ ಅಧಿಕ ಪ್ರೇಮ-ದೃಢವಿಶ್ವಾಸವುಳ್ಳ, ಅವನ ಕರುಣೆ, ಕೃಪೆ, ಒಲವರಕ್ಕಾಗಿ ಅನವರತ ಹಂಬಲಿಸಿ, ತಾನು-ತನ್ನವರಲ್ಲದೆ ಸುತ್ತಣ ಮಾನವಕೋಟಿಯ ಬದುಕನ್ನು ಹಸನಾಗಿಸುವ ಆಂದೋಲನ ಪಥವಿದು.

ಹರಿದಾಸಸಾಹಿತ್ಯ ಅತ್ಯಂತ ವ್ಯಾಪಕವಾದ ವಾಙ್ಮಯವೆಂಬುದು ಅದರ ವ್ಯಾಪ್ತಿ ಯಿಂದಲೆ ತಿಳಿದುಬರುತ್ತದೆ. ಕ್ರಿ.ಶ. ಹದಿನಾಲ್ಕನೆ ಶ.ದ ಕೊನೆಯಿಂದ ಮೊದಲುಗೊಂಡು ಸುಮಾರು ಐದು ಶತಮಾನ ಬಾಳಿ, ಬೆಳಗಿ, ಈಗಲೂ ಅಲ್ಲಲ್ಲಿ ಕಾಣಿಸುತ್ತಿದೆ. ಯಾವ ಉದ್ದೇಶದಿಂದ ಇದು ಆರಂಭಗೊಂಡಿತೊ ಆ ಉದ್ದೇಶವನ್ನದು ಸಾಧಿಸಿತೆ ? ಕೇವಲ ದೇವರ ಪೂಜಾ ಕಾರ್ಯದ ದ್ರವ್ಯ ಮಾತ್ರ ಆಗದೆ ಇಡೀ ಸಮಾಜ ಹಿತಕ್ಕಾಗಿ ಹೋರಿದ ಆಂದೋಲನವಾಯಿತೆ ? ಎಂಬ ಪ್ರಶ್ನೆ ಬಂದಾಗ, ಒಂದು ಅನಿಸಿಕೆ ಮನಸ್ಸಿಗೆ ಬರುತ್ತದೆ : ವಚನ ಚಳುವಳಿಯ ಸಂಘಟನೆ ಹೇಗೆ ಸೋತು ಕೊನೆಗೆ ಭದ್ರಗೊಂಡರೂ ಗೆದ್ದಂತೆನ್ನಿಸುವುದೊ ಹಾಗೆಯೆ ಹರಿದಾಸ ಆಂದೋಲನವೂ ಉಗಮಗೊಂಡು, ಉನ್ನತಿ ಹೊಂದಿ, ರಾಜಾಶ್ರಯದಲ್ಲೂ ಅಭಿವೃದ್ಧಿಸಿ, ತನ್ನ ಪ್ರಧಾನ ಧ್ಯೇಯ ಆದ ಹರಿಭಕ್ತಿ-ಹರಿಸರ್ವೋತ್ತಮ ಪ್ರಸಾರ ಕಾರ್ಯ, ಪ್ರಸಾರದಲ್ಲಿ ಗೆದ್ದಂತೆಯೆ ಅನ್ನಿಸಿದರೂ, ಸಮಾಜದ ಎಲ್ಲ ಸ್ತರಗಳ ಜನರನ್ನು ಒಳಗೊಳ್ಳುವುದರಲ್ಲಿ ಅಷ್ಟಾಗಿ ಸಫಲ ಆಗಲಿಲ್ಲ

ಎನ್ನಿಸುತ್ತದೆ. ಇದಕ್ಕೆ ಕಾರಣ ಸುಸ್ಪಷ್ಟ. ಬ್ರಾಹ್ಮಣ ವರ್ಗದವರಿಂದ ಆರಂಭ ಆದ ಹರಿದಾಸ ಆಂದೋಲನ ಪರಂಪರೆ ಪ್ರಮುಖ ಸಾಮಾಜಿಕ ಅಂಶ-ಸಮಸ್ಯೆಯಾದ ವರ್ಣಾಶ್ರಮ-ಜಾತಿ ಸಮಸ್ಯೆಯ-ನಿವಾರಿಸುವಿಕೆಯಲ್ಲಿ ವಚನಕಾರರಂತೆ ಪ್ರತಿಭಟನಾ ಮನೋಧರ್ಮವುಳ್ಳದ್ದಾಗಿರಲಿಲ್ಲ. ಅವರ ಹಾಡಿಗೆ ಅವರು ಸಮಾಜದ ಸಮಸ್ಯೆ ಹಾಡಿಗದು. ಇರುವ ವ್ಯವಸ್ಥೆಯನ್ನೇ ಸುಧಾರಿಸುವ ಮನೋಪ್ರವೃತ್ತಿ ಹರಿದಾಸರದು. ಇದು ಸರಿಯೆ ಎಂದು ಕೇಳಲಾಗುವುದಿಲ್ಲ. ಅದು ನಡೆದದ್ದೆ ಹಾಗೆಂದು ತೀರ್ಮಾನಕ್ಕೆ ಬರಬೇಕಷ್ಟೆ. ಹರಿಭಕ್ತಿ ಹರಡಬೇಕು. ಅದು ಸಾಧ್ಯವಾಗುವುದೇ ಸಂಪರ್ಕ ನಿಕಟತೆ ಯಿಂದ. ಅದಕ್ಕೆ ಹರಿದಾಸರಿಗೆ ಸ್ವಲ್ಪ ಅಡೆತಡೆ ಇದ್ದವು. ಕೆಳಸ್ತರದ ಕನಕದಾಸನ ಅಂತಸ್ಸತ್ವ ಅರಿತ ಗುರು ವ್ಯಾಸರಾಯರಿಗೇ ಕುಹಕಿ ಕರ್ಮಠ ಬ್ರಾಹ್ಮಣರ ಬಿರುನುಡಿ ತಪ್ಪಲಿಕ್ಕಿಲ್ಲ : ಪುರಂದರದಾಸರಿದನ್ನು ಸೂಚಿಸಿಯೂ ಇದ್ದಾರೆ. (ಕನಕದಾಸನ ಮೇಲೆ ವ್ಯಾಸರುನಿ ದಯಮಾಡಲು ಮಠದವರೆಲ್ಲ ದೂರಿಕೊಂಬರು). ತಿರುಪತಿ ಶ್ರೀನಿವಾಸನ ದರ್ಶನಕ್ಕೆಂದು ಹೋದ ಪುರಂದರದಾಸರಿಗೇ ಕೃಷ್ಣಾಜಿನದವರ ಪೆಟ್ಟು ಧಾರಾಳವಾಗಿ ಬೆನ್ನ ಮೇಲೆ ಬಿತ್ತು ಆದಮೇಲೆ, ಕನಕನ ಹಾಡೂ ! ಅಂತ್ಯಜ, ಹೊಲೆಯ ಎಂಬುವ ವರ್ಗದ ಬಗ್ಗೆ ತಮ್ಮ ಅನುಕಂಪ, ಸಹಾನುಭೂತಿವ್ಯಕ್ತಪಡಿಸಿದರೂ ಹುಟ್ಟು ಕುಲದಿಂದಲೆ ಯೋಗ್ಯತೆಯನ್ನಳೆಯಬಾರದೆಂಬ ಮನೋಧರ್ಮವಿದ್ದರೂ, ವ್ಯವಸ್ಥೆಯ ವಿರುದ್ಧ ಹರಿದಾಸರು ಹೋರಾಡಲಿಲ್ಲ, ಮನುಷ್ಯನನ್ನ ವ್ಯಕ್ತಿಗಿಸುವದರ ವಿರುದ್ಧ ತುಡಿಯಲಿಲ್ಲವೆಂಬುದು ತಿಳಿದು ಬರುವ ಅಂಶ. ದುರದೃಷ್ಟವಶಾತ್, ಆದೇ ಜಾತಿ ಸಮಸ್ಯೆಯ ಇಂದೂ ಸಮಾಜ ವಿಚ್ಛಿದ್ರಶಕ್ತಿಯಾಗಿ–ಮುಂದುವರೆಯುತ್ತಿದೆ, ಇನ್ನೂ ಬಲವತ್ತರವೆ ಆಗುತ್ತಿದೆ.

ಹರಿದಾಸ ಆಂದೋಲನದ ಸಂದೇಶ ಸಾರ್ವತ್ರಿಕವಾದದೆನ್ನಬೇಕು. ಶೀಲವಂತಿಕೆ, ತತ್ತ್ವ ವಿವೇಚನೆ, ಎಲ್ಲರೂ ದೇವರ ದೃಷ್ಟಿಯಲ್ಲಿ ಒಂದೆ ಎಂಬ ವಿಶಾಲ ಭಾವನೆ, ಸರ್ವೇಜನಾಃ ಸುಖಿನೋ ಭವನ್ತು ಎಂಬ ಮನೋಧರ್ಮ, ಭಕ್ತಿಮಾರ್ಗದ ಅವಲಂಬನೆ ಆಚರಣೆ, ಆರೋಗ್ಯಕರ ಆಚಾರವಿಚಾರ, ಯಾರಿಗೆ ಬೇಡ ? ಇದೆ ತಾನೆ ಸಮಾಜಹಿತ, ಸಮುದಾಯ ಹಿತ ? ಇಷ್ಟಾಗಿ, ಹರಿದಾಸರು ಬರೀ ದೇವರನ್ನು ನಂಬಿಕೊಡೆನ್ನುವವರಲ್ಲ. ಪುರುಷ ಪ್ರಯತ್ನ ಸ್ವಪ್ರಯತ್ನವಾದಿಗಳು. ಹಣೆಬರಹ ವಿದ್ದಂತಾಗುವದೆಂಬುದನ್ನು ಅವರು ಉಪದೇಶಿಸಿಲ್ಲ, ಆದರೆ, ಮನುಷ್ಯ ಪ್ರಯತ್ನ ಮೀರಿದ್ದು ಅನಂತ ಶಕ್ತಿಯದು 'ನಾಹಂಕರ್ತಾ ಹರಿಕರ್ತಾ' ಎಂದಲ್ಲಿ ಉದ್ಗರಿಸುವರಷ್ಟೆ ಎಲ್ಲವೂ ನಿನ್ನಾಧೀನ ಎನ್ನುವುದು. ಆ ಅರ್ಥದಲ್ಲಿ, ಅಂಥ ಉತ್ಕಟ ಸಂದರ್ಭದಲ್ಲಿ ಸಂಸಾರ ನಿಸ್ಸಾರ, ಇದು ನಶ್ವರ, ಕಂಬಳಿಯೊಳಗಣಬುತ್ತಿ ಎಂದೆಲ್ಲ ರೀತಿ ಹೇಳಿದರೂ, ಸಂಸಾರ ತೊರೆದು ಕಾಡಿಗೆ ಹೋಗಿ ಮೂಗು ಹಿಡಿದು ಕುಳ್ಳಿರಲು ಹರಿದಾಸರು ಹೇಳಿಲ್ಲ. ನಿಜವಾದ ವೈರಾಗ್ಯ, ಸಂಸಾರ ತೊರೆದರೆ ಬರುವಂಥದಲ್ಲ. ವಿರಾಗವಿರಬೇಕು, ರಾಗ ತೊರೆಯಬೇಕು ಮನದಿಂದ, ಆಗಲೆ ಸಂಸಾರ, ಸಾರವೂ ಎನಿಸಿರುತಾನು. ಬರಿಯ

ಕಾಮನೆಯಿಂದ ಸಂಸಾರ ಸುಖ, ಗೀತೆಯಲ್ಲಿ ಕೃಷ್ಣ ಹೇಳುವಂತೆ ಮೊದಲು ಸುಖದ ಥಳಕು ತೋರಿ ಆಮೇಲೆ ದುಃಖ ತರುವ ಸ್ವಭಾವದ್ದು ಆದಾತು. ಪದ್ಮಪತ್ರ ಮಿವಾಂಭಸಾ ತತ್ತ್ವ ಹರಿದಾಸರದು. ಅಂಟಿಯೂ ಅಂಟದಂತೆ, ತಾವರೆ ಎಲೆ ಮೇಲಣ ನೀರಿನಂತೆ. ವಿಷಯ ಸುಖಲೋಲುಪತೆ, ಆಸಕ್ತ ವರ್ಜಿಸುವುದೆ ವೈರಾಗ್ಯ. ಕಟ್ಟಿ ಕೊಂಡರೆ ರಾಗ, ತೊರೆದರೆ ವಿರಾಗ. ಅದು ಹೇಳುವಷ್ಟು ಸುಲಭವಲ್ಲದಿದ್ದರೂ ಕಷ್ಟ ಸಾಧ್ಯ. ಹೇಸಿಗೆ ಸಂಸಾರದಲ್ಲಿ ಆಶೆವೇಶ ಮಾಡದ್ಧಾಂಗೆ ಈಸಬೇಕು, ಇದ್ದು ಜೈಸ ಬೇಕೆಂಬುದೆ ಪುರಂದರದಾಸರ ಸಂದೇಶ. ಇದೆಷ್ಟರ ಮಟ್ಟಿಗೆಂದರೆ ಪುರಂದರದಾಸರು ಸರ್ವಸಂಪತ್ತನ್ನೂ ದಾನಮಾಡಿದವರು, ಮಗನನ್ನು ಕಳೆಕೊಂಡರು. ವಿಜಯದಾಸರೂ ಮಗ ಶೇಷಗಿರಿಯನ್ನು ಕಳೆದುಕೊಂಡು, ಮುಂದೆ ಮೋಹನದಾಸರನ್ನೆ ಸಾಕು ಮಗನಾಗಿ ಸ್ವೀಕರಿಸಿದರು. ಇಲ್ಲೆಲ್ಲ ಹರಿದಾಸರ ನಿಜವಾದ ವೈರಾಗ್ಯವೆ ತೋರಿರುವುದು. ಕನಕದಾಸರದು ಬೇರೆ ತೆರನಾಯಿತು. ಹರಿದಾಸರದ್ದು ಒಂದೇ ಲಕ್ಷ್ಯ–ಅದು ಭಕ್ತಿಪ್ರಸಾರ – ಆಧ್ಯಾತ್ಮಿಕ ಸಾಧನೆ, ಮುಕ್ತಿಶ್ಚ ತತ್ಸಾಧನಮ್ ಎಂಬ ಮನೋ ಧರ್ಮ. ಇದು ಸರ್ವತ್ರ ಹಿತವೆ ತಾನೆ ? ಇಲ್ಲಿ ಹೇಡಿತನ, ನಿರಾಸೆ, ಮನುಷ್ಯ ಪ್ರಯತ್ನಕ್ಕೆ ತಣ್ಣೀರೆರಚುವಂಥದೇನೂ ಇಲ್ಲ.[22] ಎಲ್ಲವೆಲ್ಲ ಪ್ರಯತ್ನ ಆದ ನಂತರ ಎಲ್ಲ ಮೀರಿದ ಅನಂತನಿಗೆ ಶರಣಾಗಿರೆಂದರಷ್ಟೆ.

ಮೇಲ್ಕಂಡ ವಿಶದವಾದ ವಿವೇಚನೆಯಿಂದ, ಹರಿದಾಸ ಆಂದೋಲನದ ಉಪಕಾರ ನಮಗೆ ಇಂತೆನಿಸುತ್ತದೆ : ತಾವೂ ಬದುಕಿ, ಇನ್ನೊಬ್ಬರನ್ನೂ ಬದುಕಿಸುವುದು. ಅಂತರಂಗ–ಬಹಿರಂಗ ಶುದ್ಧಿಗೆ, ಗಮನವಿತ್ತು, ಯಾವುದರಲ್ಲೂ ಅತಿಲೋಲುಪನಾಗದೆ, ಆರೋಗ್ಯವಂತ ಬದುಕನ್ನು ನಡೆಸುವುದು, ಹರಿದಾಸರ ಸಂದೇಶದ ಸಾರವಿದೇಸು. ಮೊದಲೆ ಹೇಳಿರುವಂತೆ, ಇದರಿಂದ, ಹರಿದಾಸರ ಮಾತುಗಳು ಬರೀ ಒಣ ವೇದಾಂತದ ಬುರುಡೆ ಮಾತೆಂದು ಭಾವಿಸಬೇಕಾದ್ದಿಲ್ಲ. ಅವುಗಳ ಸಾಹಿತ್ಯ ಸೊಗಸು, ಅಲ್ಲಿರುವ ಶಬ್ದ ಸಂಪತ್ತಿ ನಾದ ಮಾಧುರ್ಯ ಬಂಧುರ ಶಬ್ದ ಅರ್ಥ ಜೋಡಣೆಯ ಚಮತ್ಕಾರ–ವಿನ್ಯಾಸ, ಲೀಲಾಜಾಲವಾದ ಶೈಲಿಯಂತೆಯೆ ಕ್ಲಿಷ್ಟ ಸಂಸ್ಕೃತ ಶೈಲಿ, ಎಲ್ಲದರಿಂದ ಹೊಸ ಸಾಹಿತ್ಯ ಪಥವನ್ನೆ ನಿರ್ಮಿಸಿದರು, ಹರಿದಾಸ ಪಂಥದರೆನ್ನಬೇಕು. ಜಗತ್ತಿನಲ್ಲಿ ಆಗಿಹೋಗಿರುವ ಸತ್ಪುರುಷರಲ್ಲಿ ಎರಡು ತೆರ : ಲೋಕಕ್ಕೆ ಸುಖದ ಸಾಧನೆಗಳನ್ನು ಒದಗಿಸಿಕೊಡುವರದ್ದು ಒಂದು ಗುಂಪು. ಲೋಕ ಹಿತವನ್ನು, ಹಿತದ ಸಾಧನಗಳನ್ನೂ ಒದಗಿಸಿ ಕೊಡುವವರು ಇನ್ನೊಂದು ಬಣದವರು. ಸುಖದ ದಾರಿ ತೋರುವವರು ಹಿತದ ಹಾದಿ ತೋರುವರೆಂಬ ನಿಯಮವಿಲ್ಲ. ಭರವಸೆಯೂ ಇಲ್ಲ. ಹರಿದಾಸರು, ಅದರಲ್ಲೂ ವ್ಯಾಸರಾಯರ-ವಾದಿರಾಜರಂಥ ಅಪರೋಕ್ಷಜ್ಞಾನಿಗಳಾದ ಯತಿವರೇಣ್ಯರು. ಸುಖ–ಹಿತಗಳ ಸಂಗಮ ಪಥವನ್ನೆ ಜನತೆಗೆ ತೋರಿದ ಮಾರ್ಗದರ್ಶಿ ಸತ್ಪುರುಷರು. ಅದನ್ನಾಚರಿಸುವುದು, ಅನುಸರಿಸು ವುದು ಜನತೆಗೆ ಸೇರಿದುದಷ್ಟೆ.

ಹರಿದಾಸ ಆಂದೋಲನದ ಬಗ್ಗೆ ನಾವು ತಿಳಿಯುವಲ್ಲಿ ಭಕ್ತಿಪಂಥವೊಂದು ಆಂದೋಲನವೇ ಆದದ್ದರ ಬಗ್ಗೆ ಕೆಲವು ಮಾತು ತಿಳಿಸಿದೆವು. ಇನ್ನು ಈ ಅಧ್ಯಾಯದ ತಲೆಬರಹ ಆದ ಆಂದೋಲನ ಎಂದರೇನು ಹಾಗೂ ಅದರ ಲಕ್ಷಣಗಳಾವುವು ಎಂಬುದರ ಬಗ್ಗೆ ಕೆಲವು ಮಾತು ತಿಳಿಸಬಹುದು.

ಹರಿದಾಸ ಆಂದೋಲನ ತನ್ನ ಹಿಂದೆ ನಡೆದ ವಚನ ಚಳವಳಿಯನ್ನು ಅನೇಕ ವಿಧದಲ್ಲಿ ಹೋಲುತ್ತದೆಂಬ ವಿಷಯನ್ನು ಹಿಂದೆಯೆ ತಿಳಿಸಿದ್ದರೂ ಆಂದೋಲನ ಕುರಿತು ಹೇಳುವಲ್ಲಿ ಪುನರುಚ್ಚರಿಸಬೇಕಾಗಿದೆ. ಆ ವಿಚಾರದಲ್ಲಿ (ಅದಕ್ಕೆ ಕಾರಣ ಎರಡು ಆಂದೋಲನವೂ ಮತೀಯ, ಭಕ್ತಿಪರ ಸಹ ಎಂಬುದೂ ಆಗಿದೆ)[33] ಒಂದು ಮುನ್ನುಡಿಯಾಗುವ ವಿಚಾರವೆಂದರೆ ವಚನಕಾರರ ಆಂದೋಲನ, ಪ್ರಧಾನತಃ ಮತೀಯ ಭಕ್ತಿಯ ಚಳವಳಿಯೆ ಆದರೂ ಜನಪದ ಚಳವಳಿಯಾಯಿತು. ಇದಕ್ಕೆ ಪ್ರೇರಣೆಗಳೇನೆ ಇರಲಿ, ಸಾಮಾಜಿಕ ಸಮಾನತೆ ಎಲ್ಲರೂ ಒಂದೆ ಎಂಬ ಭಾವನೆ, ಕಾಯಕವೆಲ್ಲ ಒಂದೆ ಶ್ರಮಸಹಿತ ಜೀವನವೆ ಸಾಧು ಆಗದ್ದೆಂಬ ತತ್ವ, ಸಂಘಟನೆಯಲ್ಲಿನ ಬಿಗಿ, ಹೆಚ್ಚಿನ ಜನ ಹಿಂಬಾಲಕರಾಗಿ ಭಾವುಕತೆಯಿಂದ ಸ್ಪಂದಿಸಿದ್ದು, ಬಸವಣ್ಣನಂಥ ಚತುರರ ಸಂಘಟನ ಸಾಮರ್ಥ್ಯ, ಇವೆಲ್ಲದರ ಒಟ್ಟು ಕಾಣುವುದೊಂದೆ : ಅದು ಅನನ್ಯ, ಅಸಾಧಾರಣ, ಆಗಿನ ಕಾಲಕ್ಕೆ ಸಾಧಿಸಿದ ಮಹತ್ವದ ಸಾಧನೆಯೆಂಬುದು. ವಚನ-ದಾಸ ಚಳವಳಿಯ ತೌಲನಿಕ ಸಮೀಕ್ಷೆ ಬೇರೆಡೆ ನಡೆದಿರುವುದರಿಂದ, ಇದಿಷ್ಟಕ್ಕೆ ನಿಲ್ಲಿಸಿ ಆಂದೋಲನದ ನಿರೂಪಣೆಗೆ ಬರಬೇಕಾಗುತ್ತದೆ.

### ಆಂದೋಲನವೆಂದರೇನು ? ಅದರ ಲಕ್ಷಣಗಳು

ಇಂಗ್ಲಿಷಿನಲ್ಲಿ movement (ಮೂವ್‌ಮೆಂಟ್) ಎಂಬ ಪದಕ್ಕೆ ಕನ್ನಡ ಸಂವಾದಿ ಪದ ಆಗಿ ಆಂದೋಲನ, ಚಳವಳಿ ಎಂಬ ಅರ್ಥದ ಪದಗಳು ಬಳಕೆಯಲ್ಲಿ ಇವೆ. ಆಂದೋಲನ ಎಂಬ [illegible] ಬಳಕೆಯಲ್ಲಿದೆ. ಹರಿದಾಸ ಸಾಹಿತ್ಯವನ್ನು

[illegible] ಪ್ರೊ. ಆರ್. ಎಸ್. ಪಂಚಮುಖಿಯವರು

[illegible] ಮತೀಯ-ಧಾರ್ಮಿಕ ಆಂದೋಲನಗಳನ್ನೆಲ್ಲ

[illegible] ಕ್ತಿತತ್ವಗಳನ್ನು ಹರಿದಾಸರು ಆಂದೋಲನ

[illegible] ಹೇಳಿದ್ದಾರೆ.[35] ಹರಿದಾಸ ಆಂದೋಲನದ

[illegible] ದಾನಿಯವರು 'ಕರ್ನಾಟಕ ಹರಿದಾಸರ

[illegible] ಕಂಡರಿಸಿ ಕೊಟ್ಟಿರುವುದಂತೂ ಸುವಿದಿತ.[26]

[illegible] ಸಿ, ಆಂದೋಲನ ಎಂಬುದರ ನಿರೂಪಣೆ,

[illegible] ಲಕ್ಷಣಗಳನ್ನು ಹೊಂದಿದೆಯೋ ಎಂಬುದನ್ನು

Movement * ಎಂಬ ಪದಕ್ಕೆ ನಿಘಂಟುಗಳು ಕೆಲವು ಅರ್ಥವೀಯುತ್ತವೆ, ಅವು ಹೀಗಿವೆ :

ವೆಬ್‌ಸ್ಟರ್ ನ್ಯೂ ಇಂಟರ್‌ನ್ಯಾಷನಲ್ ಡಿಕ್ಷನರಿ[37] (Webester New International Dictionary)ಯ 3ನೇ ಸಂಪುಟದಲ್ಲಿ Movement ಎಂಬ ಪದಕ್ಕೆ ಅನೇಕ ಅರ್ಥಗಳನ್ನು ನೀಡುತ್ತಾರೆ : ಅವರಲ್ಲಿ ನಮ್ಮ ಅಧ್ಯಯನದ ದೃಷ್ಟಿಯಿಂದ ಕೆಲವು ಅರ್ಥವನ್ನು ಪರಿಗಣಿಸಬೇಕಾಗುತ್ತವೆ :

(i) Moveable ; mobile ; flexible; or responsivenss of movements

(ii) to let in motion ; to stir, to impart motion ;

(iii) to excite to action by the presentation of motion ;

(iv) to rouse by appeal to the mind or desires ; to influence ; to prompt ;
Act of moving : a movement ; a motion or proposal ;
An act for the attainment of an object ;
A step in the execution of purpose ; movement in process

(v) A connceted, a long continuous series of acts and events tending toward some more or less definite end; an agitation in favour of some principle, policy etc.

(vi) An effect as of motion ; hence in literature and other arts

(vii) Activities of a person or group of persons.

ಇದರಂತೆಯೆ ಮೈಸೂರು ವಿಶ್ವವಿದ್ಯಾನಿಲಯದ ನಿಘಂಟಿನಲ್ಲಿ[38] movement ಎಂಬ ಪದಕ್ಕೆ ಈ ಅರ್ಥ ನೀಡಿರುವುದು ನಾವು ಪರಿಗ್ರಹಿಸಬಹುದಾಗಿದೆ : (ಕಾರ್ಯದಲ್ಲಿ) ಪ್ರವೃತ್ತನಾಗುವಂತೆ ಮಾಡು, ಪ್ರೇರಿಸು, ಸ್ಥಳದಿಂದ ಸ್ಥಳಕ್ಕೆ ಹೋಗು : ಚಲನೆ, ಮನಃ ಪ್ರವೃತ್ತಿ, ವಿಕಸನ, ಮುನ್ನಡೆ (ಒಂದು ವಿಶೇಷೋದ್ದೇಶ ಸಾಧನೆಗಾಗಿ-ಒಂದು ಸಂಸ್ಥೆಯ ಜನತಂಡದ) ಕಾರ್ಯಪರಂಪರೆ, ಪ್ರಯತ್ನ ಪರಂಪರೆ, ಚಳುವಳಿ. Movement ಹಾಗೂ campaign ಎಂಬ ಪದಕ್ಕೆ ಚಳವಳಿ ಎಂಬ ಅರ್ಥ ಸಮಾನವಾಗಿ ಇದ್ದರೂ, Campaign ಎಂಬ ಶಬ್ದಕ್ಕೆ ಕದನ ಯಾತ್ರೆಯ ಸಾಂದರ್ಭಿಕ ಅರ್ಥ ಪರಿಮಿತಿಯೆ ಹೆಚ್ಚು ಒಪ್ಪುವಂಥದು. ಆಂದೋಲನವು ಒಂದು ಕಾರ್ಯೋದ್ದೇಶಕ್ಕಾಗಿ, ಅದರ ಸಾಧನೆಗಾಗಿ ಒಂದು ಗುಂಪು : ಜನತಂಡದವರು ಶ್ರಮಿಸುವ ಹೋರಾಟವೆ.

ಇಲ್ಲಿ ರಕ್ತಪಾತವೂ ಇರಬಹುದು ಅಥವಾ ಸೌಮ್ಯವಾದ, ಶಾಂತಿಯುತವಾದ ಆದರೆ ದೃಢವಾದ ಪ್ರಯತ್ನವೂ ಇರುವ ಸಾಧ್ಯತೆಯುಂಟು.

[29]ಒಟ್ಟಾರೆ ಆಂದೋಲ, ಆಂದೋ(ಳ)ನ, ಚಳುವಳಿ ತರುವ ಅರ್ಥ, ಸಾಮೂಹಿಕ ಕ್ಷೋಭೆ, ಯಾವುದೇ ಧ್ಯೇಯ ಸಾಧನೆಗಾಗಿ ನಡೆಸುವ ಕಾರ್ಯ-ಪ್ರಯತ್ನ ಪರಂಪರೆ. ಅಂದರೆ ಇದು ಪರಂಪರಾನುಗತವಾಗಿ ಮುಂದುವರಿಯುತ್ತಲೆಂದಾಗುತ್ತದೆ.

ಮೇಲೆ ಕಾಣಿಸಿರುವ ಇಂಗ್ಲಿಷ್ ಹಾಗೂ ಕನ್ನಡ ಪದಕೋಶಗಳು ನೀಡಿರುವ ಅರ್ಥದಿಂದ, ನಮ್ಮ ಅಧ್ಯಯನಕ್ಕನುಗುಣವಾಗಿ movement ಎಂಬ ಪದಕ್ಕೆ[30] ಕನ್ನಡದ ಸಂವಾದಿ ಪದ ಆಗಿ "ಆಂದೋಲನ" ಎಂಬ ಅರ್ಥವನ್ನು ಸ್ವೀಕರಿಸ ಬಹುದೆನ್ನಿಸುತ್ತದೆ.

ಇನ್ನು ನಾವು ಇಂಗ್ಲಿಷ್ ಪದಕೋಶ ನೀಡಿರುವ ಅರ್ಥವನ್ನು ಪರೀಶಿಲಿಸಬಹುದು movement "ಮೂವ್‌ಮೆಂಟ್" ಎಂದರೆ,

ಅ. ಚಲನೆ, ಚಲಿಸು, ಸಂಚರಿಸು, ಸ್ಥಳದಿಂದ ಸ್ಥಳಕ್ಕೆ ಹೋಗು, ಚಲಿಸುವಂತೆ ಪ್ರೇರಿಸು, ಆಂದೋಲನಕ್ಕೆ ಉಜ್ಜುಗಿಸು, ಕಾರ್ಯಚಲನೆಗೆ ಪ್ರೇರಿಸು.

ಆ. ಉದ್ದೇಶ ಸಾಧನೆಗಾಗಿ ಕ್ರಿಯಾಶೀಲರಾಗುವಂತೆ ಹುರಿದುಂಬಿಸು, ಮನವಿ ಮಾಡುವುದರ ಮೂಲಕ ಮನಸ್ಸನ್ನೆಬ್ಬಿಸು, ಅವು (ಪ್ರೇರಣೆ) ಗಳನ್ನು ಹುರಿದುಂಬಿಸು.

ಇ. ಒಂದು ರೀತಿಯ ಪ್ರಭಾವ, ಪರಿಣಾಮ (ಸಮಾಜದ ಮೇಲೆ)[31]

ಈ. ಚಲನಾತ್ಮಕ ಕ್ರಿಯೆ : ಆಂದೋಲನ.
ಯಾವುದೊ ಒಂದು ಉದ್ದೇಶಕ್ಕಾಗಿ, ಒಂದು ಕಾರ್ಯಕ್ಕಾಗಿ ನಡೆಸುವ ಕ್ರಿಯಾ ವಿಶೇಷ (ಸಾಮೂಹಿಕ) :
ಆಂದೋಲನ, ಒಂದು ವಿಶೇಷವಾದ ಕ್ರಿಯೆ (ಚಲನಾತ್ಮಕ).

ಉ. ಪರಸ್ಪರ ಸಂಬಂಧವುಳ್ಳ, ಒಂದೇ ತೆರನಾದ ಸ್ವಭಾವವುಳ್ಳ, ಓತಪ್ರೋತ ಆಗಿ ನಡೆದಿರುವ ಕ್ರಿಯೆಗಳು, ಘಟನೆಗಳು : ಯಾವುದೊ ಒಂದು ಹೆಜ್ಜೆ : ಹೆಜ್ಜೆನಲ್ಲದ ಗೊತ್ತಾದ, ನಿರ್ದುಷ್ಟ ಧ್ಯೇಯ ಸಾಧನೆಗಾಗಿ : ಗುರಿ ಈಡೇರಲು (ನಡೆಸುವ ಸಾಮುದಾಯಿಕ ಹೋರಾಟ) ಯಾವುದೊ ಕೆಲವು ತತ್ತ್ವ ಸಿದ್ಧಾಂತ ಇತ್ಯಾದಿಗಳ ಪರವಾಗಿ ನಡೆಸುವ ಕ್ರಾಂತಿ : ಚಳವಳಿ.

ಊ. ಚಲನೆಯ ಪರಿಣಾಮ : ಆಂದೋಲನ-ಸಾಹಿತ್ಯ ಕಲೆಗಳಲ್ಲಿ

ಋ. ವ್ಯಕ್ತಿಯ ಅಥವಾ ಒಂದು ಗುಂಪಿನವರ ಚಟುವಟಿಕೆಗಳು.

ಈ ಅನೇಕ ಅರ್ಥಗಳ ವ್ಯಾಪ್ತಿಯನ್ನು ಗಮನದಲ್ಲಿರಿಸಿಕೊಂಡು, ಆಂದೋಲನ ವೆಂಬುದನ್ನು ಹೀಗೆ ಶಿಳಿಸಬಹುದು :

ಆಂದೋಲ(ಳ)ನ ಒಂದು ವಿಶೇಷ ಚಲನಕ್ರಿಯೆ. ಚಲನಾತ್ಮಕ ಆದದ್ದು. ಸ್ಥಳದಿಂದ ಸ್ಥಳಕ್ಕೆ ಸಂಚರಿಸುವಿಕೆ ಇಲ್ಲಿ ಉಂಟು.

ಯಾವುದೊ ಒಂದು ಕಾರ್ಯೋದ್ದೇಶ ಸಾಧನೆಗಾಗಿ (ಜನತೆಯನ್ನು) ಜಾಗೃತಗೊಳಿಸುವಂತೆ, ಕ್ರಿಯಾಶೀಲರಾಗುವಂತೆ (ಆಂದೋಲನ ಪಥಕ್ಕನುಗುಣವಾಗಿ) ಪ್ರೇರೇಪಿಸುವುದು, ಹುರಿದುಂಬಿಸುವುದು, ಅವರ ಮನಗಳ ಮೇಲೆ ಪರಿಣಾಮವುಂಟು ಮಾಡುವುದು, ಪ್ರಭಾವ ಬೀರುವಿಕೆ, ಅವರ ಆಶಯಂಗಳನ್ನು ಉದ್ದೀಪಿಸಿ, ಆಂದೋಲನಕ್ಕಾಗಿ ಅವರನ್ನು ಸನ್ನದ್ಧರಾಗಿಸುವುದು. ಆಂದೋಲನ, ಒಂದು ಕ್ರಿಯಾವಿಶೇಷ. ಪರಸ್ಪರ ಸಂಬಂಧವುಳ್ಳ, ಒಂದೇ ಉದ್ದೇಶ : ಧ್ಯೇಯ ಸಾಧನೆಗಾಗಿ, ಪರಂಪರಾನುಗತ ಆಗಿ ಮುಂದುವರಿಸುವ ಕ್ರಿಯಾವಿಶೇಷವೇ ಆಂದೋಲನ. ಇದರಲ್ಲಿ ಅನೇಕ ಕ್ರಿಯೆ, ಘಟನೆ ಘಟಿಸಬಹುದು. ಸಂಘಟನೆಯೂ ಇದ್ದಾತು. ಆಂದೋಲನ, ಒಂದು ಹೆಚ್ಚಿನದಾದ, ಗೊತ್ತಾದ, ನಿರ್ದಿಷ್ಟ ಆದ ಗುರಿ ; ಧ್ಯೇಯ ಸಾಧನೆಗಾಗಿ ನಡೆಸುವ ಕ್ರಿಯೆ. ಯಾವುದೊ ಕೆಲವು ತತ್ತ್ವ, ಸಿದ್ಧಾಂತ, ಇತ್ಯಾದಿಗಳ ಪರವಾಗಿ (ಪ್ರತಿಪಾದಕ) ನಡೆಸುವ ಕ್ರಾಂತಿ, ಚಳುವಳಿ (ಸಾಮಾಜಿಕ ! ಧಾರ್ಮಿಕ ! ಮತೀಯ ಇತ್ಯಾದಿ), ಸಾಹಿತ್ಯ, ಕಲೆಗಳಲ್ಲಿಯೂ ಆಂದೋಲನದ ವಿಶೇಷ ಪಾತ್ರವಿದೆ.

ಒಂದು ಸಾಹಿತ್ಯ-ಅದರ ಅಂಗ ಆದ ಭಾಷೆಯ ದಿಸೆ, ಭಾಷಾಸ್ವರೂಪವನ್ನ (ಹೊರಳಿಸುವ) ತಿರುಗಿಸುವ ಸಾಮೂಹಿಕ ಶಕ್ತಿ, ಆಂದೋಲನಕ್ಕಿದೆ.

ಆಂದೋಲನ, ಸಾಮೂಹಿಕ ಕ್ರಿಯೆ, ಒಂದು ಗುಂಪಿನವರ ಚಟುವಟಿಕೆ, ಕ್ರಿಯಾ ವಿಶೇಷಗಳೂ ಆಗುವ ಸಾಧ್ಯತೆಯುಂಟು (ಪರಂಪರಾನುಗತ ರೀತಿಯಲ್ಲಿ). ಆದರೆ ವ್ಯಕ್ತಿಗತ ಕ್ರಿಯಾ ವಿಶೇಷ ವೈಯಕ್ತಿಕವೆ ವಿನಾ (ಸಂಪ್ರು, ಮಂಪ್ಕರ ಮಾತ್ರ) ಸಾಮೂಹಿಕವಾದ ಆಂದೋಲನವೆನ್ನಿಸಿಕೊಳ್ಳುವುದಿಲ್ಲ.

ಯಾವುದೆ ಆಂದೋಲನದಲ್ಲಿಯಾಗಲಿ ಸಾಮಾನ್ಯನೂ ಸಕ್ರಿಯಾತ್ಮಕ ರೀತಿಯಲ್ಲಿ ಪಾಲ್ಗೊಳ್ಳಬೇಕು. (ಸಮಾಜದ ಗಣ್ಯ, ಪರಿಷ್ಕರು, ಮಾತ್ರ ಅಲ್ಲ ಎಂಬರ್ಥದಲ್ಲಿ). ಆಗಲೆ ಆ ಆಂದೋಲನ, ಸಾರ್ಥಕ ಪಡೆದಂತೆ. ಇದು ವಚನಕಾರರ ಆಂದೋಲನದಲ್ಲಿ ಯಶಸ್ವಿಯಾಗಿ ಜರುಗಿತೆಂಬುದು ಸುವಿದಿತ. ಬ್ರಾಹ್ಮಣ ವರ್ಗದ ಕುಟುಂಬದಲ್ಲಿ ಹುಟ್ಟಿದ ಬಸವಣ್ಣ, ಆಗಿನ ಕಾಲದ ವೈದಿಕ ಕರ್ಮಕಾಂಡ, ಹುರುಳಿಲ್ಲದ ಆಚಾರ, ಅಂಧಶ್ರದ್ಧೆ, ಕುರುಡುನಂಬಿಕೆ, ಪುರೋಹಿತ ಶಾಹಿಯ ದಬ್ಬಾಳಿಕೆ-ದಮನ ಪ್ರವೃತ್ತಿ, ಅಮಾಯಕ ಜನ ಬುದ್ಧಿವಂತರೆನ್ನಿಸಿಕೊಂಡ ಮೇಲು ವರ್ಗದವರ ಹೆದರಿಕೆಯ ಧರ್ಮಶೃಂಖಲೆಗೆ ಸಿಲುಕಿಕೊಳ್ಳುತ್ತಿದ್ದ ಪರಿ, ವಿಜೃಂಭಿಸಿದ್ದ ಜಾತಿ ಪದ್ಧತಿ, ಇವೆಲ್ಲ ಕಂಡು ರೋಸಿ, ರೊಚ್ಚಿಗೆದ್ದು, ಜನಿವಾರ ಕಿತ್ತು ಬಿಸಾಡಿ, ಹೊರಬಂದುದು, ವೀರಶೈವಧರ್ಮ ಪರಿಷ್ಕರಣದ ಜತೆಗೇ (ಮತೀಯ ಆಂದೋಲನ) ಶರಣ ಸಮುದಾಯವನ್ನು (ವಚನ ಧಾರ್ಮಿಕ ಆಂದೋಲನ) ಸಂಘಟಿಸಿದುದೂ, ಈ ಚಳವಳಿ ಕ್ರಮೇಣ ವಿಸ್ತಾರ ಆಗಿ, ಸಮಾಜದ ಎಲ್ಲ ಸ್ತರದವರನ್ನೂ ತೊಡಗಿಸಿಕೊಂಡಿದ್ದರಿಂದ ಯಶಸ್ವಿ ಆಯಿತು.

ಎಂಬುದನ್ನು ಯಾರೂ ತಳ್ಳಿಹಾಕುವಂತಿಲ್ಲ.[32] ಸಮಾಜ ಸುಧಾರಣಾತ್ಮಕ ಚಳವಳಿಯ ಜತೆ, ಬಸವಣ್ಣ-ಇತರ ವಚನಕಾರರು ರೂಪಿಸಿದ ಕಾಯಕತತ್ತ್ವ ಕಲ್ಪನೆ, ತುಂಬ ಸೊಗಸಾದ, ಹಾಗೂ ಅರ್ಥಗರ್ಭಿತ ತತ್ತ್ವ, ಆರ್ಥಿಕ ತತ್ತ್ವವೂ ಹೌದು. ತಮ್ಮ ಮತ ಧರ್ಮ-ಆದರ್ಶವಾದ ಪ್ರಸಾರಕ್ಕಾಗಿ ಸಾಹಿತ್ಯಿಕ ರೂಪಗಳಾದ ವಚನ ಛಂದೋಬಂಧ ರೂಪ ಪ್ರಯೋಗಿಸುತ್ತಿದ್ದರಲ್ಲದೆ, ಜನಭಾಷೆ-ಆಡುಭಾಷೆಯನ್ನೆ ಸಮರ್ಥ ರೀತಿಯಲ್ಲಿ ಬಳಸಿಕೊಂಡರು. ಇದೆಲ್ಲ ವಚನ ಆಂದೋಲನ ನಡೆದ ರೀತಿ. ಇದೇ ಹರಿದಾಸ ಆಂದೋಲನ ಮುಂದೆ ನಡೆಯಲು ಹಿಂದಿದ್ದ ಪಥವಾಯಿತು. ಹರಿದಾಸರಲ್ಲಿ ಸಾಮಾನ್ಯರಿಂದ ಸಾಮಾನ್ಯರಿಗಾಗಿ ಆಂದೋಲನ ನಡೆದರೂ, ಸಮಾಜದ ಎಲ್ಲ ಸ್ತರಗಳವರೂ ಸಕ್ರಿಯಾತ್ಮಕ ರೀತಿಯಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳಲಾಗಲಿಲ್ಲ. ಆ ಒಂದು ನಿಟ್ಟಿನಿಂದ ಈ ಆಂದೋಲನದ ವ್ಯಾಪ್ತಿ ಮಿತಗೊಂಡಿತು ಅಥವಾ ಸಂಕುಚಿತಗೊಂಡಿತೆಂದರೂ ತಪ್ಪಾಗದು. ಆಂದೋಲನ ಸಂಪೂರ್ಣವಾದ ಕ್ರಾಂತಿಯಾಗಲಿಲ್ಲ. ಆದರೂ ಭಕ್ತಿಪಥ, ಭಕ್ತಿಪಂಥದ ನಿಟ್ಟಿನಿಂದ ಗಮನಿಸಿದಾಗ, ಹರಿದಾಸ ಆಂದೋಲನ ಖಂಡಿತ ಒಂದು ಪೂರ್ಣ ಪ್ರಮಾಣದ ಆಂದೋಲನವೆ ಎಂದೆನಿಸುತ್ತದೆ. ವಚನಕಾರರದ್ದೂ ಭಕ್ತಿ-ಶಿವಪಾರಮ್ಯವೆ ; ಅವರ ಆಂದೋಲನದ ಪ್ರಧಾನ ಧ್ಯೇಯಗಳಲ್ಲೊಂದಾಗಿತ್ತು ಎಂಬುದನ್ನು ಮರೆವಂತಿಲ್ಲ. ಕನ್ನಡದ ಬಳಕೆಯ ವಿಚಾರದಲ್ಲೂ ಹಾಗೆಯೇ. ವಚನಕಾರರಿಗೆ ಕನ್ನಡ-ಕನ್ನಡನುಡಿ ಸಾಮರ್ಥ್ಯದಲ್ಲಿ ಅಪರಿಗಿದ್ದ ಅಚಲ ವಿಶ್ವಾಸ, ಅದು ಅವರ ಕನ್ನಡ ಪ್ರೇಮದ ಕುರುಹು. ಹೀಗೆಂದು ಅವರೇನೂ ಕನ್ನಡವನ್ನು ಮಡಿಯಾಗಿ ನಡೆಸಲಿಲ್ಲ. ಮಡಿ ಅವರಿಗೆ ಶತ್ರು. ಸಂಸ್ಕೃತ ಸಾಮಾನ್ಯರಿಗರ್ಥ ಆಗದುದು. ಕನ್ನಡವೆ ತಮ್ಮ ಭಾವನೆಯ ಅಭಿವ್ಯಕ್ತಿಗೆ ಸಾಧನವೆಂದರಿತರವರು. ಜನತೆಯ ಮನ-ಜನನಾಡಿಯ ವಿಂಡಿತ ಅರಿತು, ತಕ್ಕಂತೆ ನಡೆದರು, ನುಡಿದರು. ಕನ್ನಡ ಜನತೆ-ವಚನಕಾರರು ಇಬ್ಬರ ಭಾಷೆ. ಆದರಲ್ಲಿ ತಮ್ಮ ಧ್ಯೇಯ, ಉದ್ದೇಶ, ತಿಳಿಸುವ, ಸಾಧಿಸುವ ಪಟ್ಟು ವಚನಕಾರರದು. ಅವರ ಮಾತು ಜನಕ್ಕೂ ಆಕರ್ಷಣೀಯವಾಯಿತು. ಅರ್ಥ ಆದದ್ದರಿಂದ, ಇದರಿಂದ ಬಡಕಲಾಗಿದ್ದ ಕನ್ನಡಕ್ಕೆ ಸತ್ವವೂ ಬಂದಿತು. ಇದರಿಂದಲೆ ವಚನಗಳು ಕನ್ನಡ ಸ್ವಯಾರ್ಜಿತ ಸ್ವತ್ತು ಎನ್ನುವುದು. ಹರಿದಾಸ ಆಂದೋಲನದ ಪಥ, ಅದರ ಅನುಯಾಯಿಗಳ ಧ್ಯೇಯ, ಆದರ್ಶ ಸಾಧನೆಗೆ ವಚನಕಾರರು ನಿರ್ಮಿಸಿದ್ದ ಹಾದಿ ನೆರವು ನೀಡಿತೆಂಬುದನ್ನು ಮನವರಿಕೆ ಮಾಡಲೋಸುಗ ಈ ಕೆಲವು ಮಾತು ಹೇಳಬೇಕಾಯಿತಷ್ಟೆ. (ವಚನ-ಹರಿದಾಸ ಆಂದೋಲನದ ತುಲನಾತ್ಮಕ ವಿವೇಚನ ಬೇರೊಂದು ಅಧ್ಯಾಯದಲ್ಲಿ ನಡೆದಿರುವುದರಿಂದ ಇಷ್ಟು ಮಾತ್ರ ತಿಳಿಸುತ್ತಿದೇವೆ.)

ಯಾವುದೆ ಸಂಘಟನೆ, ಯಶಸ್ವಿ ಆಗುವಲ್ಲಿ ಆದರ ಅನುಯಾಯಿಗಳ, ಆ ಪಥದ ಪಾಂಥೇಯರ ನಿಷ್ಠೆ ಅತ್ಯಗತ್ಯ. ತಾನು ನಂಬಿರುವ ತತ್ತ್ವ ಸಿದ್ಧಾಂತದಲ್ಲಿ ನೂರಕ್ಕೆ ನೂರರಷ್ಟು ನಂಬುಗೆ, ಅದೇ ನಿಷ್ಠೆ; ಹರಿದಾಸರಿಗಿದ್ದಿತು. ವಂಧ್ವವಂತ-ಹರಿಭಕ್ತಿ-

ವೈಷ್ಣವಧರ್ಮ-ಹರಿಸರ್ವೋತ್ತಮತೆಯ ಸಮರ್ಥ ಪ್ರತಿಪಾದನೆ ಹರಿದಾಸ ಸಂಘಟನೆಯ ಪ್ರಧಾನ ಧ್ಯೇಯ ಆಗಿತ್ತು. ಅದರಲ್ಲಿ ಅವರಿಗೆ ಏಕನಿಷ್ಠೆ. ಶಿವನಿಷ್ಠೆಯಿಂದ ಶರಣರು ಎಲ್ಲ ಜನತೆಯನ್ನೂ ಒಕ್ಕೂಡಿಸಿದರೆ, ಹರಿದಾಸರು ಹರಿಸರ್ವೋತ್ತಮತೆ-ಹರಿಭಕ್ತಿಯ ಪರಿವಲಯದಲ್ಲಿ ಜನತೆಯನ್ನು ತೊಡಗಿಸಿಕೊಳ್ಳಲು ಶ್ರಮಿಸಿದರು. ಬಹುತೇಕ ಸಾರ್ಥಕ್ಯ ಕಂಡರು. ವಚನಕಾರರ ಅನುಭಾವ, ಹರಿದಾಸರ ಅಪರೋಕ್ಷಾನುಭೂತಿ ಎರಡರ ಉದ್ದೇಶ ಭಕ್ತಿಯ ಮೂಲಕವೆ ಪರಮಾತ್ಮ ಸಾಕ್ಷಾತ್ಕಾರವೆಂಬ ದರ್ಶನ. ಎರಡೂ ಆಂದೋಲನ, ಅಂತರಂಗ-ಬಹಿರಂಗ ಶುದ್ಧಿಗೆ ಸಮಾನ ಮಹತ್ವವನ್ನು ನೀಡಿದವು.

ಆಂದೋಲನ ವ್ಯಕ್ತಿಯೊಬ್ಬನ ಕಾರ್ಯ. ಅಲ್ಲ, ಅದೊಂದು ಸಾಮೂಹಿಕ ಕ್ರಿಯಾವಿಶೇಷವೆಂದು ತಿಳಿದಿದೇವೆ. ಸಮಾಜದ ಒಂದು ಬೃಹತ್ ಸಮುದಾಯದ ಆದರ್ಶಗಳನ್ನು ಅವತರಿಸಿಕೊಳ್ಳಲು, ಮೌಲ್ಯಗಳನ್ನು ಸಾಧಿಸಲು, ನಡೆಸುವ ಹೋರಾಟವು ಆಂದೋಲನ ಯಾ ಚಳುವಳಿಯಾಗುತ್ತದೆ. ಇದು ಈಗಾಗಲೇ ಅಸ್ತಿತ್ವದಲ್ಲಿರುವ ಯಾವ ಬಣಕ್ಕೂ ಸಂಬಂಧಿಸಿರುವುದಿಲ್ಲ. ಇನ್ನೂ ಆದರ್ಶವಾಗಿಯೇ ಉಳಿದಿರುವ ಗುರಿಯೊಂದನ್ನು ಪಡೆವ ವಿವಿಧ ಮನೋಭಾವ, ವಿವಿಧ ವರ್ಗ ಗುಂಪುಗಳ ಜನ ಸೇರಿ, ಈ ಧ್ಯೇಯ ಸಾಧನೆಗಾಗಿ ಹೆಣಗುತ್ತಾರೆ, ಶ್ರಮಿಸುತ್ತಾರೆ. ಇದಕ್ಕಾಗಿ ಸ್ಥಳದಿಂದ ಸ್ಥಳಕ್ಕೆ, ಊರಿಂದೂರಿಗೆ, ದೇಶದಿಂದ ದೇಶಕ್ಕೆ ತಿರುಗುವುದೂ ಇರುತ್ತದೆ. ಅದೇ ಚಳುವಳಿ, ಅದೇ ಆಂದೋಲನ. ಹರಿದಾಸರ ಬಣದವರು ಶ್ರಮಿಸಿದುದು ಈ ತೆರನಾದ ಆದರ್ಶಗಳಿಗಾಗಿಯೆ (ಹರಿಭಕ್ತಿ, ಮಧ್ವಮತ ಪ್ರಸಾರ). ಕೇವಲ ಕೀರ್ತನೆ ಹಾಡುವ ರೂಪದಲ್ಲಿ ಹುಟ್ಟಿಕೊಂಡ ಒಂದು ಭಕ್ತಿಪಂಥ, ಪರಂಪರಾನುಗತ ಆಗಿ ಸಾಗಿದ ಒಂದು ಆಂದೋಲನವೆ ಆಗಿ ರೂಪುಗೊಂಡಿತು, ತನ್ನ ಆದರ್ಶಸಾಧನೆಗಾಗಿ ತನ್ನದೆ ಆದ ವಿಶಿಷ್ಟ ಪಥದಲ್ಲಿ ಗಮಿಸಿ, ಶ್ರಮಿಸಿತು.

ಮೇಲಿನ ಮಾತುಗಳಿಂದ, ಆಂದೋಲನ, ಸಮಾಜದ ಎಲ್ಲರನ್ನು ತನ್ನ ಪಥದಲ್ಲಿ ತೊಡಗಿಸಿಕೊಳ್ಳಬೇಕೆಂದು ತಿಳಿಯಬರುತ್ತದೆ. ಹಾಗೆಯೆ ಅದು ನೆಲೆನಿಲ್ಲಬೇಕಾದರೆ ಬೆಳೆಯಬೇಕಾದರೆ, ಸ್ಥಳೀಯ ಸಾಮಾನ್ಯ ಭಾಷೆಯ ಬಳಕೆ (-ಸಂಪರ್ಕ ಸಾಧನ ಆಗಿ-) ಅಗತ್ಯವೆಂದೂ ತಿಳಿಯುತ್ತವೆ. ಸಾಮೂಹಿಕ ಕ್ರಿಯಾವಿಶೇಷವಾದ ಇದು (ಆಂದೋಲನ) ಇದರ ಆದರ್ಶ ಸಾಧನೆಗಾಗಿ ಇಡೀ ಸಮಾಜವನ್ನೆ ಉಜ್ಜುಗಿಸುವ, ಪ್ರೇರಿಸುವ ಲಕ್ಷಣವುಳ್ಳದ್ದೆಂಬುದೂ, ಸಮಾಜಹಿತ, ಸುಧಾರಣಾತ್ಮಕ ಪ್ರವೃತ್ತಿಯದೆಂದು ಕೂಡ ಮನವರಿಕೆಯಾಗುತ್ತದೆ.

## ಆಂದೋಲನ-ಭಾರತದಲ್ಲಿ ವಿವಿಧೆಡೆ ನಡೆದ ವಿವಿಧ ಆಂದೋಲನ-ಹರಿದಾಸ ಆಂದೋಲನಕ್ಕೆ ಇವುಗಳಲ್ಲಿರುವ ಸಮೀಕರಣ

### ಭಾರತದ ವಿವಿಧ ಆಂದೋಲನಗಳು

'ಆಂದೋಲನ'ಗಳ ನಾಡು ಎಂಬುದು ಭಾರತಕ್ಕೆ ತುಂಬ ಒಪ್ಪುತ್ತದೆ. ಏಕೆಂದರೆ, ಅನೇಕ ಮತ-ಧರ್ಮಗಳ ನೆಲೆವೀಡಾದ ಈ ದೇಶದಲ್ಲಿ ಇಲ್ಲಿಯೆ ಉಗಮ ಆಗಿ ಬೆಳೆದ ಧರ್ಮ-ಮತಗಳೂ ಉಂಟು. ಹಾಗೆಯೆ ಹೊರಗಿನಿಂದ ಬಂದು ನೆಲೆ ನಿಂತ ಧರ್ಮ-ಮತ ಕೂಡ ಉಂಟು. ಸುಮಾರು ೨೫೦೦ ವರ್ಷದ ವ್ಯಾಪ್ತಿಯಲ್ಲಿ ಭಾರತ ದೇಶದಲ್ಲಿ ಜನಿಸಿ, ಅಥವಾ ಭಾರತಕ್ಕೆ ಬಂದ, ವಿವಿಧ ಮತ ಧರ್ಮಗಳ ಆಂದೋಲನ ಕುರಿತು, ಕಲ್ಕತ್ತೆಯ ಇತಿಹಾಸ ಅಧ್ಯಯನ ಸಂಸ್ಥೆ ಒಂದು ಹೆಬ್ಬೊತ್ತಗೆಯನ್ನು ಪ್ರಕಟಿಸಿದೆ. ಇದು ಅನೇಕ ವಿದ್ವಾಂಸರ ಲೇಖನ ಸಮುಚ್ಚಯ.[೩] 'ಭಾರತದ ಮತೀಯ-ಧಾರ್ಮಿಕ ಸುಧಾರಣ ಆಂದೋಲನಗಳಲ್ಲಿರುವ ಸಾಮಾಜಿಕ ಅಂಶಗಳು' ಎಂಬ ಹೆಸರಿನ ಈ ಗ್ರಂಥದಲ್ಲಿ ಬೌದ್ಧ ಧರ್ಮದಿಂದ ಮಹಾತ್ಮ ಗಾಂಧಿಯವರೆವಿಗೆ ಇರುವ ವಿಶಾಲ ವ್ಯಾಪ್ತಿಯಲ್ಲಿ ನಡೆದ ಅನೇಕ ಆಂದೋಲನಗಳ ಸಮೀಕ್ಷೆ ವಿದ್ವಾಂಸರು ನಡೆಸಿದ್ದಾರೆ. ಆಂದೋಲನವೆಂದರೇನು, ಅದರ ಹಿನ್ನೆಲೆ, ಅಂಶ-ರೂಪರೇಷೆಗಳನ್ನು ಕುರಿತ ಚರ್ಚೆಯೂ ಇದೆ. ಎಲ್ಲ ಮತೀಯ ಧಾರ್ಮಿಕ ಆಂದೋಲನಗಳಲ್ಲಿ ಅಡಕ ಆಗಿರುವ ಮತೀಯ ಅಂಶಗಳಿಗಿಂತ (ಅಥವಾ ತಾತ್ವಿಕ), ಸಾಮಾಜಿಕ-ಧ್ಯೇಯಗಳನ್ನು ಅಧ್ಯಯನ ಮಾಡಿ ತಿಳಿಸುವುದೆ ಗ್ರಂಥದ ಧ್ಯೇಯವೆಂದು ಗ್ರಂಥದ ಸಂಪಾದಕರಾದ ಡಾ. ಸೆನ್ ನುಡಿದಿದ್ದಾರೆ.

ಎರಡು ಸಾವಿರನ್ನೈನೂರು ವರ್ಷದ ಹರಹಿನಲ್ಲಿ ಬಂದಿರುವ ಪ್ರತಿಯೊಂದು ಸಮಾಜೊ-ಧಾರ್ಮಿಕ (ಮತ ಪ್ರಸಾರಕ) ಆಂದೋಲನಕ್ಕೂ ಕೇವಲ ಆಧ್ಯಾತ್ಮಿಕ ಸಾಧನೆಯ ಲಕ್ಷ್ಯ ಮಾತ್ರ ಇರದೆ, ಒಂದಿಲ್ಲೊಂದು ಸಮಾಜೊ-ಆರ್ಥಿಕ ಅಂಶಗಳಿಂದೊಡಗೂಡಿದ ಹಾಗೂ ಸಾಮಾಜಿಕ, ಆರ್ಥಿಕ ಬದಲಾವಣೆ ಸಾಧಿಸುವುದರತ್ತ ಗಮನವಿದ್ದಿತು. ಯಾವುದೇ ಅಂತಃಪ್ರೇರಣೆ, ಒಳಗುದಿ, ಕೆಲವಾರು ಬೇಡಿಕೆ-ಜನತೆಯ ಕೂಗು, ಸಮಾಜದ ಪ್ರಚಲಿತ ನಂಬುಗೆ ಇವುಗಳೆಲ್ಲ ಸಮಾಜವನ್ನು ಸುಧಾರಿಸುವುದರಲ್ಲಿ ಲಕ್ಷ್ಯವಿರಿಸುವಲ್ಲಿ ಕೇವಲ ಆಧ್ಯಾತ್ಮದ (ವಿಚಾರ) ಅಂಶಗಳ ಬದಲಾವಣೆಗಾಗಿ ಮಾತ್ರವಲ್ಲದೆ, ಸಮಾಜೊ-ಆರ್ಥಿಕ ವ್ಯವಸ್ಥೆಯ ಬದಲಾವಣೆಗೂ ಕೂಡ ಲಕ್ಷ್ಯವಿದ್ದೆ ಇದೆ. ಅದರಲ್ಲೂ ಭಾರತೀಯ ಸಮಾಜದಲ್ಲಿ ಹಿಂದಿನಿಂದ ಇರುವ ಆರ್ಥಿಕ ಅಸಮಾನತೆ,ಅನುಕೂಲ ವಿರದವರು-ಅನುಕೂಲವುಳ್ಳ ಕೆಲವೇ ಜನ, ಅನೇಕ ಶತಮಾನ ಕಾಲ ತುಳಿಯಲ್ಪಟ್ಟವರು, ದಮನಕ್ಕೊಳಗಾದವರು, ಕೀಳು ಜಾತಿ, ಶೋಷಿತ ವರ್ಗ, ಇಂಥವರ ಸುಧಾರಣೆ,

ಒಳಿತಿಗಾಗಿ ಆಂದೋಲನಗಳು ನಡೆದಿರುವುದು ತಿಳಿದುಬರುತ್ತದೆ. ವಿವಿಧ ರೀತಿಯ ಬದಲಾವಣೆ-ಕರ್ಮ-ಆಚಾರಗಳಲ್ಲಿ, ರಾಜ್ಯಾಡಳಿತದಲ್ಲಿ–ಹಾಗೂ ಇಡೀ ಸಮಾಜ ವ್ಯವಸ್ಥೆಯ ಪುನರ್ ರಚನೆಯಲ್ಲಿ ಆಂದೋಲನಗಳು ಸಕ್ರಿಯಪಾತ್ರ ವಹಿಸಲೆತ್ನಿಸಿವೆ, ವಹಿಸಿವೆ ಕೂಡ.

ಮೊದಲೆ ತಿಳಿಸಿರುವಂತೆ, ಭಾರತ ದೇಶ ಅನೇಕ ಮತ–ಧರ್ಮಗಳ, ವಿವಿಧ ಜಾತಿ ಪಂಗಡಗಳನ್ನು ಸೃಷ್ಟಿಸಿ–ಬಳಸಿದ ಸಮಾಜದ ನೆಲೆವೀಡು. ಇಲ್ಲಿ ಬಂದಿರುವ ಸಮಾಜ ಧರ್ಮ ಸುಧಾರಕರು, ಆಧ್ಯಾತ್ಮ ಸುಧಾರಕರು, ಸಾಮಾನ್ಯ ಜನತೆಯನ್ನು (ಪಂಡಿತ–ಬುದ್ಧಿಜೀವಿಗಳಲ್ಲದ, ಪ್ರತಿಷ್ಠಿತ ವರ್ಗದ್ದಲ್ಲದ, ಮೇಲುವರ್ಗದವರಲ್ಲದ, ಆರ ಸೊತ್ತಿಗೆಗೆ ಹೊರತಾದ) ತಂತಮ್ಮ ಮತಪೊಷ್ಟಿ, ಮೋಕ್ಷ–ವಂಚಿ ಸಂಪಾದಿಸ ಬೇಕೆಂದು ಹೇಳಿ, ಹೇಳಿರುವುದಲ್ಲದೆ ಇದರಿಂದ ಜನತೆಗೆ ಕಲ್ಯಾಣವಾಗುವುದೆಂದೂ ಆಶ್ವಾಸನೆ ಇತ್ತಿರುವುದೂ, ಆ ದಿಸೆಯಲ್ಲಿ ಅವರವರಿಗೆ ತೋಚಿದಂತೆ ಬೋಧಿಸಿರುವುದೂ ತಿಳಿದಿರುವ ವಿಚಾರ. ಇದು ಬಹು ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿದೆ.

ಎಲ್ಲ ಮತ–ಧರ್ಮ ಸುಧಾರಣಾ ಮನೋಭಾವದ ಆಂದೋಲನಗಳ ಉದ್ದೇಶ, ಧ್ಯೇಯ, ಇವು :

## ಅ. ವ್ಯವಸ್ಥೆಯ ವಿರುದ್ಧ ಪ್ರತಿಭಟನೆ .

ಇದೇ ಬಹು ಮುಖ್ಯವಾದದ್ದು. ಅನೂಚಾನವಾಗಿ ಬೆಳೆದು ಬಂದಿರುವ, ವರ್ಣಾಶ್ರಮ–ಜಾತಿಗಳಾಗಿ, ಪರಸ್ಪರರ ನಡುವ ಒಡಕೆಂಟು ಮಾಡಿರುವ ಸಮಾಜದ ಜಾತಿ ಪದ್ಧತಿಯ ವಿರುದ್ಧ ಎಲ್ಲ ಧಾರ್ಮಿಕ ಆಂದೋಲನವೂ ಸಿಡಿದದ್ದಿವೆ. ಇಷ್ಟೆಲ್ಲ ನಡೆದರೂ ಹಂಟ್ಟಿನಿಂದ ಜಾತಿ ನಿರ್ಧರಿಸುವ ನಮ್ಮ ಸಮಾಜ ಇನ್ನೂ ವಿಚ್ಛಿದ್ರ ಗೊಳ್ಳುತ್ತಲೆ ಇದೆ. ದೇವಾಲಯ, ಮಂಠಗಳು ಬೆಳೆದರೂ, ಜನಮಂನದ ಪ್ರೀತಿ, ಬೆಳೆದಿಲ್ಲ. ಜಾತಿಪದ್ಧತಿ, ಭಾರತೀಯ ಸಮಾಜದಲ್ಲಿ ತುಂಬ ಆಳವಾದ ಬೇರು ಬಿಟ್ಟು, ಬಿಳಲನ್ನೂ ಹೊಂದಿದೆ. ಬಲ್ಲಿದ–ಬಡವರ, ಬುದ್ಧಿವಂತರ–ಮೂಢರ (ಅಜ್ಞಾನಿ –ಓದು ಬರಹಬಾರದವರ) ಶೋಷಣೆಗೊಳಗಾದವರ ನಡುವಣ ಗೋಡೆ ಅಭೇದ್ಯ ವಾಗಿಯೇ ಇದೆ. ಎಲ್ಲರೂ ಒಂದೇ ಎಂಬ ಸಮಾನತೆಯ ತತ್ವವನ್ನು ೨೫೦೦ ವರ್ಷದ ಅವಧಿಯಲ್ಲಿ ಬಂದಿರುವ ಧಾರ್ಮಿಕ ಆಂದೋಲನಗಳೆಲ್ಲ ಸಾರಿವೆ. ಆದರೂ ಜಾತಿಪದ್ಧತಿ ಹಾಗೇ ಉಳಿದಿದೆ. ಬುದ್ಧನಿಂದ–ಗಾಂಧಿಯವರೆಗೆ, ಸಮಾಜದ ಮತ ಸುಧಾರಕರೆಲ್ಲರೂ ಜಾತಿ ತೊಡೆದು ಹಾಕಲು ಶ್ರಮಿಸಿದರು, ಅಷ್ಟೆ. ಇತಿಹಾಸಕಾರರೆ ಇದಕ್ಕೆ ಉತ್ತರ-ಸಮಾಧಾನ ನೀಡಿಯಾರು.

### ಆ. ಸಂಪ್ರದಾಯ

ಅರ್ಥವಿಲ್ಲದ ಆಚಾರ-ಕಂದಾಚಾರ ಮತೀಯ ನಡವಳಿಗಳು, ಪುರೋಹಿತ ಶಾಹಿಯ ಮೇಲುಗೈ, ದಬ್ಬಾಳಿಕೆ ಶೋಷಣೆ–
ಇದರ ವಿರುದ್ಧವೂ ಎಲ್ಲ ಆಂದೋಲನದ ಪರಿಷ್ಕರೂ ಸಿಡಿದೆದ್ದಿದ್ದಾರೆ. ಎಲ್ಲ ಧರ್ಮ ಪ್ರಸಾರಕರೂ, ಪುರೋಹಿತ-ಕರ್ಮಶಾಹಿಯನ್ನು ಧಿಕ್ಕರಿಸಿ, ಅವರ ವಿರುದ್ಧ ಹೋರಾಡಲು ಹಾಗೂ ಮತೀಯ ಪದ್ಧತಿಯನ್ನು ಸುಲಭೀಕರಿಸಲು ಕರೆಯಿತ್ತಿದ್ದಾರೆ, ಪ್ರಯತ್ನಿಸಿದ್ದಾರೆ. ಈ ದಿಸೆಯಲ್ಲಿ ಸ್ವಲ್ಪ ಸುಧಾರಣೆಗಳು ಆಗಿವೆ. ಹಿಂದಿದ್ದಷ್ಟು ಶೋಷಣೆ ಈಗ ಆಗುತ್ತಿಲ್ಲ. ಸಮಾಜದ ಪ್ರಗತಿ, ಅಕ್ಷರ ಜ್ಞಾನದ ಅರಿವು-ಇದಕ್ಕೆ ಕಾರಣವಾಗಿದೆ ಎನ್ನಬಹುದು.

### ಇ. ಶ್ರೀ ಸಾಮಾನ್ಯರು ಪಾಲ್ಗೊಳ್ಳುವಿಕೆ

ಎಲ್ಲ ಧಾರ್ಮಿಕ (ಮತೀಯ) ಆಂದೋಲನಗಳ ಮುಖಂಡರೂ ಬಯಸಿದುದು, ಸಮಾಜದ ಉನ್ನತ ವರ್ಗದವರ ಪಾಲ್ಗೊಳ್ಳುವಿಕೆಯಲ್ಲ, ಶ್ರೀಸಾಮಾನ್ಯರು ತಮ್ಮ ಆಂದೋಲನದಲ್ಲಿ ತಮ್ಮನ್ನು ಪೂರಾ ತೊಡಗಿಸಿಕೊಳ್ಳಬೇಕೆಂದು. ಇದೇ ಅವರ ಕಳಕಳಿ.

### ಈ. ಜನಭಾಷೆಯಲ್ಲಿ ಅಭಿವ್ಯಕ್ತಿ

ಅಂದರೆ ಜನತೆ ಅರಿಯಲು ಸುಲಭ ಆಗುವಂತೆ ಅವರವರ ಸರಳ ಭಾಷೆಯಲ್ಲಿ ಎಲ್ಲರಿಗೂ ಮನವಿ ಮಾಡಿಕೊಂಡು, ತಮ್ಮ ಮತ, ಧರ್ಮ ಸಂದೇಶವನ್ನು ಬಿತ್ತರಿಸು ವುದೇ ಎಲ್ಲ ಆಂದೋಲನಗಳ ಧ್ಯೇಯ. ಇದನ್ನು ಯೂರೋಪಿನ ಪ್ರಾಟೆಸ್ಟೆಂಟ್ (Protestant) ಕ್ರೈಸ್ತ ಆಂದೋಲನಕ್ಕೆ ಹೋಲಿಸಬಹುದಾಗಿದೆ. ಮಾರ್ಟಿನ್ ಲೂಥರನ (Martin Luther) ನೇತೃತ್ವದಲ್ಲಿ ನಡೆದ ಪ್ರತಿಭಟನಾತ್ಮಕ ಕ್ರೈಸ್ತ ಧರ್ಮ ಸುಧಾರಕ ಆಂದೋಲನವಿದು. ಲ್ಯಾಟಿನ್ ಭಾಷೆಯನ್ನು ರೋಮನ್-ಕ್ಯಾಥೊಲಿಕ್ ಪೋಪರ ವ್ಯಾಟಿಕನ್ (Vatican) ಅರಮನೆಯಿಂದ, ಪಾದ್ರಿಗಳ ಬಿಗಿ ಮುಷ್ಟಿಯಿಂದ, ಉಚ್ಚಾಟಿಸಿ, ಅಲ್ಲಿ ಸ್ಥಳೀಯ ಭಾಷೆಗಳನ್ನು ಸಾಮಾನ್ಯ ಜನತೆಯೂ ಅರಿಯಲು ಸಾಧ್ಯವಾಗುವಂತೆ ಧರ್ಮತತ್ವಗಳನ್ನು ಜನ ಬಳಕೆ ಭಾಷೆಯಲ್ಲಿ ತಿಳಿಸಬೇಕೆಂಬುದು ಪ್ರಾಟೆಸ್ಟೆಂಟರವಾದ (ಭಾರತದಲ್ಲಿ ಗೀರ್ವಾಣ ಭಾಷೆಯೆನಿಸಿಕೊಂಡ ಸಂಸ್ಕೃತದ ವಿರುದ್ಧ – ಮುಸ್ಲಿಮರಲ್ಲಿ ಅರೇಬಿಕ್ ಪರ್ಷಿಯನ್ ಭಾಷೆಗಳ ಬಳಕೆಯ ವಿರುದ್ಧ ಹೀಗೆಯೆ ಆಂದೋಲನ ನಡೆದಿವೆ) ಇದೊಂದು ಮತೀಯ ಸಾಮಾಜಿಕ ಆಂದೋಲನವೆ ಆಯಿತು.

### ಉ. ಜನರಿಗೆ ತಲುಪುವ ಆದರ್ಶಗಳು

ಸಮಾಜದ ಮತ – ಧರ್ಮ ಪ್ರಜೆಗಳಿಗೆ ನಿಲುಕುವುದಾಗಬೇಕು. ಪ್ರಜೆಗಳ,

ಪ್ರಜೆಗಳಿಂದ, ಪ್ರಜೆಗಳಿಗಾಗಿ ಮತ-ಧರ್ಮ-ಜಾತಿತೀತ ಸಂಸ್ಥಾಪಕರು ಇದನ್ನು ಅರಿತುಕೊಳ್ಳುವಂತಿರಬೇಕು.

ಅಜ್ಞಾನದಿಂದ, ಮೂಢನಂಬಿಕೆಯಿಂದ, ಮೂಕ ಪಶುವಿನಂತೆ ನಂಬುವುದು ಆಧಾನಂಕರಣೆ, ಮೇಲುವರ್ಗದವರು ಹೆದರಿಸಿ, ಪಾಪ-ಪುಣ್ಯ, ಭೀತಿಹುಟ್ಟಿಸಿ, ನಂಬಿಸಿ, ಸಾಮಾನ್ಯ ಜನತೆಯನ್ನು ಶೋಷಿಸುವುದು ಈ ಸಮಾಜದಲ್ಲಿ ಹಿಂದಿನಿಂದಲೂ ನಡೆದುಬಂದದ್ದೆ. ಗೌತಮ ಬುದ್ಧನಿಂದ ಆಧ್ಯ ಸಮಾಜದ ಆಂದೋಲನದವರೆವಿಗೂ, ಮತ ಪ್ರಸಾರಕ ಪರಿಷ್ಕರ ಮಂಬ್ಯೋದ್ದೇಶ, ಮತ-ಧರ್ಮದ ನಡವಳಿ, ನಿಯಮ ಸಾಮಾನ್ಯರೆಲ್ಲರಿಗೂ ಅರ್ಥವಾಗುವಂತಿರಬೇಕು ಎಂಬುದೇ ಆಗಿತ್ತು. (ಇಲ್ಲದಿದ್ದರೆ ಅದು ಆಂದೋಲನ ಎಂಬರ್ಥ ಪಡೆಯುವುದಿಲ್ಲವೆಂದೂ ಅನ್ನಿಸುತ್ತದೆ.)

ಎಲ್ಲ ಧಾರ್ಮಿಕ ಮತೀಯ ಆಂದೋಲನಗಳೂ ಪರಧರ್ಮಸಹಿಷ್ಣು ಮನೋ ಭಾವ ಇರಿಸಿಕೊಂಡೆ ಬಂದಿವೆ. ಭಾರತದ ಮತ ಬೋಧಕರೆಲ್ಲರ ಒಂದು ಮುಖ್ಯ ಗುಣವಿದು. ಯಾವುದೇ ರೀತಿಯ ಮತಾಂಧತೆ, ಒಂದನ್ನು ಕಂಡರೆ ಇನ್ನೊಬ್ಬರಿಗಾಗದ ತಿಕ್ಕಾಟ, ಕಲಹ, (ಪದ್ಧತಿ-ನಂಬುಗೆ ತತ್ವಗಳಲ್ಲಿ) ಇರಲಿಲ್ಲ. ಹೊಸದೇನೆ ಬರಲಿ, ಪ್ರೇರಿಸುವ, ಹಾಗೂ ಬೇರೆ ಬೇರೆ ನಂಬುಗೆ, ವಿಚಾರ, ಸ್ವಾಗತಿಸಿ ಅವುಗಳ ಒಳ್ಳಿತನು ಕೊಳ್ಳುವ, ಒಟ್ಟಾಗಿ ಕೂಡುವ ಸಿದ್ಧಾಂತ ಸಮನ್ವಯ ಮನೋಧರ್ಮ ಮೊದಲಿಂದಲೂ ಭಾರತ ದೇಶದಲ್ಲಿ ಅನೇಕ ಶತಕಗಳಿಂದ ಬೆಳೆದು ಬಂದಿದೆ. ಯಾವುದೆ ಮತ-ಧರ್ಮ ಉದಯಿಸಲಿ, ಅದಕ್ಕೂ ಅವಕಾಶವಿದೆ-ಇತ್ತಿದೆ, ಈ ಭಾರತೀಯ ಸಮಾಜ. ಹೊರಗಿನಿಂದ ಬಂದ ಮಹಮ್ಮದೀಯರ ಮುತ್ತಿಗೆ ತಂದದ್ದು ಇಸ್ಲಾಂ ಧರ್ಮ. ಇದನ್ನು ಮುಸ್ಲಿಂ ಅರಸರು ಬಲಾತ್ಕಾರವಾಗಿ ಹೇರುತಿ-ಮತಾಂತರಗೊಳಿಸಿದ್ದುಂಟು. ಇಂಥ ಅನೇಕ ಮತಾಂಧ ಅರಸರ ಆಳ್ವಿಕೆಯನ್ನೂ ಭಾರತೀಯ ಸಮಾಜ ಅರಗಿಸಿ ಕೊಂಡಿದೆ. ಈ ಸಿದ್ಧಾಂತ ಸಮನ್ವಯ ಮನೋಭಾವ ಈಗಲೂ ಒಪ್ಪುವಂಥದ್ದೆ. ಒಟ್ಟಾರೆ, ಭಾರತದಲ್ಲಿ ಹುಟ್ಟಿದ ಧರ್ಮ ಸುಧಾರಕರು (ಈಗಿನ ಕ್ರೈಸ್ತಧರ್ಮ) ಪಾಶ್ಚಾತ್ಯ-ಪೌರ್ವಾತ್ಯ ಪ್ರಭಾವಗಳನ್ನು ಕಂಡು ಅದರಲ್ಲಿನ ಒಳ್ಳೆಯ ಅಂಶಗಳನ್ನು ಅರಗಿಸಿಕೊಂಡು ತಮ್ಮ ಸಿದ್ಧಾಂತ ಸಮನ್ವಯಗೊಳಿಸಿ, ತಮ್ಮವರಿಗೆ ತಿಳಿಯಪಡಿಸುವ ಸಹಿಷ್ಣು ಮನೋಭಾವ ತೋರಿದ್ದಾರೆ.

ಭಾರತ ದೇಶದಲ್ಲಿ ಉಗಮ ಆದ ಆಂದೋಲನಗಳನೇಕ. ಕಾಲದಿಂದ ಕಾಲಕ್ಕೆ, ಬದಲಾದ ಸಮಾಜ ಪರಿಸರಕ್ಕೆ ತಕ್ಕಂತೆ ಮತಧರ್ಮ ಕೂಡ ಆಂದೋಲನ ರೂಪದಲ್ಲಿ ಎದ್ದು, ಸ್ಥಾಪಿಸಿವೆ. ಡಾ. ಸೇನ್ ಅವರು ಸಂಪಾದಿಸಿರುವ ಗ್ರಂಥದಲ್ಲಿ ೨೫೦೦ ವರ್ಷದ ಹರಹಿನಲ್ಲಿ ಬಂದಿರುವ ಮತೀಯ ಧಾರ್ಮಿಕ ಆಂದೋಲನಗಳನ್ನು ಗುರುತಿಸ ಲಾಗಿದೆ. ಹಾಗೂ ಅವುಗಳನ್ನು ಪ್ರಾಚೀನ ಕಾಲದಿಂದ ಮಧ್ಯಕಾಲೀನ ಯುಗವೆಂದೂ, ಅನಂತರ ಆಧುನಿಕ ಕಾಲದ ಆಂದೋಲನಗಳ ಅವಧಿಯೆಂದೂ ಸ್ಥೂಲವಾಗಿ ವಿಂಗಡಿಸಿ ಕೊಂಡಿದ್ದಾರೆ. ಬುದ್ಧನಿಂದ ಗಾಂಧಿಯವರವರೆವಿಗೂ ನಡೆದ ವಿವಿಧ ಮತಧರ್ಮ

ಆಂದೋಲನಗಳಲ್ಲಿ ಕ್ರಿ. ಶ. ೧೩ನೇ ಶತಮಾನದ ಮಧ್ವಾಚಾರ್ಯರ ಕಾಲ-ಹರಿದಾಸ ಆಂದೋಲನದ ಬಗ್ಗೆ ಒಂದು ಮಾತೂ ಈ ಗ್ರಂಥದಲ್ಲಿ ಉಲ್ಲೇಖ ಆಗಿಲ್ಲ, ಪ್ರಬಂಧವೂ ಇಲ್ಲ. ವಿವಿಧ ಧಾರ್ಮಿಕ ಆಂದೋಲನಗಳನ್ನು ಉಲ್ಲೇಖಿಸುವಲ್ಲಿ ನಾವು, ನಮ್ಮ ಅಧ್ಯಯನದ ನಿಟ್ಟಿನಿಂದ, ಸ್ಥೂಲವಾಗಿ ಎರಡು ವಿಭಾಗ ಮಾಡಿಕೊಳ್ಳಬಹುದೆನ್ನಿಸುತ್ತದೆ.

(1) ಈಶ್ವರ ಅಸ್ತಿತ್ವವಾದ ನಂಬುವಂಥ ಮತ-ಧರ್ಮಗಳ ಆಂದೋಲನ.

(2) ನಿರೀಶ್ವರವಾದಿ ಮತ-ಧರ್ಮ.

ಎರಡನೆಯದಕ್ಕೆ ಬೌದ್ಧ-ಜೈನ-ಚಾರ್ವಾಕ ಮತಗಳು ಸೇರುತ್ತವೆ. ಮೊದಲಿನದರಲ್ಲಿ ತತ್ತ್ವತ್ರಯಂ (ಅದ್ವೈತ, ವಿಶಿಷ್ಟಾದ್ವೈತ, ದ್ವೈತ) ಹುಟ್ಟಿಕೊಂಡದ್ದು-ಅವುಗಳ ಪುನರ್ವಿಭಜನೆ (ಶುದ್ಧಾದ್ವೈತ, ಬ್ರಹ್ಮ ಸಂಪ್ರದಾಯ ಹೀಗೆ) ಹಾಗೂ ಭಾರತದ ಅನೇಕ ಕಡೆ ನಡೆದ ಭಕ್ತಿಪಂಥ ಆಂದೋಲನ. ತಮಿಳುನಾಡಿನ ನಾಯನ್ಮಾರ್, ಕನ್ನಡದ ವೀರ ಶೈವ ವಚನಕಾರರ ಶಿವಪಾರಮ್ಯ ಪ್ರತಿಪಾದಕ ಆಂದೋಲನ ಬಿಟ್ಟರೆ, ವಿಷ್ಣುವೆಲ್ಲ ವಿಷ್ಣುಭಕ್ತಿ ಪಂಥದವರು ನಡೆಸಿದ ಆಂದೋಲನಗಳೆ (ತಮಿಳುನಾಡಿನ ಆಳ್ವಾರರೂ ಸೇರಿಕೊಂಡಂತೆ) ಭಕ್ತಿ ಸುಲಭ ಸಾಧ್ಯ ಮಾರ್ಗ ಆದದ್ದೆ ಧಾರ್ಮಿಕ ಆಂದೋಲನಗಳ ಬೆಳಕಿಗೆ ಕಾರಣ. ಬಂಗಾಲದಲ್ಲಿ ಶ್ರೀ ಕೃಷ್ಣ ಚೈತನ್ಯ, ಮತ್ತು ಗೌಡೀಯ ವೈಷ್ಣವ ಆಂದೋಲನ. ಗುಜರಾತಿನಲ್ಲಿ ಶ್ರೀವಲ್ಲಭಾಚಾರ್ಯರ ಭಕ್ತಿಪಂಥ, ರಾಜಾಸ್ಥಾನದಲ್ಲಿ ಮೀರಾ-ರಾಧಾಕೃಷ್ಣ ಭಕ್ತಿ-ಮಧುರ ಭಕ್ತಿಭಾವ, ಉತ್ತರದ ಕಬೀರ್ ಭಕ್ತಿಪಂಥ, ಮಹಾರಾಷ್ಟ್ರದ ಜ್ಞಾನದೇವ, ಏಕನಾಥ, ತುಕಾರಾಮರ ಭಕ್ತಿಪಂಥ, ಅಸ್ಸಾಂನ ಶಂಕರದೇವನ ವೈಷ್ಣವ ಪಂಥ-ಅವನ ಶಿಷ್ಯ ಮಾಧವ ಕಂದಲಿಯ ಭಾಗವತ ಪಂಥ (ಏಕಶರಣನಾಮ ಪಥ) ವೈಷ್ಣವ ಭಕ್ತಿ ಆಂದೋಲನ. ದಕ್ಷಿಣದ ಶ್ರೀರಾಮಾನುಜ-ಅನಂತರ ಮಧ್ವರ ಹಾಗೂ ಹರಿದಾಸರ ವಿಷ್ಣುಭಕ್ತಿ ಪಂಥ ಹೀಗೆ ಇಲ್ಲೆಲ್ಲ ಪ್ರಧಾನ ಹರಿ ಭಕ್ತಿಯೆ, ಅದರ ಪ್ರಸಾರವೆ. ಇದಲ್ಲದೆ, ಇತರ ಸಾಂಪ್ರದಾಯಿಕ ಆಂದೋಲನಗಳಾದ ಉತ್ತರದ ಬುಂದೇಲ್‌ಖಂಡದ ಪ್ರಣಾಮಿ (Pranami) ಸಂಪ್ರದಾಯ, ಆಧುನಿಕ ಕಾಲದ ಬ್ರಹ್ಮ ಸಮಾಜ (ರಾಜಾರಾಮ ಮೋಹನ್‌ರಾಯ್), ಆರ್ಯ ಸಮಾಜ (ದಯಾನಂದ ಸರಸ್ವತಿ), ರಾಮಕೃಷ್ಣ ಪರಮಹಂಸರ ಭಕ್ತಿ ಆಂದೋಲನ, ಬ್ರಹ್ಮಜ್ಞಾನವಾದ (ಥಿಯಾಸಫಿ ಆಂದೋಲನ-ಆನಿಬೆಸೆಂಟರು), ಆಧುನಿಕ ಕೇರಳದ ಶ್ರೀನಾರಾಯಣ ಗುರು ಆಂದೋಲನ, ಇವೆಲ್ಲದರ ಗುರಿಯೂ ಭಕ್ತಿ ಪ್ರಸಾರವೆ ಎಂದರೆ ಅತಿಶಯೋಕ್ತಿ ಆಗಲಾರದು,[೩೯] ಹಾಗೂ ಇವೆಲ್ಲದರ ಧಾರ್ಮಿಕ ಧ್ಯೇಯದ ಜತೆ, ಸಮಾಜದ ಕೆಲವು ವ್ಯವಸ್ಥೆಗಳನ್ನು ಶುದ್ಧೀಕರಿಸುವ ಸುಧಾರಣ ಮನೋಭಾವ ಸಮಾನ ಮನೋಧರ್ಮ ಇತ್ತೆಂಬುದು ಆಯಾ ಆಂದೋಲನ ಪ್ರವರ್ತಕರ ಕೃತಿಗಳಿಂದಲೆ ವ್ಯಕ್ತವಾಗುವ ಅಂಶ. ಕಬೀರ ಹೇಳುವಂತೆ, ಎಲ್ಲರ ಮೈಯಲ್ಲೂ ಹರಿಯುವುದು ರಕ್ತವೆ, ಮೇಲುವರ್ಗದವರ ಮೈಯಲ್ಲೇನೂ ಹಾಲು ಹರಿಯುವುದಿಲ್ಲ ಎಂದಂತೆಯೆ, ಇನ್ನೊಂದೆಡೆ ತನ್ನ ವಂಗ್ಯದ

ಬಡಿತಕ್ಕೆನುಗುಣವಾಗಿ 'ಜೇನಿ ಜೇನಿ' ಎಂದು ತನ್ನ ಪರದೈವವನ್ನು ಸ್ಮರಿಸುವ ಕಬೀರ ಚಿಂತನಶೀಲನಾಗಿ ಕೇಳುತ್ತಾನೆ: "ಮೇಲುವರ್ಗದವನು, ಕೀಳುವರ್ಗದವನು ಎನ್ನುವರಲ್ಲ ಆಯ್ಯ ಬ್ರಾಹ್ಮಣನೆನಿಸಿಕೊಂಡವನೆ, ನೀನು ಬೇರೆ ಮಾರ್ಗದಿಂದ ಜನಿಸಿ ಬಂದೆಯೇನು?" ಇದು ಮಾತ್ರ ನೇರ, ನಗ್ನ ಸತ್ಯ ಚಿಂತನೆ. ಸಾಧನೆ, ಬ್ರಹ್ಮತ್ವದ ಭೂಮ ತರುವುದೆ ವಿನಾ ಹುಟ್ಟಿನಿಂದ ನಿರ್ಧರಿಸುವ ಜಾತಿಯಲ್ಲ. ಎಲ್ಲ ಮತೀಯ-ಧಾರ್ಮಿಕ ಆಂದೋಲನ ಗಳ ಸಮಾನ ಲಕ್ಷಣ-ಈ ತುಡಿತ, ಸುಧಾರಣಾತ್ಮಕ ದೃಷ್ಟಿ, ಒಟ್ಟಾರೆ, ಈ ಆಂದೋಲನ ಪ್ರಭಾವ, ಈಗಲೂ ಆಯಾಯ ಪರಿಸರದ ಜನತೆಯಲ್ಲಿ ಇನ್ನೂ ಉಳಿದಿದೆ ಹಾಗೂ ಭಕ್ತಿಪಂಥ ಸಂಲಭ ಮಾರ್ಗವೆಂಬುದು ಇನ್ನೂ ಮನದಟ್ಟು ಆಗುತ್ತಲೇ ಇದೆ. ಎಲ್ಲ ಧಾರ್ಮಿಕ ಆಂದೋಲನ ಕುರಿತು ಉಲ್ಲೇಖಿಸಲಾಗದಿದ್ದರೂ, ಹರಿದಾಸ ಆಂದೋಲನದ ದೃಷ್ಟಿಯಿಂದ ಒಂದೆರಡನ್ನು ಉಲ್ಲೇಖಿಸಬೇಕಾಗುತ್ತದೆ : ಅವುಗಳೆಂದರೆ, ಹತ್ತನೇ ಶತಮಾನದ ರಾಮಾನುಜ ಭಕ್ತಿಪಂಥ, ಹನ್ನೆರಡನೇ ಶತಕದ ವಚನಕಾರರ ಆಂದೋಲನದಲ್ಲಿ ಒಡಮೂಡಿ ಪ್ರಚಲಿತ ಆದ ಶಿವಭಕ್ತಿ ಪಾರಮ್ಯ ಪ್ರಸರಣ. ಇವೆರಡನ್ನು ಹರಿದಾಸ ಆಂದೋಲನದೊಂದಿಗೆ ಕುರಿತು ತುಲನಾತ್ಮಕವಾಗಿ ವಿವೇಚಿಸಿರುವುದರಿಂದ, ಇಲ್ಲಿ ವಿಶದೀಕರಿಸಲು ಹೋಗುವುದಿಲ್ಲ. ಆದರೆ ಇವೆರಡು ಭಕ್ತಿ ಪರಂಪರೆ-ಅವುಗಳಲ್ಲಿನ ಸಮಾಜ ಸುಧಾರಣಾತ್ಮಕ ಅಂಶಗಳು, ಅಭೂತಪೂರ್ವ ಆದವು. ಮಧ್ವಾಚಾರ್ಯರ ಭಕ್ತಿಪಂಥ ಪ್ರಸರಿಸಿ ಸಂಘಟಿಸಿದ ಹರಿದಾಸ ಪರಂಪರೆ ತಮ್ಮ ಹಿಂದೆ ಜರುಗಿದ್ದ ಅನೇಕ ನಿರೀಶ್ವರ ಪಂಥ, ಹಾಗೂ ರಾಮಾನುಜ ವೈಷ್ಣವ ಭಕ್ತಿ ಆಂದೋಲನ ಮತ್ತು ಶರಣರ ವಚನ ಚಳವಳಿ-ಇವೆಲ್ಲದರ ಕೆಲವು ಒಳ್ಳೆಯ ಅಂಶಗಳನ್ನು ತನ್ನಲ್ಲಿ ಅಳವಡಿಸಿಕೊಂಡು, ತನ್ನ ಆಂದೋಲನ ಪಥವನ್ನು ಉತ್ತಮ ಪಡಿಸಿಕೊಂಡಿತು ಎಂಬುದು ಹರಿದಾಸ ಕೃತಿಗಳಿಂದಲೆ ತಿಳಿದು ಬರುವ ವಿಚಾರ. ಆದರಲ್ಲಿಯೂ ಹತ್ತನೆ ಶತಮಾನದಷ್ಟು ಹಿಂದೆಯೆ ರಾಮಾನುಜರು, ಅಂತ್ಯಜರನ್ನು "ತಿರುಕುಲತ್ತಾರ್" (ಶ್ರೇಷ್ಠಕುಲದವರು) ಎಂದು ಹೆಸರಿಸಿ, ದೇವಾಲಯ ಪ್ರವೇಶ ದೊದಗಿಸಿದ್ದು ಒಂದು ಕ್ರಾಂತಿಯೆಂದೆ ಅನ್ನಬಹುದು. ಅದು ರಾಮಾನುಜರಲ್ಲಿದ್ದ ಸುಧಾರಣಾ ಮನೋಧರ್ಮದ ದ್ಯೋತಕ ಕೂಡ. ಆದರೆ ರಾಮಾನುಜರ ಒಂದು ಕೊರತೆ, ವರ್ಣಾಶ್ರಮ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸದಿದ್ದುದು. ಮತಾಂತರ ಮಾಡಿಸಿಕೊಂಡರೆ ವಿನಾ, ಜಾತಿಪದ್ಧತಿ ತೊಡೆಯಲಿತ್ತಿಸಲಿಲ್ಲ (ಬಿಟ್ಟಿದೇವ ವಿಷ್ಣು ವರ್ಧನನಾದದ್ದು). ವೀರಶೈವ ಧರ್ಮಾನುಯಾಯಿಗಳಾದ ವಚನಕಾರರು ಮೂಲಭೂತ ವ್ಯವಸ್ಥೆಯ ವಿರುದ್ಧವೆ ಪ್ರತಿಭಟಿಸಿದುದು ಆ ಯುಗದ ದುಂದುಭಿ ಇವೆರಡೂ ಹರಿ ದಾಸರ ಮನಃಪಟಲದಲ್ಲಿರದಿರಲು ಸಾಧ್ಯವುಂಟೆ ? ಪ್ರಭಾವವಿದ್ದರೂ ಹರಿದಾಸರ ಸೌಮ್ಯಮನೋಧರ್ಮ, ಭಕ್ತಿಯನ್ನು ಮಾತ್ರ ಎಲ್ಲ ಆಂದೋಲನದ ಸಮಾನ ಅಂಶ ಆಗಿ ಸ್ವೀಕರಿಸಿದುದಷ್ಟೆ ಅಲ್ಲ, ಸುಧಾರಣೆಯನ್ನು ಒಲ್ಲೆ ಎನ್ನಲಿಲ್ಲ. ಈ ಹಲವು ಮಾತುಗಳಿಂದ ಹರಿದಾಸ ಆಂದೋಲನವನ್ನು ಒಂದು ಆಂದೋಲನವೆಂದೆ ನಾವು

ಸ್ವೀಕರಿಸುವಲ್ಲಿ ತಪ್ಪಾಗಲಾರದು. ಈ ಮೊದಲು ಕಾಣಿಸಿರುವ ಅನೇಕ ಅಂಶ (ಜಾತಿ ಪದ್ಧತಿ ವಿರೋಧ, ಕುಲಭೇದವಿರೋಧ, ಸ್ಥಳೀಯ ಭಾಷೆಯ ಬಳಕೆ, ಏಕದೇವೋಪಾಸನೆ, ಹರಿಭಕ್ತಿ ಪ್ರಸಾರ, ಶ್ರೀಸಾಮಾನ್ಯನನ್ನೂ ತಮ್ಮ ಪರಿವಲಯದಲ್ಲಿ ತೊಡಗಿಸಿಕೊಳ್ಳುವಿಕೆ) ಅನಂತರ ಮೂಡಿ ಬಂದಿರುವ ವಿವಿಧ ಧಾರ್ಮಿಕ-ಮತೀಯ ಆಂದೋಲನಗಳನ್ನೂ ಹಸರಿಸಲಾಗಿದೆ.

ಇವೆಲ್ಲದರ ಸಮೀಕ್ಷೆಯಿಂದ, ಹರಿದಾಸ ಆಂದೋಲನವನ್ನು ಒಂದು ಆಂದೋಲನವೆಂದೆ ನಾವು ಸ್ವೀಕರಿಸುವಲ್ಲಿ ತಪ್ಪಾಗಲಾರದೆಂದೆನ್ನಿಸುತ್ತದೆ. ಮೊದಲು ಕಾಣಿಸಿರುವ ಅನೇಕ ಅಲೆಗಳೂ (ಜಾತಿಪದ್ಧತಿ ವಿರೋಧ-ಕುಲಭೇದವಿರೋಧ-ಸ್ಥಳೀಯ ಭಾಷಾ ಬಳಕೆ, ಏಕದೇವೋಪಾಸನೆ, ಹರಿಭಕ್ತಿ ಪ್ರಸಾರ, ಶ್ರೀಸಾಮಾನ್ಯರನ್ನೂ ತಮ್ಮ ಪರಿವಲಯದಲ್ಲಿ ತೊಡಗಿಸಿಕೊಳ್ಳುವಿಕೆ) ಹರಿದಾಸಪಂಥದ ಪಥದುದ್ದಕ್ಕೂ ಅವರ ಕೃತಿ-ಜೀವನಗಳ ಮೂಲಕ ಪ್ರತಿಬಿಂಬಿಸಿ, ಆಂದೋಲನವನ್ನು ಒಂದು ಭಕ್ತಿಯ-ಧಾರ್ಮಿಕ-ಮತೀಯ ಆಂದೋಲನವಾಗಿರಿಸಿದೆ. ಇಷ್ಟೇ ಅಲ್ಲ, ಇದಿನ್ನೂ ಮುಂದುವರಿದಿದೆ. ಈ ಮುಂದುವರಿಕೆಯೂ ಆಂದೋಲನದ ಒಂದು ವೈಶಿಷ್ಟ್ಯ. ಹರಿದಾಸ ಪಂಥದ ಪಥದ ಉದ್ದಕ್ಕೂ ಅವರ ಬದುಕು-ಕೃತಿಗಳ ಮೂಲಕ ಪ್ರತಿಬಿಂಬಿಸಿ, ಈ ಆಂದೋಲನವನ್ನು ಒಂದು ಭಕ್ತಿಯ- ಧಾರ್ಮಿಕ-ಮತೀಯ ಆಂದೋಲನವಾಗಿಸಿವೆ.

ಹರಿದಾಸರಲ್ಲಿ ಭಕ್ತಿ ಅವಿಭಾಜ್ಯ ಅಂಗ. ಅದೇ ಅವರ ಬದುಕು, ಉಸಿರು. ಭಕ್ತಿಯ ವಿವಿಧ ಸ್ವರಗಳಲ್ಲಿ ಹಾಡಿ ಹೊಗಳಿದ್ದಾರೆ ಶ್ರೀಹರಿಯ ವಿವಿಧ ರೂಪಗಳನ್ನು. ಶ್ರೀಹರಿಯ ದಶಾವತಾರ-ಪುರಾಣ ಪ್ರಸಂಗ, ಶ್ರೀಕೃಷ್ಣನ ಲೀಲಾವಿನೋದ, ರಾಧಾಪ್ರೇಮ, ಮಧುರಭಾವ, ನಾರಾಯಣನೇ ಸರ್ವತಂತ್ರ ಸ್ವತಂತ್ರನೆಂಬ ಪುರುಷೋತ್ತಮತ್ವ ಕುರಿತು ಎಷ್ಟು ಹಾಡಿದರೂ ಅವರಿಗೆ ತೃಪ್ತಿಯೆ ಇಲ್ಲ. ಈ ಹರಿಭಕ್ತಿ ಪರಂಪರೆಯಾಗಿ ಮುಂದುವರೆದು ಬಂದಿದೆ. ಇಹದ ಬದುಕಿನ ಇತಿಮಿತಿಯನ್ನು ತಿಳಿಹುವುದರ ಜತೆಗೆ ಅನಂತತೆಯ ಅಪ್ರಮೇಯತೆಗೆ ಶರಣಾಗಿ ಬಂಡೆಯಡಿಯ ಹಸಿರಾಗಿ ಬಾಳುವ ಹಂಬಲಿಕೆಯನ್ನೂ ವಿನಯವಂತಿಕೆಯನ್ನೂ ತಿಳಿಸುತ್ತ ಕಡೆಗೆ ಮುಕ್ತಿಗೇ ಸಾಧನವಾಗಿದೆ ಈ ಶುದ್ಧ ಭಕ್ತಿ. ಹಾಗೆಯೆ ಹರಿದಾಸರ ಮಧ್ವಮತ ನಿಷ್ಠೆಯೂ ಅನ್ಯಾದೃಶವಾದದ್ದು. ಮಧ್ವಪದ್ಧತಿ, ಮಧ್ವತತ್ವ ಬಿಡಬೇಡಿ, ಇದು ಪರಗತಿಗೆ ಸಾಧನವೆಂದೆ ಶತ ಶತ ಮಾನಗಟ್ಟಲೆ ಸಾರಿದಾರೆ. ಹರಿಸರ್ವೋತ್ತಮ, ಅವನೇ ಪರದೈವವೆಂದೂ ಘೋಷಿಸಿ ಅದಕ್ಕೆ ವೇದಾಗಮ, ಪುರಾಣ, ಉಪನಿಷತ್ತು, ರಾಮಾಯಣ-ಭಾರತ, ಭಾಗವತಾದಿ ಗ್ರಂಥಗಳ ಅನೇಕ ಪ್ರಸಂಗಗಳನ್ನೂ ಪ್ರಮಂಬರನ್ನೂ ದೃಷ್ಟಾಂತ ಆಗಿ ನೀಡಿದ್ದಾರೆ.

ಹರಿದಾಸರಿಗೆ ಅವರದ್ದೆ ಆದ ಸಂಪ್ರದಾಯವಿದೆ. ಒಂದು ವೃತ್ತಿ-ಪ್ರವೃತ್ತಿ. ಮಧುಕರ ವೃತ್ತಿಯನ್ನಾಶ್ರಯಿಸಿ ಅಹೊತ್ತಿಗೆ, ಬೇಕಾದಷ್ಟು, ಅಗತ್ಯವಿರುವನಿತು ಮಾತ್ರ ಸಂಪಾದಿಸುವುದು ಮಾತ್ರ, ಅಲ್ಲ, ಸಂಗ್ರಹ ಮಾಡುವಂತೆಯೂ ಇಲ್ಲ. ಮಧುಕರನ ಹಾಗೆಯೆ (ದುಂಬಿ) ವಿವಿಧ ಧರ್ಮಪರಿವಳಲದ ಬಂಡನ್ನು ತಮ್ಮ ಧರ್ಮ

ದೊಂದಿಗೆ ಸಮನ್ವಯಗೊಳಿಸಿ ಪರಾಮರ್ಶಿಸಿ, ಮಧು ಸಮಾನ ಆದದ್ದನ್ನು ನೀಡುವ ವೃತ್ತಿಯನ್ನಾಶ್ರಯಿಸಿದ್ದಾರೆ. ಹಾಗೆಯೆ ಮಧುಂಕರನ-ಷಟ್ಪದ ರ್ಘೋಂಕೃತಿ-ಇವರ ಕೃತಿಗಳಲ್ಲಿ ಸಂಗೀತದೊಡಗೂಡಿ ಬಂದಿದೆ. ಮಧುಕರ ವೃತ್ತಿಯನ್ನು ಕೇವಲ ಉಂಛ ವೃತ್ತಿಯಾಗಿ ಭಾವಿಸದೇ ಅದನ್ನು ಸಾಮಾಜಿಕ ಸೇವಾ ಪ್ರವೃತ್ತಿಯಾಗಿ ಭಾವಿಸಿದರು ಹರಿದಾಸರು. ಇದರಿಂದ ಹರಿದಾಸರ ಪಂಥ ಕೇವಲ ನಾಡಾಡಿ ತಿರಂಗರ ಪಂಥ ಅಲ್ಲ ಎಂಬುದು ದೃಢವಾಗುತ್ತದೆ. ಇವರಿಗೆ ಆ ವೃತ್ತಿಯ ಮೂಲಕ ತಮ್ಮದೆ ಆದರ್ಶ ಸಾರುವ ದೃಢ ನಿಲುವಿತ್ತು, ಧ್ಯೇಯವಿದ್ದಿತು. ಅಸಂಗ್ರಹ ಮನೋಧರ್ಮ ಎಲ್ಲರಲ್ಲೂ ಬೆಳೆದರೆ ಸಮಾಜದಲ್ಲಿ ಎಲ್ಲರಿಗೂ ಅಗತ್ಯವಾದ ವಸ್ತು ಪದಾರ್ಥ ಕಾಳ ಸಂತೆಯಾಗದೆ ಮುಕ್ತವಾಗಿ ದೊರೆಯುತ್ತವೆ. ಹಾಗೂ ಅಸಂಗ್ರಹ, ನೈತಿಕತೆಯನ್ನೂ ಜತೆ ಜತೆಗೇ ತರುತ್ತದೆ. ಮಧುಂಕರ ವೃತ್ತಿಯಿಂದ ಹರಿದಾಸರು, ವಚನಕಾರರ ರೀತಿ ಕಾಯಕ ತತ್ವದಂಥ ಒಂದು ಉನ್ನತ ಆರ್ಥಿಕ ತತ್ವದ ಪರಿಕಲ್ಪನೆ ನೀಡಲು ಆಗದಿದ್ದರೂ ತಮ್ಮ ವೃತ್ತಿಯನ್ನು ಸಮಾಜಸೇವೆಯಾಗಿಯೆ ಭಾವಿಸಿ ನಡೆಸಿದರು. ಕೇವಲ "ಯಾಯವಾರವ ಮಾಡಿ" ಜೀವಿಸುವರಾಗಲಿಲ್ಲ. ಆ ವೃತ್ತಿಯಲ್ಲಿ ಪಟ್ಟ ಬವಣೆ, ಕಷ್ಟ ನಿಷ್ಠುರಗಳನ್ನು ಮೂಕರಾಗಿ ಸಹಿಸಿದರು, ಹಾಡಿಯೂ ಹಾಡಿದರು. ಹರಿದಾಸರದು ನೇರ, ಸರಳ ಅಭಿವ್ಯಕ್ತಿ. ಸತ್ಯವೆ ಅಲ್ಲಿನ ಸಾರ.

ಹರಿದಾಸ ಆಂದೋಲನ ಕೇವಲ ಸೌಮ್ಯವಾದಿ ಆಂದೋಲನ. ವರ್ಣಾಶ್ರಮ ವಿರುದ್ಧ ಪ್ರತಿಭಟಿಸುವ ಕ್ರಾಂತಿಯಲ್ಲ. ಜಾತಿ, ಅಂತ್ಯಜ, ಇವರ ಬಗ್ಗೆ ಸಹಾನು ಭೂತಿ, ತಮ್ಮ ಸಿಟ್ಟು ತೋರಿ, 'ಎಲ್ಲರೂ ಒಂದೇ, ಹರಿಭಕ್ತನ ಜಾತಿ ಕುಲ ಕೇಳುವುದು ಪಾಪ' ಎಂದರಷ್ಟೆ. ಜಾತಿ ಕುಲದ ಬಗ್ಗೆ ಆಂತರಿಕ ಯೋಗ್ಯತೆಗೇ ಬೆಲೆಯೀಯ ಬೇಕೆಂದರಷ್ಟೆ, ವಿನಾ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಲಿಲ್ಲ. ಇದರಿಂದ, ವಚನ ಚಳವಳಿಯಲ್ಲಿ ವೀರಶೈವ ಪರಿವಲಯದಲ್ಲಿ ಕೆಳಸ್ತರಗಳ ಜನರು ಬಂದು ಹಿಂಡು ಹಿಂಡಾಗಿ ಸೇರಿದಷ್ಟು ಹರಿದಾಸ ಆಂದೋಲನದಲ್ಲಿ ಜನತೆ ಪಾಲ್ಗೊಳ್ಳಲಿಲ್ಲ. (ಜನತೆಗೆ ಸಂಗೀತ, ನೀತಿ ಪ್ರಿಯವಾದುವೆಂಬುದಂತೂ ನಿಜ.) ಇದರಲ್ಲಿ ಮೇಲುವರ್ಗದವರ ಪಾಲ್ಗೊಳ್ಳುವಿಕೆ ಹೆಚ್ಚಾದರೂ, ಕನಕದಾಸನೊಬ್ಬನೆ ಅಪವಾದವಾಗಿ ನಿಲ್ಲುತ್ತಾನೆ. ಕನಕ ದಾಸನ ಅಂತಸ್ಸತ್ವ, ಸಾಹಿತ್ಯ ಪರಿಣತಿ, ಲೋಕಾನುಭವ, ಭಾಗವತಧರ್ಮದ ಅರಿವು, ಪುರಾಣಪ್ರಜ್ಞೆ, ಸಮಾಜದ ಅಜ್ಞಾನದ ಸ್ಪಂದನ ಹಾಗೂ ವಿರೋಧ, ಅವನ ಆಂತರಿಕ ಔನ್ನತ್ಯವರಿತ ಯಾರೂ, ಅವನನ್ನು ಕೆಣಕಲಾಗಲಿಲ್ಲ ಮಾತ್ರ ಅಲ್ಲ, ವ್ಯಾಸರಾಯರೆ ಅವನನ್ನು ಆದರಿಸಿದ್ದು ಮಾತ್ಸರ್ಯದ ಬೇಗುದಿಗೆ ಕಾರಣವಾಯಿತೆಂಬುದಂತೂ ನಿಜ. ಅವನು ಆಗ್ಗೆ ಸಮಾಜದ ಒಂದು ಕೆಳಜಾತಿಯಿಂದ ಬಂದವನಾದರೂ, ಅವನಲ್ಲಿ ಅಲ್ಲಲ್ಲಿ ಪ್ರತಿಭಟನೆಯ ಧ್ವನಿ ಕೇಳಿ ಬಂದರೂ (ರಾಮಧಾನ್ಯಚರಿತೆ, ಮೋಹನತರಂಗಿಣಿಯಲ್ಲಿನ ವಿಡಂಬನೆ ಕೀರ್ತನೆಗಳು-) ಅದು ಕೇಳಿಸಲಿಲ್ಲ. ಮೇಲುವರ್ಗದವರ ಕಟಕಿ-ಕುಹಕಗಳಿಂದ ಮುಚ್ಚಿಹೋಯಿತು. ಇಲ್ಲಿ ವ್ಯಾಸರಾಯರು ಪ್ರಗತಿಶೀಲರೆಂದು ಹೇಳುವಷ್ಟೆ ವಾದಿ

ರಾಜರನ್ನೂ ಹೆಸರಿಸಬೇಕು. ಅವರು ಅಗ್ಗಿ ಸಮಾಜದ ಕೆಳಸ್ತರದವರಾದ ಸ್ವರ್ಣ ಕಾರರು, ಹಾಗೂ ಇನ್ನೂ ಅನೇಕ ತುಳು ಜನತೆಯನ್ನು ತುಳುವಿನಲ್ಲಿ ಕೃತಿ ರಚನೆ ಮಾಡಿ ತಮ್ಮ ಹರಿಭಕ್ತಿ ಪ್ರಸಾರ ಮಾಡುವ ಮೂಲಕ ಆಕರ್ಷಿಸಿ ವೈಷ್ಣವ ಧರ್ಮಕ್ಕೆ ಧೈರ್ಯವಾಗಿ ಸೇರಿಸಿಕೊಂಡರು. ಮಧ್ವಮತದ ವೈಶಿಷ್ಟ್ಯವಾದ ತಪ್ತಮುದ್ರಾಂಕನ (ವಿಷ್ಣು ಶಂಖ-ಚಕ್ರವನ್ನು ಕಾಯಿಸಿ, ಭುಜಗಳ ಮೇಲೊತ್ತುವಿಕೆ. ಇದು ಶ್ರೀವೈಷ್ಣವ ರಲ್ಲಿಯೂ 'ಸಮಾಶ್ರಯಣ' ಎಂಬ ಹೆಸರಲ್ಲಿ ಬಳಕೆಯಲ್ಲಿದೆ) ಮಾಡಿದರು. ಅಂಥವರಲ್ಲಿ ಒಬ್ಬಿಬ್ಬರಾದರೂ ಹರಿದಾಸ ಪ್ರವೃತ್ತಿ ಬೆಳೆಸಿಕೊಂಡಿದ್ದರು. ವಾದಿರಾಜರ ಕ್ರಾಂತ ದರ್ಶಿತ್ವದಿಂದ, ಪ್ರಗತಿಶೀಲ ಮನೋಭಾವದಿಂದ, ಹರಿದಾಸ ಆಂದೋಲನಗಳ ವ್ಯಾಪ್ತಿ, ಹರಹು ಹೆಚ್ಚಿತು. ಹರಿದಾಸ ಆಂದೋಲನ ಸೋತಂತೆನ್ನಿಸುವುದು, ಜಾತಿಯ ಪ್ರಸ್ನಾಪಕ್ಕೆ ಬಂದಲ್ಲಿ ಮಾತ್ರ, ಆದರೂ ಈ ಆಂದೋಲನದ ಧರ್ಮತತ್ತ್ವ ಕೇವಲ ಒಂದು ಗುಂಪಿಗೆ (ಮಧ್ವಮತ ದನುವರ್ತಿಗಳಿಗೆ) ಮಾತ್ರ ಮೀಸಲಾದದ್ದೆಂದು (ಕೃತಿಗಳ ಮೂಲಕ ಸ್ಪಷ್ಟವಾಗುವ ಅಂಶ) ಅನ್ನಿಸುವಲ್ಲಿ ಆಂದೋಲನದ ಸತ್ತ್ವವನ್ನು ಅದು ಕಳಕೊಳ್ಳುವುದೂ ಎಂದೂ ಅನ್ನಿಸುತ್ತದೆ. (ಆದರೆ ಹರಿದಾಸರ ಕೃತಿ ಸಂದೇಶ ಇದನ್ನು ಮೀರಿ ವಿಶಾಲವಾಗುವುದೂ ಇದೆ. ವಿಜಯದಾಸಾರ್ಯರಲ್ಲಿ ಮಾಧ್ವನಿಷ್ಠೆ ಗಮನಿಸಿದಾಗ ಮೊದಲು ಕಾಣಿಸಿರುವ ಮಾತೇ ತಿಳಿಸಬೇಕಾಯಿತಷ್ಟೆ.)

ಹರಿದಾಸರ ಸಾಹಿತ್ಯಿಕ ಕೊಡುಗೆ, ಅಭಿವ್ಯಕ್ತಿಗಳಾದ ನೂರಾರು ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತನಾಮ, ದಂಡಕ, ತ್ರಿಪದಿ (ತತ್ತ್ವಸುವ್ವಾಲಿ), ಇತ್ಯಾದಿ, ಸಾಹಿತ್ಯ ಪ್ರಕಾರಗಳು. ಕನ್ನಡ ಸಾಹಿತ್ಯಕ್ಕೆ ಹೊಸ ಆಯಾಮ ನೀಡಿದುದಲ್ಲದೆ ನಡುಗನ್ನಡ-ಹೊಸಗನ್ನಡದ ದೇಸಿಯನ್ನು (ವಾದಿರಾಜರ ಸುವ್ವಿಪದ-ಪ್ರಸನ್ನ ವೆಂಕಟರ ಕೋಲು ಹಾಡು) ಮೆರೆಯಿತು. ವಚನಗಳಲ್ಲಿ ಒಂದು ಆಂತರಿಕ ಲಯ, ಗದ್ಯದ ಛಂದೋಬಂಧಕ್ಕೂ ಒಂದು ಹೆಜ್ಜೆ ಮುನ್ನಡೆದ ಹರಿದಾಸರು ಶ್ರುತಿಸುಭಗ ಸಂಗೀತದ ಸಹಾಯ ಪಡೆದು ಸುಶ್ರಾವ್ಯವಾಗಿ ಹಾಡಿದರು. ಮುಂಜಾವಿಗೆದ್ದು ಮಿಂದು, ದ್ವಾದಶ ನಾಮಗಳನ್ನು ಧರಿಸಿ, ತಂಬೂರಿ ಹಿಡಿದು ಶ್ರುತಿ ಮಾಡಿ ತಂತಿ ಮಿಡಿಸಿದರು. ಏಕನಾದ ಮಿಡಿದರು, ಕಾಲಿಗೆ ಗೆಜ್ಜೆ ಕಟ್ಟಿ ಕುಣಿದರು. ಅದು ಬರಿಯ ವಿಲಾಸ ನರ್ತನವಲ್ಲ. ಭಕ್ತಿಯ ಕೈಂಕರ್ಯ, ಭಗವಂತನ ಸೇವೆ. ತಂಬೂರಿ ಮೀಟಿದವ ಭವಾಬ್ಧಿ ದಾಟಿದವ ನಾಗುತ್ತಾನೆ, ಆದ್ದರಿಂದ ಬನ್ನಿ ಮಧ್ವಮತಕ್ಕೆ 'ನಮಾಧವ ಸಮೋಮತಃ' ಎಂದು ಸಂಗೀತವನ್ನು ತಮ್ಮ ಪ್ರಸಾರ ಮಾಧ್ಯಮವಾಗಿರಿಸಿಕೊಂಡು ಜನಸಾಮಾನ್ಯನಿಗೆ ಅರ್ಥ ಆಗುವ ಸರಳ ಕನ್ನಡದಲ್ಲಿ ಹಾಡಿದರು. ಸಂಗೀತ ಮಾರ್ಗವಂತೂ ಹರಿದಾಸ ಆಂದೋಲನದಲ್ಲಿ ಒಂದು ಮೈಲಿಗಲ್ಲು ಹಾಗೂ ಅವರ ಒಂದು ಶಾಶ್ವತ ಕೊಡುಗೆ ಅಲ್ಲಿದ್ದೇ ಇದೆ. ಇದು ಹರಿದಾಸ ಆಂದೋಲನದ ಒಂದು ವೈಶಿಷ್ಟ್ಯ ಕೂಡ.

ಹರಿದಾಸರು ತಾಯಿನುಡಿಯ ಪ್ರಾಮುಖ್ಯತೆ ಅರಿತು, ತಮ್ಮ ಮತಧರ್ಮ ತತ್ತ್ವ ಗಳನ್ನು ಎಲ್ಲರಿಗೂ ತಿಳಿಯುವಂತೆ ತಾಯ್ನುಡಿಯಲ್ಲಿಯೆ ಹೇಳಿದ ಜಾಣ್ಮೆ ಮೆಚ್ಚು

ವಂತಹಂದು. ಅದರಲ್ಲಿಯೂ ಶ್ರೀಪಾದರಾಜರಂಥ ಮಠಾಧೀಶರು, ವ್ಯಾಸರಾಯರು, ವಾದಿರಾಜರು, ಶ್ರೀರಾಘವೇಂದ್ರರ ಮೊದಲಾದ ಅಪರೋಕ್ಷಜ್ಞಾನಿಗಳು ಇನ್ನೂ ಮುಂದೆ ಹೋದರು. ಶ್ರೀ ವೈಕುಂಠದಾಸರಂಥ ಹಿರಿಯರಲ್ಲಿ ಅಪಾರಗೌರವ ತೋರಿ, ಅವರಲ್ಲಿದ್ದ ಭಕ್ತಿಯ ಸೆಲೆಗೆ ವಾದಿರಾಜರು ಮಾರುಹೋದರು .ಗೌರವಿಸಿದರು. ಹರಿದಾಸರಿಗಿದ್ದ ಕನ್ನಡ ನುಡಿ, ಅಭಿಮಾನ, ಪ್ರೇಮ, ಅವರ ಕೃತಿಗಳ ಮೂಲಕ ವೇದ್ಯಗೊಳ್ಳುತ್ತದೆ. ಪುರಂದರದಾಸರೊಬ್ಬರೇ ೪,೭೫,೦೦೦ ಕೃತಿ ರಚನೆ ಮಾಡಿದರೆ, ವಿಜಯದಾಸರು ೨೫,೦೦೦ ಕೃತಿ ರಚಿಸಿ ತಮ್ಮ ಗುರುವರ್ಯರಿಗೆ ಸಮರ್ಪಿಸಿದೆರೆಂದಾಗ ಹರಿದಾಸ ಆಂದೋಲನ, ಕನ್ನಡ ಸಾಹಿತ್ಯವನ್ನು ಹೇಗೆ ಶ್ರೀಮಂತಗೊಳಿಸಿ, ಸಾಮಾನ್ಯ ಮಾನ್ಯ ಸಾಹಿತ್ಯ ಆಗಿಸಿತೆಂಬುದೂ ತಿಳಿಯುತ್ತದೆ.[36]

ಸಮಾಜದ ರಾಜಕೀಯ-ಮತೀಯ (ಜಾತಿ ಮುಂತಾದ) ವ್ಯವಸ್ಥೆ ವಿರುದ್ಧ ಪ್ರತಿಭಟನಾತ್ಮಕ ಹೋರಾಟ ನಡೆಸುವುದು ಹರಿದಾಸರ ಉದ್ದೇಶವೆ ಆಗಿರಲಿಲ್ಲ. ಅವರ ಕೃತಿಗಳಲ್ಲಿ ಇದು ಸುಸ್ಪಷ್ಟ. ಆದರೆ ಧರ್ಮ-ಮತ-ಭಕ್ತಿ-ಇವರು ಅಂಟಿಕೊಂಡ ಆದರ್ಶಗಳು. ಅದರಲ್ಲಿ ವೈದಿಕ ಧರ್ಮದ ಪುನರ್‌ಸ್ಥಾಪನೆ, ಹರಿಭಕ್ತಿ ಪ್ರಸಾರ, ಹರಿಸರ್ವೋತ್ತಮತ್ವ ಆಚಾರ, ವಿಚಾರ, ಮಡಿ-ಶೀಲಮಂತಿಕೆ, ಈ ಬಗ್ಗೆ ಮಾತಾಡಿದರು, ಹಾಡಿದರು. ಜನಜಾಗೃತಿ ವಚನಕಾರರ ಕಾಲಕ್ಕಾಗಲೆ ಆಗಿ, ಒಂದು ಪರಿಸರ ಹರಿದಾಸರು ಬರುವ ವೇಳೆಗಾಗಲೆ ನಿರ್ಮಾಣಗೊಂಡಿತ್ತು. ಆ ಜನಜಾಗೃತಿಯನ್ನು ತಮ್ಮ ನಿಟ್ಟನೆಡೆ, ಧ್ಯೇಯದೆಡೆ ತಿರುಗಿಸಿಕೊಂಬಲ್ಲಿ ಶ್ರಮಿಸಿದ್ದು ಹರಿದಾಸಪಂಥದ ಕಾರ್ಯ ಚಟುವಟಿಕೆಗಳಲ್ಲೊಂದು, ಸಂಗೀತ ಸಿತವಾದ, ಅರ್ಥ ಆಗುವ, ಆದಂತ ಅರಿಯುವ ಮಾಧ್ಯಮ. ಅಂತೆಯೆ ಸಾಮಾನ್ಯ ಜನತೆ ಹರಿದಾಸರ ಕೃತಿಗಳಿಂದ ಆಕರ್ಷಿತರಾದರು. ಹರಿಭಕ್ತ ಪರಿವಲಯದಲ್ಲಿ ತಂಡೋಪತಂಡವಾಗಿ ಸೇರಿದರು.

ಹರಿದಾಸ ಪಂಥವನ್ನು ಈ ಕೆಲವಾರು ಅರ್ಥಗಳ ಹಿನ್ನೆಲೆಯಲ್ಲಿ 'ಒಂದು ಆಂದೋಲನ' ಎಂದು ನಾವು ಕರೆಯಬಹುದಾಗಿದೆ. ಹರಿಭಕ್ತರಾದ, ಸದಾಹರಿದಾಸರಾದ

1. ಹರಿದಾಸರದ್ದೆ ಒಂದು ಗುಂಪು, ಒಂದು ಬಣ.
2. ಹರಿದಾಸರು ನಿಂತಲ್ಲಿ ನಿಲ್ಲುವವರಲ್ಲ. ಗ್ರಾಮೈಕರಾತ್ರಿವಾಸವೆಂಬಂತೆ ಊರಿಂದೂರಿಗೆ, ದೇಶದಿಂದ ದೇಶಕ್ಕೆ ಸುತ್ತುತ್ತಿರುವುದೆ, ಪರ್ಯಟನೆ. ಹೋದ ಹೋದೆಡೆಯಲ್ಲೆಲ್ಲ ಮಧ್ವಮತವೈಷ್ಣವಧರ್ಮ-ಹರಿಭಕ್ತಿ ಪ್ರಸಾರ ಮಾಡುವುದು.
3. ಹರಿದಾಸ ಆಂದೋಲನ, ಒಂದು ಮತ, ಧರ್ಮಕ್ಕೆ ಮಾತ್ರ ಸಂಬಂಧಿಸಿದ್ದು. ಆ ಮತ ಧರ್ಮ ಪ್ರಸಾರ, ಪ್ರತಿಪಾದನೆ, ಪರಮತ ಖಂಡನೆ(ದ್ವೈತ ತತ್ತ್ವ-ಮಧ್ವ ಮತ ಸ್ಥಾಪನೆ) ಸ್ವಮತ ಮಂಡನೆಗಾಗಿ ನಡೆದ ಒಂದು ವಿಶೇಷ ಕ್ರಿಯೆ. ಇದಿನ್ನೂ ಜೀವಂತವಾಗಿಯೇ ಇದೆ. ಈಗಲೂ ಹರಿದಾಸ ದೀಕ್ಷೆ ಪಡೆದವರು ನಮ್ಮಲ್ಲಿ ಇದ್ದಾರೆ.[37] ಹಾಗೂ ಈ ಆಂದೋಲನದ ಗತಿ ನಿಂತಿಲ್ಲ. ಮುಂದುವರಿದಿದೆ.

4. ಹರಿದಾಸ ಆಂದೋಲನ-ಪ್ರಧಾನತಃ ಒಂದು ಭಕ್ತಿಯ ಆಂದೋಲನ. ಶ್ರೀಪಾದರಾಜರಿಂದ ಆರಂಭ ಆಗುವ ಈ ಸಾಹಿತ್ಯ (ಹರಿದಾಸ ಸಾಹಿತ್ಯ)[37] ಆತ್ಮನಿವೇದನಾರ್ಥ, ತನ್ನ ಮನಸ್ಸಿನ ಒಳತೋಟ, ತುಮುಲ ಅಂತರಂಗವನ್ನು ಭಗವಂತನ ಸನ್ನಿಧಿಯಲ್ಲಿ ತೋಡಿಕೊಳ್ಳಲೋಸುಗ ಮೂಡಿ ಬಂದದ್ದು ; ಹಾಗೂ ಇದನ್ನು ಒಂದು ಪೂಜಾದ್ರವ್ಯ ಆಗಿ ಮಾಡಿಕೊಂಡರು. ಇದಕ್ಕೆ ಶ್ರೀಪಾದರಾಜರಿಗೆ ತಮಿಳುನಾಡಿನ ಭಕ್ತಿ ಪರಂಪರೆಯ ಶ್ರೇಷ್ಠ ಪ್ರತೀಕ ಆದ ಶ್ರೀ ಆಳ್ವಾರ್‌ರವರ ದಿವ್ಯ ಪ್ರಬಂಧಗಳ ಪ್ರಭಾವ ಸುಸ್ಪಷ್ಟ. ತಮಿಳುನಾಡಿನ ವಿಷ್ಣು ದೇವಾಲಯಗಳಲ್ಲಿ (ಹಾಗೂ ಎಲ್ಲ ಶ್ರೀವೈಷ್ಣವ ದೇವಾಲಯಗಳಲ್ಲಿ) ಪೂಜಾ ಸಮಯದಲ್ಲಿ ಹಾಡುವ ದ್ರಾವಿಡ ಪ್ರಬಂಧ, ಶ್ರೀಪಾದರಾಜರ ಮನಸೆಳೆದು, ಕನ್ನಡದಲ್ಲಿ ಎಲ್ಲರಿಗೂ ತಿಳಿಯುವಂತೆ, ಜನಸಾಮಾನ್ಯರಿಗೂ ಅರ್ಥ ಆಗುವ ರೀತಿಯಲ್ಲಿ ಈ ರೀತಿಯ ಭಕ್ತಿ ನಿವೇದನೆಯ ಮಾಧ್ಯಮವನ್ನೇಕೆ ಒಡಮೂಡಿಸಿ, ಬೆಳೆಯಿಸಬಾರದೆಂಬ ಭಾವನೆಯನ್ನು ಅಭಿವ್ಯಕ್ತಗೊಳಿಸಲು ಮಾಡಿಸಿದ್ದು, ಕಂಡರಿಸಿದ್ದು ಕೀರ್ತನ ಸಾಹಿತ್ಯ.

5. ಹರಿದಾಸ ಆಂದೋಲನ:- ಇದರ ಸಾಹಿತ್ಯ ಅಭಿವ್ಯಕ್ತ ಸಾಂಪ್ರದಾಯಿಕ ಆದದ್ದು, ಇಲ್ಲಿ ಸಮಾಜದ ಬೇರೆ ಬೇರೆ ಜಾತಿಯವರು ಬರಲಿಲ್ಲ. ಕನಕದಾಸರೊಬ್ಬರೆ ಇದಕ್ಕೆ ಏಕೈಕ ಅಪವಾದ. ಪುರಂದರದಾಸರೂ ಮೊದಲು ಸ್ಮಾರ್ತರಾಗಿದ್ದು ಅನಂತರ ವ್ಯಾಸರಾಯರ ಪ್ರಭಾವದಿಂದ ವೈಷ್ಣವ ಧರ್ಮಕ್ಕೆ ಶರಣಾಗಿ, ಹರಿದಾಸ ದೀಕ್ಷೆ ಪಡೆದರೆಂದು ತಿಳಿಯುತ್ತದೆ. ಹರಿದಾಸ ಆಂದೋಲನದ ಪರಿಧಿ ಮಿತ. ವ್ಯಾಪ್ತಿ ಮಿತ. ತಮ್ಮ ಮತ, ತಮ್ಮ ತತ್ತ್ವ-ಮಧ್ವಮತ-ಅದರ ಪ್ರಸಾರ.[38] "ಅದೂ ಮಾಧ್ವರಿಗೇ (ನ ಮಾಧವ ಸಮೋ ಮತಃ ಎಂಬುದೇ ಮಾಧ್ವರ ಉದ್ಘೋಷ) ಮಾತ್ರ ಮೀಸಲು. ಹರಿದಾಸ ಆಂದೋಲನ ಇತರ ಪ್ರಭಾವಗಳನ್ನು ಸ್ವಾಗತಿಸಿ, ಅಳವಡಿಸಿಕೊಂಡಿದ್ದರೆ, ಆಂದೋಲನದ ವ್ಯಾಪ್ತಿ ಹಿರಿದಾಗುತ್ತಿತ್ತು. ವಿಶಾಲ ಆಗಿರುತ್ತಿತ್ತು. ಹರಿದಾಸ ಆಂದೋಲನದಲ್ಲಿ movement ಎಂಬ ಇಂಗ್ಲಿಷ್ ಪದದ ಇದ್ದರೂ ಅದು ಬರೀ ಧಾರ್ಮಿಕವೆ, ವಾಃತೀಯವೆ. ಅದರಲ್ಲಿಯೂ ದಾಸಸಾಹಿತ್ಯದ ದ್ವಿತೀಯ ಹಂತದಲ್ಲಿ ಬರುವ ಶ್ರೀವಿಜಯದಾಸರು, ಶ್ರೀಗೋಪಾಲದಾಸರ ಕೃತಿಗಳು ಇಡೀ ಮಾಧ್ವ ತತ್ತ್ವ ವಾಙ್ಮಯವಾಗಿವೆ. ಅದೇ ಉದ್ದೇಶ ಕೂಡ.

ಹರಿದಾಸರು ಗುಂಪು ಗುಂಪಾಗಿ, ಅಥವಾ ಒಬ್ಬೊಬ್ಬರಾದರೂ ಸರಿಯೆ, ಸ್ಥಳದಿಂದ ಸ್ಥಳಕ್ಕೆ, ಊರಿಂದೂರಿಗೆ, ಸಂಚರಿಸುತ್ತ, ಹರಿನಾಮ, ಹರಿಭಕ್ತಿ ಪ್ರಸಾರ, ಹರಿಪಾರಮ್ಯ ಪ್ರತಿಪಾದಿಸಿ, ಮಧ್ವಮತ ತತ್ತ್ವಪ್ರಸಾರ, ಇವುಗಳನ್ನೆ ತಮ್ಮ ಕಾರ್ಯೋದ್ದೇಶ ಆಗಿರಿಸಿಕೊಂಡರು. ಈ ಪಥದಲ್ಲಿ ಅವರ ಸಾಧನೆಯೂ ಅದ್ವಿತೀಯವೆ ಎನ್ನಿಸುತ್ತದೆ.

ಹರಿದಾಸ ಆಂದೋಲನ ಪೂರಾ ಮತೀಯ ಯಾ ಧಾರ್ಮಿಕ ಆಂದೋಲನ ಆದರೂ, ಅದು ಪ್ರತಿಪಾದಿಸಿದ ಹರಿಭಕ್ತಿ, ವೈಷ್ಣವಧರ್ಮ ಜನಪ್ರಿಯವೆಂದೆನಿಸಿ ಕೊಂಡದ್ದು ಮಾತ್ರ ಅಲ್ಲ, ಉತ್ತರ ಭಾರತದಲ್ಲೆಡೆ ಪಸರಿಸಿ, ವಿಷ್ಣುಭಕ್ತಿಯನ್ನು ಪ್ರಸಾರ ಮಾಡಿತು. ಮಧ್ವಾಚಾರ್ಯರ ಪ್ರಭಾವಕ್ಕೊಳಗಾದ ವಲ್ಲಭಾಚಾರ್ಯರ ಭಕ್ತಿ ಪಂಥ, ರಾಜಾಸ್ಥಾನದ ಮೀರಾಳ ರಾಧಾಕೃಷ್ಣ ಭಕ್ತಿಪಂಥ, ಕಬೀರ, ಸಂತ ಜ್ಞಾನ ದೇವ, ಅಸ್ಸಾಮಿನ ಶಂಕರದೇವ-ಮಾಧವ ಕಂಡಲಿ, ಅವರ ಏಕನಾಮ ಶರಣಪಂಥ-ಭಾಗವತ ಗ್ರಂಥಪ್ರಸಾರ, ಬಂಗಾಳದ ಶ್ರೀಚೈತನ್ಯರು, ಹೀಗೆ ವಿಷ್ಣುಭಕ್ತಿಯ ಮೂಲ ಸೆಲೆ ಆಚಾರ್ಯ ಮಧ್ವರಿಂದ ಪರಿಷ್ಕೃತಗೊಂಡು ಬಂದದ್ದು ತಾನೆ ತಾನಾಗಿ ಪ್ರಸಾರ ಆಗಲು ಪ್ರಮುಖ ಕಾರಣ, ಅಲ್ಲಿರುವ ಭಕ್ತಿಯ ಹಾದಿ ಅದೇ ಮುಕ್ತಿಗೆ ಹಾದಿಯೆಂಬ ಅಚಲ ನಂಬುಗೆ. ಚೈತನ್ಯರಂಥವರು ಭಕ್ತಿಯೊಂದಿಗೇ ಸಮಾಜ ಸುಧಾರಣೆಗೂ ಹೋರಾಡಿದರು. ಮೇಲೆ ನಡೆದ ಚರ್ಚೆಗಳಿಂದಾಗಿ ಹರಿದಾಸ ಆಂದೋಲನವೆಂದು ಹರಿದಾಸರ ಭಕ್ತಿಪಂಥವನ್ನು ಕರೆಯುವುದರಲ್ಲಿ ವೈಶಿಷ್ಟ್ಯತೆ ಇದೆ ಎಂಬುದು ತಿಳಿಯ ಬರುತ್ತದೆ. ಇದು ಕೇವಲ ಕಲ್ಪನೆಯೆನಿಸದೆ, ವಸ್ತುನಿಷ್ಠ ಸತ್ಯವೂ ಆಗಿದೆ.

ಹರಿದಾಸ ಆಂದೋಲನದ ಸಮಯದಲ್ಲಿ ಜಗತ್ತಿನ ಅನೇಕ ಕಡೆ ಧಾರ್ಮಿಕ, ಸುಧಾರಣಾ ಚಳವಳಿ (renaissance) ; ಜನ ಜಾಗೃತಿಯ ಆಂದೋಲನ ನಡೆದವು. ಯೂರೋಪ್‌ನಲ್ಲಿ ಕ್ರೈಸ್ತಧರ್ಮದಲ್ಲಿ ರೋಮನ್ ಕ್ಯಾಥೊಲಿಕರ ವಿರುದ್ಧ ಪ್ರತಿ ಭಟಿಸಿದ ಮಾರ್ಟಿನ್ ಲೂಥರನ್ ಪಾಟಸ್ಟೆಂಟ್ ಪಂಥ ನಡೆಸಿದ ಆಂದೋಲನ, ಭಕ್ತಿಯ ಯಾ ಧರ್ಮದ ಆಂದೋಲನ ಮಾತ್ರವಲ್ಲದೆ, ಧರ್ಮ ಪರಂಪರೆಯನ್ನು ಮತದ ತಿರುಳನ್ನು ಶ್ರೀಸಾಮಾನ್ಯನಿಗೂ ತಿಳಿವು ಆಗಿಸುವ ಜಾಗೃತಿಯ ಆಂದೋಲನವೇ ಸರಿ. "ವರ್ಗರಹಿತವಾದ ಸಮಾನತೆಯ ಮಾನವತಾವಾದ ಯೂರೋಪಿನ ನವಜಾಗೃತಿ ಯಿಂದ ಲೋಕಕ್ಕೆಲ್ಲ ಹರಡಿದವು.... .... .... ಕೇವಲ ಪಾರಲೌಕಿಕ ಚಿಂತನೆ, ಆದರ್ಶ ಚಿಂತ್ತ, ಕಲ್ಪನಾ ವಿಲಾಸಗಳಿಂದ ಕೂಡಿದ ಆಸ್ಥಾನ ಪಂಡಿತ ಸಾಹಿತ್ಯಕ್ಕೆ ಬದಲು, ನಿತ್ಯದ ಐಹಿಕ ಜೀವನಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಕುರಿತ ಜನಸಾಮಾನ್ಯರಿಗೂ ತಿಳಿಯು ವಂತಹ ಸರಳ ಭಾಷೆಯ ಸಾಹಿತ್ಯ ಪ್ರಾಧಾನ್ಯಕ್ಕೆ ಬಂದಿತು."[39] ಮತೀಯವಾಗಿಯಂತೂ ಮೊದಲೆ ತಿಳಿಸಿದಂತೆ, ಪೋಪರ ನಿರಂಕುಶಾಧಿಕಾರ ಧಿಕ್ಕರಿಸಿದ ಧಾರ್ಮಿಕ ಆಂದೋಲನ ಬೈಬಲನ್ನೆ ಪರಮ ಪ್ರಮಾಣವಾಗಿ ಅಂಗೀಕರಿಸಿತು. ನಿರಾಡಂಬರ ದೈವಭಕ್ತಿ, ಧಾರ್ಮಿಕ ಸುಧಾರಣೆ, ಜನಸಾಮಾನ್ಯರ ಹಿತಚಿಂತನೆ-ಜಗತ್ತಿನ ಅನೇಕೆಡೆ ನಡೆದ ಚಿಂತನೆ. "16ನೆ ಶತಮಾನದ ಮಾರ್ಟಿನ್ ಲೂಥರ್ ತಂಡದ ಧಾರ್ಮಿಕ ಕ್ರಾಂತಿ, ಮಧ್ಯ ಕಾಲೀನ ನಂಬುಗೆಗಳ ರಾಜಗದ್ದುಗೆ, ಮಠದ ಗದ್ದುಗೆಗಳನ್ನೇ ಅಲ್ಲಾಡಿಸಿ ಮುರಿದು ಹಾಕಿದವು. ಸ್ತೋತ್ರ ಸಾಹಿತ್ಯ ಒಂದು ಸ್ವತಂತ್ರ ಪ್ರಕಾರವಾಗಿಯೆ ಬೆಳೆಯಿತು."[40]

ಒಟ್ಟಿನಲ್ಲಿ ಈ ಸಮೀಕ್ಷೆಯಿಂದ ಒಂದು ಅಂಶ ವ್ಯಕ್ತವಾಗುತ್ತದೆ. ವಿಶ್ವದಲ್ಲಿ ಯುಗಧರ್ಮವೊ ಎಂಬಂತೆ ಎಲ್ಲ ದೇಶಗಳಿಗೂ ಸಮಾನವಾದ ಕೆಲವು ಸಾಹಿತ್ಯದ

ಒಲವುಗಳೂ (trends) ಮತ್ತು ಆಂದೋಲನಗಳೂ (movements) ಇರುವುದೆ ವೈಶಿಷ್ಟ್ಯ. ಸಾಹಿತ್ಯಚರಿತ್ರಕಾರರ ಅಭಿಮತದಂತೆ, "....... ಜನತೆಯ ನಿತ್ಯ ಬಳಕೆ ಭಾಷೆಯ ಪ್ರೀತಿ ಬೆಳೆದು ಅವುಗಳ ಪರಿಷ್ಕರಣ ಮತ್ತು ಪುಷ್ಟಿಗಳಿಗೆ ಹೆಚ್ಚು ಗಮನ ಹರಿಯಿತು.......... ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಆದ ಹಾಗೆ ಸಾಹಿತ್ಯದಲ್ಲೂ ಜನತಾ ಜಾಗೃತಿಯಾಗಿ ಪಂಡಿತ ಭಾಷೆ-ಸಾಹಿತ್ಯ ಪ್ರಾಶಸ್ತ್ಯ ಹೋಗಿ ಜನತಾ ಭಾಷೆ ಸಾಹಿತ್ಯಗಳಿಗೆ ಪ್ರಾಧಾನ್ಯತೆ ಬಂದಿತು....... ಅಂಧಶ್ರದ್ಧೆಯ ಬದಲು ವೈಚಾರಿಕತೆ, .........."[41] ಹೀಗೆ ನಮ್ಮ ನಿಟ್ಟಿಗನುಕೂಲ ಆಗುವ ಈ ಯುಗದ ಕೆಲವು ಅಂಶಗಳಿವು.

ಮೇಲೆ ಕಾಣಿಸಿರುವ ಸವಿಶಾಕ್ಷೆ ಹರಿದಾಸ ಆಂದೋಲನದ ವೈಶಿಷ್ಟ್ಯವನ್ನು ಸ್ಪಷ್ಟೀಕರಿಸುತ್ತದೆ.

## ಹರಿದಾಸ ಪಂಥ ಆಂದೋಲನ ಆದ ಬಗೆ

ಶ್ರೀಪಾದರಾಜರ ಶ್ರೀಕಾರದಿಂದಾರಂಭಗೊಂಡ ಹರಿದಾಸ ಭಕ್ತಿಪಂಥ ಕ್ರಮೇಣ ಅವರ ಪ್ರಿಯ ಶಿಷ್ಯರಾದ ವ್ಯಾಸರಾಯರ ಕಾಲದಿಂದ ಒಂದು ಆಂದೋಲನವೆ ಆಗಿ ರೂಪುಗೊಂಡಿತು. ಇದು ಪ್ರಧಾನತಃ ಭಕ್ತಿಯ ಆಂದೋಲನವಾದರೂ, ಕನ್ನಡ ಸಾಹಿತ್ಯದಲ್ಲೂ ಹೊಸ ಆಂದೋಲನವನ್ನೆ ನಡೆಸಿತು. ಹರಿಭಕ್ತಿ ಪ್ರಸಾರ, ವೈಷ್ಣವ ಧರ್ಮ-ಮಧ್ವಮತ ತತ್ವ ಪ್ರತಿಪಾದನೆ, ಭಕ್ತಿಯ ವೈವಿಧ್ಯ, ಹೀಗೆ ಭಕ್ತಿ ಸ್ವರೂಪದ ಆಂದೋಲನ ನಡೆದರೆ, ಕನ್ನಡ ಸಾಹಿತ್ಯಕ್ಕೆ ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತನಾಮ, ದಂಡಕ, ಮುಂತಾದ ಹೊಸ ಛಂದೋರೂಪವಿತ್ತು ಸಾಹಿತ್ಯಾಂದೋಲನವೂ ಆದದ್ದು ಹರಿದಾಸ ಆಂದೋಲನದ ದ್ವಿಮುಖ ವೈಶಿಷ್ಟ್ಯವೆನ್ನಬಹುದು.

ಜನಗಳಲ್ಲಿ ಪ್ರಚಲಿತವಿದ್ದ ಅನೇಕ ನಂಬುಗೆ, ವಿವಿಧ ಕ್ಷುದ್ರ ದೇವತೋಪಾಸನೆ, ತಂತ್ರಪದ್ಧತಿ, ಅಜ್ಞಾನ-ಇವುಗಳನ್ನು ತೊಡೆದು ಹಾಕಲು ಕನಕದಾಸನಂಥ ಅರಿವಿನ ಬೆಳಕಿನ ನೆಲೆಯನ್ನರಿತ ಹರಿದಾಸರು ಕಂಕಣಬದ್ಧರಾದದ್ದು, ಅದಕ್ಕಾಗಿ ಶ್ರಮಿಸಿದುದು ಈ ಆಂದೋಲನದ ವಿಶಿಷ್ಟಗುಣಗಳಲ್ಲೊಂದು.

ಯಾವುದೇ ಒಂದು ಪಂಥ, ಪಥ ನಿರ್ಮಿತಿಯಿಂದ ಆಂಕುರಿಸಿದ ಸಂಘಟನೆ, ಆ ಸಂಘದ ಧ್ಯೇಯಕ್ಕಾಗಿ ಮುಂದುವರಿಯುತ್ತವೆ. ಸಂಘಟನೆ ಬೆಳೆದಂತೆ, ಆ ಪಂಥದ ವ್ಯಾಪ್ತಿಯೂ ವಿಶಾಲವಾಗುತ್ತದೆ. ಇದು ಪರಂಪರಾನುಗತವಾಗಿ ತಲೆಯಿಂದ ತಲೆಗೆ ಬೆಳೆಯುವ ಸಾಧ್ಯತೆಯೂ ಉಂಟು. ಇದಕ್ಕೆ ಹರಿದಾಸ ಭಕ್ತಿ ಪಂಥವೆ ನಿದರ್ಶನ. ೧೪ನೆ ಶ.ದಲ್ಲಿ ಆರಂಭಗೊಂಡ ಈ ಭಕ್ತಿಪಂಥ ಕ್ರಮೇಣ ಬೆಳೆದು, ಜನಪ್ರಿಯ ಆದಂತೆ, ಅನೇಕರು ಹರಿದಾಸ ದೀಕ್ಷೆ ಪಡೆದು ಹರಿದಾಸರಾಗಿ ಭಕ್ತಿ ಪ್ರಚಾರ ತತ್ಪರರಾದರು. ಜತೆಗೇ, ಸಮಾಜೊ-ಧಾರ್ಮಿಕರಂಗಗಳಲ್ಲಿಯೂ ಸಕ್ರಿಯಾತ್ಮಕ ಪಾತ್ರ ವಹಿಸಿದರು. ಸಮಾಜದ ಓರೆಕೋರೆ ತಿದ್ದುವ ಪ್ರಯತ್ನ ಮಾಡಿದುದಲ್ಲದೆ, ತಮ್ಮ

ಧ್ಯೇಯ ಆದ ವೈಷ್ಣವ ಧರ್ಮವನ್ನೂ ಪ್ರಸಾರ ಮಾಡಿದರು. ಇದು ೧೯ನೆ ಶ.ದಲ್ಲಿ ಜಗನ್ನಾಥದಾಸರವರೆಗೂ ಬೆಳೆದಿದೆ. ಜಗನ್ನಾಥದಾಸರ ಅದ್ಭುತ ಸಂಘಟನಾ ಶಕ್ತಿಯಿಂದ ಶಿಷ್ಯ ಪ್ರಶಿಷ್ಯ ಪರಂಪರೆ ಮುಂದುವರೆದು, ಇನ್ನೂ ಅಲ್ಲಲ್ಲಿ ಎಲ್ಲೋ ಮಿನುಗುತ್ತಲೆ ಇದೆ. ಈ ರೀತಿ ಪೂಜಾ ಕಾಲದ ಒಂದು ಪೂಜಾದ್ರವ್ಯ ಆಗಿ ಒಡಮೂಡಿದ ಭಕ್ತಿಪಂಥ, ಕ್ರಮೇಣ ಒಂದು ಆಂದೋಲನ ಸ್ವರೂಪವನ್ನೆ ತಳೆದದ್ದು ವೈಶಿಷ್ಟ್ಯ ಎನಿಸುತ್ತದೆ.

ಮೊದಲೆ ತಿಳಿಸಿದಂತೆ, ಹರಿದಾಸ ಪಂಥ ಆಂದೋಲನ ಆಗಿ ಬೆಳೆಯಲು ಇನ್ನೊಂದು ಕಾರಣ, ಸಂಸ್ಕೃತ ಪ್ರಿಯರಾಗಿದ್ದು ಪಂಡಿತರು–ಪಂಡಿತ–ಅರಸೊತ್ತಿಗೆಯ ಮಾನ್ಯ ಆಗಿದ್ದ ಆಚಾರ್ಯಕೃತ ಧಾರ್ಮಿಕ ಗ್ರಂಥಗಳ ಸಾರ, ಸಾಮಾನ್ಯ ಜನತೆಗೂ ಅರ್ಥ ಆಗಿಸಿ, ಆ ಮೂಲಕ ಅವರಲ್ಲಿ ಭಕ್ತಿ-ವಿಶ್ವಾಸ ಪ್ರೇರಿಸಿ ತಮ್ಮೊಂದಿಗೆ ತಮ್ಮ ಪಥದಲ್ಲಿ ತೊಡಗಿಸಿಕೊಳ್ಳುವ ಜನಪ್ರಿಯತೆಗಳಿಸುವ ಹರಿದಾಸರ ಮನೋವೈಶಾಲ್ಯ.

ಹರಿದಾಸ ಆಂದೋಲನದಲ್ಲಿ ಮತಶ್ರದ್ಧೆಯ ಛಲವಿಲ್ಲವೆ ಎಂದಲ್ಲ. ಖಂಡಿತ ಇದ್ದೇ ಇದೆ. ಅದು ಒಮ್ಮೊಮ್ಮೆ-ಕೇವಲ ಮಾಧ್ವ ಮತವೊಂದೇ ಶ್ರೇಷ್ಠಮತ ವೆಂದೆನ್ನುವಷ್ಟರ ಮಟ್ಟಿಗೆ ಹೋಗುತ್ತದೆ. ವಿಜಯದಾಸರ ನೇತೃತ್ವದಲ್ಲಿ ಮುಂದುವರಿದ ದಾಸಸಾಹಿತ್ಯದ ಎರಡನೆ ಘಟ್ಟದ ಹರಿದಾಸ ಪರಂಪರೆಯವರಲ್ಲಿ. ಇದಕ್ಕೆ ಕಾರಣ, ಬಹುಶಃ ಆಗ್ಗೆ ಇದ್ದ ಮುಸ್ಲಿಂ ಪ್ರಭಾವ, ಮತಾಂತರ ಪರಿಸರ. ಇದರ ಜತೆ ನಾಸ್ತಿಕ ಮತಗಳ ಖಂಡನೆ ಹರಿದಾಸ ಆಂದೋಲನದ ಉದ್ದೇಶ. ಹರಿದಾಸ ಆಂದೋಲನ ಮತೀಯ ಎಂಬುದಕ್ಕಿಂತ ಮಿಗಿಲಾಗಿ ಭಕ್ತಿಯ ಆಂದೋಲನವೆನ್ನಲು ಇನ್ನೂ ಒಂದು ಕಾರಣ, ಅವರು ಕೆಂಡುಕೊಂಡ ಪ್ರಚುರಪಡಿಸಿದ ಸಗುಣೋಪಾಸನೆ. ಭಗವಂತನ ಸಾಕಾರ ರೂಪು ಸಾಮಾನ್ಯರಲ್ಲಿಯೂ ಭಕ್ತಿಸಾಧಕ. ರಾಮಾನುಜರು ವಿಷ್ಣು ದೇವಾಲಯ ಗಳನ್ನು ನಿರ್ಮಾಣ ಮಾಡಿದ್ದು ಸಗುಣೋಪಾಸನೆ, ಭಗವಂತನ ವಿಗ್ರಹರೂಪ ಭಕ್ತಿಯ ಪಾಥೇಯರ ಮನದಲ್ಲಿ ನೆಲಸಲಿ, ಎಂಬ ಉದ್ದೇಶದಿಂದಲೇ ಇದನ್ನು ಹರಿದಾಸರು ಮುಂದುವರಿಸಿದರು.

ಹರಿದಾಸರ ದಾಸಕೂಟ-ಹಾಗೂ ಪಂಡಿತ ಮಾನ್ಯ ವ್ಯಾಸಕೂಟಕ್ಕೂ ಈ ಕೆಲವಾರು ಆಂದೋಲನದ ಒಲವಿನಿಂದಾಗಿ (trend) ಪರಸ್ಪರ ಸಂಘರ್ಷವಿದ್ದೆ ಇತ್ತು ಎಂದೆನಿಸುತ್ತದೆ. ಪುರಾಣ-ಉಪನಿಷತ್ತು ಪರಿಚಯವನ್ನು ತಮ್ಮ ಕೃತಿಗಳಲ್ಲಿ ಸಮರ್ಥ ರೀತಿಯಲ್ಲಿ ಬಳಸಿದ ಹರಿದಾಸರು ತಾತ್ವಿಕವಾದ ನಿಲುವು ತಳೆದಿದ್ದು ಆದರಿಂದಲೆ. ಇದರಿಂದ ವ್ಯಾಸಕೂಟದವರಿಗೆ ಹರಿದಾಸರ ಮೇಲೆ, "ಕೂಸೀಮಗದಾಸ" (ಶ್ರೀನಿವಾಸಾ ಚಾರ್ಯರು ಅನಂತರ ಜಗನ್ನಾಥದಾಸರಾದವರು–ವಿಜಯದಾಸರನ್ನು ಕುರಿತು ನುಡಿದದ್ದು) ಎಂಬಂತೆ ದಾಸಕೂಟ ಕುರಿತ ತಾತ್ಸಾರವಿತ್ತು. ವ್ಯಾಸಕೂಟದವರಾದವರು ವ್ಯಾಕರಣ-ತರ್ಕದ ನೆರವಿನಿಂದ ಮಧ್ವತತ್ವ ಪ್ರಮೇಯಂವನ್ನೆಲ್ಲ ಅಧ್ಯಯನವನ್ನು ಮಾಡಿ ಶ್ರುತಿಸ್ಮೃತಿಗಳಿಗೊಪ್ಪುವಂತೆ ಶಾಸ್ತ್ರೀಯವಾಗಿ ಸಂಸ್ಕೃತದಲ್ಲಿ ಪ್ರವಚನ ಮಾಡುತ್ತಿದ್ದವರು. ಪ್ರಮುಖವಾಗಿ ಪುರಾಣಗಳನ್ನ ಅವಲಂಬಿಸಿ, ಸ್ಥೂಲವಾಗಿ ಸಿದ್ಧಾಂತ ಪ್ರಮೇಯ

ಗಳನ್ನು ಗುರುಮುಖದಿಂದಲೊ, ಗ್ರಂಥಗಳನ್ನು ನೋಡಿದುದರಿಂದಲೊ ತಿಳಿದು ತಮ್ಮದಾಗಿಸಿಕೊಂಡು ಜನಸಾಮಾನ್ಯರಿಗೂ ಅರ್ಥ ಆಗುವಂತೆ ನಾಣ್ಣುಡಿ, ಕೀರ್ತನಗಳ ಮೂಲಕ ಪ್ರಚಾರ ಮಾಡುತ್ತಿದ್ದ ಹರಿದಾಸರು ಎಂಬರೆ ವ್ಯಾಸಕೂಟದವರಿಗೆ ತಾತ್ಸಾರವೆ. ಪುರಂದರದಾಸರು ಹರಿದಾಸಕೂಟದ ಅಗ್ರಗಣ್ಯರು. ಅವರೆದುರಲ್ಲೆ ಈ ಒಡಕು ಹುಟ್ಟಿತು. ವ್ಯಾಸರಾಯರು ಉಭಯತ್ರರಿಗೂ ಆದ್ಯ ಪ್ರವರ್ತಕರಾದರಲ್ಲದೆ ಎರಡೂ ಗುಂಪಿನವರ ಆದರಕ್ಕೆ ಪಾತ್ರರಾದವರು. ವಾದಿರಾಜರು, ವಿಜಯೀಂದ್ರತೀರ್ಥರು ಮೊದಲಾದ ಯತೀಶ್ವರರು ವ್ಯಾಸರಾಯರ ಪಂಡಿತ ಶಿಷ್ಯರಾದರೆ, ಪುರಂದರದಾಸರು, ಕನಕದಾಸರು, ವೈಕುಂಠದಾಸರು, ಮೊದಲಾದವರು ಅವರ ಹರಿದಾಸ ಶಿಷ್ಯರು. ವಿಜಯದಾಸರು ತಮ್ಮ ಒಂದು ಸುಳಾದಿಯಲ್ಲೊಂದೆಡೆ ವ್ಯಾಸಕೂಟದವರನ್ನು "ವೇದ ವೇದಾಂತರು" ಎಂದು ಹೇಳಿ, ದಾಸಕೂಟದವರನ್ನು "ಮದವೇರಿದ ಕರಿವಿಂಡಿ ನೇತೆ ದುರುಳರೆದೆಯ ಮೆಟ್ಟಿ, ದುಸ್ಸಂಗವನು ಹರಿದು ಹರಿಸರ್ವೋತ್ತಮವೆನುತಲಿ ಕೂಗುತಲಿ ಹರಿದಾಡಿ, ಒಡ್ಡಾಡಿ, ಬೀದಿ ಬೀದಿಗಳಲಿ ತಿರುಗುತಲಿಪ್ಪರು ಕರಿಗಳಂದದಲಿ" ಎಂದು ವರ್ಣಿಸಿದ್ದಾರೆ. ವ್ಯಾಸಕೂಟದವರ ದೃಷ್ಟಿಯಲ್ಲಿ ಪುರಂದರದಾಸರೆಸಗಿದ ಅಪಚಾರವೆಂದರೆ, ಮಾಧ್ವ ಸಿದ್ಧಾಂತದ ಪ್ರಮೇಯಗಳನ್ನು "ಪ್ರಾಕೃತ ಗೀತೆಯಲಿ" ಹೇಳಿದ್ದು. ಈ ಬಗೆಯ ಕನ್ನಡ ದ್ವೇಷ ನಮ್ಮ ಪಂಡಿತ ವರ್ಗದಲ್ಲೂ ಇದ್ದಿತು. ಅದರ ಮೇಲೆ ೧೫-೧೬ನೆ ಶತಮಾನದ ಮಾತೇನು ? ಇನ್ನೂ ಬಲಿಷ್ಠವೆ ಆಗಿದ್ದಾತು. ಹರಿದಾಸಕೂಟದವರ ಹೆಮ್ಮೆ-ಧ್ಯೇಯವೆ ಕನ್ನಡಾಭಿಮಾನ. ಇದಕ್ಕೆ ಅವರಿಗೆ ವಚನ ಕಾರರ ಪ್ರಭಾವ ಕಾರಣವೊ, ಶ್ರೀಪಾದರಾಜರಿಗೆ ಆಳ್ವಾರರ ಪ್ರಭಾವವೊ ಒಟ್ಟಾರೆ, ವಿಜಯದಾಸರು, ತಮ್ಮ ಗುರುಗಳಾದ ಶ್ರೀಪುರಂದರದಾಸರ ಸಾಹಿತ್ಯವನ್ನು "ಪಂಚಿನಿ ಮಧ್ವಹೃದಯವೆ ಪ್ರಾಕೃತ ಗ್ರಂಥವಿದು" ಎಂದು ಘೋಷಿಸುವಲ್ಲಿ ಅವರ ಕನ್ನಡ ಪ್ರೀತಿ ಸ್ಪಷ್ಟ ಆಗಿ ಗೋಚರಿಸಿದೆ. ಪುರಂದರದಾಸರಿಗೆ ಮಾನವತಾವಾದ ಬೇಕಾಗಿತ್ತೆ ವಿನಾ, ಕನಕದಾಸರಿಗೆ ಭಾಗವತ ಸಮನ್ವಯತೆಯ ಮಾರ್ಗ ಪ್ರಿಯವಾಗಿತ್ತೆ ವಿನಾ, ದುರ್ವಾದ ವಿಧ್ವಂಸನವನ್ನು ಅವರುಗಳು ಮುಖ್ಯ ವಿಚಾರವಾಗಿ ಪರಿಗಣಿಸಿರಲಿಲ್ಲ.

ಹರಿದಾಸಪಂಥ ಆಂದೋಲನದ ಸ್ವರೂಪ ತಳೆದು, ವಿಜಯದಾಸರ ಕಾಲದಿಂದ ಇನ್ನೂ ಶಾಸ್ತ್ರೀಯವೆ ಆಗಿಬಿಟ್ಟಿತೆಂಬುದು ಅವರ ಕೃತಿಗಳಿಂದ ತಿಳಿದು ಬರುವ ಅಂಶ. ಇದೂ ಆಂದೋಲನದ ವೈಶಿಷ್ಟ್ಯವೆ. ಒಂದು ಸಮೂಹ, ಬಣ, ಗುಂಪಿನ ಸಂಘಟನೆ ಒಂದು ಕಾರ್ಯೋದ್ದೇಶಕ್ಕೆ ತನ್ನನ್ನು ತಾನು ಅರ್ಪಿಸಿಕೊಂಬುದೆ ಆಗಿರುತ್ತದೆ. ಹರಿದಾಸರು ಮಾಡಿದ್ದು ಇದನ್ನೆ. ಅಂತೆಯೆ ವಿಜಯದಾಸರು ತಮ್ಮ ಕೃತಿಗಳಲ್ಲಿ ಮಧ್ವ ಮತ ಪ್ರಮೇಯಗಳ ಪ್ರತಿಪಾದನೆ, ಸಮರ್ಥನೆಯನ್ನೆ ಪ್ರಧಾನ ಆಗಿ ಕಂಡರಿಸಿದರು. ಇದು ತನ್ನ ಪರಾಕಾಷ್ಠೆ ತಲುಪಿದ್ದು ಜಗನ್ನಾಥದಾಸರ "ಶ್ರೀಮದ್ಧರಿಕಥಾಮೃತಸಾರ" ಗ್ರಂಥದಲ್ಲಿ ಹರಿಯ ಕಥೆಯನ್ನು ತಿಳಿಸುವ ಸುಧೆಯ ಸಾರವಿದಾದರೂ ಪ್ರಧಾನತಃ ಮಧ್ವಮತ ತತ್ವ, ಪ್ರಮೇಯ ಪ್ರತಿಪಾದನೆಗಾಗಿ ಒರೆದ ಷಟ್ಪದಿ ಗ್ರಂಥ.

ಮಲಗಿ ಪರಮಾದರದಿ ಪಾಡಲು । ಕುಳಿತು ಕೇಳುವ ಕುಳಿತು ಪಾಡಲು ।
ನಿಲುವ ನಿಂತರೆ ನಲಿವ ನಲಿದರೆ ಒಲಿವೆ ನಿಮಗೆಂಬ ।
ಸುಲಭನೋಹರಿ ತನ್ನವರ ನರ ।
ಗಳಿಗೆ ಬಿಟ್ಟಗಲನೊರಮಾಧವ
ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ ॥

ಎಂದು ಭಕ್ತಿಪಂಥದಿಂದ ದೈವಸಾಕ್ಷಾತ್ಕಾರ ಸುಲಭವೆಂತೆಂದೆಂಬುವ ಅರಿವು ಮಾಡಿಕೊಡುವುದರ ಜತೆಗೇ ಗಹನವಾದ ತತ್ವಗಳನ್ನೂ, ಮಧ್ವ ಸಿದ್ಧಾಂತ ಪ್ರಮೇಯಗಳನ್ನೂ ಪ್ರತಿಪಾದಿಸಿದ್ದಾರೆ. ಜಗನ್ನಾಥದಾಸರಿಂದಾಗಿ ಹರಿದಾಸ ಆಂದೋಲನದ ಸಂಘಟನೆಯು ಬಿಗುವು, ಸತ್ವ, ಔನ್ನತ್ಯ ಇನ್ನೂ ಹೆಚ್ಚುವಂತಾಯಿತು. ಇಷ್ಟಲ್ಲದೆ ಜಗನ್ನಾಥದಾಸರು ಇಡೀ ಕರ್ನಾಟಕವನ್ನೆಲ್ಲ ಸುತ್ತಿ ಶಿಷ್ಯ ಪರಂಪರೆಯನ್ನು ತಯಾರು ಮಾಡಿದ್ದು ಆಂದೋಲನ ಪಥನಿಲ್ಲದೆ, ಮುಂದುವರಿಯಲು ಸಾಧ್ಯವಾಯಿತು. ಜಗನ್ನಾಥದಾಸರ ಅನಂತರದಲ್ಲಿ ಹರಿದಾಸ ಆಂದೋಲನ ತನ್ನ ಇಳಿಮೊಗ ಕಂಡರೂ ಪ್ರಾಣೇಶವಿಠಲರ ಹಾಗೂ ವೇಣುಗೋಪಾಲವಿಠಲರ ಶಿಷ್ಯ ಪ್ರಶಿಷ್ಯರ ಮೂಲಕ ಮುಂದುವರಿಯಿತು. ಇನ್ನೂ ಹರಿದಾಸ ಪರಂಪರೆ ಮುಂದುವರೆದಿದೆ. ಈ ಕೆಲವಾರು ನಿಟ್ಟಿನ ಸಮೀಕ್ಷೆ, ವಿವೇಚನೆಗಳಿಂದ ಹರಿದಾಸಭಕ್ತಿಪಂಥ ಆಂದೋಲನವಾಗಿ ನಡೆದು ಬಂದ ಹಾದಿ ನಮಗೆ ತಿಳಿಯಬರುತ್ತದೆ.[42] ಹರಿದಾಸ ಆಂದೋಲನ ಇಪ್ಪತ್ತರ ಶತಕದವರೆಗೆ ಮುಂದು ವರೆದದ್ದರ ಬಗ್ಗೆ ಹಾಗೂ ಕೆಲವು ಮಹಿಳಾ ಹರಿದಾಸ ಕೃತಿಕಾರರ ಬಗ್ಗೆ ಕೆಲವು ಮಾತು ಗಳನ್ನು ಪ್ರತ್ಯೇಕವಾಗಿಯೆ ತಿಳಿಸಬೇಕಾದ್ದು ಸೂಕ್ತವೆಂದೆನ್ನಿಸಿದೆ.

## ಮುಂದುವರಿದ ಹರಿದಾಸ ಆಂದೋಲನ

ಪ್ರತಿಯೊಂದು ಆಂದೋಲನಕ್ಕೂ ಚಲನೆ, ಪ್ರೇರಣೆ, ಧ್ಯೇಯ ಪ್ರತಿಪಾದನೆ, ಆದರ್ಶವನ್ನು ಪ್ರಸಾರ ಮಾಡುವುದು, ಜನತೆಯನ್ನು ತೊಡಗಿಸಿಕೊಂಬ ಕ್ರಿಯಾಶಕ್ತಿ (involvement) ಅದರ ವಿಶಿಷ್ಟ ಗುಣವೆ ಎಂಬುದನ್ನು ಮೇಲಿನ ಸಾಲುಗಳಲ್ಲಿ ತಿಳಿಯಪಡಿಸಿದೆ. ಶ್ರೀಪಾದರಾಜರು ಮೊದಲ ಪ್ರವರ್ತಕರಾಗಿ ಆರಂಭಿಸಿದ ಈ ಪರಂಪರೆ ತನ್ನ ಮೊದಲ ಹಾಗೂ ದ್ವಿತೀಯ ಹಂತಗಳಲ್ಲಿ ೧೯ನೆ ಶತಕದವರೆಗೂ ಮುಂದು ವರಿದಿದೆ. ಹರಿದಾಸ ಆಂದೋಲನಕ್ಕಿರುವ ಅಂತಃಪ್ರೇರಣೆಯ ಚೇತನ, ಭಕ್ತಿ-ಅದರ ಪ್ರತಿಪಾದನೆ, ಮಧ್ವಮತ ಪ್ರಸಾರ ಮುಂತಾದ ವೈಶಿಷ್ಟ್ಯಗಳನ್ನು ನಾವು ಮನಗಾಣ ಬಹುದಾಗಿದೆ. ಅದರೊಂದಿಗೆ ದಾಸಸಾಹಿತ್ಯದ ಎರಡನೆಯ ಹಂತದ ಶ್ರೀವಿಜಯ ದಾಸರಿಂದ ಮುಂದೆ ಶಾಸ್ತ್ರೀಯತೆಗೆ, ಶಾಸ್ತ್ರನಿಷ್ಠೆಗೇ ಹೆಚ್ಚಿನದಾದ ಪ್ರಾಮುಖ್ಯ ದೊರೆತಿರುವುದು ಅವರ ಸುಳಾದಿಗಳಲ್ಲಿ ಹಾಗೂ ಅನಂತರ ಬಂದ ಗೋಪಾಲದಾಸರ, ಜಗನ್ನಾಥದಾಸರ ಕೃತಿಗಳಲ್ಲಿ ಸುಸ್ಪಷ್ಟ.

ಈ ಪರಂಪರೆ, ಹರಿದಾಸಪಂಥ-ಸಂಪ್ರದಾಯ, ಆಂದೋಲನ ಗತಿಯನ್ನು (speed of movement) ಮುಂದುವರಿಸಿದವರು ಜಗನ್ನಾಥದಾಸರು. ೧೮ನೆ ಶತಮಾನದ ಉತ್ತರಾರ್ಧದಿಂದ ಮುಂದುವರಿದ ಹರಿದಾಸ ಆಂದೋಲನ, ಜಗನ್ನಾಥದಾಸರಿಂದ ಪ್ರವರ್ತಿತಗೊಂಡಿತು. ಕರ್ನಾಟಕದಾದ್ಯಂತ ಸಂಚರಿಸಿದ ಶ್ರೀದಾಸರು ಅನೇಕ ಶಿಷ್ಯರನ್ನು ಪಡೆದದ್ದು ಮಾತ್ರ ಅಲ್ಲ ಹೋದೆಡೆಗಳಲ್ಲೆಲ್ಲ ಹರಿಭಕ್ತಿ-ಮಧ್ವಮತ ಪ್ರಸಾರ ಮಾಡಿದರು. ಅವರ ಪ್ರಭಾವಕ್ಕೊಳಗಾದ ಅನೇಕರು ಹರಿದಾಸದೀಕ್ಷೆ ಪಡೆದರು.[43] ಅವರಲ್ಲಿ ಪ್ರಾಣೇಶವಿಠಲರು (ಲಿಂಗಸೂಗೂರು), ಗುರುಪ್ರಾಣೇಶವಿಠಲರು, ಶ್ರೀದವಿಠಲರು, (ಶ್ರೀಮದ್ಧರಿಕಥಾಮೃತಸಾರ ಗ್ರಂಥಕ್ಕೆ ಫಲಶ್ರುತಿ ಬರೆದಿರುವ ಕರ್ಜಗಿದಾಸಪ್ಪನವರು), ಗುರುಜಗನ್ನಾಥ ವಿಠಲರು ಹೀಗೆ ಅನೇಕರು ಪ್ರಮುಖರು. ಉತ್ತರ ಕರ್ನಾಟಕದಲ್ಲೆಲ್ಲ ಪ್ರಚಲಿತಗೊಂಡ ಹರಿದಾಸಪಂಥ ಭಕ್ತಿಸಂಪ್ರದಾಯ, ಮೈಸೂರು ಪ್ರಾಂತ್ಯಗಳೆಡೆಯೂ[44] ತನ್ನ ಪ್ರಭಾವ ಬೀರಿತೆನ್ನಲು ಇಲ್ಲೆಲ್ಲ ಆಗಿ ಹೋದ ಅನೇಕ ಹರಿದಾಸರೇ ನಿದರ್ಶನ. ಅವರಲ್ಲಿ ಕೆಲವರ ಬಗ್ಗೆ ಒಂದೆರಡು ಮಾತು ತಿಳಿಸುವುದು ಸೂಕ್ತವೆನಿಸುತ್ತದೆ.

ವಿಜಯದಾಸರ ಪೀಳಿಗೆಯಲ್ಲಿ ಬಂದ ವೇಣುಗೋಪಾಲದಾಸರು (ಪಂಗನಾಮದ ತಿಮ್ಮಣ್ಣನವರೆಂದೆ ಇವರನ್ನು ಕರೆವ ರೂಢಿಯಿತ್ತು) ಅನೇಕ ಪದ, ಸುಳಾದಿ ರಚಿಸಿರುವ ಹರಿದಾಸರು. ವೇಣುಗೋಪಾಲವಿಠಲ ಇವರ ಅಂಕಿತ. ಇವರಂತೆಯೆ ಹರಿದಾಸಪಂಥಕ್ಕೆ ತಮ್ಮನ್ನು ತಾವು ತ್ರಿಕರಣಪೂರ್ವಕ ತೊಡಗಿಸಿಕೊಂಡವರು ಅನೇಕರು. ಅವರಲ್ಲಿ ಪ್ರಮುಖರು ಹಾಗೂ ಇಂದೂ ಜನತೆಯ ಮನದಲ್ಲಿ ನೆಲೆನಿಂತಿರುವ ಕೆಲವರು ಹರಿದಾಸರನ್ನು ಹೆಸರಿಸಲಾಗಿದೆಯೆ ವಿನಾ ಇವರ ಕೃತಿಸಮೀಕ್ಷೆ ನಮ್ಮ ಅಧ್ಯಯನದ ವ್ಯಾಪ್ತಿಗೊಳಪಡದುದರಿಂದ ನಡೆಸಲಿಲ್ಲವೆಂದಷ್ಟೆ ವಿನಯಪೂರ್ವಕವಾಗಿ ತಿಳಿಸಬಯಸುತ್ತೇನೆ :

1. **ಅಣ್ಣಾವಧೂತರು :** ಇವರಿಗೆ ಬಡೆ ಅಣ್ಣಯ್ಯಾಚಾರ್ಯರೆಂದೂ ಹೆಸರು. 'ವಿಠಲವ್ಯಾಸ' ಅಂಕಿತದಲ್ಲಿ ಅನೇಕ ಕೃತಿ ರಚನೆ ಮಾಡಿರುವ ಇವರು ಕನ್ನಡ, ಸಂಸ್ಕೃತ, ಉರ್ದು–ಈ ಮೂರು ಭಾಷೆಗಳಲ್ಲಿಯೂ ಬರೆದಿರುವುದು ವೈಶಿಷ್ಟ್ಯವೇ ಆಗಿದೆ. ಯೋಗಿ, ಅವಧೂತರೂ ಹರಿದಾಸ ದೀಕ್ಷೆ ಸ್ವೀಕರಿಸಿರುವರೆನ್ನಲು ಅಣ್ಣಯ್ಯಾಚಾರ್ಯರೇ ಉದಾಹರಣೆ.

2. **ಸುರಪುರದ ಆನಂದದಾಸರು :** ಕಮಲೇಶವಿಠಲರಾಂಕಿತವಾದ ಆನಂದದಾಸರ ದೇವರನಾಮಗಳು ಇಂದು ಸಾಮಾನ್ಯವಾಗಿ ಎಲ್ಲರ ಮನೆ ಮನಗಳನ್ನೂ ತಲುಪಿವೆ. (ತಲುಪಲು ಧ್ವನಿಮುದ್ರಿಕೆಗಳು ನೆರವಾಗಿವೆ.) ಶ್ರೀ ರಾಘವೇಂದ್ರತೀರ್ಥರನ್ನು ಕುರಿತ, ಇವರ ಅನೇಕ ಹಾಡುಗಳು ಶ್ರುತಿ ಸುಭಗ ರಚನೆಯಾಗಿದ್ದು, ಭಕ್ತಿಯುತವಾದ ಭಾವಗೀತೆಗಳಾಗಿವೆ. ಸುರಪುರದ ಜಾಪಡಿ, ಬಹನಿ, ಮಟ್ಟು ಇವರ ಕಾಲದಿಂದಲೇ ಬಳಕೆಗೆ ಬಂದದ್ದು. ಬಹನಿ ಎಂಬುದೊಂದು ನೂತನ ಚಲಾವಣೆ, ಚಾಲೋಕು ಸುರಪುರದ

ದಾಸರೆಂದರೆ, ಗಾಯನದಲ್ಲಿ ಗಾಯನಾಚಾರ್ಯರು, ನ್ಯಾಯ, ವೇದಾಂತ, ಸಾಹಿತ್ಯ, ಶಾಸ್ತ್ರ ಪಾರಂಗತರು. ಕನ್ನಡ ನುಡಿಗಟ್ಟು, ರಚನೆಯಲ್ಲಿ ಅಷ್ಟೇ ಜಾಣ್ಮೆ ಭಾಷಾಪ್ರಭುತ್ವ.

ಆನಂದದಾಸರು, ವಿಜಯದಾಸರಂಥ ಪ್ರಖ್ಯಾತ ಹರಿದಾಸರ ಊರಾದ ಚೀಕಲಪರವಿಯವರು. ಅಶ್ವತ್ಥನಾರಸಿಂಹ ಕ್ಷೇತ್ರವೆಂದೇ ಪ್ರಸಿದ್ಧವಾದ ಈ ತಪೋಭೂಮಿಯಲ್ಲಿ ಹರಿದಾಸಸಾಹಿತ್ಯದ ಆದ್ಯ ಪ್ರವರ್ತಕರಾದ ಶ್ರೀ ಪಾದರಾಜ ಗುರುವರ್ಯರೂ ತಪಸ್ಸೆಯಾಚರಿಸಿ ಅಶ್ವತ್ಥನರಸಿಂಹನನ್ನು ಪ್ರತಿಷ್ಠಿಸಿದ್ದು. ಇಂಥ ಪುಣ್ಯ ಭೂಮಿಯಿಂದ ಬಂದ ಆನಂದದಾಸರು, ಸುರಪುರದ ರಾಜಾಚಾರ್ಯರೆಂಬಲ್ಲಿ ಗೀತೆ, ವೇದಾಂತದ ಅಧ್ಯಯನ ಮಾಡಿದರು.

ಈ ಸಮಯದಲ್ಲಿಯೆ ಜಗನ್ನಾಥದಾಸರ ಶಿಷ್ಯರಾದ ಶ್ರೀಶವಿಠಲಾಂಕಿತ ಹರಿದಾಸರು ಸುರಪುರಕ್ಕೆ ಬಂದುದು. ಆನಂದದಾಸರಿಗೆ ಅವರ ಮನದಲ್ಲಿ ಮೊದಲಿಂದ ಇದ್ದ ದಾಸರ ಕೃತಿಗಳ ಬಗೆಗಿನ ಹಗುರ ಭಾವನೆ ತೊಡೆದು ಹಾಕಿ ಅಲ್ಲಿ ಹರಿದಾಸಪಥ ಅನುಸರಿಸಲಾಶಯವನ್ನು ಬಿತ್ತಿದ್ದು ಒಂದು ಸತ್ಯಕತೆ. ಶ್ರೀಶದಾಸರಿಗೂ ಇದೇ ಬೇಕಾಗಿತ್ತು. ಆನಂದನಿಗೆ ಶುಭದಿನದಲ್ಲಿ ''ಕಮಲೇಶ ವಿಠಲ'' ನೆಂಬ ಅಂಕಿತವನ್ನು ನೀಡಿದರು. ಅಂದಿನಿಂದಾರಂಭವಾಯಿತು ಆನಂದದಾಸರ ಕೀರ್ತನ-ಕಥಾ ಪ್ರವಚನ, ದೇಶಪರ್ಯಟನ ಹರಿದಾಸ ಆಂದೋಲನಕ್ಕೆ ಒಟ್ಟಾರೆ, ವಿಶಿಷ್ಟ ಸೇವೆ ಸಲ್ಲಿಸಿದರು. ತಮ್ಮ ಜೀವಮಾನಪಲ್ಲ.[45] ಕರ್ನಾಟಕ ಭಕ್ತವಿಜಯದ ಕರ್ತೃ ಬೇಲೂರು ಕೇಶವದಾಸರ ತಂದೆ ಶ್ರೀ ವೆಂಕಟಸುಬ್ಬದಾಸರು ಸುರಪುರದ ಆನಂದದಾಸರ ಶಿಷ್ಯರು. ಗೀತೆಯನ್ನು ಕನ್ನಡಿಸಿರುವ ಆನಂದದಾಸರು ಇತ್ತೀಚಿನ ಹರಿದಾಸ ಪರಂಪರೆಯಲ್ಲಿ ತುಂಬ ಪ್ರಸಿದ್ಧರಾದವರು ಹಾಗೂ ಪರಮಭಕ್ತರು.[46] ''ರಮಾಸಮುದ್ರನ ಕುಮಾರಿನಿನ್ನಯ ಸಮಾನ ರ್‍ಯಾರಮ್ಮಾ'' ಎಂಬ ಇವರ ಈ ಕೃತಿ ಇಂದೂ ತುಂಬ ಜನಪ್ರಿಯವಾಗಿದೆ. ಹರಿಕಥಾ ಪ್ರವಚನ, ಕೀರ್ತನ ಕಲೆಯನ್ನು ಆರಂಭಿಸಿ, ಮುಂದುವರಿಸಿ, ಅದರಲ್ಲಿ ಸಿದ್ಧಿ ಪಡೆದುದರ ಮೂಲಕ ಹರಿದಾಸ ಆಂದೋಲನವನ್ನು ಮುಂದುವರೆಸಿದ ಯಶಸ್ಸು ಆನಂದದಾಸರದು. ಮೈಸೂರು ದೊರೆಗಳಾದ ಕೃಷ್ಣರಾಜ ಒಡೆಯರವರು ದಾಸರ ಗಾನ-ಕೀರ್ತನಕ್ಕೆ ಮಾರು ಹೋಗಿ, ವಿಶೇಷ ಆದರಣೆ ಮಾಡಿದರಂತೆ. ಆಗಿನ ಕಾಲದಲ್ಲಿ ಆಸ್ಥಾನದಲ್ಲಿದ್ದವರೂ ಘನಪಂಡಿತರು, ಗಾಯಕ ಮೈಸೂರು ಸದಾಶಿವರಾಯರು, ವೀಣೆಯ ಸಾಂಬಯ್ಯನವರು, ಆನಂದಾಳ್ವಾರರು, ಕುಣಿಗಲು ರಾಮಾಶಾಸ್ತ್ರಿಗಳು, ಹೀಗೆ, ಇದಾದ ನಂತರ, ಆನಂದದಾಸರಿಗೆ ಕಾಲಕ್ರಮೇಣ, ವೈರಾಗ್ಯ ಬಲಗೊಂಡು ಮಂತ್ರಾಲಯ ಕ್ಷೇತ್ರದಲ್ಲಿ ಶ್ರೀ ಇಭರಾಂಪುರ ಕೃಷ್ಣಾಚಾರ್ಯರೆಂಬ ಸತ್ಪುರುಷರ ಸಂಗದಲ್ಲಿ ಅನೇಕ ಕಾಲವಿದ್ದು ಶ್ರೀರಾಘವೇಂದ್ರತೀರ್ಥರ ದರ್ಶನ, ಕೃಪಾವಿಶೇಷಕ್ಕೆ ಪಾತ್ರರಾದ ಬಗ್ಗೆ ಅವರ ಕೃತಿಗಳೇ ಹೇಳುತ್ತವೆ.

3. ಸುರಪುರದ ಆನಂದದಾಸರಂತೆಯೆ[47] ಪ್ರಖ್ಯಾತರು ಮೊದಲಕಲ್ ಶೇಷದಾಸರು. ಆದಿಶಿಲಾ ಎಂದು ಪ್ರಖ್ಯಾತವಾದ ಗದ್ವಾಲ್ ಸಂಸ್ಥಾನಕ್ಕೆ ಸೇರಿದ ಪುಣ್ಯಕ್ಷೇತ್ರ ದಾಸರ ಜನ್ಮಸ್ಥಳ. ಕಾರಣಾಂತರದಿಂದ ಚಿಂತಲರೇವು ಎಂಬ ಸ್ಥಳದಲ್ಲಿ ವ್ಯಾಸರಾಯರಿಂದ ಪ್ರತಿಷ್ಠಿತ ಆಗಿರುವ ಮುಖ್ಯಪ್ರಾಣನ ಸೇವೆ ಹಾಗೂ ಕಠಿಣ ತಪಶ್ಚರ್ಯೆಯಲ್ಲಿ ತೊಡಗಿದ ಇವರಿಗೆ ಅವರ ಗುರುಗಳೆ ಆದ ಯೇಳಮೇಲೀ ಹಯಗ್ರೀವಾಚಾರ್ಯರೆಂಬುವರು ಸ್ವಪ್ನದಲ್ಲಿ ದರ್ಶನವಿತ್ತು ಹರಸಿದಂತಾಯಿತು. ಅನಂತರ ಶ್ರೀಆಂಜನೇಯಸ್ವಾಮಿಯ ಹಾಗೂ ಶ್ರೀರಾಮನ ಕೃಪೆಯೆಂಬಂತೆ, ಜನತೆಯ ಗೌರವ, ಮನ್ನಣೆಯೂ ದೊರೆತವು. "ಶ್ರೀಗುರುವಿಜಯವಿಠಲ"ರೆಂಬ ಅಂಕಿತವನ್ನು ಸ್ವಪ್ನದ್ವಾರಾ ಶ್ರೀವಿಜಯದಾಸರಿಂದಲೇ ಪಡೆದ ಮೊದಲ್‌ಕಲ್ ಶೇಷದಾಸರು ಅನೇಕ ಕೃತಿರಚನೆ ಮಾಡಿದ್ದಾರೆ. ಅರ್ಜುನನ ಅಂಶರೆಂದೂ, ಪಂಗನಾಮದ ತಿಮ್ಮಣ್ಣದಾಸರ ಇನ್ನೊಂದು ಜನ್ಮವೆ ಮೊದಲಕಲ್ ಶೇಷದಾಸರೆಂದೂ ಜನತೆ ಭಾವಿಸುತ್ತಾರೆ. ಹರಿದಾಸ ಆಂದೋಲನದ ವೈಶಿಷ್ಟ್ಯಗಳಲ್ಲಿ ಒಂದಾದ ಬಿಂಬೋಪಾಸನೆ ಶೇಷದಾಸರಿಗೆ ತುಂಬ ಪ್ರಿಯವಾಗಿತ್ತು. ಅವರು ಆದರ ಪಥವರಿತು ಆತ್ಮಾರಾಮರೆ ಆದರೆನ್ನುವುದು ಸೂಕ್ತ. ಶೇಷದಾಸರ ದಿನಚರಿಯ ಪುಟಗಳು ದೊರೆತಿವೆಯೆಂಬ ವಿಚಾರ, ಕೇಶವದಾಸರ ಗ್ರಂಥದಿಂದ ತಿಳಿಯಬರುವ ಅಂಶ. ಮೊದಲಕಲ್ಲಿನಲ್ಲಿ ಶ್ರಮವಹಿಸಿ ಕಟ್ಟಿಸಿದ ದೇವಾಲಯ ಇಂದೂ ಅನೇಕ ಭಕ್ತರ ಸ್ಥಳವೆ ಆಗಿದೆ.

ಮೊದಲಕಲ್ ಶೇಷದಾಸರೊಂದಿಗೆ ಹರಿದಾಸ ಪರಂಪರೆ ಮುಗಿಯಿತೆಂದು ಒಂದು ವಿಧದಲ್ಲಿ ತಿಳಿಸಿದರೂ, ಆಂದೋಲನ-ಹರಿದಾಸಪಂಥ ದೃಷ್ಟಿಯಿಂದ ಅದನ್ನು ಜೀವಂತವಾಗಿಸಿದೆಯೆಂದೆನಿಸುತ್ತದೆ. ಹತ್ತೊಂಭತ್ತರ ಶತಕದಲ್ಲಿ ಆಗಿ ಹೋದ ಆಡಲಿ ರಾಮದಾಸ (ಕದರಮಂಡಲಗಿ ಹನುಮಂತರಾಯ ಅಂಕಿತ), ಆದವಾನಿಯ ರಾಮ ಸುಂದರದಾಸರು (ರಾಮಸುಂದರವಿಠಲ), ಪ್ರೇಮದಾಸರು (ಅಭಿನವ ಜನಾರ್ದನವಿಠಲ), ಮೈಸೂರ ಶ್ರೀನಿವಾಸದಾಸರು ಜಯವಿಠಲಾಂಕಿತರು. "ಗುರುಶ್ರೀನಿವಾಸ ವಿಠಲ" ಅಂಕಿತಸಲ್ಲಿ ಹರಿದಾಸ ಪೀಳಿಗೆಯಲ್ಲಿ ಬಂದವರು ಮೈಸೂರು ಕೃಷ್ಣದಾಸರು. ಅನಂತರದಲ್ಲಿದ್ದ ರಾಮರಾಯರೆಂಬುವರ ದೇವರನಾಮ ಇಂದೂ ಮೈಸೂರಿನ ಕಟ್ಟೇಮನೆಯಲ್ಲಿ ಪ್ರಚಲಿತಗೊಂಡಿವೆ. 'ಭಾಗ್ಯನಿಧಿ ವಿಠಲಾಂಕಿತ'ರಾದ ಸೂರಪ್ಪದಾಸರು ಸವಣೂರಿನ ದಿವಾನ ಖಂಡೇರಾಯರ ಮಗ, ಹರಿದಾಸನಾಗಿ ಹರಿಭಕ್ತಿಪಂಥ ಸೇರಿದ ಇದಲ್ಲದೆ ಇಂದಿಗೆ ಸುಮಾರು ೧೧೫ ವರ್ಷ ಹಿಂದೆ ಪ್ರಸಿದ್ಧರಾಗಿದ್ದವರು ತುಳಸೀ ರಾಮದಾಸರು. ಬೆಂಗಳೂರಿನಲ್ಲಿರುವ ತುಳಸೀ ತೋಟದ ಕೀರ್ತಿ ಇವರದ್ದು. ಅಂದಿನ ರಾಜಗುರುಗಳಾದ ಮೈಸೂರಿನ ಶ್ರೀ ಪರಕಾಲ ಮಠಾಧೀಶರ ವಿಶ್ವಾಸಕ್ಕೆ ಪಾತ್ರರಾದವರು.

ಸುರಪುರದ ಆನಂದದಾಸರ ಶಿಷ್ಯರನೇಕ. ಮಡಕಶಿರದ ಭೀಮದಾಸರು, ಕಮಲಾಪತಿದಾಸರು (ಕಮಲಾಪತಿವಿಠಲ), ಗುಂಡಾಚಾರ್ಯರು, ಬೇಲೂರು ವೆಂಕಟ ಸುಬ್ಬದಾಸರು, ೧೯೨೫ರಲ್ಲಿ ತೀರಿಕೊಂಡ ಜೋಷಿ ಮೆಂಕಪ್ಪಾಚಾರ್ಯ ೧೧೦ ವರ್ಷ

ಜೀವಿಸಿದ್ದ ಮಹಾಪುರುಷರು. ಇವರಂತೆಯೆ ವಿಖ್ಯಾತರಾದ ಹರಪನಹಳ್ಳಿ ರಾಮಾಚಾರ್ಯರೆಂಬುವರು ಮಂತ್ರಾಲಯದಲ್ಲಿ ನೆಲಸಿದ ಆನಂದದಾಸರ ಶಿಷ್ಯರು. 'ಇಂದಿರೇಶ' ಇವರ ಅಂಕಿತ.

ಆನಂದದಾಸರ ಮಗಳು ತುಂಗಮ್ಮ, ಉತ್ಕಟ ಹರಿಭಕ್ತಿ ಉಳ್ಳ ಅನಂತಾವಿ ಈಕೆ.

ಹರಿದಾಸತ್ವಕ್ಕೆ ಧರ್ಮದೀಕ್ಷೆಯಿರುವಂತೆಯೆ ಈ ಭಕ್ತಿ ಆಂದೋಲನ ಇನ್ನು ಮುಂದುವರಿಯ ಬೇಕಾಗಿದೆ. ಹರಿದಾಸರ ವಿಶಾಲಜ್ಞಾನ, ಕವಿಹೃದಯ, ಎಲ್ಲವೂ ಆಂದೋಲನಗಳ ಗುರಿಯೆ. ಎಲ್ಲಕ್ಕೂ ಒಂದೇ ಮಾತು, ಒಂದೇ ನಂಬಿಗೆ, ನಚ್ಚಿಗೆ. ''ಶ್ರೀಜಗನ್ನಾಥ ವಿಠಲ''ನೆಂಬುವರು ಅಂಥ ಹರಿದಾಸರಲ್ಲೊಬ್ಬರು.

ಶಾಸ್ತ್ರನಿಷ್ಠೆ, ಪುರಾಣಪ್ರಜ್ಞೆ, ಕನ್ನಡ ನಡಿಗಟ್ಟಿನ ಮೇಲಣ ಅಭಿಮಾನವುಳ್ಳ ಹರಿದಾಸ ಸಾಹಿತ್ಯ ಎಂದೆಂದಿಗೂ ತನ್ನ ಸಮಕಾಲೀನ ಸಮಾಜಕ್ಕೆ ಜೀವಂತ ಆಗಿದ್ದರೆ ಆ ಆಂದೋಲನದ ಗತಿ ಇನ್ನೂ ಮುಂದುವರಿಯುತ್ತದೆ. ಅದು ಕುಂದದ, ಕಂದದ ಭಕ್ತಿಯ ನೆಲೆ-ಸೆಲೆಯಾಗುತ್ತದೆ. ಇದಕ್ಕೆ ಹರಿದಾಸ ಆಂದೋಲನ, ಒಂದು ಜ್ವಲಂತ ನಿದರ್ಶನ, ಹಾಗೂ ಇದನ್ನು ಇಂದೂ ಮುಂದುವರೆಸುತ್ತಿರುವ ಅನೇಕ ಹರಿಭಕ್ತರೇ ಪ್ರತ್ಯಕ್ಷ ಉದಾಹರಣೆಯೆನ್ನಬಹುದು.

ಹತ್ತೊಂಭತ್ತರ-ಇಪ್ಪತ್ತರ ಶತಕದಲ್ಲಿ ಮುಂದುವರಿದಿರುವ ಹರಿದಾಸ ಭಕ್ತಿಯ ಆಂದೋಲನಕ್ಕೆ ಮಹಿಳಾ ಕೃತಿಕಾರರ ಹರಿಶರಣೆಯರ ಕೊಡುಗೆ ಕಡಮೆಯೇನಲ್ಲ. ಈ ಪರಿಪಿನಲ್ಲಿ ಅಂದರೆ ೧೮ನೆ ಶತಕದಂಚಿನಲ್ಲಿ ಕೇಳಿಬರುವ ಸುಪ್ರಸಿದ್ಧ ಹೆಸರೆಂದರೆ ಹೆಳವನ ಕಟ್ಟೆ ಗಿರಿಯಮ್ಮನೆಂಬ ಹರಿಭಕ್ತೆಯ ಹೆಸರು. ಹರಿದಾಸಸಾಹಿತ್ಯದ ಮಹಿಳಾ ಕೃತಿಕಾರರಲ್ಲಿ ಪ್ರಮುಖಳೀಕೆ. ಧಾರವಾಡದ ಬಳಿಯ ರಾಣಿಬೆನ್ನೂರಿನವಳಾದ ಗಿರಿಯಮ್ಮ ಹರಿಹರ ತಾಲ್ಲೂಕಿನ ಮಲೆಬೆನ್ನೂರಿನ ಶ್ಯಾನುಭೋಗ ಕೃಷ್ಣಪ್ಪನ ಮಗ ತಿಪ್ಪರಸ ನೊಂದಿಗೆ ಮದುವೆಯಾಯಿತು. ಗಿರಿಯಮ್ಮ ಮೊದಲಿಂದಲೂ ಮಹಾದೇವಿಯಕ್ಕನಂತೆ ಲೌಕಿಕಕ್ಕೆ ಮನಗೊಡಲಿಲ್ಲ. ಮಲೆಬೆನ್ನೂರಿನ ಸಮೀಪವೆ ಇರುವ ಪ್ರಸಿದ್ಧ ಕ್ಷೇತ್ರ-ಶ್ರೀರಂಗನಾಥಸ್ವಾಮಿಯಿರುವ ಹೆಳವನಕಟ್ಟೆ.[48] ಗಿರಿಯಮ್ಮನಿಗೆ ರಂಗನಾಥಸ್ವಾಮಿಯಲ್ಲಿ ವಾತ್ಸಲ್ಯ ಭಕ್ತಿ : ಅವಳ ಕೃತಿಗಳಲ್ಲಿ ಪರಮಾತ್ಮನನ್ನು ಮಗನಂತೆ ಕಾಣುವ ಭಾವ ಅನೇಕಡೆ ಮೂಡಿಬಂದಿದೆ. ಅಲ್ಲಿನ ಎಲ್ಲರಿಗೂ ಪೂಜಯನೀಯಳಾಗಿದ್ದ ಗಿರಿಯಮ್ಮನಿಗೆ[49] ಮಂತ್ರಾಲಯದ ಆಗಿನ ಸ್ವಾಮಿಗಳಾಗಿದ್ದ ಶ್ರೀಸುಮತೀಂದ್ರತೀರ್ಥರು ಆಶೀರ್ವದಿಸಿದ ಐತಿಹ್ಯವಿದೆ. ಇದಲ್ಲದೆ, ಹರಿದಾಸರಲ್ಲಿ ''ಭಕ್ತಿಯಲ್ಲಿ ಭಾಗಣ್ಣ''ನೆಂದು ಪ್ರಸಿದ್ಧವಾದ ಗೋಪಾಲದಾಸರು ಉಡುಪಿ ಕ್ಷೇತ್ರ ಯಾತ್ರೆಗಾಗಿ ಹೋಗುವಾಗ, ಮಲೆಬೆನ್ನೂರಿಗೆ ಬಂದು ಗಿರಿಯಮ್ಮನಿಗೆ ಮುದ್ರಿಕೆಯನ್ನೂ, ಬಾಲಗೋಪಾಲ ಮೂರ್ತಿಯನ್ನು ನೀಡಿದ ರಂತೆ. ಗಿರಿಯಮ್ಮ ತನ್ನ ಅಂಕಿತವನ್ನು ''ಹೆಳವನಕಟ್ಟೆ ರಂಗ''ನೆಂದು ಬಳಸಲು ಗೋಪಾಲ ದಾಸರ ಆಶೀರ್ವಾದವೇ ಕಾರಣ. ಅದೇ ಆಕೆಯ ಕಾವ್ಯದಂತರಂಗಗೆಯ ಸ್ಫೂರ್ತಿ ಯಾಯಿತು.

ಗಿರಿಯಮ್ಮ ಅನೇಕ ಕೃತಿ ರಚನೆ ಮಾಡಿದ್ದಾಳೆ. ಕೃಷ್ಣ ಕೊರವಂಜಿ ಎಂಬ ಕಥನಕಾವ್ಯ, ಚಂದ್ರಹಾಸ ಚರಿತೆ, ಸೀತಾಕಲ್ಯಾಣ, ಲವಕುಶರ ಕಾಳಗ, ಹಾಗೂ ಅನೇಕ ಬಿಡಿ ದೇವರನಾಮಗಳನ್ನು ಈಕೆ ರಚಿಸಿದ್ದಾಳೆ. ಗಿರಿಯಮ್ಮನ ಜೀವಿತದಲ್ಲಿ ಅನೇಕ ಪವಾಡಗಳು ಜರುಗಿ ಅವುಗಳ ಹಿನ್ನೆಲೆ ಕೀರ್ತನೆಗಳಲ್ಲಿ ಪ್ರತಿಬಿಂಬಿತಗೊಂಡಂತಿದೆ. (ಉದಾ : ಮಳೆಯ ದಯಮಾಡೋ ರಂಗ ನಿಮ್ಮ ! ಕರುಣೆ ತಪ್ಪಿದರೆ ಉಳಿಯದು ಲೋಕ ॥) ಪ್ರಧಾನತಃ ಈಕೆಯ ಕೃತಿಗಳಲ್ಲಿ ಓತಪ್ರೋತವಾಗಿ ಹರಿಭಕ್ತಿಯ ಗಂಗೆ ಹೊನಲಾಗಿ ಹರಿದಿದ್ದಾಳೆ. ಸರಳ ಸುಭಗ ಶೈಲಿ, ದೇಶೀಯ ವರ್ಣನೆ, ತತ್ಕಾಲೀನ ಸಮಾಜದ ಆಚಾರ-ವ್ಯವಹಾರ, ನಂಬಿಕೆಗಳು ಸಹ ಅಲ್ಲಲ್ಲಿ ಸಮಾವೇಶಗೊಂಡಿದೆ. ಅಲ್ಲಲ್ಲಿ ಅನುಕರಣೆಯೂ ಇದೆಯೆಂದೆನ್ನಿಸುತ್ತಿದೆ (ಉದಾ : ಇಂಥಾ ಮಗ ಹ್ಯಾಂಗ ಮನಸೋತೆ ಬಹುಪಂಥವಾಡಿದ ಜಗನ್ಮಾತೆ ॥

ಆವಾಗ ನಾರುವ ಮೈಯ ಬಿಚ್ಚಿ ತೋರಿ-ನಲಿಯುವ ಕಾಲುಕೈಯ !

ಕೋರೆಯ ಮಸೆಯುತ ಕೊಸರಿಕೊಂಡಸುರನ ಉದರವ ಬಗೆದಂಥ ಅದ್ಭುತ ಮಹಿಮತಾ॥ ಎಂಬಲ್ಲಿ ವಾದಿರಾಜರ ಕೀರ್ತನೆಯ ದಶಾವತಾರ ವೈವಿಧ್ಯದ ಅನುಕರಣೆ ಕಾಣಬರುತ್ತದೆ. ಒಟ್ಟಾರೆ ಗಿರಿಯಮ್ಮ ಹರಿದಾಸಸಾಹಿತ್ಯ ವೈಷ್ಣವ ಭಕ್ತಿಪಂಥದ ಮಹಿಳಾ ಕೃತಿಕಾರರಲ್ಲಿ ಪ್ರಮುಖ ಸ್ಥಾನ ಪಡೆದಿದಾಳೆನ್ನಬಹುದು.

ಹೆಳವನಕಟ್ಟೆ ಗಿರಿಯಮ್ಮನಂತೆಯೆ ಹರಿದಾಸಸಾಹಿತ್ಯಕ್ಕೆ ತಮ್ಮ ಕೊಡುಗೆಯಿತ್ತಿರುವ ಮಹಿಳಾ ಕವಯಿತ್ರಿಯರನೇಕ. ಇವರ ರಚನೆಗಳಲ್ಲೆಲ್ಲ ಪ್ರಧಾನವಾಗಿ ಕಾಣುವಂಥದು ಮೊದಲ ಹರಿದಾಸಾರ್ಯರ ಸ್ಫೂರ್ತಿ, ಪ್ರೇರಣೆ, ಹಾಗೂ ಭಕ್ತಿ.

(ಕ್ರಿ. ಶ. ೧೮ನೆ ಶ.) ಗಲಗಲಿಯ ಅವ್ವ, ಕೊಪ್ಪಳ ತಾಲೂಕಿನವಳು. ಮುಪ್ಪಿನ ಗಂಡನನ್ನು ಮದುವೆಯಾದ ಎಂಟೇ ದಿನಕ್ಕೆ ತನ್ನ ಮಾಂಗಲ್ಯಭಾಗ್ಯ ವಂಚಿತೆಯಾದ ಈಕೆ, ತನ್ನ ಮಲಮಕ್ಕಳಿಂದ ಪಾಠಪ್ರವಚನಾದಿಗಳನ್ನು ಹೇಳಿಸಿಕೊಂಡು ಮೈಸೂರಿನ ಒಡೆಯರಾಸ್ಥಾನದಲ್ಲಿ ಮಾನ್ಯತೆಗಳಿಸುವಂತಾದದ್ದು ಆಕೆಯ ತಪಸ್ಯೆ, ಸಾಧನೆಗೆ ನಿದರ್ಶನ. ಮುಯ್ಯದ ಹಾಡು, ಮೋರೆಗೆ ನೀರು ತಂದ ಹಾಡು, ಶೃಂಗಾರ ತಾರತಮ್ಯ, ಬೀಗರ ಹಾಡುಗಳು-ಮುಂತಾದ ಸಾಂಪ್ರದಾಯಿಕ ಕೃತಿಗಳ ಕರ್ತೃ ಈಕೆ. ಶ್ರೀರಾಮೇಶ ಈಕೆಯ ಅಂಕಿತ.

ಭಾಗಮ್ಮನೆಂಬಾಕೆ ಭಾಗವತದ[51] ತೃತೀಯ ಸ್ಕಂಧ ರಚಿಸಿ ತನ್ನ ರೋಗವನ್ನು ಪರಿಹರಿಸಿಕೊಂಡಳೆಂದು ಪ್ರತೀತಿ. ಭಗವಂತನ ಧರ್ಮ ಪ್ರತಿಪಾದಿಸುವ ಭಾಗವತ ಧರ್ಮದ ಮುಖ್ಯಧ್ಯೇಯ ಭಗವನ್ನಾಮ ಸಂಕೀರ್ತನೆ. ಇದೇ ಭಾಗಮ್ಮನ ಉದ್ದೇಶ ಕೂಡ.

### ಹರಪನಹಳ್ಳಿ ಭೀಮವ್ವ

ದಾಸಸಾಹಿತ್ಯದ ಪ್ರಮುಖ ಕವಿಯತ್ರಿಯರಲ್ಲಿ ಹರಪನಹಳ್ಳಿ ಭೀಮವ್ವ ಕೂಡ

ಸೇರುವಂಥವರು (೧೮೨೨-೧೯೦೩). ಬಳ್ಳಾರಿ ಜಿಲ್ಲೆಗೆ ಸೇರಿದ ಹೊಸಪೇಟೆ ತಾಲ್ಲೂಕಿನ ನಾರಾಯಣ ದೇವರಕೆರೆ ಈಕೆಯ ಹುಟ್ಟೂರು. ಬಾಲ್ಯದಿಂದಲೆ ಭಗವದ್ಭಕ್ತಿಯಲ್ಲಿ ವಿಶೇಷ ಆಸಕ್ತಿ ಹೊಂದಿದ್ದ ಈಕೆ ಹನ್ನೊಂದು ವರ್ಷ ವಯಸ್ಸಿನವಳಿರುವಾಗ ಎಡ ಪ್ರಾಯದ ಮುನಿಯಪ್ಪನೆಂಬಾತನನ್ನು ಮದುವೆಯಾಗಬೇಕಾಯಿತು. ಚಿಕ್ಕವಯಸ್ಸಲ್ಲಿ ವಿಧವೆಯಾದ ಭೀಮಪ್ಪ ಅನಕ್ಷರಸ್ಥೆಯಾದರೂ ಕಾವ್ಯ[೩೨] ನಿರ್ಮಾಣ ಶಕ್ತಿಗೆ ಆಕೆಯ ಕನಸಿನಲ್ಲಿ ಶ್ರೀಕೃಷ್ಣ ಹಾಗೂ ನಾರದರ ದಿವ್ಯ ದರುಶನವೆ ಕಾರಣವೆಂದು ಈಗಲೂ ಪ್ರತೀತಿ.

ಭೀಮವ್ವ ನೂರನಲವತ್ತಮೂರು ದೇವರನಾಮಗಳನ್ನೂ, ನಳಚರಿತ್ರೆ, ಮುಯ್ಯದ ಹಾಡು, ಪತಿದಾನವಿತ್ತ ಹಾಡು, ಶಕುಂತಲೆ-ದುಷ್ಯಂತರ ಹಾಡು, ರತಿಕಲ್ಯಾಣ, ಸುಭದ್ರಾಕಲ್ಯಾಣ ಮೊದಲಾದ ಕಥನ ಕವನಗಳನ್ನೂ ಬರೆದಿದ್ದಾಳೆ. ಸಂದರ್ಭಕ್ಕೆ ತಕ್ಕಂತೆ ತಿಳಿಗನ್ನಡದಲ್ಲಿಉಪಮೆ, ಕವಿ ಸಮಯ ಎಲ್ಲ ಬಳಸಿರುವ ಈಕೆ ಅನಕ್ಷರಸ್ಥೆ ಎಂಬ ಮಾತು ನಂಬಲು ಕಷ್ಟವೆನಿಸುತ್ತದೆ.

ಭಕ್ತಿಯ ಉತ್ಕಟ ಸ್ತರದಲ್ಲಿ ಇರುತ್ತಿದ್ದ ಈಕೆಯ ಹಾಡುಗಳಲ್ಲಿ ಹೆಂಗಳೆಯರಿಗೆ ಸಹಜವಾದ ವಿನಯ, ನಮ್ರತೆ, ಪತಿಪ್ರೇಮ, ಹೆಂಗರುಳಿನ ಸಂಗತಿಗಳಲ್ಲಿ ಪ್ರೀತಿ ಯೆಂಬುದು ಸಹಜವಾಗಿಯೇ ತಿಳಿದುಬರುತ್ತದೆ. ಕನ್ನಡದಲ್ಲಿ ಇಷ್ಟು ಕೃತಿರಚನೆ ಮಾಡಿದ ಕವಿಯಿತ್ರಿಯರು ಇಲ್ಲವೇನೊ ಎನಿಸಿದರೂ, ಈಕೆ ಮಹಿಳಾ ಕೃತಿಕಾರರ ಪ್ರತಿನಿಧಿಯಾಗಿ ಹರಿದಾಸಭಕ್ತಿಯ ಆಂದೋಲನ ಮುಂದುವರಿಸಿದ್ದಾಳೆ.

"ಕರ್ನಾಟಕದ ಕವಯಿತ್ರಿಯರು" (೧೯೬೫) ಎಂಬ ತಮ್ಮ ಪುಸ್ತಿಕೆಯಲ್ಲಿ[೩೩] ಸರೋಜಿನಿ ಮಹಿಷಿಯರು ಇನ್ನೂ ಕೆಲವು ಮಹಿಳಾ ಕೃತಿಕಾರರನ್ನು ಹೆಸರಿಸುತ್ತಾರೆ. ೧೮ನೆ ಶತಮಾನದ ಉತ್ತರಾರ್ಧದಿಂದ ಅನೇಕರು ದಾಸಭಕ್ತಿಪಂಥ ಅನುಸರಿಸಿ ಹಾಡು ಗಳನ್ನು ಬರೆದಿರುವುದು ಬೆಳಕಿಗೆ ಬಂದಿದೆ. ಅಂಥವರು ಕೆಲವರು :

| ಹೆಸರು : ಕಾಲ | ಕೃತಿಗಳು | ವಿವರ |
|---|---|---|
| 1. ಚೆಲ್ಲಮ್ಮ (೧೮೫೦) (ಕೃಷ್ಣಾತೀರದ ಚಿರುಕುಪಲ್ಲಿ ಎಂಬ ಊರಿನವಳು) | ರುಕ್ಮಿಣೀ ಪರಿಣಯ<br>ರಾಜಕಳಾನಿಧಿ<br>ಪಾರಿಜಾತಾಪಹರಣ | ಎರಡನೆಯದಲ್ಲಿ ರಾಜಕೀಯ ರಾಜ್ಯಾಂಗ ಅಮಾತ್ಯ ಮುಂತಾದ ವಿವರ ಕೂಡ ಬಂದಿದೆ. ಉಳಿದವು ಪೌರಾಣಿಕ ಕಾವ್ಯಗಳು. |

| | | |
|---|---|---|
| 2. ಗಣಪಕ್ಕ (೧೮೭೦)<br>ಗೋಕರ್ಣದವರು ತಂದೆ<br>ಗಣಪ ಭಟ್ಟರು ರಾಮನ<br>ಭಕ್ತ. ಬಾಲ್ಯದಿಂದಲೆ<br>ಕೀರ್ತನಗೋಷ್ಠಿಯಲ್ಲಿ<br>ಭಾಗವಹಿಸಿ ದೈವಭಕ್ತಿ<br>ಸಹಜವಾಗಿಯೆ ಬೆಳೆಯಿತು.<br>ಯಕ್ಷಗಾನ ಕೃತಿ ಕೂಡ<br>ರಚಿಸಿದ್ದಾಳೆ. | ಗೋಕರ್ಣ ಮಹಾತ್ಮ್ಯ,<br>ಕೃಷ್ಣನ ಹುಟ್ಟು<br>ಕೃಷ್ಣಲೀಲೆ, ಕೃಷ್ಣನ<br>ಹುಟ್ಟು (ಯಕ್ಷಗಾನ)<br>ಅನಂತನ ಕಥೆ, ತುಳಸೀ<br>ಮಹಾತ್ಮೆ, ಆರತಿಪದ,<br>ಮದುವೆ ಹಾಡು,<br>ಇತ್ಯಾದಿ........... | ಪೌರಾಣಿಕ ವಸ್ತು<br>ಪ್ರಾಧಾನ್ಯ. ಯಕ್ಷಗಾನ<br>ಪರಿಚಯವಿದ್ದುದೂ<br>ತಿಳಿದು ಬರುತ್ತದೆ. |
| 3. ಸುಂದರಾಬಾಯಿ(೧೮೭೫)<br>ಧಾರವಾಡ ತಾಲ್ಲೂಕು<br>ಹೆಬ್ಬಳ್ಳಿಯವರು.<br>ಬಾಲವಿಧವೆ.<br>ಮಾವಂದಿರಾಗಿದ್ದ ಶ್ರೀಸತ್ಯ<br>ಪರಾಕ್ರಮ ಸ್ವಾಮಿಗಳು<br>ಈಕೆಯ ಗುರು.<br>ಶ್ರೀವೆಂಕಟೇಶ, ಬೆಟ್ಟ<br>ದೊಡೆಯ ಶ್ರೀವೆಂಕಟೇಶ<br>ಈಕೆಯ ಅಂಕಿತಗಳು. | ಕೃಷ್ಣನ ಹುಟ್ಟು<br>ರುಕ್ಮಾಂಗದ ಚರಿತ್ರೆ<br>ಸುಭದ್ರಾ ಮಯ್ಯ<br>ರುಕ್ಮಿಣೀ ಮಯ್ಯ<br>ರುಕ್ಮಿಣೀ ಪರಿಣಯ<br>ಶುಕ್ರವಾರ-<br>ಶನಿವಾರ ಹಾಡು<br>ಗೌರಿ ಹಾಡು | ನೇರ ನಿರೂಪಣೆಯ<br>ಸರಳ ಶೈಲಿ. |
| 4. ಪನ್ನಿಲಕ್ಷ್ಮೀಬಾಯಿ (೧೮೮೦) | (ಕೃತಿ ವಿವರ ಪೂರ್ಣ ತಿಳಿದಿಲ್ಲ) | |
| 5. ಶಾಂತಿಬಾಯಿ (೧೮೮೦)<br>ಶಿವಮೊಗ್ಗ ಜಿಲ್ಲೆ ಸಾಗರ ಈಕೆಯ<br>ಜನ್ಮಸ್ಥಳ. ''ಶಾಂತಿಪಾಲಿಪಗುರು''<br>ಈಕೆಯ ಅಂಕಿತ. | –,,– | |
| 6. ಓರಬಾಯಿ ಲಕ್ಷ್ಮೀದೇವಮ್ಮ (೧೮೯೦)<br>ಬಳ್ಳಾರಿ ಜಿಲ್ಲೆ ಸೊಂಡೂರಿನ ದಿವಾನ<br>ರಾಗಿದ್ದ ಅಚ್ಚಪ್ಪನಾಯಕರ ಮಗಳು.<br>ಬಾಲವಿಧವೆ. ಬಳ್ಳಾರಿಯ ನರಸಿಂಹ<br>ಸ್ವಾಮಿ ದೇವಾಲಯ ಕಟ್ಟಿಸಿದವಳೀಕೆ.<br>ಮಂತ್ರಾಲಯದ ಶ್ರೀರಾಘವೇಂದ್ರರನ್ನು<br>ಕುರಿತು ಅನೇಕ ಹಾಡುಗಳನ್ನು ರಚಿಸಿದ್ದಾಳೆ. | –,,– | |

ಮೇಲ್ಕಂಡ ಇವರೆಲ್ಲರ ಪ್ರಧಾನ ಧ್ಯೇಯ ಹರಿಭಕ್ತಿ ಪ್ರತಿಪಾದನೆ

7. ಇವರೆಲ್ಲರ ಸಾಲಿಗೆ ಸೇರುವವರು ಉಡುಪಿಯ ವಾದಿರಾಜ ಮಠದ ಗಿರಿಬಾಲೆ,[34] ಮೈಸೂರಿನ ವಿದ್ಯಾರಣ್ಯಪುರದ ಜೀವೂಬಾಯಿ (ಕಮಲನಾಭವಿಠಲ), ವನಜಮ್ಮ (ವೆಂಕಟೇಶವಿಠಲ), ಬೆಂಗಳೂರಿನ ಚಾಮರಾಜಪೇಟೆಯ ರಾಜಾಮಣಿಯವರು ಇವರೆಲ್ಲ ಸೇರುತ್ತಾರೆ. ಹರಿದಾಸ ಆಂದೋಲನವನ್ನು ಇನ್ನೂ ಮುಂದುವರಿಸುತ್ತಿದ್ದಾರೆ. ಹೀಗೆಯೇ ಹರಿದಾಸ ಸಾಹಿತ್ಯಕ್ಕೆ ದಕ್ಷಿಣ ಕನ್ನಡ ಜಿಲ್ಲೆಯು ಅನೇಕರಿಂದ ಸೇವೆ ಸಂದಿದೆ.

ಹತ್ತೊಂಭತ್ತನೆ ಶತಕದ ತುಪಾಕಿ ವೆಂಕಟ್ರಮಣಾಚಾರ್ಯರು ರಚಿಸಿರುವ ೩೨೮ "ದೇವರನಾಮ" ಅಚ್ಚಾಗಿವೆ. ಮಧ್ವಮತ ಸಂಪ್ರದಾಯಸ್ಥರಾದ ಇವರು ಎಲ್ಲ ಮಾಧ್ವಯತಿವರೇಣ್ಯರನ್ನೂ ಕೊಂಡಾಡಿದ್ದಾರೆ. ವಿಶೇಷವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಅನೇಕ ತೀರ್ಥಕ್ಷೇತ್ರಗಳ ವರ್ಣನೆಯಿದೆ. ರಾಮಾಯಣದ ಕತೆಯನ್ನು ಕೋಲು ಪದದಲ್ಲಿ ಚಿತ್ರಿಸಿದ್ದಾರೆ.

ಪಾವಂಜೆ ಲಕ್ಷ್ಮೀನಾರ್ಣಯ್ಯ[35] (೧೮೫೩-೧೯೨೪) ನವರು ಈ ಶತಮಾನದ ಹರಿಭಕ್ತರಲ್ಲೊಬ್ಬರು. ಶೈವ ಬ್ರಾಹ್ಮಣರಾದರೂ, ದ್ವೈತಮತದೊಲವುಳ್ಳ ಇವರು ವೆಂಕಟೇಶ್ವರನ ಬಗ್ಗೆ ಹಾಗೂ ಗುರುವರ್ಯರ ಬಗ್ಗೆ ಅನೇಕ ದೇವರನಾಮಹಾಡಿದ್ದಾರೆ.

ಪಣಂಬೂರ "ಸದಾನಂದಗುರು" ಅಂಕಿತದಲ್ಲಿ ಅನೇಕ ಕೃತಿ ರಚನೆ ಮಾಡಿರುವ ಶ್ರೀನಿವಾಸಯ್ಯನವರು ಮಂಗಳೂರು ಬಳಿಯಿರುವ ಪಣಂಬೂರಿನವರು. ಸುಮಾರು ಒಂದು ನೂರು ಕೀರ್ತನೆಗಳನ್ನು ಕನ್ನಡ ಹಾಗೂ ತಮ್ಮ ಸ್ಥಳದ ಆಡು ಭಾಷೆ ತುಳುವಿನಲ್ಲಿ ರಚಿಸಿರುವುದು ಹರಿದಾಸ ಆಂದೋಲನದ ಧ್ಯೇಯವನ್ನು ಮುಂದುವರಿಸಿರುವ ಇವರ ವಿಶಿಷ್ಟತೆಯಾಗಿದೆ. ಶೈವರಾದರೂ ಹರಿಭಕ್ತಿಯ ಪರಾಕಾಷ್ಠೆ ಇದರ ಕೃತಿಗಳಲ್ಲಿ ಧ್ವನಿತಗೊಂಡಿದೆ. ಬೆಳ್ಳಿದಾಸಪ್ಪಯ್ಯ, ಮೂಲ್ಕಿ ವೆಂಕಣ್ಣದಾಸ, ಸುದೇವ ಪ್ರಭು, ನಾರಾಯಣ ಕಾಮತ, ಬೋಳಾರ ವಾಸುದೇವಯ್ಯ, ರಾಮಕೃಷ್ಣ, ವಾಸು ದೇವ ಶಾನುಭಾಗ ಇವರೆಲ್ಲ ಹರಿದಾಸ ಭಕ್ತಿಯ ಆಂದೋಲನವನ್ನು ಮುಂದುವರಿಸಿರುವ ಹರಿಭಕ್ತರು. ಇವರಲ್ಲದೆ, ಉಡುಪಿಯ ಸೋದೆ ಮಠಾಧೀಶರಾಗಿದ್ದ ಶ್ರೀ ವಿಶ್ವೇಂದ್ರ ತೀರ್ಥರು ರಚಿಸಿದ "ಕೀರ್ತನ ಮಂಜರಿ" (೧೯೫೫) ಯಲ್ಲಿ "ರಾಜೇಶ," "ರಾಜನಾಥ" ಎಂಬ ಅಂಕಿತದಲ್ಲಿ ಅನೇಕ ಕೃತಿ ರಚನೆ ಮಾಡಿದ್ದಾರೆ.

ಹರಿಭಕ್ತಿಯಾಂದೋಲನ ಹೀಗೆ ಇನ್ನೂ ಮುಂದುವರಿಯುತ್ತಿದೆ. ತನ್ನ ಧ್ಯೇಯವಾದ ಹರಿಭಕ್ತಿ ಪಾರಮ್ಯ ಪ್ರತಿಪಾದನೆ, ಮಧ್ವಮತ ಪ್ರಸಾರ, ಭಾಗವತ ಧರ್ಮದ ಪ್ರಸಾರವನ್ನೂ ಮಾಡುತ್ತಲಿದೆ. "ಎಂದರೊ ಮಹಾನುಭಾವುಲು ಅಂದರಿಕಿವಂದನಮು" ಎಂದು ವಾಗ್ಗೇಯಕಾರರಾದ ಶ್ರೀತ್ಯಾಗರಾಜರು ಹಾಡಿದಂತೆ ಅವರೆಲ್ಲರನ್ನೂ ವಂದಿಸುವುದು ನಮ್ಮ ಕರ್ತವ್ಯವೆ ಆಗಿದೆ.

ಮೇಲಿನ ಸಮೀಕ್ಷೆಯಿಂದ ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ, ಸಂಗೀತ ಮುಂತಾದ ಕ್ಷೇತ್ರಗಳಲ್ಲಿ ಹರಿದಾಸ ಆಂದೋಲನ ಕೇವಲ ವೈಯಕ್ತಿಕ ಸಾಹಸವಾಗದೆ

ಸಾಮೂಹಿಕವಾದ, ಸಾಮಂಜಸ್ಯಾಯಿಕವಾದ ಪ್ರಯತ್ನವಾಗಿ ಮುಂದುವರಿದಿರುವುದು ತಿಳಿಯಬರುವ ಅಂಶ. ಇದು ಪ್ರತಿಯೊಂದು ಆಂದೋಲನದ ವೈಶಿಷ್ಟ್ಯ ಕೂಡ. ಸಾಮೂಹಿಕ ಶ್ರಮ, ತೊಡಗುವಿಕೆ, ಹೋರಾಟಕ್ಕೆ ಅಲ್ಲಿ ಪ್ರಾಧಾನ್ಯ, ಪ್ರಾಮುಖ್ಯ. ಹರಿದಾಸ ಆಂದೋಲನದ ಉಗಮ, ಸ್ವರೂಪ ಭಕ್ತಿಪಂಥ ಆಂದೋಲನ ಆದ ಬಗೆ ಎಲ್ಲ ಕುರಿತು ಚರ್ಚಿಸುವಲ್ಲಿ ಆಂದೋಲನವೇನೆಂಬುದನ್ನು ಚರ್ಚಿಸಿದ್ದೇವೆ. ಮುಂದಿನ ಅಧ್ಯಾಯಗಳಲ್ಲಿ ಈ ಆಂದೋಲನದ ಸಾಹಿತ್ಯಾಭಿವ್ಯಕ್ತಿ ಸಾಗಿದ ನಿಡಿದಾದ ಹಾದಿ ಕುರಿತ ವಿವೇಚನೆಯಿಂದ ಹಾಗೂ ಸಾಹಿತ್ಯಿಕ ಆಂದೋಲನದ ವಿವೇಚನೆ ಕೂಡ ನಡೆಸುವ ಪ್ರಯತ್ನವನ್ನು ಮಾಡಲಾಗಿದೆ. ಇದರಿಂದ ಉಗಮಗೊಂಡು, ಮುಂದುವರಿದ ಹೊಸ ಸಂಪ್ರದಾಯವೆ ಹರಿದಾಸಪ್ರವೃತ್ತಿ–ಹರಿದಾಸ ಸಂಪ್ರದಾಯ. ಕೇವಲ ಉಂಛವೃತ್ತಿ ಯನುಸರಿಸುತ್ತ ಭಕ್ತಿ ಪ್ರಸರಿಸಿದ, ಸಮಾಜೋದ್ಧಾರ ಕಾರ್ಯದಲ್ಲಿ (ಸೌಮ್ಯವಾದಿ- ಗಳಾದರೂ) ಪಾಲ್ಗೊಂಡ ಹರಿದಾಸಪಂಥ ನಾಡಾಡಿಯಲ್ಲ : ಅದೊಂದು ಸಂಘಟಿತ ಭಕ್ತಿಪಂಥ. ಈ ದೃಷ್ಟಿಯಿಂದ ಈ ಆಂದೋಲನದ ವಿವಿಧ ಕ್ಷೇತ್ರಗಳ (ಸಾಹಿತ್ಯ, ಧರ್ಮ–ಮತ, ಸಂಗೀತ, ಸಂಪ್ರದಾಯ) ಅಧ್ಯಯನವೆ ಇಲ್ಲಿನ–ಈ ನಿಬಂಧದ– ಉದ್ದೇಶವೆಂಬುದನ್ನು ಸ್ಪಷ್ಟಪಡಿಸುವುದೇ ನಮ್ಮ ಆಶಯ.

ಅಡಿಟಿಪ್ಪಣಿಗಳು

1 ಕನ್ನಡ ಸಾಹಿತ್ಯ ಚರಿತ್ರೆ ; ರಂ. ಶ್ರೀ. ಮುಗಳಿ : (1964) ಉಷಾ ಸಾಹಿತ್ಯ ಮಾಲೆ, ಮೈಸೂರು : ಪುಟ-313.

2 ಶ್ರೀಜಗನ್ನಾಥದಾಸರು : ಡಾ. ಕೆ. ಎಂ. ಕೃಷ್ಣರಾವ್ (1956) ಉಷಾ ಸಾಹಿತ್ಯ ಮಾಲೆ, ಮೈಸೂರು : ಪುಟ-65.
(ಅನುವಾದ) : ಪುಟ-76 (ಜಗನ್ನಾಥದಾಸರ : ಕೃತಿಯಲ್ಲಿ).

3 ಕನ್ನಡ ಸಾಹಿತ್ಯ ಚರಿತ್ರೆ : ರಂ. ಶ್ರೀ. ಮುಗಳಿ : ಪುಟ-257 : ಇದಲ್ಲದೆ, ವ್ಯಾಸ ಕೂಟ, ದಾಸಕೂಟ ಪ್ರಭೇದ : ಶ್ರೀವ್ಯಾಸರಾಯರ ಹಾಗೂ ಅವರ ಶಿಷ್ಯರಾದ ಶ್ರೀಪುರಂದರದಾಸರ ಕಾಲದಿಂದ ಬಳಕೆಗೆ ಬಂದವೆಂಬುದು ಒಂದು ಅಭಿಪ್ರಾಯವಿದೆ. ವಿವರಣೆಗಳಿಗೆ ದಾಸಸಾಹಿತ್ಯ : ದ್ವಿತೀಯ ಘಟ್ಟದ ಸಾಧನ : ಪುಟ-6 (ಕರ್ನಾಟಕ ವಿಶ್ವವಿದ್ಯಾಲಯ) ಧಾರವಾಡ ಹಾಗೂ ಕಲಮದಾನಿಯವರ ಗಮನಾರ್ಹ.

4 ಅದೇ : ಪುಟ-257.

5 ಅದೇ : ಪುಟ-317 : ಈ ಬಗ್ಗೆ ಹರಿದಾಸ ಉಗಾಭೋಗ-ವಚನಗಳ ತೌಲನಿಕ ಸಮೀಕ್ಷೆ ಪರಸ್ಪರ ಒಂದೇ ಭಾವ-ರಚನಾ ರೀತಿಯಿರುವುದನ್ನು ಡಾ. ಚಿದಾನಂದ ಮೂರ್ತಿ ಅವರು ಗುರುತಿಸಿ ಬರೆದಿರುವ ಪ್ರಬಂಧ ಗಮನಾರ್ಹ, (ಸಂಶೋಧನ ತರಂಗ 1961).

6 ಡಾ. ಎಂ. ಎಂ. ಕಲಬುರ್ಗಿಯವರು ನನಗೆ ಬರೆದ ಪತ್ರ.

7 ಪ್ರೊ. ಆರ್. ಎಸ್. ಪಂಚಮುಖಿ, ಕಲಮದಾನಿ, ಮಾಸ್ತಿಯವರ ಕರ್ನಾಟಕ ಸಂಸ್ಕೃತಿ ಕುರಿತ ವ್ಯಾಖ್ಯೆ, ಡಾ : ಕೆ. ಎಂ. ಕೃ. ಅವರ ಅಭಿಮತ, ಎಲ್ಲ ಗಮನಾರ್ಹ.

8 ಸುಮಾರು 250 ಜನಕ್ಕೂ ಹೆಚ್ಚು ಜನ.

9 ಕ್ರಿ. ಶ. 9ನೇ ಶ ಹಾಗೂ 12ನೇ ಶ. ದಿಂದ ಎಂಬ ಕೆಲವರ ಅಭಿಪ್ರಾಯ, ಪರಿಶೀಲಿಸಿ, ಮೇಲ್ಕಂಡ ಅಂಶವನ್ನು ಡಾ. ಜಿ. ವರದರಾಜರಾಯರು ಸಮರ್ಥಿಸಿದ್ದಾರೆ. ಶ್ರೀಪಾದರಾಜರ ಕೃತಿಗಳ ಪೀಠಿಕೆ (ಪಂಡಿತ ಆವೃತ್ತಿ).

10 ಕ್ರಿ. ಶ. 1565 ರ ವೇಳೆಗೆ ಶ್ರೀಪುರಂದರದಾಸರು ತೀರಿಕೊಂಡು ವರ್ಷ ಮಾತ್ರ ಕಳೆದಿತ್ತು. ಹಾಗೂ ರಕ್ಕಸತಂಗಡಿ ಯುದ್ಧ ವಿಜಯನಗರ ಪತನ, ಬಹುಮನಿಯ ಅರಸರ ಕ್ರೌರ್ಯ ಎಲ್ಲವನ್ನೂ ಕನಕದಾಸರು ಪ್ರತ್ಯಕ್ಷವಾಗಿಯೊ, ಪರೋಕ್ಷವಾಗಿಯೊ ಕಂಡೇ ಇದ್ದಿರಬೇಕು. ಆಮೇಲೂ ಅವರು ಬಹುಕಾಲ ಬದುಕಿದ್ದರು.

11 ಇವರಿಗೆ ಯಾರೂ ಹರಿದಾಸ ದೀಕ್ಷೆ ನೀಡಲಿಲ್ಲವೆಂಬುದು ಗಮನಾರ್ಹ. ವಿವರಕ್ಕೆ ಕರ್ನಾಟಕ ಭಕ್ತವಿಜಯ, ಬೇಲೂರು ಕೇಶವದಾಸರು.

12 ದಾಸಸಾಹಿತ್ಯ : ದ್ವಿತೀಯ ಘಟ್ಟದ ಸಾಧನೆ : (ಪುಟ-122) : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ : ರಾಯಚೂರುದಲ್ಲಿ ಮುಸ್ಲಿಮನೊಬ್ಬ 'ರಾಮದಾಸ'ನೆಂದು ಹಿಂದೂ ಆಗಿ ಮತಾಂತರಗೊಂಡು, ಕೀರ್ತನ ರಚಿಸಿರುವನೆಂದು ತಿಳಿದು ಬಂದಿದೆ.

13 ಇದು ವಿದ್ವಾಂಸರಿಂದಲೂ ದೃಢಪಟ್ಟಿದೆ : ವರದರಾಜಾಚಾರ್ಯರ ಪೀಠಿಕೆಯ ಮಾತುಗಳು ಶ್ರೀಪಾದರಾಜರ ಕೃತಿಗಳಲ್ಲಿ (ಪಂಡಿತ ಆವೃತ್ತಿ).

14 ಮೊನ್ನೆ ಮೊನ್ನೆಯವರೆವಿಗೂ (1982) ನಮ್ಮೊಡನೆ ಇದ್ದ ಮೈಸೂರಿನ ಶ್ರೀ ಗುರು ಗೋವಿಂದ ವಿಠಲದಾಸರು, ದೇವರಾಯನದುರ್ಗದ ಪರಮಪ್ರಿಯ ಸುಬ್ಬರಾಯದಾಸರಿಂದ ಹರಿದಾಸದೀಕ್ಷೆ ಪಡೆದು, "ಗುರುಗೋವಿಂದ ವಿಠಲ" ಸಂಕಿತದಲ್ಲಿ ಅನೇಕ ಕೃತಿ ರಚನೆ ಮಾಡಿದ್ದಾರೆ. ಹರಿದಾಸದೀಕ್ಷೆ, ಅಂಕಿತ ಸ್ವೀಕರಿಸಿರುವವರು, ಈ ಬಗ್ಗೆ ವಿವರಗಳಿಗೆ "ಪರಮಪ್ರಿಯ ಸುಬ್ಬರಾಯದಾಸರು" ಪುಸ್ತಕ ಗಮನಾರ್ಹ (ಶ್ರೀಗುರು ಗೋವಿಂದದಾಸರು, ಮೈಸೂರು)

15· ತಿಮ್ಮಪ್ಪದಾಸರ "ಅರ್ಜುನ", (ಸ್ಮಾರ್ತ ಭಾಗವತ ಸಂಪ್ರದಾಯ) : ಕೆಳದಿ ವೆಂಕಣ್ಣ ಜೋಯಿಸರ ಕೀರ್ತನೆಗಳು, ವೈಕುಂಠದಾಸರ ರಚನೆಗಳು ಇವೆಲ್ಲ ಇದಕ್ಕೆ ಹೊರತಾಗಿವೆ. ಬೆಂಗಳೂರು ವಿಶ್ವವಿದ್ಯಾನಿಲಯ : ಬೆಂಗಳೂರು.

16 ದಾಸಸಾಹಿತ್ಯ : ದ್ವಿತೀಯ ಘಟ್ಟದ ಸಾಧನೆ : (ಪುಟ-122)

17 ತೀ. ನಂ. ಶ್ರೀ : ಭಾರತೀಯ ಕಾವ್ಯ ಮೀಮಾಂಸೆಯ ಪೀಠಿಕೆ ಮಾತುಗಳು : ಪ್ರ : ಮೈಸೂರು ವಿ. ವಿ. ನಿಲಯ : ಮೈಸೂರು.

18 ಕರ್ನಾಟಕದಲ್ಲಿ ಧರ್ಮಗಳು : ನಂದೀಮಠ : ಪೀಠಿಕೆ ಮಾತುಗಳು.

19 H. B. Bengeri : 'Sri Haridasakuta' : "A Kannadiga who is well up in the principles of vedanta, inspite of his complete ignorance of Sanskrit, is solely indebetd to Dasa literature for what he knows."

20 ಶ್ರೀಪುರಂದರದಾಸರೊಬ್ಬರೆ 4,75,000 ಕೃತಿ ರಚನೆ 25,000 ಕೃತಿಗಳನ್ನು ತಾನು, ರಚನೆ ಮಾಡಿದ್ದೇನೆಂದೂ ಶ್ರೀವಿಜಯದಾಸರು ತಮ್ಮ ಕೃತಿಯೊಂದರಲ್ಲಿ ಹೇಳಿದ್ದಾರೆ. ಈ ಸಂಖ್ಯೆ ಎಷ್ಟರ ಮಟ್ಟಿಗೆ ಪರಿಗ್ರಾಹ್ಯ ಎಂಬುದನ್ನು ದೃಢಗೊಂಡಿಲ್ಲ. ವಚನಕಾರರಲ್ಲೂ ಈ ರೀತಿಯ ಹೇಳಿಕೆ ಇವೆ. (ಡಾ: ಪಿ. ವಿ. ನಾರಾಯಣ ಅವರ ಅಭಿಮತ).

21 ಏಕೋ ನಾರಾಯಣೋ ಹರಿಃ : ಶಿವಶ್ಚನಾರಾಯಣಃ ಶಕ್ರಶ್ಚ ನಾರಾಯಣಃ ....... ಎನ್ನುತ್ತದೆ ನಾರಾಯಣೋಪನಿಷದ್ವಾಕ್ಯ. ಹಾಗೆಯೆ ತಮಿಳುನಾಡಿನ ವೈಷ್ಣವ ಸಂತರು "ನಾರಾಯಣನೆ ನಮಕ್ಕೆ ಪರಂತರುವಾನ್" ಎಂದರು (ನಾರಾಯಣನೆ ನಮಗೆ ಪರ ತರುವ ಪರದೈವ).

22 ಈ ಮಾತು ಬರೆಯುವಲ್ಲಿ ಹರಿದಾಸರ ಬಗ್ಗೆ ಕೆಲವರು ವ್ಯಕ್ತಪಡಿಸುವ ಭಾವನೆಗಳಿಗಾಗಿ ಬರೆಯಬೇಕಾಯಿತೆಂದು ಹೇಳಬೇಕಾಗಿದೆ. : ಹರಿದಾಸ ಸಮೀಕ್ಷೆ : ಹೊರೆಯಾಲ ದೊರೆಸ್ವಾಮಿಯವರ ಪ್ರಬಂಧದ ಕೆಲವು ಸಾಲನ್ನು ಇಲ್ಲಿ ವಿರೋಧಿಸಿದೆ. (ಪ್ರ : ಮೈಸೂರು ವಿ. ವಿ. ನಿಲಯ : ಮೈಸೂರು).

23 ಡಾ. ಪಿ. ವಿ. ನಾರಾಯಣರ : ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ (ಪಿ. ಹೆಚ್. ಡಿ ನಿಬಂಧ) ಈ ಬಗ್ಗೆ ಅನೇಕ ಅಮೂಲ್ಯ ಅಂಶಗಳನ್ನೊದಗಿಸುತ್ತದೆ. ಪ್ರ : ವೀರಶೈವ ಅಧ್ಯಯನ ಸಂಸ್ಥೆ : ತೋಂಟದಾರ್ಯಮಠ ಗದಗ : (1985).

24 ಹರಿದಾಸಸಾಹಿತ್ಯ : ಪೀಠಿಕೆ 10 : ಕ. ಸಾ. ಪ : (1952)

25 Haridasa movement ಪದ ಬಳಕೆ ಆಗಿರುವ ಇನ್ನೊಂದು ಗ್ರಂಥ : Mystic Teaching of Haridasas of Karnataka (1939)

26. ಅನಂತರ ಹರಿದಾಸಸಾಹಿತ್ಯದ ಬಗ್ಗೆ ಅನೇಕ ಗ್ರಂಥ, ಕೆಲವು ಹರಿದಾಸರ ಕುರಿತ ನಿಬಂಧ ಬಂದಿವೆ.

* ಮತ-ನೀತಿ ವಿಶ್ವಕೋಶ, ಸಾಮಾಜಿಕ ವಿಜ್ಞಾನ ವಿಶ್ವಕೋಶಗಳಲ್ಲಿ, ಆಂದೋಲನ movement ಬಗ್ಗೆ ವಿವರವಿಲ್ಲ. (Encyclopaedia Britannica, Dictionary of Hinduism)

27 Webster's New International Dictionary, Vol. 3

28 Mysore University Dictionary : p.752

29 ನಿಘಂಟು : ಕನ್ನಡ ಸಾಹಿತ್ಯ ಪರಿಷತ್ತು : (1975) : ಪುಟ-72-325

30 ಚಳುವಳಿ ಎಂಬ ಶಬ್ದಕ್ಕೆ ಇತ್ತೀಚಿನ ದಿನಗಳಲ್ಲಿ ಕೀಳರ್ಥವು ಹೆಚ್ಚು ಬರುವುದೆಂದು ಕೆಲವರ ಅಭಿಪ್ರಾಯ.

31 ಆವರಣದ ಅಭಿಪ್ರಾಯ ನನ್ನದು.

32 ಮುಂದೆ ▪ ಕ್ರಾಂತಿ ಮುರಿದು, ಸಂಘಟನೆಯೊಡೆದು, ಕ್ರಮೇಣ ವೀರಶೈವರು ಎಲ್ಲ ಮತಗಳಂತೆಯೆ ಜಡ್ಡುಗಟ್ಟಿ, ಜಾತಿಪದ್ಧತಿಯನ್ನೂ ಒಳಗೊಂಡ ಹಾಗೆ ತನ್ನದೆ ಜಾತಿ ಗುಂಪಾಯಿತಷ್ಟೆ. ಆದರೆ, ಇಲ್ಲಿ-ವಚನಚಳುವಳಿಯಲ್ಲಿ-ಅತ್ಯಂತ ಸಾಮಾನ್ಯ, ಕೀಳು ಜಾತಿಯವನೂ ತನ್ನನ್ನು ತಾನು ತೊಡಗಿಸಿಕೊಂಡ, ಸಾಮಾನ್ಯರಿಗೆ ಬಾಯಿ ತರಿಸಿ, ಮಾತಾಡಿಸಿದ್ದು ವಚನ ಚಳುವಳಿಯ ಸಾಧನೆ.

33 (Ed) H. P. Sen : 'Social contents of Indian Religious Reform Movements'

34 M. S. A. Rao (Ed) : 'Movements of India'

35 "ಭಾರತೀಯ ಮತ (ಧರ್ಮ) ಸುಧಾರಣಾತ್ಮಕ ಆಂದೋಲನಗಳಲ್ಲಿ ಸಾಮಾಜಿಕ ಅಂಶಗಳು" (ಎಂಬ ಡಾ. ಸೆನ್ ಸಂಪಾದಿದ ಗ್ರಂಥ ಗಮನಾರ್ಹ).

36 ಕೃತಿ ಸಂಖ್ಯೆಯ ಹೇಳಿಕೆ ಎಷ್ಟರಮಟ್ಟಿಗೆ ಪರಿಗ್ರಾಹ್ಯವೆಂಬುದು ಸಂಶೋಧನೆಯ ವಿಚಾರ.

37 ಕಳೆದ ವರ್ಷವಷ್ಟೆ ಬೆಂಗಳೂರಿನ ಈಜುವ ಕೊಳ ಬಡಾವಣೆಯ ಶ್ರೀರಾಘವೇಂದ್ರ ಸ್ವಾಮಿಗಳವರ ಮಠ(ದೇವಸ್ಥಾನ)ದಲ್ಲಿ ಕುಂದಾಪುರದ ಶ್ರೀ ಶ್ರೀ ವ್ಯಾಸರಾಜಪೀಠಾಧೀಶರು ಅನೇಕರಿಗೆ ಹರಿದಾಸದೀಕ್ಷೆ, ಅಂಕಿತ ಪ್ರಧಾನ ಮಾಡಿದರು.

* ಡಾ. ಜಿ. ವರದರಾಜಾರಾಯರೊಡನೆ ವಿಚಾರ ವಿನಿಮಯ. ಇದಕ್ಕಾಗಿ ಅವರಿಗೆ ನಮಿಸುತ್ತೇನೆ.

38 ವರದರಾಜರಾಯರ ಅಭಿಮತ.

39 ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಸಂಪುಟ-4 : ಭಾಗ-2 : ಪುಟ-507. ಬೆಂಗಳೂರು ವಿ. ವಿ. ನಿಲಯ, ಬೆಂಗಳೂರು.

40 ಅದೇ : ಪುಟ-914 : ಇದೇ ರೀತಿ ಹರಿದಾಸರ ಕೀರ್ತನ ಸಾಹಿತ್ಯ ಅಂಕುರಿಸಿ, ಬೆಳೆಯಿತೆಂಬುದು ಗಮನಾರ್ಹ.

41 ಅದೇ : ಪುಟ : 930-931.

42 ಈ ದಿಸೆಯಲ್ಲಿ ನಮ್ಮೊಂದಿಗೆ ಮೊನ್ನೆಮೊನ್ನೆವರೆಗಿದ್ದ ಶ್ರೀ ಗುರುಗೋವಿಂದ ವಿಠಲ ದಾಸರು (1982) ಮೈಸೂರು : ಒಂದು ನಿದರ್ಶನ : ಶ್ರೀಯುತರು ಹರಿದಾಸದೀಕ್ಷೆ ಪಡೆದದ್ದು ದೇವರಾಯನದುರ್ಗದ ಪರಮಪ್ರಿಯ ಸುಬ್ಬರಾಯದಾಸರಿಂದ. ಅನೇಕ ಗ್ರಂಥ ರಚಿಸಿರುವ ಇವರ ಒಂದು ಗ್ರಂಥ 'ಪರಮಪ್ರಿಯ ಸುಬ್ಬರಾಯದಾಸರು' ಹರಿದಾಸ ಆಂದೋಲನ ಮುಂದುವರಿದಿರುವ ಸೂಚನೆ ಸ್ಪಷ್ಟೀಕರಿಸುತ್ತದೆ. ಗುರು ಗೋವಿಂದ ವಿಠಲದಾಸರ ಬಗ್ಗೆಯೆ ಅವರ ಶಿಷ್ಯರು ಬರೆದಿದ್ದಾರೆ.

43 ವಿವರಗಳಿಗೆ : ಶ್ರೀಜಗನ್ನಾಥದಾಸರು : ಡಾ. ಕೆ. ಎಂ. ಕೃಷ್ಣರಾವ್ : (1956) : ಕಡೆಯ ಅಧ್ಯಾಯದ ಘಟಗಳು : ಉಷಾ ಸಾಹಿತ್ಯ ಮಾಲೆ, ಮೈಸೂರು ಹಾಗೂ ಹನುಮಂತರಾವ್ ಗೋರೆಬಾಳರು ಸಂಪಾದಿಸಿರುವ : "ಶ್ರೀಜಗನ್ನಾಥದಾಸರ ಶಿಷ್ಯ ಪ್ರಶಿಷ್ಯರ ಕೃತಿಗಳು" ಪುಸ್ತಕ ಗಮನಾರ್ಹ.

44 ವಿವರಗಳಿಗೆ : ಶ್ರೀ ಬೇಲೂರು ಕೇಶವದಾಸರು : ಕರ್ನಾಟಕ ಭಕ್ತವಿಜಯ : (1983) ಉಷಾ ಸಾಹಿತ್ಯ ಮಾಲೆ : ಮೈಸೂರು : ಅಲ್ಲದೆ ಇತ್ತೀಚಿನ ಹರಿದಾಸರ ಬಗ್ಗೆ ಮಾಹಿತಿ ಸ್ವಲ್ಪ ನೀಡುವ ತಿರುಪೊತ್ತಿಗೆ ತಿರುಮಲ ತಿರುಪತಿ ದೇವಸ್ಥಾನದ ಹರಿದಾಸಸಾಹಿತ್ಯ ಪ್ರಾಜೆಕ್ಟ್‌ನ ಶ್ರೀ ಕೆ. ಅಪ್ಪಣಾಚಾರ್ಯರು.

45 ದಾಸರು ಬರೆದ 40 ಕೃತಿಗಳು ತಮ್ಮಲ್ಲಿವೆಯೆಂದು ಶ್ರೀ ಕೇಶವದಾಸರು ತಿಳಿಸಿದ್ದಾರೆ. ಇದು ಒಂದು ವಿಶೇಷ ಸಂಗತಿ. (ಹರಿದಾಸ ಆಂದೋಲನ ಮುಂದುವರಿದ ದೃಷ್ಟಿಯಿಂದ ಪುಟ-565 : ಶ್ರೀ ಕರ್ನಾಟಕ ಭಕ್ತವಿಜಯ : 1983. ಐದನೆ ಮುದ್ರಣ.)

46 ಇದನ್ನು ಶ್ರೀದಾಸರು ಲಕ್ಷ್ಮೀಕಟಾಕ್ಷ ರೂಪದಲ್ಲಿ ಶಿವಾಜಿಯ ಗೌರವಕ್ಕೆ ಪಾತ್ರರಾದ ಸಂದರ್ಭದಲ್ಲಿ ರಚಿಸಿದ್ದು.

47 ಇವರ ಕೃತಿಗಳನ್ನು ಶ್ರೀ ಹನುಮಂತರಾವ್ ಗೋರೆಬಾಳರು ಪ್ರಕಟಿಸಿದ್ದಾರೆ. ಈಗ ಮೈಸೂರು ವಿ. ವಿ. ...ಯದವರು ಹರಿದಾಸ ಸಾಹಿತ್ಯ ವಿಭಾಗದ ಮೂಲಕ ಪ್ರಕಟಿಸುವವರಿದ್ದಾರೆಂದು ತಿಳಿದು ಬಂದಿದೆ.

48 ಹಳವನಸೊಬ್ಬನಿಗೆ ಶ್ರೀರಂಗನಾಥನ ವಿಗ್ರಹ ಹೊರೆತು ಆತ ನಿರ್ಮಿಸಿದ ಕ್ಷೇತ್ರವಿದೆಂದು ಪರಂಪರಾನುಗತವಾಗಿ ತಿಳಿದು ಬರುತ್ತದೆ. ವಿವರಗಳಿಗೆ ನೋಡಬಹುದು : ಹಳವನ ಕಟ್ಟೆ ಗಿರಿಯಮ್ಮನ ಹಾಡುಗಳು : ಸಂ : ಕಾವ್ಯಪ್ರೇಮಿ : (ಧಾರವಾಡ).

49 ಈಕೆಯು ಕಾಲ ಕ್ರಿ. ಶ. 1750 ಎಂದು ಕವಿಚರಿತಾಗಾರರು ತಿಳಿಸಿದ್ದಾರೆ. ವಿದ್ವಾಂಸರ ಅಭಿಮತದ ಪ್ರಕಾರ 1725-50 ಈಕೆಯ ಕಾಲದ ಹರಹು ಎನ್ನಬಹುದು.

50 ಡಾ : ಸರೋಜಿನಿ ಮಹಿಷಿಯವರು : 'ಕರ್ನಾಟಕದ ಕವಯಿತ್ರಿಯರು' (1965) ಎಂಬ ಹೊತ್ತಗೆಯಲ್ಲಿ ಕೆಲವು ಮಹಿಳಾ ಕೃತಿಕಾರರನ್ನು ಕುರಿತು ಮಾಹಿತಿ ನೀಡಿದ್ದಾರೆ.

51 ಅದೇ :

52 ಈಕೆ ತನ್ನ ಎಳೆಯತನದಲ್ಲಿ ಅನೇಕ ಪವಾಡಗೈದಳೆಂದೂ ಕಥೆಗಳಿವೆ.
ವಿವರ : ಹರಪನಹಳ್ಳಿ ಭೀಮವ್ವನ ಕೃತಿಗಳು : ಮೈಸೂರು ವಿ. ವಿ. ನಿಲಯ, (1985) ಪೀಠಿಕೆ. ಹರಪನಹಳ್ಳಿ ಭೀಮವ್ವನ ಹಾಡುಗಳು ; ಸಂ. ಕಾವ್ಯಪ್ರೇಮಿ : ಸಮಾಜ ಪುಸ್ತಕಾಲಯ : ಧಾರವಾಡ.

53 ವಿವರಗಳಿಗೆ ನೋಡಬಹುದಾದದ್ದು : ಕರ್ನಾಟಕದ ಕವಯಿತ್ರಿಯರು.

54 ಗಿರಿಬಾಲೆಯ ಕೃತಿಗಳೂ ಪ್ರಕಟ ಆಗಿವೆ.

55 ಪಾಮಂಚೆಯವರ ಕೃತಿಗಳು ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ.

# ಕರ್ನಾಟಕ ಹರಿದಾಸ ಸಾಹಿತ್ಯದ ಉಗಮ ಮತ್ತು ಸ್ವರೂಪ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅವಿಸ್ಮರಣೀಯ ಘಟ್ಟಗಳೆನ್ನಿಸುವ "ವಚನಸಾಹಿತ್ಯ ಹಾಗೂ "ಹರಿದಾಸಸಾಹಿತ್ಯ" "ಸಾಹಿತ್ಯ ಶಾರದೆಯ" "ಎರಡು ಕಣ್ಣುಗಳ" ಹಾಗೆಂದೂ ಹೇಳಬಹುದು. ವಚನಸಾಹಿತ್ಯ ಕ್ರಿ. ಶ. ಹನ್ನೆರಡನೆ ಶತಮಾನದಲ್ಲಿ ಪ್ರವರ್ಧಿಸಿ, ಬೆಳೆದು ಬೆಳಗಿದರೆ, ಹರಿದಾಸಸಾಹಿತ್ಯ ಕ್ರಿ. ಶ. ೧೪ನೆ ಶತಮಾನದಿಂದ ಸುಮಾರು ೨೦೦ ವರ್ಷ ಬೆಳೆದು, ಅನಂತರ ಒಂದು ಶತಮಾನ ಸ್ವಲ್ಪ ಮಂಕಾಗಿ, ಮತ್ತೆ ಹದಿನೇಳನೆ ಶತಮಾನದಿಂದ, ಹತ್ತೊಂಭತ್ತನೆ ಶತಕದ ಆರಂಭ ಘಟ್ಟದವರೆಗೆ ಹಬ್ಬಿ, ವ್ಯಾಪಿಸಿತು. ಇಂದೂ, ಹರಿದಾಸದೀಕ್ಷೆ ಪಡೆದವರು ನಮ್ಮಲ್ಲಿದಾರೆ. ಹರಿದಾಸ ಸಾಹಿತ್ಯ ನಿಂತ ನೀರಾಗದೆ, ಮುಂದುವರೆಯುತ್ತಿದೆ. ಇಷ್ಟಾದರೂ, ವಚನಸಾಹಿತ್ಯ ಹರಿದಾಸಸಾಹಿತ್ಯದ ಹುಟ್ಟು, ಸ್ವರೂಪಗಳು ಬೇರೆ ಬೇರೆಯೇ ಆಗಿವೆ. ಧ್ಯೇಯ ಕೂಡ ಭಿನ್ನವೆ. ಮೊದಲಿನದರ ಚಳವಳಿ ಕ್ರಾಂತಿಕಾರಕ ಆದರೆ, ಎರಡನೆಯದರದ್ದು ಭಕ್ತಿಯ ಆಂದೋಲನ. ಆಧ್ಯಾತ್ಮಿಕ ಆಂದೋಲನ. ಎರಡೂ ಆಂದೋಲನಗಳ ಪ್ರಧಾನ ಧ್ಯೇಯ ಸಮಾಜ ಹಿತ, ಹಾಗೂ ಸಮಾಜ ನಿರ್ಮಿಸಿದ ಪ್ರತಿಬಂಧಕಗಳ ವಿರುದ್ಧ ಹೋರಾಟ. ಈ ಹೋರಾಟ ಹಿಂದಿನಿಂದಲೂ ನಡೆದಿದ್ದು, ಅಂದೂ ನಡೆದು, ಇನ್ನೂ ಮುಂದುವರೆಯುತ್ತಿದೆ. ಆದರೆ, ಸಮಾಜ ಸುಧಾರಣೆಯಲ್ಲಿ ವಚನಸಾಹಿತ್ಯ, ಹರಿದಾಸಸಾಹಿತ್ಯ ಎಸಗಿರುವ ಉಪಕಾರ, ಮರೆಯುವಂತಿಲ್ಲ. ಇದರಿಂದ, ಈ ಎರಡೂ ಸಾಹಿತ್ಯಗಳ ಉಗಮ, ಮತ್ತು ಸ್ವರೂಪದೆಡೆ ನಮ್ಮ ಲಕ್ಷ್ಯ ತಾನೇ ತಾನಾಗಿ ಹೋಗುತ್ತದೆ.

"ಕರ್ಣಾಟಕ ಹರಿದಾಸಸಾಹಿತ್ಯದ ಉಗಮದ ಬಗ್ಗೆ ಈಗಾಗಲೇ ಸಾಕಷ್ಟು ಚರ್ಚೆ[1] ನಡೆದಿದೆ." ವಿದ್ವಾಂಸರಾದ ಪ್ರೊ. ಆರ್. ಎಸ್. ಪಂಚಮುಖಿ, ಕಪಟರಾಳ ಕೃಷ್ಣ ರಾಯರು, ಡಾ. ಜಿ. ವರದರಾಜರಾಯರು, ಡಾ. ಕೆ. ಎಂ. ಕೃಷ್ಣರಾಯರಂಥವರು ತಮ್ಮ ಬೆಲೆಯುಳ್ಳ ಸಂಶೋಧನ ಅಂಶಗಳನ್ನು ಹೊರಗೆಡವಿದಾರೆ. ಹರಿದಾಸರ ಕೃತಿಗಳ ಬಿಡಿ ಅಧ್ಯಯನವೂ ನಡೆದಿದೆ. ಆದರೂ, "ಇದಮಿತ್ಥಂ" ಎಂದು ಇನ್ನೂ ನಿರ್ಧರ ಸ್ವರೂಪ ಬಂದಿಲ್ಲ. ಹರಿದಾಸಸಾಹಿತ್ಯದ ಉಗಮ, ಸ್ವರೂಪದ ಬಗ್ಗೆಯೇ ಇಲ್ಲಿ ಚರ್ಚಿಸುವ ಪ್ರಯತ್ನ ನಡೆದಿದೆ. ಇದಕ್ಕೆ ಮೊದಲು, ಹರಿದಾಸಸಾಹಿತ್ಯಕ್ಕೆ ಹೊಂದಿಕೊಂಡಂತೆ, ಭಕ್ತಿಸಾಹಿತ್ಯ, ವೈದಿಕಧರ್ಮ, ಭಾಗವತಧರ್ಮ, ಇವುಗಳ ಬಗ್ಗೆ ತಿಳಿಯಲೆತ್ನಿಸುವುದು ನಮ್ಮ ಅಧ್ಯಯನಕ್ಕೆ ಪೋಷಕ ಸಾಮಗ್ರಿಯೆನಿಸಿಕೊಳ್ಳುತ್ತದೆ. ಅನಂತರ, ಹರಿದಾಸಸಾಹಿತ್ಯದ ಹುಟ್ಟು ಮುಂತಾದುವುಗಳನ್ನು ಅಭ್ಯಸಿಸಬಹುದು.

ಸಾಹಿತ್ಯ ಕುರಿತು ಹಲವಾರು ವ್ಯಾಖ್ಯೆಗಳು "ರಸಾನುಭವದ[2] ವಾಗ್ರೂಪದ ಅಭಿವ್ಯಕ್ತಿ", "ರಸಾನುಭವದ ಅಭಿವ್ಯಕ್ತಿ", "ಸಾಹಿತ್ಯ ಜನಜೀವನದ ಕನ್ನಡಿ", "ಗತಿಬಿಂಬ"[3] ಎಂದೆಲ್ಲ ವಿದ್ವಾಂಸರು ನಿರೂಪಿಸಿದ್ದಾರೆ. ಸಾಹಿತ್ಯಕ್ಕೆ ಮೂರ್ತ ಸ್ವರೂಪ ಕೊಡುವ ಸಾಧನ ಭಾಷೆ. ಭಾಷೆ, ಸಾಹಿತ್ಯವನ್ನು ಹಿಡಿದಿರಿಸುತ್ತದೆ. ಹಾಗೂ ಸಮೂಹ ಸಂಪರ್ಕ ಮಾಧ್ಯಮ, ಸಾಧನ. ತಲೆಯಿಂದ ತಲೆಗೆ, ಬಾಯಿಯ ಮೂಲಕ ಬೆಳೆದು ಬಂದ "ನಾಡಿನ ಸಾಹಿತ್ಯ," "ಜನಪದ ಸಾಹಿತ್ಯ"ವೆನ್ನುತ್ತೇವೆ. ಬರಹದಲ್ಲಿ ದೊರೆವಂಥದ್ದ "ಗ್ರಂಥಸ್ಥ ಸಾಹಿತ್ಯ." ಹರಿದಾಸಸಾಹಿತ್ಯ ಜನಪದದಲ್ಲಿ ಸಂಚರಿಸುತ್ತಿದ್ದ ಗ್ರಂಥಸ್ಥ ಆದ ಸಾಹಿತ್ಯ. ಗ್ರಂಥಸ್ಥ ಆದರೂ, ಕಾವ್ಯದಲ್ಲಿರುವ ಓಜಸ್ಸು, ತತ್ವ, ಕಾವ್ಯಧರ್ಮ, ಕವಿತಾಗುಣ, ಗೇಯತೆ, ಇದರಲ್ಲಿ ಪೋಣಿಸಿದಂತೆಯೆ ಜನಪದ ಸೊಗಡೂ ಇದೆ, ಅಭಿವ್ಯಕ್ತಿಯೂ ಇದೆ. ಜನಪದಸಾಹಿತ್ಯದಂತೆಯೇ ಹರಿದಾಸ ಸಾಹಿತ್ಯವೂ ಶತಮಾನಗಳಿಂದ ಮುಖೇನ ಬೆಳೆದು ಬಂದದ್ದೂ ಆಗಿದೆ. ಜನಸಾಮಾನ್ಯರಿಗೆ ಅರ್ಥ ಸುಲಭ ಆಗಿಸಲು, ಜನಪದ ನುಡಿಮುತ್ತುಗಳಲ್ಲಿ ತಮ್ಮ ಸಾಹಿತ್ಯವನ್ನು ಹರಿದಾಸರು ಪ್ರಸರಿಸಿದ್ದಾರೆ. ಇದಕ್ಕೆ ಪೋಷಕ ಕಾರಣವೂ ಉಂಟು. ಹಿರಿಯ ಋಷಿಗಳು. ದಾರ್ಶನಿಕರು, ಮಠಾಚಾರ್ಯರು, ಸಾಧುಸಂತರು, ತಿಳಿಸಿಕೊಟ್ಟ ನೀತಿ ಧರ್ಮ ತತ್ವ ಆಧ್ಯಾತ್ಮಿಕ ಮಾರ್ಗಗಳನ್ನು ಸಾಮಾನ್ಯರಿಗೂ ಅವಗಾಹ್ಯ ಆಗುವ 'ನಾಡಿನನುಡಿ'ಯಲ್ಲಿ ಪರಿಚಯಿಸಿಕೊಟ್ಟು, ಸಮಾಜಹಿತ, ಸುಧಾರಣೆ, ಒಳ್ಳಿತಿಗಾಗಿ ಶ್ರಮಿಸಿದ ಸಂಘಟಿತ ಸಮುದಾಯ-ಹರಿದಾಸರದು. ಅಂತೆಯೆ ಅವರ ಸಾಹಿತ್ಯದಲ್ಲಿ ಪಂಡಿತರು-ಮಠಾಧಿಪತಿಗಳ ಕೃತಿಗಳಲ್ಲಿನ ಗಹನ ತತ್ವವಿದ್ದರೂ ಅದರಲ್ಲೂ ಸರಳತೆಯೆ ಎಳೆ ಎಳೆಯಾಗಿ ಹಾಸು ಹೊಕ್ಕಾಗಿರುವುದನ್ನು ಕೃತಿಗಳ ಅಧ್ಯಯನದ ಮೂಲಕ ನಾವು ತಿಳಿದುಕೊಳ್ಳಬಹುದು. ಕನ್ನಡ ಸಾಹಿತ್ಯ ಚರಿತ್ರಕಾರರ ಪ್ರಕಾರ, "ಯಾವುದೇ ಬೆಳೆಯುತ್ತಿರುವ ಭಾಷೆಯಲ್ಲಿ ಯಾವುದೂ ಒಂದು ಕಾಲಕ್ಕೆ ಗ್ರಂಥಸ್ಥ ಆದ ಸಾಹಿತ್ಯವು ತಲೆದೋರುತ್ತದೆ. ಮುಂದೆ ಪರಂಪರೆಯಾಗಿ ಸಾಗುತ್ತದೆ."[4] ಅಂಥ ಸಾಹಿತ್ಯ ಉದಯಿಸಲು ಹಲವಾರು ಕಾರಣವೂ ಇರುತ್ತವೆ. "ವಚನ-ಕೀರ್ತನೆಗಳು ಕನ್ನಡದಲ್ಲಿಯೆ ಇವೆ."[5]

1. ಪ್ರಗತಿಯ ಒಲವು ಸಾಮಾಜಿಕ ಜೀವನದಲ್ಲಿ ಸಂಘಟನೆ.
2. ಸಾಹಿತ್ಯಕ್ಕೆ ಆಶ್ರಯದಾತರಾದ ರಸಿಕರು, ರಾಜರು.
3. "........ಪರಂಪರೆಯಿಂದ ಗ್ರಂಥ ರಚನೆ........ಜನದ ವಾಣಿಗೆ ಗ್ರಂಥ ರಚನೆಯ ನಡಿಯಾಗಿಸಿ ಮನ್ನಣೆ ಕೊಡಲು ಕ್ರಾಂತಿಕಾರಕವಾದ ಘಟನೆಗಳೂ ಆಂದೋಲನಗಳೂ ಉಂಟಾಗುತ್ತದೆ. ಹೊಸ ದೃಷ್ಟಿ ತಲೆದೋರುತ್ತದೆ. ಹಳೆಯ ದೃಷ್ಟಿಯೊಡನೆ ತಾಕಲಾಡಿ ಮಿನುಗುತ್ತದೆ.
4. ಹೊಸತತ್ವ, ಧರ್ಮ ಇವುಗಳ ಪ್ರಸಾರಕ್ಕೆ ಹೊಸವಾಹಕ ಆಗಿ ಜನ ಭಾಷೆ ತಲೆಯೆತ್ತುವುದು : ಜನಜೀವನದ ತಿದ್ದುಪಾಡಿಗೆ ಮತ್ತು ಪ್ರಚಾರಕ್ಕೆ ಒಂದು ಸಾಧನ ಆಗಿ ಜನಭಾಷೆಯಲ್ಲಿ ಸಾಹಿತ್ಯ ಕಣ್ಣೆರೆಯುತ್ತದೆ.

ಇದು ಹರಿದಾಸಸಾಹಿತ್ಯ ಹಾಗೂ ಅದಕ್ಕೆ ಹಿಂದೆ ಒಡಮೂಡಿ ಬಂದು, ಬೆಳಗಿದ ವಚನಸಾಹಿತ್ಯ ಸಂಪದಗಳಿಗೂ ಹೊಂದುವ ಮಾತು. ಜನಭಾಷೆ, ಸಾಹಿತ್ಯ ಪದವಿಗೆ ಏರುವಲ್ಲಿ ಜನ ಸಮುದಾಯ, ಕೇಳುಗರು ಅಂದರೆ, ಸಮಾಜ ಮುಖ್ಯ. ಹರಿದಾಸ ಸಾಹಿತ್ಯ ರಚನೆ ಆಗಿ, ಪರಂಪರಾನುಗತವಾಗಿ ಬೆಳೆಯಲು ಈ ಮೇಲ್ಕಂಡ ಕಾರಣಗಳು ಪ್ರಧಾನ ಆಗುತ್ತವೆ. ಒಂದು ಕಾಲಕ್ಕೆ, ಒಂದು ಮತ ಧರ್ಮ, ಸಂಪ್ರದಾಯ ಎತ್ತಿ ಹಿಡಿಯಲು, ಪ್ರಸರಿಸಲು ಒಡಮೂಡಿ ಬಂದದ್ದು ಹರಿದಾಸಸಾಹಿತ್ಯ. ಸಾಮಾಜಿಕ ಬದಲಿಕೆಯಲ್ಲಿ ಸಂಘಟನೆ, ಸುಧಾರಣೆ, ಪ್ರಗತಿಯ ಒಲವು, ಜನಭಾಷೆಯ ಬಳಕೆ ಹರಿದಾಸ ಸಾಹಿತ್ಯದ ಲಕ್ಷಣಗಳೂ ಹೌದು, ಸೃಜನಾತ್ಮಕ ಚಟುವಟಿಕೆಗಳಿಗೆ ಪ್ರೇರಕವೂ ಹೌದು.... ಇನ್ನು ಆಶ್ಚರ್ಯದಾತರಾದ ರಾಜರು-ಹರಿದಾಸ-ಸಾಹಿತ್ಯಕ್ಕೆ ರಾಜಾಶ್ರಯ ಪ್ರಧಾನವಾಗಿ ಅವಲಂಬನೆ ಆಗದಿದ್ದರೂ, ಇಂಬಾಯಿತು. ಪೋಷಕ ಆಯಿತು. ವಿಜಯನಗರದರಸರ ಕಾಲದಲ್ಲಿ ದಾಸಸಾಹಿತ್ಯ ಪುಷ್ಟ ಆಗಿ ಬೆಳೆಯಿತು. ದಾಸ ಪರಂಪರೆ ಮುಂದುವರೆಯಿತು. ವಿಜಯನಗರ ಸಾಮ್ರಾಜ್ಯದ ಅಳಿವು, ಹರಿದಾಸಸಾಹಿತ್ಯ ಸೂರ್ಯನನ್ನು ಮಂಕಾಗಿಸಿದ್ದು ಒಂದು ಶತಕ ಮಾತ್ರ. (ಆ ಅವಧಿಯಲ್ಲೂ ಉತ್ತರ ಕರ್ನಾಟಕದ ಬಿಜಾಪುರ ಬಳಿಯ ಕಾಖಂಡಕಿಯಿಂದ ಬಂದ ಮಹಿಪತಿರಾಯರು ಹರಿದಾಸರಾಗಿ ಅನೇಕ ಕೃತಿ ರಚಿಸಿರುವುದು ಬೆಳಕಿಗೆ ಬಂದಿದೆ.[6]) ಆನಂತರ ಪುನಃ ಮಂತ್ರಾಲಯ ಕ್ಷೇತ್ರದ ಶ್ರೀರಾಘವೇಂದ್ರಸ್ವಾಮಿಗಳವರ (೧೭ನೇ ಶತಮಾನದ ಮೊದಲು-ಉತ್ತರಾರ್ಧ) ಕುರಿತಾದ ಭಕ್ತಿಸ್ಫೂರ್ತಿಯಿಂದಾಗಿ ಬಂದ ಹರಿದಾಸರನೇಕ. ಇದು ದಾಸಸಾಹಿತ್ಯದ ದ್ವಿತೀಯ ಘಟ್ಟ. ಈ ಎಲ್ಲ ಕಾರಣದಿಂದಾಗಿ ಹಾಗೂ ಹರಿದಾಸಸಾಹಿತ್ಯ ಮುಖ್ಯವಾಗಿ ಭಕ್ತಿಸಾಹಿತ್ಯವೆಂದು ಕರೆಸಿಕೊಳ್ಳುವುದರಿಂದ, ಭಕ್ತಿಸಾಹಿತ್ಯ, ಭಕ್ತಿಪಂಥಗಳನ್ನು ಕುರಿತು ವಿಶ್ಲೇಷಿಸುವುದು ಸೂಕ್ತವೆನಿಸುತ್ತದೆ-ಅದೇ ಮುಂದುವರೆದು, ಕರ್ನಾಟಕದ ಹರಿದಾಸ ಪಂಥದ ಉಗಮಕ್ಕೂ ಕಾರಣ ಆಗುವುದನ್ನು ಮನಗಾಣಬಹುದು.

## ಭಕ್ತಿ ಪಂಥ-ಅನುಭಾವಪಂಥಗಳು ಹಾಗೂ ಭಕ್ತಿ ಸಾಹಿತ್ಯ

ಎಲ್ಲರಿಗೂ ನಾನು ಸುಖಿಯಾಗಿರಬೇಕು, ಸುಖಕ್ಕಾಗಿ ದುಡಿಯಬೇಕು ಎಂಬ ಆಸೆ ಯಿದ್ದೆ ಇರುತ್ತದೆ. ಬದುಕುವುದೆ ಸುಖಕ್ಕಾಗಿ, ಎಂಬುವುದು ಸುವಿದಿತ. ಈ ಸುಖ ದಲ್ಲಿ ಎರಡು ರೀತಿ. ಒಂದು ಇಲ್ಲಿ ಈ ಭೂಮಿಯಲ್ಲಿ ಇರುವ ತನಕ ಸುಖ, ನೆಮ್ಮದಿ ಯಿಂದಿರುವಂಥದು. ಇನ್ನೊಂದು ಇಲ್ಲಿನದಲ್ಲದೆ, ಇನ್ನೂ ಮುಂದುವರಿದದ್ದು ಎನ್ನ-ಲಾಗುವ, ಸಂಪಾದಿಸಲು ಕಷ್ಟ ಆಗುವ ರೀತಿಯದಾದ ಸುಖ. ಅದರಲ್ಲಿ ಸಿಗುವ ತೃಪ್ತಿ, ನೆಮ್ಮದಿ, ಅನುಭವವುಂಟು ಮಾತ್ರ. ಹೀಗೆಂದು ಹೇಳುವಂಥದಲ್ಲ. ಮಾತು ಅಲ್ಲಿ ಮೂಕ ಆಗುತ್ತದೆ. ಅನಿರ್ವಚನೀಯ ಸುಖ. ಅದನ್ನು ಅಲೌಕಿಕ ಸುಖ, ಆಧ್ಯಾತ್ಮ ಅಥವಾ ಪರಮಾರ್ಥ ಸುಖವೆನ್ನುತ್ತಾರೆ. ಮೊದಲನೆಯದಕ್ಕೂ, ಎರಡನೆಯ ಸುಖದ ರೀತಿಗೂ ಅಜಗಜಾಂತರ ವ್ಯತ್ಯಾಸ. ಅಲ್ಲದೆ ಪರಸ್ಪರ ಹೊಂದುವಂಥದ್ದೂ ಅಲ್ಲ.

ಕಾಣದ ಆದರೆ ಇರುವನೆನ್ನುವ, ಸರ್ವವ್ಯಾಪಿ, ಸರ್ವಶಕ್ತ, ಸರ್ವಾಂತರ್ಯಾಮಿಯೆನ್ನುವ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಲು ತಪ್ಪು ಇಡೀ ಬದುಕನ್ನೆ ಅರ್ಪಿಸಿಕೊಂಡವ ಪರಿಯವರು, ಲೌಕಿಕ ಅಥವಾ ಇಹದ ಸುಖವನ್ನು "ಕ್ಷಣಿಕ", "ನೀರವೇಲಣ ಗುಳ್ಳೆ", "ಭ್ರಾಂತಿ" ಎಂದೆಲ್ಲ ಅಲ್ಲಗಳೆಯುತ್ತಾರೆ. ಅದು ಬಿಟ್ಟು ಮುಂದೆ ಬಂದು, ನಿತ್ಯ ಶಾಶ್ವತವೆನಿಸುವ ಭಗವತ್ಸುಖ ಪಡೆಯಲು ತಿಳಿಸುತ್ತಾರೆ. ಅವರಿಗೆ ಅದೇ ಪರಮ ಧ್ಯೇಯ ಹಾಗೂ ಚರಮಲಕ್ಷ್ಯ. ಇಂಥ ಅನುಭಾವಿಗಳಾಗುವ ಮೊದಲು (ಹರಿದಾಸ ಪರಿಭಾಷೆಯಲ್ಲಿ "ಅಪರೋಕ್ಷಜ್ಞಾನಿ") ಸಾಧಕರಾಗಿ, ಸಾಧನೆಯ ಮೆಟ್ಟಿಲೇರ ಬೇಕಾಗುತ್ತದೆ. ದೇವರನ್ನು ಜ್ಞಾನದ ಅರಿವಿನ ಬೆಳಕಲ್ಲಿ ಕಾಣಲು ಹೊಂದಲು, ಹಂಬಲಿಸಿ, ಹಲುಬುತ್ತಾರೆ. ಇದಕ್ಕೆ ಮುಖ್ಯ ಸಾಧಕ ಅಂಶವೆ ಭಕ್ತಿ. ಭಕ್ತಿಯನ್ನು ಒಡಮೂಡಿಸುವ, ಪ್ರೇರಿಸುವ, ಕುರಿತು ಹೇಳಿರುವ ಮಾತು, ಗ್ರಂಥ, ಪದ, ವಚನ, ಕೀರ್ತನೆ, ಎಲ್ಲವೂ ಭಕ್ತಿಸಾಹಿತ್ಯ, ಅನುಭಾವಸಾಹಿತ್ಯ ಎಂದೆಲ್ಲ ಹೆಸರಿನಿಂದ ಕರೆಯಲ್ಪ ಡುವುದುಂಟು. ಭಕ್ತಿಯನ್ನು ಕುರಿತು ವಿಚಾರಿಸುವುದು 'ತರ್ಕದಿಂದ ದೇವರನ್ನು ಪಡೆಯಲಾಗದು' ಎಂದಿದ್ದರೂ, ಭಕ್ತಿಯ ವಿವಿಧ ನಿರೂಪಣೆ, ವಿವಿಧ ದರ್ಶನ ಕುರಿತು ತಿಳಿಸುವುದು ಅತ್ಯಗತ್ಯವೆಂದೆನಿಸುತ್ತದೆ. ಅದಕ್ಕೆ ಹೊಂದಿಕೊಂಡಂತೆ ವೇದೋಪನಿಷತ್ತು ಗಳ ಕಾಲದ ಸಂಸ್ಕೃತಿಯ ತಿಳಿವಳಿಕೆಯೂ ಅಧ್ಯಯನಕ್ಕೆ ಸಾಧಕ ಅಂಶವಾಗುತ್ತದೆ. ಭಾರತ ದೇಶ ತುಂಬಾ ಪ್ರಾಚೀನ ಆದ ಸಂಸ್ಕೃತಿ, ನಾಗರಿಕತೆಯ ನೆಲೆಯುಳ್ಳ ಭೂಮಿ. ಇದು ತಪೋಭೂಮಿಯಾದಂತೆಯೆ, ಕರ್ಮಭೂಮಿಯೂ ಕೂಡ. ವಿಜ್ಞಾನಿಗಳ ಹಾಗೂ ಇತಿಹಾಸ-ಪ್ರಾಕ್ತನಶಾಸ್ತ್ರ ಸಂಶೋಧಕರ ಸಂಶೋಧನೆಗಳಿಂದ ಜಗತ್ತಿನಲ್ಲಿ ಮಾನವ ಸಂಸ್ಕೃತಿಯು, ಮೊದಲ ಕಂದುಹುಗಳು ಕಂಡಿರುವುದು ಪೌರ್ವಾತ್ಯ ನಾಡಿನಲ್ಲಿ. ಇದು ಉತ್ಖನನ ಹಾಗೂ ಸಂಶೋಧನೆಗಳಿಂದ ತಿಳಿದುಬಂದಿರುವ ಅಂಶವೇ ಆಗಿದೆ (ಸಿಂಧೂ ನದಿ, ಮೊಹೆಂಜೊದಾರೋ-ಚಂದ್ರ ವಳ್ಳಿ ಭೂಶೋಧ) ಇದು ಅಗ್ಗೆ ಇದ್ದ ದೇವತಾರಾಧಕರ ಬಗ್ಗೆ ತಿಳಿಸುತ್ತದೆ. ಹಾಗೂ ಆಗಲೆ ಕಟ್ಟಲಾಗಿದ್ದ ದೇವಾಲಯಗಳ ಅವಶೇಷಗಳೂ ದೊರೆತಿವೆ (ಕ್ರಿ. ಪೂ. ೩೦೦೦). ಇದಲ್ಲದೆ, ಉತ್ಖನನದಲ್ಲಿ ದೊರೆತಿರುವ ಕೆಲವು ಪ್ರಾಗೈತಿಹಾಸಿಕ ಅವಶೇಷಗಳು, (ಪ್ರಾಗ್‌ದ್ರಾವಿಡ Proto-Dravidian ೬೦೦೦ ವರ್ಷಗಳ ಕೆಳಗೆ) ಇದ್ದ ಆದಿವಾಸಿಗಳು ಅನೇಕ ದೇವತಾರಾಧಕರಾಗಿದ್ದರೆಂಬುದರ ಕುರುಹನ್ನು ಗುರುತಿಸಬಹುದಾಗಿದೆ. ಅಗ್ಗೆ ಸಿಂಹಳ, ಮಲಯಾ, ಪೂರ್ವಇಂಡೀಸ್ ದ್ವೀಪಗಳೆಲ್ಲ ಒಟ್ಟಿಗೆ ಇದ್ದಿರಬೇಕೆಂಬುದೂ ಇತಿಹಾಸಜ್ಞರ ಅಭಿಮತ. ದ್ರಾವಿಡದೇವತೆ ಯಾದ ಶಿವನ ಆರಾಧನೆ ಆಗಲೇ ನಡೆಯುತ್ತಿದ್ದಿರಬೇಕು.

ಹೀಗೆ ಭಕ್ತಿಯ ಪರಂಪರೆಯ ಹರಹು, ಪ್ರಾಗೈತಿಹಾಸಿಕಯುಗದಿಂದಲೆ ಆರಂಭ ಗೊಂಡಿದೆ. ಅನಂತರ ಬಂದ ದ್ರಾವಿಡ (ಸಿಂಧೂ) ಸಂಸ್ಕೃತಿ, ವೈದಿಕಯುಂಗ (ಬ್ರಾಹ್ಮಣಗಳ ಯುಗ), ತತ್ವಶಾಸ್ತ್ರಗಳ ಉದಯ (ಕ್ರಿ. ಪೂ. ೧೦೦), ಪುರಾಣಯುಗ (ಕ್ರಿ. ಪೂ. ೨೦೦-೫೦೦) ಆದಾದ ನಂತರ ಹೊರಗಿನಿಂದ ದಂಡೆತ್ತಿ ಬಂದ ಮುಸಲ್ಮಾನರ

ದಂಡಯಾತ್ರೆ (ಕ್ರಿ. ಶ. ೬೨೪-೧೨೬೬) (Renaissance Period) ಸುಧಾರಣೆ-ಧಾರ್ಮಿಕ, ಮತೀಯ ಸಾಮಾಜಿಕ, ಕ್ರಿ. ಶ. ೧೩-೧೯ನೇ ಶತಕ. ಇಲ್ಲೆಲ್ಲ ಭಕ್ತಿ ಪರಂಪರೆಯು ಎಳೆ ಕೂಡಾ ಬಂದಿದ್ದರೂ ಅತ್ಯಂತ ಪ್ರಾಚೀನ ಮಾಹಿತಿ ದೊರೆವುದೆಂದರೆ, ವೇದಗಳ ಮೂಲಕ ದೊರೆವ ಎಳೆಗಳಲ್ಲಿ 'ವೇದ, ಎಂದರೆ ಜ್ಞಾನ ಸಮೂಹ, ಅರಿವಿನಾಗರ ಎಂದೆಲ್ಲ ಅರ್ಥ.'' ವೇದಗಳಿಂದಲೆ[7] (ವೈದಿಕಯುಗ) ಋಕ್, ಯಜು, ಸಾಮ, ಅಥರ್ವ ಈ ನಾಲ್ಕು ವೇದಗಳು–ಇದರಲ್ಲಿನ ಮಂತ್ರ, ಸಂಹಿತೆ (Samhita) ಮತ್ತು ಬ್ರಾಹ್ಮಣ ಗಳೆಂಬ ಎರಡು ಭಾಗ. ವೇದಗಳ ಪ್ರಾಚೀನತೆ ಕುರಿತು ವಿದ್ವಾಂಸರು, ಉಪನಿಷತ್ತು, ಪ್ರಾಚೀನವೆಂದಾಗ, ಅದಕ್ಕೂ ಮೊದಲು ವೇದಗಳು ಬಂದುವೆನ್ನಬಹುದೆಂದಿದ್ದಾರೆ.

''ವೇದಯುಗದಲ್ಲಿದ್ದ ಮತ ಧರ್ಮಗಳು ಹಾಗೂ ಪ್ರಸಿದ್ಧ ಕಾವ್ಯದ[8] ನೂರನೆ ಒಂದು ಭಾಗ ಈಗ ನಮಗೆ ಉಳಿದಿವೆ ಎನ್ನಲು ನಮಗೆ ಅಧಿಕಾರವಿಲ್ಲ.'' ಆದರೂ ಇವುಗಳ ಮೂಲಗಳ ಮೂಲಕ ಮನುಷ್ಯ ಪ್ರಕೃತಿಯ ಆರಾಧಕನಾಗಿದ್ದನೆಂಬುದು ತಿಳಿಯು ಬರುವ ಪ್ರಧಾನ ಅಂಶ. ವೇದಗಳನ್ನು ''ಅಪೌರುಷೇಯ''ಗಳೆಂದು ಸಾಂಪ್ರದಾಯಿಕವಾಗಿ ಕರೆಯುತ್ತಾರೆ. ಇವುಗಳಲ್ಲಿ ಭಕ್ತಿ, ಶ್ರದ್ಧೆ, ಭಜನೆ, ವಂದನ ಪ್ರಸಾದ ಮುಂತಾದ ಭಕ್ತಿಯ ವಿವಿಧ ಪ್ರಕಾರಗಳ ಅನೇಕ ಉಲ್ಲೇಖಗಳಿವೆ. ''ಶ್ರದ್ಧಾ ಸೂಕ್ತಿ'' ವೆಂಬ ವೇದಸೂಕ್ತದಲ್ಲಿ ಬರುವ ಸಾಲು ಹೀಗಿದೆ. ''ಶ್ರದ್ಧಾಂ ದೇವಾ ಯಜಮಾನಾ ವಾಯು ಗೋಪಾ ಉಪಾಸತೇ'' (ಋ. ೧೫) ಭವೇ ರಥಸ್ಯ ನೃಪಮ : (ಋಗ್ವೇದ ೧೦), ಮಹತ್ತೇ ವಿಷ್ಣೋ ಸುಮತಿಂ ಭಜಾಮಹೇ (ಅದೇ), ಶ್ರದ್ಧಸ್ಮೈ ದತ್ತೋ ಸಜನಾ ಸ ಇಂದ್ರಃ (ಅದೇ ೩ ಭಾಗ), ಶ್ರದ್ಧಾತೇ ಮಘವಾನ್ (ಸಾಮವೇದ) ದೇವೋ ವಸಿಷ್ಠೋ ಅಮೃತಾನ್ ವಂದೇ...... (ಋ... ....).'' ವೇದಗಳ ಕಾಲದ ಕರ್ತಾರರಿಗೆ, ಋಷಿಗಳಿಗೆ ಏಕದೈವ ಕಲ್ಪನೆಯಿರಲಿಲ್ಲ. ಅಲ್ಲಿ ಬಹುದೇವತಾವಾದ ಇದೆ. ಎಂಬ ಮಾತು ಸಾಧುವಲ್ಲವೆಂದನ್ನಿಸುತ್ತದೆ. ಭಕ್ತಿ, ಒಂದು ಮಹೋನ್ನತ ಚೇತನದ ಇರವನ್ನು ಸೇರುತ್ತವೆ. ಆ ಚೇತನವಿರದಿದ್ದರೆ ಭಕ್ತಿಯೇ ಇಲ್ಲ. ಪ್ರೇಮ, ಭಕ್ತಿಯು ಒಂದು ಔನ್ನತ್ಯದ ಅವಸ್ಥೆ. ವೇದ ಮಂತ್ರಗಳಲ್ಲಿ ಅಗ್ನಿ, ವರುಣ, ಇಂದ್ರ, ರುದ್ರ ಇತ್ಯಾದಿ ದೇವತೆಗಳ ಸ್ತುತಿ ಇದ್ದರೂ, ಅವರು ಅನಂತರ ಬರಬರುತ್ತ ಅಪ್ರಧಾನ ದೇವತೆಗಳಾಗಿ ಪರಿಗಣಿಸಲ್ಪಟ್ಟರು. ಮನುಷ್ಯನು ತನ್ನ ಬದುಕಿನಲ್ಲಿ ಅಗತ್ಯವೆನಿಸುವ ನೀರು, ಬೆಂಕಿ, ಗಾಳಿ, ಆಕಾಶ, ಮುಂತಾದ ಪ್ರಕೃತಿಯ ಶಕ್ತಿಗಳಿಗೆ ಮೂರ್ತ ಸ್ವರೂಪವಿತ್ತು ಆರಾಧಿಸಿದ. ಅವರೇ ವರುಣ, ಅಗ್ನಿ, ವಾಯು, ಸೂರ್ಯ, ಉಷಸ್ಸು, ಆಕಾಶ, ಹೀಗೆ. ವೇದಗಳಲ್ಲಿ ಪ್ರಾಮುಖ್ಯ ಇಂದ್ರ ಮತ್ತು ವರುಣರಿಗೇ.... ಇಂದ್ರ ಪ್ರಿಯುದ್ಧೈವ ಹಾಗೂ ಪ್ರಜಾಹಿತ ರಕ್ಷಕ.[9] ವರುಣ, ಕಟ್ಟುನಿಟ್ಟಾದ ದೇವತೆಯೆಂದೇ ತಿಳಿದಿದ್ದ ಮನುಷ್ಯ ಅವನ ಒಲವರಕ್ಕಾಗಿ ಅನವರತ ಪ್ರಾರ್ಥಿಸುತ್ತಾನೆ. ರಾಧಾಕೃಷ್ಣನ್ ಅವರ ಅಭಿಪ್ರಾಯದಂತೆ, ''ವರುಣ, ಮಳೆಯ ದೇವತೆ''. ವರುಣನಾರಾಧನೆ

ಆರ್ಯರ ಕಾಲದಿಂದ ಆರಂಭ ಆಗಿದ್ದು, ಮುಂದೆ ಬರಬರುತ್ತ ಅಷ್ಟು ಪ್ರಧಾನ ಆಗದಿದ್ದರೂ ಭಾರತೀಯರಲ್ಲಿ ಅತ ಚಿರವಾಗಿ ಉಳಿದ, ಜನಪದ ಕವಿಗಳೂ ಹಾಡುವ ತನಕ. ಯಜ್ಞ ಯಾಗಾದಿಗಳಲ್ಲಿಯೂ ಇಂದ್ರ-ವರುಣರಿಗೆ-ಅದರಲ್ಲೂ ಇಂದ್ರನಿಗೆ ಪೂಜ್ಯತೆ. "ಏಕಂಸದ್ವಿಪ್ರಾ ಬಹುಧಾವದನ್ತಿ" ಎಂದು ಋಗ್ವೇದ ಇದನ್ನು ಸಾರುತ್ತದೆ. ವೇದ ಮಂತ್ರ ದ್ರಷ್ಟಾರರು ಇಂದ್ರನನ್ನು ತನ್ನ ಲೋಕದ ಜನರನ್ನು ಕಾಪಾಡುವಂತೆ ಬೇಡುತ್ತ, "ಶಕ್ತಿವಂತನಾದ ವರುಣ, ಎಲ್ಲರ ಪಾಪ-ಅಪರಾಧಗಳನ್ನೂ ಕ್ಷಮಿಸು" ಎಂದು ಪ್ರಾರ್ಥಿಸುತ್ತಾರೆ.[10]

ಉಪನಿಷತ್ತುಗಳು ವೇದಾಂತ ದರ್ಶನಗಳು. ಅವುಗಳ ವ್ಯಾಪ್ತಿ ರಚನೆಯ ಕಾಲ, ವಿಶಾಲ, ಅನೇಕ ಶತಮಾನಗಳವರೆಗೆ ಇರುವುದರಿಂದ ಕರಿದಾಗಿ ಹೇಳುವುದು ಕಷ್ಟವೆ. ಇಷ್ಟು ಮಾತ್ರ ಖಚಿತ: ಅನಂತರ ಬಂದಿರುವ ಎಲ್ಲ ವೇದಾಂತ ತತ್ತ್ವ ಶಾಖೆಗಳೂ ಉಪನಿಷತ್ತುಗಳನ್ನ ವಲಂಬಿಸಿಯೇ ಬಂದಿವೆ. ಎಲ್ಲವೂ ಬೋಧಿಸುವುದು "ಏಕಬ್ರಹ್ಮ" ಆವನೇ "ಚಿತ್" ಎಂದು ಕರೆಯಲ್ಪಡುವವನು. ಅವನಲ್ಲೆ ಎಲ್ಲ ಅಡಕವಾಗಿ, ಅವನಿಂದಲೆ ದರ್ಶನಗಳು ಹೊರಹೊಮ್ಮಿವೆ. ಚರಾಚರಕ್ಕೆಲ್ಲ ಬ್ರಹ್ಮನೆ ಆಕರ. ಅವುಗಳಲ್ಲಿರುವುದು "ಪ್ರಜ್ಞಾನ"ದಲ್ಲಿ. ಪ್ರಜ್ಞಾನವೇ ಪ್ರಪಂಚ ಪಾಲಕ-ಅದೇ "ಬ್ರಹ್ಮ". ಭಾರತೀಯ ತತ್ತ್ವಶಾಸ್ತ್ರಕ್ಕೆ ಆಧಾರ ಸ್ತಂಭ-ಆತ್ಮಬ್ರಹ್ಮ (ಐತರೇಯ-3-3) ಮ್ಯಾಕ್ಸ್‌ಮುಲ್ಲರ್ ಅವರು 'ಬ್ರಹ್ಮನ್' ಎಂದರೆ ಇಡೀ ಪ್ರಕೃತಿಯ ಸ್ವಯಂಭುವಾಗಿ ಒಡೆದು ಮೂಡಿದ್ದು ವಿಶ್ವದ ಮೂಲಾಧಾರ ಎಂಬ ವ್ಯಾಖ್ಯೆ ನೀಡುತ್ತಾರೆ.

ಉಪನಿಷತ್ತುಗಳ ದುಷ್ಟಾರರು, ಈ ಬದುಕು ಏನು, ಇಲ್ಲಿಂದ ಮುಂದೇನು ಎಂದೆಲ್ಲ ಪ್ರಶ್ನಿಸಿ ಕೊಂಡು, ಅದಕ್ಕೆ ಉತ್ತರಗಳನ್ನು ರಚಿಸಿದ್ದಾರೆ. ಲೌಕಿಕ ವಿಚಾರದ ಅಲೌಕಿಕವನ್ನು ಕುರಿತು ಚರ್ಚಿಸಿರುವುದೇ ಉಪನಿಷದ್ ದರ್ಶನಗಳೆನ್ನಬಹುದು, ಆಧ್ಯಾತ್ಮಿಕ ಜಿಜ್ಞಾಸುಗಳಿಗೆ ಉತ್ತರವಿಲ್ಲಿದೆ. ಉಪನಿಷತ್ತುಗಳನ್ನು ಕುರಿತ ಅನೇಕ ಸಿದ್ಧಾಂತ ಹೊರಬಂದಿವೆ.

ಉಪನಿಷತ್ತು ಪ್ರಮುಖವಾಗಿ ಗುರುತಿಸುವುದೆ ಆತ್ಮನ ಕುರಿತಾದ ಚರ್ಚೆ. ಆತ್ಮ ತಿಳಿಯಲಾಗದರ, ಕಣ್ಣಿಗೆ ಅಗೋಚರ, ಮನಸ್ಸಿಗೆ ನಿಲುಕದವನೆಂದೆನ್ನುತ್ತ, ಜಗತ್ತಿನ ಇಡೀ ಬಾಹ್ಯಶಕ್ತಿ "ಬ್ರಹ್ಮ"ನೆಂದರೆ, ಆತ್ಮ ಅದರ ಒಳಗಿನ ಆಧ್ಯಾತ್ಮ ಚೇತನವೆನ್ನಿಸಿ-ಕೊಳ್ಳುತ್ತಾನೆ. ಮನುಷ್ಯನ ಶರೀರ-ಆತ್ಮ ಸಂಬಂಧದಂತೆಯೇ, ವೇದ ಪರಿಭಾಷೆಯಲ್ಲಿ ಆತ್ಮ-ಬ್ರಹ್ಮರ ಸಂಬಂಧವೊಂದಿದೆ. ಇದರ ಫಲವಾಗಿ ಮೂಡಿ ಬಂದ ಸಮೀಕರಣ-"ತತ್ತ್ವಮಸಿ". ಇಲ್ಲಿಂದಲೇ ವೇದಾಂತ ತತ್ವಶಾಖೆಗಳು ಹೊರಹೊಮ್ಮಿವೆ, ಚರ್ಚಿಸಿವೆ. ತತ್ತ್ವಮಸಿಯೆ ಅದ್ವೈತದ ಬುನಾದಿ. ಉಪನಿಷತ್ ದ್ರಷ್ಟಾರರು ಬ್ರಹ್ಮನುಪಾಸನೆಯೇ, ಆಧ್ಯಾತ್ಮ ಸಾಧನೆಯಲ್ಲಿ ಶ್ರೇಷ್ಠವೆಂದು ಘೋಷಿಸಿದರು. ಇದೇ ಮುಂದೆ ಅನುಭಾವ ಪಂಥಕ್ಕೆ ಹಾದಿ ತೋರಿಕೊಟ್ಟಿತು.

ಉಪನಿಷತ್ತುಗಳು, ಆತ್ಮಸಾಕ್ಷಾತ್ಕಾರಕ್ಕೆ ದುರ್ಗಮ ಮೆಟ್ಟಲಾದರೂ ಅದು "ನಿಶಿತ ಖಡ್ಗದ ಮೇಲೆ ನಡೆದಂತೆ "ಕ್ಷುರಸ್ಯ ಧಾರಾ ನಿಶಿತಾ ದುರತ್ಯಯ ಪಥಃ ತತ್ವ ಪಯೋ ವದಂತಿ", ಇದರ ಹಾಗೆಯೆ ಈಶಾವಾಸ್ಯ ಉಪನಿಷತ್ತು ತನ್ನ ಪ್ರಸಿದ್ಧ ಮಂತ್ರದ ಮೂಲಕ ಪರಮಾತ್ಮನ ಇರವನ್ನೂ, ಭಕ್ತಿಯ ಸೆಳೆತವನ್ನೂ ಕುರಿತು ಚಿಂತಿಸಿದೆ :

"ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ॥ ತೇನತ್ಯಕ್ತೇನ ಭುಂಜೀಥಾಃ ಮಾಗೃಧಃ ಕಸ್ಯಸ್ವಿದ್ಧನಮ್" [11] (-ಪರಧನಕ್ಕೆ ದುರಾಸೆಪಡದಿರು ಎಂದೂ ಬೋಧಿಸಿದೆ).

ಆಗಲೇ ಶಿವನ ಉಪಾಸನೆ ಮೊದಲಲ್ಲಿ ವಿಶ್ವ ಪ್ರಭುತ್ವವಾಗಿತ್ತು.[12] ಶ್ವೇತಾಶ್ವತರೋಪನಿಷತ್ತಿನಲ್ಲಿ ಅನೇಕ ಬಾರಿ ಉಲ್ಲೇಖಗೊಂಡಿರುವ "ಏಕದೇವೋಪಾಸನ" ಶಿವನ ಉಪಾಸನೆಯೆ. ಆದರೆ ಅಲ್ಲಿ ಪರತತ್ವ-ಪರವಸ್ತು ಚಿಂತನೆಗೇ ಪ್ರಾಧಾನ್ಯ[13]. ಅದೇ ಸಮಯದಲ್ಲಿ ಶಿವನಂತೆಯೆ ವಿಷ್ಣುವೂ ಪ್ರಾಮುಖ್ಯ ಪಡೆದನು. ಇಂದ್ರ-ವಿಷ್ಣುವಿಗೆ ಪರಮಸ್ನೇಹ,[14] "ಬ್ರಾಹ್ಮಣಗಳಲ್ಲಿ ಅವನ ಸ್ಥಾನ ಇನ್ನೂ ಹೆಚ್ಚಿದೆ." ವಿಷ್ಣುವಿನ ಪಾರಮ್ಯ ಅನಂತರ ಮುಂದುವರಿದಿದೆ. ಶತಪಥ ಬ್ರಾಹ್ಮಣದಲ್ಲಿ ಅವನ "ಆಮೆ", "ಹಂದಿ" ಅವತಾರ, ಮಾನವಕೋಟಿಯ ಉದ್ಧಾರಕ್ಕಾಗಿ ರೂಪಧಾರಣೆ ಮಾಡಿರುವ ಪ್ರಸ್ತಾಪ ಬಂದಿದೆ. ವಿಷ್ಣು ಅವತಾರ ರೂಪಿ. ಅವತಾರವೆಂದರೆ ಭೂಮಿಗೆ ಇಳಿದು ಬರುವುದು. ಇದನ್ನೆ ಗೀತೆ, "ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ" ಎಂದಿರುವುದು.

ವಿಷ್ಣುವಿನ ಉನ್ನತಿ ಅನಂತರ ಹೆಚ್ಚಿ, ನಾರಾಯಣನ ಕಲ್ಪನೆ ಬಂತೆನ್ನಲು ಆಧಾರಗಳಿವೆ-ನಾರಾಯಣನೆಂದರೆ "ಆದಿಪುರುಷ-ಸದಸಮಜ"[15] ಎಂದೂ ತೈತ್ತಿರೀಯದ ಪ್ರಕಾರ, "ಯೋಯ ಮಂತರೋಯಮಯತಿ", "ದ್ವೇವಿದ್ಯೇ ವೇದಿತವ್ಯೇ ಪರಾಚೈನಾ ಪರಾಚ", ಹಾಗೂ ಗೀತೆ ತಿಳಿಸುವ, "ವೇದೈಶ್ಚ ಸರ್ವೈರಹ ಮೇವ ವೇದ್ಯಃ",[16] ಮಹಾಭಾರತದ "ಸರ್ವೋತ್ಕರ್ಷೇ ದೇವ ದೇವಸ್ಯ ವಿಷ್ಣೋರ್ಮಹಾ ತಾತ್ಪರ್ಯಂ ಪರಮಂ ಭಾರತಸ್ಯ" ಎಂಬ ಮಾತು, ಅಲ್ಲೇ ಬರುವ "ಆಲೋಢ್ಯ ಸರ್ವ ಶಾಸ್ತ್ರಾಣಿ ವಿಚಾರ್ಯ ಚ ಪುನಃ ಪುನಃ ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ" ಎಂಬಲ್ಲೆಲ್ಲ ವಿಷ್ಣುಪಾರಮ್ಯ ಸ್ಪಷ್ಟ ಆಗುತ್ತದೆ. ವಿಷ್ಣುವಿನ ಸರ್ವೋತ್ಕೃಷ್ಟತೆ, ಭಕ್ತಿಯ ಸೆಲೆ ಕಾಣಬರುತ್ತದೆ.

ಇದನ್ನೇ ನಾವು ಪಾಣಿನಿ (ಕ್ರಿ. ಪೂ. ೫-೬ನೆ. ಶ) ಮುಂತಾದವರ ಸೂತ್ರಗಳಲ್ಲಿಯೂ ಕಾಣುವಂಥದು. "ವಾಸು ದೇವಾಭ್ಯಾಂ ಅರ್ಜುನಾಭ್ಯಾಂ ವೃನ್" ಎಂಬಲ್ಲಿ ಕೃಷ್ಣನನ್ನು (ಯದುಕುಲ) ವಿಷ್ಣುವಿನ ಅವತಾರವೆಂದೆ ಭಾವಿಸಿದ್ದರು. ಅವನ ಅತ್ಯುನ್ನತ ದೈವನೆಂದು ಭಕ್ತಿಯಿಂದ ಪೂಜಿಸುತ್ತಿದ್ದ ಸಂಗತಿ ತಿಳಿಯುತ್ತದೆ. ಕಂಸ ವಿರೋಧಿ ಕೃಷ್ಣನನ್ನು ವಾಸುದೇವನೆಂದೆ ಸಂಬೋಧಿಸಿದ್ದಾನೆ ಪತಂಜಲಿ. ಯಚ್ಚ ಕಿಂಚ ಜಗತ್ಸರ್ವಂ ದೃಶ್ಯತೇಶ್ರೂಯತೇಽ ಪಿವಾಃ ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ

ನಾರಾಯಣಾಸ್ಥಿತಃ "ಸಬ್ರಹ್ಮ ಸಶಿವಃ ಸಹರಿಃ ಸೇಂದ್ರಃ ಪರಮಸ್ವರಾಟ್ ವಾಸುದೇವಃ ಸರ್ವಮಿಂತಿ", ಎಂಬುವಲ್ಲಿ "ಏಕೋವೈ ನಾರಾಯಣೋ ಹರಿಃ" ಎಂದು ತಿಳಿಸುವ ನಾರಾಯಣೋಪನಿಷದ್ವಾಕ್ಯ, ವಿಷ್ಣುವಿನುಪಾಸನೆಯು ಉನ್ನತ ಮಟ್ಟ ತಲುಪಿದ್ದುದನ್ನು ಸ್ಪಷ್ಟಪಡಿಸುತ್ತದೆ. ವಾಸುದೇವನೆ ನಾರಾಯಣ. ಅವನೆ ಶಿವ, ಹರಿ, ಬ್ರಹ್ಮ, ಇಂದ್ರ ಎಲ್ಲವೂ ತೈತ್ತಿರೀಯ ಉಪನಿಷತ್ತಿನ "ನಾರಾಯಣಾಯವಿದ್ಮಹೇ ವಾಸುದೇವಾಯ ಧೀಮಹಿ ತನ್ನೋ ವಿಷ್ಣುಃ ಪ್ರಚೋದಯಾತ್" ಎನ್ನುವಲ್ಲಿ ವಿಷ್ಣು, ನಾರಾಯಣ ಇಬ್ಬರೂ ಒಬ್ಬನೆ ವಾಸುದೇವನೆಂದು ತಿಳಿಸಲಾಗಿದೆ. ಇದಲ್ಲ ವಿಷ್ಣು ಭಕ್ತಿಯೆಡೆಗೆ ನಮ್ಮನ್ನೊಯ್ಯುತ್ತದೆ. ಪ್ರಸಿದ್ಧವಾಗಿರುವ ಅರುಣಪ್ರಶ್ನದಲ್ಲಿ ವಸಿಷ್ಠರೆ ಮುಂತಾದ ಋಷಿಗಳು, ಹಾರೈಸುತ್ತಿದ್ದುದಾದರೂ ಏನು ? ವಿಶ್ವಶಾಂತಿ :

ಹರಿಃ ಓಂ ಭದ್ರಂ ಕರ್ಣೇಭಿಶ್ಶೃಣುಯಾಮ ದೇವಾಃ। ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಗ್ಂಸಸ್ತನೂಭಿಃ । ವ್ಯಶೇಮ ದೇವಹಿತಂ ಯದಾಯುಃ । .... ...... ... ಓಂ ಶಾಂತಿಃ ಶಾಂತಿಃ ಶಾಂತಿಃ ಸದಾ ಮಂಗಳ ವಾಕ್ಯ ಆಲಿಸೋಣ. ಉತ್ತಮವಾದ ಆರೋಗ್ಯದಿಂದ ದೃಢಕಾಯರಾಗಿ, ನಿಮ್ಮನ್ನು (ದೇವತೆಗಳನ್ನು) ಪ್ರಶಂಸಿಸೋಣ. ನಮ್ಮ ಇಹದ ಬದುಕು ದೇವಗಳ, ದೈವ ಪ್ರೀತ್ಯರ್ಥವಾಗಲಿ" ಎಂದು ವಿಶ್ವ ಹಿತ ಬಯಸುವ ಕಳಕಳಿ ಇಲ್ಲಿದೆ "ಮಧುವಾತಾಋತಾಯತೇ, ಮಧುಕ್ಷರಂತಿ ಸಿಂಧವಃ" ಎಂಬಲ್ಲಿಯೂ ಪ್ರಕೃತಿಯನ್ನೇ ಮಧುವಿನಂತಿರಲು ಪ್ರಾರ್ಥನೆ ಇದೆ : ಇಲ್ಲೆಲ್ಲ ಮಂತ್ರ ದ್ರಷ್ಟಾರರು, ಋಷಿಗಳು ವಿಷ್ಣುವನ್ನು ಶಂಸನೀಯ ದೇವತೆಯೆಂದು ಪರಿಗಣಿಸಿದ್ದಾರೆ. ಇದೆಲ್ಲ 'ಭಕ್ತ ಸಾಹಿತ್ಯವೆ' ಆಗಿದೆ.

ಇಷ್ಟು ತಿಳಿಸುವಲ್ಲಿ ಭಕ್ತಿ ಎಂದರೇನು ? ಎಂಬ ಪ್ರಶ್ನೆ ಸಹಜವಾಗಿಯೆ ಮೂಡುತ್ತದೆ. ಭಕ್ತಿಗೆ ಋಷಿಗಳಿಂದ, ದಾರ್ಶನಿಕರಿಂದ ಹಿಡಿದು ಇಂದಿನ ಸಾಧಕರ ತನಕ ಅನೇಕ ವಿವರಣೆ ಬಂದಿವೆ. ಜೀವನದ ಗುರಿಯನ್ನು ತಲುಪಲು ತಿಳಿದವರು ಹೇಳಿರುವ ಸಾಧನ ಮೂರು : ಕರ್ಮ, ಯೋಗ ಹಾಗೂ ಭಕ್ತಿ. ಸಾಮಾನ್ಯವಾಗಿ ಹಿರಿಯರು, "ಏನಯ್ಯ, ಗುರುಹಿರಿಯರಲ್ಲಿ ದೇವರಲ್ಲಿ ಭಯ ಭಕ್ತಿ ಅಂಬೋದೆ ಇಲ್ಲವಲ್ಲ ಈಗಿನವರಿಗೆ" ಎಂದು ಕಿರಿಯರನೇಕರ ವಿಚಾರವಾಗಿ ಹೇಳುವುದುಂಟು. ಹಾಗಾದರೆ, ಭಯ, ಹೆದರಿಕೆ (fear) ಯಿರದ ಭಕ್ತಿ ಹುಟ್ಟಿತೆ ? ಪ್ರಕೃತಿಯ ವಿವಿಧ ಲೀಲಾ ವಿನ್ಯಾಸಗಳಿಗೆ (ಉದಾ : ಪ್ರವಾಹ, ಕ್ಷಾಮ, ಕಾಳ್ಗಿಚ್ಚು, ರೋಗರುಜಿನ) ಹೆದರಿ ಮನುಷ್ಯ ತಾನು ಕಾಣದ, ಕಾಣರಿಯದ, ಕೇಳದ, ಯಾವುದೊ ಒಂದು ಅಲೌಕಿಕ ಚೇತನಕ್ಕೆ ಶರಣು ಹೋಗುವ, ತಲೆವಾಗುವ ಪ್ರವೃತ್ತಿಯನ್ನು ಸಹಜವಾಗಿಯೆ ಬೆಳೆಸಿಕೊಂಡಿರಬೇಕು. ಭಕ್ತಿಯ ಹಳೆಮೆಯನ್ನೂ ಇದು ಸಾರುತ್ತದೆ. ಸುಮಾರು ೫೦೦೦ ವರ್ಷದ ಹಿಂದೆಯೆ ದೇವ ಮಂದಿರಗಳು ರಚಿತವಾದವೆಂದು ಆಧುನಿಕ ಸಂಶೋಧಕರು ತಿಳಿಸುತ್ತಾರೆ. ಪುರಾಣಗಳ ಪ್ರಕಾರ, ಜನಮೇಜಯರಾಯನ ಕಾಲದಲ್ಲಿ ಪ್ರಾಣದೇವರ (ಹನುಮಂತನ) ಪ್ರತಿಷ್ಠೆ ಆಗಿದ್ದಂತೆ ತಿಳಿಯಬರುತ್ತದೆ.

ಮಹಾಭಾರತದ ಅಭಿಮನ್ಯುವಿನ ಮೊಮ್ಮಗನೇ ಜನಮೇಜಯ.[17] ಎಂದರೆ ಸುಮಾರು ೧೦,೦೦೦ ವರ್ಷವೆಂದಾಯಿತು. ಅಪೌರುಷೇಯ, ಅನಾದಿ ಎಂದು ಹೇಳಲಾಗುವ ವೇದಗಳಲ್ಲಿಯೆ ಭಕ್ತಿ, ಶ್ರದ್ಧೆ, ಇವುಗಳ ಉಲ್ಲೇಖವಿದೆ.[18] ಈ ದೃಷ್ಟಿಯಿಂದ ಭಕ್ತಿ ಅನಾದಿ ಎಂದು ಹೇಳಬೇಕಾಗುತ್ತದೆ.

"ಭಕ್ತಿ" ಎಂಬುದು 'ಭಜ್' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. "ಭಜ್" ಎಂದರೆ ಆಶ್ರಯಿಸು, ಪೂಜಿಸು ಎಂದರ್ಥ. ಭಕ್ತಿಯ ತಿರುಳೇ ಆಶ್ರಯ, ಪೂಜೆ, ಸೇವೆ, ವಂದನೆ, ಇತ್ಯಾದಿ. ಇದನ್ನೇ ವಿಶಿಷ್ಟಾದ್ವೈತ ಸಿದ್ಧಾಂತ ಪ್ರವರ್ತಕರಾದ ಶ್ರೀ ರಾಮಾನುಜರು 'ಭಗವತ್ಕೈಂಕರ್ಯ' ವೆಂದಿದಾರೆ. 'ಕಿಂಕರ' (ಭೃತ್ಯ) ನೆಸಗುವುದೇ 'ಕೈಂಕರ್ಯ' (ಸೇವೆ). ರಾಮಾನುಜರ ಪ್ರಕಾರ ಜ್ಞಾನ, ಭಕ್ತಿಯೊಡಗೂಡಿರಬೇಕು. ಭಗವಂತನನ್ನು 'ಭಕ್ತ ಪರಾಧೀನ' ನೆನ್ನುವುದಿದೆ. ಭಕ್ತಿ-ಭಜ್ಞಿಗೆ ಅನ್ನವೆಂದೂ ಅರ್ಥ. ದೇವರನ್ನು ಸಂತೋಷಗೊಳಿಸಲು, ತೃಪ್ತಿಪಡಿಸಲು ಬೇಕಾದ ನಿವೇದನ ರೂಪವಾದ 'ಅನ್ನ'ವೆ ಭಕ್ತಿ. ನಿಷ್ಕಾಮ ಭಕ್ತಿ.[19]

ನಾರದ ಭಕ್ತಿಸೂತ್ರಗಳ ಪ್ರಕಾರ, ಭಕ್ತಿ ಎಂದರೆ, ಭಗವಂತನಲ್ಲಿ ಪರಮಪ್ರೇಮ ವಿರಿಸುವಿಕೆ. ಅದು ನಿಸ್ವಾರ್ಥಿ ಆದಂದು ಹಾಗೂ ಅಮೃತದಂತೆ ರಂಚಕರ, ಆನಂದ ದಾಯಕ ಅದದ್ದು.[20] ಭಕ್ತನಾದವನು ತನ್ನ ಎಲ್ಲ ಕ್ರಿಯೆಗಳನ್ನೂ ಭಗವಂತನಿಗೇ ಅರ್ಪಿಸಬೇಕು. ಅವನನ್ನು ಮರೆಯುವುದೆಂದರೆ (ವಿಸ್ಮೃತಿ) ದುಃಖವನ್ನಾಹ್ವಾನಿಸಿ ದಂತೆ, ಎನ್ನುತ್ತಾರೆ ನಾರದರು. ಭಕ್ತಿಯು ಭಕ್ತನಲ್ಲಿ ಉದ್ದೀಪನಗೊಳ್ಳುವುದು, ಅವನು ತನ್ನ ಎಲ್ಲಾ ಇಂದ್ರಿಯ, ವಿಷಯಾಸಕ್ತಿ ತೊರೆದು, ಅನವರತ ಭಗವದ್ಧ್ಯಾನ ಪರನಾದಾಗ ಹಾಗೂ ಭಗವಂತನನ್ನು ಕುರಿತ ಪ್ರಾರ್ಥನೆ, ಮಂತ್ರ, ತಲ್ಲೀನತೆಯಿಂದ ಹಾಡುವುದರಿಂದ, 'ಅದು ಅನಿರ್ವಚನೀಯ' (ಸೂತ್ರ ೫೫-೫೭) ಮೂಕ ಸಿಹಿಯನ್ನು ಆಸ್ವಾದಿಸಿದಂತೆ, ಆ ಅನುಭವ ಬಣ್ಣಿಸಲಸಾಧ್ಯ. ಇದರಿಂದ ಭಗವಂತನಲ್ಲಿ ಅನವರತ ಸಲ್ಲಿಸುವ ಪ್ರಾರ್ಥನೆಯ ಭಾವ, ಅವನನ್ನು ತಿಳಿಯಲು. ಸಾಕ್ಷಾತ್ಕಾರಿಸಿಕೊಳ್ಳಲು ಸಾಧನವೆಂದೂ ಆಗುತ್ತದೆ. ಇಲ್ಲಿ ಭಕ್ತ ಹಾಗೂ ಭಗವಂತ ಪರಸ್ಪರ ಒಳಗಾಗುತ್ತಾರೆ. ಇಲ್ಲಿ ಎರಡೇ ಹಂತ: ದೇವರಾಶೀರ್ವಾದ, ಭಕ್ತನಭಕ್ತಿ. ಆಂಗ್ಲ ನಾಟಕಕಾರ, ಕವಿ ಷೇಕ್ಸ್-ಪಿಯರ್ ಒಂದೆಡೆ ಹೇಳುತ್ತಾನೆ: "ಈ ಆಕರ್ಷಣೆ, ಸೆಳೆತವಿರದಿದ್ದರೆ ದಿವ್ಯ ಚೇತನದ ಸಾಕ್ಷಾತ್ಕಾರ, ಆತ್ಮ ಸಾಕ್ಷಾತ್ಕಾರ ಆಗುವದಸಂಭವ" ಭಕ್ತಿಮಾರ್ಗ ಸುಲಭ ಅದದ್ದು. ಇಲ್ಲಿ ಕರ್ಮಗಳ ಆಚರಣೆ, ಇದು ಹೀಗೆಯೇ ಮಾಡಬೇಕೆಂಬ ನಿರ್ಬಂಧ ಇಲ್ಲ. ಕುಲಶೇಖರ ಆಳ್ವಾರ್ ಎಂಬ ಶ್ರೀವೈಷ್ಣವ ಭಕ್ತರು,[21] "ನಾನು ನಿನ್ನನ್ನೇನೂ ಬೇಡುವುದಿಲ್ಲ ನಿನ್ನ ಪಾದಕಮಲಗಳಲ್ಲಿ ನಿಶ್ಚಲವಾದ ಭಕ್ತಿ ಹೊರತು"[22] ಎಂದು ಮೊರೆಯಿಡುತ್ತಾರೆ. ಭಕ್ತಿಗೆ ಜ್ಞಾನಸಾಧಕ ಅಂಶ ಆಗುತ್ತದೆ, ಫೋಷಕವೂ ಆಗುತ್ತದೆ.ಭಕ್ತಿ, ಕೇವಲ ಒಂದು ನಿರ್ದಿಷ್ಟ ಕ್ರಿಯೆಯಲ್ಲ ಅದರ ಫಲ ಅನಂತವಾದದ್ದು.[23] ಭಕ್ತಿ ಎಂಬುದು.... ರಹಸ್ಯಾನುಭವ. ಅದು ಭಗವದನುಭವ "ಭಕ್ತಿಯೆಂಬುದು ಸಾಮಾನ್ಯವಾಗಿ ಎಲ್ಲರೂ ಎಲ್ಲೆಲ್ಲಿಯೂ

ಬಳಸುವ ಮಾತು. ಅದರ ಅರ್ಥ ಬಲ್ಲವರು ರಹಸ್ಯಾನುಭವಿಗಳು. ಭಕ್ತಿಯೂ ಪ್ರೀತಿಯ ಒಂದಾಗಿನೊಂದು ರೂಪ. ಪ್ರೀತಿಯೂ ರಹಸ್ಯವಸ್ತು.... ...ಭಕ್ತಿ ಎಂಬುದು ಜೀವಕ್ಕೂ ಅದರ ಸ್ವಾಮಿಗೂ ಆಗುವ ಪರಸ್ಪರ ಸರಸಸಲ್ಲಾಪಗಳು.'' ಭಗವದ್ಗೀತೆ ಯಲ್ಲಿ ಭಕ್ತಿಯೋಗಕ್ಕೆ ಈ ಶ್ಲೋಕ ಪ್ರಾಶಸ್ತ್ಯವಿತ್ತಿದೆ :

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಸಿ ಮೇ ॥
ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥

''ಭಕ್ತಿಮಾನ್ ಮೇಪ್ರಿಯಃ'' ಎಂದೇ ಗೀತಾಚಾರ್ಯ ಹೇಳಿಕೊಂಡಿದ್ದಾನೆ. ಹೀಗೆಯೇ, ಭಗವಂತನನ್ನುದರ್ಶಿಸಿ, ಭಕ್ತಿಯ ಅನುಭವ ಹೊಂದಿದ ಭಕ್ತನೊಬ್ಬನ ವರ್ಣನೆ ಭಾಗವತದಲ್ಲಿದೆ :

''ವಾಗ್ ಗದ್ಗದಾ ದ್ರವತೇ ಯಸ್ಯ ಚಿತ್ತಂ । ರುದತ್ಯಭೀಕ್ಷಣಂ ಹಸತಿ ಕ್ವಚಿತ್ ಚ।
ವಿಲಜ್ಜ ಉದ್ಗಾಯಂತಿ ನೃತ್ಯತೇ ಚ। ಮದ್ಭಕ್ತಿಯುಕ್ತೋ ಭುವನಂ ಪುನಾತಿ''॥....[24]

ಇದೇ ಭಕ್ತಿ ಕುರಿತ ವಿವಿಧ ನಿರೂಪಣೆ, ನಾರದರಿಂದ ಹಿಡಿದು ವಚನಕಾರರ ತನಕ ನಡೆದಿರುವುದು ಮನನೀಯ.

ತುಕಾರಾಮ್ : ಹೇ ದೇವಾ-ನನಗೆ ಇದೊಂದನ್ನು ಮಾತ್ರ ದಯೆ ಮಾಡು
ನಿನ್ನನ್ನು ನಾನು ಎಂದೆಂದೂ ಮರೆಯದಿರಲಿ.

ಏಕನಾಥ : ಭಕ್ತಿ ಎಂಬುದು ದೇವರೆಡೆಗೆ ಕರೆದೊಯ್ಯುವ ರಾಜಮಾರ್ಗ.

ವೀರಶೈವ ಪಂಥದ ಶಿವಶರಣರಲ್ಲಿ ಭಕ್ತಿಯ ಬಗ್ಗೆ ಅದೆಷ್ಟು ವಚನ ಸೃಜಿತ ಆಗಿರುವುವೊ

ಬಸವಣ್ಣ : ೧. ಮನವಂನ ಬೆರಸಿದಲ್ಲಿ, ತನು ಕರಗದಿದ್ದಿತೆ
ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿರ್ದೊಡೆ
ಕಂಡಾಗಳಶ್ರು, ಜಲಂಗಳು ಸುರಿಯದಿದ್ದಡೆ,
ನುಡಿವಲ್ಲಿ ಗದ್ಗದಂಗಳು ಪ್ಪೊಣ್ಣದಿದ್ದಡೆ,
ಕೂಡಲಸಂಗಮದೇವಾ ಭಕ್ತರಿಗಿದು ಚಿಹ್ನವೆನ್ನಲ್ಲಿ.

ಭಕ್ತ ಎಲ್ಲರಲ್ಲೂ ಸ್ನೇಹದಿಂದಿರುತ್ತಾನೆ. ಯಾರನ್ನೂ ನಿಂದಿಸ, ದ್ವೇಷಿಸ, ಎಲ್ಲರಲ್ಲೂ ಎಲ್ಲ ಅವಸ್ಥೆಗಳಲ್ಲೂ ಭಗವಂತನ ಸ್ವರೂಪವನ್ನ ಕಾಣುತ್ತಾನೆ.

: ೨. ನಾದಪ್ರಿಯ ಶಿವನೆಂಬರು, ನಾದಪ್ರಿಯ ಶಿವನಲ್ಲ
ವೇದಪ್ರಿಯ ಶಿವನೆಂಬರು, ವೇದಪ್ರಿಯ ಶಿವನಲ್ಲ
ನಾದಪ್ರಿಯನೂ ಅಲ್ಲ, ವೇದಪ್ರಿಯನೂ ಅಲ್ಲ
ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ.

ಅಲ್ಲಮಪ್ರಭು : ತನ್ನ ಮರೆದು ಇದಿರ ಹರಿದು ಇರಬಲ್ಲರೆ. ಆತ ಭಕ್ತ. ಶಿವಭಕ್ತಂಗೆ ಶಿವನೊಲಿವನು. ನೇಡಿಯಲ್ಲಿ ಭಕ್ತಿಯ ನಾಡಿ ನಡೆಯಲಿಲ್ಲದಿರ್ದೊಡೆ ಕಡೆವಂಟ್ಟ. ಶಿವನೊಲಿವುದು ಹುಸಿ. ಮರೆದು ಕೋಪವಮರಿಯಂಗುಳಿ ಅರಿದು ಬಂದರಗಿದನೆಂಬ ನಂಡಿಗೆ ಒಲಿವನೇ ನಮ್ಮ ಗುಹೇಶ್ವರಲಿಂಗವು.

ಸಿದ್ಧರಾಮ : ನೀನಂ ಭಕ್ತಿಪ್ರಿಯನೆಂದು ಮರೆಹೊಕ್ಕೆ ಕಾಯಯ್ಯಾ ಎನ್ನ ಕಪಿಲಸಿದ್ಧ ಮಲ್ಲಿಕಾರ್ಜುನ.

ಇಂಥದೆ ಭಕ್ತಿಯ ಅಮೃತರಸವಾಹಿನಿ, ಹರಿದಾಸರಲ್ಲಿಯೂ ಪ್ರವಹಿಸಿದೆ.

ಜೀವನದ ಗುರಿಯನ್ನು ತಲುಪಲು ತಿಳಿದವರು ಹೇಳಿರುವ ಸಾಧನಗಳು ಮೂರು: ಕರ್ಮ, ಯೋಗ ಮತ್ತು ಭಕ್ತಿ. ಭಕ್ತಿಯೆಂದರೆ, ಅದೊಂದು[35] "ಪ್ರೇಮಪೂರಿತ ನಿಷ್ಠೆ" ಏಕೈಕ ಸಗುಣ ಬ್ರಹ್ಮನಲ್ಲಿ ನಂಬಿಕೆಯನ್ನೊಳಗೊಂಡ ಈಶ್ವರವಾದಕ್ಕೆ ವಿಶೇಷ ವಾಗಿ ಅನುರೂಪವಾದದ್ದು.[36] "ಅದೊಂದು ಅಂತರಂಗದನುಭವ" ಹೇಗೆ ಎಲ್ಲಿ ಆರಂಭ ಆಗುವುದೆ ಹಾಗೂ ಹೇಗೂ ಕೊನೆಗೊಳ್ಳುವುದೇ ತಿಳಿಯುವುದು ಕಷ್ಟ." ಪ್ರಪಂಚದ ಎಲ್ಲ ಮತಧರ್ಮಗಳೂ ಭಕ್ತಿಗೆ ಅತ್ಯುನ್ನತ ಸ್ಥಾನ ನೀಡಿವೆ. ಗೀತಾಚಾರ್ಯ ಭಕ್ತಿಗೆ ಪ್ರಥಮ ಪ್ರಾಶಸ್ತ್ಯ ನೀಡುತ್ತಾನೆ. ಭಕ್ತಿಯನ್ನು ಕುರಿತು ಅನೇಕ ಋಷಿಗಳು, ವಾಖ್ಯಾನಿಸಿದ್ದಾರೆ.

ನಾರದಭಕ್ತಿಸೂತ್ರ : "ಪರಮಪ್ರೇಮರೂಪ ಅಮೃತ ಸ್ವರೂಪ"

ಶಾಂಡಿಲ್ಯ ಸೂತ್ರ : "ಸಂಭಕ್ತಿಃ ಪರಾನುರಕ್ತಿರೀಶ್ವರೀ"
(ದೇವರಲ್ಲಿ ಪರಮಪ್ರೀತಿ-ಪ್ರೇಮವೇ ಭಕ್ತಿ.)

ಭಾಗವತ : ಅಹೇತುಕ ವ್ಯವಹಿತಾಯಾ ಭಕ್ತಿಃ ಪುರುಷೋತ್ತಮೇ
(ಪರಮಾತ್ಮನಲ್ಲಿ ಮಾಡುವ ನಿಷ್ಕಾಮ ಪ್ರೇಮ).

"ವಿಶಿಷ್ಟಾದ್ವೈತಕೋಶ"[37]ದ ಪ್ರಕಾರ, ಭಕ್ತಿ ವಿವಿಧ ಕಾವ್ಯಗಳಲ್ಲಿ ಹೀಗೆ ನಿರೂಪಿತ ಆಗಿದೆ.

ರಾಮಾಯಣ : "ಅಧಿಕ ಮಾನ್ಯಾವಿಷಯಾಃ ಸ್ನೇಹಃ"
ಪರಮಾತ್ಮನಲ್ಲಿ ಸ್ನೇಹ, ವಿಲೀನಭಾವ.

ರಾಮಾನುಜ : ಸ್ನೇಹ ಪೂರ್ವಮ್ ಅನುಧ್ಯಾನಮ್

ವೇದಾಂತದೇಶಿಕ : ಮಹನೀಯ ವಿಷಯೇ ಪ್ರೀತಿರೇವಃ ಸ್ನೇಹ ಪೂರ್ವಂ
ಅನುಧ್ಯಾನಂ ಇತಿ,

ಪ್ರೀತಿರೂಪಾಪನ್ನ ಧ್ಯಾನಮ್ ಸಾವವ ಭಕ್ತಿಯೋಗಾಃ (ವೇದಾಂತದೇಶಿಕರು)।

4. ಭಾವಪ್ರಕಾಶಿಕಾ : ಉಪಕಾರಕತ್ವಜ್ಞಾಃ ಸ್ನೇಹವಿಶೇಷಾಃ
ಇದು ಮಧ್ವಾಚಾರ್ಯರ ಭಕ್ತಿನಿರೂಪಣೆಗೆ ತುಂಬ ಹೋಲುತ್ತದೆ : ಸರ್ವತೋ ಅಧಿಕಾಃ ಸ್ನೇಹಃ ಭಕ್ತಿಃ–ಪರಮಾತ್ಮನಲ್ಲಿ ಸ್ನೇಹ ಬೆಳೆಸುವಿಕೆ.

"ಭಕ್ತಿಯು ವೇದಾಂತ ತತ್ವ ಶಾಖೆಗಳ ಪ್ರಕಾರ ಹೀಗೆ: ಅದ್ವೈತ-ತನ್ಮಯ ಐಕ್ಯ ದ್ವೈತದಲ್ಲಿ ದಾಸ್ಯ-ಸಖ್ಯ ; ವಿಶಿಷ್ಟಾದ್ವೈತದಲ್ಲಿ ಶರೀರತ್ವ, ತನ್ಮಯತ್ವ, ದಾಸತ್ವ, ಸೇವಕತ್ವ, ಕಾನ್ತತ್ವ (ನಾಯಿಕೆ ಭಾವ)"[38]

ವಿಷ್ಣುವ್ಯಾಪ್ತಿಯಲ್ಲಿ ಪರಮ ಪ್ರೀತಿ, ಪರಮಸ್ನೇಹವೇ ಭಕ್ತಿ. "ವಾಸುದೇವಭಕ್ತಿ ಅಥವಾ ವಿಷ್ಣುಭಕ್ತಿ"ಯೇ ವೇದಋಷಿಗಳು ಕಂಡು ಕೊಂಡ ಮೂಲಸ್ವರೂಪ. ಇದು ಕ್ರಿ. ಪೂ. ೪-೩ನೆ ಶತಮಾನದ ಐತಿಹಾಸಿಕ ದಾಖಲೆಗಳಿಂದಲೂ ಸ್ಪಷ್ಟಗೊಳ್ಳುತ್ತದೆ. ವಿದೇಶೀ ಪ್ರವಾಸಿಗರು ಭಾರತದಲ್ಲಿದ್ದ ಚಿಂತನಶೀಲರನ್ನು ಪ್ರಸ್ತಾಪಿಸಿದ್ದಾರೆ. ಗ್ರೀಕ್ ಭೂಗೋಳಶಾಸ್ತ್ರಜ್ಞನಾಗಿದ್ದ ಮೆಗಾಸ್ತನೀಸನ ಹೇಳಿಕೆ ಹೀಗಿದೆ : ರಾಜ ಪುರೂರವನ ಸೇನೆಯ ಸಂಗಡ ರಣರಂಗಕ್ಕೆ ಹರ್ಕ್ಯುಲಿಸ್ ವೀರನ ಪ್ರತಿಮೆಯನ್ನು ಮೆರವಣಿಗೆಯಲ್ಲಿ ಒಯ್ದರು. ಜೆಜೊರಸ್ ನಡಿಯ ದಂಡೆ ಮೇಲಿರುವ ಶೌರಸೇನಿ, ರಾಜ್ಯದಲ್ಲಿ ಹರ್ಕ್ಯುಲಿಸ್ ಎಂದರೆ ಬಹುಮಾನ್ಯತೆ: "ಈ ಹರ್ಕ್ಯುಲಿಸ್ ಯಾರು ? ಶ್ರೀಕೃಷ್ಣನೇ. ಅವನೇ ಯಮುನಾ ನದೀ ದಡದ ಮಧುರೆಯನ್ನಾಳುತ್ತಿದ್ದದ್ದು. ಕಂಸನನ್ನು ಕೊಂದ ಮೇಲೆ ಶ್ರೀಕೃಷ್ಣನ ಮೆರವಣಿಗೆ ಮಾಡಿಸಿರಬಹುದು." (ಭಾಗವತ) ಇದರಿಂದ ಪತಂಜಲಿಯ ವೇಳೆಗಾಗಲೇ ಶ್ರೀಕೃಷ್ಣನನ್ನು ವಿಷ್ಣುವಿನ ಅವತಾರವೆಂದು ಪರಿಗಣಿಸ ಲಾಗಿತ್ತೆಂದು ತಿಳಿಯಬಹುದಾಗಿದೆ. "ವಾಸುದೇವಾಭ್ಯಾಂ ಅರ್ಜುನಾಭ್ಯಾಂವ್ವನ್" ಎಂದರೆ ನರ-ನಾರಾಯಣರೆ ಒಂದೇ ವಿಂದು. ಅರ್ಜುನ "ವಾಸುದೇವರು ಅವತಾರ ಸ್ವರೂಪವೆಂದೂ ಸೂತ್ರದ ಅರ್ಥ. ಭಾರತದ ಅಧ್ಯಯನದಿಂದ ಭೀಮಾರ್ಜುನರು ಶ್ರೀಕೃಷ್ಣನನ್ನು ಕೇವಲ ಮಾನವನಾಗಿ ಕಾಣದೆ ಅವನನ್ನು ವಿಷ್ಣುವಿನ ಅವತಾರವೆಂದೇ ತಿಳಿದಿದ್ದರೆಂದು ವಿದಿತವಾಗುತ್ತದೆ.

ವಿಷ್ಣುಭಕ್ತಿಯ ಪ್ರಾಚೀನತೆಯನ್ನು ಶಾಸನಗಳ ಆಧಾರದಿಂದಲೂ ಗುರುತಿಸ ಬಹುದು ಕ್ರಿ.ಪೂ ೩ನೆ ಶತಮಾನದ ಹಾಥಿಬಾಡ ಶಿಲಾಶಾಸನವೇ ವಿಷ್ಣುಭಕ್ತಿ ಪಾರಮ್ಯಕ್ಕೆ ಅತ್ಯಂತ ಪ್ರಾಚೀನವಾದ ಆಧಾರ.[39] ಇದು ಬ್ರಾಹ್ಮೀ ಲಿಪಿಯಲ್ಲಿದೆ, ಅದರಲ್ಲಿ

"ವಾಸುದೇವ" ಶಬ್ದ ಉಲ್ಲೇಖ ಆಗಿರುವುದು ವಿಷ್ಣು ಉಪಾಸನೆಯನ್ನು ಸ್ಪಷ್ಟಪಡಿಸುತ್ತದೆ. ಹೀಗೆ ಅನೇಕ ಆಧಾರಗಳಿಂದ ಭಕ್ತಿ ಹಾಗೂ ವಿಷ್ಣುಭಕ್ತಿಯ ಗುರುತುಗಳನ್ನು ನಾವು ಕಾಣಬಹುದು.

ಇದರ ವಿರುದ್ಧ ಬೌದ್ಧ, ಜೈನ ಧರ್ಮಗಳಂಥ ನಿರೀಶ್ವರವಾದ ಸಾರುವ, ಕರ್ಮಾಚರಣೆ ವಿರುದ್ಧವಾದ ಮತಧರ್ಮಗಳು ತಲೆ ಎತ್ತಿದ್ದವು. ಆದರೆ ಕಾಲ ಕಳೆದಂತೆ ಅವುಗಳಲ್ಲಿನ ಜಟಿಲತೆ, ಶೂನ್ಯವಾದ, ಜನತೆಗೆ ರುಚಿಸಲಿಲ್ಲ. ಬೌದ್ಧರ ಭೋಗಜೀವನ ಅವರ ಧರ್ಮಕ್ಕೇ ಮುಳುವಾಯಿತು. ಇದರಂತೆಯೇ ಕ್ರಿ. ಶ. ೬ನೆ ಶತಮಾನದಲ್ಲಿ ದಕ್ಷಿಣ ದೇಶದಲ್ಲಿ ಶ್ರೀವೈಷ್ಣವ ಸಂಪ್ರದಾಯದಲ್ಲಿ ಜನಿಸಿ ಬಂದ "ಆಳ್ವಾರರು" ಭಕ್ತಿ ಪ್ರಚಾರಕರಾಗಿ ಹೆಸರು ಪಡೆದಿದ್ದರು. ಈ ವೈಷ್ಣವ ಧರ್ಮ ಪಾಂಚರಾತ್ರಾಗಮ[೨೦] ಹಾಗೂ ವಿಷ್ಣು ಪುರಾಣಗಳನ್ನವಲಂಬಿಸಿದುದು ಕ್ರಿ. ಶಕ ಆರಂಭ ಕಾಲದಿಂದ ೯ನೆ ಶತಮಾನದವರೆಗೆ ಬಾಳಿ ಬೆಳಗಿದ ಶ್ರೀವೈಷ್ಣವ ಆಳ್ವಾರರು ಹನ್ನೆರಡು ಜನರಾದರೂ ಪೆರಿಯಾಳ್ವಾರ್, ನಮ್ಮಾಳ್ವಾರ್, ಮುಂತಾದವರು ವೈಷ್ಣವತ್ವ, ವಿಷ್ಣುಭಕ್ತಿ, ತನ್ನ ಹುಟ್ಟು, ಬೆಳವಣಿಗೆ ಹಾಗೂ ಜನಸಾಮಾನ್ಯರಲ್ಲೂ ಇದು ಪ್ರಸರಿಸಲು ಕಾರಣಪುರುಷರಾದರು. 'ಆಳ್ವಾರ್' ಎಂದರೆ "ಆಳುವವರು", "ಭಗವಂತನ ಸಾಮ್ರಾಜ್ಯವನ್ನು ಆಳುವವರು", ಭಗವದ್ಭಕ್ತಿಯಲ್ಲಿ ಅದ್ದಿ ಮುಳುಗಿದವರು ಎಂದೆಲ್ಲ ಅರ್ಥ. ಅವರು ಹಾಡಿರುವ (ನಾಲಾಯಿರ ದಿವ್ಯ ಪ್ರಬಂಧಮ್) "ನಾಲ್ಕು ಸಾವಿರ ಸಾವಿರ ದ್ರಾವಿಡ ವೇದಕ್ಕೆ" ವೇದ, ಉಪನಿಷತ್ತು, ಪುರಾಣಗಳೇ ಆಧಾರ. ಆಳ್ವಾರರು ಸಗುಣೋಪಾಸಕರು. "ಅರ್ಚಾವಿಗ್ರಹ" ಅಥವಾ ಭಗವಂತನ ಇಷ್ಟ ಸ್ವರೂಪದ ಮೂರ್ತಿಯನ್ನು ಭಕ್ತಿಯಿಂದ ಪೂಜಿಸುವಂಥವರು. ಇದನ್ನೆ ಸಗುಣೋಪಾಸನೆಯೆಂದೂ ಕರೆಯುವುದು. ಅಂತೆಯೆ ಪಾಂಚರಾತ್ರ, ಆಗಮಗಳು ವೈಷ್ಣವ ಧರ್ಮದೆಡೆಗೆ ಅವರನ್ನು ಖಚಿತ ಮಾರ್ಗದಲ್ಲಿ ಕರೆದೊಯ್ದುವು. ಇದೇ ಪಥವನ್ನೆ, ಪಂಥವನ್ನೆ ಅನಂತರದಲ್ಲಿ ಬಂದ ಕರ್ಣಾಟಕದ ಹರಿದಾಸಮಹನೀಯರು ಅನುಸರಿಸಿ, ಇನ್ನೂ ಮುಂದುವರಿಸಿದ್ದು. ಆಳ್ವಾರರ ಪ್ರಕಾರ, ಈಶ-ದಾಸಭಾವ, ಈ ಸ್ನೇಹವನ್ನು ಬೆಸೆಯುವ ಕೊಂಡಿಯೇ ಭಕ್ತಿ. ದೇವರು ಆಶ್ರಯ, ಜೀವ ಅಶ್ರಿತ, ಸ್ವಾಮಿ ಅವನು, ಭೃತ್ಯ ನಿವಾಸು ದೇವರಲ್ಲಿ "ಪ್ರಪತ್ತಿ" ಅಥವಾ "ಶರಣಾಗತಿ" ಪರಮ ಸಾಯುಜ್ಯಕ್ಕೆ ಹಾದಿ. ಸ್ನೇಹದ ಕೊಂಡಿಯಾದ ಈ ಭಕ್ತಿ, ದೈವದಿಂದ ಜೀವಕ್ಕೆ "ಪ್ರಸಾದ" ರೂಪದಲ್ಲಿಯೂ, ಜೀವದಿಂದ ದೈವಕ್ಕೆ 'ಭಕ್ತಿ' ರೂಪದಲ್ಲಿಯೂ ಸಂಬಂಧಿಸಿರುತ್ತದೆ. ಆಳ್ವಾರರ ಕಾಲದಲ್ಲೇ ಇದ್ದ ಶೈವ ನಾಯನ್ಮಾರರು ಭಕ್ತಿ ಮಾರ್ಗವನ್ನು ಆತ್ಮ ಸಾಕ್ಷಾತ್ಕಾರಕ್ಕಾಗಿ, ಶಿವನುಪಾಸನೆಗಾಗಿ ಬಳಸಿ, ಕ್ರಮಿಸಿದರು. ಆಳ್ವಾರರ ತರುವಾಯ ತಮಿಳು ನಾಡಿನಲ್ಲಿ ವೈಷ್ಣವ ಭಕ್ತಿಯನ್ನು ಬೆಳೆಸಿದ ಅನೇಕ ಆಚಾರ್ಯರಲ್ಲಿ ನಾಥಮುನಿ ಮೊದಲಿಗರು. ಇವರು ನಮ್ಮಾಳ್ವಾರರು (ಇವರ ಹೆಸರು ಶಟಗೋಪನೆಂದೂ ಕರೆಯುವುದುಂಟು) ಬರೆದ ದಿವ್ಯ ಪ್ರಬಂಧವನ್ನೆ ಪ್ರಸರಿಸಿದುದಲ್ಲದೆ ನ್ಯಾಯ

ತತ್ತ್ವವನ್ನೂ ಬರೆದರು. ಇದರಲ್ಲಿ ವಿಶಿಷ್ಟಾದ್ವೈತದ ಕುರುಹುಗಳು ಕಾಣುತ್ತವೆ. ನಾಥಮುನಿಗಳ ನಂತರ (ಕ್ರಿ. ಶ. ಸು. ೯೨೦) ಪ್ರಸಿದ್ಧರಾದವರು ಯಮುನಾಚಾರ್ಯರು. ಇವರನ್ನು 'ಆಳವಂದಾರ್' ಎಂದೂ ಕರೆಯುತ್ತಾರೆ. (ಚೋಳ ಅರಸನರಾಣಿ ಪ್ರೀತಿಯಿಂದ 'ಆಳಲು ಬಂದವರು' ಎಂಬುದಕ್ಕೆ ತಮಿಳಿನಲ್ಲಿ ಕರೆದ ಹೆಸರು.) ಯಮುನರು ಗೀತಾರ್ಥ ಸಂಗ್ರಹ ಬರೆದರು. ಭಕ್ತಿಗೆ ಜ್ಞಾನ, ಕರ್ಮ ಸಾಧನಗಳೆಂದು[31] ಪ್ರತಿಪಾದಿಸಿದರು. ಯಮುನರ ನಂತರ ಬಂದವರೇ ರಾಮಾನುಜಾಚಾರ್ಯರು. ವಿಶಿಷ್ಟಾದ್ವೈತ ಸಿದ್ಧಾಂತವನ್ನು ಪರಿಷ್ಕರಿಸಿ, ಪ್ರತಿಪಾದಿಸಿದವರು. ಭಕ್ತಿ ಮಾರ್ಗ ಪ್ರವರ್ತಕರೂ ಹೌದು. ಕ್ರಿ. ಶ. ೧೧ನೆ ಶತಮಾನದಲ್ಲಿ ಇವರು "ದೇವರು ಎಲ್ಲರಿಗೂ ಸಮಾನ. ಜಾತಿ, ಕುಲ ಅವನಿಗಿಲ್ಲ" ಎಂದು ಸಾರಿದ್ದಲ್ಲದೆ, ಹರಿಜನರನ್ನು "ತಿರುಕುಲತ್ತಾರ್" (ಶ್ರೇಷ್ಠ ಕುಲದವರು) ಎಂದು ಕರೆದು ಅವರಿಗೆ ದೇವಾಲಯ ಪ್ರವೇಶವನ್ನು ದೊರಕಿಸಿ ಕೊಟ್ಟರು. ರಾಮಾನುಜ ಮತ, ಶ್ರೀವೈಷ್ಣವ ಮತವೆಂದು ಹೆಸರಾಗಿದೆ. ಇದು ದಕ್ಷಿಣ ಭಾರತದಲ್ಲಿ ಮಾತ್ರ ಬೆಳೆಯಿತೆ ವಿನಹ ಉತ್ತರದೆಡೆ ಹೋಗಲಿಲ್ಲ.[31]

ಕ್ರಿ. ಶ. ೯ನೆ ಶ.ದ ಅನಂತರ ಉತ್ತರ ಭಾರತದಲ್ಲಿ ಅನೇಕ ವೈಷ್ಣವ ಸಾಧು ಸಂತರು ಬಂದರು. ರಾಮಾನಂದ, ಕಬೀರದಾಸ, ತುಲಸೀದಾಸ, ಮೀರಾಬಾಯಿ, ಏಕನಾಥ್, ಚೈತನ್ಯ, ಚಂಡೀದಾಸ, ಜ್ಞಾನದೇವ, ತುಕಾರಾಮರಂಥ ಮಹಾರಾಷ್ಟ್ರದವರು, ಕನ್ನಡ ನಾಡಿನಲ್ಲಿ ಶಿವಶರಣರು (ವಚನಕಾರರು), ಹರಿದಾಸರು, ಎಲ್ಲರೂ ಒಂದು, ತಮ್ಮ ಧರ್ಮ, ಮತಗಳನ್ನು ಪ್ರತಿಪಾದಿಸಿದರು. ಇವರೆಲ್ಲರೂ ಸಮಾಜದ ಪ್ರತಿಬಂಧಕಗಳಾದ ಜಾತಿ, ಕುಲ ಒಪ್ಪಿದವರಲ್ಲ. ಉತ್ತರದ ರಾಮಾನಂದರ ಪ್ರಿಯ ಶಿಷ್ಯ ಕಬೀರ, ನೇಯ್ಗೆಯವನು, ಮುಸಲ್ಮಾನ, ಧನ್ನಾ ಎಂಬಾತ ಒಕ್ಕಲಿಗ. ಕಬೀರ (ಕ್ರಿ. ಶ. ೧೩೯೮ ರ) ಜಾತಿ, ಮತ, ಯಾತ್ರೆ, ವ್ರತ, ಉಪವಾಸ ಎಲ್ಲ ಬಂಧಗಳನ್ನೂ ಕಿತ್ತೊಗೆದನು. ಒಳ್ಳೆಯ ಆಚರಣೆಗೆ ಹೆಚ್ಚಿನ ಸ್ಥಾನವನ್ನು ಕೊಟ್ಟನು.

ಕಬೀರನಂತೆಯೇ ಬಂದವರು ತುಳಸೀದಾಸ (ರಾಮಚರಿತ ಮಾನಸವೆಂಬ ರಾಮಾಯಣ ಕಾವ್ಯ ಬರೆದವರು) ಭಕ್ತೆ ಮೀರಾ ಬಂಗಾಲದಲ್ಲಿ ಶ್ರೀ ಚೈತನ್ಯರು. ಇವರದ್ದೇ ಒಂದು ಪಂಥವೇ ಬೆಳೆದಿದೆ. ಹೀಗೆಯೇ ಮಹಾರಾಷ್ಟ್ರದಲ್ಲಿ ಹರಡಿದ ಭಕ್ತಿ ಪಂಥಕ್ಕೆ ಪಂಢರಾಪುರದ ಪುಂಡಲೀಕ ವಿಠಲನ ಭಕ್ತರಾದ ಜ್ಞಾನೇಶ್ವರನೇ ಅಧಿಷ್ಠಾತೃ, ಕೇವಲ ಭಕ್ತಿಯಿಂದಲೆ ದೇವರೊಲಿಮೆ ಸಾಧ್ಯ ಎಂಬುದು ಇವರ ಮತ. ಆಗ್ಗೆ ಬಂದ ಭಕ್ತರು ಅನೇಕ. ಇದರಲ್ಲಿ ದಾಮಾಜಿಪಂತನೆಂಬಾತ ಹೆಸರಾಂತ ವಿಷ್ಣುಭಕ್ತ. ವಿಠಲ ಇವನ ನೋವು ತಡೆಯಲು ತಾನೇ ಹೊಲೆಯ ವೇಷಧರಿಸಿ, ಭಕ್ತನನ್ನು ಕಾಪಾಡಿದನೆಂದು ಪ್ರತೀತಿ ಇದೆ. ಜ್ಞಾನದೇವನ ನಂತರ ಬಂದವನು ಏಕನಾಥ. ಈತ ಭಾಗವತವನ್ನ ಬರೆದ ಸಂತ ಕವಿ. ಅನಂತರ ಬಂದವ ತುಕಾರಾಮ. ಇವನು ವಿಠ್ಠಲನ ಅಂತರಂಗ ಭಕ್ತ. "ವಾರಕರಿಪಂಥ" ಇವನಿಂದಲೇ ಆರಂಭವಾಗಿದ್ದು ಹಾಗೂ "ಅಭಂಗ" ಛಂದಸ್ಸಿನಲ್ಲಿ ಅನೇಕ ಸ್ತೋತ್ರ ರಚಿಸಿದ್ದಾನೆ. ಇದುವರೆಗೆ ನಾವು

ಭಾರತದ ವಿವಿಧೆಡೆ ಭಕ್ತಿಪಂಥ ಬೆಳೆದು ಬಂದ ಹಾದಿ ಗಮನಿಸಿದೆವು. ಕರ್ನಾಟಕ ದಲ್ಲಿಯೂ ಈ ಭಕ್ತಿಪಂಥ ಶಿವಶರಣರಿಂದ, ಹರಿದಾಸರಿಂದ ಹೇಗೆ ಬೆಳೆಯಿತೆಂಬುದಕ್ಕೆ ಭಕ್ತಿಯ ನಿರೂಪಣೆಯನ್ನು ಕುರಿತ ಕೆಲವು ಉದಾಹರಣೆಗಳನ್ನು ಹಿಂದೆಯೇ ಕೊಟ್ಟಿದ್ದೇವೆ. ಅವರೂ ದಾಸರ ಭಕ್ತಿ ಸ್ವರೂಪ ಅದೆಂಥ ಉತ್ಕಟ ಸ್ವಭಾವದ್ದೆನ್ನಲು, ಅದನ್ನು ಕುರಿತೇ ಪ್ರತ್ಯೇಕವಾಗಿ ವಿವೇಚಿಸಲಾಗಿದೆ. ಏಕೆಂದರೆ ಹರಿದಾಸ ಸಾಹಿತ್ಯವೆಲ್ಲ ಭಕ್ತಿಯ ವಿವಿಧ ಪ್ರಕಾರಗಳ ಪ್ರತಿಪಾದನೆಯಲ್ಲಿ ಬೆಳೆದು, ವಿಜೃಂಭಿಸಿದೆ. 'ದಾಸೋಹಂ ತವದಾಸೋಹಂ' ಎಂದು ಶ್ರೀಜಗನ್ನಾಥದಾಸರು, ''ಫಲವಿದು ಬಾಳ್ದುದಕ್ಕೆ, ಸಿರಿ ನಿಲಯನ ಗುಣಗಳ ತಿಳಿದು ಭಜಿಸುವುದು'' ಎಂದು ಹಂಬಲಿಸಿದ್ದಾರೆ. ಇದರಿಂದ, ಭಕ್ತಿ ಕುರಿತ ವಿವೇಚನೆಯನ್ನು ಮುಂದೆ ಪ್ರಾರಂಭಿಸುವುದನ್ನು ಸೂಚಿಸಿರುವುದರ ಜತೆಗೇ ಹರಿದಾಸ ಸಾಹಿತ್ಯದ ಉಗಮ ಕುರಿತು ಪರಿಶೀಲಿಸಬೇಕಾಗಿದೆ.

ಕರ್ನಾಟಕ ಹರಿದಾಸ ಸಾಹಿತ್ಯದ ಉಗಮ ಮತ್ತು ಅದರ ಸ್ವರೂಪ ಕುರಿತು ಪರಿಶೀಲಿಸುವಲ್ಲಿ ನಮಗೆ ಆಧಾರಗಳಿರುವುದು ಹರಿದಾಸರ ಕೀರ್ತನೆ, ಕೃತಿ ಹಾಗೂ ಅಂದಿನ ಹಿನ್ನೆಲೆಯ ಆಧಾರ (ಸಾಮಾಜಿಕ, ರಾಜಕೀಯ) ಎಂಬುದನ್ನು ನಾವು ಮರೆಯುವಂತಿಲ್ಲ ಹಾಗೂ ಅದಿನ ರಾಜಕೀಯ ಇತಿಹಾಸವೂ ಉಲ್ಲೇಖಾರ್ಹವೆ.

ಮೇಲೆ ತಿಳಿಸಿದಂತೆ ಉತ್ತರ ಭಾರತದಲ್ಲಿ ಉದ್ಭವಿಸಿದ ಅಶಾಂತಿ, ರಾಜರು ತಮ್ಮ ಆಳ್ವಿಕೆ ವಿಸ್ತರಿಸುವ ಮಹದಾಶೆ, ದಕ್ಷಿಣ ಭಾರತ ಆಕ್ರಮಿಸಲು ಅವಕಾಶವಿತ್ತಿತು. ವೈಷ್ಣವ ಭಕ್ತಿ ಕೂಡ ಕರ್ನಾಟಕದಲ್ಲಿ ದಾಂಗುಡಿಯಿಟ್ಟು ಬೆಳೆಯಲು ಕಾರಣವಾಯಿತು, ಕನ್ನಡ ಸಾಹಿತ್ಯದ ಆದಿಕವಿಯಾದ ಪಂಪ, ಜೈನ ಧರ್ಮಾವಲಂಬಿ. ಇದರಿಂದ ಕರ್ನಾಟಕದ ಅಂದಿನ ಇತಿಹಾಸವನ್ನು ಕೆಳಗೆ ಕಂಡಂತೆ ತಿಳಿಸುವುದರ ಮೂಲಕ ಅಂದಿದ್ದ ಪರಿಸ್ಥಿತಿ ಗಮನಿಸಬಹುದು :

1. ಬೌದ್ಧ ಧರ್ಮ-ಜೈನ ಧರ್ಮ-ಕ್ರಿ. ಶ. ೪ನೇ ಶತಮಾನದವರೆಗೆ
2. ಜೈನ ಧರ್ಮ-ಶೈವ ಧರ್ಮ-ಕ್ರಿ.ಶ. ೪-೫ನೇ ಶತಮಾನ.

ಈ ಮತೀಯ ಆಂದೋಲನಗಳು ವೇದ, ಪುರಾಣಗಳಲ್ಲಿ ಆಡಕ ಆಗಿ, ಬಿತ್ತರಗೊಂಡಿದ್ದ ವೈಷ್ಣವ ಧರ್ಮವನ್ನು ಮುಸುಕಿದ್ದವು. ಅನಂತರ ಬಂದ ಕರ್ನಾಟಕ ಬಾದಾಮಿ ಚಾಲುಕ್ಯರಿಂದ ವೈಷ್ಣವ ಧರ್ಮ ಪುನರುಜ್ಜೀವಿತಗೊಂಡಿತೆನ್ನಬೇಕು. ಕಂಚಿಯ ಪಲ್ಲವರು ಶೈವರಾಗಿದ್ದಂತೆ, ಅವರ ವಿರೋಧಿಗಳಾದ ಬಾದಾಮಿಯ ಚಾಲುಕ್ಯರು ವೈಷ್ಣವ ಧರ್ಮವನ್ನವಲಂಬಿಸಿದವರಾಗಿದ್ದರು.

3. ವೈಷ್ಣವ ಧರ್ಮ-ಕ್ರಿ.ಶ.೬ನೇ ಶತಮಾನದಿಂದ ೮ನೆ ಶತಮಾನದವರೆಗೂ.
4. ಶೈವಧರ್ಮ, ಜೈನಧರ್ಮ, ವೈಷ್ಣವಧರ್ಮ : ೮-೧೦ ಕ್ರಿ.ಶ.ರವರೆಗೆ ಇದ್ದರು.

(ಆಗಲೇ ಆದಿಕವಿ ಪಂಪ ಕ್ರಿ. ಶ. ೯ನೆ ಶತಮಾನದಲ್ಲಿ ತನ್ನ ಆದಿಪುರಾಣ ಹಾಗೂ ವಿಕ್ರಮಾರ್ಜುನವಿಜಯ ಬರೆದು ಅವರ ನಂತರ ಬಂದ ರನ್ನ ೧೦ನೆ ಶ.ದಲ್ಲಿ ಸಾಹಸ

ಭೀಮ ವಿಜಯ [ಗದಾಯುದ್ಧ] ಹಾಗೂ ಅಜಿತ ಪುರಾಣವನ್ನು ಬರೆದನು. ಪೊನ್ನನು ಶಾಂತಿಪುರಾಣ ಹಾಗೂ ಭುವನೈಕರಾಮಾಭ್ಯುದಯ ಕಾವ್ಯ ಬರೆದನು. ಈ ಮಾರ್ಗ ಸಾಹಿತ್ಯ (೧೦ನೆ ಶ.ದವರೆಗೆ ಮುಂದುವರೆಯಿತು). ಅನಂತರ ಜೈನಧರ್ಮ ನಿಧಾನವಾಗಿ ಕ್ಷೀಣಿಸಿತು. ವೈಷ್ಣವಧರ್ಮ-ಶೈವಧರ್ಮಗಳೆರಡೂ ಪರಸ್ಪರ ಜನಮನ್ನಣೆಗೆ ಪಾತ್ರವಾದವು. ಶೈವಧರ್ಮದಿಂದ ಹೊರ ಹೊಮ್ಮಿದುದೇ ಅನುಭಾವ ಪಂಥ.[33]

5. ವೈಷ್ಣವಧರ್ಮ-ಕ್ರಿ.ಶ.೧೧ ರಿಂದ ೧೨ರ ವರೆಗೆ ಬೆಳೆಯಿತು.

6. ವೀರಶೈವಧರ್ಮದ ಉದಯ-ಕ್ರಿ.ಶ. ೧೨ನೆ ಶತಮಾನ.

ಇದೇ ಕಾಲದಲ್ಲಿ ವೈಷ್ಣವ ಧರ್ಮ ಪ್ರತಿಪಾದಿಸಲು ಶ್ರಮಿಸಿದವರು, ದಕ್ಷಿಣ ದೇಶದ ಆಳ್ವಾರ್ ಮಹನೀಯರು, ರಾಮಾನುಜರು, ಹಾಗೂ ಶ್ರೀವೈಷ್ಣವ ಧರ್ಮ. ತಂಜಾವೂರಿನ ಕುಲೋತ್ತುಂಗ ಚೋಳನೆಂಬ ರಾಜನ ಆಗ್ರಹಕ್ಕೆ ಪಾತ್ರರಾದ ರಾಮಾನುಜರು ಕರ್ನಾಟಕಕ್ಕೆ ಬಂದರು. ಇಲ್ಲಿ ಅನೇಕ ವರ್ಷ ನೆಲೆ ನಿಂತರು. ಇದನ್ನು ಕರ್ನಾಟಕದಲ್ಲಿ "ಸಂಕ್ರಮಣ ಯುಗ"ವೆಂದು ಕರೆಯಬಹುದು. ಏಕೆಂದರೆ ವೈಷ್ಣವಧರ್ಮಕ್ಕೂ, ಶೈವ ಧರ್ಮಕ್ಕೂ ಆಗ ತಾನೆ ಉದಯಿಸಿದ ವೀರಶೈವ ಧರ್ಮಕ್ಕೂ ಆಗಾಗ್ಗೆ ಘರ್ಷಣೆ ಇದ್ದೇ ಇತ್ತು. ರಾಮಾನುಜರು ಪ್ರತಿಪಾದಿಸಿದ ವೈಷ್ಣವಧರ್ಮ, ವಿಶಿಷ್ಟಾದ್ವೈತವೆಂದು ಹೆಸರಾಗಿದ್ದು ಅದರಲ್ಲಿನ ಅದ್ವೈತ ಲಕ್ಷಣ, ಅದನ್ನು ಮುಂಕ್ಕ ಆಗಿರಿಸಲಿಲ್ಲ. ನಿಜವಾದ ವೈಷ್ಣವ ಧರ್ಮವನ್ನೂ ವೈದಿಕ ಆಧ್ಯಾತ್ಮ ಪುನಶ್ಚೇತನಗೊಳಿಸುವುದರೊಂದಿಗೆ ಸ್ಥಾಪಿಸಿದವರೆಂದರೆ ಮಧ್ವಾಚಾರ್ಯರು. ಇವರ ದ್ವೈತತತ್ವ, ಆಧ್ಯಾತ್ಮ ಪ್ರಪಂಚಕ್ಕೇ ಒಂದು (೧೩ನೇ ಶ.) ವಿಶಿಷ್ಟ ತಾತ್ವಿಕ ಕೊಡುಗೆ. ಹಾಗೂ ಇದೇ ವೈಷ್ಣವಧರ್ಮದ ಸಮರ್ಥ ಪ್ರತಿಪಾದನೆಗೆ ಬದ್ಧ ಆಗಿ ನಿಂತದ್ದು. ಇದಕ್ಕೆ ಮುನ್ನ ದ್ವೈತ ಸಿದ್ಧಾಂತ ಸ್ಥಾಪನೆ ಆಗುವ ಮೊದಲು ಇದ್ದ ಮತ ಧರ್ಮಗಳ ಬಗ್ಗೆ ಒಂದು ಮಾತು ಹೇಳದರೆ, ಆಗ, ಕರ್ನಾಟಕ ಹರಿದಾಸ ಸಂತರ ಉಗಮಕ್ಕೆ ಕಾರಣವಾದ ಸನ್ನಿವೇಶವನ್ನೂ ಕುರಿತು ಹೇಳುವಲ್ಲಿ ಉಪಯುಕ್ತವೆನಿಸುತ್ತದೆ.

ದ್ವೈತತತ್ವಕ್ಕೆ ಮೊದಲು ಪ್ರಚಲಿತ ಆಗಿದ್ದ ವೇದಾಂತ ಶಾಖೆಗಳು ಪ್ರಧಾನವಾಗಿ ಎರಡು. ಶಂಕರರ ಅದ್ವೈತ ಹಾಗೂ ರಾಮಾನುಜರ ವಿಶಿಷ್ಟಾದ್ವೈತ. ಇದರ ಜತೆ ಪ್ರತಿಸ್ಪರ್ಧಿಯಾಗಿದ್ದ ಶೈವಧರ್ಮ, ವೀರಶೈವ ಸಿದ್ಧಾಂತ, ಚಾರ್ವಾಕ ಮತ ಖಿಲ ಆಗುತ್ತಿದ್ದ ಜೈನ ಬೌದ್ಧ ಧರ್ಮಗಳು. ದ್ವೈತತತ್ವ ಪ್ರಧಾನವಾಗಿ ಹಾಗೂ ಪ್ರಬಲ ವಾಗಿ ಅದ್ವೈತವನ್ನು ವಿರೋಧಿಸಿತು. ಆದಿಶಂಕರರು ಬೌದ್ಧಧರ್ಮ ಹಾಗೂ ಇತರ ನಿರೀಶ್ವರವಾದವುಳ್ಳ ಧರ್ಮಗಳನ್ನು ವಿರೋಧಿಸಿದರೂ ಅವರ 'ಅದ್ವೈತವಾದ' ದಲ್ಲಿ ನಿರಾಶೆಯೇ ಹೆಚ್ಚು. ಜಗತ್ತೇ ಮಾಯೆ, ಬ್ರಹ್ಮವೊಂದೆ ಸತ್ಯ ಎಂದಾಗ ಇಲ್ಲಿನ ಬದುಕು ಬರೀ ಭ್ರಮೆ ಎಂದೆನಿಸಿತು. ನಿರಾಶಾವಾದ ತಲೆ ಎತ್ತಿತು. ಶಂಕರರು ಅನಂತರ ಬೋಧಿಸಿದ ಭಕ್ತಿ ಅಥವಾ ವೈಷ್ಣವ ಪೂಜೆ ಏನೂ ಸಫಲವಾಗಲಿಲ್ಲ; ಭಗವಂತ ಭಕ್ತರ ಈಶದಾಸಭಾವನೆ ನಿಜವಾದ ಭಕ್ತಿಯ ಸ್ವರೂಪ. ಅದನ್ನು

ಶಂಕರರು ಪ್ರತಿಪಾದಿಸಲಿಲ್ಲ. ಇದನ್ನು ಅನಂತರ ಬಂದ ನಾ ಥವಮುನಿಗಳು, ರಾಮಾನುಜರು ವಿಷ್ಣುಭಕ್ತಿಯನ್ನೂ ಪ್ರಪತ್ತಿ (ಶರಣಾಗತ ಭಾವ) ಯನ್ನೂ ಬೋಧಿಸಿದರು. ಇಲ್ಲಿಯೂ ಮುಕ್ತರು ನಾರಾಯಣನಿಗೆ ಸಮನಾಗಿ ಅವನ ಮೋಕ್ಷ ಸಾಮ್ರಾಜ್ಯದಲ್ಲಿ ಸುಖವನ್ನು ಅನುಭವಿಸುವರೆಂದು ಪ್ರತಿಪಾದಿಸಿದ್ದು-ನಾರಾಯಣವನ್ನು ಅಪ್ರಮೇಯ, ನೆನ್ನಿಸಲಿಲ್ಲ. ನಿಜವಾದ ಭಕ್ತಿಯಲ್ಲಿ ದೇವರೇ ಸರ್ವಸ್ವ, ಸರ್ವಶಕ್ತ, ಯಾರಿಗೂ ನಿಲುಕದುಥವನೆಂಬ ಭಾವ. ಮುಕ್ತಿಯಲ್ಲಿ ಜೀವಾತ್ಮ-ಪರಮಾತ್ಮರೂ ಒಂದೇ ಆದ ರೊಂದಿಗೆ, ''ಸಂಸಾರ''ದ ಅವಸ್ಥೆಯಲ್ಲೇಕೆ ಅಸಮಾನತೆ ಇರಬೇಕು ? ಒಬ್ಬರು ಹೆಚ್ಚು ಇನ್ನೊಬ್ಬರು ಕಡಿಮೆ ಏಕೆ ? ಭಕ್ತ ನಾರಾಯಣನೇ ಪರದೈವ, ಅವನೇ ಗತಿ– ಹೆಚ್ಚಿನವನೆನ್ನಬೇಕು ? ಈ ತೆರನಾದ ಅನೇಕ ವಾದವಿವಾದ ನಡೆದವು. ರಾಮಾನುಜರ ಸಿದ್ಧಾಂತ ಶಂಕರರಿಗಿಂತ ಮುಂದೆ ಹೋದರೂ, ಈ ಕೆಲವು ನ್ಯೂನತೆಗಳಿಂದ ಅದು ಅದ್ವೈತವೆಂದೇ ಅನ್ನಿಸಿಕೊಂಡಿತು. ರಾಮಾನುಜರ ಭಕ್ತಿಗೆ ಭದ್ರವಾದ ತಾತ್ವಿಕ ತಳಪಾಯ ಇರದಾಯಿತು. ಇದೆಲ್ಲವನ್ನು ನಿವಾರಿಸಿ, ಎಲ್ಲ ಪೂರ್ವ ವೇದಾಂತ ಶಾಖೆ ಗಳನ್ನೂ ವಿಮರ್ಶಿಸಿ, ಜೀವಾತ್ಮ-ಪರಮಾತ್ಮರ 'ಈಶದಾಸ ಭಾವ' ಸಂಬಂಧ ಯಾವುದೇ ರೀತಿಯುಲ್ಲೂ ಕುಂದಿಲ್ಲ, ಪರಮಾತ್ಮನೇ ಜಗತ್ತಿನ ಸರ್ವಶಕ್ತಿ, ಅವನೇ ಜೀವಾತ್ಮನನ್ನು ಸಂಸಾರದಿಂದ ಉದ್ಧರಿಸಬಲ್ಲಾತ, ಇಹದ ಜಂಜಾಟದಿಂದ ವಿಮೋಚನೆ ಹೊಂದಲು ಶ್ರೀಹರಿಯ ಸರ್ವೋತ್ತಮತ್ವದ ನೈಜಸ್ವಭಾವ ತಿಳಿಯುವುದೊಂದೆ ವರ್ಗ, ಅವನನ್ನು ನಿಷ್ಕಾಮ ಭಕ್ತಿಯಿಂದ, ದೃಢವಾಗಿ ನುತಿಸುವುದೇ ಏಕೈಕ ಮಾರ್ಗವೆಂದು ಘೋಷಿಸಿದವರು ಮಧ್ವಾಚಾರ್ಯರು. ಇವರಿಗೆ ಆನಂದ ತೀರ್ಥರೆಂದೂ ಇನ್ನೊಂದು ಹೆಸರು. ಮಧ್ವಾಚಾರ್ಯರ ಪ್ರಕಾರ, ಭಕ್ತಿಯೆಂದರೆ, ''ಮಾಹಾತ್ಮ್ಯಜ್ಞಾನ ಪೂರ್ವಸ್ತು ಸುದೃಢಃ ಸರ್ವತೋಧಿಕಃ ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನಚಾನ್ಯಥಾ.'' ದೇವರಲ್ಲಿ ಎಣೆಯಿಲ್ಲದಷ್ಟು ಅಧಿಕವಾದ ಹಾಗೂ ದೃಢವಾದ ಭಕ್ತಿ ಅವನನ್ನು ಅರಿಯುವ ಮಹಾತ್ಮಜ್ಞಾನದಿಂದ ಕೂಡಿದ್ದು, ಈ ವಿಶೇಷ ಜ್ಞಾನ ಇದ್ದು ಮುಂದುವರಿಯುವುದರಿಂದ ಈಶದಾಸಭಾವವೂ ಶಾಶ್ವತ ವಾಗಿ ಬೆಳೆಯುತ್ತದೆ. ಶ್ರೀಹರಿ ಪಾರಮ್ಯವೂ ಇರುತ್ತದೆ. ಮಧ್ವಾಚಾರ್ಯರು ತಮ್ಮ ಸಿದ್ಧಾಂತವನ್ನು ವೇದಗಳ ಪ್ರಮಾಣಗಳಿಂದ ಸ್ಪಷ್ಟೀಕರಿಸಿದರು. ಹಾಗೂ ಪ್ರಪಂಚ ಸತ್ಯ, ಭೇದವೆಯಲ್ಲ ಎಂದು ವಾದಿಸಿದರು. ಜೀವಾತ್ಮ ಪರಮಾತ್ಮರಲ್ಲಿ ಮಾತ್ರ ಭಿನ್ನತೆ ಯಷ್ಟೆ ಅಲ್ಲ ಈ ತಾರತಮ್ಯಭಾವ ಜೀವ ಜೀವರಲ್ಲೂ ಇರುತ್ತದೆ. ಆಚಾರ್ಯರ ಈ ತತ್ವಗಳನ್ನು ಹರಿಭಕ್ತಿಯೊಡಗೂಡಿ ಮುಂದೆ ಪ್ರತಿಪಾದಿಸಿ, ಪ್ರಸರಿಸಿದವರು ಕರ್ನಾಟಕದ ಹರಿದಾಸರು ಹಾಗೂ ಅನೇಕ ಮಠಾಧೀಶರಾದವರೂ ಹರಿದಾಸ ಸಾಹಿತ್ಯದ ಸೇವೆ, ಹಾಗೂ ದ್ವೈತ ಮತ ಪ್ರಸಾರವನ್ನು ಕೈಗೊಂಡು ನಡೆಸಿದರು. ಇಷ್ಟಾದರೂ ಕರ್ನಾಟಕ ಹರಿದಾಸ ಸಾಹಿತ್ಯದ ಉಗಮ ಯಾವಾಗ ಆಯಿತೆಂದು ಇನ್ನೂ ಖಚಿತವಾಗಿ ತಿಳಿದುಬಂದಿಲ್ಲ. ಅದರ ಬಗ್ಗೆ ಸಾಕಷ್ಟು ವಾದವಿವಾದ ನಡೆದಿವೆಯಾದರೂ ನಿರ್ದಿಷ್ಟ

ವಾಗಿ ಹರಿದಾಸ ಸಾಹಿತ್ಯ ಉಗಮದ ಕಾಲ ಇಂತಿಷ್ಟೆ ಎಂದು ಹೇಳಬರುವಂತಿಲ್ಲ. ಆದರೂ ದೊರೆವ ಆಧಾರ ಪ್ರಮಾಣಗಳಿಂದ ನಾವು ಕಾಲಿಕವಾಗಿ ನಿರ್ಧರಿಸಬಹುದಾಗಿದೆ.

### ಹರಿದಾಸಸಾಹಿತ್ಯದ ಪ್ರೇರಣೆಗಳು

ಹರಿದಾಸಸಾಹಿತ್ಯದ ಮೂಲ ಕುರಿತು ತಿಳಿಸುವಲ್ಲಿ ಎರಡು ಮುಖ್ಯ ಅಂಶ ಗಮನಿಸುವುದು ಆವಶ್ಯಕ. ಒಂದನೆಯದು, ಭಾಗವತಧರ್ಮ ; ಎರಡನೆಯುವಾಗಿ ವಚನಕಾರರ ಆಂದೋಲನಕ್ಕೆ ಹರಿದಾಸರು ಎಷ್ಟರಮಟ್ಟಿಗೆ ಕೃತಜ್ಞರಾಗಿರಬೇಕು ಎಂಬುದು. ಏಕೆಂದರೆ, ಭಾಗವತಧರ್ಮ, ವೈಷ್ಣವ ಧರ್ಮದಲ್ಲಿ ಬೆರೆತು, ಮಧ್ವಾಚಾರ್ಯರ ದ್ವೈತ ಸಿದ್ಧಾಂತ ಹಾಗೂ ಪದ್ಧತಿಯನ್ನೆ ಅನುಸರಿಸಿದ ಹರಿದಾಸರಿಗೆ ಸ್ಫೂರ್ತಿ ಶಕ್ತಿಯೆ ಆದರೂ, ಸ್ಮಾರ್ತ ಭಾಗವತ ಸಂಪ್ರದಾಯದಲ್ಲಿ ಬಂದ ದಾಸರೂ ಇದ್ದಾರೆ. ಶ್ರೀವೈಷ್ಣವ ಸಂಪ್ರದಾಯದಲ್ಲಿ ಬಂದ ವೈಕುಂಠದಾಸರದ್ದೂ ಒಂದು ನಿದರ್ಶನ. ಆದ್ದರಿಂದ ಈ ಎರಡೂ ಅಂಶ ಕುರಿತು ತಿಳಿಸುವುದರೊಂದಿಗೇ ಹರಿದಾಸ ಸಾಹಿತ್ಯದ ಉಗಮದ ಕಾಲವೂ ತಿಳಿಯಬರುತ್ತದೆ.

### ಭಾಗವತ ಧರ್ಮ

ಭಗವಂತನನ್ನು ಕುರಿತು ವಿವೇಚಿಸುವ ಧರ್ಮನೇ ಭಾಗವತಧರ್ಮ.[34] ಇದನ್ನು ಯಾರು ಯಾವಾಗ ಸ್ಥಾಪಿಸಿದರೆಂಬುದನ್ನಾಗಲೀ, ಯಾವ ಕಾಲವೆಂದಾಗಲೀ ಖಚಿತವಾಗಿ ಹೇಳಲು ಸಾಧ್ಯವಿಲ್ಲ. "ಎಂದಿನಿಂದ ಭಗವಂತನೊಬ್ಬನಿದ್ದಾನೆಂಬ ಅನುಭವ ಜನರಿಗಾಯಿತೋ, ಎಂದಿನಿಂದ ಜನರು ಭಗವಂತನು ದೊಡ್ಡವನು, ಅವನ ಅನುಗ್ರಹದಿಂದ ತಮ್ಮ ಉದ್ಧಾರ ಆಗಬೇಕೆಂದು ತಿಳಿಯಲಾರಂಭಿಸಿದರೋ, ಎಂದಿನಿಂದ ಅವರು ಆ ಭಗವಂತನ ಭಜನೆ ಮಾಡಿದರೋ ಅಂದಿನಿಂದ ಭಾಗವತಧರ್ಮದ ಉದಯವಾಯಿತೆಂದು ಭಾವಿಸಬೇಕು."[35] ಅಂತೆಯೇ ಹಿಂದೂ ವೇದಾಂತದ ಮೂರು ಶಾಖೆಗಳಾದ ಅದ್ವೈತ, ವಿಶಿಷ್ಟಾದ್ವೈತ, ಹಾಗೂ ದ್ವೈತತತ್ವಗಳು ಹುಟ್ಟುವ ಮುಂಚೆಯೆ ಭಾಗವತ ಧರ್ಮದ ಅಸ್ತಿತ್ವವಿದ್ದಿರಲು ಸಾಧ್ಯವಿದೆ. ವಿಷ್ಣುಭಕ್ತಿಯೆ ಇದಕ್ಕೆ ಆಧಾರ. ಅದನ್ನು ಕುರಿತು ಹಿಂದೆಯೆ ವಿಶದವಾಗಿ ತಿಳಿಸಿದೇವೆ. ಭಾಗವತಧರ್ಮ, ಮೇಲ್ಕಂಡ ಮೂರು ಸಿದ್ಧಾಂತಗಳಿಗೆ ಸಮಾನ ಆದದ್ದು. ಧರ್ಮ ಎಂಬ "ಕೇವಲ ಪ್ರಕೃತಿಯ ಅಂತರ್ಭೂತ ಮಾನವಗುಣ". ಅದು ಸಹಜವಾಗಿ ತಾನೇ ಜನಿಸಿ, ಬಾಳುತ್ತದೆ. ಅದನ್ನು ಹಾಗೆಯೆ ಅನುಸರಿಸುವವರೂ ಹುಟ್ಟಿಕೊಳ್ಳುತ್ತಾರೆ. "ದಯೆಯೇ ಧರ್ಮದ ಮೂಲ ವಯ್ಯಾ" ಎಂಬ ವಚನಕಾರರ ಮಾತಿನಲ್ಲಿ ಧರ್ಮದ ಒಂದು ಬಹುಮುಖ್ಯ ಸ್ವಭಾವ ಕುರಿತ ವಿವೇಚನೆಯಿದೆ. ಹಾಗೆಯೆ, ಒಂದು ನಿರ್ದಿಷ್ಟ ಜಾತಿ, ಕುಲ, ಇವುಗಳನ್ನೆಲ್ಲ ಮೀರಿ ನಿಲ್ಲುವುದು, ನಡೆವುದು, ಧರ್ಮ. ಇಂಥ ಧರ್ಮ ಕೇವಲ ಪ್ರಬೋಧಕ ಆಗದೆ ಪ್ರಚೋದಕ, ಪ್ರೇರಕ, ಪೋಷಕವೂ ಆಗಬೇಕು. ಭಾಗವತ ಧರ್ಮವು

ಅಂಥ "ತ್ರಿಕಾಲಾಬಾಧಿತ ಧರ್ಮ". ಭಗವಂತನಲ್ಲಿ ಈಶದಾಸ ಭಾವ ಪ್ರಕಟಪಡಿಸಿರುವ ಹರಿದಾಸ ಭಾಗವತಧರ್ಮವೂ ಅಂಥದ್ದೆ. ಭಾಗವತ ಧರ್ಮದಲ್ಲಿ ಪ್ರಸಿದ್ಧರಾದವರ ಹೆಸರನ್ನು ಕುರಿತೇ ಒಂದು ಶ್ಲೋಕವನ್ನು ಯಾರೋ ಮಹನೀಯರು ಹಾಡಿದ್ದಾರೆ:

ಪ್ರಹ್ಲಾದ ನಾರದ ಪರಾಶರ ಪುಂಡರೀಕ ವ್ಯಾಸ ಅಂಬರೀಷ
ಶುಕ ಶೌನಕ ಭೀಷ್ಮದಾಲ್ಭ್ಯಾನ್
ರುಕ್ಮಾಂಗದ ಅರ್ಜುನ ವಸಿಷ್ಠ ವಿಭೀಷಣಾದೀನ್ ಪುಣ್ಯಾನಿಮಾನ್
ಪರಮ ಭಾಗವತಾನ್ ಸ್ಮರಾಮಿ ॥

ಇಲ್ಲಿ ಉಕ್ತವಾಗಿರುವ ಪ್ರಕಾರ ಹಾಗೂ ಹಿಂದೂ ವೇದಾಂತದ ಪ್ರಕಾರ ಕೃತಯುಗದ ಪ್ರಹ್ಲಾದನೇ ಪ್ರಪ್ರಥಮ ಭಾಗವತ. ದೇವರು ಎಲ್ಲೆಲ್ಲೂ ಇದ್ದಾನೆಂದು, ಕಂಭದಿಂದ ನರಹರಿಯನ್ನು ಕರೆ ತಂದ ಭಕ್ತಿಪುಂಗವನೀತನೆಂಬುದು ಎಲ್ಲರೂ ಬಲ್ಲರು. ಹಾಗೆಯೇ ನಾರದ ಮಹರ್ಷಿಗಳು, ಸಂಗೀತಶಾಸ್ತ್ರ, ಭಕ್ತಿಗಳಿಗೆ ನಾರದರ ಹೆಸರತ್ತದೆ ಮುಂದುವರಿಯಿಂವಂತಿಲ್ಲ. ಭಾಗವತಧರ್ಮದಲ್ಲಿ ಪ್ರಸಿದ್ಧರಾದ ಗಾನಲೋಲರು, ಹಾಗೂ ಭಕ್ತಿಸೂತ್ರಕಾರರೂ ಆದವರು ನಾರದರು. ಆನಂತರ ರಾಮಾಯಣವನ್ನು ಶ್ರೀ ವಾಲ್ಮೀಕಿ ಮುನಿಗಳಿಂದ ಕಲಿತು, ಅದನ್ನು ಶ್ರೀರಾಮನ ಸಭೆಯಲ್ಲಿ ತಂತ್ರೀವಾದ್ಯದ ನೆರವಿನಿಂದ ಸುಶ್ರಾವ್ಯವಾಗಿ ಹಾಡಿದರನ್ನಲಾದ ರಾಮಚಂದ್ರನ ಮಕ್ಕಳಾದ ಲವಕುಶರು. ಇದನ್ನು ರಾಮಾಯಣದ ಉತ್ತರಕಾಂಡ ಉದಹರಿಸುತ್ತದೆ. "ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ। ರಘುನಾಥಾಯ ನಾಥಾಯ ಸೀತಾಯಾಃ ಪತಯೇನಮಃ॥" ಎಂಬ ಶ್ಲೋಕದಲ್ಲಿ ಶ್ರೀರಾಮನನ್ನು ಕುರಿತು ವಸಿಷ್ಠರಾದಿಯಾಗಿ ನೆರೆದಿದ್ದವರೆಲ್ಲ ಹೇಗೆ ಪ್ರಶಂಸಿಸಿದರೆಂಬುದನ್ನು ಡಿ. ವಿ. ಜಿ. ತಮ್ಮ ಶ್ರೀಮದ್ರಾಮಾಯಣದ ಮುನ್ನುಡಿಯಲ್ಲಿ ತಿಳಿಸಿರುವುದು ಭಾಗವತ ಧರ್ಮದ ಇರವನ್ನು ಸೂಚಿಸಿವೆ. ರಾಗ ಪದ್ಧತಿ ಇದ್ದ ಕಾಲದಲ್ಲಿ ಇದು ಅಸಂಭವವಲ್ಲ.

ಭಾಗವತಧರ್ಮ ಪದ್ಯ-ಗದ್ಯರೂಪ ತಾಳಿ ಬಂದಿರುವುದನ್ನು ಕುರಿತು ಗಮನಿಸುವಲ್ಲಿ ಪದ್ಮಪುರಾಣದ ಒಂದು ಶ್ಲೋಕವನ್ನು ಉಲ್ಲೇಖಿಸಬಹುದಾಗಿದೆ :

ಪ್ರಹ್ಲಾದ ಸ್ತಾಲಧಾರೀ ತರಲಗತಿ ತಯಾಚೋದ್ಧವಃ ಕಾಂಸ್ಯಧಾರೀ
ವೀಣಾಧಾರೀ ಸುರರ್ಷಿಃ ಸ್ವರ ಕುಶಲತಯಾ ರಾಗಕರ್ತಾರ್ಜುನೋಭೂವತ್।
ಇಂದ್ರೋವಾದೀನ್ಮೃದಂಗಂ ಜಯಜಯ ಸುಕೀರ್ತನೇ ತೇ ಕುಮಾರಾಃ
ಯತ್ರಾಗ್ರೇ ಭಾವವಕ್ತಾರ ಸಂಚತನತಯಾ ವ್ಯಾಸ ಪುತ್ರಶುಕೋಭೂತ್ ॥

ವ್ಯಾಸಪುತ್ರರಾದ ಭಾಗವತವನ್ನು ವಿರಚಿಸಿದ ಶುಕಮುನಿಗಳು ಸನಕಾದಿ ಮುನಿಗಳಿಂದ ಒಡಗೂಡಿದ ಸಭೆಯಲ್ಲಿ ನವರಸಭರಿತವಾದ ಕೀರ್ತನೆಗೈದರು. ಅವರಿಗೆ ನೆರವೀಯು

ವಂತೆ ಪ್ರಹ್ಲಾದನು ತಾಳವನ್ನೂ ಬಾರಿಸಿದರೆ, ಉದ್ಧವನು ಕಾಂಸ್ಯವನ್ನೂ (ಈಗಿನ ಕಂಸಾಳೆ ಒಂದು ವಿಧದ ವಾದ್ಯ), ನಾರದರು ವೀಣೆಯನ್ನೂ ಇಂದ್ರನು ಮೃದಂಗವನ್ನೂ ನುಡಿಸಿದರು. ಸ್ವರ ಕುಶಲತೆಯಿಂದ ಒಡಗೂಡಿದ ಗಾಯನವನ್ನು ಅರ್ಜುನನು ಮಾಡಿದನು. ಸನಕ ಸುನಂದಾದಿ ಮಹರ್ಷಿಗಳು ಈ ಗಾಯನ ಮೇಳದ ಸ್ವಾರಸ್ಯಕ್ಕೆ ಪರವಶರಾಗಿ ಜಯಘೋಷ ಮಾಡಿದರು.'' ಇದರ ಪ್ರಕಾರ, ಭಾಗವತಧರ್ಮಕ್ಕೆ ಐದು ಸಾವಿರ ವರ್ಷಕ್ಕೂ ಹಿಂದಿನಷ್ಟು ಪ್ರಾಚೀನತೆ ಇದೆಯೆಂದು ಗೊತ್ತಾಗುತ್ತದೆ. ಪ್ರಸ್ಥಾನತ್ರಯಗಳಲ್ಲಿ ಒಂದಾದ ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಹೀಗೆ ನುಡಿದಿದ್ದಾನೆ:

ಸತತಂ ಕೀರ್ತಯಂತೋಮಾಂ ಯತಂತಶ್ಚ ದೃಢವ್ರತಾಃ ।
ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥

ಇಲ್ಲಿ ಸತತಕ್ಕೆ ಎಂಬ ಪದಕ್ಕೆ "ವೀಣಾದಿ ವಾದ್ಯಗಳಿಂದ ಸಹಿತವಾಗಿ ನನ್ನನ್ನು ಕುರಿತು ಕೀರ್ತಿಸುತ್ತಾರೆ''[38] ಎಂದು ಉಲ್ಲೇಖಿಸಿದ್ದಾನೆ. ಇದರಿಂದ ಕೀರ್ತನ ಪದ್ಧತಿಯ ಪ್ರಾಚೀನತೆಯೂ ತಿಳಿಯಬರುತ್ತದೆ. ಭಾಗವತಧರ್ಮ, ಕ್ರಮೇಣ ಬೆಳೆದು ಅದೇ ಒಂದು ಶಿಕ್ಷಣ ಸಂಸ್ಥೆಯಾಯಿತು. ರಾಜಾಶ್ರಯ, ಜನಾನುರಾಗಕ್ಕೆ ಪಾತ್ರ ಆಯಿತು. ಸಮಾಜ ಸಂಘಾರಣೆಗೂ ತನ್ನ ಕೊಡುಗೆಯಿತ್ತಿತು. ಅರ್ಥಶಾಸ್ತ್ರದಲ್ಲಿ ಪರಿಣತನಾಗಿದ್ದ ಚಂದ್ರಗುಪ್ತ ಮೌರ್ಯನ ಪ್ರಧಾನಿ ಚಾಣಕ್ಯ, ರಾಜ್ಯ ವಿಸ್ತರಣೆ ಬೆಂಬಲಿಸಲು ಒಂದು ಕೀರ್ತನಕಾರರ ತಂಡವನ್ನೆ ಕಟ್ಟಿದ್ದನಂತೆ : ಆದರಿಂದ ಜನತೆಯ ವಿಶ್ವಾಸ, ನಂಬುಗೆ, ಆದರಣೆ ಗಳಿಸಿ, ಅಲ್ಲಲ್ಲಿಯ ರಾಜರ ಬಲಾಬಲ ತಿಳಿದು, ತಮ್ಮ ಅರಸರಿಗೆ ತಿಳಿಸುವುದು, ಕೀರ್ತನಕಾರರ ತಂಡದ ಕಾರ್ಯ. ಅಲ್ಲಿಗೆ ಭಾಗವತಧರ್ಮ ರಾಜಕೀಯದಲ್ಲೂ ಪ್ರವೇಶಿಸಿತೆನ್ನಬೇಕು. ಇದರಿಂದ ಕ್ರಮೇಣ ತನ್ನ ಧರ್ಮಸ್ವರೂಪವನ್ನೇ ಅದು ಕಳಕೊಂಡಿತು. ಆದರೂ ಕೀರ್ತನ ರೂಪದ ಧರ್ಮೋಪದೇಶಕ್ಕೂ, ಹರಿದಾಸರ ಸಂಪ್ರದಾಯಕ್ಕೂ ತುಂಬ ಹೋಲಿಕೆ, ಸಾದೃಶ್ಯತೆ ಇವೆ. ಅಂದರೆ ಹರಿದಾಸ ಪದ್ಧತಿ ಯಾವಾಗ ಪ್ರಾರಂಭ ಆಯಿತು ? ಭಾಗವತ ಧರ್ಮದ ಅಂಶಗಳನ್ನು ವ್ಯಯಿಸಿಯೂ, ಸ್ವತಂತ್ರವಾಗಿ ಬೆಳೆದ ಹರಿದಾಸ ಪಂಥ, ವಚನಕಾರರಿಗೇಕೆ ಕೃತಜ್ಞ ಆಗಿರಬೇಕೆಂದು ಪ್ರಶ್ನೆ ಬಂದರೆ, ಇತಿಹಾಸವೇ ಉತ್ತರ ಎನ್ನಬೇಕಾಗುತ್ತದೆ. ಕ್ರಿ.ಶ.ಹನ್ನೆರಡು-ಹದಿಮೂರನೆ ಶತಮಾನಗಳಲ್ಲಿ ಕರ್ನಾಟಕ ರಾಜಕೀಯ, ಸಾಹಿತ್ಯ ಎಲ್ಲದರಲ್ಲೂ ಒಂದು ವಿಧವಾದ ಕ್ರಾಂತಿ, ಆಂದೋಲನ ನಡೆದವು. ವಚನಕಾರರ ಚಳವಳಿ ಸಮಾಜದ ಎಲ್ಲ ಪಂಗಡಗಳವರನ್ನೂ ಆಳವಡಿಸಿಕೊಂಡಿತು. ಪ್ರಾಬಲ್ಯ ಕಳೆದುಕೊಳ್ಳುತ್ತಿದ್ದ ಶೈವಧರ್ಮವನ್ನು ಪುನಶ್ಚೇತನಗೊಳಿಸಿ, ವೀರಶೈವ ಧರ್ಮ ಪದ್ಧತಿಯನ್ನು ಸ್ಥಾಪಿಸಿ, ಸಮಾಜ ಸಂಘಾರಣೆಗಾಗಿ ಸತತ ಶ್ರಮಿಸಿದ ಬಸವಣ್ಣನವರ ನೇತೃತ್ವದಲ್ಲಿ ಅನೇಕ ಜನ ಶಿವಶರಣರು ಬಂದರು. ವಚನಗಳೇ ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ಸಾಹಿತ್ಯ ಸಿರಿ ನೀಡಿದ್ದವು. ಮಾತ್ರ ಅಲ್ಲ, ಅದೇ ಒಂದು

ಪದ್ಧತಿಯಾಯಿತು. ವೀರಶೈವ ಆಧ್ಯಾತ್ಮಿಗಳು, ವಚನಕಾರರ ಪ್ರಕಾರ, ಬದುಕು ಸತ್ಯ, ಕನಸಲ್ಲ. ದೇವರನ್ನು ಕಾಣುವಲ್ಲಿ ಜಾತಿ ಕುಲ ಅಲ್ಲ, ಶುದ್ಧ ಹೃದಯ, ಮನ ಮುಖ್ಯ. ಸರಿಯಾದ ನಡೆಯಿಂದ ನೀವು ಸ್ವರ್ಗ ಸೃಜಿಸಬಲ್ಲಿರಿ, ಅಂತೆಯೆ ದುರ್ನಡೆಯಿಂದ ನರಕ ಎಂದು ಮೊರೆಯಿಟ್ಟರು ಬಸವೇಶ್ವರರು, ಇದು ಕರ್ಮಕಾಂಡ, ಪುರೋಹಿತ ವರ್ಗವನ್ನು ಕಟುವಾಗಿ ವಿರೋಧಿಸುವ ಒಂದು ಚಳುವಳಿ ; "ಕಾಯಕವೇ ಕೈಲಾಸ" ಎಂಬ ಕರ್ಮಯೋಗದ ಸಿದ್ಧಾಂತ ಒಡಮೂಡಿತು. "ಶಲ್ಲೆ ಶೋಣಿತ ಮಜ್ಜೆ ಮಾಂಸದ ಹಸಿವು ತೃಷೆ ವ್ಯಸನ ವಿಷಯಾದಿಗಳೊಂದೆ ಭೇದ" ಎಂದರು. ಅವನು ಬೆವರು ಹರಿಸಿ ದುಡಿದು ಬದುಕಬೇಕೆ ವಿನಹ, ಬೇರೊಬ್ಬರ ದುಡಿಮೆಯ ಫಲವನ್ನುಂಡು ತೇಗಿ ಬದುಕುವುದಲ್ಲ. ಇದು ದುಡಿಮೆಯ ತತ್ವ, ವಚನಕಾರರು ಬೋಧಿಸಿ, ಆಚರಿಸಿ ತೋರಿದ್ದು. ಭಕ್ತಿ ಕ್ರಿಯೆಯ ಬುನಾದಿ, ಜ್ಞಾನ ಸಮನ್ವಯ ಭಕ್ತಿಯೇ ಬೇರು, ವಿರಕ್ತಿಯೆ ಮರ, ಜ್ಞಾನವೇ ಅದರ ಫಲ. ಇಲ್ಲಿ ಕುಲದ, ಜಾತಿಯ ಮಾತೇ ಇಲ್ಲ. ಈ ರೀತಿಯ ವಚನಕಾರರ ಪಥಪಂಥ, ಅನುಭಾವಿಪಂಥದ ಹರಿದಾಸರಿಗೆ ಹಾಕಿಕೊಟ್ಟ ತಿಳಿವಿನ ಹಾದಿಯಾಯಿತೆನ್ನಬೇಕು. ಹರಿದಾಸರ ಅನೇಕ ಕೃತಿಗಳು ತಿಳಿಗನ್ನಡ ನುಡಿಯಲ್ಲಿವೆ. ವಚನಕಾರರು ಜನಪದ ಆಡುನುಡಿಯಲ್ಲಿ ತಮ್ಮ ವಚನಗಳನ್ನು ಬರೆದು ಹರಿದಾಸರಿಗೆ ಒಂದು ವಿಧದ ಮೇಲ್ಪಂಕ್ತಿ ಹಾಕಿಕೊಟ್ಟರು. ಇದರಿಂದಾಗಿ, ಸಂಸ್ಕೃತ ಭೂಯಿಷ್ಠವಾಗಿದ್ದ, ದೇವನಾಗರೀ ಲಿಪಿಯಲ್ಲಿ ಅಡಕವಾಗಿದ್ದ ದ್ವೈತ ಮತ ಸಿದ್ಧಾಂತ, ಮಧ್ವಾಚಾರ್ಯರು, ಜಯತೀರ್ಥರು ಮುಂತಾದವರ ಸಂಸ್ಕೃತ ಗ್ರಂಥಗಳಲ್ಲಿನ ಧರ್ಮಕ್ಕೆ ಸಂಬಂಧಿಸಿದ ವಿಚಾರಗಳು, ವೇದೋಪನಿಷತ್ತು, ಪುರಾಣಗಳು ಇವೆಲ್ಲದರ ಸಾರವನ್ನೂ ತಿಳಿಗನ್ನಡದಲ್ಲಿ ಹರಿದಾಸರು ಜನಸಾಮಾನ್ಯರಿಗೂ ತಿಳಿಸಿಕೊಟ್ಟು ಉಪಕರಿಸುವಂತಾಯಿತು. ಕನ್ನಡ ನಾಡಿನ ಸಂಗೀತಗಳಿಗೆ ಹೊಸ ಆಯಾಮ ನೀಡಿದರು.

## ದಾಸಸಾಹಿತ್ಯದ ಪ್ರಾರಂಭ

ಹರಿದಾಸಸಾಹಿತ್ಯದ ಉಗಮವನ್ನು ಭಾಗವತಧರ್ಮದ ಮೂಲದಷ್ಟೆ ಕೊಂಡೊಯ್ಯಲೆತ್ನಿಸಿದರೂ, ಇವರ ಕೃತಿಗಳಲ್ಲಿ ಮಧ್ವಮತ ಮುದ್ರೆ ಇರುವುದರಿಂದ, ಮಧ್ವಾಚಾರ್ಯರ ನಂತರ ಬಂದದ್ದು ಹರಿದಾಸರ ಸಾಹಿತ್ಯ ಎನ್ನಬಹುದು. ಅಂದರೆ, ೧೩ನೆ ಶತಮಾನದಿಂದೀಚೆಗೆ ಅಷ್ಟೇಕೆ ಮಧ್ವಾಚಾರ್ಯರನ್ನೇ ಮೊದಲ ಹರಿದಾಸರೆಂದು ಪರಿಗಣಿಸಿದಾರೆ ; ಅದಕ್ಕೆ ಕಾರಣ, ಅವರ 'ದ್ವಾದಶಸ್ತೋತ್ರ'ದಲ್ಲಿ ಅಡಕ ಆಗಿರುವ ದಾಸಸಾಹಿತ್ಯದ ಹೊಳಹು.[37]

ದ್ವೈತ ತತ್ವದ ಪ್ರಕಾರ, ಮಾನವಕೋಟಿಯೆಲ್ಲ ದಾಸರೇ. ಹರಿದಾಸ ಎಂಬ ಪದದಲ್ಲಿ ಸದಾ ಹರಿಯನ್ನು ಚಿಂತಿಸುವಾತನೆಂದೂ ಅರ್ಥ ಆಗುತ್ತದೆ. ಈಗ ಹರಿ ನಾರಾಯಣ ಯಾವಾಗಲೂ ಇರುವವನು. ಜೀವ ಕೋಟಿಯೂ ನಿತ್ಯರೆ. ಅಂದರೆ ಈಗ ದಾಸರು ಸದಾ ಇರುವರೆಂಬುದಾಯಿತು. 'ಈ ದೃಷ್ಟಿಯಿಂದ ದಾಸ

ಕೊಟ್ಟ, ಅನಾದಿ'* (ದ್ವೈತ) ಈ ಮತದ ಪ್ರಕಾರ, ಶ್ರೀಲಕ್ಷ್ಮೀದೇವಿಯೆ ಪರಮಾತ್ಮನ ಮೊದಲ ದಾಸಿ. 'ಅಂಭ್ರಣೀಸೂಕ್ತ'ದಲ್ಲಿ, ಮಹಾಲಕ್ಷ್ಮೀದೇವಿಯು ತಾನು ಪರಮಾತ್ಮನ ದಾಸಿಯೆಂಬುದಾಗಿ ಹೇಳಿಕೊಂಡಿದ್ದಾಳೆ.[38] ಬ್ರಹ್ಮ, ವಾಯು, ಸರಸ್ವತಿ, ಭಾರತಿ, ಶೇಷ, ಗರುಡ, ರುದ್ರಾದಿಗಳು ಅನಂತರ ಲಕ್ಷ್ಮೀದೇವಿಯನ್ನು ಅನುಸರಿಸಿ ಬರುತ್ತಾರೆ.[39] ಇದಲ್ಲದೆ ಬ್ರಹ್ಮಮಾನಸ ಪುತ್ರರಾದ ನಾರದರನ್ನೂ ಹರಿದಾಸರೆಂದೇ ಕೊಂಡಾಡುತ್ತಾರೆ.*

ಹರಿದಾಸ ಉಗಮ ಕುರಿತಂತೆ ಶ್ರೀ ಪುರಂದರದಾಸರ ಸುಳಾದಿಯ ಪಾಠ ಇಂತಿದೆ:

ಶ್ರೀಪತಿಯ ನಾಭಿಕಮಲದಿ ಅಜ ಜನಿಸಿದನು ।
ಅಜನ ಮಾನಸಪುತ್ರರೇ ಸನಕಾದಿಗಳು ।
ಸನಕಾದಿಗಳ ಶಿಷ್ಯರೇ ದುರ್ವಾಸರು ।
ದುರ್ವಾಸರ ಶಿಷ್ಯರೇ ಪರತೀರ್ಥರು ।
ಪರತೀರ್ಥರ ಶಿಷ್ಯರೇ ಸತ್ಯಪ್ರಜ್ಞರು ।
ಸತ್ಯಪ್ರಜ್ಞರ ಶಿಷ್ಯರೇ ಪ್ರಾಜ್ಞತೀರ್ಥರು ।
ಪ್ರಾಜ್ಞತೀರ್ಥರಶಿಷ್ಯರೆ ಅಚ್ಯುತಪ್ರೇಕ್ಷರು ।
ಅಚ್ಯುತಪ್ರೇಕ್ಷರ ಸಂಜಾತರೇ ಮಹಾಭಾಷ್ಯಕಾರರು ।
ಮಹಾಭಾಷ್ಯಕಾರರೇ ಮುಖ್ಯಪ್ರಾಣರು ।
ಗುರುಮುಖ್ಯಪ್ರಾಣಪತಿ ನಮ್ಮ ಪುರಂದರವಿಠಲನದಾಸರಿಗೆ ನಮೋ ನಮಃ॥

ಮುಂದೆ ಬಂದ, ಶ್ರೀವಾದಿರಾಜರು, ಶ್ರೀಮಧ್ವಾಚಾರ್ಯರನ್ನು ಕುರಿತೇ ಹೇಳುತ್ತಾರೆ: "ಪನ್ನಂಗಶಯನ ಶ್ರೀಹಯವದನ ದಾಸರೊಳು ನಿನ್ನ ಪೋಪುಲರ್ಯಂಬಿ ಮಧ್ವಮುನಿ ರಾಯ" ಎಂದು ಕೊಂಡಾಡಿದ್ದಾರೆ. ಸಂಗೀತದ ಶೈಲಿಯಲ್ಲಿ ಹಾಡಿದಲ್ಲಿ ನಿರರ್ಗಳವಾಗಿ ಸಾಗುವ ಮಧ್ವಾಚಾರ್ಯರ "ದ್ವಾದಶಸ್ತೋತ್ರ"ವನ್ನು ಹರಿದಾಸ ಸಾಹಿತ್ಯದ ಮೊದಲ ಪುಷ್ಪ, ಕೊಡುಗೆ ಎಂದೇ ಭಾವಿಸಲಾಗಿದೆ. ಹನ್ನೆರಡು ಪುಟ್ಟ ಅಧ್ಯಾಯಗಳುಳ್ಳ ಈ ಸ್ತೋತ್ರವನ್ನು, ಮಧ್ವಾಚಾರ್ಯರು, ಉಡುಪಿಯಲ್ಲಿ ಶ್ರೀಕೃಷ್ಣನನ್ನು ಸ್ಥಾಪಿಸಲೋಸುಗ, ದೂರದ ಮಲ್ಪೆಯ ಕಡಲ ತಟೆಯಿಂದ ಕೃಷ್ಣಮೂರ್ತಿಯನ್ನೊಳಕೊಂಡಿದ್ದ ಗೋಪೀಚಂದನದ ಗಡ್ಡೆಗಳೊಂದಿಗೆ ಬರುವಾಗ ಈ ಸ್ತೋತ್ರ ಹೊರಹೊಮ್ಮಿ, ಹಾಡುತ್ತ ಬಂದರೆಂದು ನಂಬಲಾಗಿದೆ.[40] ಈ ಸ್ತೋತ್ರದಲ್ಲಿ ಮತಧರ್ಮದ ಅನೇಕ ಸತ್ಯಗಳನ್ನೂ ಕಾವ್ಯ ಸೌಂದರ್ಯಗಳನ್ನೂ ಅಳವಡಿಸಿದಾರೆ, ಶ್ರೀಮಧ್ವಾಚಾರ್ಯರು.[41] ಹಾಗೂ ಈ ಸ್ತೋತ್ರವೇ ಮುಂದೆ ಹೊನಲಾಗಿ ಹರಿದ ಹರಿದಾಸ ಭಕ್ತಿಸಾಹಿತ್ಯಕ್ಕೆ ಪ್ರೇರಕ ಸ್ಫೂರ್ತಿಯಾಯಿತೆನ್ನಲಾಗಿದೆ.

ಆನಂದಮುಕುಂದ ಅರವಿಂದನಯನ । ಆನಂದತೀರ್ಥಪರಾನಂದವರದ ।
ಸುಂದರಮಂದಿರ ಗೋವಿಂದ ವಂದೇ । ಆನಂದತೀರ್ಥಪರಾನಂದವರದ ।
ಚಂದ್ರಸುರೇಂದ್ರಸುವಂದಿತ ವಂದೇ । ಆನಂದತೀರ್ಥಪರಾನಂದವರದ ।
ಚಂದ್ರಕಮಂದಿರನಂದಕ ವಂದೇ । ಆನಂದತೀರ್ಥಪರಾನಂದವರದ ॥

ಇಲ್ಲಿ ಶ್ರೀಮಧ್ವಾಚಾರ್ಯರು ತಮ್ಮ ಗುರುಗಳು ತಮಗಿತ್ತ ಆಶ್ರಮನಾಮವಾದ "ಆನಂದತೀರ್ಥ" ಎಂಬುದನ್ನು ಅಂಕಿತವಾಗಿ ಬಳಸಿರುವಂತಿದೆ. ಮಧ್ವಾಚಾರ್ಯರ ನಿರ್ಣಯದ ಬಗ್ಗೆ ಸಾಕಷ್ಟು ಚರ್ಚೆ ನಡೆದಿದೆ, ಹಾಗೂ ಅವರ ಜೀವನಚರಿತ್ರೆಯಲ್ಲಿ "ಕಲ್ಪನೆಯು ಹಂದರ ಹಬ್ಬಿ ಬೆಳೆದಿದೆ".[42] ಆಚಾರ್ಯರ ಅವತಾರ ಕಾಲ, ಹಾಗೂ ಅವರು ತಿರೋಧಾನವನ್ನೈದಿದ ಕಾಲದ ಬಗ್ಗೆ ಮತಗಳಲ್ಲಿ ಇರುವ ಭಿನ್ನ ವಿವರ, ಕಾಲ ನಿರ್ಣಯಕ್ಕೆ ನೆರವಾಗಲು ಇರದಿದ್ದ ನೇರವಾದ ಶಾಸನ, ಈ ಚರ್ಚೆ, ಗೊಂದಲಗಳಿಗೆ ಕಾರಣವಾದವು. ಒಂದೊಂದು ಮಠದವರದ್ದು ಒಂದೊಂದು ತೇದಿ. ಆದರೆ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ಹೃಷೀಕೇಶತೀರ್ಥರ "ಅಣುಮಧ್ವ ಚರಿತೆ"ಯಲ್ಲಿ ಉಕ್ತವಾಗಿರುವಂತೆ ಆಚಾರ್ಯರು ಮರೆಯಾದದ್ದು "ಕ್ರಿಸ್ತಾಬ್ದ ೧೩೧೭ ರ ಜನವರಿ ಇಪ್ಪತ್ತೆಂಟನೆಯ ಶನಿವಾರ". ಹೃಷೀಕೇಶತೀರ್ಥರ ಮಾತಿಗೆ ಪೋಷಕವಾಗಿ ಶ್ರೀ ಕೂರ್ಮದ ನರಹರಿತೀರ್ಥ ಸಂಸ್ಕೃತ ಶಾಸನ ಪ್ರಕಟವಾದದ್ದು ಶ್ರೀ ಆಚಾರ್ಯರ ಕಾಲ ನಿರ್ಣಯಕ್ಕೆ ಸಾಧನ ಆಯಿತು.[43] ಅಂತೂ "ವಿದ್ವಾಂಸರ ಇತ್ತೀಚಿನ ಅಭಿಮತದಂತೆ, ಮಧ್ವಾಚಾರ್ಯರ ಜನನ ವರ್ಷ ೧೨೩೮."[44] "ತಿರೋಧಾನವಾದ ವರ್ಷ ಕ್ರಿ.ಶ.೧೩೧೭" ಅಂದ ಮೇಲೆ, ಕರ್ನಾಟಕ ಹರಿದಾಸ ಸಾಹಿತ್ಯ ಆರಂಭ ಆದದ್ದು ಅನಂತರವೆ ಎಂದು ಹೇಳಬಹುದು. ಒಟ್ಟಾರೆ ಆಚಾರ್ಯರು ದ್ವೈತಸಿದ್ಧಾಂತ ಪ್ರವರ್ತಕರಾದಂತೆಯೆ, ಭಕ್ತಿಪಂಥವನ್ನು ಬೆಳೆಸಿದರು.

## ಮೊದಲ ಕೀರ್ತನಕಾರ

ಹರಿದಾಸಸಾಹಿತ್ಯ ಆರಂಭ ಆದದ್ದು ಶ್ರೀ ಅಚಲಾನಂದದಾಸರಿಂದ ಎಂಬ ಅಭಿಪ್ರಾಯ ಒಂದೆ ಇತ್ತು. ಅಚಲಾನಂದದಾಸರ ಕಾಲ ಕ್ರಿ.ಶ. ೯ನೆ ಶತಮಾನದ "ಕನ್ನಡ ದಾಸಸಾಹಿತ್ಯವು ಅವರಿಂದ ಆರಂಭವಾಯಿತೇ ಹೊರತು ನರಹರಿತೀರ್ಥರಿಂದಲ್ಲ" ಎಂಬುದು ಬೇಲೂರು ಕೇಶವದಾಸರ ಅಭಿಪ್ರಾಯ.[45] ಇದಕ್ಕೆ ಪ್ರಮಾಣವಾಗಿ ಅಚಲಾನಂದ ದಾಸರಿಗೆ ವಿಠಲ ದರ್ಶನವಾದ ಬಗ್ಗೆ ಉದ್ಧರಿಸುವ ಒಂದು ಪದ್ಯವನ್ನು ಉದಾಹರಿಸುತ್ತಾರೆ :

**ಕಾಶೀತಿಸಂಖ್ಯಾ ಶಕಕಾಲ ಕಾಬ್ದೇ**
**ವಿಲಂಬಿ ವರ್ಷೇ ಕಲಿಚೈತ್ರಶುಕ್ಲೇ**

ಪಕ್ಷೇ ದಶಮ್ಯಾಂ ದಿನಮಧ್ಯಕಾಲೇ
ಪ್ರತ್ಯಕ್ಷಕೋ ಭೂದ್ಗುರುವಿಠಲಾಖ್ಯ ॥

ಈ ಪದ್ಯದ ಪ್ರಕಾರ ಶಾಲಿವಾಹನ ಶಕ ೮೦೧. (ಕ್ರಿ.ಶ.೮೭೯) ವಿಳಂಬಿ ಸಂವತ್ಸರದ ಚೈತ್ರ ಶುದ್ಧ ದಶಮಿಾ ಮಧ್ಯಾಹ್ನ, ವಿಠಲನು ದಾಸರಿಗೆ ಪ್ರತ್ಯಕ್ಷನಾದನು. ಈ ಅಚಲಾನಂದದಾಸರ ಕಾಲಮಾನದ ಬಗ್ಗೆ ಸಾಕಷ್ಟು ಚರ್ಚೆ ನಡೆದಿದೆ. ಅವುಗಳನ್ನು ಇಲ್ಲಿ ಕ್ರೋಢೀಕರಿಸಿ, ಹೇಳಬಹುದು :

ಮೊದಲನೆಯದಾಗಿ ಪ್ರೊ. ಆರ್. ಎಸ್. ಪಂಚಮುಖಿಯವರು ಅಚಲಾನಂದ ದಾಸರ ಕೃತಿಗಳ ಭಾಷೆ ಮುಂತಾದವುಗಳ ಬಗ್ಗೆ ಪ್ರಸ್ತಾಪಿಸುತ್ತ "..........." ಶೌಶೀತಿ ಸಂಖ್ಯಾಶಕ'ವನ್ನು ನಿರ್ದೇಶಿಸಿರುವುದರಿಂದ ಈ ಶಕ ಸಂಖ್ಯೆಯವರು ೮೦೧ ಎಂದು ಎಣಿಸಿ ಬೇಲೂರ ಕೇಶವದಾಸರು ಶ್ರೀನರಹರಿತೀರ್ಥರಿಗಿಂತ ಮೊದಲು ಶಕ ೮೦೧ (ಕ್ರಿ.ಶ.೮೭೯)ರಲ್ಲಿ ಅಚಲಾನಂದದಾಸರು ಬಾಳಿದ್ದರೆಂದೂ ಆಪರಿಂದ ದಾಸಕೂಟವು ಮೊದಲುಗೊಂಡಿತೆಂದೂ ಹೇಳಿದ್ದಾರೆ. ಇದು ಸಮರ್ಪಕವಲ್ಲ. ಮೊದಲು ಅಚಲಾ ನಂದಾಂಕಿತ ಪದಗಳ ಭಾಷೆಯು ೯ ನೆ ಶತಕಕ್ಕೆ ಸರ್ವಥಾ ಅನ್ವಯಿಸಬಾರದು." ಎಂದಿದ್ದಾರೆ[46] ಮುಂದುವರಿದ ಅವರು, "ಭಾಷೆಯ ಸ್ವರೂಪದಿಂದಲೂ ವಿಚಾರ- ಶಬ್ದ ಪ್ರಯೋಗಗಳ ಸಾಮ್ಯದಿಂದಲೂ ಅವರು ಪುರಂದರದಾಸರಿಗಿಂತ ಇತ್ತೀಚಿನವ ರೆಂದು ತಿಳಿಯಬೇಕಾಗುತ್ತದೆ"[47] ಎಂದು ಹೇಳಿದ್ದಾರೆ.

ಇದನ್ನು ಸಮರ್ಥಿಸುತ್ತ ವತ್ತೂ ಮುಂದುವರಿದು, ಹೆಚ್. ಕೆ. ವೇದವ್ಯಾಸ ಚಾರ್ಯರು "...... ....ಕ್ರಿ.ಶ.೮೦೧, ಶಕ ೧೫೮೧ ವಿಳಂಬಿ ಸಂವತ್ಸರವನ್ನು ಸೂಚಿಸು ತ್ತದೆ. ಆದ್ದರಿಂದ ಇವರು ಆಚಾರ್ಯರ ತರುವಾಯದಲ್ಲಿ ಮಧ್ವಮತ ಸಂಪ್ರದಾಯ ದಲ್ಲೇ ಬಂದ ಹರಿದಾಸರು, ಮತ್ತು ಬಹುಶಃ ನರಹರಿತೀರ್ಥರ ಸಮಕಾಲಿಕರು" ಎಂದು ಹೇಳಿದ್ದಾರೆ. ಈ ಮಾತನ್ನೂ ಒಪ್ಪಲಾಗುವುದಿಲ್ಲ. ಅಚಲಾನಂದ ವಿಠಲಾಂಕಿತವುಳ್ಳ ಅಚಲಾನಂದದಾಸರು ಕ್ರಿ. ಶ. ೯ನೇ ಶತಮಾನದವರಿದ್ದು, ಸ್ಮಾರ್ತ ಭಾಗವತ ಸಂಪ್ರ ದಾಯದ* ವರೆ ವಿನಹ ಮಾಧ್ವ ಸಂಪ್ರದಾಯದವರಲ್ಲ. ವೇದವ್ಯಾಸಾಚಾರ್ಯರು ಸೂಚಿಸಿರುವ ಅಚಲಾನಂದದಾಸರು, ಎರಡನೆಯವರೆ ಇದ್ದಿರಬೇಕು.[48] ಅಚಲಾನಂದ ದಾಸರ ಕಾಲ, ವಿಠಲನ ದರ್ಶನ ಅವರಿಗಾದ ಬಗ್ಗೆ ದಾಖಲೆ, ಎಲ್ಲವನ್ನೂ ಒಳ ಕೊಂಡಂತೆ ವಿದ್ವತ್ಪೂರ್ಣವಾಗಿ ಚರ್ಚಿಸಿರುವ ಡಾ. ಜಿ. ವರದರಾಜರಾವ್ ಅವರ ಒಪ್ಪಾರ ಅಭಿಪ್ರಾಯಗಳನ್ನು ಇಲ್ಲಿಪರಿಶೀಲಿಸಬಹುದಾಗಿದೆ. ಹಾಗೂ ಈ ಬಗ್ಗೆ ಕೆಲವು ಬೆಲೆಯುಳ್ಳ ಸಂಶೋಧಕ ಅಂಶಗಳನ್ನು ಹುಲಗೂರು ಕೃಷ್ಣಾಚಾರ್ಯರು ಡಾ. ಕೆ. ಎಂ. ಕೃಷ್ಣರಾವ್ ಅವರೂ ನೀಡಿರುತ್ತಾರೆ.

1. ಮೊದಲನೆಯದಾಗಿ, ಹುಲಗೂರು ಕೃಷ್ಣಾಚಾರ್ಯರ ಅಭಿಪ್ರಾಯ, ಮೇಲೆ ಉಲ್ಲೇಖಿಸಿರುವ ಸಂಸ್ಕೃತ ಪದ್ಯವನ್ನು ಅರ್ಥಯಿಸುತ್ತ, "ಶಾಶೀತಿ ಸಂಖ್ಯಾಶಕ

ಇಲಿಕಾಬ್ದೇ'' ಎಂದು ಪಾಠವಿದ್ದರೆ ಮಾತ್ರ ಶ್ರೀ ಕೇಶವದಾಸರು ಹೇಳುವಂತೆ ಲಿ ರ್ಣಯವಾಗುತ್ತಿತ್ತು. ಸಂಖ್ಯೆಯ ಶಬ್ದ ಉದ್ದೇಶಪೂರ್ವಕವಾಗಿ ಹಾಕಿದ್ದರಿಂದ ೨೮೦ ಶಕ ವಿಳಂಬಿ ಸಂವತ್ಸರ ಎಂದು ಆಗುವುದು ಎ‌ದಿದ್ದಾರೆ. ಹಾಗೂ ಅಚಲಾ ನಂದವಿಠಲರ "ಕೇಳೋ ಜೀವನವೆ ನೀ ಮಧ್ವಮತವನನುಸರಿಸಿ ಶ್ರೀಲೋಲನಂಘ್ರಿಗಳ ನೆನೆದು ಸಂಖಿಸೋ'' ಎಂದು ಇರುವ ಕೀರ್ತನ ಪಾಠದಲ್ಲಿ ಮಧ್ವಾಚಾರ್ಯರನ್ನು ಕುರಿತ ನೇರ ಪ್ರಸ್ತಾಪವಿದೆ. ಆದುದರಿಂದ ಇವರು ಮಧ್ವಾಚಾರ್ಯರ ನಂತರ ಇದ್ದವ ರೆಂಬುದು ಕೃಷ್ಣಾಚಾರ್ಯ ಅಭಿಮತ.[49]

2. ಡಾ. ಜಿ. ವರದರಾಜರಾಯರ ಅಭಿಪ್ರಾಯ :

ತಾವು ಅಚಲಾನಂದದಾಸರ ವಂಶಸ್ಥರವರಿದ್ದ ಕಡೆ ಹೋಗಿ ಬಂದ ವಿವರ ವನ್ನು ತಮ್ಮ ಶ್ರೀಪಾದರಾಜರ ಕೃತಿಗಳ ಪೀಠಿಕೆಯಲ್ಲಿ ವಿಶದಪಡಿಸಿರುತ್ತಾರೆ.[50] ಅದರ ಪ್ರಕಾರ ನಾವು ಕೆಲವು ಮಾತಿನಲ್ಲಿ ಹೀಗೆ ತಿಳಿಸಬಹುದು :

ಅಚಲಾನಂದದಾಸರಿಗೆ ವಿಠಲ ದರ್ಶನದ ವಿವರ, ಆ ವಂಶದವರಿಗೆ ಪೂಜಾದಿಗಳಿಗೆ ಸೌಕರ್ಯ. ಶ್ರೀಯುತ ದಾಸರ ಊರು ತಂಬೂಕೆರೆ-ಅಲ್ಲಿ ಈಗಲೂ ಅವರ ವಂಶಸ್ಥ ರಿದ್ದಾರೆ. ಅಚಲಾನಂದರು ಕಟ್ಟಿದ ಮಠದ ಅವಶೇಷ, ಕರಂಡಹ ಇವೆ. ಅನಂತರ ಶ್ರೀಗೋಪೀನಾಥದಾಸ, ಮುದ್ದುವಿಠಲದಾಸ, ಪಾಂಡುರಂಗದಾಸರು ತಂತಮ್ಮ ಕಾಲದಲ್ಲಿ ವಿಠಲನನ್ನು ಸೇವಿಸಿದರು. ರಾಜಮನ್ನಣೆಯೂ ದೊರೆತಿತು. ಬಲ್ಲಾಳ ರಾಯನಿಗೆ ಮಾನ್ಯ ನೀಡಿದುದಾಗಿ ತಿಳಿಯಬರುತ್ತದೆ. ಪಾಂಡುರಂಗದಾಸರ ಕಾಲದಲ್ಲೇ ಉಡುಂಪಿಯ ಪರ್ಯಾಯ ಪದ್ಧತಿಯ ರೀತಿ ಒಂದು ಸಣ್ಣ ನಡಾವಳಿ ಇರಬೇಕು. ಈ ದಾಸರನ್ನು "ಭಗವತ್ಪಾದಾಚಾರ್ಯರು'' ಎಂದು ನಿರ್ದೇಶಿಸುವುದರಿಂದ, ಅಚಲಾನಂದ ರಿಂದ ಉಳಿದೆಲ್ಲ ಎಲ್ಲರೂ ಯತ್ಯಾಶ್ರಮ ಅವಲಂಬಿಸಿದ್ದರು. ಗ್ರಂಥದಲ್ಲಿ ವಿಜಯ ನಗರದರಸರು ಅಚ್ಯುತರಾಯನ ಕಾಲವನ್ನು ನಿರ್ದೇಶಿಸಿರುವುದರಿಂದ, ಈ ಓಲೆಗರಿಯ ಗ್ರಂಥ ಕ್ರಿ.ಶ.೧೫ನೆ ಶ.ದ ಉತ್ತರಾರ್ಧದಲ್ಲಿ ಬರೆದದ್ದಾಗಿರಬೇಕು. ಇವರನ್ನು 'ಅಚಲಾನಂದಸ್ವಾಮಿಗಳು', 'ಅಚಲಾನಂದದಾಸರು' ಎಂದೆಲ್ಲ ಕರೆವ ವಾಡಿಕೆ ಇಂದಿಗೂ ನಡೆದು ಬಂದಿದೆ. ಇದರಿಂದ, ಪಂಢರಾಪುರದ ವಿಠಲನ ಪ್ರಭಾವ ಒಂಬತ್ತನೆ ಶ.ದ ವೇಳೆಗೇ ಎಷ್ಟರಮಟ್ಟಿಗೆ ಆಗಿತ್ತೆಂಬುದೂ ವ್ಯಕ್ತವಾಗುತ್ತದೆ. ಮಹಾರಾಷ್ಟ್ರದ ವೈಷ್ಣವ ಸಂತ ಭಕ್ತನಾದ ಜ್ಞಾನೇಶ್ವರನು "ಕಾನಡಾ ಹೋ ವಿಠ್ಠಲ ಕರ್ಣಾಟಕೊ ತ್ಯಾನೇ ಮಜಲಾ ವಿವಾವೇಧ್ಲ'' "ಕರ್ಣಾಟಕ ದೇಶದಲ್ಲಿರುವ ಎಲ್ಲೆ ಪ್ರಿಯದೇವನೆ ನೀನು ನನ್ನ ಮನಸ್ಸನ್ನು ಆಕರ್ಷಿಸಿದೆ'' ಎಂದು ಹಾಡಿದ್ದಾನೆ. ನಾಮದೇವನಾದರೂ "ಕನೋಜ ಪ್ರಾಂತ್ಯದಲ್ಲಿ ಹೇಗೆ ಕಾಶಿ ಕ್ಷೇತ್ರ ಮುಂಖ್ಯವೊ ಗುಜರಾತ ಪ್ರಾಂತ್ಯದಲ್ಲಿ ಹೇಗೆ ದ್ವಾರಕಾ ಕ್ಷೇತ್ರವೊ ಹಾಗೆ ಕರ್ಣಾಟಕದಲ್ಲಿ ಪಂಢರಾಪುರದ ವಿಠ್ಠಲ'' ಎಂದು ಕ್ಷೇತ್ರ ಮಹಾತ್ಮೆಯನ್ನು ತಿಳಿಸಿದ್ದಾನೆ. ಅಚಲಾನಂದರಿಂದ, ವಿಠಲೋಪಾಸನೆಯ ಬಗ್ಗೆ ಕೂಡ ಕೆಲವಂಟ್ಟಿಗೆ ಗೊತ್ತಾಗುತ್ತದೆ.

ಮೇಲೆ ತಿಳಿಸಿರುವ ಭಾಗವತ ಸಂಪ್ರದಾಯದ ಅಚಲಾನಂದರಂತೆಯೆ ಮಧ್ವ ಪರಂಪರೆಗೆ ಮೀರಿಸಿರುವ ಅಚಲಾನಂದವರೂ ಒಬ್ಬರುಂಟು. ಈ ದಾಸರ ಕೀರ್ತನೆ ಛಾಪೆ ೯ನೇ ಶತಕವನ್ನು ಅನ್ವಯಿಸುವುದಿಲ್ಲ. ಹಾಗಾದರೆ ಮಧ್ವ ಸಂಪ್ರದಾಯದಲ್ಲಿ ಬಂದವರು ಬೇರೆ ಇದ್ದಿರಬೇಕು. ಅವುಗಳಲ್ಲಿ ಅನೇಕ ಕೃತಿಗಳು ಅಂಕಿತ ಪಲ್ಲಟ ಆಗಿರುವುದು, ಉಗಾಭೋಗಗಳಲ್ಲಿನ ಅಂಕಿತಪಲ್ಲಟ ಇಲ್ಲಿ ಗಮನಿಸಬೇಕಾದ್ದು.[51] "ಈ ಹರಿದಾಸರು ಆದ್ಯರೊ ಇಲ್ಲವೆ ಇತ್ತೀಚಿನವರೋ ಎನ್ನುವುದನ್ನು ಪ್ರತ್ಯೇಕವಾಗಿಯೇ ವಿಚಾರ ಮಾಡಿ ತಿಳಿಯಬೇಕಾಗಿದೆ."[52] ಆದರೆ, ಇಲ್ಲಿ ಹರಿದಾಸ ಸಾಹಿತ್ಯದ ಪ್ರಮುಖ ಪ್ರಕಾರಗಳಾದ ಕೀರ್ತನೆ, ಸುಳಾದಿ, ಉಗಾಭೋಗ-ಇವು ಮೂರೂ ಕಾಣಬರುವುದರಿಂದ ಈ ಪದ್ಧತಿ ಸಾಕಷ್ಟು ಪ್ರಚಾರಕ್ಕೆ ಬಂದ ನಂತರವೇ ಈ ಹರಿದಾಸರು ಇದ್ದಿರಬೇಕು ಎನ್ನಬೇಕಾಗುತ್ತದೆ. "ಅಚಲಾನಂದದಾಸರು ೧ನೆ ಶತಮಾನದ ವೇಳೆಗೆ ಇದ್ದರೆ ಎಂಬ ಮಾತು ಇತಿಹಾಸದ ಆಧಾರ ಪಡೆದಿದೆಯೆ ಎಂಬುದೆ ಒಂದು ಪ್ರಶ್ನೆ. ಇದು ಬರಿ ಕಟ್ಟುಕತೆಯಾಗಿದ್ದಿರಬೇಕು" ಎನ್ನುತ್ತಾರೆ ಬೆಂಗೇರಿಯವರು.[53] ಈ ಎಲ್ಲ ಕಾರಣ ಗಳಿಂದ, ಜಿ. ವರದರಾಜರಾಯರು ತಳೆದಿರುವ ನಿಲುವೇ ನಮಗೆ ಸರಿಯೆಂದು ಅನ್ನಿಸು ತ್ತದೆ. "ಬೇರೆ ಬೇರೆ ಕಾಲಕ್ಕೆ ಸೇರುವ ಇಬ್ಬರು ಅಚಲಾನಂದರು ಇದ್ದಿರಬೇಕು."

ಹರಿದಾಸಸಾಹಿತ್ಯದ ಆದ್ಯ ಪ್ರವರ್ತಕರೆಂದು ನರಹರಿತೀರ್ಥರನ್ನು ಕುರಿತು ಕೆಲವರು ಹೇಳುತ್ತಾರೆ. "ಅಂತೂ ನರಹರಿತೀರ್ಥರೇ ಹರಿದಾಸ ಸಮಾಜಕ್ಕೆ ಆದ್ಯ ಆಚಾರ್ಯರೆಂದು ಹೇಳಬಹುದು"[54] ಎಂದು ನಿರ್ಣಾಯಕವಾಗಿ "ಹರಿದಾಸಸಾಹಿತ್ಯವು ಶ್ರೀಪಾದರಾಜರಿಂದ ಪ್ರವರ್ತಿತವಾಯಿತೆಂಬುದು ಸತ್ಯವೇ ಆಗಿದೆ. ಆದರೆ ಮಧ್ವಾ ಚಾರ್ಯರ ಶಿಷ್ಯರಾದ ನರಹರಿತೀರ್ಥರೇ ಇದರ ಆದ್ಯ ಪ್ರವರ್ತಕರೆಂದು ಪ್ರಸಿದ್ಧಿಯಿದೆ. ಮಧ್ವಾಚಾರ್ಯರ ದ್ವಾದಶಸ್ತೋತ್ರವೇ ಇವರಿಗೆ ಪ್ರೇರಕ"[55] ಎಂಬ ಮಾತಿನಲ್ಲಿ ಹರಿ ದಾಸ ಸಾಹಿತ್ಯದ ಉಗಮ "ದ್ವಾದಶಸ್ತೋತ್ರ"ದಿಂದಲೇ ಆಯಿತೆಂಬ ಧ್ವನಿಯೂ ಇದೆ.

ನರಹರಿತೀರ್ಥರ ವಿಚಾರವಾಗಿ ಬೇಲೂರು ಕೇಶವದಾಸರು ವಿಶದೀಕರಿಸಿದ್ದಾರೆ.[56] ಅದ್ವೈತ ತತ್ವವನ್ನು ಚೆನ್ನಾಗಿ ಅರಿತಿದ್ದ ಅವರು, ಮಧ್ವಾಚಾರ್ಯರೆದುರು ವಾದಿಸಿ, ಸೋಲೊಪ್ಪಿಕೊಂಡ ನಂತರವೇ ಯತ್ಯಾಶ್ರಮ ಸ್ವೀಕಾರ ಮಾಡಿ ನರಹರಿತೀರ್ಥ ರಾದದ್ದು. ಇವರ ಎರಡು ಕೀರ್ತನೆಗಳನ್ನು ಕರ್ಣಾಟಕ ಭಕ್ತವಿಜಯದಲ್ಲಿ ಉಲ್ಲೇಖಿಸಿ ದ್ದಾರೆ. ಶ್ರೀನರಹರಿತೀರ್ಥರು ಕೂರ್ಮದ ನರಸಿಂಹಸ್ವಾಮಿಯ ಉಪಾಸಕರಾಗಿದ್ದು ತಮ್ಮ ಆಶ್ರಮದ ಹೆಸರನ್ನೂ ಶ್ರೀಮದಾನಂದತೀರ್ಥರಿಂದ ಮೂಲ ರಾಮದೇವರನ್ನೂ[57] ಪಡೆದ ಮೇಲೆ ಅದರ ಸ್ಮರಣೆಗೆ ರಘುಪತಿಯ ಅಂಕಿತವನ್ನೂ ಈ ಪದಗಳಲ್ಲಿ ಪ್ರಯೋಗಿಸಿರುವರೆಂದು ತಿಳಿಯಬಹುದು.[58] ಅದು ಭಾಗಶಃ ಹೀಗಿದೆ :

ತಿಳಕೊ ನಿನ್ನೊಳಗೆ ನೀನೆ । ಮರುಳೆ
ತಿಳಕೊ ನಿನ್ನೊಳಗೆ ನೀನೆ ॥ ಪ ॥

ತಿಳಕೊ ನಿನ್ನೊಳಗೆ ನೀ । ಅಳಕೊ ಪೋದಾಯುಷ್ಯ
ಕಳಕೋ ದುಷ್ಕರ್ಮವನ್ನು । ವಿಷಯದಿಂ
ಸೆಳಕೋ ಇಂದ್ರಿಯಗಳನ್ನು । ಸ್ವಲ್ಪಾರು
ಗಳಿಸಿಕೋ ಜ್ಞಾನವನ್ನು ಮರುಳೇ ॥ ಅ. ಪ. ॥

ಕಡೆಯ ಪದ್ಯದ ಚರಣಗಳು ಇಂತಿವೆ :

ಭರತಖಂಡದೊಳು ಭೂಸುರಜನ್ಮ । ಸರ್ವಜ್ಞ
ವರ ಶಾಸ್ತ್ರದಧಿಕಾರವ । ಕಳಕೊಳದೆ
ಚರಮಸೌಭಾಗ್ಯೋಚ್ಚವ ಜ್ಞಾನದಿಂ
ವಿರಕ್ತಿಯ ಮೂಲಭಾವ : ಪಡೆಯೋ ನೀ
ನೃಹರಿ ರಘುಪತಿಯ ಸುಪ್ರೇಮ ಪಡಿ । ಮರುಳೆ...... ....[59]

ಇದಲ್ಲದೆ, ದಾಸಕೂಟದಲ್ಲಿ ಪ್ರಸಿದ್ಧರಾದ, ಸಂಪ್ರದಾಯಸ್ಥರು ಹೇಳುವ ಧ್ಯಾನ ಶ್ಲೋಕಗಳಲ್ಲಿ ನರಹರಿತೀರ್ಥರ ಹೆಸರು ಕಂಡಿಲ್ಲ. ಈ ಬಗ್ಗೆಯೂ ಸಂದೇಹ ಬಂದು, ಆದಿನ್ನೂ ಸಂಶೋಧಕ ವಿಚಾರವಾಗಿಯೇ ಉಳಿದಿದೆ.

ಹರಿದಾಸಸಾಹಿತ್ಯ ವಿಭಾಗದಲ್ಲಿ ಸಾಕಷ್ಟು ಕೆಲಸ ಮಾಡಿ, ಅನೇಕ ಹರಿದಾಸ ಕೃತಿಗಳನ್ನು ಬೆಳಕಿಗೆ ತಂದ ಕೀರ್ತಿಶೇಷ ಹನುಮಂತರಾವ್ ಗೋರಬಾಳ ಅವರು "ಹರಿಯೆ ಇದು ಸರಿಯೆ" ಎಂಬ ಒಂದು ಕೀರ್ತನೆಯನ್ನೂ ಸಂಶಯಾಸ್ಪದ ರೀತಿಯಲ್ಲಿ ಸೇರಿಸಿದ್ದಾರೆ ಎನ್ನಿಸುತ್ತದೆ. ಇಲ್ಲಿ "ಅಂಕಿತ ಕೇವಲ ನರಹರಿ ಎಂದು ಮಾತ್ರವಿದೆ."[60] ಹರಿದಾಸರ ಕೃತಿಗಳಲ್ಲಿ ಪ್ರಕ್ಷೇಪಗಳು ಅಂಕಿತ ಸೇರಿಸುವುದು, ಚರಣಗಳನ್ನು ಸೇರಿಸುವುದು ತುಂಬ ಸಾಮಾನ್ಯ. ಅಂತೆಯೇ ಶುದ್ಧವಾದ ಪಾಠಗಳಿರುವ ಹರಿದಾಸ ಕೃತಿಗಳ ಸಂಪಾದನೆ ಎಷ್ಟು ಕಷ್ಟಕರವೆಂಬುದನ್ನು ನಾಡಿನ ಹಿರಿಯ ಸಂಶೋಧಕರಾದ ಡಾ. ಜಿ. ವರದ ರಾಜರಾಯರು ತಿಳಿಸಿದ್ದಾರೆ.[61] ಆದರಿಂದಾಗಿ, ನರಹರಿತೀರ್ಥರದ್ದೆಂದು ದೊರೆತಿರುವ "ರಘುಪತಿ"ಯ ಅಂಕಿತದಲ್ಲಿ ದೊರೆತ ಎರಡು ಕೃತಿಗಳಲ್ಲದೆ, ಮೇಲೆ ನೋಡಿದ ಈ ಕೃತಿಯಲ್ಲಿರುವ "ನರಹರಿ" ಅಂಕಿತಪಲ್ಲಟ, ಅನುಮಾನಕ್ಕೆಡೆಗೊಡುತ್ತದೆ. (ನರಹರಿ ತೀರ್ಥರ ಕಾಲ, ಸು : ೧೩ನೆ ಶ.ದ ಕೊನೆ–೧೪ನೆ ಶ.ದಲ್ಲಿ ಜೀವಿಸಿದರೆಂದು ಕನ್ನಡ ಸಾಹಿತ್ಯ ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ.[62] ಡಾ. ಬಿ. ಎನ್. ಕೆ. ಶರ್ಮರು ತಮ್ಮ "ಹಿಸ್ಟರಿ ಆಫ್ ದಿ ದ್ವೈತ ಸ್ಕೂಲ್ ಆಫ್ ವೇದಾಂತ[63]–ದ್ವೈತ ಸಿದ್ಧಾಂತದ ಇತಿಹಾಸ"–ಎಂಬ ಹೆಬ್ಬೊತ್ತಿಗೆಯಲ್ಲಿ ನರಹರಿತೀರ್ಥರ ಕಾಲವನ್ನು ಕ್ರಿ.ಶ. ೧೩೨೪–೩೩ ಎಂದು ಸೂಚಿಸಿದ್ದಾರೆ. ನಾವು ಕನ್ನಡ ಸಾಹಿತ್ಯ ಚರಿತ್ರಕಾರರ ಅಭಿಮತವನ್ನು ಒಪ್ಪ

ಬಹುದಾಗಿದೆ.) ಆದರೂ, ಮೊದಲೆರಡು ಕೃತಿಗಳ ಪರಿಭಾಷೆ, ಸಹಜತೆ ಇವುಗಳನ್ನು ಗಮನಿಸಿದಲ್ಲಿ ಮೂರನೆಯದೂ ಅವರದ್ದೆ ಎಂಬ ಅನುಮಾನವೂ ಬರುತ್ತದೆ. ನರಹರಿತೀರ್ಥರ ಕೃತಿಗಳು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ದೊರೆತಾಗ, ಈ ಸಂದೇಹ ಪರಿಹಾರವಾದೀತು. ಹನುಮಂತರಾವ್ ಗೋರೆಬಾಳರ ಕೃತಿ ಸಂಪಾದನೆ, ಸಂಕಲನ, ಹರಿದಾಸ ಸಾಹಿತ್ಯ ಪ್ರಕಟಣೆಯ ದೃಷ್ಟಿಯಿಂದ ತುಂಬ ಸ್ತುತ್ಯರ್ಹವೆನ್ನಿಸಿದರೂ, ಕರ್ನಾಟಕದ ಇನ್ನಿತರೆಡೆ ಇಲ್ಲಿಯವರೆವಿಗೂ ನಡೆದಿರುವ ಸಂಶೋಧನೆಯಲ್ಲಿ ನರಹರಿತೀರ್ಥರ ಹೆಚ್ಚಿನ ಕೃತಿಗಳು (ಕೀರ್ತನೆ, ಸುಳಾದಿ, ಉಗಾಭೋಗ) ದೊರೆತಿಲ್ಲದಿರುವುದರಿಂದ, ಸದ್ಯಕ್ಕೆ ನಾವು ಮೇಲೆ ಕಾಣಿಸಿದ ಮೂರು ಕೀರ್ತನೆಗಳನ್ನು ಸ್ವೀಕರಿಸಬಹುದು. ಇಷ್ಟೇ ಸಾಕು, ಹರಿದಾಸಸಾಹಿತ್ಯ ನರಹರಿತೀರ್ಥರ ಕಾಲಕ್ಕೇ ಒಂದು ಸ್ಥಾನಗಳಿಸಲಾರಂಭ ಆಗಿತ್ತೆಂದೂ ಅನ್ನಿಸುತ್ತದೆ.

ಹರಿದಾಸಸಾಹಿತ್ಯದ ಉಗಮ ಕುರಿತು ಪ್ರಸ್ತಾಪಿಸುತ್ತ, ಡಾ. ಕೆ. ಎಂ. ಕೃಷ್ಣರಾವ್ ಅವರು ಶ್ರೀ ನರಹರಿತೀರ್ಥರ ಬಗ್ಗೆ ಕೆಲವು ಆಕ್ಷೇಪಣೆಗಳನ್ನು ಮಾಡಿದ್ದಾರೆ[೬೪].

1. ದೊರೆತಿರುವ ಕೃತಿಗಳು ಮೂರು ಮಾತ್ರ. ಅಂಕಿತ ಸಹ ನಿರ್ದಿಷ್ಟವಾಗಿ ತಿಳಿಯದಾಗಿದೆ. ಅನುಮಾನಕ್ಕೆಡೆಗೊಟ್ಟಿದೆ. ಅವರ ಅಂಕಿತವನ್ನು 'ರಘುಪತಿ', 'ರಘುಕುಲತಿಲಕ' ಎಂದು ಊಹಿಸಬಹುದಾಗಿದೆ.
2. ಶ್ರೀನರಹರಿತೀರ್ಥರು ದಾಸಸಾಹಿತ್ಯವನ್ನು ರಚಿಸಿ, ದಾಸಪಂಥವನ್ನು ಸ್ಥಾಪಿಸಿ, ಶಿಷ್ಯರನ್ನು ತಯಾರಿಸಿದ್ದರೆ, ಅವರ ತರುವಾಯ ನೂರು ವರ್ಷಗಳವರೆಗೆ ಯಾವ ಹರಿದಾಸರ, ಅವರ ಶಿಷ್ಯರ ಹೆಸರಾಗಲಿ, ಕೃತಿಯಾಗಲಿ, ಕಂಡು ಕೇಳಿ ಬರದಿರುವುದಕ್ಕೆ ಕಾರಣ ಹೇಳುವುದು ಕಷ್ಟವಾಗುತ್ತದೆ.
3. ಹರಿದಾಸರ ಪರಂಪರೆಯನ್ನು ಕುರಿತ ವಂದನಾ ಶ್ಲೋಕದಲ್ಲಿ ಶ್ರೀನರಹರಿತೀರ್ಥರ ಹೆಸರಿಲ್ಲ. ಅವರೇ ಆದ್ಯರಾಗಿದ್ದಿದ್ದರೆ ಅವರ ಹೆಸರನ್ನು ಬಿಡುವುದಕ್ಕೆ ಕಾರಣವೇನು?[೬೫]
4. ಶ್ರೀನರಹರಿತೀರ್ಥರು ಪೂರ್ವಾಶ್ರಮದಲ್ಲಿ ಶಾಮಾಶಾಸ್ತ್ರಿಗಳೆಂಬ ಅದ್ವೈತಿಗಳಾದ ಹೆಸರಿನ ಉದ್ದಾಮ ಪಂಡಿತರಾಗಿದ್ದರು. ಅವರಿಗೂ ಮಧ್ವಾಚಾರ್ಯರಿಗೂ ವಾದ ಬಿರುಸಾಗಿ ನಡೆದು, ಅದರಲ್ಲಿ ಸೋತ ಶಾಮಾಶಾಸ್ತ್ರಿಗಳು ತಮ್ಮ ಸೋಲನ್ನೊಪ್ಪಿಕೊಂಡಿದ್ದಲ್ಲದೆ, ಆಚಾರ್ಯರ ಪ್ರಮೇಯಗಳನ್ನು ಪ್ರಶಂಸಿಸಿ ಅವರ ಮತವನ್ನು ಅಪ್ಪಿಕೊಂಡರು. ಅವರ ಶ್ರೇಷ್ಠ ಶಿಷ್ಯರಾದರು. ಇವರು ವಾಸವಾಗಿದ್ದುದು ಗಂಜಾಂ, ಒರಿಯಾ ಪ್ರಾಂತಗಳಲ್ಲಿ. ಇವರು ಉಡುಪಿಗೆ ಬಂದದ್ದು ಈ ಮತ ಪರಿವರ್ತನೆಯಾದ ಅನೇಕ ವರ್ಷಗಳ ಮೇಲೆ. (೧೨ ವರ್ಷ ಎಂದು ಹೇಳುತ್ತಾರೆ.) ಇವರ ಮಾತೃಭಾಷೆ ಕನ್ನಡವಲ್ಲವೆಂಬುದು ಸ್ಪಷ್ಟ. ಇಂತಹವರು ಇಲ್ಲಿ ಬಂದ ಮೇಲೆ ಇಳಿವಯಸ್ಸಿನಲ್ಲಿ ಕನ್ನಡವನ್ನು ಹೊಸದಾಗಿ ಕಲಿತು ಆ ಭಾಷೆಯಲ್ಲಿ ಗ್ರಂಥರಚನೆ ಮಾಡಿದರೇ ಹೇಗೆ ಎಂಬುದು ವಿಚಾರಣೀಯ.

ಇದು ಅಸಾಧ್ಯವೇನೂ ಅಲ್ಲ ಎನ್ನಬಹುದಾದರೂ ಹೀಗೆ ಇವರ ಜೀವನ ದಲ್ಲಾಯಿತೇ ಎಂಬುದು ಸಂಶೋಧನೀಯ ವಿಷಯ.[66] ಹಾಗೆ ಹೊಸ ಭಾಷೆಯನ್ನು ಕಲಿತು ಆದರಲ್ಲಿ ಗ್ರಂಥ ರಚನೆ ಮಾಡಿದ್ದಾರೆ. ಅಂತಹವರು ಎಂದೂ ಮೂರೇ ಮೂರು ಪದಗಳಲ್ಲಿ ತೃಪ್ತಿ ಹೊಂದುತ್ತಿರಲಿಲ್ಲವೆಂಬುದು ಖಂಡಿತ. ಇವರ ಇನ್ನೂ ಹಲವು ಕೃತಿಗಳು ಬೆಳಕಿಗೆ ಬಂದರೆ ಅವುಗಳ ಆಧಾರದ ಮೇಲೆ ವಿಮರ್ಶೆ ಮಾಡಬೇಕಾಗುತ್ತದೆ. ಹರಿದಾಸ ಪಂಥದಲ್ಲಿ ಹೀಗೆ ಒಂದೆರಡು ಪದ ರಚನೆಯಲ್ಲಿಯೇ ತೃಪ್ತಿಪಟ್ಟುಕೊಂಡವರಿಲ್ಲ. ಶ್ರೀರಾಘವೇಂದ್ರತೀರ್ಥ ಶ್ರೀಪಾದಂಗಳವರದೆಂದು ಇಂದು ಪ್ರಚಾರದಲ್ಲಿರುವ ಒಂದೇ ಪದ ಅವರದೆಂದು ಹೇಳಲು ಸಾಕಷ್ಟು ಆಧಾರಗಳಿಲ್ಲ.

5. ಶ್ರೀನರಹರಿತೀರ್ಥರು ಇಂಥ ಹೊಸ ಪಂಥವೊಂದನ್ನು ಪ್ರಾರಂಭಿಸಿದ್ದರೆ ಪೀಠಾಧಿಪತಿಗಳಾಗಿದ್ದ ಅವರಿಗೆ ಶಿಷ್ಯ ಪ್ರಶಿಷ್ಯರು ಇದ್ದೇ ಇರುತ್ತಿದ್ದರು. ಆ ಪರಂಪರೆ ಯಾವುದೂ ಬೆಳಕಿಗೆ ಇದುವರೆಗೂ ಬಂದಿಲ್ಲ. ಅವರ ಶಿಷ್ಯರೆಂದು ಯಾರೂ ಕನ್ನಡದಲ್ಲಿ ಸಾಹಿತ್ಯ ರಚನೆ ಮಾಡಿರುವುದು ಕಂಡುಬಂದಿಲ್ಲ.

6. ಹರಿದಾಸ ಪಂಥದ ಪ್ರಮುಖ ಉಪಾಸ್ಯದೇವತಾಮೂರ್ತಿ ಪಂಢರಪುರದ ವಿಠಲ 'ವಿಠಲ'ನೆಂಬ ಶಬ್ದ ಹರಿದಾಸರ ಅಂಕಿತದಲ್ಲಿ ಸಾಮಾನ್ಯವಾಗಿ ಇದ್ದೇ ಇರುತ್ತದೆ. ಇದು ಮೊದಲು ಕಂಡು ಬರುವ ಶ್ರೀಪಾದರಾಜರ ಅಂಕಿತವಾದ ''ರಂಗವಿಠಲ'' ಎಂಬುದರಲ್ಲಿದೆ. ಶ್ರೀನರಹರಿತೀರ್ಥರೆಂದು ಹೇಳಲಾಗುವ ಅಂಕಿತದಲ್ಲಿ ಈ ''ವಿಠಲ'' ಶಬ್ದವು ಇಲ್ಲ.

## ಹರಿದಾಸಪದ ಪ್ರಯೋಗ ಉಲ್ಲೇಖ

ಇವು ಶ್ರೀರಾಯರ ಆಕ್ಷೇಪಣೆಗಳು. ಈ ಆಕ್ಷೇಪಣೆಗಳ ಔಚಿತ್ಯದ ಬಗ್ಗೆ ಹಾಗೂ ಅದೆಷ್ಟು ಸರಿ ಅಥವಾ ಅಲ್ಲ ಎಂಬುದನ್ನು ಕುರಿತು ವಿವೇಚಿಸಬಹುದು :

1. ನರಹರಿತೀರ್ಥರು ತಮ್ಮ ಪೂರ್ವಾಶ್ರಮದಲ್ಲಿದ್ದುದು ಒರಿಸ್ಸ ಪ್ರಾಂತ್ಯದಲ್ಲಾದರೂ ಶ್ರೀಮಧ್ವಾಚಾರ್ಯರಿಂದ[67] ಶಿಷ್ಯ ವೃತ್ತಿ ಸ್ವೀಕರಿಸಿ ಬಂದ ನಂತರ ಸುಮಾರು ಹತ್ತು ವರ್ಷ (ಕ್ರಿ.ಶ. ೧೩೨೪-೧೩೩೪) ಕಾಲ ಮಠದ ಆಡಳಿತದಲ್ಲಿ ಮಗ್ನರಾಗಿದ್ದ ಬಗ್ಗೆ ದಾಖಲೆಗಳಿವೆ. ಈ ಅವಧಿಯಲ್ಲಿ ಅವರು ಕನ್ನಡ ಕಲಿತು, ರಚನೆ ಮಾಡಿದ್ದು ಅಸಂಭವವೇನೂ ಅಲ್ಲ, ಎನ್ನುವುದು ಶ್ರೀ ವರದರಾಜರಾವ್ ಅವರ ಅಭಿಪ್ರಾಯ. ಇದು ಸಾಧ್ಯವುಂಟು. ಇಲ್ಲಿಗೆ ಬಂದು ನೆಲೆ ನಿಂತ ಮೇಲೆ, ಇಲ್ಲಿಯ ಭಾಷೆ ಕಲಿತದ್ದಲ್ಲದೆ,

ಮಾತಿನಲ್ಲಿ ಹರಿದಾಸತನ । ನೀತಿಯಲ್ಲಿ ಪ್ರಭುದಾಸತನ ।
ಪ್ರೀತಿಥನಾದಿ ವಿಷಯದಲ್ಲಿ । ನಿರ್ಭೀತ ದೈವ ಗುರುದೊಲಿಹದಲಿ ॥

ಎಂದು ತಿಳಿಗನ್ನಡದೇಸಿದರನ್ನು ಬಳಸುವಷ್ಟರ ಮಟ್ಟಿಗೆ ಅವರ ಸಾಧನೆ ನಡೆಯಿತೆಂಬು ದರ ಬಗ್ಗೆ ಸಂಶಯಬಾರದು. ಬರೆಹದ ಲಾಲಿತ್ಯವೆ ಭಾಷೆಯ ಪ್ರಭುತ್ವಕ್ಕೂ ಸಾಕ್ಷ್ಯ ನೀಡುತ್ತದೆ. ಆದರೆ ನರಹರಿತೀರ್ಥರ ಶಿಷ್ಯ ಪ್ರಶಿಷ್ಯ ಪರಂಪರೆ ಬೆಳೆಯದೆ ಹೋಗಿರ ಬಹುದು, ಇತರ ಮಧ್ವ ಮಠಗಳು ಕವಲೊಡೆದು ಬೆಳೆದಂತೆ. ಶ್ರೀಮಧ್ವಾಚಾರ್ಯರಿಗೆ ಮೂಲಸೀತಾರಾಮಮೂರ್ತಿಗಳನ್ನು ತಂದಿತ್ತ ವಿಷಯ ಕೂರ್ಮದ ಸಂಸ್ಕೃತ ಶಾಸನದಲ್ಲಿ ಬಂದಿದೆಯಲ್ಲದೆ[69] ಶ್ರೀಪುರಂದರದಾಸರ ಸುಳಾದಿಯೊಂದರಲ್ಲೂ ಹೀಗೆ ಉಕ್ತವಾಗಿದೆ[69] ನರಹರಿತೀರ್ಥರ ಮಹಿಮೆ ಬಗ್ಗೆ ಸುತ್ತ,

...... ರಾಜಸುತ್ತಿಪ್ಪ ಸೀತಾರಾಮ ಮೂರ್ತಿಗಳನ್ನು ತೆಗೆದುಕೊಂಡು
ವಾಜಿಯಗೀರಿ ಕೂರ್ಮಕ್ಕೆ ಬಂದು ಪದ್ಮನಾಭರಿಗಿತ್ತರು ॥

ಎಂದು ಕೂರ್ಮ ಶಾಸನವೊದಗಿಸಿದ ಐತಿಹಾಸಿಕ ದಾಖಲೆಯನ್ನು ದೃಢಪಡಿಸಿದ್ದಾರೆ. ಆದರೆ, ''ಹರಿದಾಸತನ'' ಎಂಬ ಮೊದಲ ಪದ ನಮಗೆ ನರಹರಿತೀರ್ಥರಿಂದ ದೊರೆತಿದೆ. ಇಲ್ಲಿ ಆ ಸಾಹಿತ್ಯದ ಹೊಳಹು ಸಹ ಕಾಣಿಸುತ್ತದೆ. ಇವರು ಹರಿದಾಸಸಾಹಿತ್ಯದ ಮೊದಲಿಗರೂ ಅಲ್ಲವೊ ಇನ್ನೂ ನಿರ್ಧಾರ ಆಗಬೇಕಾದರೂ, ''ನರಹರಿತೀರ್ಥರು ಕನ್ನಡ ದಲ್ಲಿಯೂ ಕೃತಿ ರಚನೆ ಮಾಡುವ ಶಕ್ತಿಯನ್ನು ಗಳಿಸಿದ್ದರೆಂದು ಹೇಳಲು ಅಡ್ಡಿಯೇನೂ ಇರಲಾರದು.''[70] ಡಾ. ಕೆ. ಎಂ. ಕೃ. ಅವರು ಹೇಳುವ 'ವಿಠಲ' ಎಂದೇ ಅಂಕಿತದಲ್ಲಿ ಬರಬೇಕೆಂಬ ವಾದ ಸಮಂಜಸವಾಗಿಲ್ಲ. ಶ್ರೀವ್ಯಾಸರಂಯರ ಅಂಕಿತ ''ಕೃಷ್ಣ'' ''ಸಿರಿಕೃಷ್ಣ'' ಎಂದಿಷ್ಟು, ವಾದಿರಾಜರ ಅಂಕಿತ ''ಹಯವದನ'', ಶ್ರೀರಾಘವೇಂದ್ರ ತೀರ್ಥರ ಅಂಕಿತ ''ವೇಣುಗೋಪಾಲ'' ಎಂಬಿವುಗಳಾಗಿವೆ. ಇಲ್ಲಿ 'ನರಹರಿ' ಎಂಬುದೇ ಅಂಕಿತ. ಸನ್ಯಾಸಾಶ್ರಮ ಸ್ವೀಕರಿಸಿದ ಯತಿಗಳು ತಮ್ಮ ಇಷ್ಟದೇವತೆಯ ಹೆಸರನ್ನೆ ಸೂಚಿಸುವುದು ಸಂಪ್ರದಾಯ.[71]

ಶ್ರೀನರಹರಿತೀರ್ಥರು ಕೂರ್ಮ ಕ್ಷೇತ್ರದ ನೃಸಿಂಹಸ್ವಾಮಿ ಉಪಾಸಕರಾಗಿದ್ದು ತಮ್ಮ ಸನ್ಯಾಸಾಶ್ರಮದ[72] ಹೆಸರನ್ನು ಹಾಗೂ ಮೂಲಸೀತಾರಾಮದೇವರ ಸ್ಮರಣೆಗಾಗಿ ರಘುಪತಿಯ ಅಂಕಿತವನ್ನು ಬಳಸಿರುವರೆಂದು ಪಂಚಮುಖಿಯವರು ಅಭಿಪ್ರಾಯ ಪಡುತ್ತಾರೆ. ಆದ್ದರಿಂದ ಹನುಮಂತರಾವ್ ಗೋರೆಬಾಳ[73] ಅವರ ಮಾತಿನಂತೆ ''ನರಹರಿತೀರ್ಥ''ರ ಮೂರನೆಯ ಕೀರ್ತನೆಯು ''ಯಾವದೆಂಬ'' ಬಗ್ಗೆ ವಿಚಾರವಿನ್ನೂ ಇತ್ಯರ್ಥ ಆಗಿಲ್ಲ[74] ಹಾಗೂ ಕೀರ್ತನೆಯು ಬಗ್ಗೆ ನಿರ್ಧಾರವಾಗಿ ಏನೂ ಹೇಳಲಾಗಿಲ್ಲ. ''ತಿಳಿಕೊ ನಿನ್ನೊಳಗೆ ನೀನೆ ಮರುಳೆ'' ಹದಿನೈದು ನುಡಿಗಳ ಕೀರ್ತನೆ. ಇದರಲ್ಲಿ ಅನೇಕ ಕಡೆ ರಚನೆಯ ಶೈಲಿಯಲ್ಲಿ ಶೈಥಿಲ್ಯ ಕಂಡುಬರುತ್ತದೆ. ಮಧ್ವಾಚಾರ್ಯರ ನಂತರ ಇದನ್ನು ಬರೆದಿರುವ ಸಂಭವ ಹೆಚ್ಚು. ಹಾಗೇ ''ಎಂತು ಮರುಳಾದೆ'' ಎಂಬ ರಚನೆಯ ಭಿನ್ನ ಪಾಠ ದೊರೆತುದರಿಂದಾಗಿ ಮೂಲ ಸ್ವರೂಪವನ್ನು ಗುರುತಿಸುವುದು ಇನ್ನೂ ಆಗಿಲ್ಲ.[75] ಆದರೆ ಇಲ್ಲಿ ಶುದ್ಧ ಪಾಠ ನಿರ್ಣಯದ ಬಗ್ಗೆ ಸಂದೇಹಗಳು ಉಳಿಯುತ್ತವೆ.

ಈ ಪಾಠಗಳ ಜತೆ, ರಚನಾ ಬಂಧದಲ್ಲಿ ತೋರಿರುವ ಕೆಲವು ಅಂಶಗಳು, ಸಂಗೀತ ಶಾಸ್ತ್ರದ ದೃಷ್ಟಿಯಿಂದಲೂ ಸಮಸ್ವಾತ್ತಕವಾಗಿ ಪರಿಣಮಿಸಿವೆ. ಇಲ್ಲಿಯ ಅನು ಪಲ್ಲವಿಯ ಪ್ರಯೋಗ ಕಂತೂಹಲಕಾರಿ ತೆಲುಗು ಕೀರ್ತನೆಯ ಪ್ರಕಾರ ಜನ್ಮಿಸಿದಂದೇ "ಕ್ರಿ.ಶ.೧೫ನೆ ಶತಮಾನದಲ್ಲಿ. ಇದನ್ನು ತೆಲುಗಿನ ತಾಲ್ಲಪಾಕಂ ಅಣ್ಣಮಾಚಾರ್ಯರು ತಮ್ಮ ಕೆಲವು ಕೀರ್ತನೆಗಳಲ್ಲಿ ಈ ಅನುಪಲ್ಲವಿಯನ್ನು ಮೊತ್ತಮೊದಲಿಗೆ ಪ್ರಯೋಗಿಸಿದು ದಾಗಿ ಸಂಗೀತಜ್ಞರ ಅಭಿಪ್ರಾಯ."[76] ಈ ಮಾತಿಗೆ ಪೋಷಕ ಅಂಶವೆಂಬಂತೆ ಹದಿನೈದನೆ ಶತಮಾನಕ್ಕೆ ಸೇರಿದ ಶ್ರೀಪಾದರಾಜರ ಕೃತಿಗಳಲ್ಲಿಯೂ ಪಲ್ಲವಿ, ಅನುಪಲ್ಲವಿಗಳನ್ನು ಸ್ಪಷ್ಟವಾಗಿ ಕಾಣುತ್ತೇವೆ. ಅದರಿಂದ, ನರಹರಿತೀರ್ಥರ ಕೃತಿಗಳಲ್ಲಿ ಮೇಲಣ ಈ ರೀತಿಯ ಅನುಪಲ್ಲವಿಯ ಕಾಣ್ಕೆ, ಐತಿಹಾಸಿಕ ದೃಷ್ಟಿಯಿಂದ, ಒಂದು ರೀತಿ ಅಸಂಗತ ವೆನ್ನಿಸುತ್ತದೆ. ಜಯದೇವ ಕವಿಯ "ಗೀತಗೋವಿಂದಮ್", ತಮಿಳುನಾಡಿನ ಆಳ್ವಾರ್ ಸಂತರ "ನಾಲಾಯಿರ ದಿವ್ಯಪ್ರಬಂಧ"ಗಳಲ್ಲಿ ಅನುಪಲ್ಲವಿಯ ವಿಂಗಡಣೆ ಇಲ್ಲ. ಆದರಿಂದಾಗಿ ಕನ್ನಡದಲ್ಲಿ ಕೀರ್ತನ ಪ್ರಕಾರ ಆ ವೇಳೆಗೆ ಅಷ್ಟಾಗಿ ಇನ್ನೂ ಬಳಕೆಯಲ್ಲಿರ ದಿದ್ದುದೂ ತಿಳಿಯಬರುತ್ತದೆ. ನರಹರಿತೀರ್ಥರದೆಂದು ಹೇಳಲಾದ ರಚನೆಗಳಲ್ಲಿ ಯಾವುದಾದರೂ ಬೇರೆಯವರ ಕೈವಾಡವಿದೆಯೆ ಎಂಬ ಸಂದೇಹವೂ ಬರುತ್ತದೆ.

ಡಾ. ಕೆ. ಎಂ. ಕೃಷ್ಣರಾಯರ ಇನ್ನೊಂದು ಆಕ್ಷೇಪಣೆಯಂತೆ ನರಹರಿತೀರ್ಥರ ತರುವಾಯ ನೂರು ವರ್ಷಗಳವರೆಗೆ ಇನ್ನೂ ಯಾರೂ ಕೀರ್ತನಕಾರರು ಖಚಿತವಾಗಿ ಕಾಣಬಂದಿಲ್ಲವಾದ್ದರಿಂದ, ಕನ್ನಡದಲ್ಲಿ ವೈಷ್ಣವದಾಸಕೂಟಕ್ಕೆ ಆದ್ಯ ಪ್ರವರ್ತಕರೆಂದರೆ ಶ್ರೀನರಹರಿತೀರ್ಥರೆಂದೆ ತಿಳಿಯಬಹುದು.[77] ಎಂಬ ಪಂಚಮುಖಿಯವರ ಮಾತು ಸದ್ಯಕ್ಕೆ ಹಾಗೆಯೆ ನಿಲ್ಲುತ್ತದೆ. ಆದರೆ, ಒಂದು ನರಹರಿತೀರ್ಥರ ಇನ್ನಿತರ ರಚನೆಗಳು ದೊರೆಯುವವರೆಗೂ ಅವರನ್ನು ಹರಿದಾಸಸಾಹಿತ್ಯದ ಮೊದಲಿಗರೆಂದು ಭಾವಿಸುವುದು, ಪೂರ್ವಾಪರ ವಿಚಾರಗಳನ್ನು ವಿಮರ್ಶಿಸದೆ ನಿರಾಕರಿಸುವುದೂ ಸಲ್ಲದು.

ಕನ್ನಡ ಹರಿದಾಸಸಾಹಿತ್ಯಕ್ಕೆ ಒಂದು ಪ್ರಾಚೀನ ಪರಂಪರೆ ಇದೆಯೆನ್ನುವಲ್ಲಿ ಮುಹಿ ದಾಸರ ಹೆಸರನ್ನು ಹೇಳುತ್ತಾರೆ. ಅಲ್ಲಿಂದ ಮುಂದೆ ಬಂದರೆ ೬೦ ಜನ ಆದ್ಯರು, ೯ ಜನ ಆರಾಧ್ಯರೆ ಪ್ರಮುಖರೆಂದು ಗೊರಬಾಳರು ಮೇಲಿಂದ ಮೇಲೆ ಹೇಳಿದ್ದಾರೆ.

1. ಶಾಙ್ಗ್ರದೇವರಿಂದ ಪ್ರಸಿದ್ಧಿ ಪಡೆದಿರುವ ಉಗಾಭೋಗಗಳನ್ನು ರಚಿಸಿರು ವುದನ್ನು ಅಸಂಭವವೆನ್ನಲಾಗದು.[78]

2. ೬೦ ಜನ ಆದ್ಯರ ಬಗ್ಗೆ ಬೇಲೂರು ಕೇಶವದಾಸರೂ ಪ್ರಸ್ತಾಪಿಸಿದ್ದಾರೆ. ಹನುಮಂತರಾವ್ ಗೋರಬಾಳರು ಇದರ ಬಗ್ಗೆ ಒಂದು ಕತೆಯನ್ನೆ ನಿದರ್ಶನ ಆಗಿ ಹೇಳಿದಾರೆ.[79] ಅವರಿಗೇ ಮತ್ತೆ 'ಶಂಕೆ', 'ಅನುಮಾನ'-"೧೩ನೆ ಶತಮಾನದಲ್ಲಿ ಆದ್ಯ ರಾದ ಹರಿದಾಸರಿದ್ದರಂತೆ ಸಿದ್ದ", "ಈ ಆದ್ಯರು ೧೫ನೆ ಶತಮಾನ ಮತ್ತು ಅದರ ಕ್ಕಿಂತಲೂ ಕೆಲಕಾಲ ಮುಂಚಿನವರೆಂದು ಗೊತ್ತಾಗುತ್ತದೆ" ಎಂದೆಲ್ಲ ಹೇಳಿ "ವಿಚಾರಾಂಶ ವಿದೆ" ಎನ್ನುತ್ತಾರೆ. ಹಾಗೂ ಈ ತಂಡದವರನ್ನು ನರಹರಿತೀರ್ಥರಿಗೂ ಮತ್ತು

ಶ್ರೀಪಾದರಾಜರಿಗೂ ಮೊದಲು ಇದ್ದರೆಂದು ಸೂಚಿಸಿದ್ದಾರೆ. "ಆದ್ಯರಸುಳಾದಿ"ಗಳೆಂದು 'ಹರಿದಾಸಸಾಹಿತ್ಯ ವಿಶೇಷಾಂಕ' ಪ್ರಕಟಿಸಿದ ಗೋರಬಾಳರು, ೬೦ ಜನ ಆದ್ಯರ ಪೈಕಿ ೫೨ ಜನರ ಅಂಕಿತಗಳನ್ನು ಹೇಳಿ, ಇದು ಅಲ್ಲದೆ ೯ ಜನ "ಆರಾಧ್ಯರು" ಬೇರೆ ಇದ್ದರೆಂದು ಹೇಳುತ್ತಾರೆ.[79] ಇಲ್ಲಿ "ಆರಾಧ್ಯರು" ಎಂದರೆ, ಮೊದಲು ಶೈವದೀಕ್ಷೆಯನ್ನು ಅವಲಂಬಿಸಿದ ಕೆಲವರು ಪಂಢರಾಪುರದ ಚಂದ್ರಭಾಗ ನದಿಯಲ್ಲಿ ಸ್ನಾನ ಮಾಡುವಾಗ್ಗೆ, ಅವರೆಲ್ಲ ಅನಂತರ ವಿಠಲನ ಗುಡಿಯೊಳಗಿದ್ದರಂತೆ. ಅವರು ದಾಸದೀಕ್ಷೆ ಪಡೆದು ವೈಷ್ಣವ ಧರ್ಮಾವಲಂಬಿಗಳಾದ ಪ್ರಸಂಗವನ್ನು ಕೇಶವದಾಸರು[80] ಹಾಗೂ ಗೋರಬಾಳರು ತಿಳಿಸುತ್ತಾರೆ. ಇದಾದ ನಂತರ, ಅವರು ಆದ್ಯರ ಕೆಲವು ಉಗಾಭೋಗಗಳನ್ನು ಪ್ರಕಟಿಸಿದರು.[81] ಪುನಃ ತಮ್ಮ ಗ್ರಂಥಮಾಲೆಯ 'ಹರಿದಾಸರ ಪದಸುಳಾದಿ'ಗಳೆಂಬ ಪುಸ್ತಕದಲ್ಲಿ (ಹಾಗೂ "ಆಧ್ಯಾತ್ಮಿಕ ವಿವಿಧನಿಬಂಧಗಳು" ಎಂಬ ಪುಸ್ತಿಕೆಯಲ್ಲಿ ಸಹ) ವಿಜಯದಾಸರ ಸುಳಾದಿಯ ೨. ೩ನೆಯ ನುಡಿಗಳನ್ನು ಉಲ್ಲೇಖಿಸಿ, ಆದ್ಯರ ಸುಳಾದಿಗಳನ್ನು ಪ್ರಕಟಿಸಿದಾರೆ. ಅಲ್ಲಿಯ ಅಂಕಿತಗಳು ಈ ರೀತಿ ಇವೆ :

ಅಚಲಾನಂದವಿಠಲ, ಮುದ್ದುವಿಠಲ, ಯೋಗೇಂದ್ರವಿಠಲ, ನರಕಂಠೀರವವಿಠಲ, ಸೊಬಗುವಿಠಲ, ಗರುಡವಾಹನ ಲಕ್ಷ್ಮೀನಾರಾಯಣ, ಸಿರಿಕೃಷ್ಣವಿಠಲ, ಕೃಷ್ಣವಿಠಲ, ವೈಕುಂಠವೆಂಕಟೇಶ, ವೈಕುಂಟವಿಠಲ, ಅಚ್ಯುತವಿಠ್ಠಲ, ವರದಕೇಶವ, ಚನ್ನಕೇಶವವಿಠಲ, ವರದರಾಜವೆಂಕಟೇಶ, ವರದರಾಜರಾಮ, ವರದರಾಜಕೃಷ್ಣ, ಮುಂತಾದವು. ವಿಜಯದಾಸರು ಈ ಸುಳಾದಿಯ ಒಂದು ನುಡಿಯಲ್ಲಿ "ಪರಮಭಕುತಿಯಲ್ಲಿ ವಿಜಯವಿಠ್ಠಲನ ಸ್ಮರಣೆ ಮಾಡಿದರು ಆದ್ಯರು ನಿರ್ಮಳರಾಗಿ" ಎಂದಿದ್ದಾರೆ. ದಾಸಸಾಹಿತ್ಯದ ದ್ವಿತೀಯ ಘಟ್ಟದ ಪ್ರಮುಖ ಹರಿದಾಸರು ವಿಜಯದಾಸರು. ಇದಕ್ಕೆ ಮೊದಲು, ಶ್ರೀಪಾದರಾಜರು, ಶ್ರೀವ್ಯಾಸರಾಜರು, ಶ್ರೀವೈಕುಂಠದಾಸರು, ಶ್ರೀವಾದಿರಾಜರು, ಶ್ರೀಪುರಂದರದಾಸರು, ಶ್ರೀಕನಕದಾಸರು–ಮುಂತಾದವರೆಲ್ಲ ಹರಿದಾಸ ಕ್ಷೇತ್ರದಲ್ಲಿ ಶ್ರಮಿಸಿದವರು. ವಿಜಯದಾಸರು ಅವರನ್ನು ಈ ಸುಳಾದಿಯಲ್ಲಿ ನೆನಪು ಮಾಡಿಕೊಂಡಿರದೆ ಬರಿಯ ಆದ್ಯರನ್ನೆ ಹೆಸರಿಸುವುದೇಕೆ ? ಪುರಂದರದಾಸರಿಗೂ ಮುನ್ನ ಆದ್ಯರು ಇದ್ದಿದ್ದೆ ಆದರೆ, ಅವರನ್ನು ಪುರಂದರದಾಸರು ನೆನೆಯದೆ ಇರುತ್ತಿದ್ದರೆ ? ಅಥವಾ ಅನಂತರ ಇದ್ದ ಇತರ ಹರಿದಾಸರು ನೆನೆಯದಿರುವರೆ ? ಇದು ಇನ್ನೂ ಉತ್ತರ ಸಿಗದ ಪ್ರಶ್ನೆ.

ಆದ್ಯರ ಬಗ್ಗೆ ಗೋರಬಾಳರು ಪುನಃ ಇನ್ನೊಂದು ಗ್ರಂಥದಲ್ಲಿ ಪ್ರಸ್ತಾಪಿಸುತ್ತ, ವಿಜಯದಾಸರಿಗೆ ಪೂರ್ವದಲ್ಲಿ "ಗುರುಮಹೀಪತಿರಾಯ"ರೆಂಬವರಿದ್ದರೆಂತಲೂ, ಅವರು ರಚಿಸಿರುವ 'ಗುರುಸ್ತವನದ' ಒಂದು ನುಡಿಯನ್ನು ಉದಾಹರಿಸುತ್ತಾರೆ :

ನೆನೆದು ನೆನೆಸುವೆ ವಾರಂವಾರ ॥ ಪ ॥

ನೆನೆದು ನೆನೆಸುವೆ ತಾನನುದಿನ ಹರಿಪದ
ವನಜಮಧುಪರಾದ ಅನುಭವ ಶರಣರ ॥ ಅ. ಪ. ॥

.... .... .... .... ....
ಶರಣೆಂದು ಆದ್ಯರ ಸಕಲಪ್ರಸಿದ್ಧರ
ಶ್ರೀ (ಸಿರಿ) ಪಾದಪ್ರಿಯ ಶುಭ ವ್ಯಾಸರಾಯರ
ವರಹಯಗ್ರೀವ ಜಗವರಿತ ವಾದಿರಾಜ
ಪುರಂದರದಾಸ ಪುಣ್ಯರವ ಮಾಳವ
ನರೆ ತಾಳಪಾಕರ ಸಂತಮತಿ ಕನಕರ
ಹರಿಭಕ್ತಿ ಉಲ್ಲಾಸರ ಬಂಡೆರಂಗಸರಿತೀಶ ನಿಜ ದಾ
ಸರ ಮಹೀಪತಿಗುರುಶರಣರ ತೋಷರ ವಾರಂವಾರ[82]

ಇದೇ ಪುಸ್ತಕದಲ್ಲಿ "ವೇಲಂಗಿರಿವಿಠಲಾಂಕಿತ"ರೆಂಬ ಅಂಕಿತವುಳ್ಳ ಹರಿದಾಸರ ಒಂದು ಉಗಾಭೋಗ ಉಲ್ಲೇಖಿಸುತ್ತ "...........ಸಿರಿವೈಷ್ಣವ ಮಂತಜಾ ವೈಕುಂಠದಾಸರು ಅರವತ್ತು ಆದ್ಯರು ಪುರಂದರದಾಸರು ಸುತರಾಮೆರೆಸುವೆ..........."[83] ಎಂದಿರುವಲ್ಲಿ ಆದ್ಯರ ಪ್ರಸ್ತಾಪ ಬಂದಿದೆ. ಇದಲ್ಲದೆ, ವಿಜಯದಾಸರು ಶ್ರೀಪುರಂದರದಾಸರನ್ನು ಕುರಿತು ಸ್ಮರಿಸಿಕೊಳ್ಳುವ ಸುಳಾದಿಯಲ್ಲಿ "ಇವರು (ಎಂದರೆ ಆದ್ಯರು) ಈ ಪರಿಯಲ್ಲಿ ಅಂಕಿತವನು ಹಾಡಿ ಅವನಿಯೊಳಗೆ ಸಂಚರಿಸುತ್ತ ಅರವತ್ತಾರು ಭವದೂರರಾಗಿ ದಾಸರು ತಮ್ಮ ಸಂತರೊಡನೆ ವಿರಚಿಸಿದರು"[84] ಎಂಬ ಸಾಲಿನಲ್ಲಿ ಆದ್ಯರು ಶ್ರೀಪುರಂದರ ದಾಸರ "ಬಹುಶಃ ಸಮಕಾಲೀನರಾಗಿದ್ದಿರಬಹುದೆಂದೆನಿಸುತ್ತದೆ." ಈ ಬಗ್ಗೆ "ಮೊದಲನೆಯ ಪರಂಪರೆಯ ಹರಿದಾಸರಲ್ಲಿ ಕೆಲವರು ಪ್ರಮುಖರನ್ನುಳಿಸಿ, ಉಳಿದ ಈ ಹಲವಾರು ಒಂದೆರಡು ಕೀರ್ತನೆಗಳನ್ನು ರಚಿಸಿ ಹೆಚ್ಚು ಬೆಳಕಿಗೆ ಬಾರದೆ ಇರಬಹುದು, ಅಂಥವರನ್ನು ವಿಜಯದಾಸರು ಈ ರೀತಿ ತಮ್ಮ ಗುರುಗಳೊಂದಿಗೆ ಸ್ಮರಿಸಿರಬಹುದು"[85] ಎಂಬ ಡಾ. ಜಿ. ವರದರಾಜರಾಯರ ಮಾತು ಸರಿ ಎನ್ನಿಸುತ್ತದೆ. ಇದರಿಂದ, ಆದ್ಯರನ್ನು ಗೋರಬಾಳರು ಚರ್ಚೆ ಮಾಡಿರುವಂತೆ ತುಂಬ ಪ್ರಾಚೀನರೆಂದು ಪರಿಗಣಿಸಲು ಕಷ್ಟವಾಗುತ್ತಿದೆ, ಈ ಬಗ್ಗೆ ಇನ್ನೂ ಹೆಚ್ಚು ಖಚಿತ ವಿವರ ದೊರೆವತನಕ, ಆದ್ಯರನ್ನು ಶ್ರೀಪಾದರಾಜರಾಗಲಿ, ಪುರಂದರದಾಸರಾಗಲಿ ಸ್ಮರಿಸಿದ್ದರೆ ಆಗ ಇವರನ್ನು ಹಳಬರೆಂದು ನಿರ್ಧರಿಸಬಹುದಾಗಿತ್ತು. ಅದಲ್ಲದೆ ಗೊರಬಾಳರು ಹೇಳಿರುವಂತೆ, ಆದ್ಯರನ್ನು ಶ್ರೀಪಾದ ರಾಜರ ಮತ್ತು ನರಹರಿತೀರ್ಥರ ನಡುವಣ ಕಾಲದವರೆಂದು ಕೂಡ ಭಾವಿಸಲು ಆಗುವುದಿಲ್ಲ. ಆದ್ಯರ ಅಂಕಿತದಲ್ಲಿ ಸುಳಾದಿ, ಉಗಾಭೋಗಗಳನ್ನು ವಿಜಯದಾಸರ ಅನಂತರ ಬೇರೆ ದಾಸರಲ್ಲಿ ಕಂಡುಬರದೆ ಹೋದರೆ ಮಾತ್ರ, ಸ್ವೀಕರಿಸಬಹುದಷ್ಟೆ. ಗೋರಬಾಳ ಹನುಮಂತರಾಯರ ಪೀಠಿಕೆ ಪರಿಗಣಿಸಿ, ಶ್ರೀ ಕಪಟರಾಳ ಕೃಷ್ಣರಾಯರು, 'ಕರ್ಣಾಟಕ

ಸಂಸ್ಕೃತಿಯ ಸಂಶೋಧನೆ' ಎಂಬ ಗ್ರಂಥದಲ್ಲಿ ಲೇಖನವೊಂದನ್ನು ಬರೆದಿದ್ದಾರೆ.[36] ಇದು ಶಾಸನಾಧಾರಿತ ಸಂಶೋಧನ ಲೇಖನವಾಗಿದ್ದು, ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ತಾಲ್ಲೂಕಿನ ಅರಗ ಎಂಬಲ್ಲಿ ದೊರೆತ ಕನ್ನಡ ಶಾಸನಗಳ ಮೇಲೆ ಅವಲಂಬಿಸಿದ ಲೇಖನವಾಗಿದೆ. ಶಾಸನಗಳಲ್ಲಿ ಉದಹರಿಸಿರುವ ಕೂಡಲಿ ಅಕ್ಷೋಭ್ಯತೀರ್ಥರ ಮಠದ ಪರಂಪರೆಗೆ ಸೇರಿದ ಮಠಾಧಿಪತಿಗಳೂ, ವಿಜಯದಾಸರ ಸಂಕಾಲದಲ್ಲಿ ಇರುವ ಆದ್ಯರ ಅಂಕಿತಗಳೆಗೂ ಸಾಮ್ಯವಿದೆಯೆಂಬುದನ್ನು ಮನಗಾಣಿಸಿದ್ದಾರೆ. ಹಾಗೂ ಇವರು ಆದ್ಯರಿರಬಹುದೆಂಬ ಅನುಮಾನವನ್ನೂ ವ್ಯಕ್ತಪಡಿಸಿದ್ದಾರೆ. ಆದರೆ ಹರಿದಾಸ ಪರಂಪರೆಯಲ್ಲಿ ಒಂದು ಕೃತಿ ರಚನೆ ಮಾಡಿರುವ ಯತಿಗಳು (ಶ್ರೀಪಾದರಾಜರು, ವ್ಯಾಸ ರಾಯರು, ವಾದಿರಾಜರು ಮುಂತಾದವರು) ತಮ್ಮ ಆಶ್ರಮನಾಮವನ್ನು ಅಂಕಿತವಾಗಿ ಬಳಸಿರುವುದು ಕಾಣುವುದಿಲ್ಲ. ಆದರಿಂದ ಕೃಷ್ಣರಾಯರ ಶಂಕೆ ಸಮಂಜಸವೆನ್ನಿಸು ವುದಿಲ್ಲ. ಹರಿದಾಸರ ಅಂಕಿತದ ಉತ್ತರಪದ, ದಾಸನೆಂದೇ ಬರುತ್ತದೆ. ಯತಿಗಳಾಗಲಿ, ಮಠಾಧೀಶರಾಗಲಿ ಹೀಗೆ 'ದಾಸ'ನೆಂಬ ಪದವನ್ನು ತಮ್ಮ ಅಂಕಿತನಾಮದೊಡನೆ ಒಕ್ಕೊಡಿಸಿಲ್ಲ. ಅದೂ ಕೃಷ್ಣರಾಯರ ಅನುಮಾನಕ್ಕೆ ಪುಷ್ಟಿಯಾಯಾಗಿದೆ. ನರಹರಿದೇವನೆಂಬಾತ ಸಂಲತೀರ್ಥರೆಂಬುವರಿಂದ ದತ್ತಿ ಪಡೆದ ಸಂದರ್ಭವನ್ನು ಈ ಶಾಸನವು ಉಲ್ಲೇಖಿಸುತ್ತದೆ. ಇಲ್ಲಿ ''ಆರಾಧ್ಯ'' ಎಂದು ವಾಚಕ ಪ್ರಯೋಗವಿದೆ. ಇದನ್ನು ''ಆದ್ಯ''ರ ದೆಂದು ಅನುಮಾನಿಸುವುದು ಸರಿಯಲ್ಲ. ಈ ಎಲ್ಲಾ ಕಾರಣ ಗಳಿಂದಾಗಿ ಕೃಷ್ಣರಾಯರ ಶಂಕೆ ಅನುಮಾನವಾಗಿಯೆ ಉಳಿಯುತ್ತದೆ. ಆದರೆ, ಕೃಷ್ಣ ರಾಯರು ತಮ್ಮ ಲೇಖನದಲ್ಲಿ ಪ್ರಸ್ತಾಪ ಮಾಡಿರುವ ವಿಠ್ಠಲನ ಉಪಾಸನೆ ಗಮನಾರ್ಹ. ಶ್ರೀಮಧ್ವಾಚಾರ್ಯರು ಶ್ರೀಕೃಷ್ಣನ ಆರಾಧಕರಾಗಿದ್ದು, ತಾವು ಸ್ಥಾಪಿಸಿದ ಇತರ ಮಠ ಗಳಾದ ಸಿರೂರು, ಪುತ್ತಿಗೆ, ಸುಬ್ರಹ್ಮಣ್ಯ ಮಠಗಳಲ್ಲಿ ವಿಠಲದೇವತೆಗಳನ್ನು ನೀಡಿರುವ ಅಂಶ, ವಿಠಲೋಪಾಸನೆಗೆ ದೊರೆತಿರುವ ಹಿರಿಮೆಯನ್ನು ವ್ಯಕ್ತಪಡಿಸುತ್ತದೆ. ವಿಠ್ಠಲನ ಉಪಾಸನೆ ಬಹು ಪ್ರಾಚೀನವಾದದ್ದು. ಶಾಸನಗಳಲ್ಲಿ ಕಂಡರಿಸಿರುವ ವೈಷ್ಣವ ವಿಠ್ಠಲಪ್ಪ, ರಂಡರಿಭಟ್ಟ, ಎಂಬ ಅಂಕಿತನಾಮಗಳು ಹಾಗೂ ಕಾಶಿ, ಗಯಾ, ಪ್ರಯಾಗ ಕ್ಷೇತ್ರ ಗಳಿಗೆ ಸಮನಾಗಿ ಪಂಡರಾಪುರವನ್ನು ಪವಿತ್ರಕ್ಷೇತ್ರ ಆಗಿ ಪರಿಗಣಿಸಿರುವ ವೃತ್ತಾಂತ, ಪಾಂಡುರಂಗನ ಭಕ್ತಿಯು ಹೇಗೆ ಹೆಚ್ಚು ಕೊಳ್ಳುತ್ತ ಮುನ್ನಡೆದಿದೆಯೆಂಬುದನ್ನು ದೃಢ ಪಡಿಸುತ್ತವೆ. ಪಂಢರಾಪುರದ ವಿಠಲನ ಮೂರ್ತಿ ಹಾಗೂ ಉಪಾಸನೆ ಕುರಿತು ಒಂದು ಸುಪರಿಯಕ್ತ ಲೇಖನವನ್ನು ಆರ್. ಎಸ್. ಪಂಚಮುಖಿಯವರು ಬರೆದಿದ್ದಾರೆ.[37] ಈ ಬಗಲ ಭಕ್ತಿಯೇ ಮುಂದೆ ಹರಿದಾಸಸಾಹಿತ್ಯಕ್ಕೆ ಸ್ಫೂರ್ತಿಯಾಗಿ ಪರಿಣಮಿಸಿತು. ಪಂಢರಾಪುರ, ತಿರುಪತಿ, ಶ್ರೀರಂಗದ ರಂಗನಾಥ, ಉಡುಪಿಯ ಶ್ರೀಕೃಷ್ಣ, ಹರಿ ದಾಸರಿಗೆ ಸ್ಫೂರ್ತಿ ಶಕ್ತಿಗಳು.

ಈವರೆವಿಗೆ ನಡೆಸಿದ ಸವಿಹಕ್ಷೆಯಿಂದ, ಕರ್ನಾಟಕ ಹರಿದಾಸ ಸಾಹಿತ್ಯದ ಬಗ್ಗೆ ಹಿ ಕೆಳಕಂಡಂತೆ ತೀರ್ಮಾನಿಸಬಹುದು.

1. ಅಚಲಾನಂದರು ಹರಿದಾಸ ಸಾಹಿತ್ಯದ ಆದ್ಯರಲ್ಲ: ಅವರ ಭಾಷೆ, ಧಾಟಿ, ಎಲ್ಲವೂ ಪುರಂದರದಾಸರ ಕಾಲಕ್ಕೆ ಅವರನ್ನು ಸಮೀಪದವರಾಗಿಸುತ್ತವೆ.[88]
2. ಆದ್ಯರೆಂಬ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿ ದೊರೆಯಬೇಕಷ್ಟೆ. ವಿಜಯದಾಸರ ಸುಳಾದಿಯಲ್ಲಿ ಇವರ ಬಗ್ಗೆ ಪ್ರಸ್ತಾಪ ಬಂದಿದ್ದು, ಕಪಟರಾಳ ಕೃಷ್ಣರಾಯರ ಲೇಖನ[89] ಉಪಯುಕ್ತ ಅಂಶಗಳನ್ನು ಒಳಗೊಂಡಿದ್ದರೂ, ಇವರು ಹರಿದಾಸ ಸಾಹಿತ್ಯದ ಆದ್ಯ ಪ್ರವರ್ತಕರೆಂದಾಗಲಿ, ಶ್ರೀಪಾದರಾಜರಿಗೂ ಮೊದಲು– ಅಥವಾ ನರಹರಿತೀರ್ಥರ ಅನಂತರ–ಇದ್ದವರೆಂದಾಗಲಿ ಹೇಳಲು ಬರುವಂತಿಲ್ಲ. ಈ ದೃಷ್ಟಿಯಿಂದ ನರಹರಿತೀರ್ಥರೇ ಹರಿದಾಸ ಸಾಹಿತ್ಯದ ಮೊದಲಿಗರು ಹಾಗೂ ಆದ್ಯಪ್ರವರ್ತಕರೆಂಬ ಆರ್. ಎಸ್. ಪಂಚಮುಖಿಯವರ ಅಭಿಮತ[90] ಈಗ ನಡೆದಿರುವ ಸಂಶೋಧನೆಗಳಿಂದ ಒಪ್ಪಿತ ಆಗುವುದಿಲ್ಲ. ಈ ಬಗ್ಗೆ ಇನ್ನೂ ಸಂಶೋಧನೆ ಅಗತ್ಯವಾಗಿದೆ.

ಈ ಪ್ರಶ್ನೆ ಬಹುಶಃ ವಿಜಯದಾಸರ ಕಾಲಕ್ಕೆ ಅಥವಾ ಅವರ ಅನಂತರದಲ್ಲೂ ಉದ್ಭವಿಸಿರುವ ಸಾಧ್ಯತೆಯಿದೆ. ಏಕೆಂದರೆ, ನರಹರಿತೀರ್ಥರೇ ದಾಸಸಾಹಿತ್ಯದ ಮೊದಲಿಗರಾಗಿದ್ದರೆ, ಈ ಕೆಳಗಣ ಶ್ಲೋಕದಲ್ಲಿ ಅವರ ಹೆಸರಿದ್ದೇ ಇರುತ್ತಿತ್ತು.

ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ ।
ನಮಃ ಶ್ರೀಪುರಂದರಾರ್ಯಾಯ ವಿಜಯಾರ್ಯಾಯತೇ ನಮಃ ॥

ಇದರಲ್ಲಿ ಮೊದಲ ನಮನ ಸಮರ್ಪಿತ ಆಗಿರುವುದು ಶ್ರೀಪಾದರಾಜರಿಗೆ. ಇಂಥ ಶ್ಲೋಕಕ್ಕೆ ಮಹತ್ವ ಹೆಚ್ಚಿಗೆ ನೀಡಬೇಕಾದ್ದಿಲ್ಲವೆಂದು ಪಂಚಮುಖಿಯವರ ಅಭಿಮತ.[91] ಆದರೆ, ಈಗಾಗಲೇ ನಾವು ಕಂಡಿರುವ ಹಾಗೆ ಗುರು ಮಹೀಪತಿರಾಯರೆಂಬ ದಾಸರು, ಮೋಲುಗಿರಿ ವಿಠಲದಾಸರು, ಹೇಳಿರುವಂತೆ ದಾಸಸಾಹಿತ್ಯದ ಸುಳಾದಿ, ಉಗಾಭೋಗ, ಕೀರ್ತನ ಪ್ರಕಾರಗಳಲ್ಲದೆ ದಂಡಕ ಪ್ರಕಾರದಲ್ಲಿಯೂ ಪ್ರಯೋಗ ನಡೆಸಿ, ಸಿದ್ಧಹಸ್ತರೆನಿಸಿ ನವರು ಶ್ರೀಪಾದರಾಜರೇ.[92] ಅವರ ಶಿಷ್ಯರಾಗಿದ್ದು, ಹರಿದಾಸರ ಒಂದು ಬಳಗವನ್ನೆ ಸಂಘಟಿಸಿದವರು ವ್ಯಾಸರಾಯರು. ಹರಿದಾಸ ಸಾಹಿತ್ಯದಲ್ಲಿ ಮುಖ್ಯವಾದದ್ದು ಎರಡು ಘಟ್ಟ ಅಥವಾ ಹಂತ ಮೊದಲಿನದು, ಶ್ರೀಪಾದರಾಜರಿಂದ ಶ್ರೀಕನಕದಾಸರತನಕ ೧೫೬೫–೧೬೦೦), ಎರಡನೆ ಘಟ್ಟ ಮಂತ್ರಾಲಯದ ಶ್ರೀರಾಘವೇಂದ್ರತೀರ್ಥರ ಬೃಂದಾವನ ಸ್ಫೂರ್ತಿಯಿಂದ ಪ್ರವೃದ್ಧಿಸಿದ್ದು. ೧೭ನೆಶ.ದಿಂದ ಇದರ ವ್ಯಾಪ್ತಿ. ಎರಡನೆ ಹಂತ ಮುಗಿವು, ಜಗನ್ನಾಥದಾಸರತನಕವೆಂದು ಹೇಳಬಹುದು. ಹರಿದಾಸರಿಗೆ ಮುಕುಟ ಪ್ರಾಯರು ಪುರಂದರದಾಸರು. ಅನಂತರ, ವಿಜಯನಗರ ಸಾಮ್ರಾಜ್ಯ ಅಳಿದ ನಂತರ, ಮಂತ್ರಾಲಯ ಕ್ಷೇತ್ರದ ಶ್ರೀರಾಘವೇಂದ್ರತೀರ್ಥರ ಬೃಂದಾವನದಿಂದ ಸ್ಫೂರ್ತಿ ಪಡೆದು ದಾಸಸಾಹಿತ್ಯದ ಎರಡನೆ ಹಂತವನ್ನು ಬೆಳಗಿಸಿದ ಪ್ರಮುಖರು ವಿಜಯದಾಸರು. ವಿಜಯರಾಯರು" ಎಂದೂ ಆತ್ತಣ ಜನ ಕರೆಯುವುದುಂಟು. ವಿಜಯರಾಯರಿಂದ

ಸ್ಫೂರ್ತಿ ಪಡೆದು ಹರಿದಾಸಸಾಹಿತ್ಯ ಸಮೃದ್ಧವಾಗಿಸಿದವರು ಅನೇಕ ಹರಿದಾಸರು. ಗೋಪಾಲದಾಸರು, ಜಗನ್ನಾಥದಾಸರು, ಕಮಲೇಶವಿಠಲಾಂಕಿತರು, ಶ್ರೀದವಿಠಲರು, ಪ್ರಾಣೇಶವಿಠಲರು, ಹೀಗೆ. ದಾಸಸಾಹಿತ್ಯ ಪ್ರಥಮ ಹಂತಕ್ಕೂ ದ್ವಿತೀಯ ಘಟಕ್ಕೂ ನಡುವೆ, ಉತ್ತರಕರ್ನಾಟಕದ ಕಾಖಂಡಿಕಿಯಿಂದ ಬಂದವರು ಮಹೀಪತಿದಾಸರು. ಇವರು ಎರಡುಘಟ್ಟಗಳ ನಡುವೆ ಒಂದು ಕೊಂಡಿಯಿದ್ದ ಹಾಗೆ. ಹರಿದಾಸಪಂಥ, ಸಂಪ್ರದಾಯ, ಹರಿದಾಸಸಾಹಿತ್ಯ, ಹೀಗೆ ಬೆಳೆದು ಸಮೃದ್ಧ ಆಗಿ, ಶ್ರೀಪಾದರಾಜರು ವ್ಯಾಸರಾಯರ ಗುರುಶಿಷ್ಯ ಸಂಬಂಧದ ಮೂಲಕ ಭಕ್ತಿ ಸಾಹಿತ್ಯಕ್ಕೊಂದು ವಿಶೇಷ ಕೊಡುಗೆ ನೀಡಿತು. ಇದಕ್ಕೆ ಕಾಲವೂ ಸಹಕರಿಸಿತೆನ್ನಬೇಕು. ಮಧ್ವಚಾರ್ಯರು ದ್ವೈತತತ್ವ ಸ್ಥಾಪಿಸಿ, ಎರಡು ಶತಮಾನ ಕಳೆದಿತ್ತು. ಆಚಾರ್ಯರ ಶಿಷ್ಯ ಪರಂಪರೆಯಲ್ಲಿ ಬಂದ ಮಠಾಧೀಶರು, ಸಂಸ್ಕೃತದಲ್ಲಿ ಪರಿಣತರಾಗಿ, ದ್ವೈತತತ್ವ ಪ್ರತಿಪಾದಕ ಹಾಗೂ ಅದ್ವೈತ ಖಂಡಿಸುವ ಮಂಡನ-ಖಂಡನ ಗ್ರಂಥಗಳನ್ನು ರಚಿಸಿ ದ್ವೈತ ಶಾಖೆಯನ್ನು ಪುಷ್ಟಿಗೊಳಿಸಿದ್ದರು. ಆದರೆ ಒಂದು ವಿಚಾರವೆಂದರೆ, ಆತ್ಮಜ್ಞಾನ, ವೇದಾಂತತತ್ವ ಬೋಧೆಗಾಗಿ ಸಂಸ್ಕೃತವಲ್ಲದೆ (ದೇಶಭಾಷೆ) ಪ್ರಾಕೃತ ಬಳಕೆ ಸಲ್ಲದೆಂಬ ಭಾವನೆ ಬಂದಿತು. ಹಾಗೂ ವೇದಾಂತ, ಆಧ್ಯಾತ್ಮ ವಿದ್ವಾಂಸರಿಗೆ ಮೀಸಲೆಂಬ ಭಾವನೆ ಬಲಿತಿದ್ದ, ಸಂದರ್ಭದಲ್ಲಿ "ಕನ್ನಡವನ್ನು ಅನಾದರಣೆ ಮಾಡದೆ, ಕನ್ನಡವನ್ನು ಮೈಲಿಗೆಯ ಮಾತೆಂದೆನ್ನಗಳದೆ ಈ ಭಾಷೆಯಲ್ಲಿಯೇ ಪರಮಾತ್ಮನನ್ನು ಕೀರ್ತಿಸಿದರು, ಲೋಕಕ್ಕೆ ಉಪದೇಶವನ್ನಿತ್ತ"[93] ಸಂಘಟಿತ ಪಂಥ ಹರಿದಾಸ ಪಂಥ. ಸಾಮಾನ್ಯರ ಸಮುದಾಯ ಆದ ಸಮಾಜಹಿತ, ಸಂಘಟನೆ, ಹರಿಭಕ್ತಿ, ಪಾರಮ್ಯ ಪ್ರತಿಪಾದನೆ ಎಲ್ಲವೂ ನೆರವೇರಲು ಸುಲಭ ಸಾಧನ ದೇಶ ಭಾಷೆಯ ಸಮರ್ಥ ಬಳಕೆ ಎಂದರಿತರು ಶ್ರೀಪಾದರಾಜರು. ಇದಲ್ಲದೆ, ಶ್ರೀಪಾದರಾಜರು ತಮ್ಮ ಗುರುವರ್ಯರಾದ ಶ್ರೀಸ್ವರ್ಣತೀರ್ಥರರ ಬಳಿಯಲ್ಲಿ ಇದ್ದದ್ದು ತಮಿಳು ದೇಶದ ಶ್ರೀರಂಗದಲ್ಲಿ. ಶ್ರೀರಂಗಕ್ಷೇತ್ರವೊ ಆಗ್ಲೆ ಪ್ರಸಿದ್ಧ ದ್ರಾವಿಡ ದಿವ್ಯದೇಶಗಳಲ್ಲಿ ಒಂದೆನಿಸಿ ಪ್ರಖ್ಯಾತ ಆಗಿದ್ದ ಪ್ರಾಚೀನ ತೀರ್ಥಕ್ಷೇತ್ರ. 'ಭಕ್ತಿ-ಜ್ಞಾನವೇ ಮೋಕ್ಷದಾಯಕ'ವೆಂದು ಪ್ರತಿಪಾದಿಸಿ, "ನಾಲಾಯಿರ ದಿವ್ಯಪ್ರಬಂಧಂ" (ತಿರುವಾಯ್ಮೊಟಿ) ಎಂಬ ನಾಲ್ಕು ಸಾವಿರ ಸಾಲಿನ ತಮಿಳು ಪಾಶುರಂಗಳನ್ನು ಭಕ್ತಿಯಿಂದ ಹಾಡಿದ ನಮ್ಮಾಳ್ವಾರ್ ಮಂತ್ರಿತರ ಆಳ್ವಾರ್ ಭಕ್ತರ ಪುಣ್ಯಕ್ಷೇತ್ರವದು. ಆ ಭಕ್ತಿಯ ಪ್ರಬಂಧಗಳ ಪ್ರಭಾವ ಅಲ್ಲಿ ಅವರು ಸ್ಥಳೀಯ ಭಾಷೆಯಾದ ತಮಿಳನ್ನು ಸಮೂಹ ಸಂಪರ್ಕ ಸಾಧನ ಆಗಿ ಬಳಸಿದ ರೀತಿ, ಶ್ರೀಹರಿಭಕ್ತಿಯ ಉತ್ಕರ್ಷ ಮನೋಧರ್ಮ ಶ್ರೀಪಾದರಾಜರ ಮನಸ್ಸನ್ನು ಸೆರೆಹಿಡಿದಿರಬೇಕು. 'ಜನತೆಯಲ್ಲಿ ಭಕ್ತಿ ಸಂವರ್ಧನೆಗೆ ಮಾತೃಭಾಷೆ ಎಂತಹ ಉತ್ತಮ ಮಾಧ್ಯಮವೆಂದು ಮನವರಿಕೆ ಆಗಿರಬೇಕು.'[94] ಈ ವೇಳೆಗಾಗಲೇ ಹನ್ನೆರಡನೆ ಶತಮಾನದಲ್ಲಿ ಬೆಳಗಿ, ಹೊಸ ಕ್ರಾಂತಿಯನ್ನೆ ತಂದ ಅನುಭವ ಮಂಟಪದ ಶಿವಶರಣರ ವಚನ, ಕನ್ನಡ ದೇಸಿಯ ಸಹಜ ಬಳಕೆ, ಸಮಾಜವನ್ನು ಅವರು ಸಂಘಟಿಸಲು ಪ್ರಯತ್ನಿಸಿದ್ದು, ಎಲ್ಲವೂ ಮೂಡಣಬಾಗಿಲಲ್ಲಿ (ಮಂಡಲಬಾಗಿಲು) ನೆಲೆನಿಂತ ಶ್ರೀಪಾದರಾಜರಿಗೆ ಸಹಜವಾಗಿಯೆ

ಮನದಟ್ಟಾಗಿರಲು ಸಾಧ್ಯ. ಅದ್ವೈತ ಖಂಡನೆ, ವಚನ ಚಳುವಳಿಯ ಪ್ರಭಾವದಿಂದ ಹೆಚ್ಚಿದ ಶಿವಭಕ್ತಿಯುತೆಯೆ ಹರಿಪಾರಮ್ಯ ಪ್ರತಿಪಾದಿಸುವ ಹಂಬಲ, ತಮಿಳುನಾಡಿನ ಆಳ್ವಾರ್ ಭಕ್ತಿಯ ಗೀತೆಗಳು, ಮಧ್ವಾಚಾರ್ಯರ ದ್ವಾದಶಸ್ತೋತ್ರದ ಭಕ್ತಿಯ ಸಾಲುಗಳು, ಇವೆಲ್ಲ ಹದವಾಗಿ ಬೆರತು ಶ್ರೀಪಾದರಾಜರಲ್ಲಿ ಹರಿದಾಸಸಾಹಿತ್ಯ ಬೆಳೆಸುವ ಚೈತನ್ಯಕಾರಕ, ಪ್ರೇರಕ ಅಂಶ ಆಗಿದ್ದವು. ಪೂಜೆಯ ಸಮಯದಲ್ಲಿ ತಮ್ಮ ಆರಾಧ್ಯ ದೈವಕ್ಕೆ ಭಕ್ತಿಯ ಆರ್ತಭಾವ, ಪ್ರೇಮ, ವಾತ್ಸಲ್ಯ, ಮಾಹಾತ್ಮ್ಯಜ್ಞಾನ, "ಸುದೃಢ ಸ್ನೇಹ"ಗಳಿಂದ ಕನ್ನಡದಲ್ಲಿ ಭಕ್ತಿಭರಿತ ಕೀರ್ತನೆಗಳನ್ನು ರಚಿಸಿ, ಕಾಲಿಗೆ ಗೆಜ್ಜೆಕಟ್ಟಿ, ಮೈಮರೆದು ಕುಣಿದು ನವೀನವ ಸಂಪ್ರದಾಯಕ್ಕೆ ಆರಂಭ ಮಾಡಿದವರೇ ಶ್ರೀಪಾದರಾಜರು. ಇದೇ ಒಂದು ಗುಂಪಾಯಿತು, ಒಂದು ಪಂಥವಾಯಿತು, ಒಂದು ಭಕ್ತಿಯ ಆಂದೋಲನವೆ ನಡೆಯಿತು. ಯಾವುದೋ ಒಂದು ಘಟ್ಟದಲ್ಲಿ ಮೊಳೆತ ಹರಿದಾಸ ಆಂದೋಲನದ ಗತಿ, (ಅದಿನ್ನೂ ನಿಗೂಢವಾಗೇ ಉಳಿದಿದೆ) ಶ್ರೀಪಾದರಾಜರ ಕಾಲಕ್ಕಾಗಲೆ ಒಂದು ನಿರ್ದಿಷ್ಟ ಆದ ಸ್ವರ ತಲುಪಿದ್ದಿತೆನ್ನಲು ಶ್ರೀಪಾದರಾಜರ ಕೃತಿಗಳೇ ನಿದರ್ಶನ. ಅಲ್ಲಿರುವ ಪರಿಪೂರ್ಣತೆಯೆಡೆಗೆ ಸಾಗುವ ನಿರ್ದಿಷ್ಟತೆ, ಸಾಹಿತ್ಯ ಸಂಪದವೆ ಉದಾಹರಣೆ. ಈ ಆಂದೋಲನ ೧೫ನೆ ಶತಮಾನದ ವೇಳೆಗೆ ಸ್ವಲ್ಪ ಮಂಕಾಗಿ, ಮತ್ತೆ ೧೭ನೇ ಶತಮಾನದಿಂದ ಮಂತ್ರಾಲಯದ ಶ್ರೀರಾಘವೇಂದ್ರಸ್ವಾಮಿಗಳವರಿಂದ ಪುನಶ್ಚೇತನಗೊಂಡು, ಹದಿನೆಂಟನೆ ಶತಮಾನದವರೆವಿಗೂ ಒಂದು ಹಂತ ತಲುಪಿತು. ಅನಂತರದ್ದು ಹಾಗೆಯೆ ನಡೆದು ಬಂದಿದೆಯಷ್ಟೆ. ಆಂದೋಲನದಲ್ಲಿ ಇರುವ, ಇರಬೇಕಾದ ಆಂದೋಲನ ಪ್ರವೃತ್ತಿ ಕ್ರಿಯಾಶೀಲ ವ್ಯಕ್ತಿತ್ವದ ಕೊರೆ ಕಾಣುತ್ತ, ಬರಬರುತ್ತ ಚರ್ವಿತ ಚರ್ವಣ ಆಗಿಬಿಟ್ಟಾಗ, ಆ ಆಂದೋಲನದ ಗತಿ ಕಡಮೆಯಾಗುತ್ತದೆ. ಹರಿದಾಸ ಆಂದೋಲನಕ್ಕೂ ಹೀಗೆಯೆ ಆದದ್ದು.

ಶ್ರೀಪಾದರಾಜರು ಪೂಜೆ ಸಮಯದಲ್ಲಿ ಕೀರ್ತನ ಕಾರ್ಯಕ್ರಮ ಅಳವಡಿಸಿ ತಂದದ್ದು ಹರಿದಾಸಪಂಥವೆ ಆಗಲಾಯಿತೆಂದು ಹೇಳಿದೆ. ಅವರ ಆ ಪ್ರಯತ್ನ ಎಷ್ಟು ಚೆನ್ನಾಗಿ ಸಾಫಲ್ಯ ಪಡೆಯಿತೆನ್ನಲು ಅವರದ್ದೆ ರಸವತ್ಪಾದ ಕೃತಿಗಳು ಹಾಗೂ ಕೆಲವೇ ದಶಕಗಳಲ್ಲಿ ಕಂಡು ಬಂದಿರುವ ಶಿಷ್ಯರಾದ ವ್ಯಾಸರಾಯರ, ಪ್ರಶಿಷ್ಯರಾದ ಪುರಂದರರ, ಕನಕದಾಸರ, ವಾದಿರಾಜರ, ಅನೇಕ ಕೃತಿಗಳೇ ನಿದರ್ಶನ. ಗುರುವಿಗೆ ಸರಿಯಾದ ಶಿಷ್ಯರು. ಅದೇ ಪರಂಪರೆ ಮುಂದುವರಿದು, ಹರಿದಾಸ ತನ್ನದೆ ಆದ ಸ್ವಂತಿಕೆ, ವಿಶಿಷ್ಟತೆಗಳಿಂದ ಬೆಳಗತೊಡಗಿತು. ಈ ಎಲ್ಲ ಕಾರಣಗಳಿಂದ, ಡಾ. ಕೆ. ಎಂ. ಕೃಷ್ಣರಾಯರ ಆಕ್ಷೇಪಣೆಗಳನ್ನು ನಾವು ಪೂರ್ಣವಾಗಿ ಒಪ್ಪದಿದ್ದರೂ, ನರಹರಿತೀರ್ಥರು ಹರಿದಾಸಸಾಹಿತ್ಯದ ಮೊದಲಿಗರಲ್ಲ ಎಂದು ಖಚಿತವಾಗಿ ಹೇಳಲು ಇನ್ನೂ ಸಂಶೋಧನೆ ಈ ದಿಸೆಯಲ್ಲಿ ಆಗತ್ಯ ಎಂದಷ್ಟೆ ಹೇಳಬೇಕಾಗುತ್ತದೆ. ಹಾಗೂ ಮೇಲೆ ತಿಳಿಸಿದ ಶ್ಲೋಕ, ಹಾಗೂ ಹಿರಿಯರ ಸ್ಮರಣೆಗೆ ಪಾತ್ರರಾದ ಶ್ರೀಪಾದರಾಜರೇ ಹರಿದಾಸ

ಸಾಹಿತ್ಯದ ಆದ್ಯ ಪ್ರವರ್ತಕರೆಂದೂ, ಹರಿದಾಸ ಸಾಹಿತ್ಯದ ಉಗಮಕ್ಕೆ ಸ್ಫೂರ್ತಿ ಚೇತನರೆಂದೂ ಹೇಳಬಹುದು. ಹಾಗೆ ಹೇಳುವಲ್ಲಿ ಆಧಾರಗಳನ್ನೂ ತಿಳಿಸಿಯಾಗಿದೆ.[೨೫]

**ಹರಿದಾಸ-ಹರಿಭಕ್ತಿ**

ಹರಿದಾಸಪಂಥವೆಂದೊಡನೆಯೆ ಆದರೊಂದಿಗೇ ಹಾಸಂಹೊಕ್ಕಾಗಿರುವುದು ಭಕ್ತಿ : ಉಡುಪಿ, ತಿರುಪತಿ, ಪಂಡರಾಪುರ ಕ್ಷೇತ್ರಗಳ ಕೃಷ್ಣ, ಶ್ರೀನಿವಾಸ ಹಾಗೂ ವಿಠಲ (ವಿಠೋಬ, ಪಾಂಡುರಂಗ)ನಲ್ಲಿ ಹರಿದಾಸರಿಗಿದ್ದ ಅಪರಿಮಿತ ಭಕ್ತಿ. ವಿಠಲನ ಉಪಾಸನೆ, ಹರಿದಾಸ ಭಕ್ತಿಪಂಥಕ್ಕೆ ಶ್ರೀರಕ್ಷೆ ಹಾಗೂ ವಿಠಲನ ಪ್ರಾಮುಖ್ಯ ಹೆಚ್ಚಿದ್ದೂ ಹರಿದಾಸರ ತೋರಿದ ಅವಿಂತ ಭಕ್ತಿಯಿಂದಾಗಿ ಎಂದರೆ ಉತ್ಪ್ರೇಕ್ಷೆಯಲ್ಲ. ದಾಸರು ವಿಠಲನಿಗಾಗಿ ಹಂಬಲಿಸಿ ಅವನೊಲುಮೆಗಾಗಿ ಕಾತರಿಸಿದಂತೆಯೆ ಅವನೂ ದಾಸ ರೆದುರು ತನ್ನ ಲೀಲಾ ವಿಭೂತಿಯನ್ನು ಮೆರೆದ ಐತಿಹ್ಯಗಳು ಅದೆಷ್ಟೋ. ಅಚಲಾನಂದದಾಸರಂತೂ ವಿಠ್ಠಲನನ್ನು ಅನವರತ ಉಪಾಸನೆ ಮಾಡಿದವರು. ಭಾಗವತ ಧರ್ಮದ ಅನುಯಾಯಿಗಳು ಹಾಗೂ ಈಗಲೂ ಆ ಸಂತತಿಯವರು ವಿಠಲನೆಂದೆ ತಮ್ಮ ಮಕ್ಕಳಿಗೆ ಹೆಸರಿಡುವ ತನಕ ಈ ಸಂಪ್ರದಾಯ ಇಂದೂ ಮುಂದುವರಿದುಕೊಂಡು ಬಂದಿದೆ. ಅಚಲಾನಂದರಾದ ನಂತರ ೧೩ನೆ ಶತಮಾನ ದಲ್ಲಿ ಬಂದ ಮಧ್ವಾಚಾರ್ಯರಾದರೊ ವಿಠಲನನ್ನು ತಮ್ಮ ಶಿಷ್ಯರಿಗೆ ಪೂಜಾ ಮೂರ್ತಿಯಾಗಿತ್ತು ಈ ಉಪಾಸನೆ ಮುಂದುವರಿಸಲು ಆದೇಶ ನೀಡಿದರು. ಆದ್ಯರ ವೃತ್ತಾಂತವನ್ನು ಮೊದಲೇ ಹೇಳಿದೆ. 'ಕಡೆಯದಾಗಿ ಶ್ರೀಪಾದರಾಜರಿಗೆ ಪಂಢರಾ ಪುರದ ಭೀಮಾನದಿಯ ತೀರದಲ್ಲಿ ದೊರೆತ ಸಂಪುಟದಲ್ಲಿ ವಿಠಲನ ದರ್ಶನವಾಗಿ ಅದನ್ನ ಅವರು "ರಂಗವಿಠಲ"ನೆಂಬ ಅಂಕಿತವಾಗಿ ಸ್ವೀಕರಿಸಿದ್ದು ಪಂಡರಾಪುರದ ವಿಠಲನ ಮಹತಿಯನ್ನು ಇನ್ನೂ ಹೆಚ್ಚಿಸುತ್ತದೆ. ಕ್ರಿ.ಶ. ೬ನೆ ಶತಮಾನದಿಂದ ಬೆಳೆದು ಬಂದ ಈ ವಿಠಲಭಕ್ತಿ ಹದಿನೈದನೆಯ ಶತಮಾನದ ವೇಳೆಗೆ-ಅಂದರೆ ಶ್ರೀಪಾದರಾಜರು ಹರಿ ದಾಸಸಾಹಿತ್ಯ ರಚನೆಗೆ ತೊಡಗುವ ವೇಳೆಗೆ-ಈ ಆರುನೂರು ವರ್ಷಗಳಲ್ಲಿ ಮೊಳಕೆದೋರಿ ಕುಡಿಯೊಡೆದು, ಪಲ್ಲವಿಸಿ ಹೂವು, ಫಲಬಿಟ್ಟಿತೆನ್ನಬಹುದು."[೨೬] ಹಾಗೂ ವಿಠಲನ ಅಂಕಿತ ಸಾಮಾನ್ಯವಾಗಿ ಎಲ್ಲ ಹರಿದಾಸರ ಹೆಸರಿನ ಉತ್ತರ ಪದವಾಗಿ ಉಳಿದು, ಹರಿ ದಾಸ ಸಂಪ್ರದಾಯದ ಅವಿಭಾಜ್ಯ ಅಂಗವೆ ಆಯಿತು. ಸ್ವತಃ ಶ್ರೀಪಾದರಾಜರೇ ಪೂಜೆಯ ಸಮಯದಲ್ಲಿ ಕೀರ್ತನ ಸೇವೆಯನ್ನು ಶ್ರೀಹರಿಗೆ ಸಲ್ಲಿಸಲೋಸುಗ, ಗೆಜ್ಜೆ ಕಟ್ಟಿ, ತಾಳ ತಂಬೂರಿಗಳೊಂದಿಗೆ ನರ್ತಿಸುತ್ತ ಭಗವಂತನನ್ನು ಸ್ತುತಿಸುತ್ತಿದ್ದರೆಂದು ತಿಳಿದು ಬರುತ್ತದೆ. ಇದೂ ಒಂದು ಭಕ್ತನ ಭಕ್ತಿಯಂತ ಸೇವೆ. ಆದರೆ, ಹರಿದಾಸ ಪಂಥ ಇದರಿಂದ ಪಲ್ಲವಿಸಿ ಬೆಳೆದು, ದ್ವೈತತತ್ತ್ವ ಪ್ರಸಾರವನ್ನೆ ತನ್ನ ಉದ್ದೇಶ ಆಗಿಸಿಕೊಂಡಿತು. ಇಲ್ಲಿ ಉನ್ನತ ಜಾತಿಯವರೆ ಹೆಚ್ಚು ಸೇರಿಕೊಂಡರು. ಕ್ರಮ ಕ್ರಮವಾಗಿ, ಶ್ರೀ ಮಧ್ವಾ ಚಾರ್ಯರ ದ್ವೈತ ಸಿದ್ಧಾಂತ ಸಾರುವ ಸಾಧನವೆ ಹರಿದಾಸಸಾಹಿತ್ಯವಾಯಿತೆಂದರೆ

ತಪ್ಪಾಗುವುದಿಲ್ಲ. ಇದನ್ನು ನಾವು ಪ್ರಮುಖವಾಗಿ ವಿಜಯರಾಯರಿಂದ ಕಾಣುತ್ತೇವೆ. ಹರಿದಾಸಸಾಹಿತ್ಯದ ದಿಗಂತ ಹೀಗೆ ಬಿತ್ತರಗೊಂಡಿತು. ಕೇವಲ ಪೂಜಾ ಸಮಯದ ಕೀರ್ತನ ಆಗಲಿ, ದ್ವೈತ ಸಿದ್ಧಾಂತದ "ಮಣಿದರ್ಪಣವನ್ನಿನಿಕೊಂಡಿತು", 'ದೇವಭಾಷೆ' ಎಂದೆಲ್ಲ ಜರಿದು ಸಂಸ್ಕೃತದಲ್ಲಿ ಅಡಕವಾಗಿಟ್ಟಿದ್ದ ರಾಮಾಯಣ, ಭಾರತ, ಭಾಗವತ, ವೇದೋಪನಿಷತ್ತು, ಪಾಂಚರಾತ್ರಾಗಮ, ತಂತ್ರ, ಭಕ್ತಿ, ಎಲ್ಲವೂ ಹರಿದಾಸರ ತಿಳಿಗನ್ನಡದ ನುಡಿಗಳಲ್ಲಿ ಸೇರಿ, ಎಲ್ಲರ ಮನಸ್ಸನ್ನೂ ರಂಜಿಸಿ, ಬೆಳಗಿಸಲು ಪ್ರಯತ್ನಿಸಿತು. ಹರಿದಾಸ ದೀಕ್ಷೆಯನ್ನು ಕೈಗೊಳ್ಳದ ಯತಿಗಳಿದ್ದಂತೆ ದೀಕ್ಷೆಸ್ವೀಕರಿಸಿದ ಹರಿದಾಸರಂತೂ, ಸಮಾಜ ಸುಧಾರಣೆಗಾಗಿ ಸಹ ಅವಿರತವಾಗಿ ಶ್ರಮಿಸಿದರು.

'ಶ್ರೀಪಾದರಾಯರು ಈ ಪುಣ್ಯಕಾರ್ಯಕ್ಕೆ ಶ್ರೀಕಾರ ಹಾಡಿದವರು' ಪೂಜಾಕಾಲಕ್ಕೆ ಭಾಗವತದ ಮುಖದಿಂದ ಕನ್ನಡದ "ದೇವರನಾಮ"ಗಳನ್ನು ಹಾಡಿಸುವ ಸಂಪ್ರದಾಯ ಮೊದಲಿಗೆ ಬಳಕೆ ತಂದವರೇ ಅವರು. ಈ ಉದ್ದೇಶಕ್ಕಾಗಿಯೆ ಶ್ರೀಪಾದರಾಜರು ಭ್ರಮರಗೀತೆ, ವೇಣುಗೀತೆ, ಗೋಪೀಗೀತೆಗಳನ್ನು ರಚಿಸಿದ್ದು. ಇವುಗಳಲ್ಲಿ ಅಲ್ಲದೆ ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತನಾಮ, ದಂಡಕ ಮುಂತಾದ ಎಲ್ಲ ಸಾಹಿತ್ಯ ಪ್ರಕಾರಗಳಲ್ಲೂ ಕೃತಿ ರಚನೆ ಮಾಡಿದ ಮೊದಲಿಗರಾದರು. ಈ ಹರಿದಾಸ ಪರಂಪರೆಯನ್ನು ಪಂಥ ಆಗಿಸಿದವರು ಶ್ರೀಪಾದರಾಜರ ಶಿಷ್ಯರಾದ ಶ್ರೀವ್ಯಾಸರಾಯರು. ಹರಿಭಕ್ತಿ ಪ್ರಚಾರವೇ ಅವರ ಪ್ರಮುಖ ಉದ್ದೇಶ. ಇದರ ಸಲುವಾಗಿ ಪುರಂದರದಾಸ, ಕನಕರಂಥ ಅನೇಕ ಹರಿದಾಸರುಗಳನ್ನು ಸಂಘಟಿಸಿ, ಕಾರ್ಯೋನ್ಮುಖವಾಗಿಸುವಂತೆ ಪ್ರೇರಿಸಿದರು ವ್ಯಾಸರಾಯರು. ಪುರಂದರದಾಸರು ಹಿಡಿದ ತಂಬೂರಿ, ಮೀಟಿದ ತಂತಿ, ಸಮಾಜದ ಅನೇಕ ಮುಖ ದರ್ಶನವಾಗಿಸಿದಂತೆಯೆ, ಹರಿದಾಸ ವೃಂದವೂ ಬೆಳೆಯಿತು. ಹರಿದಾಸರು ತಮ್ಮ ಸ್ವಂತ ಅನುಭವದಿಂದ ಮಧ್ವಸಿದ್ಧಾಂತದ ಅನೇಕ ಪ್ರಮೇಯಗಳನ್ನು ಕೀರ್ತನೆಗಳ ಮೂಲಕ ತಿಳಿಗನ್ನಡದಲ್ಲಿ ಹೇಳುವ ಕಾಯಕದಲ್ಲಿ ತೊಡಗಿದರು. "ಸುಧಾ ಓದಿ ಪದ ಹೇಳು" ಎಂಬ ಮಟ್ಟಿಗೆ ಹರಿದಾಸರ ರಚನೆಗಳು ಬರುತ್ತ ತುಂಬ ಗಹನವೇ ಆದವು, ಅರ್ಥಗರ್ಭಿತವಾದವು. ಹರಿದಾಸ ಸಾಹಿತ್ಯದ ಉಗಮದ ಕುರಿತ ಚರ್ಚೆಯನ್ನು ನಾವು ಈವರೆವಿಗೆ ನಡೆಸಿದ ವಿಶ್ಲೇಷಣೆಯಿಂದ, ನರಹರಿತೀರ್ಥರನ್ನು ಹರಿದಾಸ ಸಾಹಿತ್ಯದ ಮೂಲ ಪ್ರವರ್ತಕರೆಂದು ಭಾವಿಸಲು ಸಾಕಷ್ಟು ಆಧಾರ, ಪುಷ್ಟಿ (ಕೃತಿ ರಚನೆಯ ಬಾಹುಳ್ಯ) ಇಲ್ಲದ್ದರಿಂದ, ಹರಿದಾಸ ಪಂಥ ಹರಿದಾಸ ವೃಂದವನ್ನು ಸಂಘಟಿಸುವ ಕಾರ್ಯಕ್ಕೆ "ಶ್ರೀ"ಕಾರದ ಮುದ್ರೆಯೊತ್ತಿದ ಶ್ರೀಪಾದರಾಜನನ್ನೇ ಆದ್ಯ ಪ್ರವರ್ತಕರೆಂದು ಪರಿಗಣಿಸಬೇಕಾಗಿದೆ.

ಹರಿದಾಸ ಸಾಹಿತ್ಯದ ಅಧ್ಯಯನವನ್ನು 'ಆಂದೋಲನ'ವಾಗಿ ಸ್ವೀಕರಿಸಿ, ಅಧ್ಯಯನ ನಡೆಸುವಲ್ಲಿ ಅದು ಬೆಳೆದು ಬಂದ ನಿಡಿದಾದ ಹಾದಿಯನ್ನು ಹಂತ ಹಂತವಾಗಿ ಗುರುತಿಸಿಕೊಳ್ಳುವುದು, ಅಧ್ಯಯನವನ್ನು ಸುಗಮವಾಗಿಸುತ್ತದೆ. ಹಾಗೂ ಆಯಾ ಹಂತಗಳಲ್ಲಿ ನಡೆದ ಸಾಧನೆಯ ಆಳವು, ಮಹತಿ, ಬೃಹತಿಗಳೂ ಅರಿವಾಗುತ್ತವೆ. ಈ

ದೃಷ್ಟಿಯಿಂದ ನಾವು ಆರ್. ಎಸ್. ಪಂಚಮುಖಿಯವರು ವಿಂಗಡಿಸಿರುವ ವಿಧಾನವನ್ನು ಅನುಸರಿಸಬಹುದು. ಹದಿಮೂರನೇ ಶತಮಾನದಲ್ಲಿ ವೈಷ್ಣವ ಭಕ್ತಿಪಂಥ ಅಥವಾ ಕರ್ಣಾಟಕ ಹರಿದಾಸಕೂಟ ಉಗಮಕಂಡಿತ್ತು. ದಾಸಕೂಟದ ಸಾಹಿತ್ಯ ತನ್ನ ಶೈಲಿ, ವಸ್ತು ಪ್ರತಿಪಾದನೆ, ಇತ್ಯಾದಿಗಳಲ್ಲಿ ನಾಲ್ಕು ಪ್ರಮುಖ ಘಟನೆಗಳನ್ನು ಪಡೆದಿದೆ :

1. ೧೩ನೆ ಶತಮಾನ : ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ನರಹರಿತೀರ್ಥರ ಕಾಲ.

2. ೧೫-೧೬ನೇ ಶತಮಾನ : ಶ್ರೀಪಾದರಾಜ, ಶ್ರೀವ್ಯಾಸತೀರ್ಥ(ಶ್ರೀವ್ಯಾಸರಾಯರು), ವಾದಿರಾಜ, ವಿಜಯೀಂದ್ರತೀರ್ಥರು, ಪುರಂದರದಾಸರು, ಕನಕದಾಸರು ಇತ್ಯಾದಿ ಹರಿದಾಸರ ಯುಗ.

3. ೧೭ನೆ ಶತಮಾನ : ಮಂತ್ರಾಲಯದ ಶ್ರೀರಾಘವೇಂದ್ರರು ಹಾಗೂ ವೇದೇಶ ತೀರ್ಥರು.

4. ೧೮-೧೯ನೇ ಶತಮಾನ : ಶ್ರೀ ವಿಜಯದಾಸರು, ಗೋಪಾಲದಾಸರು, ಜಗನ್ನಾಥ ದಾಸರು, ಪ್ರಸನ್ನ ವೆಂಕಟದಾಸರು ಈ ಯುಗ ಹರಿದಾಸ ಸಾಹಿತ್ಯದ ದ್ವಿತೀಯ ಘಟ್ಟ, ಕನ್ನಡದಲ್ಲಿ ಉನ್ನತ ಮಟ್ಟದ ತಾತ್ವಿಕ ಜ್ಞಾನ ಗರ್ಭಿತ ಆದ ಕೃತಿಗಳ ರಚನೆ ಆದ ಕಾಲ.

ಮೊದಲನೆಯದು : ಹರಿದಾಸಕೂಟ ಸೃಜನೆಯ ಕಾಲ.
ಎರಡನೆಯದು : ಮಾರ್ಗ ಕಾವ್ಯದಂಥ ಹರಿದಾಸ ಸಾಹಿತ್ಯ ಬಂದ ಕಾಲ.
ಮೂರನೆಯದು : ಪುನರುಜ್ಜೀವನ ಯುಗ.
ನಾಲ್ಕನೆಯದು : ತಾತ್ವಿಕ, ದಾರ್ಶನಿಕರ ಕಾಲ.

ಇವುಗಳನ್ನು ದಾಸಕೂಟದ ಸಾಹಿತ್ಯದ ಯುಗಗಳೆನ್ನಬಹುದು.

ಮೊದಲ ಹಂತ, ಹರಿದಾಸಸಾಹಿತ್ಯದ ಸೃಜನೆಯ ಕಾಲವೆನ್ನಬಹುದು. ಮಧ್ವಾಚಾರ್ಯರು ಭಾವಪರವಶತೆಯಿಂದ ಹಾಡಿದ "ದ್ವಾದಶಸ್ತೋತ್ರ" ಹರಿಕೀರ್ತನೆಯೆ ಆದರೂ ನರಹರಿತೀರ್ಥರ ಕನ್ನಡದ ಬಳಿಕೆ, ದಾಸಸಾಹಿತ್ಯ ಯುಗದ ಆರಂಭಕಾಲ ವೆನಿಸುತ್ತದೆ. ಹದಿನೈದು-ಹದಿನಾರನೇ ಶತಕ, ಭಾರತದಲ್ಲಿ ಭಕ್ತಿಪರಂಪರೆ, ವಿಷ್ಣುಭಕ್ತಿ, ಮಧ್ವಾಚಾರ್ಯರ ಅದ್ಭುತ ತರ್ಕದಿಂದ ಸ್ಥಾಪಿತ ಆದ ದ್ವೈತ ಸಿದ್ಧಾಂತ ಹರಿ ಸರ್ವೋತ್ತಮತತ್ವ, ತನ್ನ ಅಚ್ಚಳಿಯದ ಪ್ರಭಾವವನ್ನು ಎಲ್ಲೆಡೆ ಬೀರಿತು, ವಲ್ಲಭ

ಚಾರ್ಯರು, ಉತ್ತರದ ಅಸ್ಸಾಂ, ಬಂಗಾಳದ ಶ್ರೀಚೈತನ್ಯ, ಮಹಾರಾಷ್ಟ್ರದ ಸಂತರಾದ ಜ್ಞಾನೇಶ್ವರ, ತುಕಾರಾಮ, ಏಕನಾಥ ಎಲ್ಲರೂ ಪರಿಭಕ್ತಿಯಾಂದೋಲನಕ್ಕೆ ಒಂದಾದರೂ ಆ ದೃಷ್ಟಿಯಿಂದ ಈ ಕಾಲ ಹರಿದಾಸಸಾಹಿತ್ಯದ ಪರ್ವಕಾಲ ಹಾಗೂ ಕನ್ನಡ ಸಾಹಿತ್ಯದಲ್ಲಿ ಅವರೆಗಿದ್ದ ಮಾರ್ಗ ಸಾಹಿತ್ಯ ಕೊನೆಗಾಣುತ್ತ ಕನ್ನಡ ದೇಸಿ ಬಳಕೆಗೆ ಬಂದ ಕಾಲ.

ಮೂರನೆಯ ಹಂತ, ಕ್ರಿ. ಶ. ೧೭ನೆ ಶತಮಾನದ ಶ್ರೀರಾಘವೇಂದ್ರರ ಕಾಲ. ಇದು ಹರಿದಾಸಸಾಹಿತ್ಯ ದೃಷ್ಟಿಯಿಂದ ದ್ವಿತಿಯಘಟ್ಟ. ಶ್ರೀವಿಜಯದಾಸರಿಂದ ಆರಂಭಗೊಂಡ ಈ ಕಾಲ, ಮುಂದುವರಿದಿದೆ.

ಹದಿನೆಂಟು–ಹತ್ತೊಂಭತ್ತರ ಶತಮಾನಕ್ಕೂ ಹದಿನೇಳನೆ ಶತಮಾನವೇ ಸ್ಫೂರ್ತಿ ಚಿಲುಮೆ. ವಿಜಯದಾಸರಿಂದ ಹರಿದಾಸಭಕ್ತಿಯ ಆಂದೋಲನ, ಮತನಿಷ್ಠೆ, ಧರ್ಮನಿಷ್ಠೆ, (ಮಧ್ವಮತೀಯ) ಆಯಿತು–ಸಾಹಿತ್ಯ ಸೃಜನೆಯೂ ಆದಂತೆ–ಶ್ರೀಜಗನ್ನಾಥ ದಾಸರಲ್ಲಿ ಇದು ಪರಾಕಾಷ್ಠೆ ಮುಟ್ಟಿತು. (ಶ್ರೀಮದ್ಹರಿಕಥಾಮೃತಸಾರ). ಅನಂತರ ಬಂದ ಹರಿದಾಸರ ಅಷ್ಟು ಪ್ರಮುಖರನ್ನಿಸುವುದಿಲ್ಲ–ಹರಿದಾಸ ಭಕ್ತಿ ಆಂದೋಲನ ಮುಂದುವರಿದರೂ, ಇಲ್ಲಿ ಹದಿನೇಳನೆ ಶ.ದ ಮಹೀಪತಿರಾಯರ ಕೃತಿ ದಾಸಸಾಹಿತ್ಯದ ಮೊದಲ, ದ್ವಿತೀಯ ಘಟ್ಟದ ನಡುವಣ ಕಾಳಿಕೆಯ ಕಾಲದ ಬೆಳಕಾಗಿ ನಿಲ್ಲುತ್ತದೆ ಎನ್ನಬಹುದು. (ವಿಜಯನಗರ ಪತನ ಆದ ಅನಂತರದ ಹಿಂದೂ ಸನಾತನ ಧರ್ಮವಿಪತ್ತಿಯ ಕಾಲ) ಹಾಗೂ ಹದಿನಾರನೆ ಶ.ದ ಕನಕದಾಸರ ಕೃತಿಗಳು, ಶ್ರೀವಾದಿರಾಜರ ಗುಂಡಕ್ರಿಯ, ಶ್ರೀಲಕ್ಷ್ಮೀಶೋಭಾನೆ ಮುಂತಾದ ವಿಶಿಷ್ಟ ರಚನೆಗಳು ಹರಿದಾಸಸಾಹಿತ್ಯಕ್ಕೆ ಒಂದು ವಿಶಿಷ್ಟ ಸೃಜನಾತ್ಮಕ ಕೊಡುಗೆಗಳನ್ನಿಸಿಕೊಳ್ಳುತ್ತವೆ. ಹೀಗೆ ಹರಡಿದ, ಹರಿದಾಸ ಯುಗದ ವೈಶಿಷ್ಟ್ಯ.

ಇಲ್ಲಿ ಉಕ್ಕಗೊಂಡಿರುವ ಹರಿದಾಸರ ಪೈಕಿ ಪ್ರಮುಖರಾದವರ ಆತ್ಮವೃತ್ತಾಂತ, ಜೀವನದ ಪರಿಣಾಮಕಾರಕ ಘಟನೆಗಳಿಗೆ ಹೆಚ್ಚಿಗೆ ಒತ್ತುಕೊಡದಿದ್ದರೂ ಪ್ರಸ್ತಾಪಿಸಿ, ರಚನೆಗಳ ಬಗ್ಗೆ ಬೇರೆಡೆ ಪ್ರಸ್ತಾಪಿಸಲಾಗಿದೆಯಾದುದರಿಂದ ಮುಂದಿನ ಹಂತಕ್ಕೆ ನಾವು ಮನಗೊಡಬಹುದಾಗಿದೆ.

## ವ್ಯಾಸಕೂಟ ದಾಸಕೂಟ–ಒಂದು ವಿಶ್ಲೇಷಣೆ

ಪರಿಶೀಲಿಸುತ್ತಿದ್ದಂತೆಯೆ ನಮಗೆ ಅನಂತರ ಕೇಳಿ ಬರುವುದು ಈ ಎರಡು ಶಬ್ದಗಳು: ಒಂದು 'ವ್ಯಾಸಕೂಟ', ಇನ್ನೊಂದು 'ದಾಸಕೂಟ', ಎರಡೂ ಕರ್ನಾಟಕ ಹರಿದಾಸ ಆಂದೋಲನಕ್ಕೆ ತುಂಬ ಪರಿಚಿತವೆ ಹಾಗೂ ಅವು ಅವಿಭಾಜ್ಯವೂ ಆಗುತ್ತವೆ. ಈ ದಿಸೆಯಲ್ಲಿ ಕನ್ನಡಸಾಹಿತ್ಯಚರಿತ್ರಕಾರರ ಮಾತನ್ನು ಉಲ್ಲೇಖಿಸುವುದರೊಂದಿಗೆ ಮೇಲೆ ತಿಳಿಸಿದ ಎರಡೂ ಒಕ್ಕೂಟಗಳ ಬಗ್ಗೆ ಸಮೀಕ್ಷಿಸಬಹುದು. ".........ಈವರೆಗೆ (ಸುಮಾರು ೧೨ನೆ ಶತಮಾನದವರೆಗೆ) ಜೀವನ ಮತ್ತು ಸಾಹಿತ್ಯಗಳು ಪೆಚ್ಚಾಗಿ ಪರಂಪರಾಗತವಾಗಿದ್ದವು............ಧಾರ್ಮಿಕ–ಸಾಮಾಜಿಕ ಜೀವನದಲ್ಲಿ ಮೂಲಭೂತ

ವಾದ ವ್ಯತ್ಯಾಸಗಳೂ, ಅದಕ್ಕೆ ವಿರೋಧವಾದ ಪ್ರತಿಕ್ರಿಯೆಗಳೂ, ಸಂಘರ್ಷ-ಸಾಮರಸ್ಯಗಳು ತಲೆದೋರಿ ಕನ್ನಡ ಸಾಹಿತ್ಯದ ಮೇಲೆ ಆಳವಾದ ವರ್ಚಸ್ಸು ಬೀರಿದವು. ಹೊಸ ಬಗೆಯ ಆಧ್ಯಾತ್ಮಿಕ ತೇಜಸ್ಸು, ಧಾರ್ಮಿಕ ಶ್ರದ್ಧೆ, ಪ್ರಯೋಗ ಬುದ್ಧಿಗಳು ಕಂಡುಬಂದವು. ಪಂಡಿತ ಕವಿಗಳ ಜೊತೆಗೆ ಅನೇಕ ಆಧ್ಯಾತ್ಮಿಗಳೂ ಅನುಭಾವಿಗಳೂ ಸಾಹಿತ್ಯ[97] ನಿರ್ಮಾತರಾದರು.........." ಈ ಮಾತು ೧೫ನೇ ಶತಮಾನದ ವೇಳೆಗೆ ಚಿಗುರಿದ್ದ ಹರಿದಾಸಸಾಹಿತ್ಯಕ್ಕೂ, ಹರಿದಾಸಪಂಥಕ್ಕೂ ಹೊಂದುತ್ತದೆ. ಹರಿದಾಸ ಪಂಥದಲ್ಲಿ "ಅನುಭಾವಿ" ಎನ್ನುವುದಕ್ಕೆ 'ಅಪರೋಕ್ಷಜ್ಞಾನಿ' ಎಂಬ ಪರಿಭಾಷೆ ಬಳಸುತ್ತಾರೆ. ಹರಿದಾಸಪಂಥದಲ್ಲಿಯೂ ಅನೇಕ ಪಂಡಿತರು, ಮಠಾಧೀಶರು, ಸನ್ಯಾಸಿಗಳು, ಗೃಹಸ್ಥರಾಗಿ ದಾಸದೀಕ್ಷೆ ಪಡೆದ ಸಾಮಾನ್ಯರು, ಸಕ್ರಿಯವಾಗಿ ಭಾಗ ವಹಿಸಿದರು. ಒಂದು ಭಕ್ತಿಯ ಅಲೆ ಎದ್ದಿತು. ಇದುವರೆಗೆ ಸಂಸ್ಕೃತಮಯ ಆಗಿದ್ದ ವೇದಾಂತವನ್ನು ಸಾಮಾನ್ಯರಿಗೆ ತಿಳಿಗನ್ನಡ ದೇಸಿಯ ಸೊಗಡನ್ನು ಬೀರುವುದರೊಂದಿಗೆ ಉಣಬಡಿಸುವ ಕಾರ್ಯ ಹರಿದಾಸಪಾಲಿನದಾಯಿತು, ಅದನ್ನು ಅವರು ನೆರವೇರಿಸಿದರು. ಆದರೆ, ಇಲ್ಲಿಯೂ ಹರಿದಾಸರು, ವಚನಕಾರರಿಗೆ, ಅವರ ಆಂದೋಲನಕ್ಕೆ ಕೃತಜ್ಞವೆ. ಶಿವಶರಣರಲ್ಲಿ ಶಿವಭಕ್ತಿ ಪಾರಮ್ಯ, ಷಟ್‌ಸ್ಥಲ ಸಿದ್ಧಾಂತ, ಹರಿದಾಸರಲ್ಲಿ ಹರಿಭಕ್ತಿ ಪಾರಮ್ಯ ಪ್ರತಿಪಾದನ, ದ್ವೈತತತ್ತ್ವ ಪ್ರಸಾರ ಎರಡೂ ಬಣಗಳು ಬಳಸಿದ್ದು ಸಾಮಾನ್ಯ ಸಂಪರ್ಕ ಸಾಧನ ಆದ ಕನ್ನಡ. ೧೫ನೆಯ ಶ. ನಂತರ ದೇಸಿತನ ದಾಸವಾಙ್ಮಯದಲ್ಲಿ ಬೆಳಗುತ್ತದೆ. ....ಇಲ್ಲಿಯೂ "ಮಾತಿನ ಭಾಷೆಗೆ ಸಮೀಪವಾಗಿಯೇ ಹಾಡು ಕಟ್ಟುವ ದಾಸಕೂಟದ ಪರಂಪರೆ ನರಹರಿತೀರ್ಥರಿಂದಲೇ ಮೊದಲಾಗಿರಬಹುದೆಂದು"[98] ಕನ್ನಡ ಸಾಹಿತ್ಯ ಚರಿತ್ರೆಕಾರರು ಅಭಿಪ್ರಾಯಪಟ್ಟಿದ್ದಾರೆ. ಹಾಗೂ "ಭಾಗವತ ಸಾಹಿತ್ಯದ ಒಂದು ವಿಶಿಷ್ಟ ಶಾಖೆಯಾಗಿ ಹಿಂದಿನ ಯುಗದಲ್ಲಿ (೧೩ನೇ ಶ.ದ) ಮೊಳೆದ ದಾಸವಾಙ್ಮಯ, ಈ ಯುಗದಲ್ಲಿ (೧೫ನೆ.ಶ) ಸಮೃದ್ಧವಾಗಿ ಬೆಳೆಯಿತು, ಸ್ಥಿರವಾದ ಪರಂಪರೆಯುಳ್ಳ ದಾಸಕೂಟವೆಂಬ ಒಂದು ಸಂಸ್ಥೆ, ಜನ ಸಂಸ್ಕಾರಕವಾದ ಒಂದು ಆಂದೋಲನ ಎಂಬ ಸ್ವರೂಪ ತಾಳಿತು. ಅದು ಮಾಧ್ವ ತತ್ತ್ವ ಮತ್ತು ಆಚಾರ ಧರ್ಮವನ್ನು ಕನ್ನಡದಲ್ಲಿ ಬಿತ್ತರಿಸಿತು. ಅದಕ್ಕಿಂತ ಹೆಚ್ಚಾಗಿ ವಿಶಾಲವಾದ ಭಾಗವತ ಮನೋಧರ್ಮವನ್ನೂ ಸಾಮಾಜಿಕ ನೀತಿಯನ್ನೂ ಬೋಧಿಸಿತು. ಪದ, ಸುಳಾದಿ, ಉಗಾಭೋಗ, ಈ ರೂಪಗಳಲ್ಲಿ ಅದು ಹೊರಹೊಮ್ಮಿ ಕರ್ನಾಟಕ ಸಂಗೀತವನ್ನಾಗಿ ಜನ ಪ್ರಿಯಗೊಳಿಸಿತು. ಶಾಸ್ತ್ರವನ್ನು ಕಲೆಯ ರಂಜಕತೆಗೆ ಇಳಿಸಿತು."[99] ಇದು ಒಂದು ಅಭಿಮತವಾದರೆ, ವ್ಯಾಸಕೂಟ ದಾಸಕೂಟಗಳ ಬಗ್ಗೆ ಚರ್ಚಿಸುತ್ತ ಕೆಲವರು ವಿದ್ವಾಂಸರು ನುಡಿದಿರುವ ಮಾತು ವಿಚಾರಣೀಯ ಆಗಿವೆ. 'ಹರಿದಾಸರ ಆಧ್ಯಾತ್ಮ ಬೋಧನೆ' ಕುರಿತ ಗ್ರಂಥದಲ್ಲಿ[100] 'ದಾಸಕೂಟ'ವನ್ನು ಒಂದು 'ಸಂಪ್ರದಾಯ' ಆಗಿ ಕಂಡಿರುವ ಗ್ರಂಥಕರ್ತರು ಹೇಳಿರುವುದು : "ದಾಸಕೂಟ ಎಂಬ ಪದ" ದಾಸರ ಗುಂಪು, ಹರಿಯ ಕುಲಾಮರೆಂಬುದನ್ನು ನಿರ್ದೇಶಿಸುತ್ತದೆ. ಹಾಗೂ ಭಕ್ತಿಪಂಥ, "ಭಕ್ತಿ ಸಂಪ್ರದಾಯ"ಕ್ಕೆ

ಆದು ಸಮಾನ ಆಗುತ್ತದೆ. 'ದಾಸರು' ಹಾಗೂ 'ವ್ಯಾಸರು' ಬಳಕೆಗೆ ಬಂದದ್ದು ಕ್ರಿ.ಶ. ೧೪ನೆ ಶತಮಾನದಲ್ಲಿ ಕರ್ನಾಟಕದಲ್ಲಿ ಉಂಟಾದ ಭಕ್ತಿಯ ಆಂದೋಲನ, ಶಿವ ಶರಣರ ಆಂದೋಲನದ ಬೆನ್ನಿಗೇ ಬಂದ ಹರಿದಾಸರ ಪಂಥ, ವಿಷ್ಣುಭಕ್ತಿಪಾರಮ್ಯ ಈ ಸ್ಥಳಕ್ಕೆ ಈ ದೇಶಕ್ಕೆ ಮಾತ್ರ ಮೀಸಲಲ್ಲ.ವೈಷ್ಣವ ಭಕ್ತಿಯrenaissanceಪುನರುಜ್ಜೀವನ ಭಾರತದಲ್ಲಿ ಎಲ್ಲೆಲ್ಲೂ ನಡೆಯಿತು. ಅಸ್ಸಾಂ, ಬಂಗಾಲ, ಗುಜರಾತ್, ರಾಜಾಸ್ಥಾನ, ಒರಿಸ್ಸಾ, ಎಲ್ಲೆಡೆ ನಡೆಯಿತು. ಆಚಾರ್ಯ ಮಧ್ವರ ಪ್ರಭಾವ, ವಿಷ್ಣುವಿನ ಉಪಾಸನೆ, ಕೃಷ್ಣಭಕ್ತಿ, ತಾನೇ ತಾನಾಗಿ ಪ್ರಸರಿಸಿ ವ್ಯಾಪಿಸಿತು. ಕರ್ನಾಟಕದಲ್ಲಿಯೆ ವೈದಿಕ ಪೌರಾಣಿಕ ಮತ್ತು ಸ್ಮಾರ್ತ ಆಚರಣೆಗಳು ಇದ್ದರೂ, ಇವೆಲ್ಲ. ಪರಮಾತ್ಮನಲ್ಲಿ ಭಕ್ತಿಯನ್ನು ಉದ್ದೀಪಿಸಲು ಮಧ್ಯವಂತವೇ ಸರಿ, 'ನವಮಾಧವ ಸರ್ವೋತ್ತಮಃ' ಎಂದು ಘೋಷಿಸಿ ದವರು ಮಧ್ವಾಚಾರ್ಯರು ಹಾಗೂ ಅವರ ಅನಂತರ ಬಂದ ಶಿಷ್ಯರು. ಭಗವದ್ಭಕ್ತಿಯೇ ಮೋಕ್ಷ ಸಾಧಕವೆಂದು ಮಧ್ವತತ್ತ್ವ ಸ್ಪಷ್ಟೀಕರಿಸಿತು. ಈ ಪಂಥದ ಕೆಲವು ಮಠಾಧೀಶರು, ಆಚಾರ್ಯರು, ಸಾಮಾನ್ಯರಿಗೂ ಅರ್ಥ ಆಗುವ ಹಾಗೆ ತಿಳಿ ಗನ್ನಡದಹಾಡುಗಳ ಮೂಲಕ ಹರಿಭಕ್ತಿಯನ್ನು ಬೋಧಿಸತೊಡಗಿದ್ದು ಜನಸಮಂ ದಾಯಕ್ಕೆ ಮಧ್ವಮತ ಪರಿಚಯ ಆಗಲೂ ಅವಕಾಶ ಆಯಿತು. ಈ ಸಂದರ್ಭದಲ್ಲಿ ಸಾಹಿತ್ಯ ಚರಿತ್ರಕಾರರ ಅಭಿಪ್ರಾಯ ಗಮನಾರ್ಹವೆನಿಸುತ್ತದೆ. ಕರ್ನಾಟಕದಲ್ಲಿ ದಾಸ ಪಂಥದ ಬೆಳವಣಿಗೆಗೆ ವಿಠ್ಠಲಭಕ್ತಿಯನ್ನು ಕೇಂದ್ರ ಆಗಿ ಹೊಂದಿದ್ದ ವಾರಕರಿ ಸಂಪ್ರ ದಾಯದ ಕಾಣಿಕೆ (Varakari system) ತುಂಬ ಬೆಲೆಯುಳ್ಳದ್ದು ಎನಿಸುತ್ತದೆ. ದಾಸಸಾಹಿತ್ಯದಲ್ಲಿ ಬರುವ ಸರ್ವಜನಸಮಾನತೆ, ಜಾತಿ ಕುಲಗೊಡ್ಡು ಆಚಾರ, ಇವುಗಳ ನಿರಾಕರಣೆ ಇಂಥ ತಾತ್ವಿಕ ಅಂಶಗಳಿಗೆ ಮಾಧ್ವ ಸಂಪ್ರದಾಯಕ್ಕಿಂತ ಈ ವಾರಕರಿಯ ಕಾಣಿಕೆ ಹೆಚ್ಚೇ ಎನ್ನಿಸುತ್ತದೆ. ಸಂಪ್ರದಾಯಬದ್ಧ ಆಚರಣೆಗಳನ್ನು ಮಾನ್ಯ ಮಾಡಿದ ಮಾಧ್ವ ಪರಂಪರೆಗೂ ಆ ಸಂಪ್ರದಾಯಗಳ ಬಗ್ಗೆ ಅಷ್ಟೇನು ಪ್ರಾಮುಖ್ಯ ನೀಡದ ದಾಸಪಂಥಕ್ಕೂ ಬೆಸುಗೆಯುಂಟಾದದ್ದೇ ಒಂದು ಸೋಜಿಗ : ಬಹುಶಃ ಈ ಲಗ್ನಕ್ಕೆ ಎರಡೂ ಸಂಪ್ರದಾಯಗಳಲ್ಲಿನ ವಿಷ್ಣುಪಾರಮ್ಯ ಮತ್ತು ಭಕ್ತಿಮಾರ್ಗಗಳು ಸಾಮಾನ್ಯ ಅಂಶಗಳಾಗಿದ್ದುದೇ ಮುಖ್ಯ ಕಾರಣವೆನ್ನಿಸುತ್ತದೆ. ಪುರಂದರದಾಸರ ಕಾಲದಲ್ಲಿ ಹಾಗೂ ಅವರ ಧಾರ್ಮಿಕ ಆಚಾರ್ಯರಾದ ಶ್ರೀವ್ಯಾಸರಾಯರ ಕಾಲದಲ್ಲಿ. ಆಮೇಲೆ, ಬರು ಬರುತ್ತ ಪುರಂದರದಾಸರ ಶಿಷ್ಯರನ್ನೆಲ್ಲ "ದಾಸಕೂಟಸ್ಥ" ರೆಂದು ಕರೆದರು. ಆಮೇಲೆ, ಕಾಲಕಳೆದಂತೆಲ್ಲ ವ್ಯಾಸಕೂಟ, ದಾಸಕೂಟವೆಂಬ ಈ ಎರಡೂ ಪದಗಳು ಬೇರೆ ಅರ್ಥ ವನ್ನೇ ಪಡೆದವು.[101] ವ್ಯಾಸಕೂಟವೆಂದರೆ, ಸಂಸ್ಕೃತದಲ್ಲಿ ಪರಿಣತಿ ಪಡೆದು, ಮಧ್ವ ಸಿದ್ಧಾಂತವನ್ನು ಆಮೂಲಾಗ್ರವಾಗಿ ತಿಳಿದು, ಗ್ರಂಥ ರಚನೆ ಮಾಡುವ ಸಾಮರ್ಥ್ಯ ಪಡೆದವರು, ಮತ್ತು ದಾಸಕೂಟ, ದ್ವೈತ ವೇದಾಂತದ ಸಂದೇಶ, ಮಧ್ವ ಮತವನ್ನು ಪ್ರಾಕೃತ ಭಾಷೆಯಲ್ಲಿ (ಕನ್ನಡ) ಪ್ರಸಾರ ಮಾಡಿದ ಭಕ್ತರ ಗುಂಪು "ಪುರಂದರದಾಸರ ಬಗ್ಗೆ ಒಂದು ಉಪಯುಕ್ತ ಗ್ರಂಥ ರಚಿಸಿರುವ ಎಂ.ವಿ.ಕೃಷ್ಣರಾವ್

ಅವರ ಪ್ರಕಾರ"[102], ಹರಿದಾಸರಲ್ಲಿ ಎರಡು ರೀತಿಯ ವಿಭಾಗ, ಒಂದು ವ್ಯಾಸಕೂಟ, ಇನ್ನೊಂದು ದಾಸಕೂಟ. ವ್ಯಾಸಕೂಟದವರು ವೇದ, ಉಪನಿಷತ್ತು, ದರ್ಶನಶಾಸ್ತ್ರಗಳಲ್ಲಿ ಪರಿಣತರಾದವರಾಗಿದ್ದರು. ವಿಷ್ಣುವಿನ ಅವತಾರಗಳ ಬಗ್ಗೆ ಹಾಗೂ ಆಧ್ಯಾತ್ಮದ ಬಗ್ಗೆ ರಚನಾತ್ಮಕ ಮನೋಧರ್ಮ ಅವರದ್ದಾಗಿತ್ತು. ತಾವು ವೇದವ್ಯಾಸ ಸಂಪ್ರದಾಯದವರೆಂದು ಅವರು ಹೇಳಿಕೊಳ್ಳುತ್ತಿದ್ದರು. ಶ್ಲೋಕ, ಕೀರ್ತನ, ಇವುಗಳನ್ನು 'ಗೀರ್ವಾಣ ಭಾಷೆ'ಯಲ್ಲಿ (ಸಂಸ್ಕೃತ) ಜನತೆಗೆ ತಿಳಿಸಿ, ಮಧ್ವಪಂಥ ಪದ್ಧತಿಯ ವಿಶಿಷ್ಟತೆ ತಿಳಿಸುವುದು ಅವರ ಧ್ಯೇಯ. ಹಾಗೆಯೇ ವೇದೋಪನಿಷತ್ತುಗಳ ಸಾರವನ್ನೆಲ್ಲ ಗ್ರಹಿಸಿ, ಅರಗಿಸಿಕೊಂಡು, ವ್ಯಾಸ ಪದ್ಧತಿಯನ್ನು ಅನುಸರಿಸುತ್ತ, ಪ್ರಾಕೃತ ಕನ್ನಡದಲ್ಲಿ ಜನಸಾಮಾನ್ಯರ ಭಾಷೆಯಲ್ಲಿತಿಳಿಸುವುದು ದಾಸಕೂಟದ ಧ್ಯೇಯ. ವ್ಯಾಸಕೂಟ ದಾಸಕೂಟ- ಈ ಎರಡೂ ಬಣಗಳವರಲ್ಲಿದ್ದ ವ್ಯತ್ಯಾಸವು ಅವರು ಯಾವುದಕ್ಕೋ ಬದ್ಧರಾಗಿದ್ದರು ಎಂಬುದರಲ್ಲಿಯೆ ಅಡಕವಾಗಿದೆ ಎನ್ನಬಹುದು. ವ್ಯಾಸಕೂಟ, ಪಾಂಡಿತ್ಯ (ಪಂಡಿತರ, ಮಧ್ವಾಚಾರ್ಯ ಪ್ರಣೀತ, ವೇದವ್ಯಾಸ ಪ್ರಣೀತ ಗ್ರಂಥ) ಅಭಿಮಾನ, ಉಳಿದವರ ಧರ್ಮಶಾಸ್ತ್ರ ಪರಿಣತಿಗಳಲ್ಲಿ ಕಂಡಾಗ ಔದಾಸೀನ್ಯ-ಮಠ-ಸದಸ್ಸು ಇವುಗಳಲ್ಲಿಯೇ ಇದ್ದುದು. ದಾಸಕೂಟದವರು ಬದ್ಧರಾದದ್ದು ಜನತೆಗೆ ತಮ್ಮ ಆಚಾರ್ಯರ ಬೋಧೆ, ಹರಿಸರ್ವೋತ್ತಮತೆ, ವೇದ ಗುರುಗಳ ಭಕ್ತಿ ಸಾಮಾನ್ಯರಿಗೂ ಅರ್ಥ ಆಗಿಸುವ ಪ್ರಸಾರ ಕಾರ್ಯದಲ್ಲಿ. ಇಲ್ಲಿ ಅವರು ವ್ಯಾಸಕೂಟದವರನ್ನು ಎಷ್ಟೋ ಸಲ ಎದುರಿಸಿ, ಅವರನ್ನು ತೆಗಳಿದ್ದುದುಂಟು. (ಮುಂದೆ, ವಿಜಯದಾಸರ ಕೃತಿ ಪ್ರಸ್ತಾಪವಿದೆ-ಆಂದೋಲನ ಅಧ್ಯಾಯದಲ್ಲಿ). ಒಂದು-ವಿಶೇಷ, ಅನೇಕ ಸಂಸ್ಕೃತವಿದ್ವಾಂಸರು ಹರಿದಾಸ ದೀಕ್ಷೆ ಪಡೆದು ಸಮಾಜದ ಸಾಮಾನ್ಯ ಮಾನ್ಯ-ಅನುಸರಣೀಯ ಆದ ಸಾಹಿತ್ಯ ರಚಿಸತೊಡಗಿದ್ದು. ಜಗನ್ನಾಥದಾಸರು ಪೂರ್ವಾಶ್ರಮದಲ್ಲಿ ಅದ್ಭುತ ಸಂಸ್ಕೃತ ವಿದ್ವತ್ತುಳ್ಳವರಾದರೂ ಆನಂತರ ಸಂಪೂರ್ಣವಾಗಿ ದಾಸಸಾಹಿತ್ಯ-ಕನ್ನಡಕ್ಕೇ ಶರಣು ಹೋದರು. ವ್ಯಾಸಕೂಟದವರಲ್ಲಿ ಸಂಸ್ಕೃತದ-ಮಡಿವಂತಿಕೆ ಸ್ಪಷ್ಟ. ಅಂತೆಯೆ ದಾಸಕೂಟದವರ, ಮಡಿಕುರಿತ ವಿಡಂಬನೆ, ಅಂತರಂಗ-ಬಹಿರಂಗ ಶುದ್ಧಿಗೆ ಪ್ರಾಧಾನ್ಯ, ತಿಳಿಗನ್ನಡದಲ್ಲಿ ಪುರಾಣ-ದೃಷ್ಟಾಂತ-ಧರ್ಮಶಾಸ್ತ್ರಸಾರ ಸಾಮಾನ್ಯನಿಗೂ ಅರ್ಥ ಆಗುವಂತೆ ತಿಳಿಸುವ ಕನ್ನಡಾಭಿಮಾನವೂ ಗಮನಾರ್ಹ. ಈ ಎರಡೂ ಗುಂಪಿಗೆ ಆಗಾಗ್ಗೆ ವಿರಸವಿದ್ದುದೂ ಸಾಮಾನ್ಯ. ಜನತೆಗೆ ತಿಳಿವಿನ ನುಡಿಗಳನ್ನು ತಿಳಿಸುವುದು ದಾಸಕೂಟದವರ ಧ್ಯೇಯ. ದ್ವೈತ ವೇದಾಂತ-ಮತವನ್ನು ಕನ್ನಡದಲ್ಲಿ ಜನತೆಗೆ ಸಂದೇಶ ರೂಪದಲ್ಲಿ, ಸರಳ ಹಾಡು, ಕೀರ್ತನೆ ಇತ್ಯಾದಿಗಳ ಮೂಲಕ ತಿಳಿಸುವುದೆ ದಾಸಕೂಟದವರ ಗುರಿಯಾಗಿತ್ತು.

ವ್ಯಾಸಕೂಟ, ದಾಸಕೂಟಕ್ಕೆ ಸೇರಿದವರಲ್ಲಿ ಯಾವುದೆ ತಾತ್ವಿಕ ಅಥವಾ ಸೈದ್ಧಾಂತಿಕ ಭಿನ್ನಾಭಿಪ್ರಾಯವೇನಿರಲಿಲ್ಲ. ಇಬ್ಬರೂ ದ್ವೈತ ತತ್ವ ಹಾಗೂ ಮಧ್ವಮತ ಒಪ್ಪಿಕೊಂಡು ಅನುಸರಿಸುವವರೆ. ವ್ಯಾಸಕೂಟ ಜ್ಞಾನಗವ್ಯ, ಆಚಾರ್ಯರ ಪ್ರವಚನ, ತತ್ವಬೋಧೆ, ಮುಂತಾದ ವೇದಾಂತಕ್ಕೆ ಸಂಬಂಧಿಸಿದ ಆಸಕ್ತರ ಗುಂಪು. ವೇದಗಳ

ವ್ಯಾಖ್ಯಾನ, ಭಾಷ್ಯ ಅಧ್ಯಯನ, ಅನುಮಾನ ಪರಿಶೀಲನ, ಸತ್ಯ ಸಂಶೋಧನೆ, ಆದರಲ್ಲಿಯೆ ಪ್ರೀತಿ, ಅದೇ ನಿಷ್ಠೆ : ದಾಸಕೂಟದವರು ಸಂತರು. ವಿಷ್ಣುಭಕ್ತಿ ಕುರಿತು, ಶ್ರೀಕೃಷ್ಣನನ್ನು ಕುರಿತ ಪ್ರೇಮಭಾವ ತುಂಬಿ ಹಾಡುತ್ತ, ಜನತೆಯಲ್ಲಿ ವಿಷ್ಣುಭಕ್ತಿ, ಪರಿಸರ್ಪೂರ್ತತ್ತಮತ್ತ್ವದ ಭಾವನೆ ಒಡಮೂಡಿಸುತ್ತ, ಭಕ್ತಿಯು ಪಂಥಗಮಿಸಲೆಂದು ಜನತೆಗೆ ತಿಳಿಯ ಹೇಳಿದವರು ದಾಸಕೂಟದವರು. ಎರಡು ಪಂಗಡಗಳವರು ಕೀರ್ತನೆ ಯನ್ನು ಜನ ಸಮುದಾಯದಲ್ಲಿ ದ್ವೈತತತ್ವ ಬಿತ್ತರಿಸಲು ಉಪಯೋಗ ಮಾಡುತ್ತಿದ್ದು ದಲ್ಲದೆ, ಯಾರಿಗೆ ಉಪನಿಷತ್ತು ಮುಂತಾದ ದರ್ಶನ, ಶಾಸ್ತ್ರ ಅರ್ಥ ಆಗುವುದಿಲ್ಲವೊ ಅಂಥವರಿಗೆ ಶ್ರೀಕೃಷ್ಣನಲ್ಲಿ ಭಕ್ತಿ, ಪ್ರೇಮ ಮೂಡಿಸುವ ಪ್ರೇರಣೆಯನ್ನೂ ಉಂಟು ಮಾಡುತ್ತಿದ್ದರು. ಮೊದಲಿನ ಗುಂಪು ಸಂಸ್ಕೃತ ಬಳಸಿದರೆ, ಇನ್ನೊಂದು ಗುಂಪಿನವರು ದೈವಭಕ್ತಿ ತಿಳಿಯ ಹೇಳಲು ಆಡು ನುಡಿಯಾದ ಕನ್ನಡ ಬಳಸಿದರು. ಕರ್ಣಾಟಕದ ಹರಿದಾಸರೆಲ್ಲ ಶಾಸ್ತ್ರವೇತ್ತರು, ವ್ಯಾಕರಣ, ಷಡಂಗ, ಕವಿತ್ವ, ಪರವಾದಿ ನಿಗ್ರಹಕ್ಕಾಗಿ ಸಾಧನೆ ನಡೆಸಿದ ಸಾಧಕರು. ಅವರು ಸಂಸ್ಕೃತ ಕಲಿತದ್ದು 'ಕೆಲವರು ಸುಗುಣರಿಗೆ' ಮಾತ್ರ ಸಂಸ್ಕೃತ ಒಲಿದು ಬರುತ್ತದೆ ಎಂಬುದನ್ನು ಕೇಳಿ. ಆದರೆ, ಅವರಿಗೆ, ದೇವರು ಬರೀ ಚರ್ಚೆ, ಒಣತತ್ವ ಬೋಧೆ, ತರ್ಕ, ವ್ಯಾಕರಣಗಳಿಂದ ಒಲಿಯಲಾರ, ಬೌದ್ಧಿಕ ಜ್ಞಾನವಿದ್ದರೂ ಮಂಕ್ತಿಗೆ ಸಾಧನ ಆಗಲಾರದೆಂದು ತಿಳಿದಿತ್ತು. ಶ್ರೀ ಶ್ರೀಪಾದ ರಾಜರು, ವ್ಯಾಸರಾಯರು, ವಾದಿರಾಜರು, ಶ್ರೀ ರಾಘವೇಂದ್ರರು ಮೊದಲಿಗೆ ವ್ಯಾಸ ಕೂಟಕ್ಕೆ ಸೇರಿದವರೆಂದು ಹೇಳಿದಂತೆಯೇ, ಶ್ರೀಪುರಂದರದಾಸರು, ಶ್ರೀವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರನ್ನು ದಾಸಕೂಟದ ಅನುಯಾಯಿಗಳೆನ್ನಬಹುದು.

ದಾಸಕೂಟ ಪುರಂದರದಾಸರಿಂದ ಆರಂಭವಾಯಿತೆಂಬ ಮಾತಿದೆ. ಇದಕ್ಕೆ ಆಧಾರ ಸಾಲದು ಹಾಗೂ ಈ ದಾಸಪಂಥ, ಪ್ರಸಿದ್ಧ ಆಗಿ, ಶತಮಾನಸರಿದು, ಮಂನ್ನಡೆದಂತೆ, ವಿಜಯದಾಸರು, ಗೋಪಾಲದಾಸ, ಹಾಗೂ ದಾಸಕೂಟ ಪರಂಪರೆಯ ಹಂಚ್ಚಿತೆನ್ನಬಹುದು. ಸುಮಾರು ೨೫೦–೩೦೦ ಜನ ದಾಸರು ಆಗಿ ಹೋದರು. ಆಗ್ಗೆ ಅವುಗಳಿದ್ದುವೆ, ಅಥವಾ ವ್ಯಾಸಕೂಟ–ದಾಸಕೂಟವೆರಡೂ ಒಂದೇಯೆ ಎಂಬುದು ಇಂದೂ ವಿವಾದಾಸ್ಪದವೆ. ಒಂದಂತೂ ಹೌದು. ಇಬ್ಬರೂ ಸಮಾಜ ಹಿತಕ್ಕಾಗಿ ಶ್ರಮಿಸಿದ ಸುಧಾರಕರು.

ಪ್ರತಿಯೊಬ್ಬನಲ್ಲಿಯೂ ಆಧ್ಯಾತ್ಮ ಚೇತನ ಹುದುಗಿರುತ್ತದೆ : ಅದನ್ನು ಎಚ್ಚರ ಗೊಳಿಸುವುದರಿಂದ ಜಾಗೃತಾವಸ್ಥೆ ಯನ್ನು ತಲುಪುವನು. ಮಾನವ, ಅತಿಮಾನವ : ಹೀಗೆ ಮನುಷ್ಯ ವ್ಯಾಪಾರಗಳನ್ನು ಮೀರಿ, ಅನಂತರ ದೈವೀ ಚೇತನದ ಕಾಣ್ಕೆಯನ್ನಾತ ಅನುಭವಿಸುತ್ತಾನೆ, ಅನುಭಾವಿಸುತ್ತಾನೆ : ಈ ಅವಸ್ಥೆಯೇ ಅಪರೋಕ್ಷಾನುಭೂತಿ. (ಭೌತಿಕ ಚಕ್ಷುಸ್ಸಿಗೆ ಅಗೋಚರವಾದದ್ದು : ಇಂದ್ರಿಯಾತೀತವಾದದ್ದು, ಜಾಗೃತ ಪ್ರಜ್ಞೆ ಯುಳ್ಳದ್ದು) ಹರಿದಾಸ ಬಲ್ಲವನಾಗಿದ್ದ, ದಿವಚೇತನವನ್ನು ತನ್ನ ಹೃದಯದಲ್ಲಿ ಅರಿತು ಕೊಳ್ಳಬಹುದೆಂಬುವನ್ನು ತೈತ್ತಿರೀಯ ಉಪನಿಷತ್ ಹೇಳಿರುವಂತೆ, "ಅಂತರ್ಬಹಿಶ್ಚ

ತತ್ಸರ್ವಂ ವ್ಯಾಪ್ಯ ನಾರಾಯಣಸ್ಥಿತಃ ಅನಂತಮವ್ಯಯಂ......" ಒಳಗೆ ಹೊರಗೆ. ಸಕಲ ಚರಾಚರ ವಸ್ತುಗಳಲ್ಲಿ (ಪ್ರಸರಿಸಿ) ಅಡಗಿರತಕ್ಕ ದೈವೀಚೇತನ–ನಾರಾಯಣನಿಗಾಗಿ ನಿನ್ನ ಹೃದಯದ ಬಾಗಿಲನ್ನು ತೆರೆದಿರಿಸು. ಅಮೃತಮಯ ಆ ಆ ಚೇತನ ಪ್ರವೇಶಿಸಲು ಅವಕಾಶ ನೀಡು ಎಂಬುದಾಗಿ ಎಲ್ಲ ಋಷಿವಾಣಿಯೂ ನುಡಿದಿವೆ. "ಎಲ್ಲಿಹನು ಹರಿ ಎಂಬ ಸಂಶಯವು ಬೇಡ; ಎಲ್ಲರೊಳಗವನಿಹನು ......" ಎಂಬ ಹರಿದಾಸವಾಣಿಯಲ್ಲಿ ತೈತ್ತಿರೀಯುತ್ತೇ ಅಡಕವಾಗಿರುವುದು.ನಾವು ಮಾಡುವ ಆಲೋಚನೆ. ಮನಸ್ಸು,ಅನುಭವ ಒಂದೇ ಆಗಿರಬೇಕು. ಭಿನ್ನ ಆಗಬಾರದು. ಅವುಗಳು ಮನುಷ್ಯನ ವ್ಯಕ್ತಿತ್ವದ ಅವಿಭಾಜ್ಯ ಆಗಬೇಕು. ಈ ಮೂರು ವಿಶೇಷಗಳಿಂದಲೇ ವ್ಯಕ್ತಿ, ದೇವರನ್ನು ಎಲ್ಲರಲ್ಲಿಯೂ, ಎಲ್ಲದರಲ್ಲಿಯೂ ಕಾಣಬಲ್ಲನೆಂದು ದಾಸಕೂಟದವರು ತಮ್ಮ ಸುಮಾರು ಕೃತಿಗಳಲ್ಲಿ ನುಡಿದಿದ್ದಾರೆ. ಇದು ಸುಲಭ ಅಲ್ಲ. 'ಅಭ್ಯಾಸೇನ ತುಕೌಂತೇಯ ವೈರಾಗ್ಯೇನ ಚಗೃಹ್ಯತೇ'ಎಂದು ಗೀತಾಚಾರ್ಯ ಹೇಳಿದಂತೆ, ಅಭ್ಯಾಸ ಅದಕ್ಕೆ ಪೋಷಕ, ಪ್ರೇರಕ ಆದ ವೈರಾಗ್ಯ ಅಗತ್ಯ. ಹಾಗೆಂದ ಮಾತ್ರಕ್ಕೆ ವೈರಾಗ್ಯದಿಂದ ಬದುಕನ್ನೆ ಬಿಟ್ಟು ಬಿಡುವುದೆಂದಲ್ಲ. ಅದನ್ನು ವ್ಯಾಸಕೂಟ, ದಾಸಕೂಟಸ್ಥರು ಒಪ್ಪರು. 'ಈಸಬೇಕು,ಇದ್ದು ಜೈಸಬೇಕು' ಎನ್ನುತ್ತಾರೆ 'ಮಾನವ ಜನ್ಮ ದೊಡ್ಡದು, ಇದಹಾನಿಮಾಡಬೇಡಿರೋ ಹುಚ್ಚಪ್ಪಗಳಿರಾ' ಎನ್ನುವುದರ ಜತೆ, 'ಧರ್ಮವೇ ಜಯವೆಂಬ ದಿವ್ಯಮಂತ್ರ'ವೆಂದು ನೀತಿಯ ಚೌಕಟ್ಟಿನಲ್ಲಿ ಇಲ್ಲಿನ ಬದುಕನ್ನು ಹಸನುಮಾಡಿಕೊಂಡು, ಬದುಕಿ, ಇತರರಿಗೂ ಬದುಕಲು ಅವಕಾಶವೀಯಬೇಕೆಂದು ಕಳಕಳಿಯ ಮನವಿ ಮಾಡುತ್ತಾರೆ.

ಕನ್ನಡದಲ್ಲಿ ಕೃತಿ ರಚನೆ ಮಾಡಿದ ಶಿವಶರಣರು (ವಚನ), ಹಾಗೂ ಹರಿದಾಸರು (ಕೀರ್ತನ ಸಾಹಿತ್ಯ)ಗಳ ಸಾಹಿತ್ಯ ಸಾಮಾನ್ಯರನ್ನೇ ಉದ್ದೇಶಿಸಿದ್ದು, ಅವರ ಬದುಕಿಗೇ ಕುರಿತದ್ದು ಎಂದರೆ ತಪ್ಪಿಲ್ಲ. ಹನ್ನೆರಡನೇ ಶತಕದ ತನಕ ರಾಜರ ಪಂಡಿತರ ಸ್ವತ್ತಾಗಿದ್ದ ಸಾಹಿತ್ಯ ಸಂಸ್ಕೃತಭೂಯಿಷ್ಠ ಆಗಿತ್ತು. ಮಾರ್ಗಸ್ಥ ಆಗಿ ಪಂಡಿತ – ಕಲಿತವರರಂಜನೀಯವಾಗಿತ್ತು. ವಚನಕಾರರ ವಚನರೂಪ ಕನ್ನಡ ಸಾಹಿತ್ಯದಲ್ಲಿ ಸಾಮಾನ್ಯನಿಗಾಗಿ ಬಾಯ್ದೆರೆದು, ಅವನಿಗರಿವಾಗುವಂಥ ಸರಳ ಕನ್ನಡದಲ್ಲಿ, ಅರ್ಥ ಆಗುವಂತೆ ರಚಿತ ಆದ ಸಾಹಿತ್ಯ ಪ್ರಕಾರ, ಇವು ಸಾಹಿತ್ಯವನ್ನು ಅರಸೊತ್ತಿಗೆಯಿಂದ, ವಂಶದಿಂದ ಹೊರತಂದು, ಸಾಮಾನ್ಯಮಾನ್ಯ ಆಗಿಸಿದವು. ಸಾಮಾನ್ಯನಿಗೆ ತನ್ನ ಆಲೋಚನೆ, ಚಿಂತನ ಪ್ರಕಟಿಸಲು ಬಾಯಿ ಕೊಟ್ಟವರೇ ಶರಣರು. ಈ ಜನಜಾಗೃತಿಯನ್ನು ಹರಿದಾಸರು ವಚನಕ್ಕಿಂತ ಭಿನ್ನ ಆದ ಸಾಹಿತ್ಯ ರೂಪದ ಮೂಲಕ ಹುರಿದುಂಬಿಸಿದರು. ಬೆಳೆಸಿದರು. ಅದಕ್ಕಾಗಿ ಬೇಡಿದರು, ಮನೆ ಮನೆ, ಊರೂರು ಸುತ್ತಿ ಧರ್ಮಭಕ್ತಿ ಪ್ರಸಾರ ಮಾಡಿದ ಪ್ರವಾದಿಗಳಾದರು. ಶರಣರು ವಚನವನ್ನು ಕೇವಲ ಕನ್ನಡಾಭಿಮಾನಕ್ಕೆಂದೆ ರಚಿಸಲಿಲ್ಲ. ಅದು ಅವರ ಶಿವಭಕ್ತಿಯ, ಕನ್ನಡಾಭಿಮಾನದ ಅಭಿವ್ಯಕ್ತಿ, ಶಿವೋತ್ತಮ ಪ್ರಸಾರಕ ಮಾಧ್ಯಮ ಕೂಡ. ಹಾಗೆಯೆ ಹರಿದಾಸರ ಕೀರ್ತನ ಸಾಹಿತ್ಯ ಹರಿಭಕ್ತಿಯ, (ಶರಣರು ಪ್ರತಿರೋಧಿಸಿದ) ಸನಾತನ ಧರ್ಮ-ವೇದಾಗಮ ಪ್ರತಿಷ್ಠಾಪಿಸುವ, ಹರಿಸರ್ವೋತ್ತಮ

ಪ್ರಸಾರ ಮಾಧ್ಯಮ. ಶರಣರ ನಿಲುವು ಹರಿದಾಸರ ನಿಲುವು ಈ ದಿಸೆಯಲ್ಲಿ ಒಂದೇ. ಅದು ಭಕ್ತಿ ಪ್ರಸಾರ. ಅದರ ಜತೆ ಶರಣರು ಟಂಕಿಸಿದ ಕಾಯಕ ತತ್ವ, ಒಂದು ಸ್ಥಿರ ಕೊಡುಗೆ–ಹರಿದಾಸರ ಮಧುಕರ ವೃತ್ತಿ ಸಮಾಜ ಸೇವೆಯ ಒಂದು ಮಾಧ್ಯಮ. ಶರಣರು, ಸಾಮಾನ್ಯರಿಗೆ ಪ್ರಿಯ ಆದ ಬದುಕನ್ನು ಮಿಥ್ಯ, ನಿರಾಸೆ, ನಿಸ್ಸಾರವೆನ್ನಲಿಲ್ಲ. ಹರಿದಾಸರೂ ಅಷ್ಟೆ. ಸಂಸಾರದ ಕ್ಷಣಿಕತೆ ತಿಳಿಸಿದರೆ ವಿನಾ ಬದುಕನ್ನ ಕಡೆಗಣಿಸಲಿಲ್ಲ. ಸಾಮಾನ್ಯನ ಪ್ರೀತಿ, ವಿಶ್ವಾಸ ಗಳಿಕೆಯೇ ಇಬ್ಬರ ನಿಲುವು, ಧ್ಯೇಯ. ಈ ದೃಷ್ಟಿಯಿಂದ ಮೊದಲು ಬಂದ ಶರಣರ ನಿಲುವು ಉಲ್ಲೇಖನೀಯ. ಹರಿದಾಸರು ಅದನ್ನು ಇನ್ನೂ ತಮ್ಮ ಅನುಕೂಲಕ್ಕೆ, ಪರಿಸರಕ್ಕೆ, ಭಕ್ತಿಸ್ವರೂಪದ ವೈವಿಧ್ಯಕ್ಕೆ ತಕ್ಕಂತೆ, ಬಳಸಿದರು. ವಚನಕಾರರ ವಚನದ ನಪ್ಪ–ಬುದು ರೂಪಕ್ಕಿಂತ ಹಿತ, ಮನಸ್ಸಿಗೆ ಪ್ರಿಯವೆನಿಸುವ, ಶ್ರುತಿ ಸಂಭಗ ಸಂಗೀತ ರಚನೆಯ ಮೂಲಕ ತಮ್ಮ ಆಂದೋಲನದ ನಿಲುವನ್ನು ಅಭಿವ್ಯಕ್ತಗೊಳಿಸಿದ ರೀತಿ ಅನ್ಯಾದೃಶವಾದದ್ದನ್ನಬೇಕು.

## ವ್ಯಾಸಕೂಟ-ದಾಸಕೂಟ

ಮೇಲೆ ಹೇಳಿದಂತೆ, ವ್ಯಾಸಕೂಟವೆಂಬ ಪದಕ್ಕೆ ತುಂಬ ಅರ್ಥಬರುತ್ತದೆ. ವೇದವ್ಯಾಸರಿಗೆ ಪ್ರಿಯರಾದ ಮಧ್ವಾಚಾರ್ಯರನ್ನೇ ವ್ಯಾಸಕೂಟರ ಆದ್ಯರೆನ್ನಬಹುದು. ಆದರೆ ದಾಸಸಾಹಿತ್ಯದ ಉಗಮ ಗಮನಿಸುವಲ್ಲಿ ಆ ಪಥ ಬೆಳೆಯಲು ಶ್ರಮಿಸಿದ್ದು ವ್ಯಾಸಕೂಟ ಹಾಗೂ ದಾಸಕೂಟದವರಿಬ್ಬರೂ ಎಂಬುದನ್ನು ಮರೆಯುವಂತಿಲ್ಲ. ಇಬ್ಬರೂ ಭಾಗವತ ಧರ್ಮ ಉದ್ಧರಿಸುವ, ಸಮಾಜ ಸುಧಾರಣಾ ಮನೋಧರ್ಮ ಪ್ರವರ್ತಿಸುವ ಲಕ್ಷ್ಯವುಳ್ಳವರೇ. "ಕರ್ಣಾಟಕದಲ್ಲಿಯ ಹರಿದಾಸ ಪಂಥವು ಭಾರತದಲ್ಲಿಯ ಭಾಗವತ ಧರ್ಮದ ಕೊನೆಯ ಘಟ್ಟವೆಂದು ಹೇಳಬಹುದು"[103] ಎಂಬ ಡಾ ಬಿ. ಎನ್. ಕೆ. ಶರ್ಮರ ಮಾತಿನಲ್ಲಿ ಹರಿದಾಸರು ಪ್ರಾಚೀನ ಕಾಲದಿಂದ ನೆಲೆಯಾಗಿ ನಿಂತ ಭಾಗವತ ಧರ್ಮ ಉದ್ಧರಿಸಲು ವಿಷ್ಣುಭಕ್ತಿ ಹರಡಲು ಪಟ್ಟ ಶ್ರಮವೆಲ್ಲವನ್ನೂ ಪ್ರತಿಬಿಂಬಿಸುತ್ತಾರೆ. ವೈದಿಕ ವಾಙ್ಮಯದ ಸರಿಯಾದ ವಿವರಣೆಯ ಮೇಲೆ ಆಧರಿಸಿ, ಸ್ಥಾಪಿಸಿದ ಮಧ್ವಮತವೂ ಹರಿದಾಸರಿಂದ ಪ್ರಸಾರ ಆಗುವ ನಿರ್ಣಾಯಕ ಘಟ್ಟವೆ ಹರಿದಾಸರೂ ಆದ ಸ್ಥಾಪನೆ–ಇವೆಲ್ಲದರಿಂದ, ನಾವಿಷ್ಟು ತಿಳಿಯಬಹುದು :

1. ವ್ಯಾಸಕೂಟ, ದಾಸಕೂಟ ಪ್ರತ್ಯೇಕ ಬಣಗಳಲ್ಲ. ಮೊದಲನೆಯದರಲ್ಲಿದ್ದು ಪ್ರತಿನಿಧಿಸುವವರು ಸಂಸ್ಕೃತ ಪರಿಣತರು, ವಿದ್ವಾಂಸರು, ಮಠಾಧಿಪತಿಗಳು, ಆಚಾರ್ಯರು, ಶಾಸ್ತ್ರವೇತ್ತರು. ಇವರ ಉದ್ದೇಶ, ದೇವಭಾಷೆಯಾದ ಸಂಸ್ಕೃತದಲ್ಲಿ ಗ್ರಂಥ ರಚನೆ ಮಾಡುವುದು, ಆಚಾರ್ಯರ ಗ್ರಂಥಗಳಿಗೆ ವ್ಯಾಖ್ಯೆ, ಟೀಕೆ ರಚನೆ, ನಿರೂಪಣೆ, ಮಧ್ವತತ್ವಗಳ ಪ್ರತಿಪಾದನೆ. ದಾಸಕೂಟಸ್ಥರ ಉದ್ದೇಶ, ಕೇವಲ ಪಂಡಿತವಾನ್ಯ ಗ್ರಂಥದಲ್ಲಲ್ಲದೆ ಹರಿಭಕ್ತಿ, ವಿಷ್ಣು ಸರ್ವೋತ್ತಮತ್ವ ಹಾಗೂ ಆಚಾರ್ಯಮಧ್ವರ ಮತತತ್ವಗಳನ್ನು ಜನಸಾಮಾನ್ಯರಿಗೂ ಪರಿಚಯಿಸು

ವುದು, ಆಸಕ್ತರಾಗಿ ಮಾಡುವುದು ಹಾಗೂ ನೀತಿಯುತ ಸಮಾಜ ನಿರ್ಮಿತಿ, ಭಕ್ತಿಪಂಥ ಹರಡುವಿಕೆ ಇದಕ್ಕೆ ಅವರು, ಕನ್ನಡವನ್ನೇ ಸಮೂಹ ಸಂಪರ್ಕ ಸಾಧನವಾಗಿ ಬಳಸಿದರು.

2. 'ದಾಸಕೂಟಸ್ಥ'ವೆಂಬ ಮಾತು ೧೮-೧೯ನೆ ಶತಕದ ಶ್ರೀ ಪ್ರಾಣೇಶವಿಠಲರ[104] ಕೀರ್ತನೆಯೊಂದರಲ್ಲಿ ದೊರೆತ ಪದ. ಆದರೆ ಅದು, ಅಲ್ಲಿನ ತನಕ ಬೆಳೆದು ಬಂದು ಪ್ರವರ್ಧಿಸಿದ, ಪ್ರವರ್ತಿಸಿದ ದಾಸಕೂಟದವರನ್ನೆಲ್ಲ ಪರಿಚಯಿಸುವಂತಿದೆ. ಇಲ್ಲಿ 'ದಾಸಕೂಟ' ಎಂಬುದರ ಮೂಲಕದಲ್ಲಿ "ದಾಸಕೂಟ", "ದಾಸರಗುಂಪು", ಗೋಷ್ಠಿ, ಸಮೂಹ ಎಂಬೆಲ್ಲ ಅರ್ಥದಲ್ಲಿ ಬಳಕೆಯಾಗುತ್ತಿದ್ದಿರಬಹುದೆಂದು ಅರಿಯಬಹುದಾಗಿದೆ. ಇದೇ 'ದಾಸರಕೂಟ'ವೇ ಪ್ರಾಣೇಶವಿಠ್ಠಲರ ಕೃತಿಯಲ್ಲಿ "ದಾಸಕೂಟ" ಎಂದು ಬಳಕೆಯಾಗಿದೆ.

ಇದಲ್ಲದೆ, ವಿಜಯದಾಸರ ಶಿಷ್ಯವರ್ಗ್ಯರಾದ ಶ್ರೀಜಗನ್ನಾಥದಾಸರ ಶಿಷ್ಯರಾದ ಶ್ರೀಪದವಿಠಲರು, ಗುರುಗಳ 'ಶ್ರೀಹರಿಕಥಾಮೃತಸಾರ' ಗ್ರಂಥಕ್ಕೆ ರಚಿಸಿರುವ ಫಲಸ್ತುತಿಯಲ್ಲಿ 'ದಾಸಕೂಟ' ಪದ ಪ್ರಯೋಗ ಕಾಣಬಹುದಾಗಿದೆ. (ಹರಿಕಥಾಮೃತಸಾರ ಪುಟ : ೧೨೨೦, ಶ್ರೀಹರಿವಿಠಲ ಪ್ರಕಾಶನ, ಬೆಂಗಳೂರು-೧೯, ೧೯೭೭.)

> ಆಶುಕವಿ ಕುಲ ಕಲ್ಪತರು ದಿ
> ಗ್ದೇಶ ವರಿಯಲು ರಂಗನೊಲುಮೆಯ
> ದಾಸಕೂಟಸ್ಥರಿಗೆರಗಿ ನಾ ಬೇಡಿಕೊಂಬುವೆನ್ನು ॥
>
> (ಪು. : ೧೨೨೦)

(ಇದಲ್ಲದೆ "ದಾಸರ ಪದಕೆ ನಮಿಪೆನನವರತ ಎಂದೂ" ಪದ ಪ್ರಯೋಗವಿದೆ ; ಪದ್ಯ : ೧೨ ಪು. ೧೪).

"ಕನಕದಾಸನ ಮೇಲೆ ದಯಮಾಡಲು ವ್ಯಾಸಮುನಿ ಮಠದವರೆಲ್ಲರು ದೂರುತಿಹರು" ಎಂಬ ಶ್ರೀಪುರಂದರದಾಸರ ಕೀರ್ತನೆಯಲ್ಲಿ ದಾಸಕೂಟದ ಒಂದು ಪ್ರಸಂಗ, ಕನಕನ ಪರೀಕ್ಷೆ-ಬಂದ ವರದಿಯಂ ಇವೆ. ಇದು ದಾಸಕೂಟದ ನೆಲೆಗೆ ಸಾಕ್ಷ್ಯ ನುಡಿಯುವಂತಿದೆ. ಒಂದು ವಿಚಾರ ನಾವು ಇಲ್ಲಿ ಗಮನಿಸುವಂಥದು. ಶ್ರೀ ಶ್ರೀಪಾದರಾಜರು, ಶ್ರೀವ್ಯಾಸರಾಯರು, ಶ್ರೀವಾದಿರಾಜರು, ಶ್ರೀರಾಘವೇಂದ್ರತೀರ್ಥರು – ಎಲ್ಲರೂ ಮಠಾಧೀಶರು, ಸನ್ಯಾಸಿಗಳು. ದಾಸಕೂಟಸ್ಥರ ಜತೆ ಸಮರಸಭಾವದಿಂದ ಬೆರೆತು, ತಿಳಿಗನ್ನಡದಲ್ಲಿ ಕೃತಿ ರಚನೆ ಮಾಡಿದ್ದು ವ್ಯಾಸಕೂಟ-ದಾಸಕೂಟಗಳ ಒಟ್ಟಾಗಿ ನಡೆದ ಒಂದು ಆಂದೋಲನಕ್ಕೆ

ನಿದರ್ಶನ. ಅದು ಸ್ವಾಗತಾರ್ಹ ಕೂಡ. ಸಮಾಜ ಹಿತ ದೃಷ್ಟಿಯಿಂದ ಮಠಗಳ ದೃಷ್ಟಿ ಜನಸಾಮಾನ್ಯರೆಡೆ ಹರಿಯಲಾರಂಭ ಆಯಿತು.

3. ಶ್ರೀಪಾದರಾಜರಂತೂ ದೇವರ ಪೂಜಾಕಾಲದಲ್ಲಿ ಕಾಲಿಗೆ ಗೆಜ್ಜೆಕಟ್ಟಿ, ತಂಬೂರಿಯ ಶ್ರುತಿಯೊಡನೆ, 'ತಂಬೂರಿ ಮೀಟಿದವ, ಭವಾಬ್ಧಿ ದಾಟಿದವ'ನೆಂದ ದಾಸವರೇಣ್ಯರ ನುಡಿಗಳಿಗೆ ಪುಷ್ಟಿಯಿತ್ತ ಮಹನೀಯರು. ದೇವರನಾಮಗಳನ್ನು ಹಾಡುವ ಸಂಪ್ರದಾಯಕ್ಕೆ ಶ್ರೀಕಾರ ಹಾಡಿದವರೆ ಶ್ರೀಪಾದರಾಜರು.

4. ಶ್ರೀಪಾದರಾಜರಿಗೂ ಮುಂಚೆ ಆಗಿ ಹೋದ ನರಹರಿತೀರ್ಥರು ದಾಸ ಸಾಹಿತ್ಯಕ್ಕೆ ಪ್ರವರ್ತಕರೆನಿಸುವಷ್ಟು ಅವರ ರಚನೆ ದೊರೆಯದಿದ್ದರು ಅವರು ಮಾಡಿರುವ "ಹರಿದಾಸತನ" ಪದ ಪ್ರಯೋಗ ಆಗ್ಗೆ ಇದ್ದ ದಾಸಸಾಹಿತ್ಯವನ್ನು ತೋರುವಂತಿದೆ. ಅದರ ಬಗ್ಗೆ ಇನ್ನೂ ನಿರ್ಧಾರ ಆದ ಮಾತಾಡಲು ಆಗಿಲ್ಲ. ದಾಸ ಸಾಹಿತ್ಯದ ಲಕ್ಷಣಗಳಾದ ಪಶ್ಚಾತ್ತಾಪ, ಶರಣಾಗತಿ, ವೈರಾಗ್ಯ ಆ ಮಾತ್ರಲ್ಲಿ ಕಾಣುತ್ತದೆ. ಇಷ್ಟಾದರೂ ಪ್ರಾರ್ಥನಾ ಶ್ಲೋಕದಲ್ಲಿ[105] ಅವರ ಹೆಸರು ಕಂಡು ಬಂದಿಲ್ಲವೇಕೆ ಎಂದಾಗ, ಶ್ಲೋಕದ ಕಾಲಿಕತೆಯನ್ನು ಗಮನಿಸಬೇಕಾಗುತ್ತದೆ.

5. ದಾಸ ಸಂಪ್ರದಾಯಸ್ಥರಲ್ಲಿ ಮಠಾಧೀಶರೂ "ದಾಸದೀಕ್ಷೆ", "ಅಂಕಿತ" ಪಡೆದ ರೆಂಬುದು ಮರೆವಂತಿಲ್ಲ. "ಅಂಕಿತವಿಲ್ಲದ ದೇಹ ನಿಷಿದ್ಧ" ವೆನ್ನುತ್ತಾರೆ ಪುರಂದರರು. ಪುರಂದರರು "ದೀಕ್ಷಿತ ದಾಸರು"[106] ವ್ಯಾಸರಾಯರು ದಾಸ ದೀಕ್ಷೆ ಪಡೆದಿದ್ದು "ಶ್ರೀಕೃಷ್ಣ" ಅಂಕಿತವುಳ್ಳವರಾಗಿದ್ದರು.

6. ಶ್ರೀಪಾದರಾಜರ ಕಾಲಕ್ಕಾಗಲೇ ದಾಸ ವರ್ಗದ ಸಂಘಟನೆ ಆರಂಭ ಆಯಿತು. ಇದಕ್ಕೆ ಶ್ರೀಪಾದರಾಜರಿಗೆ ತಮಿಳು ನಾಡಿನ ಶ್ರೀರಂಗದಲ್ಲಿನ ಶ್ರೀವೈಷ್ಣವ ಆಳ್ವಾರರ ಪ್ರಭಾವ ಆಗಿರಲು ಸಾಕು. ಏಕೆಂದರೆ, ಶ್ರೀಪಾದರಾಜರು, ಸ್ವರ್ಣ-ತೀರ್ಥರ ಬಳಿ ಸನ್ಯಾಸ ಸ್ವೀಕರಿಸಿ, ಶ್ರೀರಂಗ. ತಮಿಳುನಾಡಲ್ಲೆ ಕೆಲವಾರು ಕಾಲ ಇರಬೇಕಾಯಿತು. ಆಗ ತಮಿಳು ನಾಡಿನಲ್ಲಿ ಹಬ್ಬಿ ಹಾಸುಹೊಕ್ಕಾಗಿದ್ದ ಆಳ್ವಾರರ ದಿವ್ಯಪ್ರಬಂಧ (ನಾಲಾಯಿರ ದಿವ್ಯಪ್ರಬಂಧ) 'ದ್ರಾವಿಡವೇದ ವೆಂದೆ ಖ್ಯಾತಿಗಳಿಸಿದ್ದು, ಅದರ ಉದ್ಘೋಷ ದೇವಾಲಯಗಳಲ್ಲಿ ಪೂಜಾ ಸಮಯದಲ್ಲಿ ಆಗುತ್ತಿದ್ದುದನ್ನು ಶ್ರೀಪಾದರಾಜರು ಗಮನಿಸದೆ ಇರಲಾರರು. ಅದೇ ಪ್ರಭಾವ, ಹಾಗೂ ಸ್ಥಳೀಯ ಭಾಷೆ ಆದ "ಶೆಂದಮಿಳ್" (ದೇಸೀ ತಮಿಳು) ಅನ್ನು ಸಂಸ್ಕೃತದ ದೇವಭಾಷೆಯ ಸ್ಥಾನಕ್ಕೇರಿಸಿ, ಬಳಸುತ್ತಿದ್ದ ರೀತಿ, ಶ್ರೀಪಾದರಾಜರಿಗೆ ತಾವೂ ಅದನ್ನು ಕನ್ನಡಕ್ಕೇಕೆ ಸಮೀಕರಿಸಬಾರದು ಎಂದು ಅನ್ನಿಸುವಂತಾಗಿರಬೇಕು. ಜ್ಞಾನ-ಭಕ್ತಿಯ ಮುಖ್ಯ ಧ್ಯೇಯ ಆಗಿರಿಸಿಕೊಂಡು, ರಚಿಸಿದ, ತಿರುಪಾಣೆಯಂಥ ಶ್ರೇಷ್ಠ ಭಕ್ತ ಆಳ್ವಾರರ ಸಿರಿ ನುಡಿಗಳು, ಭಗವಂತನಿಗೆ ಇಲ್ಲಿಯ ಇಹದ ಜಾತಿ ಕುಲಗೋಜು ಬೇಕಿಲ್ಲ, ಆವನು ಭಕ್ತಿಪ್ರಿಯ,[107] ಎಂಬುದಾಗಿ ಅನಿಸಿದ್ದಾತ. ಇದಲ್ಲದೆ, ಈ ಮುಂಚೆಯೇ ಆಗಿದ್ದ

ವಚನ ಸಾಹಿತ್ಯದ ಸಾಧನೆಯನ್ನೂ ಅವರು ಖಂಡಿತ ಗಮನಿಸಿರಲು ಸಾಕು. ಇದೆಲ್ಲ ಮೇಳವಿಸಿ ಶ್ರೀಪಾದರಾಜರು ಮುಳಬಾಗಿಲಿನಲ್ಲಿ ನೆಲಸಿದ ನಂತರ, ಅವರು ತಾವೇ ಸ್ವತಃ ತಿಳಿಗನ್ನಡದಲ್ಲಿ ದೇವರನಾಮಗಳನ್ನು ರಚಿಸಿ, ಹಾಡಿ, ಕುಣಿದು, ಶ್ರೀಹರಿಗೆ ತಮ್ಮ 'ಅಂಕಿತ'[108]ದಲ್ಲಿ ರಚಿಸಿದ ಕೃತಿಪುಷ್ಪ ಸಮರ್ಪಿಸುವ ಮನೋಧರ್ಮ ಬೆಳೆಯಿತು. ಇದೇ ಹರಿದಾಸಪಂಥ ಪುನಶ್ಚೇತನ, ಪ್ರವರ್ಧನೆ, ಹಾಗೂ ಸಂಪ್ರದಾಯ ಆಗಲು ಕಾರಣವಾಯಿತು.

7. ವ್ಯಾಸಕೂಟಕ್ಕೆ ಶ್ರೀವ್ಯಾಸರಾಯರೇ ಸಂಸ್ಥಾಪಕರು, ದಾಸಕೂಟಕ್ಕೆ ಶ್ರೀಪುರಂದರ ದಾಸರೆ ಮೊದಲಿಗರೆಂದು ಹೇಳಲ್ಪಡಿದೆ.[109] ಶ್ರೀಪಾದರಾಜರು ಹರಿದಾಸ ಸಾಹಿತ್ಯದ-ಪಂಥದ ಪ್ರವರ್ತಕರಾದಂತೆ, ವ್ಯಾಸರಾಯರು ವ್ಯಾಸಕೂಟದ ಪ್ರವರ್ತಕರೆನ್ನಲು ಕಾರಣವೂ ಉಂಟು. ಅವರು ಸ್ವತಃ ತಾವೇ (ಸಂಸ್ಕೃತದಲ್ಲಿ) ರಚಿಸಿದ ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕಾ, ಅವರನ್ನು ವ್ಯಾಸ ಕೂಟದ ಆಧ್ಯಯಗಳಾಗಿಸುತ್ತದೆ. ಅದಲ್ಲದೆ, ಅವರು ತಮ್ಮ ಪ್ರಿಯ ಶಿಷ್ಯರಾದ ಶ್ರೀವಾದಿರಾಜರು, ಶ್ರೀವಿಜಯೀಂದ್ರರೇ ಮೊದಲಾದವರನ್ನು ಸಂಸ್ಕೃತದಲ್ಲಿ ಧರ್ಮಗ್ರಂಥ ರಚಿಸಲು ಸ್ಫೂರ್ತಿ ನೀಡಿದರು. ಇದಕ್ಕೆ ಶ್ರೀವಾದಿರಾಜರ "ಯುಕ್ತಿಮಲ್ಲಿಕಾ", ವಿಜಯೀಂದ್ರರ ಅನೇಕ ಗ್ರಂಥ ಹಾಗೂ ಅಪ್ಪಯ್ಯ ದೀಕ್ಷಿತರ ಗ್ರಂಥಕ್ಕೆ ಬರೆದ ಖಂಡನ ಟೀಕೆ, ಇವುಗಳು ನಿದರ್ಶನವನ್ನೊದಗಿಸುತ್ತವೆ. ಹರಿದಾಸಪಂಥ, ಬೆಳೆದದ್ದು ವ್ಯಾಸರಾಯರ ಕಾಲದಲ್ಲಿ ಎಂಬುದು ಸುವಿದಿತ.[110] ಆದ್ದರಿಂದ, ಪುರಂದರದಾಸರನ್ನು ದಾಸಕೂಟದ ಮೊದಲಿಗರಾಗಿದ್ದರೆನ್ನ ಬಹುದಾಗಿದೆ. ಈ ಒಕ್ಕೂಟ, ಅನಂತರ, ೧೯ ನೆ ಶತದವರೆಗೇನು, ಇನ್ನೂ ಬೆಳೆದೇ ಇದೆ. ಆಂದೋಲನ ರೂಪದಲ್ಲಿ, "ಈ ಎರಡೂ ಕೂಟಗಳ ಗುರಿಯೊಂದೇ-ವೇದವಿಹಿತವಾದ ತತ್ತ್ವಗಳನ್ನು ದ್ವೈತಮಾರ್ಗದನುಸಾಯಾಗಿ ವಿವರಿಸುವುದು" ಎಂಬ ಮಾತಿಗೆ ದಾಸವರೇಣ್ಯರು ಇನ್ನೂ ಹಿರಿದಾದ ಅರ್ಥವಿತ್ತರು. ವ್ಯಾಸಕೂಟದವರು ವಿದ್ವನ್ಮಾನ್ಯ ಸಾಹಿತ್ಯ ರಚಿಸಿದ್ದಲ್ಲದೆ, ದಾಸಕೂಟದಲ್ಲಿಯೂ ಪ್ರತಿನಿಧಿಸಿದರು. ದಾಸಕೂಟದವರಂತೂ ಜನತೆಯ ಕನ್ನಡದ ಆಡುಭಾಷೆಯನ್ನು ಸಂಪರ್ಕ ಮಾಧ್ಯಮವಾಗಿ ಸಮರ್ಥ ರೀತಿಯಲ್ಲಿ ಬಳಸುವುದರ ಮೂಲಕ, ಮಧ್ವಮತತತ್ವ, ಹರಿಭಕ್ತಿಗಳೆರಡನ್ನೂ ಪ್ರತಿಪಾದಿಸಿ, ಪ್ರಸಾರಗೈದರು. ವ್ಯಾಸಕೂಟದವರಿಂದ ದಾಸಕೂಟದವರು ಪ್ರೇರಣೆ, ಸ್ಫೂರ್ತಿಪಡೆದದ್ದುಂಟು, ಉದಾಹರಣೆಗೆ ವ್ಯಾಸರಾಯರು ಪುರಂದರ-ಕನಕದಾಸರಿಗೆ ಸ್ಫೂರ್ತಿಯ ನೆಲೆಯಾಗಿದ್ದರು. ತಮ್ಮ ಗುರುಗಳಾದ ಶ್ರೀಪಾದರಾಜರು ಹಾಕಿಕೊಟ್ಟ ಮಾರ್ಗದಲ್ಲಿ ವ್ಯಾಸರಾಯರು ಪ್ರವಹಿಸಿದರು. ಇದು ಒಂದು ಅಭೂತಪೂರ್ವ ಸಾಧನೆಯೆ.

8. ವೇದಾಂತ ಬೋಧನೆಗಾಗಿ ಸಂಸ್ಕೃತ (ದೇವಭಾಷೆ) ಅಲ್ಲದೆ ದೇಶಭಾಷೆ ಅಲ್ಲ ಎಂಬ ಭಾವ ಬಲಿತಿದ್ದಾಗ[111] "ಕನ್ನಡವನ್ನು ಅನಾದರಣ ಮಾಡದೆ, ಕನ್ನಡವನ್ನು

ವೈಲಿಗೆಯ ಮಾತೆಂದು ತೆಗಳದೆ ಈ ಭಾಷೆಯಲ್ಲೇ ಪರಮಾತ್ಮನನ್ನು ಕೀರ್ತಿಸಿದರು, ಲೋಕಕ್ಕೆ ಉಪದೇಶವನ್ನಿತ್ತರು".–ವ್ಯಾಸಕೂಟದಿಂದ ಸ್ಫೂರ್ತಿ ಪಡೆದು ಬೆಳೆದು ಹಬ್ಬಿದ ದಾಸಕೂಟದ ಈ ಸಾಧನೆಗೆ, 'ಈ ಪುಣ್ಯಕಾರ್ಯಕ್ಕೆ ಶ್ರೀಕಾರ ಹಾಡಿದವರು ಶ್ರೀಪಾದರಾಯರು' ಎಂಬ ಹಿರಿಯರ ಮಾತು ಗಮನಾರ್ಹ.[11] ಪೂಜೆಯ ಸಮಯದಲ್ಲಿ ಭಾಗವತರ ಮುಖದಿಂದ ಕನ್ನಡದ ದೇವರನಾಮಗಳನ್ನು ಹಾಡಿಸುವ ಸಂಪ್ರದಾಯವನ್ನು ಮೊತ್ತಮೊದಲಿಗೆ ಬಳಕೆಯಲ್ಲಿ ತಂದವರೇ ಶ್ರೀಪಾದರಾಜರು. ಆ ಉದ್ದೇಶಕ್ಕಾಗಿಯೇ ಅವರು ಅನೇಕ ತಿಳಿಗನ್ನಡ ಕೀರ್ತನೆಗಳಲ್ಲದೆ, ಭ್ರಮರಗೀತೆ, ವೇಣುಗೀತೆ, ಗೋಪೀಗೀತೆಗಳನ್ನು ರಚಿಸಿದರು. ಇವುಗಳಲ್ಲದೆ ದಾಸಸಾಹಿತ್ಯದ ಪ್ರಮುಖ ರೂಪಗಳಾದ ಕೀರ್ತನೆ, ಸುಳಾದಿ-ಉಗಾಭೋಗ, ವೃತ್ತನಾಮ ಮುಂತಾದ ಸಾಹಿತ್ಯ ಪ್ರಕಾರಗಳನ್ನೂ ಬಳಸಿ ಕೃತಿರಚನೆ ಮಾಡಿ ಸಾಧಿಸಿದರು. ವ್ಯಾಸಕೂಟ–ದಾಸಕೂಟದ ಬಗ್ಗೆ ಬಂದಿರುವ ಕರ್ನಾಟಕ ಹಿಸ್ಟರಿಯಲ್ ರಿವ್ಯೂ ಎಂಬ ಪತ್ರಿಕೆಯ ಲೇಖನ, ಹಾಗೂ ಹಂಚ್ಚೂರಾವ್ ಬೆಂಗೇರಿಯವರ ಮಾತುಗಳು ಈ ಎರಡೂ ಬಣದ ಬಗ್ಗೆ ಖಚಿತವಾದ ಅರ್ಥವೀಯುತ್ತವೆ. ಅವುಗಳನ್ನು ಹೀಗೆ ಸಂಗ್ರಹಿಸಿ ಹೇಳಬಹುದು : ವ್ಯಾಸರು–ದಾಸರೆಂಬ ಪದಗಳು ಬಳಕೆ ಬಂದುದು ಶ್ರೀವ್ಯಾಸರಾಯರ ಹಾಗೂ ಅವರ ಪ್ರಿಯ ಶಿಷ್ಯರಾದ ಶ್ರೀಪುರಂದರದಾಸರ ಕಾಲದಲ್ಲಿಯೆ. ಅನಂತರ, ಪುರಂದರದಾಸರ ಶಿಷ್ಯರು ಅನುವರ್ತಿಗಳು ದಾಸಕೂಟಸ್ಥರೆನ್ನಿಸಿಕೊಂಡರು. ಆದರೆ, ಆಮೇಲೆ ವ್ಯಾಸಕೂಟ, ದಾಸಕೂಟಗಳೆರಡಕ್ಕೂ ಬೇರೆಯದ ಅರ್ಥವೆ ಬಂದಿತು. ವ್ಯಾಸಕೂಟದವರೆಂದರೆ, ಸಂಸ್ಕೃತ ಪರಿಣತರು ಹಾಗೂ ಮತ್ತು ವೇದಾಂತ ತತ್ವಗಳ ವೇದಗಳ ಬೇರೆ ಬೇರೆ ಶಾಖೆಗಳ ಬಗ್ಗೆ ತಿಳಿವಳಿಕೆಯುಳ್ಳವರು. ಹಾಗೆಯೆ ಯಾರು ದ್ವೈತತತ್ವ ಮತದ ಸಂದೇಶವನ್ನು ಸ್ಥಳ ಭಾಷೆಯಲ್ಲಿ ಬಿತ್ತರಿಸುತ್ತಿದ್ದರೂ ಅವರನ್ನು ದಾಸಕೂಟಸ್ಥರೆಂದೂ ಕರೆಯುವ ಬಳಕೆ ಬಂದು ಬಿಟ್ಟಿತು. ದಾಸಕೂಟಸ್ಥರು ಸಾಮಾನ್ಯ ಜನತೆಗೆ ಮಾಡಿರುವ ಉಪಕಾರ ಯಾರೂ ಮರೆಯುವಂಥದಲ್ಲ.

ಉಪನಿಷತ್ತುಗಳ ಕ್ಲಿಷ್ಟವಾದ ತತ್ವದ ರಚನೆಗಳನ್ನು ಸರಳ ಸುಂದರ ಕನ್ನಡದಲ್ಲಿ ಕೇಳಲು ಮಧುರವಾದ, ಇಂಪಾದ ಕೃತಿಗಳ (ಕೀರ್ತನೆ ಇತ್ಯಾದಿ) ಮೂಲಕ ತಿಳಿಸಿ ಕೊಟ್ಟದ್ದು ದಾಸಕೂಟದವರ ಮಹತ್ಸಾಧನೆ. ಈ ಹಾಡುಗಳು ದೇಶ ಮನೆ ಮನೆಗಳಿಗೂ ಹರಡಿವೆ, ಪರಮಾತ್ಮನನ್ನು ಪ್ರಶಂಸಿಸುವ ಈ ಹಾಡುಗಳನ್ನು ಕೇಳಿದಾಗ ಹೃದಯ ತಡೆಯಲಾರದ ಆಗರದಿಂದ ಸ್ಪಂದಿಸುತ್ತದೆ.

ಹೀಗೆಲ್ಲ ಗಮನಿಸಿದಾಗ, ಅನಿಸುವುದಿಷ್ಟು : "ಪರಮಾತ್ಮನ ಜ್ಞಾನಗಮ್ಯ, ಎಂದರೆ ಶಾಸ್ತ್ರ ತಿಳಿಯದೆ ಪರಮಾತ್ಮನನ್ನು ಅರಿಯಲಾಗುವಂತಿಲ್ಲ. ಈ ಶಾಸ್ತ್ರ ಯಾವ ಭಾಷೆಯಲ್ಲಾದರೂ ಇರಬಹುದು, ಭಾಷೆ ಮುಖ್ಯವಲ್ಲ. ಈ ಪ್ರಭೇದ ಜನರು

ಯಾರನ್ನೋ ಜರಿಯಲು 'ಕೂಟ' ಶಬ್ದಗಳನ್ನು ಸೇರಿಸಿ ಹೇಳಿದುದಿರಬೇಕು. ಈ ಹೆಸರುಗಳಲ್ಲಿ ಪಥ್ಯವಿಲ್ಲ" ಎಂಬುದನ್ನು[113] ಒಪ್ಪಬೇಕಾಗುತ್ತದೆ. ಭಾಷೆ, ಭಾವನೆಗೆ ಪ್ರೇರಕ, ಪೋಷಕ, ಭಾವವಮುಖ್ಯ, ಭಾಷೆಯಲ್ಲ. ತರ್ಕಕ್ಕೆ ದೇವರು ಸಿಗುವುದಿಲ್ಲ. ಉತ್ಕಟ ಭಕ್ತಿಯಿಂದ, ಯಾರು ಬೇಕಾದರೂ ಆದನ್ನು ಒಲಿಸಿಕೊಳ್ಳಬಹುದು. ಆದಕ್ಕೆ ಇಂಥ ಜಾತಿ ಮಂತ ಬೇಕೆಂಬ ಕಟ್ಟು ಬೇಕಿಲ್ಲ. ಹರಿದಾಸರು ಸಾರಿದ್ದು ಇದನ್ನೇ. ಸಾಹಿತ್ಯ, ನೃತ್ಯ ಸೇವೆ ಕೂಡ ಅವರು ಮಾಡಿ ದೈವದೊಲುಮೆ ಪಡೆದಿದ್ದಾರೆ.

**ಚರ್ಚೆಗೆ ಮುಂಗಿವು**

ಈ ಚರ್ಚೆಗೆ ಪೂರಕ ಪೋಷಕವಾಗಿ ಹೀಗೆ ಹೇಳಬಹುದು : ವ್ಯಾಸಕೂಟ, ದಾಸ ಕೂಟದವರು ಒಂದೇ ಲಕ್ಷ್ಯವುಳ್ಳವರು. ದ್ವೈತತತ್ತ್ವವೊಂದಲ್ಲದೆ, ಇಡೀ ಮಾನವ ಸಮುದಾಯದ ಹಿತ ಚಿಂತಕರು, ಸಮಾಜ ಸುಧಾರಕರು. ವ್ಯಾಸಕೂಟ[114] ಜ್ಞಾನ ಪ್ರತಿಬಂಧಕವಾಗಿ ಬಂದ ಆಕ್ಷೇಪಗಳನ್ನು ಅಡಗಿಸುವುದಕ್ಕೆ ಮಾಡಿದ ಪ್ರಯತ್ನ. ದಾಸ ಕೂಟವು ಬಂದ ಆಕ್ಷೇಪಗಳು ಅಡಗಿದ ಮೇಲೆ ಪ್ರಮಾಣಗಳಿಂದ ಸಿದ್ಧವಾದ ಪ್ರಮೇಯ ಗಳನ್ನು ಅನುಷ್ಠಾನ (ಆಚರಣೆ)ದಲ್ಲಿ ತರಲು ಮಾಡಿದ ಉಪದೇಶ ಕ್ರಮ"ವೆನ್ನಬಹುದು. ಆದನ್ನು ಉಪದೇಶ ಮಾತ್ರವಲ್ಲದೆ ಆಚರಣಾ ಕ್ರಮವಾಗಿಯೂ ಹರಿದಾಸರು ಸಾಧಿಸಿ ದರು. ವ್ಯಾಸಕೂಟದಲ್ಲಿ ದಾಸಕೂಟದ ಧ್ಯೇಯವೂ, ದಾಸಕೂಟದಲ್ಲಿ ವ್ಯಾಸಕೂಟ ಸ್ಥರ ಆಭಿಮಂತವನ್ನು ತಿಳಿಯ ಹೇಳುವ ಧ್ಯೇಯವೂ ಓತಪ್ರೋತವಾಗಿ ಇದೆ. ಅದರಲ್ಲಿ ಇವೆರಡರ ಸಾಮರಸ್ಯ ಮುಖ್ಯ. ವ್ಯಾಸಕೂಟ, ದಾಸಕೂಟಗಳ ಧ್ಯೇಯವನ್ನು ಅರಿತು, ಸಮಾವೇಶಗೊಳಿಸಿಕೊಳ್ಳದಿದ್ದರೆ ಶ್ರೀಮಧ್ವಾಚಾರ್ಯರು ತಿಳಿಸಿರುವ ದೃಢಭಕ್ತಿ ಬರ ಲಾರದು. ಆದ್ದರಿಂದ ಎರಡು ಕೂಟದವರ ಕಾರ್ಯ, ಕೃತಿ ಅರ್ಥಮಾಡಿಕೊಳ್ಳುವುದು ಮುಖ್ಯ. ಇನ್ನೂ ಗಮನಿಸಬೇಕಾದ್ದೆಂದರೆ ವ್ಯಾಸಕೂಟದವರು ದಾಸಕೂಟದಲ್ಲಿಯೂ ಮಿಳಿತರಾಗಿದ್ದಾರೆ. ಉದಾ : ಶ್ರೀಪಾದರಾಜರು, ಶ್ರೀವ್ಯಾಸರಾಯರು, ಶ್ರೀವಾದಿ ರಾಜರು, ವಿಜಯೀಂದ್ರರು, ಶ್ರೀರಾಘವೇಂದ್ರರು ಹೀಗೆ. ಹಾಗೆಯೆ ದಾಸಕೂಟ ದವರು ವ್ಯಾಸಕೂಟಸ್ಥರ ಕಾರ್ಯ ಮುಂದುವರೆಸಿದ್ದಾರೆ. (ಉದಾ : ಜಗನ್ನಾಥ ದಾಸರು ಹಾಗೂ ಹರಿಕಥಾಮೃತಸಾರ.)[115] "ವೇದಾಂತ ತತ್ತ್ವಗಳನ್ನು ತಿಳಿದ ಕನ್ನಡಿಗ ನೊಬ್ಬ, ಸಂಸ್ಕೃತ ಏನೇನೂ ಬಾರದವನಾದರೂ, ಅವನೇನೆ ಅರಿತಿದ್ದರೂ ದಾಸ ಸಾಹಿತ್ಯಕ್ಕೆ ಪೂರ್ಣ ಋಣಿಯಾಗಿರಬೇಕಾಗುತ್ತದೆ. ಹರಿದಾಸರ ಕಾವ್ಯ ಕೃತಿ ರಚನೆ ಗಳಲ್ಲವೂ ಆಧುನಿಕ ಕನ್ನಡ ಸಾಹಿತ್ಯಕ್ಕೂ ಮಾದರಿಗಳಾಗಿವೆ"[116] ಎಂಬ ಮಾತು ದಾಸ ಕೂಟಕ್ಕೆ ಅಕ್ಷರಶಃ ಶಂಸನೀಯ ನುಡಿಯಾಗಿ ಅನ್ವಯಿಸುತ್ತದೆ.

ದಾಸಕೂಟ ನಮ್ಮ ಸಮಾಜದಿಂದ ಈಗ ಅಸ್ತಿತ್ವದಲ್ಲಿಲ್ಲವೆಂದು ಹೇಳಬೇಕಾಗಿದೆ. ಕೆಲವರು ಎಲ್ಲೋ ಅಲ್ಲಲ್ಲಿ ದಾಸರ ಹಾಡುಗಳನ್ನು ಹೇಳಿಕೊಂಡು ಬೀದಿಯಲ್ಲೊ, ರೈಲು, ಬಸ್ ನಿಲ್ದಾಣಗಳಲ್ಲೊ ಆಥವಾ ಎಲ್ಲಾದರೂ ಸಾಂಪ್ರದಾಯಿಕ ವಿಶೇಷ ಸಮಾರಂಭ

ಗಳಲ್ಲೊ ಕಾಣಿಸಿಕೊಳ್ಳುತ್ತಾರೆ. ಒಂದು ದುರ್ದೈವವೆಂದರೆ, ಮೂಲದಲ್ಲಿ ಆಯಾ ದಾಸರು ಯಾವ ಭಾವನೆಯಿಂದ, ಯಾವ ಪರಿಸರದಲ್ಲಿ ಎಂಥ ಸಂದರ್ಭದಲ್ಲಿ ತಮ್ಮ ಹೃದಯದ ಭಾವನೆಗಳನ್ನು ಕೃತಿಯಲ್ಲಿ ತೋಡಿಕೊಳ್ಳಲೆತ್ನಿಸಿದರೂ ಆ ಸುಸ್ಪರ್ಶಿಭಾವ ಗಳನ್ನು ಇಂದು ಅರ್ಥಮಾಡಿಕೊಂಡು, ತಾದಾತ್ಮ್ಯತೆಯಿಂದ ಹಾಡುವವರು ವಿರಳ. ಇಲ್ಲವೇ ಇಲ್ಲ ಎಂದರೂ ಸರಿಯೆ. ದಾಸಕೂಟದ ಪ್ರಮುಖ ಉದ್ದೇಶಗಳಲ್ಲೊಂದಾಗಿದ್ದ ಸಮಾಜ ಸುಧಾರಣೆ, ಜಾತಿ ಕುಲ ಭಾವನೆಗಳಲ್ಲಿ ಅಡಕ ಆಗಿರುವ ಕೀಳ್ತನ ತೊಡೆದು ಸಂಸ್ಕೃತಿವಂತ ಸಮಾಜ ನಿರ್ಮಿಸುವಿಕೆ, ಅವರಿಗೆ ಹೇಗೆ ಕನಸೆ ಆಯಿತೊ ಆ ಜಾತಿಯ ಗುಂಪುಗಾರಿಕೆ ಇನ್ನೂ ಹೆಚ್ಚಿ ಈಗ ಪರಸ್ಪರ ಆಕ್ರೋಶ, ವೈಷಮ್ಯ ಹೆಚ್ಚಿರುವುದನ್ನು ಪ್ರತ್ಯಕ್ಷವಾಗಿ ನೋಡುತ್ತಿದೇವೆ. ವಚನಕಾರರಕ್ರಾಂತಿ, ಹರಿದಾಸರ ಭಕ್ತಿ ಆಂದೋಲನದ ಹಿನ್ನೆಲೆಯಲ್ಲಿ ಅವರಿಗಿದ್ದ ಸಮಾಜ ಸುಧಾರಣಾ ಮನೋಧರ್ಮ ನಾವು ಅರಿಯಲಿಲ್ಲ. ಹೃದಯದ ಬಾಗಿಲು ತೆರೆದು ಆ ಅರಿವಿನ ಕನಕ ಕಿರಣವನ್ನು ಒಳಬರಮಾಡಿಕೊಂಡು ಬೆಳಕು ಮಾಡಿಕೊಳ್ಳಲಿಲ್ಲ. ದಾಸಕೂಟದ ಪ್ರಮುಖ ಉದ್ದೇಶವಿದು. ಕನಸಾಗಿ ಇರಲಿ. ದುರ್ಲಭವೂ ಆಗಿದೆ : ಹಾಗೇ "ಉಂಛವೃತ್ತಿ" ಹರಿದಾಸರ "ಮಧುಕರವೃತ್ತಿ" ಈಗ ತನ್ನ ಸಾಂಸ್ಕೃತಿಕ ಮೌಲ್ಯ ಕಳಕೊಂಡಿದೆ. ಭಿಕ್ಷೆ, ತೀರ ಸಾಮಾನ್ಯ ಆಗಿದೆ. ಇನ್ನು ವೈರಾಗ್ಯದ ಮಾತೆಲ್ಲಿ ? ಹಾಗೂ ದಾಸಕೂಟಸ್ಥರು ತಿಳಿದಿದ್ದ ಆ ಔಚಿತ್ಯ, ಅರಿವು ಈಗ ಕಾಣಬಂದಾತೆ ? "ಕಾಲಾಯ ತಸ್ಮೈ ನಮಃ, ಚಕ್ರಾರಪಂಕ್ತಿರಿವಗಚ್ಛತಿ,......" ಎಂದುಕೊಳ್ಳಬೇಕಷ್ಟೆ. ಆಗಿನ ಕಾಲಕ್ಕೆ ಗಳಿನ ಶತಮಾನದಿಂದೀಚೆಗೆ ಗಿಲರ ಕೊನೆಯ ವರೆವಿಗೂ ದಾಸರ ಪರಂಪರೆಯೆ ಆಗಿ ಹೋಗಿರುವ ಹರಿದಾಸರು ಗುರುಗಳ ಸಹವಾಸ, ಅಧ್ಯಾಪನ, ಅಧ್ಯಯನ, ಆತ್ಮಸಾಕ್ಷಾತ್ಕಾರಕ್ಕಾಗಿ ಸಾಧನೆ-ಇವುಗಳಲ್ಲಿ ಕಾಲ ಕಳೆಯು ತ್ತಿದ್ದಿರಬೇಕು. ಅವರು ತಮ್ಮ ದಾಸವೃತ್ತಿಯನ್ನು-ಅಂದರೆ ಹಾಡುಗಳನ್ನು ರಾಗ ರಾಗ ವಾಗಿ ಹಾಡುತ್ತ, ತಂಬೂರಿಯ ಶ್ರುತಿ ಮೀಟುವ, ಕಾಲಿಗೆ ಗೆಜ್ಜೆ ಕಟ್ಟಿ ನರ್ತಿಸುತ್ತ, ಚಿಟಿಕೆ ತಾಳ ಹಾಡುತ್ತ ಹರಿಭಕ್ತಿ ಡಿಂಡಿಮದ ಡಂಗೂರ ಬಾಜಿಸುತ್ತಿದ್ದಿರಬೇಕು. ಪ್ರತಿ ನಿತ್ಯದ ಓಡಾಟದಿಂದಾಗಿ ಅವರಿಗೆ ಸಮಾಜದ, ಜನತೆಯ ಬದುಕು, ರೀತಿನೀತಿ ಸಂಪೂರ್ಣ ಪರಿಚಯವಿದ್ದಿತು. ಆ ಬದುಕನ್ನು ಎಲ್ಲ ರೀತಿಯಲ್ಲಿ ಶುದ್ಧೀಕರಿಸಿ, ಧರ್ಮ-ನೀತಿಯ ಚೌಕಟ್ಟಿನಲ್ಲಿ ಸಮಾಜವನ್ನು ಸ್ವಸ್ಥವಾಗಿಸುವುದೆ ಅವರ ಧ್ಯೇಯ ಆಗಿತ್ತು. ಜನರು ಅವರಿಗೆ ನೀಡುವ ಭಿಕ್ಷೆ ಅವರಿಗೆ ಮುಖ್ಯವೆನಿಸಲಿಲ್ಲ. ಜನತೆಯಲ್ಲಿ ಧರ್ಮ ಪ್ರತಿ ಪಾದನೆ ಪ್ರಸಾರ, ಭಕ್ತಿಯ ಅಲೆಯನ್ನು ಮನದಲ್ಲಿ ಏಳಿಸುವಿಕೆ-ಇದಕ್ಕೆ ಅವರು ದೀಕ್ಷೆ ಪಡೆದಿದ್ದುದು. ತಮ್ಮ ಮುಕ್ತಿಯ ಸ್ವಾರ್ಥವೊಂದೇ ಅವರ ಗುರಿಯಾಗಿರಲಿಲ್ಲವೆಂಬುದು ಗಮನಿಸಬೇಕಾದ ಅಂಶ.

ಇಲ್ಲಿ ಮತೀಯ ಚೌಕಟ್ಟು ಬರಲಿಲ್ಲವೆ ಎನ್ನಬಹುದು. ದಾಸಕೂಟ ಸ್ಥಾಪನೆ ಯಾದ ಉದ್ದೇಶಗಳಲ್ಲಿ ಒಂದು, ಮಧ್ವಮತ ಪ್ರತಿಪಾದನೆ, ಪ್ರಸಾರ. ಆದರೂ, ಅವರು ಪಂಡಿತಮಾನ್ಯ ಆದ ಗ್ರಂಥ ರಚನೆ, ಟೀಕೆ-ಟಿಪ್ಪಣಿ, ಆಚಾರ-ವ್ಯಾಖ್ಯಾನಗಳಿಗೆ

ಮನಸೆಗೊಡಲಿಲ್ಲ. ತಮ್ಮದೆ ಆದ ಪಂಥ-ಪಥ ನಿರ್ಮಿಸಿಕೊಂಡರು. ಪಂಡಿತರ ಕೆಲಸ ಪಂಡಿತರದ್ದು, ಸಾಮಾನ್ಯರನ್ನು ಸೇರುವ ಕೆಲಸ ನಮ್ಮ ಪಾಲಿನದೆಂದರು ಹರಿದಾಸರು. ದಾಸವೃತ್ತಿ ಸುಲಭವೇನಲ್ಲ. ಅದನ್ನು ಶ್ರೀಪುರಂದರದಾಸರೇ ಅನೇಕ ಕಡೆ ಆಳವಾಗಿ ತೋಡಿಕೊಂಡಿದಾರೆ. ಆದರೆ ಇದಕ್ಕಿಂತ ಮುಖ್ಯವಾದದ್ದು, ಸಮಾಜ ಸುಧಾರಣೆ ಅದೇ ಅವರ ಧ್ಯೇಯ. ಮಧ್ವಮತ ಪ್ರಸಾರವೇ ದಾಸಸಾಹಿತ್ಯದ ದ್ವಿತೀಯ ಘಟ್ಟದ ಪ್ರಮುಖ ಪ್ರವರ್ತಕರಾದ ವಿಜಯದಾಸರ ಧ್ಯೇಯವೆನಿಸುತ್ತದೆ. ಅವರ ನೂರಾರು ಕೃತಿ, ಸುಳಾದಿ, ಉಗಾಭೋಗಗಳನ್ನು ತಿರುವಿ ಹಾಕಿದಾಗ ಅದೇ ಮತ ಪ್ರತಿಪಾದಕ ಮನೋಧರ್ಮ 'ಭಕ್ತಿಯಲ್ಲಿ ಭಾಗಣ್ಣ'ನೆನಿಸಿದ ವಿಜಯದಾಸರ ಶಿಷ್ಯವರ್ಯರಾದ ಶ್ರೀ ಗೋಪಾಲದಾಸರಲ್ಲಿಯೂ ಮುಂದುವರೆದಿದೆ. ಜಗನ್ನಾಥದಾಸರಂತೂ 'ಹರಿಕಥಾ ಮೃತಸಾರ'ದಂಥ ಮಧ್ವಮತವನ್ನು ಸಮರ್ಥ ರೀತಿಯಲ್ಲಿ ಪ್ರತಿಪಾದಿಸುವ ಕಾವ್ಯ ವನ್ನೆ ಬರೆದು ಸಮರ್ಪಿಸಿದ್ದಾರೆ. ಇದೇ ಮಾರ್ಗವನ್ನು ಅನಂತರದ ಹರಿದಾಸರೂ ಅನುಸರಿಸಿರುವಂತಿದೆ. ಶ್ರೀದವಿಠಲರು, ಶ್ರೀಪ್ರಾಣೇಶವಿಠಲರು ಮುಂತಾದ ಹರಿದಾಸರ ಕೃತಿಗಳನ್ನು ಗಮನಿಸಿದಾಗ ಈ ತೆರನಾದ ದೃಷ್ಟಿಕೋನದ ಪರಿಮಿತ ವ್ಯಾಪ್ತಿಯಿಂದಾಗಿ ದಾಸಕೂಟ, ತನ್ನ ಪ್ರಥಮ ಹಂತದಲ್ಲಿರಿಸಿಕೊಂಡಿದ್ದ ಕ್ರಾಂತಿಕಾರಕ ಪ್ರವೃತ್ತಿಯನ್ನು (militant tendency) ಬಿಟ್ಟು, ಕೇವಲ ಮತೀಯ ಆಗಿಬಿಟ್ಟಿತು ಎನಿಸುತ್ತದೆ. ಅದಕ್ಕೆ ಕಾರಣ, ವಿಧರ್ಮೀಯ ಪ್ರಭಾವ, ಅದರಲ್ಲೂ ಮುಸ್ಲಿಮರ ಹಾವಳಿ ಹೆಚ್ಚಿದ ಪ್ರಾಂತ್ಯ ಆದ ರಾಯಚೂರು-ಅಲ್ಲಿಯ ಸುತ್ತಮುತ್ತಣ ಪರಿಸರದಿಂದ ಅವತರಿಸಿದ ದಾಸರು ಇದ್ದ ಸಂದರ್ಭ ಎನಿಸುತ್ತದೆ. ಆದರೂ ದಾಸಕೂಟ ತನ್ನ ಧ್ಯೇಯದಲ್ಲಿ ವಿಫಲಗೊಂಡಿತೆ ? ಎಂಬ ಪ್ರಶ್ನೆ ಒಡಮೂಡಿದಾಗ ಬರುವ ಉತ್ತರ : ದಾಸಕೂಟ ಸ್ಥಾಪಿತ ಆದದ್ದೆ ಭಕ್ತಿಯ ಪ್ರಸಾರದ ಪ್ರಧಾನೋದ್ದೇಶದಿಂದ. ಅದಕ್ಕೆ ಮಧ್ವಮತ ಪ್ರೇರಕ ಶಕ್ತಿ, ಮಧ್ವಾಚಾರ್ಯರೆ ಸ್ಫೂರ್ತಿಯ ಕೇಂದ್ರ ಬಿಂದು. ಆದರಿಂದ, ದಾಸ ಕೂಟ ತನ್ನ ಪ್ರಮುಖ ಧ್ಯೇಯವನ್ನು ಮುಂದುವರೆಸಿತು. ಕನಕದಾಸರು, ವೈಕುಂಠ ದಾಸರು, ಪುರಂದರದಾಸರು ಕೂಡ ಇದಕ್ಕೆ ಸ್ವಲ್ಪ ಅಪವಾದ ಆದರು. ಇನ್ನೂ ಒಂದು ಕಾರಣವನ್ನು ಊಹಿಸಬಹುದು. ದಾಸವೃತ್ತಿ ಸ್ವೀಕರಿಸುವವರಲ್ಲಿಯೂ ಕೆಲವಾರು ವಿಶೇಷ ಸಾಮರ್ಥ್ಯಬೇಕಾಗುತ್ತದೆ. ಅವರ ಉಚ್ಚಾರಣೆ, ಸಂಗೀತದ ತಿಳಿವಳಿಕೆ, ಕಂಠಮಾಧುರ್ಯ, ಭಕ್ತಿ, ಶ್ರದ್ಧೆ, ಜ್ಞಾನ ಆರ್ಜಿಸುವ ಆಸ್ಥೆ, ಎಲ್ಲ ಎಲ್ಲ ಬೇಕೇಬೇಕಾಗುತ್ತದೆ. ಇದು ಮೇಳವಿಸುವುದು ಅಪೂರ್ವವೇ ಶ್ರೀವ್ಯಾಸರಾಯರ ಕಾಲ, ಅವರ ಗುರುಗಳಾದ ಶ್ರೀಪಾದರಾಜರ ಕಾಲ, ಅಂಥ ಗುರು-ಶಿಷ್ಯರಿದ್ದ ಕಾಲ. "ದಾಸರೆಂದರೆ ಪುರಂದರದಾಸ"ರಂಥ, 'ಕನಕ'ನಂಥ, ಜ್ಞಾನಿಯಾಗಲಿ ಇದ್ದ ಕಾಲ.

ಈಗ ಹರಿದಾಸರ ಸೇವೆ ನಮ್ಮ ಸಮಾಜಕ್ಕೆ ಬೇಕಿಲ್ಲವೆ ? ಏಕೆ ಬೇಡ ? ಕೀರ್ತನ ಕಲೆ, ಜನ ಪ್ರೇರಣೆ, ಸಂಘಟನೆಗೆ ಮಾಧ್ಯಮ ಆಗಬಲ್ಲುದು. ರಾಜಕೀಯ ಎಂತೇ ಆಗಲಿ. ಸಮಾಜ ಸುಧಾರಣೆಗಾಗಲಿ, ಹರಿದಾಸರಂಥ ಸಮಾಜ ಸೇವಕರು ಬೇಕೇ

ಬೇಕು. ಹಾಗೂ ಬೆಳಗ್ಗೆಯೆ ಎದ್ದು ಭಗವನ್ನಾಮ ಕೇಳುವ ಪುಣ್ಯ ಗಳಿಗೆಯೆನ್ನು ಯಾವ ಭಾರತೀಯ ಆಸ್ತಿಕ ಬೇಡವೆಂದಾನು ? ನಾಸ್ತಿಕನಾದರೂ, ಸಮಾಜ ಸುಧಾರಣೆಗೆ ಈ ಹರಿದಾಸ ಚಳುವಳಿಯಂಥ ಆಂದೋಲನ ಬಳಸಿಕೊಳ್ಳಬಹುದೆನ್ನಿಸುತ್ತದೆ. ಆದರೆ ಮಾಡುವವರು ಯಾರು? ಸ್ವಯಂಪ್ರೇರಣೆ ಬರುವುದು ಹೇಗೆ, ಜೊತೆ ಪಾಡೇ ದುರ್ಭರ ಆಗಿರುವಾಗ : ದಾಸಕೂಟ ಅಂತೆಯೇ ಕಣ್ಮರೆ ಆಗುತ್ತಿದೆ. ಎಲ್ಲೋ ಅಲ್ಲಲ್ಲಿ ಯಾವಾಗ ಲಾದರೂ ಜರುಗುವ ಮತ-ಧರ್ಮ ಗೋಷ್ಠಿ ಸಮ್ಮೇಳನಗಳಲ್ಲಿ ಒಬ್ಬಿಬ್ಬರು ಹರಿದಾಸರು ಕಾಣಸಿಗುತ್ತಾರೆ : ದಾಸಕೂಟಸ್ಥರ ಸ್ಥಿರ ಕಾಣಿಕೆಯಾದ ದಾಸಸಾಹಿತ್ಯ ಪುನಃ ಕನ್ನಡಿಗ ರೆಲ್ಲರಲ್ಲೂ ಅನುಕರಣಿಸಿ, ಇತರ ಭಾಷೆಗಳಲ್ಲೂ ಅನುವಾದಿತ ಆಗುವ ಸುಸಂದರ್ಭ ಬರಬೇಕಾದರೆ ಧಾರ್ಮಿಕ ಸಂಸ್ಥೆ, ಮಠಗಳ ಪಾತ್ರ ಹೆಚ್ಚಿನದಾಗಬೇಕಿದೆ. ನಿತ್ಯದ ಪೂಜಾ ಸೇವಾಂಗಗಳಲ್ಲಿ ಹಾಡುವ, ಸಂಪ್ರದಾಯ ಪುನರ್ ಸ್ಥಾಪಿತಗೊಳ್ಳಬೇಕು, ಒಡವ ಬಲ್ಲಿದರನ್ನದೆ ದಾಸವಾಣಿಯಲ್ಲಿ ಗೌರವ, ಪ್ರಸರಿಸುವ ಭಾವನೆ ಬೆಳೆದರೆ ಮತ್ತೆ ದಾಸಕೂಟ ದಾಂಗುಡಿಯಿಟ್ಟೀತೇನೊ. ಅದು ಈಗಣ ಪರಿಸ್ಥಿತಿಯಲ್ಲಿ ನೆರವೇರುವುದು ಎಷ್ಟರ ಮಟ್ಟಿಗೆ ಸಾಧ್ಯ ?....

## ಹರಿದಾಸ ಸಾಹಿತ್ಯದ ಸ್ವರೂಪ

ಆಧ್ಯಾತ್ಮದ ಅನುಭವದ ವಾಗ್ರೂಪದ ಅಭಿವ್ಯಕ್ತಿಯಾಗಿ ದಾಸಸಾಹಿತ್ಯವನ್ನು ಪರಿಗಣಿಸಬೇಕಾಗುತ್ತದೆ. ಲೌಕಿಕದ ಆಗುಹೋಗುಗಳನ್ನು ಕುರಿತ ಪ್ರಸ್ತಾಪಗಳಿದ್ದರೂ, ಪ್ರಧಾನವಾಗಿ ದಾಸ ಸಾಹಿತ್ಯದ ಲಕ್ಷ್ಯ ಆಧ್ಯಾತ್ಮಿಕತೆ-ಹಾಗೂ ಪರಿಭಕ್ತಿ. ಇದರ ಸಂಗಡವೇ ತಾವು ಅನುಸರಿಸಿದ್ದ ಮಧ್ವಮತ ಪ್ರಸಾರ. "ಹೊಸ ತತ್ವ, ಧರ್ಮ ಇವುಗಳ ಪ್ರಸಾರಕ್ಕೆ ಹೊಸ ವಾಹಕವಾಗಿ ಜನಭಾಷೆ ತಲೆಯೆತ್ತುವುದು.......ಜನ ಜೀವನದ ತಿದ್ದುಪಾಡಿಗೆ ಮತ್ತು ಮತ ಪ್ರಚಾರಕ್ಕೆ ಒಂದು ಸಾಧನವಾಗಿ ಜನ ಭಾಷೆ ಯಲ್ಲಿ ಸಾಹಿತ್ಯವು ಕಣ್ದೆರೆಯುತ್ತದೆ." 117 ಕ್ರಿ.ಶ.೧೨ನೆ ಶತಮಾನದಿಂದೀಚೆಗೆ ಕನ್ನಡ ಸಾಹಿತ್ಯದ ದಿಸೆಯೆ ಬದಲಾಯಿಸಿತೆನ್ನಬೇಕು. ಕನ್ನಡ ನಾಡಿನ ಶಿವಶರಣರು, ಅಡು ನುಡಿಯನ್ನು ಸಮರ್ಥ ರೀತಿಯಲ್ಲಿ ಬಳಸಿ "ಕಿರಿದರೊಳ್ ಪಿರಿದರ್ಥಮಂ" ತುಂಬಿ ನುಡಿದ ವಚನದ ಬಂಡನ್ನು ಬಹುಜನ ಸಮಾಜ, ಸಹೃದಯರುದವರು ಆಸ್ವಾದಿಸಿ, ಮೆಚ್ಚಿದರು. ವಚನ, ಕನ್ನಡ ಸಾಹಿತ್ಯದ ಒಂದು ವಿಶಿಷ್ಟ ಪ್ರಕಾರ ಆದದ್ದು, ತನ್ನ ಹಿರಿಮೆ ಗಳಿಸಿದ್ದು, ಬಸವಾದಿ ಶಿವಶರಣರ ಮೂಲಕ. ಆದರೆ, ಅದರಲ್ಲಿ ಅನುಭಾವವನ್ನು ಹಾಸಂಹೊಕ್ಕಾಗಿ ಒಡಮೂಡಿಸಿದ ಎಲ್ಲ ವಚನಕಾರರೂ ಹೊಸ ಸಾಹಿತ್ಯ ಪ್ರಕಾರ ನಿರ್ಮಿತಿಗೆ ಕಾರಣರಾದರು. ಇದೇ ಪರಂಪರೆ ಮುಂದುವರೆದು ಕ್ರಿ.ಶ.೧೪ನೆ ಶತ ಮಾನದ ಈಚೆಗೆ ಆರಂಭ ಆದ ಭಕ್ತಿ ಚಳವಳಿ, ಹರಿದಾಸರ ಭಕ್ತಿಯ ಆಂದೋಲನ, ಮತನಕಾರರ ಹಾದಿ, ದೇಸಿಯ ಬಳಕೆ, ಜನ ಭಾಷೆಯ ಸಾಹಿತ್ಯವನ್ನು ಮನಗಂಡಿತು, ತನ್ನದೆ ಆದ ನಿಡಿದಾದ ಹಾದಿ, ಪಂಥ, ಪಥ ನಿರ್ಮಿಸಿತು. ಕನ್ನಡ ಹರಿದಾಸ

ಸಾಹಿತ್ಯ ಮೊಳಕೆಯೊಡೆದದ್ದು ಈ ದೇಸಿ ಬಳಕೆಯ ಸಂಕ್ರಮಣ ಯುಗದಲ್ಲಿ. ಸಂಸ್ಕೃತ ಮಾತ್ರವೇ ಪಂಡಿತ ಮಾನ್ಯ, ದೇವಭಾಷೆಯಾಗಿದ್ದು, ಮಠ, ದೇವಾಲಯ, ರಾಜಾಶ್ರಯಗಳಲ್ಲಿ ಬೆಳೆಯಿತೆ ವಿನಾ ಜನಸಾಮಾನ್ಯದಲ್ಲಿ ಜ್ಞಾನಪಿಪಾಸೆ ಹೆಚ್ಚಿಸಿ, ಅಧ್ಯಾತ್ಮ ಅರಳಿಸುವ ಸಂಪರ್ಕ ಸಾಧನ ಆಗಲಿಲ್ಲ. ಮಧ್ವಾಚಾರ್ಯರಾದಿಯಾಗಿ ಎಲ್ಲ ಆಚಾರ್ಯರೂ ಬೋಧಿಸಿದ ಮತ-ಧರ್ಮ ಸಾಹಿತ್ಯ, ಕಾವ್ಯ, ಸ್ತೋತ್ರ, ಪ್ರಬಂಧ, ಎಲ್ಲ ಇದ್ದುದೂ ಸಂಸ್ಕೃತದಲ್ಲೇ. ತಮಿಳುನಾಡಿನಲ್ಲಿ ಮಾತ್ರ ಆಳ್ವಾರರ ತಮಿಳು ದಿವ್ಯ ಪ್ರಬಂಧಗಳು ವಿಷ್ಣುಭಕ್ತಿ, ನಾರಾಯಣ ಸರ್ವೋತ್ತಮತತ್ವವನ್ನು ಸಮರ್ಥ ರೀತಿಯಲ್ಲಿ ಪ್ರತಿಪಾದಿಸಲು ಪ್ರಮುಖ ಕಾರಣ, ಬಳಸಿದ ಜನಭಾಷೆ (ತಮಿಳು ಭಾಷೆ) ಸಾಮಾನ್ಯನ ಹೃದಯಾಂತರಾಳಸ್ಪರ್ಶಿ ಆಗಲು ಇದು ಸಾಧ್ಯ ಮಾಡಿಸಿತು. ಭಕ್ತಿ ಚಳವಳಿಯ ಈ ಜನಭಾಷೆಯ ಬಳಕೆ, ದಾಸಸಾಹಿತ್ಯಕ್ಕೂ ಹೊರತಾಗಲಿಲ್ಲ. ಹದಿನಾಲ್ಕನೆಯ ಶತಮಾನದಲ್ಲಿ ಆರಂಭ ಆದ ಕುರುಹುಗಳಿರುವ ದಾಸಸಾಹಿತ್ಯ ಭಾಗವತ ವಾಙ್ಮಯವನ್ನು ರೂಢಿಸಿಕೊಂಡು ವಿಪುಲವಾಗಿ ಬೆಳೆದದ್ದು ೧೫ನೆ ಶತಮಾನದಿಂದೀಚೆಗೆ. ಅದಕ್ಕೆ ಆಳಿದ ವಿಜಯನಗರ ಸಾಮ್ರಾಜ್ಯ, ಸಮಗ್ರ ಭಾರತದ ಪೂರ್ವ ಪರಂಪರೆಯ ವೈದಿಕಧರ್ಮವನ್ನು ಅದು ಎತ್ತಿ ಹಿಡಿದದ್ದು ಸಹ ಪೋಷಕ ಆಯಿತು. ದಾಸ ಸಾಹಿತ್ಯ ಸ್ವರೂಪ ತಾಳಿದ ಬಗ್ಗೆ ಕನ್ನಡ ಸಾಹಿತ್ಯ ಚರಿತ್ರಕಾರರ ಮಾತು ಗಮನಾರ್ಹ : "...... ಭಾಗವತ ಸಾಹಿತ್ಯದ ಒಂದು ವಿಶಿಷ್ಟ ಶಾಖೆಯಾಗಿ ಹಿಂದಿನ ಯುಗಗಳಲ್ಲಿ (ಸು. ೧೪ ನೆ ಶ.) ಮೊಳೆತ ದಾಸವಾಙ್ಮಯವು ಈ ಯುಗದಲ್ಲಿ (೧೫ನೆ ಶ.) ಸಮೃದ್ಧವಾಗಿ ಬೆಳೆಯಿತು. ಸ್ಥಿರವಾದ ಪರಂಪರೆಯುಳ್ಳ ದಾಸಕೂಟವೆಂಬ ಒಂದು ಸಂಸ್ಥೆ, ಜನ ಸಂಸ್ಕಾರಕವಾದ ಒಂದು ಆಂದೋಲನ ಎಂಬ ಸ್ವರೂಪ ತಾಳಿತು. ಅದು ಮಾಧ್ವತತ್ವ ಮತ್ತು ಆಚಾರ ಧರ್ಮವನ್ನು ಕನ್ನಡದಲ್ಲಿ ಪ್ರಚಾರಿಸಿತು. ಅದಕ್ಕಿಂತ ಹೆಚ್ಚಾಗಿ ವಿಶಾಲವಾದ ಭಾಗವತ ಮನೋಧರ್ಮವನ್ನೂ ಸಾಮಾಜಿಕ ನೀತಿಯನ್ನೂ ಬೋಧಿಸಿತು. ಪದ, ಸುಳಾದಿ, ಉಗಾಭೋಗ ಈ ರೂಪಗಳಲ್ಲಿ ಅದು ಹೊರಹೊಮ್ಮಿ ಕರ್ನಾಟಕ ಸಂಗೀತವನ್ನು ಜನಪ್ರಿಯಗೊಳಿಸಿತು. ಇಲ್ಲಿ ದಾಸಸಾಹಿತ್ಯದ ಸ್ವರೂಪ, ಪ್ರಕಾರಗಳನ್ನೂ ನಾವು ಕಾಣುತ್ತೇವೆ. ಕನ್ನಡ ಸಾಹಿತ್ಯದ ತವನಿಧಿಗಳಲ್ಲಿ ಪ್ರಮುಖವಾದವು, ವಚನಸಾಹಿತ್ಯ, ದಾಸಸಾಹಿತ್ಯ. "ಹಿಮಾಲಯದ ಎತ್ತರದಿಂದ ಹರಿದು ಬಂದ ಗಂಗೆ ಬಯಲಿನಲ್ಲಿಳಿದು ನೆಲವನ್ನೆಲ್ಲ ಫಲದ್ರೂಪ ಮಾಡುವಂತೆ ಕನ್ನಡ ಸಾಹಿತ್ಯ ಶರಣರ ಮತ್ತು ದಾಸರ ಸಾಹಿತ್ಯಗಳಲ್ಲಿ ಚಿತ್ತದ ಎತ್ತರದಿಂದ ಹುಟ್ಟಿತು, ಕೆಳಗಿನ ಎಲ್ಲ ಜನದವರೆಗೆ ಹಬ್ಬಿಕೊಂಡಿತು. ಜನತೆಯಲ್ಲಿ ಸಂಸ್ಕೃತಿಯನ್ನು ಬೆಳೆಯಿಸುವ ಪ್ರಭಾವಿಯಾದ ಸಾಧನವಾಯಿತು."[118] ಪಂಪರನ್ನಾದಿಗಳನ್ನು ನಮ್ಮಲ್ಲಿ ಎಷ್ಟೋ ಜನ ಇನ್ನೂ ಕೇಳದವರಿದ್ದರೂ, ಪುರಂದರದಾಸರ ಕೀರ್ತನೆಗಳನ್ನು ಕೇಳದವರಿಲ್ಲವೆಂದೆನಿಸುತ್ತದೆ. ಹಾಗೆಯೆ ವಚನಗಳನ್ನು ಕೇಳದವರು ಅಪರೂಪ. "ಜನದ ಮೇಲೆ ನಿತಾಂತ ನಿರಂತರ ಪ್ರಭಾವ ಬೀರುವ ಜನಸಂಮುಖತೆ ದಾಸಸಾಹಿತ್ಯದ ಪ್ರಮುಖ ಲಕ್ಷಣಗಳಲ್ಲಿ ಒಂದು......" ಇಲ್ಲಿ ಗ್ರಂಥ

ಪ್ರೋದಿ, ತತ್ತ್ವ ಪ್ರತಿಪಾದನೆ ಮಾಡಲಿಲ್ಲ. ಮತದ ಚೌಕಟ್ಟು, ಪರಿಮಿತಿಯನ್ನು ಮೀರಿ ಜ್ಞಾನ, ಭಕ್ತಿಯ ಕ್ಷಿತಿಜ ವಿಸ್ತರಿಸಿದರು, ಜನತೆಯ ಮಾನಸಿಕ ಮಟ್ಟವೇರಿಸಿದವು. ಮಾನವೀಯ ನೀತಿ, ಜೀವನ ಮೌಲ್ಯಗಳು, ಇವನ್ನೆ ದಾಸರು ಅರಿತಿದ್ದು, ಬೆಲೆ ಕೊಟ್ಟಿದ್ದು, ಪ್ರಸರಿಸಿದ್ದು. ಆದ್ದರಿಂದಲೇ ದಾಸಸಾಹಿತ್ಯಕ್ಕೆ ಸರ್ವಮಾನ್ಯತೆ ದೊರೆಯಿತೆಂದರೆ ಉತ್ಪ್ರೇಕ್ಷೆ ಇಲ್ಲ. ಇಷ್ಟಾದರೂ ಮಾಸ್ತಿಯವರ ಮಾತುಗಳು ದಾಸಸಾಹಿತ್ಯದ ಚೌಕಟ್ಟನ್ನೂ ಗುರುತಿಸುವಂತಿದೆ[119] : "ಹಿಂದೆ ಇವುಗಳನ್ನು ಸಾಹಿತ್ಯವೆಂದು ಎಣಿಸುತ್ತಿರಲಿಲ್ಲವೆಂದು ತೋರುತ್ತದೆ. ವಚನಗಳೂ ಹೀಗೆಯೆ. ೨೦ನೆ ಶತಮಾನದವರೆಗೆ ಇವನ್ನು ಶಾಸ್ತ್ರವೆಂದೆ ಕರೆಯುತ್ತಿದ್ದರು. ದಾಸರು ಕವಿಗಳ ಜೊತೆಗೆ ತಾವೂ ಕವಿಗಳೆಂದು ಹೇಳಿಕೊಳ್ಳದೆ ಇದ್ದದ್ದು ಇದರ ಮುಖ್ಯ ಕಾರಣ ಆಗಿರಬೇಕು,.... ಮತ ಗ್ರಂಥಗಳಿಗೆ ಸೇರಿದ ಮೇಲೆ ಸಾಹಿತ್ಯವು ಇವನ್ನು ತನ್ನ ಗುಂಪಿಗೆ ಸೇರಿದುವೆಂದು ಸ್ಥಾಪಿಸಲು ಯತ್ನ ಮಾಡಲಿಲ್ಲ ದಾಸಸಾಹಿತ್ಯ ಮಾಧ್ವಮತದ ಚೌಕಟ್ಟುಗಳ ಕಟ್ಟಿರುವುದೇನೋ ನಿಜ. ಹಾಗೂ ಮಾಸ್ತಿಯವರ ಮಾತುಗಳು ಒಂದು ರೀತಿ ನಿಜವೆ ಎನ್ನಿಸುತ್ತದೆ. ಅದು ಹೀಗೆ : ಯಾವಾಗ ಒಂದು ಮತ, ತನ್ನ ಧರ್ಮ, ನೀತಿ, ಪ್ರಸಾರ ಮಾಡುವ ಸಾಹಿತ್ಯವನ್ನು ತನ್ನ ಸ್ವತ್ತು ಎಂದು ಭಾವಿಸುವುದೊ ಆಗ ಆ ಸಾಹಿತ್ಯ ಸಮಾಜದ ಉಳಿದ ಜನರಿಂದ ದೂರ ಆಗಿ ಉಳಿಯುತ್ತದೆ. ಹರಿದಾಸಸಾಹಿತ್ಯ ಬಹುತೇಕ ಬ್ರಾಹ್ಮಣರು, ಅದರಲ್ಲೂ ಮಾಧ್ವ ಮತದ ಅನುಯಾಯಿಗಳಾದ ಹರಿದಾಸರು ರಚಿಸಿದ ಸಾಹಿತ್ಯ. ಅಲ್ಲಿ ಎಲ್ಲರಿಗೂ ಬೇಕಾದ 'ಸರ್ವಹಿತ ಸಾಹಿತ್ಯ'ವಿದ್ದರೂ ಅದು ಮತ ಚೌಕಟ್ಟಿಗೆ ಕೂಡ ಒಳಗಾಗುತ್ತದೆ. ಸಾಹಿತ್ಯವನ್ನು ಮತ ಗ್ರಂಥ, ವಸ್ತುವಾಗಿ ಭಾವಿಸುವ, ಹಾಗೆ ಮಾಡಿಕೊಳ್ಳುವ ಪ್ರವೃತ್ತಿ ಇಲ್ಲಿ ಸಾಕಷ್ಟು ಇದೆ. ಆದರೆ ದಾಸಸಾಹಿತ್ಯದ ವಿಚಾರದಲ್ಲಿ ಈ ಮಾತುಗಳು ಸಂಪೂರ್ಣ ಅನ್ವಯಿಸವೆನ್ನಿಸುತ್ತದೆ. ಮತ ಇಲ್ಲಿ ಮುಖ್ಯ ಅಲ್ಲ–ಅದೂ ದಾಸವಾಙ್ಮಯದ ಮೊದಲ ಘಟ್ಟದಲ್ಲಿ. ವಿಜಯದಾಸರಿಂದಾಚೆಗೆ ದಾಸ ಸಾಹಿತ್ಯ ಪ್ರಧಾನವಾಗಿ ಮತ ಸಾಹಿತ್ಯವೇ ಆಯಿತು. ಇಷ್ಟಾದರೂ ಅಲ್ಲಿಯೂ ಎಲ್ಲರಿಗೂ ಬೇಕಾದ ಹರಿಭಕ್ತಿಯ ವ್ಯಾಪ್ತಿ, ದಾಸಸಾಹಿತ್ಯದ ಘಟ್ಟವನ್ನೂ ಸರ್ವಸಾಮಾನ್ಯ ಆಗಿಸುತ್ತದೆ. ಮತತತ್ತ್ವ ಮತ್ತು ಮತಾಭಿಮಾನ ಮೀರಿದ ಮಾನವೀಯ ಮೌಲ್ಯ ಪ್ರತಿಪಾದಕ ಆಗಿ ದಾಸಸಾಹಿತ್ಯ ನಿಂತಿದೆ. ಅಲ್ಲಿನವರೆಗೂ ಬಂದ ಸನ್ಯಾಸಿಗಳು, ಆಚಾರ್ಯರು ಹೇಳುತ್ತಿದ್ದುದೆ ಸಂಸಾರ ನಿಸ್ಸಾರ, ಮಾಯೆ, ಕಾಡಿಗೆ ಹೋಗಿ ತಪಸ್ಸು ಮಾಡಿರೆಂದು. ವಚನಕಾರರಿಂದೀಚೆಗೆ ಈ ಇಹದ ಬದುಕಿಗೊಂದು ಉನ್ನತ ಅರ್ಥ ಬಂದಿತು. 'ಕಾಯಕವೆ ಕೈಲಾಸ' ಎಂಬ ಮಹಾತತ್ತ್ವ, "ದಯೆಯೆ ಧರ್ಮದ ಮೂಲ"ವೆಂಬ ಉನ್ನತ ತತ್ತ್ವ ಬೆಳಕಿಗೆ ಬಂದು, ಬೆಳಕಾಗಿ, ನಿಂತವು. ದಾಸಸಾಹಿತ್ಯವೂ ಇಂಥ ಬೆಳಕಿನ ಸಾಹಿತ್ಯವೆ. "ದ್ವೈತ ಸಿದ್ಧಾಂತದ ಅನುಯಾಯಿಗಳಾದ ಹರಿದಾಸರ ಕೃತಿಗಳಿಂದ (ಬದುಕು ನಿಸ್ಸಾರ) ಈ ವಿಪರೀತ ಭಾವನೆ ಜನರ ಮನಸ್ಸಿನಿಂದ ತೆಗೆದು ಹಾಕಲ್ಪಟ್ಟಿತು"[120] ಎಂಬ ಪಂಚಮುಖಿಯವರ ಮಾತು ಅಕ್ಷರಶಃ ನಿಜ. ಈ

ಬದುಕನ್ನು ಇದ್ದು ಈಸಿ, ಜೈಸಬೇಕೆಂದವರು ಹರಿದಾಸರೆ. "ಮಾನವ ಜನ್ಮದೊಡ್ಡದು, ಇದಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ" ಎಂದವರೂ ಅವರೆ. ಸಂಸಾರದ ಬದುಕನ್ನು ವಂದನೀಯವಾಗಿ ಸ್ವೀಕರಿಸಿದವರೂ ಹರಿದಾಸರೆ. ಹರಿದಾಸರು ಭಕ್ತಿ ಜ್ಞಾನ ಸಮನ್ವಯ ಮಾಡಿ, ಜನತೆಯನ್ನು ಆ ವಿಚಾರ ಪ್ರವೃತ್ತರಾಗಿ ಮಾಡುವ ದಿಸೆಯಲ್ಲಿ ಶ್ರಮಿಸಿದವರು. 'ಸಂಸಾರ ಹೇಯ' ವೆಂದು ಶರಣರು, ದಾಸರೂ ಹಾಡಿದ್ದರೂ, ಈ ಬದುಕನ್ನು ಸ್ವೀಕರಿಸಿರೆಂದವರೂ ದಾಸರೆ. ದ್ವೈತ ಸಿದ್ಧಾಂತದ ಅನುಯಾಯಿಗಳೆಂದು ಹರಿದಾಸರನ್ನು ಸಾಹಿತ್ಯವನ್ನು ಬರೀ "ಮತ ಸಾಹಿತ್ಯ"ವೆಂದು ಮನೋಭಾವನೆ ತಳೆಯಬೇಕಿಲ್ಲ. ಅಲ್ಲಿ ಸಂಸ್ಕೃತಿ ಸಾಹಿತ್ಯದ ದೃಷ್ಟಿ ಆಗತ್ಯ. ಹರಿದಾಸರು ಬಹುತೇಕ ಮಧ್ವಮತದ ಅನುಯಾಯಿಗಳೆ ಆದರೂ ಮಾನವ ಕೋಟಿ ಬಯಸುವ ಭಾಗವತ ಧರ್ಮದ ಪಂಥದ ಅನುಸರಿಸಿದರೆಂಬುದು ಅವರ ಎಲ್ಲ ಕೃತಿಗಳಿಂದಲೂ ಸುಸ್ಪಷ್ಟ. ಶುಷ್ಕ ಸಂಪ್ರದಾಯ, ತರ್ಕ, ವಿಚಾರಸರಣಿಯವು ಅಲ್ಲ, ಭಕ್ತಿ ಜ್ಞಾನ, ರಾಗದ್ವೇಷವಿರದ ಸಂಸ್ಕೃತಿ ಪ್ರಸಾರಕರು ಹರಿದಾಸರು ಎಂಬುದೂ ನಿಜ. ಕನ್ನಡ ದಾಸ ಸಾಹಿತ್ಯ, ವಿಷ್ಣುಭಕ್ತಿಯ ಸಾಹಿತ್ಯವೆ ಎಂದರೂ ತಪ್ಪಿಲ್ಲ. ಭಾರತದ ಬೇರೆಡೆ ನಡೆದ ಹರಿಭಕ್ತಿ ಚಳವಳಿಯಲ್ಲಿ ಪಾಲ್ಗೊಂಡ ಅನೇಕ ಸಂತ ಕವಿಗಳು, ವೈಷ್ಣವರು ಅಲ್ಲಲ್ಲಿಯ ಸ್ಥಳೀಯ ಛಂದಸ್ಸಿನಲ್ಲಿ ಭಕ್ತಿಸಾಹಿತ್ಯ ಸೃಜಿಸಿದಂತೆ (ಉದಾ. ಏಕನಾಥನ 'ಓವಿ' ಛಂದಸ್ಸಿನಲ್ಲಿ ರಚಿತ ಆದ ಭಾಗವತ, ಚೈತನ್ಯದ ಕೃಷ್ಣಚರಿತ, ತುಕಾರಾಮನ ಅಭಂಗ, ಮೀರಾಬಾಯಿಯ ಗುಜರಾಥಿ ಈ ಛಂದಸ್ಸು, ಹೀಗೆ) ಕರ್ಣಾಟಕದ ಹರಿದಾಸರೂ ಕೆಲವು ಸಾಹಿತ್ಯ ಪ್ರಕಾರ, ವಿಶಿಷ್ಟ ರಚನೆಗಳ ಪ್ರವರ್ತಕರಾಗುವುದರಿಂದಾಗಿ ವಿಶಿಷ್ಟ ರೀತಿಯ ಕೊಡುಗೆಗಳನ್ನೂ ನೀಡಿದ್ದಾರೆ. ಹಾಗೂ ಸಂಗೀತಕ್ಕೂ ಅಮೂಲ್ಯ ಕೊಡುಗೆಗಳನ್ನಿತ್ತಿದಾರೆ. (ಅದನ್ನು ಮುಂದೆ ವಿಶದಪಡಿಸಲಾಗುತ್ತದೆ.)

ಅಡಿಟಿಪ್ಪಣಿಗಳು

1. ಡಾ. ಜಿ. ವರದರಾಜರಾವ್ : ಶ್ರೀಪಾದರಾಜರ ಕೃತಿಗಳು : ಮೈಸೂರು ವಿ. ವಿ. ನಿಲಯದ ಪೀಠಿಕೆ.
2. ಕನ್ನಡ ಸಾಹಿತ್ಯ ಚರಿತ್ರೆ : ರಂ ಶ್ರೀ ಮುಗಳಿ : ಪುಟ ಪುಟ-1 : 1964 : ಉಷಾ ಸಾಹಿತ್ಯ ಮಾಲೆ : ಮೈಸೂರು.
3 ಡಾ ಜಿ. ಎಸ್. ಶಿವರುದ್ರಪ್ಪ : "ಪರಿಶೀಲನ" : 1973 : ಎರಡನೇ ಮುದ್ರಣ ಉಷಾ ಸಾಹಿತ್ಯ ಮಾಲೆ : ಮೈಸೂರು.
4 ಕನ್ನಡ ಸಾಹಿತ್ಯ ಚರಿತ್ರೆ : ರಂ ಶ್ರೀ ಮುಗಳಿ : ಪುಟ-2 : 1964 : ಉಷಾ ಸಾಹಿತ್ಯ ಮಾಲೆ, ಮೈಸೂರು.
5. ಅದೇ : ಪೂರ್ವೋಕ್ತ.
6. ಮಹೀಪತಿರಾಯರ ಕೃತಿಗಳು (ಪಂಡಿತ ಆವೃತ್ತಿ) : ಮೈಸೂರು ವಿ. ವಿ. ನಿಲಯ ಮೈಸೂರು : ಪೀಠಿಕೆ.
7. Max Muller : 'Six System of Indian philosophy' : p. 41 "We have no right to suppose that we have even a hundredth part of the religious and popular poetry that existed during the vedic age".
8. R.S. Panchamukhi : 'Introduction to Karnataka Haridasa Sahitya' : p. 5
9. ವೇದ ಮಂತ್ರದಲ್ಲಿ ಬರುವ ಬಹುದೇವತಾ ಪ್ರಾರ್ಥನೆಯೆಲ್ಲವೂ ಒಬ್ಬಗನೆ ಸರ್ವಶಕ್ತನಿಗೆ- ಬಾದರಾಯಣ ಬ್ರಹ್ಮಸೂತ್ರಗಳ ಪ್ರಕಾರ-'ಸಮನ್ವಯಾಧಿಕರಣ-ಚೇತನನಿಗೇ ಅನ್ವಯ ಆಗುವಂಥದು.

   ಇಂದ್ರಂ ಮಿತ್ರಂ ವರುಣಮಗ್ನಿ ಮಾಹು ರಥೋ ದಿವಾ ಸ ಸುಪರ್ಣೋ ಗುರುತ್ಮಾನ್। ಏಕಂ ಸದ್ವಿಪ್ರಾ ಬಹುಧಾವದನ್ತ್ಯೇ ॥ ಅಗ್ನಿಂ ಯಮಂ ಮಾತರಿಶ್ವಾನ ಮಾಹು ॥ (ಋ).
10. ಋಗ್ವೇದ : ಮಂಡಲ-7 : ಹೆಚ್. ಡಿ. ವೇಲಂಕರ್ ಪೀಠಿಕೆ.
11. ಇದಕ್ಕೆ ಅನೇಕ ವ್ಯಾಖ್ಯೆ ಬಂದಿವೆ : ಅತ್ಯಂತ ಸತ್ಯವೆಂದರೆ-ವಿನೋಬಾ ಅವರದು (ಅನು: ಸಿದ್ಧವನಹಳ್ಳಿ ಕೃಷ್ಣಶರ್ಮ) : ಬೆಂಗಳೂರು.
12. ಶ್ರೀ ಪೇಜಾವರದವರು 'ಆಕಾಶವಾಣಿ' ಚಿಂತನವೊಂದರಲ್ಲಿ ಸರಳ ವಿವರಣೆ ನೀಡಿದ್ದರು. ಋಕ್-ಅಥರ್ವವೇದಗಳಲ್ಲಿ ಶಿವನ ಪ್ರಾಮುಖ್ಯತೆ ಗಮನಾರ್ಹ.
13. ಭಾರತೀಯ ತತ್ವಶಾಸ್ತ್ರದ ರೂಪುರೇಖೆಗಳು (1973) : ಹಿರಿಯಣ್ಣ : ಮೈಸೂರು ವಿ. ವಿ. ನಿಲಯ : ಮೈಸೂರು : ಪುಟ-98.

14. ಭಾರತೀಯ ತತ್ತ್ವಶಾಸ್ತ್ರದ ರೂಪುರೇಷೆಗಳು : (1973) : ಪೂರ್ವೋಕ್ತ.

15. ವಿಷ್ಣುಸ್ತೋತ್ರಗಳಲ್ಲಿ ಉಲ್ಲೇಖ.

16. ಭಗವದ್ಗೀತೆಯ : 11 ನೇ ಅಧ್ಯಾಯ.

17. ಚಿಕ್ಕಮಗಳೂರು ಸಮೀಪದ ಹಿರೇಮಗಳೂರಿನಲ್ಲಿರುವ ಶ್ರೀ ಕೋದಂಡರಾಮ ದೇವಾಲಯದ ಮುಂಭಾಗದಲ್ಲಿ ಒಂದು ಸ್ತಂಭವಿದ್ದು, ಅದನ್ನು ಜನಮೇಜಯನ ಕಾಲದ್ದು ಎಂದು ಹೇಳುತ್ತಾರೆ. ಅಚ್ಚರಿಯ ಸಂಗತಿ, ಅದು ಇನ್ನೂ ತುಕ್ಕು ಹಿಡಿಯದಿರುವುದು.

18. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ : ಸಂಪುಟ : 33-34 : ಪುಟ-14 : ಜಾಗೃತ ಕರ್ನಾಟಕ/ಹರಿದಾಸ ಸಾಹಿತ್ಯದ ಇಂಗ್ಲಿಷ್ ಪೀಠಿಕೆ: ಆರ್.ಎಸ್.ಪಂಚಮುಖಿ (1956): ಧಾರವಾಡ.

19. ಡಾ. ಕೆ. ಎಂ. ಕೃಷ್ಣರಾವ್ : ಶ್ರೀಜಗನ್ನಾಥದಾಸರು (1956) : ಪುಟ-6

20. ಸ್ವಾತ್ವಸ್ಮಿನ್ಪರಮ ಪ್ರೇಮ ರೂಪಾ॥ ಅಮೃತ ಸ್ವರೂಪಾಚ-ನಾರದ ಭಕ್ತಿಸೂತ್ರ, ಅನಿರ್ವಚನೀಯಂ ಪ್ರೇಮ ಸ್ವರೂಪಂ ॥ ಮೂಕಾಸ್ವಾದನವತ್-ನಾರದ ಭಕ್ತಿಸೂತ್ರ ರಾಮಕೃಷ್ಣಾಶ್ರಮ ಪ್ರಕಟಣೆ

21. Merchant of Venice, Act IV, Scene 1 (Verity Edition)

22. "ತ್ವತ್ಪಾದಾಂಭೋರುಹಯುಗಗತಾ ನಿಶ್ಚಲಾ ಭಕ್ತಿರಸ್ತು"-ಮುಕುಂದಮಾಲಾ ಸ್ತೋತ್ರ.

23. ತಿಮ್ಮಪ್ಪದಾಸರ : "ಅರ್ಚನ" ಡಿ. ವಿ. ಜಿ. ಮುನ್ನುಡಿಯ ಮಾತು : ಪುಟ : 9-10. ಸಂ : ಎಂ. ವಿ. ಸೀತಾರಾಮಯ್ಯ : ಬೆಂಗಳೂರು ವಿ. ವಿ. ನಿಲಯ : (1971).

24. ಶ್ರೀಪುರಂದರದಾಸ ಸಾಹಿತ್ಯ : ಆರ್ತಭಾವ : ಪುಟ-18 : ಮಿಂಚಿನಬಳ್ಳಿ : ಧಾರವಾಡ.

25. ಭಾರತೀಯ ತತ್ತ್ವಶಾಸ್ತ್ರದ ರೂಪರೇಖೆಗಳು : ಪುಟ-114.

26. "Bhakti is an inner experience. It is difficult to understand how and where it begins and how it ends"- Dr. P. S. Srinivasa : 'A Comparative study of Dasa and Sharana literaturaes' : p. 17

27. Dictionary of Visistadvaita : p. 114 (Ed. D. T. Tatacharya)

28. K. C. Varadachari : Aspects of Bhakti, p. 2

29. Epigraphia Indica : Vol. XXXII : p. 198
ಮೇಲ್ಕಂಡ ಶಾಸನ ಅಲ್ಲದೆ, ಕ್ರಿ.ಪೂ. 2-1 ನೆ ಶ. ದ ಕಾಲಕ್ಕೆ ಸೇರಿದ್ದು ಎನ್ನಲಾಗುವ

ನಾನೆ ಘಾಟನ ನಾಸಿಕ್‌ನಲ್ಲಿರುವ ಪ್ರಾಕೃತ ಲಿಪಿಯ ಶಿಲಾಶಾಸನ, ದಕ್ಷಿಣಾ ಪಥ. ಹಾಗೂ ದ್ರಾವಿಡ ದೇಶಗಳಲ್ಲಿ ವಿಷ್ಣುಭಕ್ತಿಯ ಇರವನ್ನು ಸಾರುತ್ತದೆ. ಕ್ರಿ.ಶ. 2ನೆ ದ ದ ಶಿಲಪ್ಪದಿಕಾರಂ ಎಂಬ ತಮಿಳು ಕಾವ್ಯದಲ್ಲಿಯೂ ಬಲರಾಮಕೃಷ್ಣರ ಮೂರ್ತಿಗಳಿದ್ದುವೆನ್ನಲಾಗಿದೆ.

30 Dr. R.D. Ranade 'Mysticism in Maharastra' : P. 4. : "This Parncharatra system derived its name from having contained dtfferent disciplines, ontolgy, literature, devotion, yoga and science."

'ಪಂಚರಾತ್ರ' ಎಂಬ ಆಗಮ ಶಾಖೆ ತನ್ನ ಹೆಸರು ಪಡೆದಿರಲು ಕಾರಣ ಇದು ಐದು ನಿಯಮಗಳನ್ನು ಒಳಗೊಂಡಿರುವುದು : ಸದಸದ್ವಿಚಾರ ಅಥವಾ ಆಧ್ಯಾತ್ಮಶಾಸ್ತ್ರ, ವಿಮೋಚನೆ, ಭಕ್ತಿ, ಯೋಗ ಹಾಗೂ ವಿಜ್ಞಾನ ವಿಜ್ಞಾನವೆಂದರೆ ವಿಶೇಷವಾದ ಜ್ಞಾನವೆಂದೂ ಅರ್ಥ.

31. Hemachandra Roy: Early History of Vaisnava Sect : P. 131

32. R. G. Bhandarkar : Vaisnavism, saivism and minor Religious Systems' P. 42

33. ಅನುಭಾವಪಂಥ ಹಾಗೂ ಹರಿದಾಸರ ಭಕ್ತಿ ಸ್ವರೂಪವನ್ನು ಪ್ರತ್ಯೇಕ ಅಧ್ಯಾಯದಲ್ಲಿ ವಿಶದವಾಗಿ ಚರ್ಚಿಸಲಾಗುತ್ತದೆ. ಏಕೆಂದರೆ ವಚನ ಸಾಹಿತ್ಯ ಪರಿಭಾಷೆಯಲ್ಲಿ ಕರೆವ "ಅನುಭಾವಿ"ಗೂ ಹರಿದಾಸ ಪರಿಭಾಷೆಯಲ್ಲಿ ಕರೆಯುವ "ಅಪರೋಕ್ಷಜ್ಞಾನಿ"ಗೂ ಸಾದೃಶ್ಯವುಂಟು.

34. ಮಧ್ವಾಚಾರ್ಯರು "ಭಕ್ತ್ಯಸ್ಯ ಭಾಗವತಂ ಶಾಸ್ತ್ರಂ" ಎಂಬ ವಾಕ್ಯದಲ್ಲಿ ಶಾಸ್ತ್ರವೆಂದೇ ಕರೆದಿದ್ದಾರೆ. (ಕರ್ನಾಟಕದ ಹರಿದಾಸರು : ಪುಟ-27) ಇದಕ್ಕೆ ತಾತ್ಪರ್ಯವನ್ನು ರಚಿಸಿದ್ದಾರೆ.

35. ಕರ್ನಾಟಕ ಭಕ್ತವಿಜಯ : ಬೇಲೂರು ಕೇಶವದಾಸರು : ಪುಟ-1 : 1983.

36. ಅದೇ : ಪುಟ-2.

37. Dr. B. N. K. Sharma : 'History of Dvaita school and Its Literature

* ಡಾ. ಕೆ ಎಂ. ಕೃ. : ಜಗನ್ನಾಥದಾಸರು : ಪುಟ-43.

38. ಇದನ್ನೇ ಪುರಂದರದಾಸರು : "ಏನುಧನ್ಯಳೋ ಲಕುಮಿ ಎಂಥ ಮಾನ್ಯಳೋ ।
ಸಾನುರಾಗದಿಂದ ಹರಿಯ ತಾನೆ ಸೇವೆ ಮಾಡುತಿಹಳೋ ॥ "

ಸಂ : ಸುಬೋಧ ರಾಮರಾವ್ : 1971, ದ್ವಿತೀಯ ಮುದ್ರಣ.

39. ಅಸಂಶಯಃ ಸಂಶಯಚ್ಛೇತ್ ಗುರುರುಕ್ತೋ ಮನೀಷಿಭಿಃ
ತಸ್ಮಾದ್ಬ್ರಹ್ಮ ಗುರುರ್ಮುಖ್ಯಃ ಸರ್ವೇಷಾಮೇವ ಸರ್ವದಾಃ
ಎಂಬ ಆಚಾರ್ಯರ ವಚನಕ್ಕನುಸಾರವಾಗಿ ಬ್ರಹ್ಮದೇವರೇ ಮೊದಲ ಹರಿದಾಸರು-
(ಹೆಚ್. ಕೆ. ವೇದವ್ಯಾಸಾಚಾರ್ಯ : ಕರ್ನಾಟಕದಲ್ಲಿ ಹರಿದಾಸರು : 1965).

* "ನಾರಾಯಣನೆಂಬ ನಾಮದ ಬೀಜವ ನಾರದ ಬಿತ್ತಿದ ಧರೆಯೊಳಗೆ" ಪದ್ಮಪುರಾಣದ ಪ್ರಕಾರ, ಭಾಗವತ ಶ್ರೇಷ್ಠರೆಲ್ಲ ಒಟ್ಟುಗೂಡಿ ಶ್ರೀಹರಿಕೀರ್ತನೆ ಮಾಡುತ್ತಿದ್ದುದನ್ನು ಮೊದಲೇ ತಿಳಿಸಿದೆ.

40. B. N. K. Sharma : 'History of the Dvaita school of vedanta' p. 187

41. Ibid. "It may, in a sense, be said to have given the first impetus to birth of the great devotional literature of the Haridasas."

42. ವಿವರಗಳು : 'History of Dvaita school of vedanta' ; p. 77
ಶ್ರೀ ಪೂರ್ಣಪ್ರಜ್ಞ ಪ್ರಶಸ್ತಿ : ಪ್ರೊ. ಎಸ್.ಕೆ. ರಾಮಚಂದ್ರರಾವ್ : ಪುಟ-19.
ಶ್ರೀ ಮಧ್ವಾಚಾರ್ಯರು : ಪ್ರೊ. ಎಸ್. ಕೆ. ರಾಮಚಂದ್ರರಾವ್ : ಪುಟ-19, ಗೀತಾ ಬುಕ್ ಹೌಸ್ ಕಾರ್ಯಾಲಯ : ಮೈಸೂರು : 1964 ಮತ್ತು 1960.

43. ಶ್ರೀ ಕೂರ್ಮಕ್ಷೇತ್ರ : ಆಂಧ್ರಪ್ರದೇಶದಲ್ಲಿ ಶ್ರೀ ಕಾಕುಳಕ್ಕೆ ಆಗ್ನೇಯದಲ್ಲಿ ಆರು ಮೈಲಿ ದೂರದಲ್ಲಿದೆ. ಇಲ್ಲಿ ಕಳಿಂಗ ಅರಸರು 1038 ರಿಂದ 1434ರವರೆಗೂ ಅಧಿಪತಿಗಳಾಗಿದ್ದರು. ನರಹರಿತೀರ್ಥರೆಂದು ಪ್ರಸಿದ್ಧರಾದ ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು ಸನ್ಯಾಸ ಸ್ವೀಕಾರ ಮಾಡುವ ಮೊದಲು ಈ ಕಳಿಂಗ ರಾಜನ ಅಧಿಕಾರಿಗಳಾಗಿದ್ದರು.

44. ಶ್ರೀ ಪೂರ್ಣಪ್ರಜ್ಞ ಪ್ರಶಸ್ತಿ : ಪುಟ : 22 : ಪ್ರೊ. ಎಸ್. ಕೆ. ರಾಮಚಂದ್ರರಾವ್

45. ಕರ್ನಾಟಕ ಭಕ್ತವಿಜಯ

46. ಶ್ರೀ ಪುರಂದರದಾಸರ ಜೀವನ ಚರಿತ್ರೆ : ಪುಟ-7 : 1964.

47. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ : ಸಂಪುಟ : 33-34 : ಪುಟ-52.

48. ಕನ್ನಡ ಸಾಹಿತ್ಯ ಚರಿತ್ರೆ : ರಂ ಶ್ರೀ ಮುಗಳಿ :
ಶ್ರೀಪಾದರಾಜರ ಕೃತಿಗಳು : ಪಂಡಿತ ಆವೃತ್ತಿ : ಸಂ: ಡಾ. ಜಿ ವರದರಾಜರಾವ್ : ಪುಟ-1973 : ಮೈಸೂರು ವಿ ವಿ ನಿಲಯ : ಮೈಸೂರು.

49. ಕರ್ನಾಟಕ ಸಂಗೀತವೂ ಹಾಗೂ ಹರಿದಾಸಕೂಟವೂ : ಪುಟ : 59 ಹಾಗೂ 91 : (1951) : ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ

50. ನಾನು ಅಚಲಾನಂದವಿಠಲರ ನಂತರ ಪೈಕಿ ಮೈಸೂರಿನ ದಿವಂಗತ ಡಾ. ರಾಮಚಂದ್ರ ರಾವ್ ಎಂಬುವವರ ಮೈತ್ರಿ ಪಡೆದಿದ್ದೆ. ಅವರು ಮೂಲತಃ ತುಮಕೂರು ಬಳಿಯ ತುರುವೇಕೆರೆಯವರು. ತುರುವೇಕೆರೆ, ಅಚಲಾನಂದರಿಂದ್ದ ಸ್ಥಳ. ಈಗಲೂ ಅವರ ಪರಂಪರೆಯವರು ಇದಾರೆ. ಅನೇಕ ಓಲೆಗರಿಗಳು, ಗ್ರಂಥ ಶಿಥಿಲಿತ ಸ್ಥಿತಿಯಲ್ಲಿದ್ದರೂ ಅವರು ತಮ್ಮದೆ ಆದ ಸಹಜ ಮೊಂಡು ತನದಿಂದ ಯಾವುದನ್ನೂ ಕೊಡಲಿಲ್ಲ. ಅವರ ಮನೆತನ ಸ್ಮಾರ್ತ, ಭಾಗವತ ಸಂಪ್ರದಾಯ ಮನೆತನವೆನ್ನುತ್ತಾರೆ. ಶಂಕರರ ಅದ್ವೈತ ತತ್ವದ ಅನುಯಾಯಿಗಳೇ ಆದರೂ, ಹಣೆಗೆ ದ್ವಾದಶ ತ್ರಿಪುಂಡ್ರನಾಮ ಹಚ್ಚಿಕೊಂಡು, ಮುದ್ರೆ ಹಾಕಿಕೊಳ್ಳುತ್ತಾರೆ. ಹಾಗೂ ತಾವು ಭಾಗವತ ಸಂಪ್ರದಾಯದವರೆನ್ನುತ್ತಾರೆ. ಭಜನೆ ಮಾಡುವುದು, ಹರಿದಾಸರ ಕೃತಿಗಳಲ್ಲಿ ಪ್ರೀತಿ, ಇವರ ಗುಣ. ಇನ್ನೂ ಒಂದು ವಿಶೇಷವೆಂದರೆ, ಮನೆಯ ಹಿರಿಯ ಮಗನಿಗೆ "ವಿಠಲ" ಎಂದು ಬರುವ ಹೆಸರನ್ನು ಇರಿಸುವುದು ಇಂದಿಗೂ ನಡೆದು ಬಂದಿರುವ ಪದ್ಧತಿ. ನನ್ನ ಸ್ನೇಹಿತರ ಮಗನ ಹೆಸರು "ವಿಠಲ" ಎಂದೇ. ಇದನ್ನೆ ಡಾ ವರದರಾಜರಾಯರೂ ಸಮರ್ಥಿಸಿದ್ದಾರೆ.

51. ಕರ್ನಾಟಕ ಸಂಸ್ಕೃತಿಯ ಸಂಶೋಧನೆ : 1970 : ಪುಟ : 285-287

52. ಶ್ರೀಪಾದರಾಜರ ಕೃತಿಗಳು : ಪುಟ 7 : ಪೀಠಿಕೆ : ಡಾ. ವರದರಾಜರಾವ್.

53. H. G. Bengeri : Haridasa

54. ಕರ್ನಾಟಕದ ಹರಿದಾಸರು : ಹೆಚ್.ಕೆ. ವೇದವ್ಯಾಸಾಚಾರ್ಯ : ಪುಟ–249.

55. ಪೇಜಾವರದ ಶ್ರೀಪಾದಂಗಳವರು ಲೇಖಕನಿಗೆ ಬರೆದ ಪತ್ರ ದಿನಾಂಕ : 24-9-84 (ಅನುಬಂಧ ನೋಡಬಹುದು).

56. ಕರ್ನಾಟಕ ಭಕ್ತವಿಜಯ

57. ಇದಕ್ಕೆ ಕೂರ್ಮಶಾಸನವೂ ಆಧಾರ.

58. ಶ್ರೀಪುರಂದರದಾಸರ ಜೀವನ ಚರಿತ್ರೆ : ಪುಟ : 6-7 : 1956 : ಆರ್. ಎಸ್. ಪಂಚಮುಖಿ.

59. ಹನುಮಂತರಾವ್ ಗೋರಬಾಳ : ಹರಿದಾಸಸಾಹಿತ್ಯ ಉಗಮ ಮತ್ತು ಇತರ ಸುಳಾದಿಗಳು, ವರದೇಂದ್ರ ಹರಿದಾಸ ಸಾಹಿತ್ಯ ಗ್ರಂಥಮಾಲೆ : ಲಿಂಗಸೂಗೂರು.

60. ಶ್ರೀಪಾದರಾಜರ ಕೃತಿಗಳು : ಪುಟ–ಪೀಠಿಕೆ : viii

61. ಶ್ರೀಪಾದರಾಜರ ಕೃತಿಗಳು : ಪಂಡಿತ ಅವೃತ್ತಿ : 1973 : ಪೀಠಿಕೆ ಹಾಗೂ 'ಹರಿದಾಸಸಾಹಿತ್ಯ ಸಮೀಕ್ಷೆ' –ಮೈಸೂರು : ವಿ. ವಿ. ನಿಲಯದ ಪುಸ್ತಕದ "ಹರಿದಾಸ ಸಾಹಿತ್ಯ ಗ್ರಂಥ ಸಂಪಾದನೆಯ ಸಮಸ್ಯೆಗಳೂ" ಲೇಖನ ಗಮನಾರ್ಹ.

62. ಕನ್ನಡ ಸಾಹಿತ್ಯ ಚರಿತ್ರೆ : ರಂ. ಶ್ರೀ. ಮುಗಳಿ : (1964) : ಪುಟ-227 : ಉಷಾ ಸಾಹಿತ್ಯ ಮಾಲೆ, ಮೈಸೂರು.

63. ಬಿ.ಎನ್.ಕೆ. ಶರ್ಮರ ಅದೇ ಹೆಸರಿನ ಪುಸ್ತಕ : ಪುಟ–516 (1981).

64. ಶ್ರೀಹರಿದಾಸ ಭಾರತೀ : ಸಂಪುಟ-6 : ಸಂಚಿಕೆ-3 : ಪುಟ 11–15.

65. ಇದಕ್ಕೆ ಸಮಾಧಾನ ಪ್ರೊ. ಆರ್. ಎಸ್. ಪಂಚಮುಖಿ ಅವರ "ಶ್ರೀಪುರಂದರದಾಸರ ಜೀವನ ಚರಿತ್ರೆ" ಗ್ರಂಥದಲ್ಲಿ ಸ್ವಲ್ಪ ದೊರೆತಿದೆ.

66. ಈ ಅನುಮಾನ ಹಾಗೇ ಉಳಿದಿದೆ.

67. ಕೂರ್ಮ ಶಾಸನ : ಎಪಿಗ್ರಾಫಿಯಾ ಇಂಡಿಯಾ : ಕೂರ್ಮಶಾಸನ ಪಾಠ (ಅನುಬಂಧ).

67. ನೋಡಿ : ಕೂರ್ಮ ಶಾಸನ : B. N. K. Sharma : History of Dvaita School of vedanta ; p. 258

69. ಶ್ರೀಪುರಂದರ ದಾಸಸಾಹಿತ್ಯ ಹಾಗೂ ಶ್ರೀಪುರಂದರದಾಸರ ಕೀರ್ತನೆಗಳು : (ಸಂ : ಬೆಟಗೇರಿ ಕೃಷ್ಣಶರ್ಮ : 1965) (ಸುಬೋಧ ರಾಮರಾವ್ : 1960).

70. ಶ್ರೀಪಾದರಾಜರ ಕೃತಿಗಳು : : ಪೀಠಿಕೆ : ಡಾ : ಜಿ. ವರದರಾಜರಾವ್

71. ಅದೇ : ಪುಟ–11.

72. ಆರ್. ಎಸ್. ಪಂಚಮುಖಿ : ಶ್ರೀಪುರಂದರದಾಸರ ಜೀವನ ಚರಿತ್ರೆ : ಪುಟ : 6. 7 ಮತ್ತು 9

73. ಶ್ರೀಪುರಂದರದಾಸರ ಸುಳಾದಿಗಳು : 1958 : ಶ್ರೀ ನರೇಂದ್ರ, ಹರಿದಾಸಸಾಹಿತ್ಯ ಮಂಡಲ : ಲಿಂಗಸೂಗೂರು.

74. 75. ಶ್ರೀಪಾದರಾಜರ ಕೃತಿಗಳು : ಪೀಠಿಕೆ : ಪುಟ : xii

76. ಅದೇ. "The earliest Telugu Kirthanas are by Tallapakam composers who belong to the 15th century. For the first time in the history of South Indian Music, we have across the divisions of a song into Pallavi, Anupallavi and Charana."

77. ಶ್ರೀಪುರಂದರದಾಸರ ಜೀವನ ಚರಿತ್ರೆ : ಆರ್. ಎಸ್. ಪಂಚಮುಖಿ : (1965) ಪುಟ–9.

78. ಹರಿದಾಸಸಾಹಿತ್ಯದ ಉಗಮ : ಪುಟ–8 ಮತ್ತು ಪುರಂದರದಾಸರ ಸುಳಾದಿಗಳು.

79. ಹರಿದಾಸಸಾಹಿತ್ಯದ ಉಗಮ ಮತ್ತು ಪುರಂದರದಾಸರ ಸುಳಾದಿಗಳು ಹಾಗೂ ವರದೇಂದ್ರ, ಹರಿದಾಸ ಸಾಹಿತ್ಯ ಪತ್ರಿಕೆ : 1957 : ಸಂ–1 : ಸಂಚಿಕೆ–3.

80. ಕರ್ನಾಟಕ ಭಕ್ತವಿಜಯ : ಪುಟ-5.
81. ವಿಜಯಾಂಕರತ್ನ ವಿಶೇಷ : ಪುಟ-29.
82. ಶ್ರೀಜಗನ್ನಾಥದಾಸರ ಶಿಷ್ಯ ಪ್ರಶಿಷ್ಯರ ಸುಳಾದಿಗಳು : ಪುಟ-5.
83. ಶ್ರೀ ವರದೇಂದ್ರ ಹರಿದಾಸ ಗ್ರಂಥಮಾಲೆ : ಲಿಂಗಸೂಗೂರು : 1958 : ಅದೇ : ವರದನ ಪುಸ್ತಕ : ಪುಟ-3.
84. ಶ್ರೀಪಾದರಾಜರ ಕೃತಿಗಳು : ಪೀಠಿಕೆ : 17 ನಯು ಪುಟ : (1973) ಮೈಸೂರು ವಿ. ವಿ. ನಿಲಯ : ಮೈಸೂರು.
85. ಅದೇ.
86. ಹರಿದಾಸರ ಪರಂಪರೆ : ಕರ್ನಾಟಕ ಸಂಸ್ಕೃತಿ ಸಂಶೋಧನೆ : ಉಷಾ ಸಾಹಿತ್ಯ ಮಾಲೆ : 1970 : ಪುಟ: 271-291 : ಮೈಸೂರು.
87. Introduction to Karnataka Haridasa Sahitya : Appendix
88. ಹುಲಗೂರು ಕೃಷ್ಣಾಚಾರ್ಯ : ಕರ್ನಾಟಕ ಸಂಗೀತವೂ ದಾಸಕೂಟವೂ : ಪುಟ-89-90; ಹಾಗೂ ಆರ್. ಎಸ್. ಪಂಚಮುಖಿ : ಶ್ರೀಪುರಂದರದಾಸ ಜೀವನ ಚರಿತ್ರೆ : ಪುಟ-9,
89. ಹರಿದಾಸ ಪರಂಪರೆ : ಕಪಟರಾಳ ಕೃಷ್ಣರಾವ್ : ಕರ್ನಾಟಕ ಸಂಸ್ಕೃತಿ ಸಂಶೋಧನೆ.
90. ಹಾಗೂ ಇದನ್ನೆ ಸ್ಪಷ್ಟಪಡಿಸಿದಾರೆ, ಪೇಜಾವರದ ಶ್ರೀ ಶ್ರೀಪಾದಂಗಳವರು, ನನಗೆ ಬರೆದ ಪತ್ರದಲ್ಲಿ.
91. ಶ್ರೀಪುರಂದರದಾಸರ ಜೀವನ ಚರಿತ್ರೆ : : 9-10.
92. "ವೃತ್ತನಾಮ" ಎಂಬ ವಿಶಿಷ್ಟ ಸಾಹಿತ್ಯ ಪ್ರಕಾರವನ್ನು ಬಳಸಿದವರಲ್ಲಿ ಮೊದಲನೆಯವರು ಶ್ರೀಪಾದರಾಜರು. ಇನ್ನೂ ಇದರ ಛಂದೋ ಸ್ವರೂಪ ನಿರ್ಧರಿಸಲು ಆಗಿಲ್ಲ (ಜಿ. ವರದರಾಜರಾಯರ ಬಳಿ ನಡೆಸಿದ ವಿಚಾರ ವಿನಿಮಯ).
93. ಡಿ. ಕೆ. ಭೀಮಸೇನರಾವ್ : ಅನುಭವಾಮೃತ ಮತ್ತು ಹರಿಕಥಾಮೃತಸಾರ.
94. ಶ್ರೀಪಾದರಾಜರ ಕೃತಿಗಳು : ಪೀಠಿಕೆ : ಹಾಗೂ ಶ್ರೀ ಜಿ. ವರದರಾಜರಾವ್ ಅವರ ಬಳಿ ನಡೆಸಿದ ವಿಚಾರ ವಿನಿಮಯ.
95. ಇದನ್ನೆ ಹರಿದಾಸಸಾಹಿತ್ಯದಲ್ಲಿ ಆಳವಾದ ಸಂಶೋಧನೆ ನಡೆಸಿರುವ ಡಾ : ಜಿ. ವರದರಾಜರಾಯರು ತಿಳಿಸಿದ್ದಾರೆ.
96. ಶ್ರೀಪಾದರಾಜರ ಕೃತಿಗಳು : ಪೀಠಿಕೆ : ಪುಟ ಸಂಖ್ಯೆ :
97. ಕನ್ನಡ ಸಾಹಿತ್ಯ ಚರಿತ್ರೆ : ರಂ ಶ್ರೀ ಮುಗಳಿ : ಪುಟ 147, 1964.
98. ಅದೇ, ಪುಟ : 228 : 1964.

99. ಅದೇ : ಪು. 257

100. A. P. Karmarkar, N. B. Kalamandari : 'Mystic Teachings of the Haridasas of Karnataka."

101.-102. Ibid. p. 10

103. 'ಶ್ರೀಪುರಂದರದಾಸರು' ಗ್ರಂಥದಲ್ಲಿನ ಲೇಖನ "ಭಾಗವತ ಧರ್ಮವೂ ಹರಿದಾಸ ಕೂಟವೂ" ಮಿಂಚಿನಬಳ್ಳಿ : ಧಾರವಾಡ : 1964 : ಪುಟ-37.

104. ದಾಸಕೂಟ ಎಂಬ ಪದ ಪ್ರಯೋಗ, ವಿಜಯದಾಸರಲ್ಲಿಯೂ ಬಂದಿದೆ. "ಶ್ರೀತುಳಸಿಯ ಸೇವಿಸಿ....ಅನವರತ ಮನೆಯಲ್ಲಿ ತುಳಸಿ, ಸಾಲಗ್ರಾಮ ಅನವರತ ಮನೆಯಲ್ಲಿ ಹರಿ ದಾಸಕೂಟ".

105. ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ ।
ನಮಃ ಪುರಂದರಾರ್ಯಾಯ ವಿಜಯಾರ್ಯಾಯತೇ ನಮಃ॥

106. ದಾಸಸಾಹಿತ್ಯ ದ್ವಿತೀಯ ಘಟ್ಟದ ಸಾಧನೆ : ಪುಟ-5.

107. ಇದನ್ನೇ ಶ್ರೀ ಬಸವೇಶ್ವರರೂ ಸ್ಪಷ್ಟವಾಗಿ ನುಡಿದದ್ದು : ನಾದಪ್ರಿಯನೂ ಅಲ್ಲ ವೇದ ಪ್ರಿಯನೂ ಅಲ್ಲ ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ.

108. ರಂಗವಿಠಲ : ಶ್ರೀಪಾದರಾಜರ ಅಂಕಿತ.

109. ದಾಸಸಾಹಿತ್ಯ : ದ್ವಿತೀಯ ಘಟ್ಟದ ಸಾಧನೆ : ಕರ್ನಾಟಕ ವಿ. ವಿ. ನಿಲಯ : ಪುಟ ;6

110. ಶ್ರೀಪುರಂದರದಾಸರು, ಶ್ರೀಕನಕದಾಸರು, ಶ್ರೀವಾದಿರಾಜರು, ಶ್ರೀವಿಜಯೀಂದ್ರರು ಹೀಗೆ.

111. ಡಿ. ಕೆ. ಭೀಮಸೇನರಾವ್ : ಅನುಭವಾಮೃತ ಮತ್ತು ಹರಿಕಥಾಮೃತಸಾರ.

112. ಹರಿದಾಸಸಾಹಿತ್ಯ ದ್ವಿತೀಯ ಘಟ್ಟದ ಸಾಧನೆ : ಪುಟ : 7 : ಜಗನ್ನಾಥದಾಸರು : ಕೆ. ಎಂ. ಕೃಷ್ಣರಾವ್.

113. Karnataka Historical Review, Vol. IV, Jan-July 1937 Pp. 87-95

114.-115. H. G. Bengeri ; Dasakuta : p. 30

116. ಈ ದಿಸೆಯಲ್ಲಿ ಡಾ ಜಿ. ವರದರಾಜರಾಯರು ಹೇಳಿರುವ ಮಾತುಗಳು ಉಲ್ಲೇಖನೀಯ ಆಗುತ್ತವೆ: "........ಶಾಸ್ತ್ರಗ್ರಂಥಗಳ ವ್ಯಾಸಂಗ, ಸಿದ್ಧಾಂತ (ಮಧ್ವ) ಪ್ರಚಾರ ಇವೇ ಮೊದಲಾದ ಮಠಾಧಿಪತಿಗಳ ಕಾರ್ಯ ಸಾಂಪ್ರದಾಯಿಕವಾಗಿ ಸಂಸ್ಕೃತದಲ್ಲಿ ನಡೆದರೆ, ಹೃದಯಾನುಭವವನ್ನು ಪರಮಾತ್ಮನಲ್ಲಿ ನಿವೇದಿಸಿಕೊಂಡು ಕೃತಾರ್ಥರಾಗಲು ಮಾತೃ ಭಾಷೆಯೇ (ಅಂದರೆ ಕನ್ನಡವೆ) ಸೂಕ್ತವೆಂಬ ಪ್ರಜ್ಞೆ ಶ್ರೀಪಾದರಾಯರಿಗೆ ಸ್ಫುರಿಸಿದ್ದು ನಮ್ಮ ಪುಣ್ಯವೇ ಸಹ........" ಇದಕ್ಕೆ ಕಾರಣವನ್ನು ನೀಡುತ್ತ ಈ

ಮಾತು* ಮುಂದುರಿದಿವೆ........" ಕನ್ನಡ ನಾಡಿನಲ್ಲಿಯೇ ಶಿವಶರಣರ ವಚನಗಳು ಪಡೆದಿದ್ದ ಜನಾನುರಾಗಗಳು ಈ ಅಭೀಪ್ಸೆಗೆ ಪುಷ್ಟಿಯನ್ನು ನೀಡಿರಬೇಕು........ 'ಹರಿದಾಸಸಾಹಿತ್ಯದ ಬೆಳವಣಿಗೆಗೆ ಶ್ರೀಪಾದರಾಯರ ಈ ಶ್ರೀಕಾರವೇ ತುಂಬ ಪ್ರಶಸ್ತ ವಾದುದು. ಅವರ ಶಿಷ್ಯರಾದ ಶ್ರೀವ್ಯಾಸರಾಯರು ತಮ್ಮ ಗುರುಗಳಿಂದ ಧರ್ಮಶಾಸ್ತ್ರ ಗಳ ಅರಿವನ್ನು ಪಡೆದುದಲ್ಲದೆ, ಶ್ರೀಪಾದರಾಯರು ಕೈಕೊಂಡ ಕೀರ್ತನ ಸಾಹಿತ್ಯಕ್ಕೆ ತಾವೂ ದನಿಗೂಡಿಸಿದರು. ಅಷ್ಟೇ ಅಲ್ಲ : ತಮ್ಮ ನೇತೃತ್ವದಲ್ಲಿ ದಾಸಕೂಟದ ವ್ಯವಸ್ಥೆಯನ್ನು ಏರ್ಪಡಿದರು. ಅವರ ಈ ವೃಂದದಲ್ಲಿ ಶ್ರೀವಾದಿರಾಜರು, ಪುರಂದರದಾಸರು ಮತ್ತು ಕನಕದಾಸರಂತಹ ಮಹನೀಯರು ಬಂದು ಸೇರಿದರು. ದಾಸಕೂಟದ ವ್ಯಾಪ್ತಿ ಹೆಚ್ಚಾಯಿತು, ದಾಸಸಾಹಿತ್ಯದ ಸೃಷ್ಟಿ ಮಿಗಿಲಾಯಿತು. ಕೀರ್ತನೆಗಳ ವಸ್ತು ಮತ್ತು ದೃಷ್ಟಿಗಳು ವಿಶಾಲವಾದುವು. "ಇಲ್ಲಿಂದ ಮುಂದೆ ಹರಿದಾಸಸಾಹಿತ್ಯದ ಬೆಳವಣಿಗೆ (ದಾಸಕೂಟ) ಮತ್ತ ವಿಜಯದಾಸರ ಕಾಲ(ಕ್ರಿ. ಶ. 1687-1755)ದಲ್ಲಿ ಮಿಗಿಲಾ ಯಿತು........" ಆದರೆ........ಈ ವಿಶಿಷ್ಟ ಪ್ರಕಾರ ಕಾಲ ಕಾಲಕ್ಕೆ ಪ್ರಗತಿ ಪಡೆದಂತೆ, "ಕಡೆ ಕಡೆಗೆ ಶಾಸ್ತ್ರದ ಕೈ ಮೇಲಾಗಿ ಸಂಪ್ರದಾಯವೇ ಮಿಗಿಲಾಗಿ, ನೂತನ ಅನುಭವ ಮತ್ತು ಕಾವ್ಯಗಳು ಕಡಮೆಯಾದುವು. ಚರ್ವಿತ ಚರ್ವಣದ ಕಡೆಗೆ ಮನಸ್ಸು ಹೆಚ್ಚಾಗಿ ಹರಿಯಿತು" ಎಂಬುದನ್ನೊ ನಾವು ಮರೆಯುವಂತಿಲ್ಲ.

117. ಕನ್ನಡ ಸಾಹಿತ್ಯ ಚರಿತ್ರೆ : ರಂ ಶ್ರೀ ಮುಗಳಿ : 1964 : ಪುಟ-4.

118. ಕನ್ನಡ ಸಾಹಿತ್ಯ ಚರಿತ್ರೆ : ಪುಟ-314.

119. ಮಾಸ್ತಿ : 1 : ಪುಟ-29.

120. ಕರ್ನಾಟಕ ಹರಿದಾಸಸಾಹಿತ್ಯ : ಆರ್. ಎಸ್. ಪಂಚಮುಖಿ : ಪುಟ-249, ಕನ್ನಡ ಸಾಹಿತ್ಯ ಚರಿತ್ರೆ : 1952.

* ಹರಿದಾಸ ಹೃದಯ : ಪುಟ : 136-138 : "ದಾಸಸಾಹಿತ್ಯ ವಿಕಾಸ", ಡಾ. ಜ್ಯೋತಿ ರಾವ್ : ಶಾರದಾ ಮಂದಿರ : ಮೈಸೂರು : 1967.

# ಪ್ರಮುಖ ಹರಿದಾಸರು ಹಾಗೂ ಅವರ ವಿಶಿಷ್ಟ ರಚನೆಗಳು

ಕನ್ನಡದಲ್ಲಿ ಹರಿದಾಸಸಾಹಿತ್ಯದ ಉಗಮ ಎಂದಿನಿಂದ ಎಂಬ ವಿಚಾರವಾಗಿ ಇರುವ ಅಭಿಪ್ರಾಯ ಭೇದ, ಅಭಿಮತಗಳನ್ನೆಲ್ಲ ನಾವು ಮೊದಲನೆಯ ಅಧಿಕರಣದಲ್ಲಿ ಕಂಡಿದೆವೆ. ಅಂತೆಯೆ ನಾವು ಸ್ವೀಕರಿಸಿರುವಂತೆ ಶ್ರೀಪಾದರಾಜರೇ ಹರಿದಾಸಸಾಹಿತ್ಯದ ಆದ್ಯ ಪ್ರವರ್ತಕರಾದುದರಿಂದ ಅವರ ಬದುಕಿನ ಎಳೆಗಳ ಬಗ್ಗೆ ತಿಳಿಸುವುದರಿಂದ ಹರಿದಾಸರ ಬಗ್ಗೆ ಪರಿಚಯಿಸಬಹುದಾಗಿದೆ. (ಶಾಸನದ ಆಧಾರ ಹಾಗೂ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರೆನ್ನಿಸಿಕೊಂಡ ನರಹರಿತೀರ್ಥರು ಹರಿದಾಸಸಾಹಿತ್ಯದ ಜನಕರೆಂದು ಹಲವರು ಅಭಿಪ್ರಾಯಪಟ್ಟರೂ ಇಲ್ಲಿ ಅವರ ಬದುಕಿನ ಎಳೆಗಳ ಬಗ್ಗೆ ಪ್ರಸ್ತಾಪಿಸಿಲ್ಲ.

ಇತಿಹಾಸವನ್ನು 'ನಿಜಾಂಶದ ಪ್ರಾಮಾಣಿಕ ವರದಿ'[1]ಯೆನ್ನಬಹುದು. ಆದರೆ ಅದು ಯಥಾವತ್ತಾಗಿರಬೇಕು. ಆಗಲೇ ಅದಕ್ಕೆ ಇತಿಹಾಸದ ಮೌಲ್ಯ. ಕಲ್ಪನೆಗೆ ಇಲ್ಲಿ ಅವಕಾಶವಿರುವುದಿಲ್ಲ. ಹಾಗೆಯೆ ಒಂದು ವಿಶೇಷ ಘಟನೆ ಒಬ್ಬರ ಬದುಕಿನಲ್ಲಿ ನಡೆದದ್ದು ಪರಂಪರಾಗತವಾಗಿ ಜನತೆ ಅದನ್ನು ಸ್ವೀಕರಿಸಿ, ಬೆಳೆಸುವುದೂ ಇದೆ. ಇದನ್ನು ಐತಿಹ್ಯ ಎನ್ನುತ್ತಾರೆ. ನಮ್ಮಲ್ಲಿ ಅಂದರೆ ಭಾರತೀಯರಲ್ಲಿ ಇತಿಹಾಸ ಪ್ರಜ್ಞೆ ಕಡಿಮೆ. ವಸ್ತುನಿಷ್ಠ ಅಂಶ ದೊರೆವುದೂ ಕಡಿಮೆ. ಕಲ್ಪನೆ, ಅಸಂಗತ ಸಂಗತಿ ಬಳಸುವುದೇ ಹೆಚ್ಚು. ಹರಿದಾಸರನ್ನು ಕುರಿತು ಐತಿಹ್ಯಗಳೇ ಹೆಚ್ಚು. ಹಾಗೂ ಅವರು ಅತಿಮಾನುಷ ವ್ಯಕ್ತಿಗಳೆಂದೆ ಪರಿಗಣಿಸಲ್ಪಟ್ಟದಾರೆ. ಇದು ಜನತೆ ಅವರಿಗಿತ್ತಿರಬಹುದಾದ ಗೌರವವಾದರೂ ಅಲ್ಲಿ ವಾಸ್ತವಿಕತೆಯ ಎಳೆ ಬಾಳ ಜಾಳಾಗಿ, ವಸ್ತುದ ನೇಯ್ಗೆಯ ಕಲಾತ್ಮಕತೆ ಕಿರಿದಾಗುವ ಹಾಗೆ, ಅಂದು ಬಾಳಿ ಬದುಕಿನ ಹರಿದಾಸರ ಕತೆಗಳಲ್ಲಿ ಜಾಳು ಅಂಶಗಳೆ ಸೇರಿಕೊಂಡು ಬಿಡುತ್ತವೆ. ಮೊದಲಿಂದಲೂ ನಮ್ಮಲ್ಲಿ ಹಾಗೆಯೆ ಬೆಳೆದು ಬಂದಿದೆ. ಬರೆದು ಇಡುವಂತಿಲ್ಲ. ಬರೆಹದಲ್ಲಿರಿಸಕೂಡದು. ಬಾಯಿಂದ ಬಾಯಿಗೆ ಬರಬೇಕು. ಎಲ್ಲವೂ "ಇದಂಕಿಂ ತೇ ಗುಹ್ಯತಮಂ" ಎಂಬುದೆ ಆದರಿಂದಾಗಿಯೆ, ಸತ್ಯದ ಅಂಶದ ಸುತ್ತ ಕಲ್ಪನೆ, ಪೀಳಿಗೆಗೆ ಹೆಣೆದ ಕತೆಯ ಹಂದರ, ನೈಜತೆಯೆನ್ನೆ ಮರೆಸಿಬಿಡುತ್ತದೆ. ಇದು ಹರಿದಾಸರ ವಿಚಾರದಲ್ಲೇನೂ ಅಪವಾದವೆನ್ನುವಂತಿಲ್ಲ. ಎಲ್ಲ ಮಹಾಪುರುಷರ ಜೀವನ ಕಥನ ನಿರೂಪಣೆಯಲ್ಲಿಯೂ ಕಾಲದಿಂದ ಕಾಲಕ್ಕೆ ಅದ್ಭುತ ಮಹಿಮೆಗಳ ಪ್ರಸಂಗಗಳೂ, ಪವಾಡಗಳೂ (miracles), ಘಟನೆ (legend)ದೃಷ್ಟಾಂತಗಳೂ ಬೆಳೆದು ಸೇರಿಕೊಳ್ಳುತ್ತವೆ. ಸೇರಿಸುತ್ತಾರೆ; ಅಗ್ಗೆ ವಾಸ್ತವಿಕ ಅಂಶ ಯಾವುದು, ಕಾಲ್ಪನಿಕತೆಯೆಷ್ಟೆಂದು ಪೃಥಕ್ಕರಿಸುವುದು ಕಷ್ಟಕರ ವಿಚಾರ.

ಪ್ರಖ್ಯಾತ ಪ್ರವಾಸಿಗರರಲ್ಲೊಬ್ಬನಾದ ಅಲ್ಬೆರೂನಿ ಎಂಬಾತ, "ಭಾರತೀಯರು ಇತಿಹಾಸ ಪ್ರಿಯರಲ್ಲ, ಇತಿಹಾಸದ ಜತೆ ಕತೆ ಕಟ್ಟಿ ಹೇಳಲು ಪ್ರಿಯರು. ಇದರಿಂದಾಗಿ ಇತಿಹಾಸವನ್ನು ಇವರು ಮುಂದೆ ಕೊಂಡೊಯ್ಯಲಾರರು" ಎನ್ನುತ್ತಾನೆ.[2] ಅದು ಬಹಳ ಮಟ್ಟಿಗೆ ನಿಜವೆಂದೆನ್ನಿಸುತ್ತದೆ. ನಮ್ಮಲ್ಲಿ ಭಾವುಕತೆ ಹೆಚ್ಚಿದಂತೆ, ನೈಜತೆ ಮರೆಯಾಗಲಾಗುತ್ತದೆ. ಇದಕ್ಕೆ ಮುಖ್ಯ ಕಾರಣ ಇತಿಹಾಸವನ್ನು ಮೊದಲಿಂದ ಬರೆಯದೆ ಇದ್ದದ್ದು. ಎಲ್ಲೊ ಅಲ್ಲಲ್ಲಿ ಅಂದಂದು ಆಳಿದರಸರು ಬರೆಸಿರುವ ಶಾಸನ, ಆಯಾ ಕಾಲ ಶತಕಗಳಲ್ಲಿ ರಚಿತವಾದ ಕಾವ್ಯ-ಅನಂತರ ದೊರೆಯುವ ಕೈಫಿಯತ್ತು, ಬಖೈರು, ಶಿಲ್ಪ ಇತ್ಯಾದಿಗಳು ಆಯಾ ಕಾಲದ ಪ್ರತಿನಿಧಿಗಳಾಗಿ, ಸಂದೇಶವಾಹಕವೂ ಆಗುತ್ತವೆ. ಹರಿದಾಸರವನ್ನು ಕುರಿತ ಕತೆಯೂ ಅದೇ. ಆದರೂ, ಪರಂಪರಾನುಗತವಾಗಿ ಬಂದ ವೃತ್ತಾಂತ-ಕಥನಗಳಲ್ಲಿ ಆಯಾ ಹರಿದಾಸರಿಗೆ ಹತ್ತಿರವಾದ, ಅಲ್ಲಿಯ ಪರಿಸರದಲ್ಲಿದ್ದ, ಅನಂತರ ಬಂದ ಹರಿದಾಸರಿಂದಲೇ, ಬರೆದು ಕೊಂಬವರಿಂದಲೊ ಉಳಿದು ಬಂದಿರುವ ದಾಸಸಾಹಿತ್ಯದಿಂದ, ಪ್ರಮುಖ ಹರಿದಾಸರ ಕಥನ ವೃತ್ತಾಂತವನ್ನು ಸಂಕ್ಷಿಪ್ತವಾಗಿ ಹಣೆಯಬೇಕಾಗಿದೆ. ಇದು ಕರ್ತವ್ಯವೂ ಆಗಿದೆ.

ಮೊದಲಿನ ಅಧ್ಯಾಯದಲ್ಲಿ ಹರಿದಾಸ ಪರಂಪರೆ ಕುರಿತಂತೆ,[3] ಪ್ರೊ. ಆರ್. ಎಸ್. ಪಂಚಮುಖಿಯವರು ಅನುಸರಿಸಿರುವ ವಿಭಾಗ ಕ್ರಮವನ್ನೆ ಇಲ್ಲಿಯೂ ಅನುಸರಿಸಲಾಗಿದೆ. ಆ ಕ್ರಮದ ಪ್ರಕಾರ, ಹರಿದಾಸರ "ದಾಸಕೂಟ" "ವ್ಯಾಸಕೂಟಗಳ" ಪ್ರತಿನಿಧಿಗಳಾದ ಹರಿದಾಸರೂ, ಮಠಾಧೀಶರಾಗಿದ್ದೂ, ಹರಿದಾಸರಾಗಿ ಕೈಂಕರ್ಯ ನಡೆಸಿದ ಮಹನೀಯರೂ ಬರುತ್ತಾರೆ. ಇದರ ಹರಹು ಕ್ರಿ.ಶ.೧೩ನೆ ಶ. ದಿಂದ ಕ್ರಿ. ಶ. ೧೯ನೆ ಶ.ದವರೆಗೆ.

1. ಮೊದಲು ಕ್ರಿ.ಶ. ೧೩ನೆ ಶತಕ-ನರಹರಿತೀರ್ಥರು (ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರು)
2. ಅನಂತರ ಸುಮಾರು ೧೦೦-೧೫೦ ವರ್ಷ ದಾಸಸಾಹಿತ್ಯ ರಚನೆಯ ಬಗ್ಗೆ ಮಾಹಿತಿ ದೊರೆತಿಲ್ಲ. ಕ್ರಿ.ಶ.೧೫ ರಿಂದ ೧೬ ರವರೆಗೆ ಆಗಿ ಹೋದ ಹರಿದಾಸ ಮಹನೀಯರೊಬ್ಬೊಬ್ಬರೂ ಚಿರಸ್ಮರಣೀಯರು ಹಾಗೂ ವಿಶಿಷ್ಟ ಸಾಹಿತ್ಯ ಕರ್ತೃಗಳೇ ; ಹರಿದಾಸಸಾಹಿತ್ಯದ ಆದ್ಯ ಪ್ರವರ್ತಕರೆಂದೆನ್ನಿಸಿಕೊಂಬ ಶ್ರೀಪಾದರಾಜರು, ಶ್ರೀವ್ಯಾಸರಾಯರು, ಶ್ರೀವಿಜಯೀಂದ್ರತೀರ್ಥರು, ಶ್ರೀಪುರಂದರದಾಸರು, ಶ್ರೀವಾದಿರಾಜರು, ಶ್ರೀಕನಕದಾಸರು, ಶ್ರೀವೈಕುಂಠದಾಸರು, ಮೊದಲಾದ ಮಹನೀಯರು.

ಇದಾದ ನಂತರ ಒದಗಿದ ರಾಜಕೀಯ ಕ್ಷೋಭೆ-ರಕ್ಕಸತಂಗಡಿಯ ಯುದ್ಧದಲ್ಲಿ ಅಳಿದು, ವಿಧರ್ಮೀಯರ ಸತತ ಸೂರೆಗೆ ಈಡಾದ ವಿಜಯನಗರ ಸಾಮ್ರಾಜ್ಯ ದುರಂತದಿಂದ, ದಾಸಸಾಹಿತ್ಯ ಛಿದ್ರಗೊಂಡಿರಲು ಸಾಕು. (ಇದೇ ರೀತಿಯ ರಾಜಕೀಯ ಪರಿಸ್ಥಿತಿಯು ವ್ಯತ್ಯಸ್ತ ಆದದ್ದು ಕ್ರಿ.ಶ. ೧೩ನೆ ಶ. ದಲ್ಲಿ ನಡೆದ ಕಲ್ಯಾಣ ಕ್ರಾಂತಿ,

ರಾಜಬಿಜ್ಜಳನ ಕೊಲೆ, ಕೇಂದ್ರಬಿಂದು ಆಗಿದ್ದ ಬಸವಣ್ಣನ ಕಪ್ಪಡಿ ಸಂಗಮದೆಡೆಗಮನ, ಎಲ್ಲವೂ ವಚನಕಾರರ ಸಂಘಟನೆಯನ್ನು ಒಡೆದು ಹಾಕಿತೆಂಬುದೂ ನಿಜವೆ. ಆದರೆ ವಚನ ಸೃಷ್ಟಿ (ಕ್ರಿ.ಶ.೧೩ನೆ ಶ.ದ ನಂತರವೂ) ಮುಂದುವರೆದದ್ದು ಆ ಚಳವಳಿಯ ವೈಶಿಷ್ಟ್ಯ.)[4] ಆದರೆ, ಹರಿದಾಸಸಾಹಿತ್ಯ, ಹಾಗೂ ಹರಿದಾಸರ ಸಂಪ್ರದಾಯ– ಅವರ ಭಕ್ತಿ ಆಂದೋಲನ ಕ್ರಿ.ಶ.೧೭ನೆ ಶತಮಾನದಲ್ಲಿ ಶ್ರೀಮಂತ್ರಾಲಯ ಕ್ಷೇತ್ರದಲ್ಲಿ ನೆಲಸಿದ ಶ್ರೀರಾಘವೇಂದ್ರತೀರ್ಥರ ಬೃಂದಾವನ ಸ್ಫೂರ್ತಿಯಿಂದ ಮುಂದುವರೆಯಿತು. ಆಂದೋಲನದ ಗತಿ ''ಮಂತೀಯ''ವೆ ಆದರೂ, ವಿಜಯದಾಸರಂಥ ಮಹಾಮಹಿಮರು, ಕೃತಿಕಾರರು, ಬಂದ ಹಂತ ಇದು. ಇದನ್ನು ದಾಸಸಾಹಿತ್ಯದ ಎರಡನೆಯ ಘಟ್ಟವನ್ನು ಬಹುದು. ಅಂತೆಯೆ ಕ್ರಿ. ಶ. ೧೭ನೆ ಶ.ದ ಶ್ರೀರಾಘವೇಂದ್ರರ ಮಂತ್ರಾಲಯಕ್ಷೇತ್ರ ಬೃಂದಾವನಸ್ಫೂರ್ತಿ (೧೯ನೆ ಶ.ದವರೆಗೆ) ವಿಜಯದಾಸ, ಗೋಪಾಲದಾಸರ, ಜಗನ್ನಾಥ ದಾಸರ, ಶ್ರೀಪ್ರಸನ್ನವೆಂಕಟದಾಸರ ಬಗ್ಗೆ ಕೂಡ ವಿಚಾರ ಮಾಡಲೇಬೇಕಾಗುತ್ತದೆ.

ಹೀಗೆ ಈ ಅವಧಿಗಳಲ್ಲಿ (ಪಂಚಮುಖಿಯವರು ಸೂಚಿಸಿರುವಂತೆ, ಮೂರನೆಯ ವಿಭಾಗ ಕ್ರಮವನ್ನು – ಶ್ರೀರಾಘವೇಂದ್ರತೀರ್ಥರ – ವೇದೇಶತೀರ್ಥರ – ನಾಲ್ಕನೆಯ ಅವಧಿಯ ವಿಭಾಗದೊಂದಿಗೆ, ಅಂದರೆ, ವಿಜಯದಾಸರಾದ್ಯಾದಿ ಹರಿದಾಸರ ಜತೆಗೇ ಸೇರಿಸಿರುವುದು ಹಾಗೂ ದಾಸಸಾಹಿತ್ಯದ ದ್ವಿತೀಯ ಘಟ್ಟ ಆಗಿ ನಾವು ಪರಿಭಾವಿಸಿರುವುದು ಇಲ್ಲಿ ಅನುಸರಿಸಿರುವ ವಿಧಾನವಾಗಿದೆ.) ದಾಸಕೂಟದ ಅಧ್ಯಯನದಂತೆ, ಮೊದಲಿನದು ಸೃಜನಾತ್ಮಕ ಯುಗ, ಅನಂತರ ಮಹಾಕೃತಿಗಳ ಯುಗ, ಉತ್ತೇಜಕ ಯುಗ-ಸಿದ್ಧಾಂತ ಪ್ರತಿಪಾದಕ ಯುಗವೆಂದು ಪರಿಗಣಿಸಬಹುದಾಗಿದೆ. ಮೊದಲ ಅವಧಿಯಲ್ಲಿ ಹರಿದಾಸಸಂಘಟನೆ, ಎರಡನೆಯ ಹಂತದಲ್ಲಿ ಹರಿದಾಸ ಸಂಘಟನೆಯೊಂದಿಗೇ ವ್ಯಾಸರಾಯರು, ಪುರಂದರದಾಸರಾದಿಯಾಗಿ ಹರಿದಾಸರು, ವಾದಿರಾಜರಂಥ ಮಹನೀಯರು ನಡೆಸಿದ ವಾಙ್ಮಯ ತಪಸ್ಯೆ-ಕೃತಿಗಳು, ಮೂರನೆಯ ಅವಧಿಯಲ್ಲಿ ವಿಧರ್ಮೀಯರ ಹಾವಳಿ ರಾಜಕೀಯ ಕ್ಷೋಭೆಯಿಂದಾಗಿ ಸೆಲೆ ತಪ್ಪಿದಂತಾದ ದಾಸಸಾಹಿತ್ಯದಲ್ಲಿ ಉತ್ತೇಜನವಿತ್ತು, ಪುನಃ ಸಂಘಟಿಸಲು ಕಾರಣರಾದ ಶ್ರೀರಾಘವೇಂದ್ರತೀರ್ಥರ ಸಮರ್ಥ ನೇತೃತ್ವ-ಉತ್ತೇಜಕ ಯುಗ; ನಾಲ್ಕನೆಯದು ಸಿದ್ಧಾಂತ ಪ್ರತಿಪಾದಕ ಯುಗ-ಗೋಪಾಲದಾಸರು, ಜಗನ್ನಾಥದಾಸರ ಕೃತಿಗಳು ಹಾಗೂ ಹರಿಕಥಾಮೃತಸಾರದಂಥ ಅದ್ಭುತ ಕಾವ್ಯ ರಚನೆ ಜಗನ್ನಾಥದಾಸರ ನೇತೃತ್ವ-ಸ್ಫೂರ್ತಿಯಿಂದ ಬೆಳೆದು ಹಬ್ಬಿದ ದಾಸಕೂಟ ಪರಂಪರೆ. ಹೀಗೆ ಇದು ಅಧ್ಯಯನದ ವಿಧಾನಕ್ಕೂ ನೆರವಾಗುತ್ತದೆ. ಆದರೆ, ಒಂದು ಅಂಶ ಇಲ್ಲಿ ಪರಿಗಣನೀಯ :

[ವ್ಯಾಸಂಗದ ದೃಷ್ಟಿಯಿಂದ ಹರಿದಾಸಸಾಹಿತ್ಯದ ಪೂರ್ವಾರ್ಧದಯುಗವನ್ನು ಸುವರ್ಣಯುಗವೆಂದೂ, (ಮೊದಲ ಹಂತ) ಹಾಗೂ ಉತ್ತರಾರ್ಧಯುಗವನ್ನು (ದ್ವಿತೀಯ ಹಂತ) ಪುನರುತ್ಥಾನಯುಗವೆಂದೂ ವಿಭಜಿಸುವುದು ಮೇಲು. ಇದರಿಂದ ಅಲ್ಲಿಯ ಶತಮಾನ

ಕಾಲಮಾನಕ್ಕೆ ಅನುಗುಣ ಆಗಿ ಈ ಪ್ರಕಾರದ ವಸ್ತುಸ್ವರೂಪ ಪ್ರತ್ಯೇಕ ಆಯಿತೆಂಬುದು ನಿದರ್ಶನಗಳಿಂದ ವೇದ್ಯ ಆಗುತ್ತದೆ.]

ಪೌರಾಣಿಕ ನಂಬುಗೆ, ಬೆಳೆದು ಬಂದ ಪರಂಪರಾನುಗತವಾದ ಭಾವನೆ, ಇವುಗಳ ದೃಷ್ಟಿಯಿಂದ ಭಾರತದ ಇತಿಹಾಸ, ಜನತೆಯ ಬದುಕನ್ನು ಗಮನಿಸಿದರೆ, ಮತ-ಧರ್ಮ ಈ ಭೂಮಿಯಲ್ಲಿ ಹಾಗೂ ಜನತೆಯ ಬದುಕಿನ ಅವಿಭಾಜ್ಯ ಅಂಗ ಆಗಿರುವುದು ಸುವಿದಿತ ಆಗುತ್ತದೆ. ಕಾಣದ ಕೈಯನ್ನು, ಕಾಣದ ಅಂತರ ಶಕ್ತಿಯ ದಿವ ಚೇತನ ವನ್ನು ದೇವರೆಂದು ಕರೆದಂತೆಯೆ, ವೇದಪೂರ್ವ, ವೇದಯುಗ, ಪುರಾಣಗಳ ಯುಗ ಇವುಗಳೆಲ್ಲದರ ಕೊಡುಗೆ ಅತ್ಯುನ್ನತ ಮಟ್ಟದ್ದು. ವೇದ ನಿರಾಕರಣ ಮತಗಳ ಕೊಡುಗೆಯೂ ಅಲ್ಪವೇನಲ್ಲ. ಖಂಡನ-ಮಂಡನ ಮೊದಲಿಂದ ನಡೆದು ಬಂದದ್ದೆ. ಹಾಗೆಯೆ, ಗೀತೆಯ ಮಾತು ಸಮಾಜದ ಬದುಕನ್ನು ನಡೆಸುವ ಮಂತ್ರವಾದಂತಿದೆ-ಅದೂ ವೈದಿಕ ಮತ ನಂಬುವವರಲ್ಲಿ. "ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ। ಅಭ್ಯುತ್ಥಾನಮಧರ್ಮಸ್ಯ...." ಎಂದು ನುಡಿದ, "ಸಂಭವಾಮಿ ಯುಗೇ ಯುಗೇ" ಎಂದು ನುಡಿದ ಗೀತಾಚಾರ್ಯ ಶ್ರೀಕೃಷ್ಣ, ಹಾಗೆಯೆ ಕೃತ, ತ್ರೇತ, ದ್ವಾಪರ ಗಳಲ್ಲಿ ಅವತರಿಸಿರುವುದೂ ಎಲ್ಲ ಭಾರತೀಯರೂ ಬಲ್ಲರು. "ಎಲ್ಲಿ ಧರ್ಮದ ಗ್ಲಾನಿ ಯಾಗುವುದೊ ಅಗ್ಗೆ ನಾನು ಅವತರಿಸಿ ಬರುತ್ತೇನೆ" ಎಂಬುದು ಧರ್ಮಭೀರುವಾದ ಪಾರ್ಥನ ವಿಷಾದ್ಯಮಂದ ಮೂಲಕ ಧರ್ಮದವಲಂಬಿಗಳಿಗೆಲ್ಲ ಘೋಷಿಸಿರುವ ಉದ್ಘೋಷ ನಾವು ಹರಿಯ ಪತ್ತವತಾರಗಳಲ್ಲೂ ಆತ ಈ ಕಾರ್ಯವನ್ನೂ ತನ್ನದೆ ಆದ ವಿಶಿಷ್ಟ ಅನುಸರಣೀಯ ರೀತಿಯಲ್ಲಿ ನಡೆಸಿ, ಅವತಾರದ ಉದ್ದೇಶ ಸಾಧಿಸಿದುದನ್ನು ತಿಳಿ ದಿದ್ದೇವೆ. ನೀತಿಯ ಚೌಕಟ್ಟು, ಧರ್ಮದ ಆಚರಣೆ, ಸಮಾಜದ ಬದುಕಿಗೆ ಸ್ವಾಸ್ಥ್ಯ ನೀಡುವ ಸ್ಥಿರ ಮೌಲ್ಯಗಳೆಂಬುದು ಅನಾದಿಕಾಲದಿಂದ ಬಂದ ಭಾವನೆ, ನಂಬುಗೆ ಕೂಡ. ಇದೇ ಭಾರತೀಯ ಸಾಹಿತ್ಯ ಸಂಪದದಲ್ಲೂ ಅಭಿವ್ಯಕ್ತಗೊಂಡಿರುವುದು ಸಹಜವೆ ಆಗಿದೆ.

**ಹರಿದಾಸ ಕಾಲ ಸಂಧಿ ಸಮಯ**

ಹರಿದಾಸರು ಬಂದ ಯುಗ-ಕಾಲ ಅಂಥ ಸಂಕ್ರಮಣ ಕಾಲದ್ದೆ. ವಚನಕಾರರ ಸಂಘಟಿತ ವಚನ ಆಂದೋಲನ, ಒಂದು ಸಮಾಜ ಬದಲಾವಣಾ ಚಳವಳಿಯಾಗಿದ್ದು, ಕಾಯಕ ತತ್ವದ ಮೂಲಕ, ವೈದಿಕ ಮತಗಳನ್ನು ನಿರಾಕರಿಸಿ, ಶ್ರೀಸಾಮಾನ್ಯರೆಲ್ಲರನ್ನೂ ತನ್ನಲ್ಲಿ ಅಳವಡಿಸಿಕೊಂಡು, ಅಲ್ಲಿನವರೆಗೆ ಬೆಳೆದು ಹೆಮ್ಮರವಾದ ಜಾತಿ-ವರ್ಣಾಶ್ರಮ ಪದ್ಧತಿಯನ್ನು ಕಿತ್ತೊಗೆಯಲು ಶ್ರಮಿಸಿ, ಸ್ವಲ್ಪಮಟ್ಟಿಗೆ ಉದ್ದೇಶ ಸಾಧಿಸಿದ ಸಮಯ ಅದು. ಹಾಗೆಯೆ ಶ್ರೀಸಾಮಾನ್ಯ ಎಚ್ಚೆತ್ತುಕೊಳ್ಳಲೂ ಈ ಚಳವಳಿ ಪೋಷಕ ಆಗಿತ್ತು. ಅಲ್ಲಿ ಇಲ್ಲಿ ಆಳದಿಂದಲೆ ಅವೈದಿಕ ಮತಗಳಾದ ಜೈನ-ಬೌದ್ಧ ಧರ್ಮ, ಶಂಕರರಿಂದ ಪ್ರತಿ ಪಾದಿತ ಆಗಿ ತನ್ನದೇ ಆದ ಜಟಿಲತೆ ಉಳ್ಳ ಜ್ಞಾನಪ್ರಧಾನ ಆದ ಅದ್ವೈತ, ರಾಮಾನುಜರ ಸ್ವಾಮಿ, ಭೃತ್ಯ-ಶೇಷ-ಶೇಷಿ ಭಾವ ಪ್ರತಿಪಾದಿಸುತ್ತ

ಶ್ರೀಮನ್ನಾರಾಯಣನೇ ಸರ್ವೋತ್ತಮನೆಂದು ಪ್ರತಿಪಾದಿಸಿದ ವಿಶಿಷ್ಟಾದ್ವೈತ, ಇವೆಲ್ಲ ಪ್ರಚಲಿತ ಆಗಿದ್ದರೂ ವೈದಿಕ ಧರ್ಮವಲ್ಲಿ ವೇದಪ್ರಾಮಾಣ್ಯ ಸ್ಥಾಪಿಸಲೆಂದೆ, ಹರಿಯ ಪಾರಮ್ಯ ಮಹಿ ಸರ್ವೋತ್ತಮತೆ ಎತ್ತಿ ಹಿಡಿಯಲೆಂದೇ ಮಧ್ವಾಚಾರ್ಯರು ಅವತರಿಸಿ ಬಂದು, ದ್ವೈತತತ್ವ ಸ್ಥಾಪಿಸಿ, ಪ್ರತಿಪಾದಿಸಿದರು. ಹರಿದಾಸರ ಮುಖ್ಯ ಧ್ಯೇಯಗಳು : ವೈದಿಕ ಧರ್ಮವನ್ನು ಉಳಿಸಿ, ಬೆಳೆಸುವುದು, ಹರಿಭಕ್ತಿ, (ಮಾಹಾತ್ಮ್ಯ ಜ್ಞಾನವುಳ್ಳ) ಹರಿಸರ್ವೋತ್ತಮತ್ವ ಪ್ರತಿಪಾದಿಸುವುದು, ಹಾಗೂ ಮಧ್ವಮತ ಪ್ರಸಾರ. ತನ್ಮೂಲಕ ಸಮಾಜದ ಎಲ್ಲರನ್ನೂ ತಮ್ಮೊಂದಿಗೆ ಸೇರಿಸಿಕೊಂಬ ಧ್ಯೇಯ ಅವರದ್ದು. ಆಯಾ ಹರಿದಾಸರು ಬಂದ ಸಂದರ್ಭಗಳು ಅಂಥವೆ, ಅಂಥ ಸಂಧಿಸಮಯವೆ ; ಈಗ ಅವರಲ್ಲಿ ಪ್ರಮುಖರೆಂದು ಇಲ್ಲಿ ಕೆಲವರನ್ನು ಮಾತ್ರ ಪರಿಚಯಿಸಿಕೊಡಲಾಗಿದೆ. ಅಂದ ಮಾತ್ರಕ್ಕೆ ಬೇರೆಯವರ ಪರಿಚಯ ಮಾಡಿಕೊಡುವುದು ಬೇಕಿಲ್ಲವೆಂಬ ಧೋರಣೆ ಸರ್ವಥಾ ಇಲ್ಲ. ಒಂದು ಪರಂಪರೆಯ ಪ್ರತಿನಿಧಿಗಳನ್ನು ಪರಿಚಯಿಸಿದಾಗ, ಅವರ ಮೂಲಕ ಪರಂಪರೆಯ ಸಮಾಜದ ಬದುಕೇ ಪರಿಚಯ ಮಾಡಿಕೊಟ್ಟಂತಾಗುತ್ತದೆ. ಇಲ್ಲಿ ನಾವು ಗಮನಿಸಬೇಕಾದುದು ಈ ಶ್ಲೋಕವನ್ನು :

> ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ ।
> ನಮಃ ಪುರಂದರಾರ್ಯಾಯ ವಿಜಯಾರ್ಯಾಯತೇ ನಮಃ ॥[8]

ಇದರ ರಚನೆ, ಸಂದರ್ಭ, ಅವಧಿ, ಏನೇ ಇರಲಿ, ಈ ಶ್ಲೋಕದಲ್ಲಿ ಉಕ್ತ ಆಗಿರುವ ಹರಿದಾಸ ಮಹನೀಯರು, ಇಬ್ಬರು ಮಠಾಧೀಶರು, ಇನ್ನಿಬ್ಬರು ಹರಿದಾಸರು. ನಾಲ್ವರೂ ಒಂದೊಂದು ಪ್ರಮುಖ ಹಂತದಲ್ಲಿ ಒಂದಾಗಿ, ಜತೆಗೂಡಿ, ಸಮಾಜದ ಉನ್ನತಿಗೆ, ಸುಧಾರಣೆಗೆ ಶ್ರಮಿಸಿದವರು.* ಇಡಿಯ ಹರಿದಾಸ ಸಾಹಿತ್ಯದ ಆದ್ಯ ಪ್ರವರ್ತಕರಾದಂತೆಯೇ, ಪ್ರಥಮ ಹಂತದ ಪ್ರಮುಖರಾದ ಶ್ರೀಪಾದರಾಜರು ಅವರ ಶಿಷ್ಯರಾದ ವ್ಯಾಸರಾಯರು ದಾಸಕೂಟವನ್ನು ಪೋಷಿಸಿ, ಬೆಳೆಸಿ ಸಂಘಟಿಸಿದರು. ವ್ಯಾಸರಾಯರಲ್ಲಿ ಹರಿದಾಸ ದೀಕ್ಷೆ ಸ್ವೀಕರಿಸಿದ ಶ್ರೀ ಪುರಂದರದಾಸರು ದಾಸಸಾಹಿತ್ಯದ ಮೊದಲ ಹಂತದ ಪ್ರಮುಖ ಹರಿದಾಸರಾದಂತೆಯೇ ಕರ್ನಾಟಕ ಸಂಗೀತಕ್ಕೆ ಪಿತಾಮಹ ರೆನ್ನಿಸಿಕೊಂಡವರು. ಅನಂತರ ಸುಮಾರು ೧೫೦ ವರ್ಷದ ನಂತರ ಬಂದ ವಿಜಯದಾಸ ರಾದರೊ ಹರಿದಾಸಸಾಹಿತ್ಯದ ದ್ವಿತೀಯ ಘಟ್ಟದ ಪ್ರಮುಖರು. ಈ ಹಂತದ ಗುರು ಸ್ವರೂಪಿಯಾಗಿ, ಸ್ಫೂರ್ತಿ ಚೇತನವಾಗಿ ಮಂತ್ರಾಲಯದ ಶ್ರೀರಾಘವೇಂದ್ರತೀರ್ಥರು ಇದ್ದರು. ಅವರ ಚೈತನ್ಯ ನೆಲೆಯಾದ ಶ್ರೀ ಬೃಂದಾವನದಿಂದ ಸ್ಫೂರ್ತಿಗೊಂಡ ವಿಜಯದಾಸರು ದ್ವಿತೀಯ ಹಂತದ ಆದ್ಯರು ಹಾಗೂ ಅವರಿಂದ ಅನಂತರ ದಾಸಕೂಟ ಪರಂಪರೆ ಮತ್ತೆ ಜ್ವಲಿಸಿ ಹಳಗಿತು. ವಿಜಯದಾಸರ ಶಿಷ್ಯ ಪ್ರಶಿಷ್ಯರಾದ ಗೋಪಾಲ ದಾಸರು, ಜಗನ್ನಾಥದಾಸರು, ಮೋಹನದಾಸರು, ಪ್ರಾಣೇಶದಾಸರು, ಪ್ರಸನ್ನ

ವೆಂಕಟದಾಸರು ಹೀಗೆ ಅನೇಕ ಹರಿದಾಸರು ಬಂದು ತಮ್ಮ ಬದುಕನ್ನೆ ದೀಕ್ಷೆಯಾಗಿ ವ್ರತಾವಲಂಬಿಗಳಾದುದಲ್ಲದೆ ಕನ್ನಡ ಸಾಹಿತ್ಯಕ್ಕೂ ಕೊಡುಗೆ ನೀಡಿದರು. ಭಕ್ತಿ ಸಾಹಿತ್ಯ ಪೋಷಿಸಿ, ಬೆಳಸಿದರು. ಇವರಲ್ಲದೆ, ದಾಸಸಾಹಿತ್ಯದ ಮೊದಲ ಹಂತಕ್ಕೂ ಎರಡನೆ ಹಂತಕ್ಕೂ ನಡುವೆ ಬಿಜಾಪುರದ ಬಳಿಯ ಕಾಖಂಡಿಕಿಯಲ್ಲಿ ಆಗಿ ಹೋದ ಮಹೀಪತಿ ದಾಸರನ್ನೂ ನಾವು ಮರೆವಂತಿಲ್ಲ. ಅವರು ಈ ಎರಡೂ ಹಂತಗಳ ನಡುವಣ ಸೇತು ವಿದ್ದಂತೆ. ಹಾಗಾದರೆ ಶ್ಲೋಕದಲ್ಲಿ ಈ ನಾಲ್ವರೇ ಮಾತ್ರ ಉದ್ಧೃತರಾಗಲು ಕಾರಣ ? ಅದು ಸಾಂದರ್ಭಿಕ ಹಾಗೂ ಪ್ರಾತಿನಿಧಿಕ ಆಗಿದ್ದಿರಬಹುದೆನ್ನಬಹುದಷ್ಟೆ. ಇಷ್ಟೇ ಅಲ್ಲ ಹರಿದಾಸಸಾಹಿತ್ಯದ ಎರಡು ಪ್ರಮುಖ ಘಟ್ಟಗಳಾದ ಸೃಜನಾತ್ಮಕ–ಸಿದ್ಧಾಂತ ಪ್ರತಿ ಪಾದನ ಯುಗಗಳಿಗೆ ಪ್ರತಿನಿಧಿಗಳು ಆಚಾರ್ಯರು, ಶ್ರೀಪಾದರಾಜರು–ಶ್ರೀ ವ್ಯಾಸ ರಾಯರು ಹಾಗೂ ಶ್ರೀ ಪುರಂದರದಾಸರು–ಶ್ರೀ ವಿಜಯದಾಸರು. ಎನ್ನುವುದು ನಿಜ. ಇದರಿಂದಲೂ ಈ ಶ್ಲೋಕ ತುಂಬ ಸಮಂಜಸವೆ. ಇದರಿಂದ ನಾವು ಇಲ್ಲಿ ಪರಿಚಯಿ ಸುವ ಪ್ರಮುಖ ಹರಿದಾಸರುದರೆ :

1. ಶ್ರೀಪಾದರಾಜರು
2. ವ್ಯಾಸರಾಯರು
3. ವಾದಿರಾಜರು
4. ಪುರಂದರದಾಸರು
5. ಕನಕದಾಸರು
6. ವೈಕುಂಠದಾಸರು (ಮಧ್ವ ಸಂಪ್ರದಾಯದವರಲ್ಲದ ಶ್ರೀವೈಷ್ಣವರು)
7. ಶ್ರೀವಿಜಯದಾಸರು
8. ಇದೇ ಸರಿಸುಮಾರಿಗೆ ಕ್ರಿ.ಶ. ೧೭ನೇ ಶ.ದಲ್ಲಿ ಬಾಗಿಲಕೋಟೆಯಲ್ಲಿದ್ದ ಶ್ರೀ ಪ್ರಸನ್ನ ವೆಂಕಟದಾಸರು ಹಾಗೂ ಕಾಖಂಡಿಕೆಯ ಮಹಿಪತಿ ರಾಯರು.
9. ವಿಜಯದಾಸರ ಶಿಷ್ಯರಾದ ಗೋಪಾಲದಾಸರು
10. ಜಗನ್ನಾಥದಾಸರು.

ಜಗನ್ನಾಥದಾಸರ ನಂತರ ಅಂದರೆ, ೧೯ನೇ ಶ.ದಿಂದ ಈಚೆಗೆ ಬಂದಿರುವ ಅನೇಕ ಹರಿ ದಾಸರ ಪರಂಪರೆಯನ್ನು ಇಲ್ಲಿ ಪ್ರತ್ಯೇಕವಾಗಿ ಪರಿಗಣಿಸಲಾಗಿಲ್ಲ. ಅಂದ ಮಾತ್ರಕ್ಕೇ ಸಾಧನೆಯ ದೃಷ್ಟಿಯಿಂದ ಯಾವುದೆ ಭಾವನೆಯನ್ನೂ ತರಬೇಕಾದ್ದಿಲ್ಲ. ಆದರೆ, ವಿಶಿಷ್ಟ ಕೊಡುಗೆ ನೀಡಿ ಪ್ರತಿನಿಧಿಸಿದ ವಿವಿಧ ಹಂತಗಳ ಹರಿದಾಸ ಪ್ರಮುಖರನ್ನು

ಮಾತ್ರ ಇಲ್ಲಿ ಪರಿಚಯಿಸಲು ಉದ್ದೇಶಿಸಲಾಗಿದೆ. ಅನಂತರ ಬಂದ ಹರಿದಾಸರ ಬಾಹುಳ್ಯ ಒಂದೇ ಅಲ್ಲದೆ, ಅನೇಕ ಕೃತಿಗಳು ಕೂಡ 'ಚರ್ವಿತ ಚರ್ವಣ'ವೆನ್ನುವಂತಿವೆ. ಹಿಂದಿನ ಹರಿದಾಸರ ಕೃತಿ ಸಮುದಾಯದೊಂದಿಗೆ ಹೋಲಿಸಿದಾಗ ಅಲ್ಲಿ ಸ್ವಜನ ಪೌಲ್ಕ್ಯಕ್ಕಿಂತ ಅನುಕರಣೆಯ ಹೆಚ್ಚೆನ್ನುವಂತಿದೆ. ಆದರೆ, ಒಂದು ಮುಖ್ಯ ವಿಚಾರ: ಹರಿದಾಸ ಆಂದೋಲನ, ತನ್ನ ದ್ರುತಗತಿ ತಲುಪಿದ್ದುದು ಇನ್ನೂ ಮುಂದುವರೆದಿರುವುದೇ. ಹರಿದಾಸ ವಾಙ್ಮಯದ ಉಗಮ ಕುರಿತ ಸಂದರ್ಭದಲ್ಲಿ ಶ್ರೀ ನರಹರಿತೀರ್ಥರ ಕುರಿತಾದ ಹಾಗೂ 'ಆದ್ಯ'ರೆಂಬುವರನ್ನು ಕುರಿತಂತೆ ವಿಚಾರ ಮಾಡಿದ್ದೇವೆ. ಶ್ರೀ ನರಹರಿತೀರ್ಥರಾದರೂ ಒಂದು ದೃಷ್ಟಿಯಲ್ಲಿ ಮುಖ್ಯರೇ ಆಗಿದಾರೆ. ಅವರು ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರೆಂಬುದು ಒಂದು. ಇನ್ನೊಂದು, ಅವರನ್ನು ಕುರಿತಂತೆ ದೊರೆತಿರುವ ಕೂರ್ಮದ ಸಂಸ್ಕೃತ ಶಾಸನ. ಆ ಶಾಸನದ ಪಾಠದ ಪ್ರಕಾರ, ಒರಿಸ್ಸ ದೇಶದ ಗಜಪತಿ ರಾಯನಲ್ಲಿ ಕೆಲಸಕ್ಕಿದ್ದ ಸ್ವಾಮಿ ಶಾಸ್ತ್ರಿಗಳೆಂಬುವ ಅದ್ವೈತಿಗಳು ಆನಂದತೀರ್ಥರ ಜತೆ ವಾದ ಮಾಡಿ, ಅವರ ವಿಚಾರಗಳಿಗೆ ಅವರ ತತ್ವಕ್ಕೆ ಮನಸೋತು, ಮಧ್ವಾಚಾರ್ಯರ ಶಿಷ್ಯರಾಗಿ, ನರಹರಿತೀರ್ಥರೆಂಬ ಅಭಿದಾನ ತಳೆದು, ಶ್ರೀ ಸೀತಾರಾಮ ವಿಗ್ರಹವನ್ನು ಪೂಜಿಸಲೆಂದು ಆಚಾರ್ಯರಿಗಿತ್ತುದು ಹಾಗೂ ಅದೇ ಮೂಲರಾಮರೆಂದು ಹೆಸರು ಪಡೆದದ್ದು. ಇದು ಒಂದು ಪರಂಪರೆಯ ಪ್ರಾತಿನಿಧ್ಯ ದೃಷ್ಟಿಯಿಂದ ಪ್ರಮುಖ ಅಂಶ ಆಗುತ್ತದೆ. ನರಹರಿತೀರ್ಥರ ನಾಲ್ಕೇ ಹಾಡು ದೊರೆತು ಅವರ ನಂತರ ಸುಮಾರು ಒಂದು ಶತಮಾನ ಕಳೆದ ಮೇಲೆ ಬಂದ ಶ್ರೀಪಾದರಾಜರಿಂದ ವಿಧ್ಯುಕ್ತವಾಗಿ ಹರಿದಾಸ ಭಕ್ತಿಪಂಥ-ಹರಿದಾಸ ಸಂಪ್ರದಾಯವೆ ಆರಂಭಗೊಂಡುದರಿಂದ, ಹರಿದಾಸ ಆಂದೋಲನವೆ ಚಲನೆಯಲ್ಲಿ ಬಂದುದರಿಂದ, ನಾವು ಶ್ರೀಪಾದರಾಜರಿಂದಲೇ ಪ್ರಮುಖ ಹರಿದಾಸರ ಪರಿಚಯವನ್ನು ಸಂಕ್ಷಿಪ್ತವಾಗಿ ಮಾಡಿಕೊಡಲಿದ್ದೇವೆ. ಎಲ್ಲ ಹರಿದಾಸರ ಜೀವನ ಕಥನವೂ ಸುವಿದಿತವಿದ್ದು, ಅನೇಕ ಕೃತಿಗಳು ಈ ವಿಚಾರದಲ್ಲಿ ಬೆಳಕಿಗೆ ಬಂದಿರುವುದರಿಂದ ಬದುಕಿನ ವಿಶಿಷ್ಟ ಘಟ್ಟ ಸಾಹಿತ್ಯದ ಕೊಡುಗೆಗಳನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಳ್ಳಲಾಗಿದೆ.

ಹರಿದಾಸಸಾಹಿತ್ಯದ ಆದ್ಯ ಪ್ರವರ್ತಕರಾದ ಶ್ರೀಪಾದರಾಜರು ಎರಡು ದೃಷ್ಟಿಗಳಿಂದ ಅತ್ಯಂತ ಸ್ಮರಣೀಯರು. ಒಂದನೆಯದು, ಅವರು ಆರಂಭಿಸಿದ ಹರಿದಾಸ ಆಂದೋಲನ ಹಾಗೂ ಬೆಳಸಿದ ಶಿಷ್ಯ ಪರಂಪರೆ ; ವ್ಯಾಸರಾಯರಂಥ ಶಿಷ್ಯರನ್ನು ತಯಾರು ಮಾಡಿ ಆ ಮೂಲಕ ಹರಿದಾಸರನ್ನು ಸಂಘಟಿಸಿದ್ದು. ಎರಡನೆಯದು, ಸ್ವಯಂ ತಾವೇ ಹರಿದಾಸರಾಗಿ, ಮಠಾಧಿಪತಿಗಳಾದರೂ ದಾಸಭಾವದ ವಿನಯವಂತಿಕೆಯಲ್ಲಿ ಮೆರೆದು, ಅನೇಕ ವಿಶಿಷ್ಟ ಕೃತಿ ರಚನೆ ಮಾಡಿ ಹರಿದಾಸಸಾಹಿತ್ಯ-ಭಕ್ತಿಸಾಹಿತ್ಯ ಬೆಳೆಸಿದುದು. ಈ ಎರಡೂ ಗಣನೀಯ ಅಂಶಗಳೆ ಆಗಿವೆ. ಇದನ್ನು ಎಲ್ಲ ಹಿರಿಯ ವಿದ್ವಾಂಸರೂ, ಸಂಶೋಧಕರೂ ಗುರುತಿಸಿದ್ದಾರೆ. ದಾಸಸಾಹಿತ್ಯ ವಚನ ಸಾಹಿತ್ಯ

ದಂತೆಯೇ ಕನ್ನಡ ಸಾಹಿತ್ಯ ಸರಸ್ವತಿಯ ಕಣ್ಣುಗಳಲ್ಲೊಂದೆಂದು ಪ್ರಶಂಸೆಗೆ ಪಾತ್ರರಾಗಲು ಪ್ರಮುಖ ಕಾರಣ ಪುರುಷರು ಶ್ರೀಪಾದರಾಜರು.

## ಶ್ರೀಪಾದರಾಜರ ಜೀವನ-ಕೃತಿ ಒಂದು ಕಿರುನೋಟ

ಶ್ರೀಪಾದರಾಜರ ಆತ್ಮವೃತ್ತದ ಬಗ್ಗೆ ಕೋಲಾರದ ಮುಳುಬಾಗಿಲಿಗೆ ಸೇರಿದ ಶ್ರೀಮಠದವರೆ ಪ್ರಕಟಿಸಿರುವ ಚರಿತ್ರೆಯು ಜತೆ, ವ್ಯಾಸರಾಯರ ಕೃತಿಗಳು, ಶ್ರೀನಿಧಿ ತೀರ್ಥರೆಂಬುವರು ಶ್ರೀಪಾದರಾಜಾಷ್ಟಕ ಹಾಗೂ ಭೀಮಾಚಾರ್ಯರೆಂಬುವರು ಬರೆದಿರುವ 'ಶ್ರೀಪೂರ್ಣಬೋಧಗುರುವಂಶ ಕಲ್ಪತರು' ಇವುಗಳು ಶ್ರೀಪಾದರಾಜರು ಸನ್ಯಾಸ ಸ್ವೀಕರಿಸಿದ ನಂತರದ ವಿವರ ನೀಡುತ್ತವೆ. ಶ್ರೀಪಾದರಾಜಕಥಾಮೃತ,[6] ಶ್ರೀಪಾದರಾಜ ಚರಿತ್ರ ಮುಂತಾದ ಗ್ರಂಥಗಳಲ್ಲಿ ಶ್ರೀಪಾದರಾಜರ ಜನ್ಮಸ್ಥಳ ಶ್ರೀರಂಗವೆಂದು (ತಮಿಳುನಾಡು) ತಿಳಿಸಲಾಗಿದೆ. ಆದರೆ, ಇತ್ತೀಚೆಗೆ[7] ಡಾ|| ಜಿ. ವರದರಾಜರಾಯರು ಸಂಪಾದಿಸಿ ಪ್ರಕಟಿಸಿರುವ ಶ್ರೀಪಾದರಾಜರ ಕೃತಿಗಳ ಪೀಠಿಕೆಯ ಪ್ರಕಾರ, ಅವರು ತಮ್ಮ ಬಾಲ್ಯವನ್ನು ಬೆಂಗಳೂರು ಜಿಲ್ಲೆ ಚನ್ನಪಟ್ಟಣ ತಾಲ್ಲೂಕಿನ ಅಬ್ಬೂರೆಂಬಲ್ಲಿ ಕಳೆದರೆಂದು ತಿಳಿಯುತ್ತದೆ. ಶ್ರೀಪಾದರಾಜರ ಶಿಷ್ಯರಾದ ವ್ಯಾಸರಾಯರ ಕೀರ್ತನೆಗಳು, ಸಂಸ್ಕೃತ ಪಂಚರತ್ನ ಮಾಲಾಸ್ತುತಿ, ವಿಜಯದಾಸರ ಸುಳಾದಿ. ಇವುಗಳಿಂದಲೂ ಶ್ರೀಪಾದರಾಜರ ಜೀವನವೃತ್ತಾಂತದ ಎಳೆಗಳು ದೊರೆಯುತ್ತವೆ.

ಚನ್ನಪಟ್ಟಣದ ಬಳಿಯ ಅಬ್ಬೂರು ಮಾಧ್ವರಿಗೆ ಪವಿತ್ರ ಯಾತ್ರಾಸ್ಥಳಗಳಲ್ಲೊಂದು. ಅದಕ್ಕೆ ಕಾರಣ ಪ್ರಸಿದ್ಧ ಯತಿಗಳಾದ ಬ್ರಹ್ಮಣ್ಯತೀರ್ಥರ ವೃಂದಾವನವಿರುವ ಸ್ಥಳ. ಕಣ್ವನದಿಯು ತಲೆ, ಸುತ್ತ ನಿಸರ್ಗಪರಿಸರ, ಯತಿಗಳ ಆಶ್ರಮಕ್ಕೆ ಸೌಮ್ಯಕಳೆ ನೀಡಿವೆ. ಸಮೀಪದ ಗುಡ್ಡದಲ್ಲಿ ಶ್ರೀಪುರುಷೋತ್ತಮತೀರ್ಥರೆಂಬುವರ ಗುಹೆಯಿದೆ. ಶ್ರೀಪಾದರಾಜರು, ಶ್ರೀಬ್ರಹ್ಮಣ್ಯತೀರ್ಥರ ಪೂರ್ವಾಶ್ರಮದ ತಾಯಿಯಂದಿರು ಪರಸ್ಪರ ಸೋದರಿಯರು. ಆದರಿಂದಲೂ ಶ್ರೀಪಾದರಾಜರ ಬಾಲ್ಯ ಅಬ್ಬೂರಿನಲ್ಲಿ ಆಗಿರಬಹುದೆಂದು ಊಹಿಸಬಹುದು. ತಂದೆ. ಶೇಷಗಿರಿಯಪ್ಪ, ತಾಯಿ ಗಿರಿಯಮ್ಮ. ತುಳುಮಂತದ ವೈಷ್ಣವ ಬ್ರಾಹ್ಮಣರು. ಇವರ ಮನೆತನ "ಪೂರ್ವವನಾನ್ವಯಂಜ" ಎಂದು ಹೆಸರು. ಇನ್ನೊಂದು ಅಡ್ಡ ಹೆಸರು 'ತೋಳು ತಿಲ್ಲಾಯ'ವೆಂದು. ಅಂದರೆ, ಮಧ್ವಾಚಾರ್ಯರು "ನಡ್ಡಂತಿಲ್ಲಾಯ" (ನಡುಮನೆ) ದವರೆಂದು ಪ್ರಸಿದ್ಧರಾದಂತೆ ಶ್ರೀಪಾದರಾಜರು ತೋಟದ ಮನೆಯವರೆಂದು ಪ್ರಸಿದ್ಧರಾದರು.[8] ಶ್ರೀಪಾದರಾಜರು ಜನಿಸಿದ್ದು ಕ್ರಿ. ಶ. ೧೪೦೬ರಲ್ಲಿ. ಅವರ ಮೊದಲ ಹೆಸರು ಲಕ್ಷ್ಮೀನಾರಾಯಣನೆಂದು. ಬಾಲ್ಯ ಕಳೆದ ಲಕ್ಷ್ಮೀನಾರಾಯಣ ತುರಗಾಹಿಯಾಗಿದ್ದ ಕಾರಣ, ವಿದ್ಯಾಭ್ಯಾಸ ದೊರೆಯದಿದ್ದುದು. ಇದಕ್ಕೆ ಕಾರಣ ತಂದೆ ತಾಯಿಯೊ, ಅಥವಾ ಇವನಿಗೆ ತಕ್ಕ ಗುರು ದೊರೆಯಲಿಲ್ಲವೊ ತಿಳಿಯದು. ಮೇಲೆ ಉದ್ಧರಿಸಿರುವ ಕೃತಿಗಳಲ್ಲೆಲ್ಲ ಮಧ್ವಾಚಾರ್ಯರ ಶಿಷ್ಯರಲ್ಲೊಬ್ಬರಾದ ಪದ್ಮನಾಭತೀರ್ಥರ ಮಠದ ಪೀಳಿಗೆಯಲ್ಲಿ ಪೀಠಸ್ಥ

ರ್ದ ಸ್ವರ್ಣವರ್ಣತೀರ್ಥರು, ಬಾಲಕ ಲಕ್ಷ್ಮೀನಾರಾಯಣನನ್ನು ಕರೆದು ತಮಗೆ
ಟ್ಟರೆಲ್ಲಿದೆಯೆಂದು ತೋರಿದೆಂದು ತಿಳಿಸಿದ ಸಂಗತಿ ಚಿತ್ರಿತಗೊಂಡಿದೆ. ಆದಕ್ಕೆ
ನಾರಾಯಣ ನೀಡಿದ ಚುರುಕು ಉತ್ತರ, "ನನ್ನನ್ನ ನೋಡಿ. ವಂನೆಗೆ
ರುಗಂಟ್ತಿರುವ ದನಕರುಗಳನ್ನು ಗವನಿಸಿ, ಪಶ್ಚಿಮದತ್ತ ಇರುವ ಸೂರ್ಯನನ್ನು
ತಿ. ಅಬ್ಬೂರು ಎಷ್ಟು ದೂರವೆಂದು ತಿಳಿಯುತೆ" ಎಂಬಂದು ಸ್ವಾಮಿಗಳಿಗೆ
ಶಿಂದಿತು. ಬಾಲಕನ ಮಾತಿನಲ್ಲಿ ಊರು ಸಮೀಪ ಆಗಿದ್ದುದು ಧ್ವನ್ಯಾತ್ಮಕವಾಗಿ
ಯತು. ಈ ವಿಚಾರದಲ್ಲಿ ವಿದ್ವಾಂಸರಿಗೆ ಒಮ್ಮತವಿಲ್ಲ.[9] ಬ್ರಹ್ಮಣ್ಯತೀರ್ಥರ ಗುರು
ದ್ದ ಯತಿಶ್ರೇಷ್ಠರಾದ ಪುರುಷೋತ್ತಮತೀರ್ಥರ ಭೇಟಿಗಾಗಿ ಸ್ವರ್ಣವರ್ಣ
ರು ಬಂದುದರಿಂದಲೂ, ಪುರುಷೋತ್ತಮತೀರ್ಥರು ಅಬ್ಬೂರಿನಲ್ಲಿದ್ದುದ
ಲೂ, ಭೇಟಿಯ ಸ್ಥಳ ಅಬ್ಬೂರೆ ಎಂದು ನಿರ್ಣಯಿಸಬಹುದಾಗಿದೆ. ಒಟ್ಟಾರೆ
ವರ್ಣತೀರ್ಥರು ಭೇಟಿಗಾಗಿ ಬಂದ ಉದ್ದೇಶವೂ ನೆರವೇರಿತು. ಬ್ರಹ್ಮಣ್ಯತೀರ್ಥ
ಅಪೂರ್ವ ಬ್ರಹ್ಮವರ್ಚಸ್ಸನ್ನುಳ್ಳ ಬಾಲಯತಿ ದೊರೆವನೇ ಎಂಬ ಅವರ ಆಶಯ,
ನಾರಾಯಣನನ್ನು ಕಂಡಾಗ ಪೂರಯಿಸಿದಂತಾಯಿತು. ಪುರುಷೋತ್ತಮ
ರ ಮೂಲಕ, ಬಾಲಕನ ತಂದೆ ತಾಯಿಗಳನ್ನು ಕಂಡು, ತಮ್ಮ ಮನದ ಅಭೀಷ್ಟೆ
ಪಡಿಸಿ, ಅನುಮತಿಯನ್ನು ಪಡೆದರು. ತಮ್ಮ ಜತೆಗೇ ಬಾಲಕನನ್ನೂ, ಅವನ
ತಾಯಿಗಳನ್ನು ಕರೆದೊಯ್ದರು ತಮ್ಮ ಮಠಸ್ಥಳವಾದ ತಮಿಳುನಾಡಿನ ಶ್ರೀರಂಗಕ್ಕೆ.
ಇಲ್ಲಿಂದ, ಲಕ್ಷ್ಮೀನಾರಾಯಣನ ಬದುಕು ಒಂದು ಹೊಸ ತಿರುವು ಪಡೆಯಿತೆನ್ನ
ದು. ಕಾವೇರಿ ನದಿ ದಡದಲ್ಲಿರುವ ಶ್ರೀರಂಗ, ತಮಿಳುನಾಡಿನ ದಿವ್ಯಕ್ಷೇತ್ರ
ಶ್ರೀವೈಷ್ಣವ ಸಂಪ್ರದಾಯ ಸಂಸ್ಥಾಪನಾಚಾರ್ಯರಾದ ರಾಮಾನುಜರ ಕಾರ್ಯ
. ಸ್ವರ್ಣವರ್ಣತೀರ್ಥರ ಸಮರ್ಥ ನೇತೃತ್ವದಲ್ಲಿ ಲಕ್ಷ್ಮೀನಾರಾಯಣ ದಿನೇ
ದೈಹಿಕ-ಮಾನಸಿಕ-ಎರಡು ರೀತಿಯಲ್ಲೂ ಬೆಳೆದ. ಬ್ರಹ್ಮೋಪದೇಶವಾದ ನಂತರ
ವಿದ್ಯಾಭ್ಯಾಸಂಗ. ಸ್ವರ್ಣವರ್ಣತೀರ್ಥರು ಲಕ್ಷ್ಮೀನಾರಾಯಣನಿಗೆ ಸನ್ಯಾಸ
ಯನ್ನು ನೀಡಿ ತಮ್ಮ ಸಂಸ್ಥಾನದ ಉತ್ತರಾಧಿಕಾರಿಯಾಗಿ ನಿರ್ಧರಿಸಿದರು. ಆಗ್ಗೆ
ಖ್ಯಾತರಾಗಿದ್ದ, (ಶ್ರೀರಾಘವೇಂದ್ರ ಮಠದ ಪೂರ್ವಾಚಾರ್ಯರಾದ) ವಿಬುದೇಂದ್ರ
ರಲ್ಲಿ ಹೆಚ್ಚಿನ ವ್ಯಾಸಂಗಕ್ಕಾಗಿ ಕಳಿಸಿದರು. ಅಲ್ಲಿ ಯತಿ ಲಕ್ಷ್ಮೀನಾರಾಯಣ
ಸಿದ್ಧಾಂತವನ್ನೂ ಚೆನ್ನಾಗಿ ಅಧ್ಯಯನ ಮಾಡಿ, ಗುರುಹಿರಿಯರ ಪ್ರೀತ್ಯಾದರ
ಪಾತ್ರನಾದ. ತತ್ವಪಾರಂಗತನೂ ಆದ.

ಒಮ್ಮೆ ಶ್ರೀವಿಬುದೇಂದ್ರತೀರ್ಥರು ತಮ್ಮ ಶಿಷ್ಯ ಲಕ್ಷ್ಮೀನಾರಾಯಣನೊಂದಿಗೆ
ರಂಚಿಕೂರಂಜಿಲ್ಲೆಯ) "ಕೊಪ್ಪ"ವೆಂಬಲ್ಲಿದ್ದು ಪಾಠ ಹೇಳುತ್ತಿದ್ದರು. ಇದು
ಹ ಕ್ಷೇತ್ರವೆಂದೇ ಪ್ರಸಿದ್ಧ. ಆ ಕಾಲಕ್ಕೆ ಅಲ್ಲಿಗೆ, ಅಂದಿನ ಉತ್ತರಾದಿಮಠದ
ಧಿಪತಿಗಳಾಗಿದ್ದ ಶ್ರೀರಘುನಾಥತೀರ್ಥರು ಆಗಮಿಸಿದರು. ಉಭಯ ಯತಿ
ೂ ಪರಸ್ಪರ ಕಲೆತರು. ಅನಂತರ ಶ್ರೀರಘುನಾಥತೀರ್ಥರು ಬಾಲಯತಿಯಾದ

ದಂತೆಯೇ ಕನ್ನಡ ಸಾಹಿತ್ಯ ಸರಸ್ವತಿಯ ಕಣ್ಣುಗಳಲ್ಲೊಂದೆಂದು ಪ್ರಶಂಸೆಗೆ ಪಾತ್ರರಾಗಲು ಪ್ರಮುಖ ಕಾರಣ ಪುರುಷರು ಶ್ರೀಪಾದರಾಜರು.

### ಶ್ರೀಪಾದರಾಜರ ಜೀವನ–ಕೃತಿ ಒಂದು ಕಿರುನೋಟ

ಶ್ರೀಪಾದರಾಜರ ಆತ್ಮವೃತ್ತದ ಬಗ್ಗೆ ಕೋಲಾರದ ಮುಳುಬಾಗಿಲಿಗೆ ಸೇರಿದ ಶ್ರೀಮಠದವರೆ ಪ್ರಕಟಿಸಿರುವ ಚರಿತ್ರೆಯ ಜತೆ, ವ್ಯಾಸರಾಯರ ಕೃತಿಗಳು, ಶ್ರೀನಿಧಿ ತೀರ್ಥರೆಂಬುವರು ಶ್ರೀಪಾದರಾಜಾಷ್ಟಕ ಹಾಗೂ ಭೀಮಾಚಾರ್ಯರೆಂಬುವರು ಬರೆದಿರುವ 'ಶ್ರೀಪೂರ್ಣಬೋಧಗುರುವಂಶ ಕಲ್ಪತರು' ಇವುಗಳು ಶ್ರೀಪಾದರಾಜರು ಸನ್ಯಾಸ ಸ್ವೀಕರಿಸಿದ ನಂತರದ ವಿವರ ನೀಡುತ್ತವೆ. ಶ್ರೀಪಾದರಾಜಕಥಾಮೃತ,[6] ಶ್ರೀಪಾದರಾಜ ಚರಿತ್ರ ಮುಂತಾದ ಗ್ರಂಥಗಳಲ್ಲಿ ಶ್ರೀಪಾದರಾಜರ ಜನ್ಮಸ್ಥಳ ಶ್ರೀರಂಗವೆಂದು (ತಮಿಳುನಾಡು) ತಿಳಿಸಲಾಗಿದೆ. ಆದರೆ, ಇತ್ತೀಚೆಗೆ[7] ಡಾ॥ ಜಿ. ವರದರಾಜರಾಯರು ಸಂಪಾದಿಸಿ ಪ್ರಕಟಿಸಿರುವ ಶ್ರೀಪಾದರಾಜರ ಕೃತಿಗಳ ಪೀಠಿಕೆಯ ಪ್ರಕಾರ, ಅವರು ತಮ್ಮ ಬಾಲ್ಯವನ್ನು ಬೆಂಗಳೂರು ಜಿಲ್ಲೆ ಚೆನ್ನಪಟ್ಟಣ ತಾಲ್ಲೂಕಿನ ಅಬ್ಬೂರೆಂಬಲ್ಲಿ ಕಳೆದರೆಂದು ತಿಳಿಯುತ್ತದೆ. ಶ್ರೀಪಾದರಾಜರ ಶಿಷ್ಯರಾದ ವ್ಯಾಸರಾಯರ ಕೀರ್ತನೆಗಳು, ಸಂಸ್ಕೃತ ಪಂಚರತ್ನ ಮಾಲಾಸ್ತುತಿ, ವಿಜಯದಾಸರ ಸುಳಾದಿ, ಇವುಗಳಿಂದಲೂ ಶ್ರೀಪಾದರಾಜರ ಜೀವನವೃತ್ತಾಂತದ ಎಳೆಗಳು ದೊರೆಯುತ್ತವೆ.

ಚೆನ್ನಪಟ್ಟಣದ ಬಳಿಯ ಅಬ್ಬೂರು ಮಾಧ್ವರಿಗೆ ಪವಿತ್ರ ಯಾತ್ರಾಸ್ಥಳಗಳಲ್ಲೊಂದು. ಅದಕ್ಕೆ ಕಾರಣ ಪ್ರಸಿದ್ಧ ಯತಿಗಳಾದ ಬ್ರಹ್ಮಣ್ಯತೀರ್ಥರ ವೃಂದಾವನವಿರುವ ಸ್ಥಳ. ಕಣ್ವನದಿಯ ತಲೆ, ಸುತ್ತ ನಿಸರ್ಗಪರಿಸರ. ಯತಿಗಳ ಆಶ್ರಮಕ್ಕೆ ಸೌಮ್ಯಕಳೆ ನೀಡಿವೆ. ಸಮೀಪದ ಗುಡ್ಡದಲ್ಲಿ ಶ್ರೀಪುರುಷೋತ್ತಮತೀರ್ಥರೆಂಬುವರ ಗುಹೆಯಿದೆ. ಶ್ರೀಪಾದರಾಜರು, ಶ್ರೀಬ್ರಹ್ಮಣ್ಯತೀರ್ಥರ ಪೂರ್ವಾಶ್ರಮದ ತಾಯಿಯಂದಿರು ಪರಸ್ಪರ ಸೋದರಿಯರು. ಆದರಿಂದಲೂ ಶ್ರೀಪಾದರಾಜರ ಬಾಲ್ಯ ಅಬ್ಬೂರಿನಲ್ಲಿ ಆಗಿದೆಯೆಂದು ಊಹಿಸಬಹುದು. ತಂದೆ ಶೇಷಗಿರಿಯಪ್ಪ, ತಾಯಿ ಗಿರಿಯಮ್ಮ. ತುಳುವಂಶದ ವೈಷ್ಣವ ಬ್ರಾಹ್ಮಣರು. ಇವರ ಮನೆತನ "ಪೂರ್ವನಾನ್ವಯಜ" ರೆಂದು ಹೆಸರು. ಇನ್ನೊಂದು ಅಡ್ಡ ಹೆಸರು 'ತೋಳು ತಿಲ್ಲಾಯ'ವೆಂದು. ಅಂದರೆ, ಮಧ್ವಾಚಾರ್ಯರು "ನಡ್ಡಂತಿಲ್ಲಾಯ" (ನಡುಮನೆ) ದವರೆಂದು ಪ್ರಸಿದ್ಧರಾದಂತೆ ಶ್ರೀಪಾದರಾಜರು ತೋಟದ ಮನೆಯವರೆಂದು ಪ್ರಸಿದ್ಧರಾದರು.[8] ಶ್ರೀಪಾದರಾಜರು ಜನಿಸಿದ್ದು ಕ್ರಿ. ಶ. ೧೪೦೬ರಲ್ಲಿ. ಅವರ ಮೊದಲ ಹೆಸರು ಲಕ್ಷ್ಮೀನಾರಾಯಣನೆಂದು. ಬಾಲ್ಯ ಕಳೆದ ಲಕ್ಷ್ಮೀನಾರಾಯಣ ತುರುಗಾಹಿಯಾಗಿದ್ದ ಕಾರಣ, ವಿದ್ಯಾಭ್ಯಾಸ ದೊರೆಯದಿದ್ದುದು. ಇದಕ್ಕೆ ಕಾರಣ ತಂದೆ ತಾಯಿಯೊ, ಅಥವಾ ಇವನಿಗೆ ತಕ್ಕ ಗುರು ದೊರೆಯಲಿಲ್ಲವೊ ತಿಳಿಯದು. ಮೇಲೆ ಉದ್ಧರಿಸಿರುವ ಕೃತಿಗಳಲ್ಲೆಲ್ಲ ಮಧ್ವಾಚಾರ್ಯರ ಶಿಷ್ಯರಲ್ಲೊಬ್ಬರಾದ ಪದ್ಮನಾಭತೀರ್ಥರ ಮಠದ ಪೀಳಿಗೆಯಲ್ಲಿ ಪೀಠಸ್ಥ

ರಾಗಿದ್ದ ಸ್ವರ್ಣವರ್ಣತೀರ್ಥರು, ಬಾಲಕ ಲಕ್ಷ್ಮೀನಾರಾಯಣನನ್ನು ಕರೆದು ತಮಗೆ ಅಬ್ಬೂರೆಲ್ಲಿದೆಯೆಂದು ತೋರಿದೆಂದು ತಿಳಿಸಿದ ಸಂಗತಿ ಚಿತ್ರಿತಗೊಂಡಿದೆ. ಅದಕ್ಕೆ ಲಕ್ಷ್ಮೀನಾರಾಯಣ ನೀಡಿದ ಚುರುಕು ಉತ್ತರ, "ನನ್ನನ್ನು ನೋಡಿ. ಮನೆಗೆ ಹಿಂದಿರುಗುತ್ತಿರುವ ದನಕರುಗಳನ್ನು ಗಮನಿಸಿ, ಪಶ್ಚಿಮದತ್ತ ಇರುವ ಸೂರ್ಯನನ್ನು ನೋಡಿ. ಅಬ್ಬೂರು ಎಷ್ಟು ದೂರವೆಂದು ತಿಳಿಯಿತೆ" ಎಂಬುದು ಸ್ವಾಮಿಗಳಿಗೆ ಅಚ್ಚರಿತಂದಿತು. ಬಾಲಕನ ಮಾತಿನಲ್ಲಿ ಊರು ಸಮೀಪ ಆಗಿದ್ದುದು ಧ್ವನ್ಯಾತ್ಮಕವಾಗಿ ತಿಳಿಯಿತು. ಈ ವಿಚಾರದಲ್ಲಿ ವಿದ್ವಾಂಸರಿಗೆ ಒಮ್ಮತವಿಲ್ಲ.[9] ಬ್ರಹ್ಮಣ್ಯತೀರ್ಥರ ಗುರುಗಳಾಗಿದ್ದ ಯತಿಶ್ರೇಷ್ಠರಾದ ಪುರುಷೋತ್ತಮತೀರ್ಥರ ಭೇಟಿಗಾಗಿ ಸ್ವರ್ಣವರ್ಣತೀರ್ಥರು ಬಂದುದರಿಂದಲೂ, ಪುರುಷೋತ್ತಮತೀರ್ಥರು ಅಬ್ಬೂರಿನಲ್ಲಿದ್ದುದರಿಂದಲೂ, ಭೇಟಿಯ ಸ್ಥಳ ಅಬ್ಬೂರೆ ಎಂದು ನಿರ್ಣಯಿಸಬಹುದಾಗಿದೆ. ಒಟ್ಟಾರೆ ಸ್ವರ್ಣವರ್ಣತೀರ್ಥರು ಭೇಟಿಗಾಗಿ ಬಂದ ಉದ್ದೇಶವೂ ನೆರವೇರಿತು. ಬ್ರಹ್ಮಣ್ಯತೀರ್ಥರಂಥ ಅಪೂರ್ವ ಬ್ರಹ್ಮವರ್ಚಸ್ಸನ್ನುಳ್ಳ ಬಾಲಯತಿ ದೊರೆವನೇ ಎಂಬ ಅವರ ಆಶಯ, ಲಕ್ಷ್ಮೀನಾರಾಯಣನನ್ನು ಕಂಡಾಗ ಪೂರಯಿಸಿದಂತಾಯಿತು. ಪುರುಷೋತ್ತಮತೀರ್ಥರ ಮೂಲಕ, ಬಾಲಕನ ತಂದೆ ತಾಯಿಗಳನ್ನು ಕಂಡು, ತಮ್ಮ ಮನದ ಅಭೀಪ್ಸೆ ವ್ಯಕ್ತಪಡಿಸಿ, ಅನುಮತಿಯನ್ನು ಪಡೆದರು. ತಮ್ಮ ಜತೆಗೇ ಬಾಲಕನನ್ನೂ, ಅವನ ತಂದೆತಾಯಿಗಳನ್ನು ಕರೆದೊಯ್ದರು ತಮ್ಮ ಮಠಸ್ಥಳವಾದ ತಮಿಳುನಾಡಿನ ಶ್ರೀರಂಗಕ್ಕೆ.

ಇಲ್ಲಿಂದ, ಲಕ್ಷ್ಮೀನಾರಾಯಣನ ಬದುಕು ಒಂದು ಹೊಸ ತಿರುವು ಪಡೆಯಿತೆನ್ನಬಹುದು. ಕಾವೇರಿ ನದಿ ದಡದಲ್ಲಿರುವ ಶ್ರೀರಂಗ, ತಮಿಳುನಾಡಿನ ದಿವ್ಯಕ್ಷೇತ್ರ ಹಾಗೂ ಶ್ರೀವೈಷ್ಣವ ಸಂಪ್ರದಾಯ ಸಂಸ್ಥಾಪನಾಚಾರ್ಯರಾದ ರಾಮಾನುಜರ ಕಾರ್ಯಕ್ಷೇತ್ರ. ಸ್ವರ್ಣವರ್ಣತೀರ್ಥರ ಸಮರ್ಥ ನೇತೃತ್ವದಲ್ಲಿ ಲಕ್ಷ್ಮೀನಾರಾಯಣ ದಿನೇ ದಿನೇ ದೈಹಿಕ-ಮಾನಸಿಕ-ಎರಡು ರೀತಿಯಲ್ಲೂ ಬೆಳೆದ. ಬ್ರಹ್ಮೋಪದೇಶವಾದ ನಂತರ ತರ್ಕ ವಿದ್ಯಾವ್ಯಾಸಂಗ. ಸ್ವರ್ಣವರ್ಣತೀರ್ಥರು ಲಕ್ಷ್ಮೀನಾರಾಯಣನಿಗೆ ಸನ್ಯಾಸ ದೀಕ್ಷೆಯನ್ನು ನೀಡಿ ತಮ್ಮ ಸಂಸ್ಥಾನದ ಉತ್ತರಾಧಿಕಾರಿಯಾಗಿ ನಿರ್ಧರಿಸಿದರು. ಆಗ್ಗೆ ಪ್ರಖ್ಯಾತರಾಗಿದ್ದ, (ಶ್ರೀರಾಘವೇಂದ್ರ ಮಠದ ಪೂರ್ವಾಚಾರ್ಯವಾದ) ವಿಬುಧೇಂದ್ರತೀರ್ಥರಲ್ಲಿ ಹೆಚ್ಚಿನ ವ್ಯಾಸಂಗಕ್ಕಾಗಿ ಕಳಿಸಿದರು. ಅಲ್ಲಿ ಯತಿ ಲಕ್ಷ್ಮೀನಾರಾಯಣ ದ್ವೈತ ಸಿದ್ಧಾಂತವನ್ನೂ ಚೆನ್ನಾಗಿ ಅಧ್ಯಯನ ಮಾಡಿ, ಗುರುಹಿರಿಯರ ಪ್ರೀತ್ಯಾದರಗಳಿಕೆ ಪಾತ್ರನಾದ. ತತ್ವಪಾರಂಗತನೂ ಆದ.

ಒಮ್ಮೆ ಶ್ರೀವಿಬುಧೇಂದ್ರತೀರ್ಥರು ತಮ್ಮ ಶಿಷ್ಯ ಲಕ್ಷ್ಮೀನಾರಾಯಣನೊಂದಿಗೆ (ರಾಯಚೂರುಜಿಲ್ಲೆಯ) "ಕೊಪ್ಪ"ವೆಂಬಲ್ಲಿದ್ದು ಪಾಠ ಹೇಳುತ್ತಿದ್ದರು. ಇದು ನರಸಿಂಹ ಕ್ಷೇತ್ರವೆಂದೇ ಪ್ರಸಿದ್ಧ. ಆ ಕಾಲಕ್ಕೆ ಅಲ್ಲಿಗೆ, ಅಂದಿನ ಉತ್ತರಾದಿಮಠದ ಮಠಾಧಿಪತಿಗಳಾಗಿದ್ದ ಶ್ರೀರಘುನಾಥತೀರ್ಥರು ಆಗಮಿಸಿದರು. ಉಭಯ ಯತಿವರ್ಯರೂ ಪರಸ್ಪರ ಕಲೆತರು. ಅನಂತರ ಶ್ರೀರಘುನಾಥತೀರ್ಥರು ಬಾಲಯತಿಯಾದ

ಲಕ್ಷ್ಮೀನಾರಾಯಣನ ವಿದ್ವತ್ತು, ವಿನಯ, ಎಲ್ಲ ಕಂಡು ವಿಶೇಷವಾಗಿ ಮೆಚ್ಚಿದರು. ಮರುದಿನವೇ ನಡೆದ ವಿದ್ವತ್ಸಭೆಯಲ್ಲಿ ಶ್ರೀಲಕ್ಷ್ಮೀನಾರಾಯಣತೀರ್ಥರು, (ಟೀಕಾಚಾರ್ಯರ ಜಯತೀರ್ಥರ ಮತ್ತೊಂದು ಹೆಸರು) ಸುಧಾಗ್ರಂಥವನ್ನು ಪಠಿಸಿ, ಅಪೂರ್ವವಾದ ರೀತಿಯಲ್ಲಿ ಅದನ್ನು ವ್ಯಾಖ್ಯಿಸಿ, ಎಲ್ಲರನ್ನು ಸಂತೋಷಗೊಳಿಸಿದರು. ಶ್ರೀರಘುನಾಥತೀರ್ಥರಂತೂ ಪ್ರೀತ್ಯಭಿಮಾನಗಳಿಂದ ಶ್ರೀಲಕ್ಷ್ಮೀನಾರಾಯಣತೀರ್ಥರನ್ನು ಪ್ರಶಂಸಿಸಿದರು. ಆಗ ವಿನಯದಿಂದ ಶ್ರೀಲಕ್ಷ್ಮೀನಾರಾಯಣತೀರ್ಥರು "ತಮ್ಮಂಥ ಶ್ರೀಗಳವರ ಅನುಗ್ರಹಕ್ಕೆ ಪಾತ್ರರಾದವರು ಮಹಾಪುಣ್ಯಶಾಲಿಗಳೇ ಸರಿ" ಎಂದಾಗ ಬಾಲಯತಿಯ ವಿನಯಸಂಪನ್ನತೆ ಕಂಡು ರಘುನಾಥತೀರ್ಥರು "ನಾವು ಶ್ರೀಪಾದರಾದರೆ, ನೀವು ಶ್ರೀಪಾದರಾಜರೇ ಸರಿ" ಎಂದು ಹೊಗಳಿ ಬಿರುದನ್ನಿತ್ತರು. ಅಂದಿನಿಂದ ಶ್ರೀಲಕ್ಷ್ಮೀನಾರಾಯಣತೀರ್ಥರ ಹೆಸರು ಶ್ರೀಪಾದರಾಜರೆಂದೇ ಪ್ರಸಿದ್ಧ[10] ಆಯಿತು. ಇದು ಶ್ರೀಪಾದರಾಜರ ಬದುಕಲ್ಲಿ ಇನ್ನೊಂದು ಪ್ರಮುಖ ಘಟ್ಟ. ಗುರುಗಳಾದ ಸ್ವರ್ಣವರ್ಣತೀರ್ಥರು ೧೪೨೧ರಲ್ಲಿ ವೃಂದಾವನಸ್ಥರಾಗಲು ಶ್ರೀಪಾದರಾಜರ ಸಂಸ್ಥಾನದ ಅಧಿಕಾರವನ್ನು ವಹಿಸಿಕೊಂಡರು. ಪದ್ಮನಾಭತೀರ್ಥರು ಮೂಲಪುರುಷರಾದ ಈ ಮಠ ಮುಂದೆ ಶ್ರೀಪಾದರಾಜಮಠವೆಂದೇ ಪ್ರಖ್ಯಾತಿಗೊಂಡಿತು. ಸನ್ಯಾಸ ಸ್ವೀಕರಿಸಿದವರಲ್ಲಿ ಶ್ರೀಪಾದರಾಜರು ಎಂಟನೆಯವರು. ತಮ್ಮ ಗುರುಗಳು ವೃಂದಾವನ ಪ್ರವೇಶ ಮಾಡಿದ ನಂತರ ಕೆಲವು ವರ್ಷ ಶ್ರೀರಂಗದಲ್ಲಿ ಶ್ರೀಪಾದರಾಜರು ಇದ್ದಿರಲಿಕ್ಕೆ ಸಾಕು ಹಾಗೂ ಅಲ್ಲಿನ ವಿಷ್ಣುಭಕ್ತಿಯ ಪರಿಸರ ಅವರ ಒಲಿಸಿರುವುದು ಖಂಡಿತ.

ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಲ್ಲಿ ಕೋಲಾರದ ಮುಳಬಾಗಿಲು (ಮೂಡುಬಾಗಿಲು) ಪಟ್ಟಣ ಹಾಗೂ ರಾಜಧಾನಿಯೂ ಆಗಿತ್ತು. ಸಂಚಾರದಲ್ಲಿ ಬಂದ ಶ್ರೀಪಾದರಾಜರು ಮುಳಬಾಗಿಲಿನ ಪ್ರಾಶಸ್ತ್ಯ ತಿಳಿದು ಅಲ್ಲಿಯೆ ತಮ್ಮ ಮಠವನ್ನು ಶಾಶ್ವತವಾಗಿ ಸ್ಥಾಪಿಸಿದರು. ಮುಳಬಾಗಿಲು ವಿಜಯನಗರದ ಅರಸರಾಳ್ವಿಕೆಗೊಳಪಟ್ಟುದೊಂದೆ ಅಲ್ಲ : ಕೂಡಲಿಯ (ಶಿವಮೊಗ್ಗ) ಅಕ್ಷೋಭ್ಯತೀರ್ಥರು ಅಂಗಾರದಿಂದಲೆ ಯೋಗಾನರಸಿಂಹನನ್ನು ಬರೆದು, ಸಾಕ್ಷಾತ್ಕಾರಿಸಿಕೊಂಡು, ವಿದ್ಯಾರಣ್ಯರೊಂದಿಗೆ ವಾದ ಮಾಡಿ ಜಯಗಳಿಸಿದ ಸ್ಥಳವೆಂದು ಪರಿಗಣಿತ ಆದ ಪ್ರಯುಕ್ತ, ಪವಿತ್ರ ಕ್ಷೇತ್ರವೂ ಆಗಿದ್ದುದು ಶ್ರೀಪಾದರಾಜರಿಗೆ ಅರಿವಾಯಿತು. ಅಲ್ಲಿಯೆ ಇದ್ದ ನರಸಿಂಹತೀರ್ಥ, ಬೆಟ್ಟ, ದ್ವೈತತತ್ವ ಪ್ರತಿಪಾದಕರಾದ,[11] ಇವೆಲ್ಲ ಶ್ರೀಪಾದರಾಜರನ್ನು ಆಕರ್ಷಿಸಿತು. ಶ್ರೀಪಾದರಾಜರು ನೆಲಸಿದ ಮೇಲೆ ಮುಳುಬಾಗಿಲಿನ ಖ್ಯಾತಿ ಇನ್ನೂ ಹೆಚ್ಚಿತು. ದ್ವೈತ ವಿದ್ಯೆಯ ಪ್ರಮುಖ ವಿದ್ಯಾ ಕೇಂದ್ರ ಆಯಿತು. ದೇಶದ ಎಲ್ಲೆಡೆಗಳಿಂದಲೂ ಅನೇಕ ವಿದ್ಯಾರ್ಥಿಗಳು ಬಂದು ಶ್ರೀಪಾದರಾಜರಿಂದ ವೇದಾಂತದ ಬೆಳಕನ್ನು ಕಂಡುಕೊಂಡರು. ಅವರಲ್ಲಿ ಪ್ರಮುಖರು, ಹಾಗೂ ಶ್ರೀಪಾದರಾಜರಿಗೆ ಪ್ರೀತಿಪಾತ್ರರಾದವರು ಶ್ರೀವ್ಯಾಸರಾಯರು. ಅಬ್ಬೂರಿನ ಬ್ರಹ್ಮಣ್ಯತೀರ್ಥರಿಂದ ಸನ್ಯಾಸ ಪಡೆದ ಶ್ರೀವ್ಯಾಸರಾಯರು ಗುರುಗಳಿಂದ ಸನ್ಯಾಸ ಸ್ವೀಕರಿಸಿ, ಬ್ರಹ್ಮಣ್ಯತೀರ್ಥರ ಅನಂತರ ತಾವೇ ಮಠಾಧೀಶರಾಗಿ

ದೇಶ ಪರ್ಯಟನ ಮಾಡುತ್ತ ಅನೇಕ ಪ್ರತಿವಾದಿಗಳನ್ನು ಗೆಲ್ಲುತ ದ್ವೈತ ಸಿದ್ಧಾಂತದ ಜಯಭೇರಿ ಬಾರಿಸಿದವರಲ್ಲಿ ಅಗ್ರಗಣ್ಯರು. ವಾಂಛಬಾಗಿಲಿನ ಹಿರಿಯರಾದ ಶ್ರೀಪಾದ ರಾಜರಲ್ಲಿ ಮತ್ತಷ್ಟು ವ್ಯಾಸಂಗ ನಡೆಸಲು ಬಂದದ್ದು ಅಪೂರ್ವ ಸಮಾವೇಶವೆ. ಆನಂತರ ಶ್ರೀಪಾದರಾಜರು ಅನೇಕ ಪವಾಡಗಳನ್ನೆಸಗಿದರೆಂದೂ ದಾಸರ ಕೃತಿಗಳು ಹಾಗೂ ಶ್ರೀನಿಧಿತೀರ್ಥರ "ಶ್ರೀಪಾದರಾಜಾಷ್ಟಕ" ತಿಳಿಸುತ್ತವೆ. ಶ್ರೀವ್ಯಾಸರಾಯರು ಶ್ರೀಪಾದರಾಜರ ಬಗ್ಗೆ ಎರಡು ಕೀರ್ತನೆ ರಚಿಸಿರುವುದರೊಂದಿಗೆ 'ಪಂಚರತ್ನ ಸ್ತೋತ್ರ ಮಾಲಿಕೆ' ಎಂಬ ಸ್ತೋತ್ರವನ್ನು ರಚಿಸಿರುವುದು ನಮಗೆ ಶ್ರೀಪಾದರಾಜರ ಮಹತಿಯ ಬಗ್ಗೆ ನಿರ್ದೇಶನ ನೀಡುತ್ತದೆ.

ವಾದಿಗಜ ವಂಸ್ತಕಾಂಕುಶ ಸಂಜನ ಬಂಧಗೇಯ
ಮೇದಿನೀ ಸುರವಂದ್ಯ ಶ್ರೀಪಾದರಾಯ

ಎಂಬುದಾಗಿ ಪ್ರಾರಂಭ ಆಗುವ ಕೀರ್ತನೆಯ ಕೊನೆಯ ಸಾಲು ಹೀಗಿವೆ :

ಸಿರಿಕೃಷ್ಣ ದಿವ್ಯಪಾದಾಬ್ಜ ಚಿಂತಾಲೋಲ
ವರಹೇಮವರ್ಣವಂನಿಪತಿಯ ಸುಕುಮಾರ
ಗುರುತಿಲಕ ಶ್ರೀಪಾದರಾಯ ಅವಿತೋದ್ಧಾರ
ಶರಣಜನ ಸುರಧೇನು ಭಕ್ತ ಮಂದಾರ.......

ಇಲ್ಲಿ ಶ್ರೀಪಾದರಾಜರ ಗುರುಗಳಾದ ಸ್ವರ್ಣವರ್ಣತೀರ್ಥರ ಹೆಸರೂ ಉಕ್ತವಾಗಿರುವುದು ಗಮನಾರ್ಹ. "ಗುರುತಿಲಕ", "ಶರಣಜನ ಸುರಧೇನು" ಎಂದೆಲ್ಲ ಪ್ರಶಂಸಿಸಿರುವಲ್ಲಿ ಶ್ರೀಪಾದರಾಜರಿಗೆ ವೇದಾಂತ ತತ್ವ ಸಾಮ್ರಾಜ್ಯದಲ್ಲಿ ದೊರೆತಿದ್ದ ಉನ್ನತಸ್ಥಾನ, ಅವರ ಶಿಷ್ಯ ವಾತ್ಸಲ್ಯ ಮನವರಿಕೆ ಆಗುತ್ತವೆ. 'ಸಿರಿಕೃಷ್ಣ ದಿವ್ಯ ಪಾದಾಬ್ಜ ಚಿಂತಾಲೋಲ' ರನ್ನುವಲ್ಲಿ ಇವರು ಕೀರ್ತನೆಗಳನ್ನು ರಚಿಸಿ ಹಾಡಿದ ಸುಳಿವೂ ದೊರೆಯುತ್ತವೆ. ಇದಲ್ಲದೆ, 'ಶರಣಜನ ಸುರಧೇನು' ಎಂಬ ವಿಶೇಷಣ, ಹರಿಶರಣರ, 'ಹರಿದಾಸರ' ಸಂಘಟನೆ, ತಂಡಕ್ಕೆ ಪ್ರಮುಖರೂ ಆಗಿದ್ದರೆಂದು ತಿಳಿಯಲವಕಾಶವಿದೆ. ಸ್ವಯಂ ಶ್ರೀಪಾದರಾಜರೆ ತಮಗೆ ದೀಕ್ಷೆಯಿತ್ತ ಸ್ವರ್ಣವರ್ಣತೀರ್ಥರನ್ನಾಗಲಿ, ವಿಶೇಷ ವಿದ್ಯಾ ಪ್ರದಾನ ಮಾಡಿದ ವಿಬುದೇಂದ್ರರನ್ನಾಗಲಿ ಸ್ತುತಿಗೈದಿರುವ ಕೃತಿ ಇನ್ನೂ ದೊರೆತಿಲ್ಲ. ಈ ದೃಷ್ಟಿಯಲ್ಲಿ ವ್ಯಾಸರಾಯರ ಕೃತಿ ಮುಖ್ಯವೆನಿಸುತ್ತವೆ. ಇನ್ನೊಂದು, ಶ್ರೀಪಾದ ರಾಜರೇ ತಮಗೆ ಆಶ್ರಮದಲ್ಲಿ ಹಿರಿಯರಾದ ಶ್ರೀರಘುನಾಥತೀರ್ಥರನ್ನೂ ಕುರಿತು ಮಾಡಿರುವ ಕೀರ್ತನೆ,[12] ಅನೇಕ ರೀತಿ ನೆರವಾಗುತ್ತದೆ.

ವಂದನೆ ಮಾಡಿರೈ ಯತಿಕುಲಚಂದ್ರನ ಪಾಡಿರೈ ॥ ಪ ॥
"ಬಂದದುರಿತಗಳ ಹಿಂದೆಕಳೆದು ಆ
ನಂದಪಡುವ ವಿಬುದೇಂದ್ರ ಕರೋದ್ಭವನ" ॥ ಅ.ಪ. ॥

ಎಂದು ಆರಂಭ ಆಗುವ ಈ ಕೀರ್ತನೆ, ರಘುನಾಥತೀರ್ಥರನ್ನು ದ್ವೇಷಿಸಿಯೆ ರಚಿಸಿರು ವಂಥದು. ಶ್ರೀಪಾದರಾಜರು ಪವಾಡಗಳನ್ನು ಎಸಗಿದ ಬಗ್ಗೆ ವ್ಯಾಸರಾಯರೇ ಒಂದು ಕೃತಿ ರಚಿಸಿದ್ದಾರೆ. ಅದರಲ್ಲಿ ಶ್ರೀಪಾದರಾಜರು, ಅಂದು ವಿಜಯನಗರದಲ್ಲಿ ಆಳುತ್ತಿದ್ದ ಸಾಳುವ ನರಸಿಂಹನ ಬ್ರಹ್ಮಹತ್ಯೆ ದೋಷ ಪರಿಹರಿಸಿದ್ದು, ಅದರ ಬಗ್ಗೆ ಕೆಲವರು ಕುಹಕಿ ಗಳು ವ್ಯಂಗ್ಯ ಮಾಡಿದಾಗ, ಬಿಳಿಯ ಬಟ್ಟೆಯೊಂದನ್ನು ಗೇರೆಣ್ಣೆಯಲ್ಲಿ ಅದ್ದಿ, ಅದರ ಮೇಲೆ ಶಂಖೋದಕ ಪ್ರೋಕ್ಷಿಸಿ ಮತ್ತೆ ಅದನ್ನು ಶುಭ್ರ ಶ್ವೇತವಾಗಿ ಮಾಡಿ, ಹೀಗೇ ಅರಸರ ಬ್ರಹ್ಮಹತ್ಯ ದೋಷವೂ ಪರಿಹಾರವಾಯ್ತೆಂದು ಸಿದ್ಧಪಡಿಸಿ ತೋರಿದ್ದು, ಶ್ರೀಹರಿಗೆ ನಿವೇದನ ಮಾಡಿದ್ದ "ನಾನಾ ಪರಿಯ ಶಾಕಗಳನ್ನು ಭಂಜಿಸಿ ನರರು ನಗಲು ಶ್ರೀಕೃಷ್ಣನ ಕರುಣದಿಂದ ಹಸಿಯು"ದಾಗಿಯೆ ತೋರಿದ್ದು,[13] ಎಲ್ಲವೂ ಈ ಕೃತಿ ಯಲ್ಲಿವೆ.[14] ಇದರಿಂದ ಶ್ರೀಪಾದರಾಜರನ್ನು ವಿಜಯನಗರದರಸರು ಗೌರವಿಸುತ್ತಿದ್ದುದೂ ತಿಳಿಯ ಬರುತ್ತದಲ್ಲದೆ ಅನಂತರ ಶ್ರೀಪಾದರಾಜರನ್ನು ಸಾಳುವ ನರಸಿಂಹನು ತನ್ನ ಸಿಂಹಾಸನದಲ್ಲಿ ಕುಳ್ಳಿರಿಸಿ, ಕನಕಾಭಿಷೇಕ ಮಾಡಿದ್ದು ಕೂಡ ಅವರ ಮಹಿಮೆಗೆ ಸಾಕ್ಷಿ ಯಾಗಿದೆ. ಇದನ್ನು ವ್ಯಾಸರಾಯರು ತಮ್ಮ ಪಂಚರತ್ನ ಮಾಲಿಕೆಯಲ್ಲೂ ತಿಳಿಸಿ, ಗುರುಗಳ ಮಹಿಮಾದರ್ಶ ಕುರಿತು ನುತಿಸಿದ್ದಾರೆ. ಈ ಗುರುಶಿಷ್ಯರ ಬಾಂಧವ್ಯ ಅಪೂರ್ವ ಆದದ್ದು.

ವ್ಯಾಸರಾಯರಿಗೆ ಸರ್ಪ ಹಿಡಿದು ಬಾಧಿಸುತ್ತಿದ್ದಾಗ, ಶ್ರೀಪಾದರಾಜರು ಆದರೊಡನೆ ಅದರ ಭಾಷೆಯಲ್ಲಿ ಮಾತಾಡಿ ಶಿಷ್ಯನನ್ನು ಬಿಡಿಸಿದ್ದ 'ಮಧ್ವಪತಿ ವಿಠಲ'ರ ಒಂದು ಕೀರ್ತನೆಯಲ್ಲಿ ಬಂದಿದೆ. ಕುಹಕಿಗಳು ಮಾಂಸಾಹಾರವನ್ನು ನಿವೇದನಕ್ಕೆಂದಿರಿಸಿ ಅದನ್ನು ಫಲವಾಗಿ ಪರಿವರ್ತಿಸಿದ ಪವಾಡ, ನರಸಿಂಹತೀರ್ಥರಲ್ಲಿ ಗಂಗೆಯನ್ನು ಪ್ರತ್ಯಕ್ಷ ಮಾಡಿಸಿದ್ದು ಹೀಗೆ ಪವಾಡಗಳನ್ನು ಶ್ರೀಪಾದರಾಜರು ಮಾಡಿ, ಪವಾಡ ಪುರುಷ ರೆಂದೂ ಖ್ಯಾತರಾಗಿದ್ದಾರೆ. ಇದಲ್ಲದೆ, ಇವರು ಎಲ್ಲಿದ್ದರೂ ಸುಖಭೋಜನ ಊಟ ಜಾತಕದವರಂತೆ : ಅರವತ್ತು ವಿಧದ ಶಾಕಾಹಾರ ಪದಾರ್ಥಗಳನ್ನು ಭಗವಂತನಿಗರ್ಪಿಸಿ ತಾವೂ ಸೇವಿಸುತ್ತಿದ್ದರು. ಅದನ್ನು ಕಂಡ ಕೆಲವರು ಅಸೂಯೆಯಿಂದ, "ಸುಖಿಕ್ಕೂ ಸನ್ಯಾಸಕ್ಕೂ ಎಲ್ಲಿಯ ಸಂಬಂಧ" ಎಂದು ಕಟಕಿಯಾಡಿದಾಗ, ತಾವು ಭುಂಜಿಸಿದ್ದ ಶಾಕಪದಾರ್ಥಗಳನ್ನು ಹಾಗೆ ಹಾಗೆಯೆ ಅವುಗಳ ಮೊದಲ ಸ್ವರೂಪದಲ್ಲಿ ತೆಗೆದಿರಿಸಿ ಕಟಕಿಯಾಡಿದವರು ತೆಪ್ಪಗಾದರು : ಈ ಥರದ್ದು ಅನೇಕ. ಪಂಢರಾಪ್ಪುರದ ಭೀಮಾ ನದಿಯ ತಟದಲ್ಲಿ ದೊರೆತ ಶ್ರೀರಂಗವಿಠಲನ ವಿಗ್ರಹ ಶ್ರೀಪಾದರಾಜರ ಆರಾಧ್ಯ ದೇವತೆಯಾದ "ರಂಗವಿಠಲ" ಅವರ ಅಂಕಿತವೂ ಹೌದು.

ಶ್ರೀಪಾದರಾಜರ ವ್ಯಕ್ತಿತ್ವ, ಪವಾಡಭರಿತ ಬದುಕು, ರಾಜಮನ್ನಣೆ, ಎಲ್ಲ ವನ್ನು ಮೀರಿಸುವಂಥದ್ದು, ಅವರು ಆರಂಭಿಸಿ, ಉತ್ತೇಜಿಸಿದ "ಹರಿದಾಸಪಂಥ", ಹಾಗೂ ಅದನ್ನು ಸಂಘಟಿಸಲು ವ್ಯಾಸರಾಯರನ್ನು ಪ್ರೇರಿಸಿದ್ದು. ಇದರ ಜತೆ ಹರಿ ದಾಸಸಾಹಿತ್ಯ ಪ್ರಸಾರಕ್ಕಾಗಿ ಅವರು ಅನೇಕ ಕೀರ್ತನೆ, ಸುಳಾದಿ, ವೃತ್ತನಾಮಗಳೆಂಬ

ವಿಶೇಷ ಪ್ರಕಾರಗಳ ರಚನೆ ಮಾಡಿದ್ದು, ಅವರನ್ನು ದಾಸಸಾಹಿತ್ಯದ ಆದ್ಯ ಪ್ರವರ್ತಕರಾಗಿಸಿತ್ತವೆ.

ಶ್ರೀಪಾದರಾಜರು ಹರಿದಾಸದೀಕ್ಷೆ ವಹಿಸಿ, ಕೀರ್ತನೆ ಹಾಡಿ, ಪೂಜಾಕಾಲದಲ್ಲಿ ಕೀರ್ತನ ಸಂಪ್ರದಾಯವನ್ನು ಬಳಕೆಗೆ ತರಲು ಮುಖ್ಯ ಪ್ರೇರಣೆ. ಬಾಲ್ಯದಲ್ಲಿ ಅವರಿಗೆ ಶ್ರೀರಂಗ ಪರಿಸರದಲ್ಲಿ ಕಾಣಬಂದ ವೈಷ್ಣವಭಕ್ತಿ, ಆಳ್ವಾರರ ದಿವ್ಯಪ್ರಬಂಧ ಗೀತಗಳ ಪ್ರಭಾವವೆಂಬುದರಲ್ಲಿ ಸಂಶಯವಿಲ್ಲ. ವಿಷ್ಣುದೇವಾಲಯಗಳಲ್ಲಿ ಇಂದಿಗೂ 'ದ್ರಾವಿಡ ವೇದ'ವೆಂದೆ ಪರಿಗಣಿತವಾಗುವ ಆಳ್ವಾರ್ ಮಹನೀಯರ ಭಕ್ತಿಗೀತೆಗಳು, ಎಂಥವರ ಮನಸ್ಸಿಗೂ ಆನಂದಾನುಭವವುಟು ಮಾಡುವುದರೊಂದಿಗೆ ಹರಿಪಾರಮ್ಯ ಪ್ರತಿಪಾದಿಸುವ ಜ್ಞಾನ ಭಂಡಾರಗಳು ಶ್ರೀಪಾದರಾಜರು ತಮ್ಮ ಹರಿದಾಸ ಮಾರ್ಗದಲ್ಲಿ ಹರಿಭಕ್ತಿ, ಹರಿಚರಿತೆ, ಕುರಿತ ಅನೇಕ ಕೃತಿ ರಚಿಸಿ, ತಾವೇ ಸ್ವಯಂ ಹಾಡಿದರು. ಕಾಲಿಗೆ ಗೆಜ್ಜೆ ಕಟ್ಟಿ, ನರ್ತಿಸಿ, ಸ್ವಾಮಿಯನ್ನು ಕೊಂಡಾಡಿದರು. ಇದೇ ಮುಂದೆ ಹರಿದಾಸ ಪಂಥವಾಗಿ ಮುಂದುವರೆಯಿತು. ಈ ಕೀರ್ತನ ಪದ್ಧತಿಯು ಎಲ್ಲ ಮಠ, ದೇವಾಲಯಗಳಲ್ಲೂ ಹಬ್ಬಿತು. ಆಗ ತಾನೆ ಬಂದಿದ್ದ ವಚನಗಳ "ಶಿವಶರಣ" ರಂತೆಯೇ ಶ್ರೀಪಾದರಾಜರು 'ಹರಿಶರಣ'ರ ಗುಂಪನ್ನೆ ಕಟ್ಟಿದರು. ಒಂದು ಪರಂಪರೆಯ ನಿರ್ಮಾಪಕರೇ ಆದರು.[15]

ಶ್ರೀಪಾದರಾಜರು ಸಂಸ್ಕೃತದಲ್ಲಿ ಎಷ್ಟು ಪಾಂಡಿತ್ಯವುಳ್ಳವರೊ ಅಷ್ಟೆ ಪರಿಣತಿ ಅವರಿಗೆ ಕನ್ನಡದಲ್ಲಿ ಕೂಡ ಇತ್ತೆನ್ನಲು ಅವರ ಸರಳ, ಸುಂದರ, ಅರ್ಥಗರ್ಭಿತ ಕೃತಿಗಳೆ ಉದಾಹರಣೆ. ಅಲ್ಲಿ ಕನ್ನಡದೇಸಿ ತಾನೆ ತಾನಾಗಿ ಸಹಜವಾಗಿ ಹರಿಯಂತ್ತದೆ. "ವಾಗ್ವಜ್ರ" ವೆಂಬ ಸಂಸ್ಕೃತ ಗ್ರಂಥ ರಚಿಸಿರುವುದು ದ್ವೈತಮತ ಪ್ರತಿಪಾದನೆಗಾಗಿ.[16] ಆದರೆ, ಅವರ ಕೃತಿಗಳಲ್ಲಿಯಾದರೊ ಭಕ್ತಿಯ ಹೊನಲು, ಪ್ರಾಸಂಗಿಕ ಭಾವಗಳು ಸಹಜವಾಗಿಯೆ ಒಡಮೂಡಿವೆ. ಸಂಸಾರವನ್ನೂ "ಕಾಳಬೆಳದಿಂಗಳು, ಕತ್ತಲೆ ಬೆಳದಿಂಗಳೆಂದು"[17] ತಿಳಿಸಂತ್ತ "ಉಂಟಾದ ಕಾಲಕ್ಕೆ ನೆಂಟರು ಇಷ್ಟರು । ಬಂಟರಾಗಿ ಬಾಗಿಲ ಕಾಯ್ವರು । ಉಂಟಾದತನ ತಪ್ಪಿ ಬಡತನ ಬಂದರೆ । ಒಂಟೆಯಂತೆಗೋಣ ಮೇಲೆತ್ತುವರು" ಎಂಬುದಾಗಿ ಮಾನವಸಹಜ ದೌರ್ಬಲ್ಯವನ್ನು ತಿಳಿಸುತ್ತಾರೆ. ಶ್ರೀಪಾದರಾಜರು ಒಂದೆಡೆ ಬಳಸಿದ ಯುಕ್ತಿ, ಮಂತ್ತೊಂದೆಡೆ ಬಳಸಿ ವ್ಯಥಾಲಂಬಿಸುವುದಿಲ್ಲ. ಎಷ್ಟು ಬೇಕೊ ಅಷ್ಟೆ. ಇವರು ರಚಿಸಿರುವ "ವಂದ್ಯನಾಮ"[18] ಕೃಷ್ಣಲೀಲೆ, ಭ್ರಮರಗೀತೆ, ವೇಣುಗೀತೆಗಳಂತೂ ಚಿತ್ತವನ್ನು ಅಪಹರಿಸುವಂಥ ಸಾಹಿತ್ಯ ರಚನೆಗಳು. ವಿಷ್ಣುಪುರಾಣದ ಒಂದು ಶ್ಲೋಕವನ್ನೇ ಶ್ರೀಪಾದರಾಜರು ಸುಂದರವಾದೊಂದು ಉಗಾಭೋಗ ಮಾಡಿ ಬಿಟ್ಟಿದ್ದಾರೆ :

ಧ್ಯಾನವು ಕೃತಯುಗದಿ
ಯಜನಯಜ್ಞವು ತ್ರೇತಾಯುಗದಿ
ದಾನವಾಂತಕನ ದೇವತಾರ್ಚನೆ ದ್ವಾಪರಯುಗದಿ

ಈ ಮಾನವರಿಗೆಷ್ಟು ಫಲವೊ ಅಷ್ಟು ಫಲವು
ಕಲಿಯುಗದಿ ಗಾನದಲಿ ಕೇಶವಯನಲು
ಕೈಗೊಡುವನು ರಂಗವಿಠಲ[19]

ಅವರ ಭಕ್ತಿ ನಿರ್ಭರ ಮನೋಭಾವ ಸರಳತೆಗೊಂದು ಉದಾಹರಣೆ :

ನಾ ನಿನಗೇನು ಬೇಡುವುದಿಲ್ಲ ಎನ್ನ
ಹೃದಯ ಕಮಲದೊಳು ನಿಂದಿರೊ ಹರಿಯೆ ॥ ಪ ॥

ಶಿರ ನಿನ್ನ ಚರಣದಲ್ಲೆರಗಲಿ ಎನ್ನ
ಚಕ್ಷುಗಳು ನಿನ್ನ ನೋಡಲಿ ಹರಿಯೆ ।
ಕರ್ಣಗೀತಂಗಳ ಕೇಳಲಿ-ಎನ್ನ
ನಾಸಿಕ ನಿರ್ಮಾಲ್ಯ ಘ್ರಾಣಿಸಲಿ ಹರಿಯೆ ॥ ೧ ॥

ನಾಲಿಗೆ ನಿನ್ನ ಕೊಂಡಾಡಲಿ-ಎನ್ನ
ಕರಗಳೆರಡು ನಿನಗೆ ಮುಗಿಯಲಿ ಹರಿಯೆ ।
ಪಾದತೀರ್ಥಯಾತ್ರೆಗೆ ಹೋಗಲಿ-ನಿನ್ನ
ಧ್ಯಾನ ವನಗೊಂದು ಕೊಡು ಕಂಡ್ಯ ಹರಿಯೆ ॥ ೨ ॥

ಬುದ್ಧಿ ನಿನ್ನೊಳು ಕುಣಿದಾಡಲಿ-ಎನ್ನ
ಚಿತ್ತ ನಿನ್ನಲಿ ನಲಿದಾಡಲಿ ಹರಿಯೆ
ಭಕ್ತ ಜನರ ಸಂಗದೊರಕಲಿ ರಂಗ ।
ವಿಠಲ ನಿನ್ನದಯವಾಗಲಿ ಹರಿಯೆ ॥ ೩ ॥

ಇಲ್ಲಿ ಅವರ ಆರ್ತಭಾವ, ಹರಿದಾಸವೃತ್ತಿ–ಪ್ರವೃತ್ತಿಗಳೆರಡೂ ಒಡಮೂಡಿ ಬಂದಿವೆ : ಒಂದಂ ಸುಂದರ ಕಲಾಕೃತಿಯಂತಿದೆ ಈ ಕೀರ್ತನೆ. ಶ್ರೀಪಾದರಾಜರ ಸುಳಾದಿ, ಉಗಾಭೋಗ ಹಾಗೂ ತತ್ತ್ವನಾಮವೆಂಬ ವಿಶೇಷ ರಚನೆ ಮಾಡಿ ಹಾಡಿ, ಈ ಪದ್ಧತಿ ಮುಂದುವರಿಸಿದ್ದು, ಅವರ ಅನಂತರ ತತ್ತ್ವನಾಮವೆಂಬ ವಿಶೇಷ ರಚನೆ ಮಾಡಿ ಹಾಡಿ, ಈ ಪದ್ಧತಿ ಮುಂದುವರಿಸಿದ್ದು. ಅವರ ನಂತರ ವೃತ್ತನಾಮ ರಚನೆ ವಿರಳ. ವೃತ್ತನಾಮ, ಒಂದು ಶ್ಲೋಕ, ಒಂದು ಪದ, ಒಳಕೊಂಡು ಮುಂದುವರೆಯುವ ಸಾಹಿತ್ಯಕ ರಚನೆ. ವೃತ್ತನಾಮ ರಚನೆ, ಇತರ ಪ್ರಭೇದಗಳಷ್ಟು ಸುಲಭವಲ್ಲ. ಶ್ರೀವ್ಯಾಸರಾಯರು ರಚಿಸಿರುವ ಶ್ರೀಮದ್‌ಭಗವದ್ಗೀತೆಯನ್ನು ಒಳಗೊಂಡ ವೃತ್ತನಾಮ, ಗುರುಗೋಪಾಲದಾಸರು ರಚಿಸಿರುವ ಶ್ರೀವೆಂಕಟೇಶ್ವರನನ್ನು ಕುರಿತ ವೃತ್ತನಾಮ, ಹಾಗೂ ಜಗನ್ನಾಥದಾಸರು ರಚಿಸಿರುವ ಪಂಡರಿಗೆಯ ಶ್ರೀಪಾಂಡು

ರಂಗನನ್ನು ಕುರಿತ ವೃತ್ತನಾಮ ತುಂಬ ಪ್ರಸಿದ್ಧ ಆದದ್ದು. ಶ್ಲೋಕ, ಕನ್ನಡದಲ್ಲಿಯೆ ಇದ್ದು ವೃತ್ತ ಎಂದರೆ ನಾಲ್ಕು ಸಾಲುಳ್ಳದ್ದಾಗಿರುವುದರಿಂದ, ಇದನ್ನು ವೃತ್ತನಾಮ (ದೇವರನಾಮ ಎಂದು ಕರೆಯುವ ಹಾಗೆ) ಕರೆದರೆ ಎಂದೂ ನಮಗೆ ಊಹೆ ಬರುತ್ತದೆ.[20] ದೇವರನಾಮದ ಹಾಗೆಯೆ ವೃತ್ತನಾಮ ಸಹ ಒಂದು ಅಂಶವೆಂದರೆ, ಕೀರ್ತನೆಯ ರೀತಿ ವೃತ್ತನಾಮದಲ್ಲಿ ಪಲ್ಲವಿ, ಅನುಪಲ್ಲವಿಯ ನಿಯತಿ ತಾಳ, ಅಥವಾ ಸುಳಾದಿಯ 'ಜತೆ'ಯಾವುದೂ ಇರುವುದಿಲ್ಲ. ಇವರದ್ದೆ ಒಂದು ವೈಶಿಷ್ಟ್ಯ. ಶ್ರೀಪಾದರಾಜರೇ ಇದರ ಪ್ರವರ್ತಕರು ಎನ್ನಬಹುದು ಶ್ರೀಪಾದರಾಜರ ಭಕ್ತಿಭಾವ,[21] ಆರ್ತನೆ, "ಯಾಕೆ ಪುಟ್ಟಿಸಿದೆ ನೀಸಾಕಲಾರದೆ" ಎಂಬಂತೆಯೆ, "ಅಳುದೇಹವ ಗೇಣು ಕೀಳ್ಮಾಡಿ ಪಲ್ಮೊರೆದು" ಬದುಕಬೇಕೆ ಎಂಬ ದೀನತೆ, ವ್ಯಾಕುಲಭಾವ, ಕೊನೆಗೆ ಸಮರ್ಪಣ ಭಾವದಲ್ಲಿ ಸೆಲೆಯಾಗಿ ನಿಲ್ಲುತ್ತದೆ. ಹಾಗೆಯೇ ಶ್ರೀಪಾದರಾಜರ ಭ್ರಮರಗೀತೆ, ವೇಣು ಗೀತೆ, ಭಕ್ತಿಯ ಮಧುರಭಾವದ ನಿರೂಪಣೆಗೆ ನಿದರ್ಶನವಾಗಿವೆ. ಭಾಗವತದ ದಶಮ ಸ್ಕಂಧದಲ್ಲಿ ಸುಪ್ರಸಿದ್ಧವಾಗಿರುವ ವೇಣುಗೀತದಂತೆಯೆ ಇದ್ದರೂ ಇಲ್ಲಿ ಕನ್ನಡತನ ಇದೆ, ಸ್ವಂತಿಕೆ ಇದೆ. ಸಹಜ ಕವಿತೆಯ ಸೆಲೆ ಇದೆ.

ರಂಗಕೊಳಲನೂದುತ ಬಂದ
ಯಶೋದೆಯ ಕಂದ ॥ ಪ ॥

ಕೊಳಲಧ್ವನಿಗೆ ವಿರಹವು ನಾರಿಯರಿಗೆ
ಕಳವಳವಾಗಲು ಕಳಕಳಿಸುವ ಬಂದ[22]
ತುರುಗಾಯ ಬಂದ ಗೋಪಿಯ ಕಂದ
ಆನಂದದಿಂದ ॥ ಪ ॥

ಸುರನರತರು ಮೃಗ ಜಲಪರ ಮೋಹಿಸಿ
ತರಳೇರ ಮನ ಸೂರೆಯಾಗಿ ಕೊಳಲನಿಂದ ॥ ಪ ॥[23]

ಈ ವೇಣುಗೀತಗಳಂತೆಯೆ ಶ್ರೀಪಾದರಾಜರ ಭ್ರಮರಗೀತೆಯಲ್ಲಿ ಪಟ್ಟದಂತೆ ಝೇಂಕರಿಸುವ ಪರಿ, ಭಾಗವತದ ಪಡಿನೆಳಲಾದರೂ ಸ್ವತಂತ್ರ ಕವಿತೆಯಾಗಿವೆ. ತಾವೇ ಗೋಪಿಯಾಗಿ ಶ್ರೀಕೃಷ್ಣನ ಹಂಬಲದಲ್ಲಿ ಹಾಡಿದಂತಿದೆ : ಗೋಪಿಕೆಯರ ಭಾವವೊಡ ಮೂಡಿಸುವ ಕೃತಿ[24] "ಮಾನನಿಧಿ ಶ್ರೀಕೃಷ್ಣ ಮಧುರೆ ಗೈದುವನಂತೆ" ಎಂದು ಆರಂಭ ಆಗುತ್ತ, ಒಂದು ನೀಳ್ಗವನದ ಹಾಗೆ ಮುಂದುವರಿಯುತ್ತದೆ. "ಇದಕ್ಕೆ ಶೃಂಗಾರ ಪಾರಿಜಾತವೆಂದೂ ಹೆಸರುಂಟು."[25] ಶ್ರೀಪಾದರಾಜರ ಕೃತಿಗಳುದ್ದಕ್ಕೂ (ದಂಡಕ ಹೊರತಾಗಿ) ಕಾಣುವ ಒಂದು ಮುಖ್ಯ ಅಂಶ, ಸಂಸ್ಕೃತದಲ್ಲಿ ಅವರಿಗೆ ಎಷ್ಟು ಪಾಂಡಿತ್ಯವಿತ್ತೊ, (ವ್ಯಾಸರಾಯರಂಥ ಮಹಾಮೇಧಾವಿಗಳಿಗೆ ಪಾಠ ಹೇಳುವಷ್ಟು) ಕನ್ನಡದಲ್ಲಿ ಅಷ್ಟೆ 'ಶ್ರೀಸಾಮಾನ್ಯ' ಭಾಷೆ, ಸರಳತೆ, ಉಪಮೆ, ಬಳಸಿರುವುದು, ಸಹಜ

ಲೋಕಾನುಭವ, ಶ್ರೀಹರಿಯ ಕೃಪೆ ತಪ್ಪಿದರೆ ಕೌಪೀನಕ್ಕೆ ಕೂಡ ಜಟ್ಟಿ ಸಿಗದೆಂಬ ಆರ್ತಭಾವ, "ಭೂಷಣಕೆ ಭೂಷಣ ಇದು ಭೂಷಣ"ಎಂದು ಹಾಡುವ ದೈವಭಕ್ತಿ, ಹರಿಕಥಾ ಪ್ರೇಮದ ದೇವರನಾಮ, ಅಕ್ಕೊನೋಡೆ ರಂಗನಾಥನ ಚಿಕ್ಕಪಾದವ ಎಂಬ ಪಾದಸ್ಮರಣೆ, ಹೀಗೆ ಎಷ್ಟೋ ಅಂಶ ತುಂಬಿವೆ ಇವರ ರಚನೆಗಳಲ್ಲಿ. ಶ್ರೀಪಾದರಾಜರ ಭಕ್ತಿಭಾವ ಪರವಶತೆ, ಆಗ ಹೊರಹೊಮ್ಮುವ ನಿರರ್ಗಳ ವಾಕ್ಪ್ರವಾಹಕ್ಕೆ, ಅವರು ರಚಿಸಿರುವ "ಶ್ರೀಲಕ್ಷ್ಮೀನರಸಿಂಹಪ್ರಾದುರ್ಭಾವ ದಂಡಕ"ವೆ ಉದಾಹರಣೆ. ದೇವರ ಪೂಜೆಯ ಸಮಯದಲ್ಲಿ ಭಜನೆಗೆಂದು ಕೈಗೊಂಡ ಶ್ರೀಪಾದರಾಜರ ಕಾಯಕ ಹರಿದಾಸ ಪಂಥವನ್ನೆ ನಿರ್ಮಿಸಿರುವುದು. ಅವರ ಕೃತಿಗಳವಲೋಕನದ ಮೂಲಕ ಅವರಿಗಿದ್ದ ಪ್ರಭುತ್ವ, ಕವಿಹೃದಯದೊಂದಿಗೆ ಸಂಘಟನಾ ಶಕ್ತಿಯನ್ನೂ ಪ್ರಕಟಪಡಿಸುತ್ತವೆ. ಸಂಗೀತದ ತಳಹದಿ ಮೇಲೆಯ ರಚಿತ ಆಗಿರುವ ಸಾಹಿತ್ಯಿಕ ರಚನೆಗಳಾದ ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತನಾಮ, ಭ್ರಮರಗೀತವೆಂಬ ಗೀತರೂಪಕಗಳು ಶ್ರೀಪಾದರಾಜರ ಸಾಹಿತ್ಯ ಸೃಜನ ಪ್ರತಿಭೆಗೂ ಉದಾಹರಣೆ.

ಶ್ರೀಪಾದರಾಜರ ಭಕ್ತಿಭಾವವಂತೂ ಹೇಳಲಸದಳ. ಅವರ ಅನೇಕ ಕೃತಿಗಳಲ್ಲಿ ಅಡಕ ಆಗಿರುವ ಭಕ್ತನ ಆತ್ಮ ನಿವೇದನಾಭಾವ, ಆರ್ತತೆ, ತುಮುಲ, ದುಗುಡ, ಕ್ಷಮಾಯಾಚನೆ, ತನ್ನನ್ನು ತಾನೆ ತಾನೆ ಪರಿಶೀಲಿಸಿಕೊಳ್ಳುವಿಕೆ, ಪಶ್ಚಾತ್ತಾಪ, ಹೀಗೆ : "ಕಂಡ ಕಂಡೆಡೆ ಪೋಪ ಚಂಚಲ ಮನವು ಹಿಂದ ಮೆಂಬಲ್ಲಿ ನಿಷ್ಠ ನಾನು"[28] ಇಂಥ ಅನೇಕ ಭಾವಗಳು ಮಡುಗಟ್ಟಿವೆ. ಅದು ಹದಗೆಡದ ಪಾಕ ಆಗಿ, ಮನಸ್ಸಿಗೆ ಹಿತಕರುತ್ತವೆ. ಇವು ವ್ಯಕ್ತಿಗಲ್ಲದೆ ಸಮಾಜಕ್ಕೂ ಹಿತವುಂಟು ಮಾಡುತ್ತವೆ. ಸಾಹಿತ್ಯ ಗುಣದಲ್ಲಿಯೂ ಕೃತಿಗಳೇನೂ ಕಡಿಮೆಯದಲ್ಲ. ಸಂಭಾಷಣೆಯ ಸರಳ ಶೈಲಿ, ದೇಸಿಯ ಬಳಕೆ, ಸಂಸ್ಕೃತ ಪಾಂಡಿತ್ಯ, ಶ್ರೀಕೃಷ್ಣಭಕ್ತಿ ಓತಪ್ರೋತವಾಗಿ ಇವೆ. ಇದೆಲ್ಲದರ ಜತೆಗೆ ಅವರ ಪ್ರಧಾನ ಧ್ಯೇಯ ಆದ ಮಧ್ವಮತ ಪ್ರತಿಪಾದನ, ಪ್ರಸರಣ, ದ್ವೈತ ಸಿದ್ಧಾಂತದ ಅಂಗೀಕಾರದ ಬಗ್ಗೆ ಚಕಾರವೆತ್ತುವಂತಿಲ್ಲ. "ಮರುದಂತರ ಮತಪಡಿಯದೆ ಇಹ ಪರದಲ್ಲಿ ಸುಖವಿಲ್ಲವಂತೆ" ಎನ್ನುವ ಶ್ರೀಪಾದರಾಜರು ಅರಿತು ವಿವೇಕದಿ ಗುರು ಮಧ್ವರನ್ನು ನಂಬಿ ಬದುಕಿರೆನ್ನುತ್ತಾರೆ. ತಾರತಮ್ಯ ಸತ್ಯ, ಜಗಕಿದು ಪಂಚಭೇದ ಎನ್ನುತ್ತಾರೆ.

ಶ್ರೀಪಾದರಾಜರ ಕೃತಿಗಳನ್ನು ಓದುವಾಗ ಅಂದಿನ ಸಾಹಿತ್ಯದ ಪರಿಸರದ ಪರಿಚಯ ಆಗುತ್ತ. ನರಹರಿತೀರ್ಥರ ನಂತರ ಸುಮಾರು ಒಂದು ಶತಮಾನ ಕಾಲ ಕನ್ನಡದಲ್ಲಿ ಹರಿದಾಸ ಸಾಹಿತ್ಯ ರಚನೆ ದೊರೆತಿಲ್ಲ. ಮುಸ್ಲಿಮರ ಧಾಳಿ, ಅವೈದಿಕ ಮತಗಳ ಯಾದವೀ ಕಲಹ, ಹಿಂದೂ ಧರ್ಮದ ಉಳಿವೋ-ಅಳಿವೋ ಎಂದೆನ್ನಿಸುವಂತಿತ್ತು. ಈ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಸಾಹಿತ್ಯ ಧರ್ಮ-ಸಂಗೀತ-ನೀತಿ ಕುರಿತು ಯಾರು ಯೋಚಿಸಿಯಾರು ? ವಿಜಯನಗರ ಸಾಮ್ರಾಜ್ಯ ಸ್ಥಾಪನೆ, ಹಿಂದೂ ಧರ್ಮದ ಪುನರುತ್ಥಾನಕ್ಕೆ ಪೋಷಕ, ಉತ್ತೇಜಕ ಆಯಿತು. ಸಂಸ್ಕೃತ ಅರ್ಥ ಆಗದ, ವೇದಾಂತ

ತತ್ವ ಅರಿಯಂದ ಸಾಮಾನ್ಯರಿಗೆ ಅವರದ್ದೆ ಆಡುನುಡಿಯಲ್ಲಿ-ತಿಳಿಗನ್ನಡದಲ್ಲಿ ತಿಳಿಸಿಕೊಡುವ ಕೆಲಸ ಶ್ರೀಪಾದರಾಜರೇ ಆರಂಭಿಸಿದ್ದು. ಶ್ರೀಕಾರ ಹಾಡಿದ್ದು ಧರ್ಮದ ನೆಲೆಗಳಾದ ಮಠಗಳಲ್ಲಿ ಕನ್ನಡ ಮೈಲಿಗೆಯೆಂದು ಮಾನಿಸಿದ್ದ ಸಮಯದಲ್ಲಿ ಶ್ರೀಪಾದರಾಜರ ಕೃತಿ ರಚನಾ ಧೈರ್ಯ, ಕ್ರಾಂತಿಯೆ ಸರಿ. ಆಂದೋಲನವೇ ಸರಿ ಅವರ ಅನೇಕ ಕೃತಿಗಳಲ್ಲಿ ಸಾಹಿತ್ಯ ವೈವಿಧ್ಯ ವೈಶಿಷ್ಟ್ಯ ಇದ್ದಂತೆ. ಛಂದೋಬಂಧವಿದ್ದಂತೆಯೆ ಸಂಗೀತದ ನಾದ ಮಾಧುರ್ಯವೂ ಹದವಾಗಿ ಬೆರತಿದೆ.[37] ಹಾಗೂ ಇವರಿಂದಲೆ ಆರಂಭ ಆಗಿ ವಚನಸಾಹಿತ್ಯ ಆಂದೋಲನದಂತೆಯೆ ಹರಿದಾಸ ಪರಂಪರೆಯ ಆಂದೋಲನವೂ ಬೆಳೆಯಲು ಶ್ರೀಪಾದರಾಜರು ಶ್ರಮಿಸಿದ್ದು ಆಗಿನ ಕಾಲಕ್ಕೆ ಕ್ರಾಂತಿಕಾರಕವೆಂದೆ ಪರಿಗಣಿಸಬೇಕಾಗುತ್ತದೆ.

## ವ್ಯಾಸರಾಯರು

ವ್ಯಾಸರಾಯ, ವ್ಯಾಸತೀರ್ಥ, ವ್ಯಾಸರಾಜ ಸ್ವಾಮಿಗಳು–ಹೀಗೆಲ್ಲ ಕರ್ನಾಟಕಕ್ಕೆ ಸುಪರಿಚಿತರಾದ ವ್ಯಾಸರಾಯರು ಬ್ರಹ್ಮಣ್ಯತೀರ್ಥರ ಶಿಷ್ಯರಾಗಿದ್ದವರು. ಮಧ್ವಾಚಾರ್ಯರ ಶಿಷ್ಯ ಪರಂಪರೆಯಲ್ಲಿ ಜಯತೀರ್ಥರಾದ ನಂತರ (ಟೀಕಾಚಾರ್ಯರು-ಟೀಕಾರಾಯರು) ವ್ಯಾಸತೀರ್ಥರೇ ದ್ವೈತತತ್ವ ಜಯಭೇರಿಯನ್ನು ಮೊಳಗಿಸಿದವರು. ದಾರ್ಶನಿಕರು, ತತ್ವವೇತ್ತರು, ಗ್ರಂಥಕರ್ತೃಗಳು, ಕೀರ್ತನಕಾರರು. ಮಾಧ್ವ ತತ್ವ ಶಾಸ್ತ್ರದ ಜಗತ್ತಿನಲ್ಲಿ ವ್ಯಾಸರಾಯರ ಸ್ಥಾನ ಅಗ್ರವಿಟ್ಟದ್ದು.[38] ಇಂದಿಗೂ ಅನೇಕ ವಿದ್ವಾಂಸರು ಮಠಾಧೀಶರು ಪ್ರಶಂಸಿಸುವಂತೆ, ವ್ಯಾಸರಾಯರ ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕಾ ಗ್ರಂಥಗಳು ಮಾಧ್ವನೈಕರಿರವನ ಮೂರು ಕಣ್ಣುಗಳಿದ್ದಂತೆ. ಸಂಸ್ಕೃತ ಪಾಂಡಿತ್ಯದಂತೆಯೆ ಕನ್ನಡದ ಸರಳ ಅರ್ಥಗರ್ಭಿತ ಕೀರ್ತನೆ, ಸುಳಾದಿ, ಉಗಾಭೋಗಗಳು ನೂರಾರನ್ನು ಅವರು ರಚಿಸಿದ್ದಾರೆ. ಅವುಗಳಲ್ಲಿ ಕೆಲವು ಮಾತ್ರ ಲಭ್ಯವಾಗಿವೆ ಎನ್ನಬಹುದು. ವ್ಯಾಸರಾಯರು ತತ್ವ ಪರಿಣತರು-ಪ್ರತಿಪಾದಕರು-ಪ್ರತಿವಾದಿಗಳಿಗೆ ಸಿಂಹ ಸ್ವರೂಪರು ಮಾತ್ರವಲ್ಲ. ಹರಿದಾಸ ಪರಂಪರೆಯ ಸಂಘಟಕರು, ಪ್ರೋತ್ಸಾಹದಾಯಕರೂ ಹೌದು. ಅಂತೆಯೆ ಅವರ ಪರಮ ಪ್ರಿಯ ಶಿಷ್ಯರಾದ ಶ್ರೀಪುರಂದರ ದಾಸರು ವ್ಯಾಸರಾಯರ[39] ಆತ್ಮವೃತ್ತ ಕುರಿತ ಒಂದು ಸುಳಾದಿಯನ್ನೆ ರಚಿಸಿದ್ದಾರೆ.

ವ್ಯಾಸರಾಯರ ಚರಣಕಮಲವನಗೇಸು
ಜನ್ಮದ ಸುಕೃತ ಫಲದಿ ದೊರೆಯಿತೊ ಎನ್ನ
ಸಾಸಿರ ಕುಲಕೋಟಿ ಪಾವನ್ನವಾಯಿತೊ ...
ಶ್ರೀಶನ್ನ ಭಜಿಸುವುದಕಧಿಕಾರಿ ನಾನಾದೆ
ದೋಷರಹಿತನಾದ ಪುರಂದರವಿಠಲನ
ದಾಸರ ಕರುಣವೆನ್ನ ಮೇಲೆ ಇರಲಾಗಿ[40]

ಎಂದು ಆರಂಭ ಆಗುವ ಈ ಸುಳಾದಿ ವ್ಯಾಸರಾಯರು ಪುರಂದರದಾಸರಿಗೆ "ಅಂಕಿತವಿಲ್ಲದ ದೇಹನಿಷಿದ್ಧ । ಅಂಕಿತವಿಲ್ಲದ ಕಾರ್ಯ ಶೋಭಿಸದು" ಎಂಬುದಾಗಿ 'ಪುರಂದರವಿಠಲ'ನ ಅಂಕಿತವಿತ್ತುದನ್ನು ತಿಳಿಸುತ್ತದೆ. ಹಾಗೆಯೇ ವ್ಯಾಸರಾಯರ ಗ್ರಂಥತ್ರಯ, "ವಾಯುವಾದಿ ಮೊದಲಾದ ಇಪ್ಪತ್ತೊಂದು ಕುಭಾಷ್ಯದ ಬಾಯಿಮುಚ್ಚಿಸಿದ್ದು", "ಶ್ರೀಯರಸ ಪುರಂದರವಿಠಲನ ಭಕ್ತರೊಳು ನಾಯಕ"ನೆನಿಸಿಕೊಂಡಿದ್ದು (ಹರಿದಾಸ ಕೂಟ ನಾಯಕರು), ಇವರು "ಶೇಷಾಂಶೇಶ ಪ್ರಹ್ಲಾದನವತಾರ ಸಂಭೂತರು" ಎಂಬುದನ್ನು ಪುರಂದರರು ತಿಳಿಸುತ್ತಾರೆ. ಇಲ್ಲಿ ಮುಂದೆ ಬರುತ್ತದೆ: "ಈಸು ಮಹಿಮೆಗಳಿದ್ದೇನು ಮಾಡಿದರು । ವ್ಯಾಸಮುನಿ ಮಧ್ವಮತವನುದ್ಧರಿಸಿದ 'ಶ್ರೀಶಪುರಂದರವಿಠಲ ಬ್ರಹ್ಮ। ಇಂದ್ರಾದಿಗಳಿಗೆಲ್ಲ ಈಶನೆಂದು ಡಂಗುರವ ಹೊಯಿಸಿ ಮೆರೆವ ಜನವರಿಯ" ಇಲ್ಲಿ ವ್ಯಾಸರಾಯರ ಕಾರ್ಯದ ಬಗ್ಗೆಯೂ ತಿಳಿಯುತ್ತದೆ.

ವ್ಯಾಸರಾಯರ ಮಹತಿಯೂ ಮೇಲಿನ ಸುಳಾದಿಯಲ್ಲಿ ವ್ಯಕ್ತಪಡುತ್ತದೆ. ಎಲ್ಲ ಹರಿದಾಸರೂ ವ್ಯಾಸರಾಯರನ್ನು ಗುರುಸ್ಥಾನದಲ್ಲಿರಿಸಿ, ಪ್ರಶಂಸಿಸಿದ್ದಾರೆ. ವ್ಯಾಸರಾಯ, ಕನಕದಾಸ, ಪುರಂದರದಾಸರು ಮೂವರೂ ಕಲೆತಾಗ ಆಧ್ಯಾತ್ಮದನುಭವ ಅದೆಷ್ಟು ಹೊರಪಡುತ್ತಿತ್ತೊ.

ವ್ಯಾಸರಾಯರ ಚರಿತ್ರೆ ಕುರಿತ ಎಳೆಗಳು ಹರಿದಾಸರ ಸುಳಾದಿ, ಉಗಾಭೋಗ-ಗಿ ಕೀರ್ತನೆಗಳಲ್ಲಿ ದೊರವಂತೆಯೆ, ಅವರ ಶಿಷ್ಯನಾಗಿದ್ದ ಸೋಮನಾಥ ಕವಿ ಬರೆದ "ಶ್ರೀವ್ಯಾಸಯೋಗಿ ಚರಿತಮ್" (ಕ್ರಿ.ಶ.೧೪೫೯. ಶ.) ಕಾವ್ಯ ವ್ಯಾಸರಾಯರ ಬಗ್ಗೆ ಇನ್ನಷ್ಟು ಮಾಹಿತಿ ನೀಡುತ್ತವೆ. ಇದರ ಪ್ರಕಾರ ಹರಿದಾಸರ ಕೃತಿಗಳ ಪ್ರಕಾರ ಶ್ರೀವ್ಯಾಸರಾಯರ ಆತ್ಮವೃತ್ತದ ಬಗ್ಗೆ ಈ ಅಂಶಗಳನ್ನು ನೀಡಬಹುದು.

ವ್ಯಾಸರಾಯರು ಹುಟ್ಟಿದುದು ಕ್ರಿ. ಶ. ೧೪೪೭ರಲ್ಲಿ[31] ಮೈಸೂರು ಜಿಲ್ಲೆಯ ಸೋಸಲೆಗೆ ಆರು ಮೈಲಿ ದೂರದಲ್ಲಿರುವ ಬನ್ನೂರು ಎಂಬಲ್ಲಿ. ಕಾಶ್ಯಪ ಪರಿಶೋಧ್ಯವನಾದ[32] ಬಲ್ಲಣ ಸುಮತಿ-ಲಕ್ಷ್ಮೀದೇವಿಯರೇ ವ್ಯಾಸರಾಯರ ತಂದೆ ತಾಯಿಗಳು. ಬಲ್ಲಣ, ರಾಮಾಚಾರ್ಯನೆಂಬುವರ ಮಗ. ಬನ್ನೂರಿನವರ. ಬಲ್ಲಣನಿಗೆ ಲಕ್ಷ್ಮೀದೇವಿಯಲ್ಲಿ ತುಂಬ ವರ್ಷ ಮಕ್ಕಳಾಗಲಿಲ್ಲ. ಹೆಂಡತಿ ಅನುಮತಿ ಪಡೆದ ಬಲ್ಲಣ ಎರಡನೆ ಮದುವೆ ಮಾಡಿಕೊಂಡರು ಆದೇ ಚಿಂತೆ ತಪ್ಪಲಿಲ್ಲ. ಬಲ್ಲಣ, ವೇದವ್ಯಾಸರ ಮಂತ್ರೋಪಾಸಕನಾಗಿದ್ದ ಗುರುವರ್ಯರ ಉಪಾಸನೆಯ ವಿನಾ ಅವನಿಗೆ ಅನ್ಯ ಮಾರ್ಗ ಹಿತವೆನಿಸಲಿಲ್ಲ. ಹಿರಿಯ ಹೆಂಡತಿ ಲಕ್ಷ್ಮೀದೇವಿಯಂತೂ ಗಂಡನ ಪಡಿನೆಳಲೆ.

ಹೀಗಿರಲು ಒಂದು ರಾತ್ರಿ ಲಕ್ಷ್ಮೀದೇವಿಯ ಕನಸಲ್ಲಿ ವ್ಯಾಸರು ಬಂದು, ಆಶೀರ್ವದಿಸಿದಂತಾಯಿತು.[33] ಅನಂತರ ಅಲ್ಲಿಗೆ ಬಂದ ಹಿರಿಯ ಸನ್ಯಾಸಿಗಳಾದ ಶ್ರೀ ಬ್ರಹ್ಮಣ್ಯತೀರ್ಥರ ಸಂದರ್ಶನವಾಯಿತು. ಅವರ ಆಶೀರ್ವಚನ ಪ್ರಕಾರ, "ಬಲ್ಲಣನಿಗೆ ಮೂರು ಮಕ್ಕಳಾಗುವುದೆಂದೂ, ಅದರಲ್ಲಿ ಕಡೆಯ ಮಗನನ್ನು ತಮಗೆ ಕೊಡಬೇಕೆಂದು" ತಿಳಿಸಿದರು. ಹಾಗೆಯೇ ಆಯಿತು. ಕಾಲಕ್ರಮೇಣ ಮೂವರು

ಮಕ್ಕಳಾದರು.[36] ಕೊನೆಯವನು ಹೆಸರು ಯತಿರಾಜ(೧೪೪೭). ಯತಿರಾಜನಿಗೆ ಅಕ್ಷರಾಭ್ಯಾಸ ಆಯಿತು, ಗರ್ಭಾಷ್ಟಮದಲ್ಲಿ ಉಪನಯನವೂ ಆಯಿತು. ಅನಂತರ ಗುರುಕುಲಕ್ಕೆ ಸೇರಿ ಕಾವ್ಯ, ನಾಟಕ, ಅಲಂಕಾರ, ವ್ಯಾಕರಣ, ವೇದ ವೇದಾಂತಗಳಲ್ಲೂ ಪಾಂಡಿತ್ಯಗಳಿಸಿದ.

ಯತಿರಾಜನಿಗೆ ಹದಿನಾರು ತುಂಬುವ ವೇಳೆಗೆ ಬ್ರಹ್ಮಣ್ಯತೀರ್ಥರಿಂದ ಕರೆ ಬಂದಿತು. ಮೊದಲು ಸ್ವಲ್ಪ ಹಿಂಜರಿದರೂ, ಮಗ ಹುಟ್ಟಿದ ಮೊದಲು ನೀಡಿದ್ದ ವಾಗ್ದಾನದಂತೆ ಬಲ್ಲಣ ದಂಪತಿಗಳು ಚನ್ನಪಟ್ಟಣದ ಅಬ್ಬೂರಿಗೆ ತೆರಳಿ, ಗುರುಗಳ ಬಳಿ ಮಗನನ್ನೊಪ್ಪಿಸಿ, ಊರಿಗೆ ಹಿಂತಿರುಗಿದರು.

ಬ್ರಹ್ಮಣ್ಯತೀರ್ಥರಿಗೆ ಯತಿರಾಜನ ಗುಣಸ್ವಭಾವ ಕಂಡರೆ ತುಂಬ ಪ್ರೀತಿ. ಅವರು ಪ್ರತಿನಿತ್ಯ ದೇವರಲ್ಲಿ ಪ್ರಾರ್ಥಿಸುತ್ತಿದ್ದರಂತೆ, ಯತಿರಾಜನನ್ನು ಶ್ರೇಷ್ಠ ಸನ್ಯಾಸಿಯಾಗಿ ಮಾಡಿ, ವೈಷ್ಣವ ಧರ್ಮದ ಉನ್ನತಿಗೋಸಂಗ ಆತ ತನ್ನ ವಿಪುಲಮತಿ ಬಳಸಿ, ಉನ್ನತ ತತ್ವಗ್ರಂಥಗಳನ್ನು ರಚಿಸಲಿ, ಎಂದು. ಒಮ್ಮೆ ಯತಿರಾಜ, ಗುರುಗಳಿಗೆ ತಿಳಿಸದೆ ಸ್ವತಂತ್ರನಾಗಿರಲಾಶಿಸಿ, ಹೊರಟೊರಟ. ಬಹುದೂರ ನಡೆದು ನಡೆದು ಬಳಲಿ, ಆತ ಒಂದು ಮರದಡಿ ಹಾಗೆಯೆ ಒರಗಿಕೊಂಡ. ಆಯಾಸಕ್ಕೆ ಹಾಗೆಯೆ ಜೊಂಪು ಬಂದಿತು. ಅವನಿಗೊಂದು ಒಳ್ಳೆ ಕನಸು. ಭಗವಾನ್ ವಿಷ್ಣು ಕನಸಿನಲ್ಲಿ ಬಂದು ತಾನು ಮಾಡಬೇಕಾದ ಕರ್ತವ್ಯವನ್ನು ತಿಳಿಸಿದಂತೆ ಕನಸಾಯಿತು. ತಪ್ಪಿಗೆ ಮರಳಿದ ಗುರುಗಳೆಡೆಗೆ. ಈ ಘಟನೆ ಕೂಡ ಯತಿರಾಜನಿಗೆ ಸುಮಾರು ೧೬ ವರ್ಷ ಕಳೆದಿತ್ತೆನ್ನಲು ಸೂಚಕ ಆಗುತ್ತದೆ. ಹಂಡಗಾಟದ ವಯಸ್ಸು.[38] ಈ ಘಟನೆ ಜರುಗಿದ ಕೆಲವು ಸಮಯದಲ್ಲಿ ಬ್ರಹ್ಮಣ್ಯತೀರ್ಥರು, ಯತಿರಾಜನಿಗೆ ಸನ್ಯಾಸದೀಕ್ಷೆ ಇತ್ತರು. ವ್ಯಾಸತೀರ್ಥರೆಂದು ಹೆಸರಿಸಿದರು.

ಗುರುಗಳ ಸಹವಾಸದಲ್ಲಿ ವ್ಯಾಸತೀರ್ಥ ಸ್ವಲ್ಪ ಕಾಲ ಕಳೆದ (೧೪೭೫-೭೬). ಅನಂತರ ಬ್ರಹ್ಮಣ್ಯತೀರ್ಥರು ವೃಂದಾವನಸ್ಥರಾದರು. ವ್ಯಾಸತೀರ್ಥರಿಗೆ ಬ್ರಹ್ಮಣ್ಯರಲ್ಲಿ ಮಧ್ವಶಾಸ್ತ್ರ ಅಧ್ಯಯನ ಮಾಡಲು ಸಾಧ್ಯವಾಗಲೆ ಇಲ್ಲ. ಪೀಠಸ್ಥರಾದ ಸ್ವಲ್ಪ ದಿನದಲ್ಲೆ ಅವರು ಕಂಚಿಗೆ ವಿಶೇಷ ವ್ಯಾಸಂಗಕ್ಕಾಗಿ ನಡೆದರು. ಕಂಚಿ, ಆಗಿನ ಕಾಲಕ್ಕೆ ದಕ್ಷಿಣ ಭಾರತದಲ್ಲಿ ಪ್ರಸಿದ್ಧ ವಿದ್ಯಾಕೇಂದ್ರ ಆಗಿತ್ತು. ಕಂಚಿಯಲ್ಲಿ ಅನೇಕ ವರ್ಷ ವ್ಯಾಸತೀರ್ಥರು, ಅಗ್ಗೆ ಇದ್ದ ಪ್ರಸಿದ್ಧ ವಿದ್ವಾಂಸರಲ್ಲಿ ಆರು ವೇದಾಂತ ತತ್ವಗಳನ್ನೂ ವ್ಯಾಸಂಗ ಮಾಡಿದರು. ಅಲ್ಲೇ ಅವರಿಗೆ ಶಂಕರ, ರಾಮಾನುಜ, ಭಟ್ಟ ಸಂಗ್ರಹ, ಮುಂತಾದ ವೇದಾಂತ ಶಾಖೆಗಳ ಬಗ್ಗೆ ಪ್ರಭುತ್ವ ಬಂದಿರಲು ಹಾಗೂ ಇದು ಮುಂದೆ ಅವರಿಗೆ ಸ್ವಮತ ಸಮರ್ಥಿಸಲು, ಹಾಗೂ ಪರಮತ ಖಂಡಿಸುವ ಉಚ್ಚ ಕೃತಿಗಳಾದ : ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕಾಗಳನ್ನು ಬರೆಯಲು ಪ್ರೇರೇಪಣೆ ಆಗಿರಬೇಕು. ಕಂಚಿಯಲ್ಲಿ ವಿದ್ಯಾಭ್ಯಾಸ ಮುಗಿಸಿದ ನಂತರ ವ್ಯಾಸತೀರ್ಥರು, ಮುಳಬಾಗಿಲಿಗೆ ಬಂದು ಶ್ರೀಪಾದರಾಜರ ಬಳಿ ಸುಮಾರು ಹನ್ನೆರಡು ವರ್ಷಕಾಲ

ನಿಂತರು. ಶ್ರೀಪಾದರಾಜರಂಥ ಗುರುಗಳು, ವ್ಯಾಸತೀರ್ಥರಂಥ ಶಿಷ್ಯರು. ಎಂ ಮೇಲೆ ? ಮುಳಬಾಗಿಲಿನಲ್ಲಿ ವ್ಯಾಸರಾಯರು ತಮ್ಮ ತುರೀಯಾಶ್ರಮದ ನಂತರದಲ್ಲಿ "ಕಾಶೀಮಿಶ್ರ ಪಕ್ಷಧರ ವಾಜಪೇಯಿ ನಾರಸಿಂಹ ಲಿಂಗಣ್ಣ ಮಿಶ್ರ ಮೊದಲಾ ವಿದ್ವಾಂಸ"ರನ್ನು ಜಯಿಸಿ, ದ್ವೈತತತ್ವ ಪತಾಕೆ ಹಾರಿಸಿದ್ದು. ಪಕ್ಷಧರ ಮಿಶ್ರರನ ಜಯಿಸಿದ್ದು ಅಲ್ಲದೆ ಕಾಶಿ ವಿದ್ಯಾಪೀಠದಲ್ಲೂ ಕೆಲವಾರು ಪಂಡಿತರನ್ನು ವಾದದ ಸೋಲಿಸಿದರು. ವ್ಯಾಸರಾಯರ ಕೀರ್ತಿ ಎಲ್ಲೆಲ್ಲೂ ಹರಡಿತು. ಉತ್ತರ ಭಾರತದ ಕೂಡ ಶ್ರೀವ್ಯಾಸರಾಯರ ಪ್ರಭಾವ ಬೀರದಿರಲಿಲ್ಲ. ಅಲ್ಲಿಂದ ಮತ್ತೆ ದಕ್ಷಿಣ ಪ್ರವಾಸ ಆಲ್ಲಿ ಕಂಚಿಯಲ್ಲಿ ವ್ಯಾಸರು ರಚಿಸಿದ ಆಶುಕವಿತ್ವ ಹಾಗೂ ಮಧ್ವಮತ ಸಾರ ಆದಾಗಿದೆ :

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೋ ।
ಭೇದೋ ಜೀವಗಣಾ ಹರೇರನುಚರಾಃ ನೀಚೋಚ್ಚ ಭಾವಂಗತಾಃ ॥
ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ ।
ಹ್ಯಕ್ಷಾದಿ ತ್ರಿತಯಂ ಪ್ರಮಾಣಮಖಿಲಾಮ್ನಾಯೈಕ ವೇದ್ಯೋಹರಿಃ ॥

ಇದರ ಸಾರವನ್ನು ಹೀಗೆ ತಿಳಿಸಬಹುದು :

ಶ್ರೀಹರಿಯೇ ಸರ್ವೋತ್ತಮ : ಈ ಜಗತ್ತು ಸತ್ಯ : ಭೇದವು ಸತ್ಯ ಆದದ್ದು : ಜೀವ-ಜಡ, ಜೀವ-ಜೀವ, ಜಡ-ಜಡ, ಜಡ-ಪರಮಾತ್ಮ, ಜೀವ-ಪರಮಾತ್ಮ (ಜೀವೇಶ ಭೇದ) ಎಂಬ ಪಂಚ ವಿಧದ ಭೇದವೂ ಸತ್ಯ. ಜೀವರಾಶಿಯಲ್ಲಿ ಶ್ರೀಹರಿಗೆ ಅಧೀನ ಆಗಿದೆ, ಜೀವರು ತಮ್ಮೊಳಗೆ ಉಚ್ಚ ನೀಚ ಎಂಬ ತಾರತಮ್ಯವನ್ನು ಹೊಂದಿದ್ದಾರೆ (ಅಂದರೆ ಎಲ್ಲರಲ್ಲಿಯೂ ತಾರ-ತಮ್ಯವುಂಟು). ಮುಕ್ತಿ ಎಂದರೆ ನೈಜಸುಖಾನುಭವ-ತನ್ನ ಸ್ವರೂಪಕ್ಕೆ ಅನುಗುಣವಾದ ಸುಖವನ್ನು ಜೀವನು ಪಡೆವುದೇ ಮೋಕ್ಷ : ಈ ಮುಕ್ತಿಗೆ ಭಕ್ತಿಯೇ ಸಾಧನ (ಅಮಲಾಭಕ್ತಿಶ್ಚ–ಎಂದರೆ ಯಾವುದೇ ದೋಷ ಕಳಂಕ ಅಂಟಿಸದ ಭಕ್ತಿ), ಪ್ರತ್ಯಕ್ಷ, ಅನುಮಾನ, ಆಗಮ-ಎಂಬ ಮೂರು ಪ್ರಮಾಣಗಳು (ತ್ರಿತಯಂ ಪ್ರಮಾಣಂ) : ಎಲ್ಲ ವೇದಗಳಿಂದ ಮಾತ್ರವೆ ಶ್ರೀಹರಿಯನ್ನು ತಿಳಿಯುವುದು ಸಾಧ್ಯ (ವೇದ ಪೌರುಷೇಯ ಪ್ರತಿಪಾದನ) ಇವು ಒಂಭತ್ತು ತತ್ವಾಂಶಗಳೂ ಮೇಲ್ಕಂಡ ಶ್ಲೋಕದಲ್ಲಿ ಅಡಕ ಆಗಿವೆ. ಇದನ್ನು ವ್ಯಾಸರಾಜರ "ನವರತ್ನಮಾಲೆ" ಎಂಬ ಶ್ಲೋಕ ವೆಂದೂ ಕರೆಯುವುದಿದೆ.

ಇದಲ್ಲದೆ, ವ್ಯಾಸತೀರ್ಥರು 'ಭೇದೋಜ್ಜೀವನ', 'ತತ್ವವಿವೇಕ', ಮತ್ತು 'ಮಾಯಾವಾದ ಖಂಡನ', 'ಉಪಾಧಿ ಖಂಡನ', 'ಪ್ರಪಂಚ ಮಿಥ್ಯಾತ್ವಾನಯಾನ ಖಂಡನ' ಎಂಬ ಖಂಡನ ಗ್ರಂಥಗಳ ಟೀಕೆ ಕೂಡ ರಚಿಸಿದ್ದಾರೆ.

ಇದಿಷ್ಟು ವ್ಯಾಸರಾಯರ ಸಂಸ್ಕೃತ ಗ್ರಂಥ ರಚನೆಯಾದರೆ ಇನ್ನೂ ಕನ್ನಡದಲ್ಲಿ ಇವರು ರಚಿಸಿರುವ, ಲಭ್ಯ ಆಗಿರುವ ಕೀರ್ತನೆಗಳದ್ದೆ ಒಂದು ಸಂಪದ. ಇವುಗಳಲ್ಲಿ ವ್ಯಾಸರಾಯರ ಕವಿಹೃದಯ, ಹರಿಭಕ್ತಿ, ಗೋಪಿಕಾಭಾವ, ವಾತ್ಸಲ್ಯ, ಕೃಷ್ಣಲೀಲೆ ವರ್ಣಿಸುವ ಭಕ್ತಹೃದಯ ಹಾಗೂ ಇತರ ಎಲ್ಲ ಭಾವಗಳೂ ಕಾಣ ಬರುವೆ.

ಇದರೊಂದಿಗೆ ವ್ಯಾಸರಾಯರು ವಿಜಯನಗರದರಸರ ಮನ್ನಣೆಗೆ ಹೇಗೆ ಪಾತ್ರ ರಾಗಿದ್ದರೆನ್ನಲು ಆಗ್ಗೆ ವಿಜಯನಗರಕ್ಕೆ ವಿದೇಶದಿಂದ ಪ್ರವಾಸಿಗರಾಗಿ ಬಂದಿದ್ದ ಪೇಯಸ್, ಬರ್ಬೋಸ್, ಡೊಮಿಂಗೊ ಮುಂತಾದವರು, ಹಾಗೂ ಅಬ್ದುಲ್ ರಜಾಕ್[37] ಎಂಬ ಅರಬ್ಬೀ ದೇಶದ ಪ್ರವಾಸಿಗ ಸಹ ತಮ್ಮ ವರದಿಗಳಲ್ಲಿ ಕಾಣಿಸಿದ್ದಾರೆ. ವಿಜಯ ನಗರದ ಐವರು ರಾಜರಿಗೆ (ಸಾಳುವ ನರಸಿಂಹ, ವೀರನರಸಿಂಹ, ಕೃಷ್ಣದೇವರಾಯ, ತಿರುಮಲರಾಯ, ಅಚ್ಯುತರಾಯ) ಇವರು ರಾಜಗುರುಗಳಾಗಿದ್ದರು. ಶ್ರೀಪಾದರಾಜ ರಲ್ಲಿ ಶಿಷ್ಯರಾಗಿರುವಾಗ್ಗೆ ಒಮ್ಮೆ ವ್ಯಾಸರಾಯರು ಒಂದು ದಿನ ಪೂಜೆಯನ್ನು ಮಾಡಿದ ರೆಂದೂ, ಆಗ್ಗೆ ಅಲ್ಲಿವರೆಗೆ ತೆರೆಯಲಾಗದೆ ಇದ್ದ ಸಂಪುಟವೊಂದನ್ನು ತೆಗೆದಾಗ ಹೊರ ಬಂದ ಕೃಷ್ಣ ಇವರೆದುರು ನರ್ತಿಸಿದನೆಂದೂ ; ಅದಕ್ಕೆ ಸರಿಯಾಗಿ ವ್ಯಾಸರಾಯರೂ ಸಾಲಿಗ್ರಾಮಗಳನ್ನು ತಾಳಗಳ ರೀತಿ ಬಾರಿಸುತ್ತ ಕೃಷ್ಣನೊಂದಿಗೆ ತಾವೂ ನರ್ತಿಸುತ್ತಿದ್ದ ರೆಂದೂ, ಇದನ್ನು ಶ್ರೀಪಾದರಾಜರು ನೋಡಿದಾಗ ಕೃಷ್ಣನು ಹೇಗಿದ್ದನೊ ಅದೇ ಭಂಗಿಯಲ್ಲಿ ವಿಗ್ರಹ ಮಾಡಿದನೆಂಬ ಐತಿಹ್ಯವಿದೆ. ಅನಂತರ ಶ್ರೀಪಾದರಾಜರು, ಆ ಕೃಷ್ಣಮೂರುತಿಯನ್ನು ವ್ಯಾಸರಾಯರಿಗೇ ನೀಡಿ, "ಕೃಷ್ಣ" ಎಂಬ ಅಂಕಿತ ನೀಡಿದ ರೆಂದೂ ತಿಳಿದುಬರುತ್ತದೆ. ವ್ಯಾಸರಾಯರು ತಮ್ಮ ಅಂಕಿತ-ಕೃಷ್ಣ, ಶ್ರೀಕೃಷ್ಣ, ಸಿರಿ ಕೃಷ್ಣ ಎಂದೆಲ್ಲ-ಕೃತಿಗಳಲ್ಲಿ ಬಳಸಿದ್ದಾರೆ.

ವ್ಯಾಸರಾಜರು ನಡೆಸಿದ ಕಾರ್ಯಗಳನೇಕ. ಅದರಲ್ಲಿ ಮುಖ್ಯವಾದವು : ಅವರು ತಿರುಪತಿಯ ಶ್ರೀನಿವಾಸನನ್ನು ಹನ್ನೆರಡು ವರ್ಷಕಾಲ ಸತತ ಸೇವೆ ಮಾಡಿದ್ದು. ಸೇವೆ ಮಾಡಿದರೂ ಅಲ್ಲಿಯ ರಾಮಾನುಜ ಸಂಪ್ರದಾಯ ಬದಲಿಸುವ ಅಧಿಕಾರವಿದ್ದರೂ ಅದನ್ನು ಮಾಡಲಿಲ್ಲ. ಅದು ಅವರ ಮತಸಹಿಷ್ಣು ಭಾವಕ್ಕೆ ನಿದರ್ಶನ. ಅದರಂತೆಯೆ ಈಗಲೂ ವ್ಯಾಸರಾಜಮಠಕ್ಕೆ ತಿರುಪತಿಯಲ್ಲಿ ವಿಶೇಷ ಗೌರವ, ಪಲ್ಲಕ್ಕಿಯಲ್ಲಿ ಪ್ರಾಕಾರ ದೊಳಗೆ ಹೋಗಿ ಸ್ವಾಮಿಯನ್ನು ಸೇವಿಸುವ ಗೌರವವಿದೆ.

ಎರಡನೆಯ ಸ್ತುತ್ಯ ಕಾರ್ಯವೆಂದರೆ, ವಿಜಯನಗರದರಸು ಕೃಷ್ಣದೇವರಾಯನಿ ಗೊದಗಿ ಬಂದ "ಕುಹೂಯೋಗ"[38] ಗಂಡಾಂತರವನ್ನು ನಿವಾರಿಸಿ, ಆ ಅವಧಿಯಲ್ಲಿ ತಾವೇ ಸಿಂಹಾಸನವೇರಿ, ರಾಜ್ಯಾಡಳಿತ ನಡೆಸಿದ್ದು. ಈ ಘಟನೆ ನಡೆದದ್ದೆ ಎಂದು ಪುರಂದರದಾಸರ ಕೃತಿಯೊಂದರಲ್ಲಿ ಉಕ್ತಗೊಂಡಿರುವುದರ ಮೂಲಕ ತಿಳಿಯಬಹುದು. ಆದರೂ "ಕುಹೂಯೋಗ" ಒಂದು ಸಂಶೋಧನಾತ್ಮಕ ವಿಚಾರವೆಂದು ಪ್ರೊ. ಕೆ. ವೆಂಕಟರಾಮಪ್ಪನವರ ಅಭಿಪ್ರಾಯ.[39] (ಈ ಸಿಂಹಾಸನಾರೋಹಣ ಸಮಾರಂಭವನ್ನು ಈ ಹೊತ್ತೂ ಸೋಸಲೆಯ ವ್ಯಾಸರಾಜಮಠದಲ್ಲಿ "ದೀವಟಿಗೆ ಸಲಾಂ" ಎಂದು ನಡೆಸಿ

ಕೊಂಡು ಬರುವ ಪದ್ಧತಿ ಬೆಳೆದು ಬಂದಿದೆ. ಇದು ಸ್ವಾಮಿಗಳು "ದರ್ಬಾರ್"ನಲ್ಲಿ ಸಿಂಹಾಸನದಲ್ಲಿ ಕುಳಿತಾಗ "ವಿಜಯನಗರ-ಕರ್ಣಾಟಕ ವಿದ್ಯಾಸಿಂಹಾಸನ" ಎಂದು ಕರೆಯುವ ವಾಡಿಕೆ ಇದೆ. ಪುರಂದರದಾಸರು ಹಾಗೂ ಇನ್ನಿತರ ಕೆಲವು ಹರಿದಾಸರು ಕಂಹೂಯೋಗ ವಿಚಾರಣೆಯ ಬಗ್ಗೆ ತಮ್ಮ ಕೃತಿಗಳಲ್ಲಿ ತಿಳಿಸಿದ್ದಾರೆ.) ಕೃಷ್ಣದೇವರಾಯ ಕಾಲವಾದ ನಂತರ (೧೫೩೦ ಕ್ರಿ.ಶ.) ಅಚ್ಯುತರಾಯ ಸ್ವಾಮಿಗಳನ್ನು ತುಂಬ ಗೌರವ ದಿಂದಲೇ ಕಾಣುತ್ತಿದ್ದ. ಆಗಲೇ ವ್ಯಾಸರಾಯರು (ಕ್ರಿ.ಶ. ೧೫೩೨) ಹಂಪೆಯ ವಿಠ್ಠಲ ಸ್ವಾಮಿ ದೇವಸ್ಥಾನದಲ್ಲಿ ಯೋಗವರದ ನರಸಿಂಹನನ್ನು ಸ್ಥಾಪಿಸಿದ್ದು. ಈ ಎಲ್ಲ ಘಟನೆ ೧೫-೧೬ನೆ ಶ ದ ವಿಜಯನಗರ ಶಾಸನಗಳಲ್ಲೂ ಸಿಗುತ್ತವೆ.

ಶಾಲಿವಾಹನಶಕ, ೧೪೬೧ ವಿಳಂಬಿ ಸಂವತ್ಸರದ ಫಾಲ್ಗುಣ ಬಹುಳ ಚತುರ್ಥಿ ಯಂದು ವ್ಯಾಸರಾಯರು ತಮ್ಮ ಭೌತಿಕ ಶರೀರ ತ್ಯಜಿಸಿದರು. ಬಾಲಸನ್ಯಾಸಿಯಾದಾಗಿ ನಿಂದ, ಸುಮಾರು ಎಪ್ಪತ್ತು ವರ್ಷಕ್ಕೂ ಹೆಚ್ಚು ಕಾಲ ಸಂಸ್ಥಾನದಾಧಿಪತ್ಯ ನಡೆಸಿ, ತತ್ತ್ವಗ್ರಂಥಗಳನ್ನು ರಚಿಸಿ, ವಾದಿನಿಗ್ರಹ ಮಾಡಿ, ವಿಜಯ ನಗರದ ರಕ್ಷಣೆ ಮಾಡಿದ ವ್ಯಾಸರಾಯರ ಕಾರ್ಯ ಅಮೋಘವಾದದ್ದು. ಅನೇಕ ಪಾಶ್ಚಾತ್ಯ ಪ್ರವಾಸಿಗರ ಮನ ಗಳನ್ನೂ ಈ ಅಸ್ಖಲಿತ ಬ್ರಹ್ಮಚಾರಿ-ಸನ್ಯಾಸಿ ಸೂರೆಗೊಂಡರು.

ಶ್ರೀವ್ಯಾಸರಾಯರು ೭೩೨ ಪ್ರಾಣದೇವರ ವಿಗ್ರಹ ಪ್ರತಿಷ್ಠೆ ಭಾರತದ ನಾನಾ ಸ್ಥಳಗಳಲ್ಲಿ ಮಾಡಿರುತ್ತಾರೆ.

## ವ್ಯಾಸರಾಯರ ಹರಿದಾಸ ಪರಿಚರ್ಯೆ

ಕನ್ನಡ ನುಡಿಯನ್ನು ವ್ಯಾಸರಾಯರು ಬಳಸಿಕೊಂಡು ಕೀರ್ತನೆ, ವೃತ್ತನಾಮ, ಸುಳಾದಿ, ಉಗಾಭೋಗಗಳನೇಕ ರಚಿಸಿದ್ದಾರೆ. ಅವರ ಮನದಲ್ಲಿದ್ದ ಮಧ್ವಾಚಾರ್ಯರ ದ್ವಾದಶಸ್ತೋತ್ರ, ಶ್ರೀಪಾದರಾಜರ ಕೃತಿಗಳು, ಎಲ್ಲವೂ ಪ್ರಭಾವ ಬೀರಿಯೆ ಇವೆ. ವ್ಯಾಸರಾಯರ ಕೃತಿಗಳನ್ನು ಮಧ್ವಮತ ಪ್ರಸಾರ,[40] ಹರಿಸರ್ವೋತ್ತಮತ್ವ ಪ್ರತಿಪಾದನೆ, ಕೃಷ್ಣಲೀಲೆ, ಧರ್ಮಬೋಧೆ, ಭಕ್ತನ ಮನದ ತಳಮಳ, ಹೀಗೆ ವರ್ಗೀಕರಿಸಿ ಅಧ್ಯಯನ ಮಾಡಬಹುದಾಗಿದೆ. ಭಗವದ್ಗೀತೆಯಸಾರವನ್ನು ಕನ್ನಡದ ಅಪರೂಪ ಛಂದಸ್ಸಾದ "ವೃತ್ತನಾಮ" ಮಾದರಿಯಲ್ಲಿ ಬರೆದಿರುವುದೂ ಶ್ರೀಪಾದರಾಜರ ಜಾಡಿನಲ್ಲಿ ನಡೆದ ಸುಳಿಂಹು ನೀಡುವಂತಿದೆ.

ವ್ಯಾಸರಾಯರ ಕೃತಿಗಳಲ್ಲಿ ಸಮರ್ಪಣಭಾವ, ಭಕ್ತಿ ಮಾಧುರ್ಯ, ನಿಂದಾಸ್ತುತಿ, ಮಧ್ವಮತದ ಸಾತ್ವಿಕತೆ, ಪುರಾಣಪ್ರಜ್ಞೆ, ಹೀಗೆ ಹೇಳಿದಷ್ಟೂ ಇದ್ದೇ ಇರುತ್ತದೆ.[41] "ಅಂತರಂಗದಲಿ ಹರಿಯ ಕಾಣದವನೆ ಹುಟ್ಟು ಕುರುಡನೊ",[42] "ಹುಟ್ಟಿದೆ ಭುವಿ ಯೊಳು ಬಹುದಿನ ಕಳೆದೆನೊ! ಪ್ರಟ್ಟಿಸಬೇಡವೆನ್ನ",[43] "ನಿನ್ನಿಂದ ನಿನ್ನ ದಾಸರು ಮಿಗಿಲೋ ಕೃಷ್ಣ" "ನಂಬಿಕೆಟ್ಟವರಿಲ್ಲವೊ ರಂಗಯ್ಯನ" ಮೊದಲಾದ ಅನೇಕ ಕೃತಿಗಳಲ್ಲಿ ಬರುವ ವಿವಿಧ ಭಾವ "ಮರುಗ ಮೊಲ್ಲೆ ಮಲ್ಲಿಗೆ"[44]ಯಂತ ಹಾಡಿನಲ್ಲಿ ಬರುವ ಕನ್ನಡ

ನುಡಿಗೆ ತಕ್ಕ ಸಹಜ ವರ್ಣನೆ, ಕೃಷ್ಣಲೀಲೆಯ ವಿವಿಧ ಕೀರ್ತನೆಗಳು, ಗೋಪಿಕೆಯರ ವಿರಹ ಗೀತ ಭಾಗವತದ ಪ್ರಜ್ಞೆ, ಎಲ್ಲವೂ ಎಂಥವರನ್ನೂ ಕವಿಹೃದಯಿಗಳಾಗಿ ಮಾಡುತ್ತವೆ. ಅವರ ಒಂದು ಪ್ರಸಿದ್ಧ ಉಗಾಭೋಗ : ನಿಂತಿದೆ :

ಜಾರತನವನು[45] ಮಾಡಿದ ಪಾಪಗಳಿಗೆಲ್ಲ
ಗೋಪೀಜನ ಜಾರನೆಂದರೆ ಸಾಲದೆ
ಚೋರತ್ವವನು ಮಾಡಿದ ಪಾಪಗಳಿಗೆಲ್ಲ
ನವನೀತ ಚೋರನೆಂದರೆ ಸಾಲದೆ
ಕ್ರೂರತ್ವವನು ಮಾಡಿದ ಪಾಪಗಳಿಗೆಲ್ಲ
ಮಾವನ ಕೊಂದವನೆಂದರೆ ಸಾಲದೆ
ಪ್ರತಿದಿವಸ ಮಾಡಿದ ಪಾಪಗಳಿಗೆಲ್ಲ
ಪತಿತ ಪಾವನನೆಂದರೆ ಸಾಲದೆ
ಇರತಿಪ್ಪ ಮಹಿಮೆಯೊಳೊಂದನಾದರು ಒಮ್ಮೆ
ಸಂತತ ನೆನೆವರ ಸಲಹುವ ಸಿರಿಕೃಷ್ಣ ॥

ವ್ಯಾಸರಾಯರು ಬಳಸಿರುವ ಪ್ರತಿಮಾ ವಿಧಾನ ನಿತ್ಯ ನೂತನವಾದದ್ದು "ಆಳು ಸಾಮಗ್ರಿಯ ಅಪಾರಬಲ ಮಾಡಿ ಕೋಳು ಹೋಗದ ಮುನ್ನ ಕೋಟೆ ರಕ್ಷಿಸಬೇಕು", "ಇಂದ್ರಿಯಂಗಳೆಂಬ ಕಳ್ಳರೈವರ ಬಂಧಿಸಿ ತಮ್ಮ ವಿಷಯಕ್ಕೊಯ್ಯದನ್ನ ಕಂದಿಸಿ ಜ್ಞಾನವೆಂಬ ದೃಷ್ಟಿಯ ಎಂದೆಂದಿನ ಧರ್ಮಧನವನೊಯ್ವರು" ಎಂಬ ಅನೇಕ ಪ್ರತಿಮೆಗಳು, "ನಮೋ ನಮೋ ಸಿರಿಕೃಷ್ಣ ಎಂಬ ಘೋಷ ಮುಕುಂತಿ ಕನ್ನಿಕೆಯ ಮದುವೆಯ ವಾದ್ಯ ಘೋಷ" ಎಂಬ ಧ್ವನ್ಯಾತ್ಮಕ ಪ್ರತಿಮೆ, ವ್ಯಾಸರಾಯರ ಕೃತಿಗಳಲ್ಲಿ ಅಡಕವಾಗಿರುವ ಕಾವ್ಯಸತ್ವದೆಡೆ ಬೆರಳು ಮಾಡಿ ತೋರುತ್ತವೆ. ಹೊಳೆಯ ಪಾತ್ರವಿರುವಂತೆ ಅವರ ಕೃತಿಗಳು. ಕೆಲವೆಡೆ ಆಳ, ಕೆಲವೆಡೆ ಗಹನ, ಕೆಲವೆಡೆ ವಿಸ್ತಾರ, ಹೀಗೆ[46] "ಕಾವ್ಯದ ಫಲ ಆನಂದ ಹಾಗೂ ಎಂದಾದರೆ ವ್ಯಾಸರಾಯರ ಕೀರ್ತನೆಗಳು ಈ ಎರಡನ್ನೂ ನೀಡುತ್ತದೆ ಎಂಬುದನ್ನು ಸಹಜವಾಗಿ ಅನುಭವಿಸಬಹುದು" ಎಂಬ ಮಾತು ಗಮನಾರ್ಹ. ವ್ಯಾಸರಾಯರ ಕೀರ್ತನೆಗಳಲ್ಲಿ "ಕನ್ನಡದ ಜಾಯಮಾನಕ್ಕೆ[47] ಒಗ್ಗುವ ವ್ಯಾಕರಣ ಹಿತವಾಗಿದೆ .. ....ಲಕವಿಕ" ಎಂಬ ಶಬ್ದ ಪ್ರಯೋಗ........ಧನಾಸಕ್ತನನ್ನು ಸೂಚಿಸುವ ಆ ರೀತಿ ಅರ್ಥಪೂರ್ಣವಾಗಿದೆ.

ವ್ಯಾಸರಾಯರು ಹರಿದಾಸಕೂಟ, ವ್ಯಾಸಕೂಟಗಳ ಸಮನ್ವಯ ಸಾಧಕರು. ವ್ಯಾಸಕೂಟದ ಪಾಂಡಿತ್ಯ ಪೂರ್ಣ ಪ್ರಕಾರಕ್ಕೆ ಅವರ ಸ್ಥಿರ ಕೊಡುಗೆ ಇರುವಂತೆಯೆ ಕನ್ನಡದಲ್ಲಿ ಹರಿದಾಸಕೂಟದ ಬೆಳವಿಗೆ ಪೋಷಕ, ಪ್ರೇರಕ, ಉತ್ತೇಜಕ ಆದ ಸೊಗ

ಸಾದ ಕೃತಿಗಳನ್ನು ನೀಡಿದ್ದಾರೆ. ಪುರಂದರದಾಸರಂಥ ಹರಿದಾಸ ಶ್ರೇಷ್ಠರು, ಕನಕದಾಸರಂಥ ಉನ್ನತ ಅನುಭಾವಿಗಳನ್ನು ವಾದಿರಾಜರಂಥ ಜ್ಞಾನಿದಾಸಪ್ರಿಯರನ್ನು, ವಿಜಯೀಂದ್ರರಂಥ ವಿದ್ವನ್ನಿಷ್ಠರನ್ನು ಪ್ರೇರಿಸಿ, ಸ್ಫೂರ್ತಿ ಚೇತನವಾಗಿದ್ದಾರೆ. ವ್ಯಾಸರಾಯರ ಪ್ರಭಾವವಿದ್ದರೂ ಕನಕದಾಸರು ಸ್ವತಂತ್ರರೆ ಎಂಬುದು ಅವರ ಕೃತಿಗಳಲ್ಲಿ ಕಾಣಬರುವುದಾದರೂ ಗುರುವಿನ ಪ್ರಭಾವ ಇಲ್ಲದಿಲ್ಲ. "ದಾಸಕೂಟ"ಪದ[48] ಪ್ರಾಣೇಶ ವಿಠಲರ (೧೯ನೆ) ಕೀರ್ತನೆಯೊಂದರಲ್ಲಿ ಬಂದರೂ ಹರಿದಾಸ ಪರಂಪರೆ, ಗೋಷ್ಠಿಯನ್ನು ಒಕ್ಕೂಡಿಸಿ, ಸಂಘಟಿಸಿದ್ದು ವ್ಯಾಸರಾಯರು. (ಶ್ರೀಪಾದರಾಜರ ಈ ಕಾರ್ಯವನ್ನು ಮುಂದುವರೆಸಿದರು.) ವ್ಯಾಸಕೂಟದವರು ಎಷ್ಟು ಮುಖ್ಯರೊ ದಾಸಕೂಟದವರೂ ಅಷ್ಟೇ ಮುಖ್ಯರು. ಇಲ್ಲಿ ಸಲ್ಲುವರು ಅಲ್ಲಿಯೂ ಸಂದಿದ್ದಾರೆ. ವ್ಯಾಸರಾಯರಂಥವರೆ ಇದಕ್ಕೆ ಸಾಕ್ಷಿ. ವಾದಿರಾಜರು, ರಾಘವೇಂದ್ರರಲ್ಲಿ ಇದು ಮುಂದುವರೆಯಿತು. ಪಂಢರಿಗೆಯ ವಿಠಲಭಕ್ತಿ. ವಿಠಲೋಪಾಸನೆ. ಇವಕ್ಕೆಲ್ಲ ವ್ಯಾಸರಾಯರಿಂದ ತುಂಬ ಪ್ರೋತ್ಸಾಹ ದೊರೆಯಿತು. ಎರಡೂ ಬಣದವರು ಪರಸ್ಪರ ಛೇಡಿಸುವುದೆ ಆಗಲಿ, ಅವಹೇಳನ ಮಾಡುವುದೆ ಆಗಲಿ, ನಡೆಯಲು ವ್ಯಾಸರಾಯರು ಅವಕಾಶವೀಯದೆ ಎರಡರ ಸಮನ್ವಯವನ್ನು ಸಾಧಿಸಿದರು. ಹರಿದಾಸಕೂಟದ ದಾಸರು ಲೋಕನೀತಿಯನ್ನು ಜನತೆಯಲ್ಲಿ ಬಿತ್ತರಿಸಿದಂತೆಯೆ, ದಾಸಕೂಟದ ಮೂಲಕ ಡಂಭಾಚಾರ, ಶುಷ್ಕ ಪಾಂಡಿತ್ಯ, ಅಲ್ಲಗಳೆದರು. ನೀತಿ-ಧರ್ಮವನ್ನೆತ್ತಿ ಹಿಡಿದರು. ವೇದಾಗಮಂಗಳ ಶಾಸ್ತ್ರಸಾರಗಳನ್ನು ಶ್ರೀಸಾಮಾನ್ಯರಿಗೆ ಸರಳ ಕನ್ನಡ ನುಡಿಗಟ್ಟಿನಲ್ಲಿ ಹಂಚಿದರು. ಪ್ರಾಕೃತ ಎಂದು ಅಪಹಾಸ್ಯಕ್ಕೆ ಗುರಿಯಾದ ಕನ್ನಡ ನುಡಿಗೆ ಮಂತ್ರಶಕ್ತಿ ಇದೆ ಎಂದು ಹರಿದಾಸಕೂಟ ತೋರಿಸಿತು. ಅದನ್ನು ಗುರುತಿಸಿ ಅಧಿಕೃತಮುದ್ರೆಯನ್ನು ವ್ಯಾಸರಾಯರು ಹಾಕಿದರು" ಎಂಬ ಸಾಹಿತ್ಯ ಚರಿತ್ರಕಾರರ ಮಾತನ್ನು ಇಲ್ಲಿ ಸ್ಮರಿಸಬಹುದಾಗಿದೆ. ಶ್ರೀಪಾದರಾಜರು ಹರಿದಾಸಕೂಟಕ್ಕೆ ಶ್ರೀಕಾರ ಹಾಡಿದರೆ, ವ್ಯಾಸರಾಯರು ಅದಕ್ಕೆ ಅಧಿಕೃತ ಮುದ್ರೆಯೊತ್ತಿದರು.

**ವಾದಿರಾಜರು (ಕ್ರಿ. ಶ. ೧೪೮೦-೧೬೦೦)**

ವಾದಿರಾಜರ ಜನ್ಮಸ್ಥಳ ಕುಂಭಾಸಿಯ ಬಳಿ ಇರುವ ಹೂವಿನಕೆರೆ ಎಂಬ ಗ್ರಾಮ. ದಕ್ಷಿಣಕನ್ನಡ ಜಿಲ್ಲೆಗೆ ಸೇರಿದ ಕುಂದಾಪುರಕ್ಕೆ ಸೇರಿದೂರು. ಕುಂಭಾಸಿ, ಆನೆಗುಡ್ಡೆ ಎಂದು ಪ್ರಸಿದ್ಧ ಆದ ವಿನಾಯಕ ಕ್ಷೇತ್ರ. ವಾದಿರಾಜರು ತುಳು ಮಾತನಾಡುವ ಶಿವಳ್ಳಿಬ್ರಾಹ್ಮಣ ಕುಟುಂಬದಿಂದ ಬಂದವರು. ತಂದೆ ರಾಮಾಚಾರ್ಯ, ನಾಮವೇದಿ, ತಾಯಿ ಗೌರಮ್ಮ.

ಮಧ್ವಾಚಾರ್ಯರ ಸೋದರರಾದ ವಿಷ್ಣುತೀರ್ಥರೆಂಬುವರು ಉಡುಪಿಯ ಅಷ್ಟ ಮಠಗಳ ಪೈಕಿ ಸೋದೆ ಮಠದ ಪೀಠಿಗೆ ಮೂಲಪುರುಷರು. ವಾದಿರಾಜರ ಜನನ ಕಾಲಕ್ಕೆ ಸೋದೆ ಮಠದಲ್ಲಿ ವಿಷ್ಣುತೀರ್ಥರಿಂದ ಹದಿನೇಳನೆಯವರಾದ ವಾಗೀಶತೀರ್ಥರು ಪೀಠಸ್ಥರಾಗಿದ್ದರು. ಆಗ್ಗೆ ತಮ್ಮ ಉತ್ತರಾಧಿಕಾರಿಯನ್ನಾರಿಸುವ ಹವಣಿಕೆ ಅವರದು. ಹೂವಿನಕೆರೆಯ ರಾಮಾಚಾರ್ಯ ದಂಪತಿಗಳನ್ನು ಆಶೀರ್ವದಿಸಿದ ವಾಗೀಶರು, ಅವರ

ಮೊದಲ ಮಗನನ್ನು ತಮಗೆ ಕೊಡಬೇಕೆಂದು ನುಡಿದರು. ದಂಪತಿಗಳು ಬಡವರಾದರೂ ಆಗ್ಗೆ ಅವರಿಗನ್ನಿಸಿದ್ದು ಹುಟ್ಟುವ ಒಬ್ಬ ಮಗನನ್ನೂ ಸನ್ಯಾಸಿಯಾಗಿಸಿದರೆ ಮುಂದೆ ತಮಗೆ ಯಾರು ದಿಕ್ಕು? ಎಂಬುದು. ಸ್ವಾಮಿಗಳಿಗಿದು ಅರ್ಥ ಆಗದಿರಲಿಲ್ಲ. ಅವರು ಒಂದೇ ಮಾತು ನುಡಿದದ್ದು : "ನಿನ್ನ ಮನೆಯಲ್ಲಿ ಹುಟ್ಟಿದರೆ ನಿನ್ನ ಮಗ ಅವನು, ಇಲ್ಲದಿದ್ದರೊ ?" ರಾಮಾಚಾರ್ಯ ಏನೂ ಬದಲಾಡಲಿಲ್ಲ. ವಾದಿರಾಜರು ಹುಟ್ಟಿದ್ದೆ ಗದ್ದೆಯಲ್ಲಿ. ದ್ವಾದಶಿಯ ಪಾರಣೆ ಊಟಕ್ಕೆಂದು ಗಂಡ ಕುಳಿತ ನಂತರ ಮನೆಯ ಹೊರಗಣ ಭತ್ತದ ಗದ್ದೆಗೆ ದನ ನುಗ್ಗಿದಾಗ ಅದನ್ನೋಡಿಸಲು ಬಂದ ತುಂಬು ಬಸಿರಿ ಗೌರಮ್ಮನಿಗೆ ಗದ್ದೆ ದಾಟಿದ ನಂತರದ ಗಿಡಗಾಡಿನ ಬಯಲಲ್ಲಿ ಪ್ರಸವವಾಯಿತು, ವಾಗೀಶರ ಕೇಳಿಕೆಯಲ್ಲಿ ಈ ಸಂಕೇತ ಅಡಗಿತ್ತೇನೋ ಎಂಬಂತೆ. ಈಗ ರಾಮಾಚಾರ್ಯ ದಂಪತಿಗಳು ಆಡಿದ ನುಡಿಗೆ ಬದ್ಧರಾಗಬೇಕಾಯ್ತು. ಸುದ್ದಿ ತಿಳಿದ ವಾಗೀಶತೀರ್ಥರು ಬಂದು ಮಗುವನ್ನು ನೋಡಿ, "ರಾಮಾಚಾರ್ಯ ಈಗೇನನ್ನುವಿ ? ಇವನು ದೇವರ ಮಗನಿದ್ದಾನೆ, ಇವನಿಗೆ ಭೂವರಾಹನೆಂದೆ ಹೆಸರಿಡು" ಎಂದು ಆಣತಿಯಿತ್ತರು. ವಾದಿರಾಜರು ಜನಿಸಿದ ಕಾಲ ಶಾ. ಶ. ೧೪೦೨ರ ಶಾರ್ವರಿ ಸಂವತ್ಸರವೆಂದು ಸೋದೆ ಮಠದ ಪ್ರಕಾರ ತಿಳಿಯುತ್ತದೆ.* ಅಂದರೆ ಕ್ರಿ. ಶ. ೧೪೮೦.

ಬಾಲಕ ಬೆಳೆದಂತೆ ಉಪನಯನ ಎಲ್ಲ ಸಕಾಲದಲ್ಲಿ ನೆರವೇರಿತು. ಭೂವರಾಹ, ಸಾಮವೇದ, ಕಾವ್ಯಗಳಲ್ಲೂ ಪರಿಣತಿ ಪಡೆದ. ವಿದ್ಯೆ, ವಾಕ್ಸಿದ್ಧಿಗಾಗಿ ವಾಗೀಶತೀರ್ಥರಿಂದ ಹಯಗ್ರೀವ ಮಂತ್ರೋಪದೇಶ ಪಡೆದು, ಕಠಿಣ ಸಾಧನೆಗಳಿಂದ ಸಿದ್ಧಿ ಪಡೆದ. ವಾಗೀಶತೀರ್ಥರು, ಭೂವರಾಹನನ್ನು ಮಠದಲ್ಲಿ ಇರಿಸಿಕೊಂಡು, ತಮ್ಮ ಹಿರಿಯ ಶಿಷ್ಯರಾಗಿದ್ದ ವಿದ್ಯಾನಿಧಿತೀರ್ಥರೆಂಬುವವರ ಬಳಿ ಹೆಚ್ಚಿನ ವ್ಯಾಸಂಗಕ್ಕೆ ಕಳಿಸಿದರು. ಅಲ್ಲಿ ಕೆಲವು ವರ್ಷ ವ್ಯಾಸಂಗ, ಅನಂತರ ವಿದ್ಯಾನಿಧಿತೀರ್ಥರು ವೃಂದಾವನಸ್ಥರಾಗಲು, ಮರಳಿ ವಾಗೀಶರ ಬಳಿಗೇ ಬಂದು, ಅವರಿಂದ ಸನ್ಯಾಸದೀಕ್ಷೆ ಪಡೆದ. ಆಗಲೆ ಗುರುಗಳು, ಭೂವರಾಹನಿಗೆ, 'ವಾದಿರಾಜ'ನೆಂಬ ಆಶ್ರಮನಾಮವಿತ್ತರು. ವಾದಿರಾಜರು ಹೆಸರಿಗೆ ತಕ್ಕಂತೆ ವಾದಿಗಳ ರಾಜನೆ ಆದರು. ಕಾಲಕ್ರಮೇಣ, ವಾಗೀಶರು ಬೃಂದಾವನಸ್ಥರಾದ ನಂತರ, ವಾದಿರಾಜರು ಹೆಚ್ಚಿನ ವಿದ್ಯಾಭ್ಯಾಸದ ಅಭಿಲಾಷೆಯಿಂದ ವಿಜಯನಗರದ ವ್ಯಾಸರಾಯರಲ್ಲಿಗೆ ಬಂದರು. ವ್ಯಾಸರಾಯರು ಆಗ್ಗೆ ತುಂಬ ಪ್ರಸಿದ್ಧರಾಗಿದ್ದರು. ಅವರ ಉಪದೇಶ ಕ್ರಮ, ಪ್ರತಿವಾದಿಗಳೊಡನೆ ಖಂಡಿಸುವ ವಾದಕ್ರಮ ಎಲ್ಲವನ್ನು ವಾದಿರಾಜರು ಚೆನ್ನಾಗಿ ಗ್ರಹಿಸಿದಂತೆ ಅಲ್ಲದೆ ವಿದ್ವತ್ಸಭೆಯಲ್ಲಿ ತಮ್ಮ ಪ್ರೌಢಿಮೆಯನ್ನೂ ತೋರ್ಪಡಿಸಿದರು. ವಾದಿರಾಜರ ವಿದ್ಯಾಪ್ರೌಢಿಮೆ, ವಾಗ್ಮಿತೆ ಕಂಡ ವಿಜಯನಗರದ ಕೃಷ್ಣದೇವರಾಯ "ಪ್ರಸಂಗಾಭರಣ ತೀರ್ಥ" ರೆಂದು ಕರೆದ. ವ್ಯಾಸರಾಯರ ಇನ್ನೊಬ್ಬ ಶಿಷ್ಯರಾದ ವಿಜಯೀಂದ್ರರದೂ ಅಂಥದೆ ಪಾಂಡಿತ್ಯ. ವ್ಯಾಸರಾಯರ ಬಳಿ ವಿದ್ಯಾವ್ಯಾಸಂಗ ಪೂರೈಸಿಕೊಂಡು, ಅವರಿಂದ "ವ್ಯಾಸಮುಷ್ಟಿಕೆ" ಗಳನ್ನು ಪಾರಿತೋಷಕ ಆಗಿ ಪಡೆದ ವಾದಿರಾಜರು

ಮರಳಿ ಬಂದದ್ದು ಉಡುಪಿಗೆ. ಅಲ್ಲಿ ತಮ್ಮ ಮಠವೊಂದನ್ನು ಸ್ಥಾಪಿಸಿದುದಲ್ಲದೆ, ಸೋದೆಯ ಮೂಲ ಸಂಸ್ಥಾನದಲ್ಲಿ ಇರುತ್ತಿದ್ದರು. ವಾದಿರಾಜರದು ೧೨೦ ವರ್ಷಗಳ ನಿಡಿದಾದ ಬದುಕು : ಅವರು ಸಶರೀರರಾಗಿಯೆ ವೃಂದಾವನಸ್ಥರಾದದ್ದು ೧೬೦೦ರಲ್ಲಿ ಶಾರ್ವರಿ ಸಂವತ್ಸರದಲ್ಲಿ ಎಂದು ಸೋದೆ ಮಠದ ದಾಖಲೆ ತಿಳಿಸುತ್ತದೆ.

ವಾದಿರಾಜರು ನೆಲಸಿದ ಸೋದೆಯ ಅರಸಪ್ಪನಾಯಕ ಗುರುಗಳ ಬಗ್ಗೆ ವಿಶೇಷ ಗೌರವವಿರಿಸಿಕೊಂಡಿದ್ದುದಲ್ಲದೆ, ಅನೇಕ ಕೊಡುಗೆ ನೀಡಿರುವ ದಾಖಲೆ ಇವೆ.[49] ವಾದಿರಾಜರು ಇಡೀ ಭಾರತವನ್ನು ಮೂರು ಸಲ ಪ್ರವಾಸ ಮಾಡಿದರು. ಸೋದೆ, ಬೀಳಗಿ, ಕೆಳದಿ, ಕೊಡಗು ಅಲ್ಲದೆ ಉತ್ತರ ಕನ್ನಡ ಜಿಲ್ಲೆಯಲ್ಲಂತೂ ಅನೇಕ ಸಲ ಸಂಚರಿಸಿದರು. ಈ ಪ್ರದೇಶದಲ್ಲಿ ಸಾಮಾನ್ಯ ಜನರಲ್ಲಿ ಭೂತಾರಾಧನೆ ಪ್ರಚಲಿತ ಆಗಿತ್ತು. ವಿದ್ಯಾವಂತರು ಜೈನ-ವೀರಶೈವ ಧರ್ಮಾವಲಂಬಿಗಳೆ ಹೆಚ್ಚು. ಅದ್ವೈತ ಸಂಪ್ರದಾಯಸ್ಥರಂತೂ, ಹೆಚ್ಚಿನ ಸಂಖ್ಯೆಯಲ್ಲಿದ್ದರು. ದ್ವೈತ ಸಿದ್ಧಾಂತ ವೈಷ್ಣವ ಸಂಪ್ರದಾಯಕ್ಕೆ ಸ್ವತಃ ವಾದಿರಾಜರೇ ಸಮರ್ಥಗುರು, ತತ್ವಬೋಧಕರಾದರು.

ಇದಿಷ್ಟು ವಾದಿರಾಜರ ಇಹದ ಜೀವನ. ಆದರೆ ಅವರು ದ್ವೈತ ಸಿದ್ಧಾಂತ ಸಂಪದದಲ್ಲಿ ನಾಲ್ಕನೆಯವರೆಂದು ಪರಿಗಣಿತವಾಗಿರುವುದು, ಅವರಿಗಿದ್ದ ವಿದ್ಯಾಪ್ರೌಢಿಮೆ, ಕವಿಹೃದಯ ಕವಿತಾಶಕ್ತಿ, ಹರಿದಾಸಕೂಟವನ್ನು ಪೋಷಿಸಿ ಬೆಳೆಸುವ ಹರಿಭಕ್ತಿ, ವಾದಿ-ಪ್ರತಿವಾದಿ ಮಂಡನ-ಖಂಡನ, ಸಮಾಜ ಸುಧಾರಣಾ ಮನೋಧರ್ಮದಿಂದ, ಅವರು ಪ್ರಗಲ್ಭ ವಿದ್ವಾಂಸರಾಗಿದ್ದರು.[50] ಜನಸಂಘಟಕರು ಹಾಗೂ ಪ್ರಸಾದಿತ ಕವಿ(ಸಂಸ್ಕೃತ-ಕನ್ನಡಗಳೆರಡರಲ್ಲೂ), ಮಧ್ವನಿಷ್ಠರು. ಕೆಲವಾರು ಅಂಶಗಳಲ್ಲಿ ಇವರ ಸಾಧನೆಯ ವಿಹಂಗಮ ನೋಟ ನೀಡಬಹುದೆನ್ನಿಸುತ್ತದೆ :

ಸಂಸ್ಕೃತ-ಕನ್ನಡದಲ್ಲಿರುವ ಪ್ರೌಢಿಮೆ ಇವರ ಕೃತಿಗಳ ಅವಲೋಕನದಿಂದಲೆ ಕಂಡು ಬರುತ್ತದೆ. ಸುಮಾರು ೧೦೫ ಕೃತಿ ರಚನೆ ಮಾಡಿರುವರೆನ್ನಲಾಗಿವೆ.[51] ಅವುಗಳಲ್ಲಿ ಹೆಸರಿಸುವಂಥವು : ಸಂಸ್ಕೃತ ಗ್ರಂಥಗಳು : ಯುಕ್ತಿ ಮಲ್ಲಿಕಾ, ರುಕ್ಮಿಣೀಶ ವಿಜಯ (ಕಾವ್ಯ) ವೃತ್ತಸಂಗ್ರಹ, ವ್ಯಾಖ್ಯಾನ-ಟೀಕೆಗಳು, ನ್ಯಾಯ, ಸುಧಾಕ್ಕೆ ಬರೆದಿರುವ ಗುರ್ವರ್ಥ ಟೀಕೆ. ತತ್ವ ಪ್ರಕಾಶಿಕಾ ಗುರ್ವರ್ಥದೀಪಿಕಾ : ಈಶಾವಾಸ್ಯಕೇನ ತೈತ್ತಿರೀಯ ಉಪನಿಷತ್ ಬಗ್ಗೆ ಬರೆದಿರುವ ವ್ಯಾಖ್ಯಾನ, ಮಹಾಭಾರತಕ್ಕೆ ಬರೆದ "ಲಕ್ಷಾಭರಣ" ಟೀಕೆ[52]. ಕನ್ನಡದಲ್ಲಿಯಂತೂ ವಾದಿರಾಜರು ಕವಿಯಾಗಿ, ಕೀರ್ತನಕಾರರಾಗಿ, ಮಹಾಕಾವ್ಯ ರಚಿಸಬಲ್ಲ ಮಹಾಕವಿಯಾಗಿಯೂ ಮೆರೆದಿದ್ದಾರೆ. ಅವರ ಅನೇಕ ಕೀರ್ತನೆಗಳು, ಅವರ ಅಡುನುಡಿಯಾದ ತುಳುವಿನಲ್ಲೂ ಇವೆ.[53] ವಾದಿರಾಜರ ಕನ್ನಡ ಕೃತಿಗಳನ್ನು ಶಾಸ್ತ್ರ, ಸಾಹಿತ್ಯ ಕೃತಿ, ಸ್ತೋತ್ರಗಳೆಂದು ಮೂರು ವಿಭಾಗ ಮಾಡಿ ತಿಳಿಯಬಹುದು. ಶಾಸ್ತ್ರ ಗ್ರಂಥಗಳೆ ಹದಿನೇಳು. ಇವೆಲ್ಲ ವ್ಯಾಖ್ಯಾನ-ವಾದ ರೂಪದಲ್ಲಿರುವಂಥವು. ದ್ವೈತಮತದ ತತ್ವ ಪ್ರಮೇಯಗಳನ್ನು ತಿಳಿಸುವ ಗ್ರಂಥಗಳು, "ತತ್ವಮಸಿ" ಮುಂತಾದುವುಗಳ ವ್ಯಾಖ್ಯಾನ, ಹೀಗೆ ವಾದಿರಾಜರ ವಿದ್ವತ್ತು ಹಲವಾರು ಶಾಖೆ

ಗಳಲ್ಲಿ ವಿಜ್ರುಂಭಿಸಿದೆ. ಮಹಾಭಾರತಕ್ಕೆ ಅವರು ರಚಿಸಿರುವ ವ್ಯಾಖ್ಯಾನ ಮಹಾಭಾರತ ಪಾಠ ನಿರ್ಣಯಕ್ಕೆ (ದಾಕ್ಷಿಣಾತ್ಯ) ಕೂಡ ತುಂಬ ಸಹಾಯಕ ಆಗಿದೆ ; ಇವಲ್ಲದೆ ಮಧ್ವಾಚಾರ್ಯರು ಬರೆದಿರುವ "ಮಹಾಭಾರತ ತಾತ್ಪರ್ಯನಿರ್ಣಯ" ಗ್ರಂಥಕ್ಕೆ "ಭಾವ ಪ್ರಕಾಶಿಕಾ" ಎಂಬ ವ್ಯಾಖ್ಯಾನವನ್ನು ರಚಿಸಿದ್ದಾರೆ.

ವಾದಿರಾಜರ ಕಾವ್ಯಸಂಪತ್ತಿ "ರುಕ್ಮಿಣೀಶ ವಿಜಯ"ದಲ್ಲಿ ಕಾಣಬಹುದಾಗಿದೆ. ಹದಿನೆಂಟು ದಿನಗಳಲ್ಲಿ ಹದಿನೆಂಟು ಸರ್ಗದ ಈ ಕಾವ್ಯವನ್ನು ಪುಣೆಯಲ್ಲಿ ವಿರಚಿಸಿದರೆಂದು ಹೇಳಲಾಗುತ್ತದೆ. ಅಲ್ಲಿಯ ಸದಸ್ಸಿನಲ್ಲಿ ಮಾಘ ಕವಿಯ 'ಶಿಶುಪಾಲವಧೆ'ವೆ ಶ್ರೇಷ್ಠ ಕಾವ್ಯವೆಂದು ನಿರ್ಣಯ ಆಗುವಾಗ ವಾದಿರಾಜರು ಈ ಮಹಾಕಾವ್ಯವನ್ನು ರಚಿಸಿ ವಿದ್ವನ್ಮಾನ್ಯರಾದರೆಂದು ಅವರ ಚರಿತ್ರೆಯಲ್ಲಿ ಬಂದಿದೆ. ಇದಲ್ಲದೆ ತಾವು ಸಂಚಾರ ಮಾಡಿದ ತೀರ್ಥಕ್ಷೇತ್ರ, ಉತ್ತರ-ದಕ್ಷಿಣ ಕನ್ನಡ ಜಿಲ್ಲೆಗಳ ದಿವ್ಯ ಕ್ಷೇತ್ರ, ಭಾರತದ ಪ್ರಮುಖ ಕ್ಷೇತ್ರಗಳ ವರ್ಣನೆಯೂ ಇರುವ ಕೃತಿಯೊಂದನ್ನು ವಾದಿರಾಜರು ರಚಿಸಿ ರಚಿಸಿ ಅದಕ್ಕೆ "ತೀರ್ಥಪ್ರಬಂಧ"ವೆಂಬ ಶೀರ್ಷಿಕೆ ನೀಡಿದ್ದಾರೆ.

ಕನ್ನಡದಲ್ಲಿಯಾದರೂ ವಾದಿರಾಜರ "ವೈಕುಂಠ ವರ್ಣನೆ", "ಲಕ್ಷ್ಮೀಶೋಭಾನೆ" ಕೀಚಕನ ವಧೆ ಕುರಿತ "ಭೀಮಸೇನ ಕಾಮಿನಿಯಾದನು" ಎಂಬ ಕೃತಿ, ಕೀರ್ತನೆ, ಸುಳಾದಿ, ಉಗಾಭೋಗ, ತುಳುಭಾಷೆಯ ದೇವರನಾಮಗಳು, ಅವರ ಸಾಹಿತ್ಯಿಕ ಸಾಧನೆಗೆ ದ್ಯೋತಕಗಳಾಗಿವೆ. ವಾದಿರಾಜರ ಹಾಡುಗಳನ್ನು ಹಿಂದೆ ಮಾಧ್ವರು ಮನೆ ಮನೆಗಳಲ್ಲೂ ಹೇಳಿಕೊಳ್ಳುವ ಪದ್ಧತಿಯಿತ್ತು. ಅವರ ಕವಿತೆಯ ಧಾಟಿ ಜಾನಪದ ಸೊಗಡು, ಕವಿತಾ ಸೌಂದರ್ಯಗಳಿಗೆ ಕೆಲವು ಉದಾಹರಣೆ :

ಡಂಭಾಚಾರಕ್ಕೆ :

ಧರ್ಮಕರ್ಮಂಗಳನು ಡಂಭದಿಂದಲಿ
ಹೆಮ್ಮೆಗಾಗಿಯೆ ಮಾಡಿ ಬಳಲುವ
ನಿರ್ಮಲಾತ್ಮಕ ನಾನು ನಿಂದಿಪೆ
ಬೊಮ್ಮರಕ್ಕಸನಪ್ಪೆ ತುದಿಯಲಿ
ಚಿನ್ಮಯ ಶ್ರೀ ಹಯವದನನ
ಒಮ್ಮೆಯಾದರು ನೆನೆಯದ[54] (ಸುಳಾದಿ)

ಕವಿತಾ ಜಾಣ್ಮೆ ಸಂಕ್ಷಿಪ್ತತೆಯಲ್ಲಿ ಹಿರಿದರ್ಥಕ್ಕೆ :

ಕುಂಜರ ವಂದ್ಯನೆ ಬಾರೊ ಮಂಜುಳ ಭಾಷನೆ ಬಾರೊ
ಅಂಜುವ ದಾಸರಿಗೆ ವಜ್ರಪಂಜರಹರಿ ಬಾರೊ
ಸಂಜೆಯ ತೋರಿಸಿ ಧನಂಜಯನ ಕಾಯ್ದುವನೆ ಬಾರೊ ತಿ
ರಂಜನ ಹಯಮುಖನ ರಂಜಿತ ತೋರಿ ಬಾರಯ್ಯ[55]

ದಿಮ್ಮಿ ಸಾಲೆ ರಂಗದಿಮ್ಮಿಸಾಲೆ : ದಿಮ್ಮಿ ಸಾಲನ್ನಿರೊ ಗೋಮಕ್ಕಳೆಲ್ಲ ನೆರೆದು ॥ಪ॥
ಗೋಪಾಂಗನೇರ (ಮೇಲೆ) ಒಪ್ಪಿ ಭಸ್ಮ ಸೂಸುತ ॥ಅ ಪ॥
ಶಂಖನಾದ ಕೊಳಲು ಭೇರಿ ಘೋಂಕಿದಿ ಪಂಚಮಹಾವಾದ್ಯದಿ
ಆಂಕವತ್ಸಲನ ನಿರಾತಂಕದಿಂದ (ಹಿಡಿವ) ಬನ್ನಿ........[66]

ಎರಳೆಗಣ್ಣಿನ ಬಾಲೇರು ಹರುಷದಿಂದ ಬಂದು ನಿಂತು
ವರದ ಕೇಶವನ ಮೇಲೆ ಪರಿದು ಸೂಸಿ ಭಸ್ಮವ॥

**ಈಶ್ವರನ ಸ್ತುತಿ :**

ಧವಳ ಗಂಗೆಯ ಗಂಗಾಧರ ಮಹಲಿಂಗ ಮಾ—
ಧವನ ತೋರಿಸೈಯಾ ಗುರುಕುಲೋತ್ತುಂಗೆ

........
ಚೆನ್ನ ಪ್ರಸನ್ನ ಶ್ರೀ ಹಯವದನನ್ನ
ಅನುದಿನ ನೆನೆವಂತೆ ಮಾಡೊ ಏನೆನ್ನ
ಅನ್ಯರನರಿಯೆನೊ ಗುರುವೆಂಬ ನಿನ್ನ
ಇನ್ನಾದರು ಹರಿಯ ತೋರೊ ಮುಕ್ಕಣ್ಣ[67] ॥

ಇದರೊಂದಿಗೆ, ಬೇಲೂರಿನ ಶ್ರೀ ವೈಕುಂಠದಾಸರನ್ನು ಹೊಗಳುವ ಕೀರ್ತನ, ''ಸುವ್ವಿ ಸುವ್ವಿ ನಮ್ಮ ಶ್ರೀರಮಣಗೆ ಸುವ್ವಿ''—ಎಂಬ ತ್ರಿಪದಿಗಳು, ಸ್ವಪ್ನಪದ, (ಷಟ್ಪದಿ) ಶ್ರೀರಂಗನಾಥಸ್ವಾಮಿ ಕುದುರೆಯೇರಿ ಬರುವ ವೈಹಾಳಿಯ ವರ್ಣನೆಯ ವಿವರ, ದೇವರ ನೈವೇದ್ಯಕ್ಕೆ ಜನ ತಂದೊಪ್ಪಿಸುತ್ತಿದ್ದ ಪದಾರ್ಥಗಳ ಪಟ್ಟಿಯನ್ನೂ ವಾದಿರಾಜರ ಕಣ್ಣು ಗಮನಿಸದೆ ಇಲ್ಲ. ಅದು ಕವಿಕಣ್ಣು, ಹಾಗೂ ರಸಹೃದಯಿಯ ಕಣ್ಣು :

ಹಚ್ಚನೆ ಹೆಸರು ಬೇಳೆ ಹಾಲು ಕೆನೆಗಳು
ಮುಟ್ಟಿತಂದ ಕೆನೆಮೊಸರು ಮೀಸಲು ಬೆಣ್ಣೆಯು
ಅಚ್ಚತುಪ್ಪದಿ ಪಕ್ವವಾದ ಅತಿರಸ ಹುಗ್ಗಿಗಳು
ಮೆಚ್ಚಿ ಉಂಡು ಪಾನಕ ನೀರುಮಜ್ಜಿಗೆಗಳು ॥

ಇಲ್ಲಿ ಎಲ್ಲವೂ ಮನದಲ್ಲಿ ಹಾಗೇ ಉಳಿದು ನಿಲ್ಲುತ್ತದೆ :

ಈಶ್ವರನು ಶ್ರೀಹರಿಯ ಮೋಹಿನೀ ರೂಪವನ್ನು ಕಂಡು ಮರುಳಾಗುವ ಪ್ರಸಂಗ ಚಿತ್ರಿಸುವ ಒಂದು ಕೀರ್ತನೆ, ಅವರ ನಿರೂಪಣಾ ನೈಪುಣ್ಯಕ್ಕೆ ಸಾಕ್ಷಿ :

ತೆಂಗಿನ ತಿಳಿಗೊಳ ನಿಂಬೆ ಕಿತ್ತಲೆ ಬಾಳೆ
ಹೊಂಬಾಳೆ ಅಡಿಕೆ ಬನಗಳು
ಹೊಂಬಾಳೆ ಅಡಿಕೆ ಬನದೊಳಗಾಡುವ
ರಂಭೆಯ ಕಂಡು ಹರಮರುಳಾದ.......

ಅಪ್ಪ್ಯಾಲೆ ಆಡೋಳು ಒಮ್ಮೊಮ್ಮೆ ನೋಡೋಳು
ತನ್ನೊಳಗೆ ತಾನು ನಗುವೋಳು
....... ಬೊಮ್ಮನ ಮಗನ ಮರುಳು ಮಾಡಿನಡೆದಳು

ಎಂಬಲ್ಲಿ ವಾದಿರಾಜರ ಕವಿಹೃದಯ, ಜಾನಪದ ಅಭಿವ್ಯಕ್ತಿ, ಉತ್ತರ ಕನ್ನಡ ಜಿಲ್ಲೆಯ ಸಹಜ ವರ್ಣನೆ ಎಲ್ಲ ಮಡುಗಟ್ಟಿ ನಿಲ್ಲುತ್ತವೆ. ವಾದಿರಾಜರ ಕೃತಿಗಳಲ್ಲಿ ವಿಶೇಷವೆಂದರೆ, ಅವರ ಲೋಕಾನುಭವ ಕುರಿತ ನುಡಿಮುತ್ತುಗಳು. ಇನ್ನು ಮಧ್ವತತ್ತ್ವ, ತಾತ್ತ್ವಿಕ ಮೌಲ್ಯವನ್ನಂತೂ ಅವರ ಅನೇಕ ಕೃತಿಗಳಲ್ಲಿ ಕಾಣುತ್ತೇವೆ.

ಹರಿನಿರ್ಮಾಲ್ಯವ ಶಿರದಿ ಧರಿಸುತಿರು
ಹರಿನೈವೇದ್ಯವನೆ ಭುಂಜಿಸುತಿರು
ಇರುಳುಹಗಲು ಹರಿಸ್ಮರಣೆಯ ಬಿಡದಿರುದುರುಳರ ಕೂಡದಿರೊ
ಹರಿಪದ ತೀರ್ಥದ ನೇಮವ ಬಿಡದಿರು
ಹರಿಪರದೇವತೆ ಎಂದರುಹುತಲಿರು
ಗುರುಮುಖದಿಂದ ಸಚ್ಛಾಸ್ತ್ರ ಪುರಾಣವ ನಿರುತದಿ ಕೇಳು ॥

ಇದು ಅವರ ಹರಿಮತ ಪಾರಮ್ಯಕ್ಕೆ ಸಣ್ಣ ಉದಾಹರಣೆಯಷ್ಟೆ. ವಾದಿರಾಜರ ವಾಗ್ವಿಲಾಸಕ್ಕೆ ಅವರೇ ಸಾಟಿ. ಹನುಮಂತ[33] ಶರಧಿದಾಟಿ ಲಂಕಾದಹನ ಗೈದ ಸುಂದರಕಾಂಡ ನಿರೂಪಣೆ, ವಾದಿರಾಜರ ಕಥನ ಕವನ ಕುಶಲತೆಯನ್ನು ತೋರುತ್ತದೆ. ಲೌಕಿಕದ ಬಹುಮುಖ್ಯವಾದ ಹಣದ ಗುಣವನ್ನೂ ಇವರು ವಿಚಾರಿಸುತ್ತಾರೆ :

ಹಣವೇ ನಿನ್ನಯ ಗುಣವನಿತು ಬಣ್ಣಿಪೆನಯ್ಯ ॥ ಪ ॥

ಹಣವಿಲ್ಲದವನೊಬ್ಬ ಹೆಣಕಿಂತ ಕಡೆಯಯ್ಯ ॥ಅ. ಪ॥

ಹಣವನ್ನೂ ಎಲ್ಲರನ್ನೂ ಮಾಡಿಸುತ್ತದೆ, ಎಲ್ಲವನ್ನೂ ಮರೆಸುತ್ತದೆ. ಕುಲೇಷ್ಟರನ್ನು ತೋರಿಸಬಲ್ಲುದು. "ಸುರವರಿಗೆ ಶ್ರೇಷ್ಠನರನೆನಿಸುವಿ, ಅರಿಯದ ಶುಂಠನ ಅರಿತವನೆನಿಸುವಿ" ಎಂಬಲ್ಲಿ ಭರ್ತೃಹರಿಯ ಸುಪ್ರಸಿದ್ಧ ನುಡಿ "ಸರ್ವೇ ಗುಣಾಃ ಕಾಂಚನ ಮಾಶ್ರಯಂತಿ" ನೆನಪಾಗುತ್ತದೆ. ಸಹನೆ, ತಾಳ್ಮೆಯ ಬೆಲೆ ವಾದಿರಾಜರು ತುಂಬ ಆಳವಾಗಿ

ಬಲ್ಲರೆನ್ನಲು, ಪ್ರಸಿದ್ಧವಾದ ಕೀರ್ತನೆ "ತಾಳುವಿಕೆಗಿಂತ ತಪವು ಇಲ್ಲ. ಕೇಳಬಲ್ಲವರಿಗೆ ಹೇಳುವೆನು ಸೊಲ್ಲ" ಸಾಕ್ಷಿ. ಸಂಯಮವಾದ ತಪಸ್ಸೆ, ದೇಹದಂಡನೆಯಿಂದ ಕೇಡು, "ನಗುವವರ ಮುಂದೆ ಮುಗ್ಗರಿಸದೆ ತಾಳು", ಎನ್ನುತ್ತ "ಉಕ್ಕೊ ಹಾಲಿಗೆ ನೀರ ನಿಕ್ಕುವಂದದಿ ತಾಳು" ಎಂಬ ದಿನನಿತ್ಯದ ಪರಿಯನ್ನೂ ಹೇಳಿ ತಿಳಿವನ್ನು ಮೊಗೆಮೊಗೆದು ನೀಡುತ್ತಾರೆ. ಅವರ ಲೋಕಾನುಭವಕ್ಕೆ ಅನೇಕ ಸೂಕ್ತಿಗಳಂಥ ಮಾತುಗಳನ್ನು ಉದಹರಿಸಬಹುದು "ಉಂಡು ಸುಖಿ ಅಲ್ಲ, ಉಟ್ಟುತೊಟ್ಟು ಪರಿಣಾಮ ಇಲ್ಲ", "ದಂಡಂನಾಯಿಯಂತೆ ಮನೆ ಮನೆಗಳ ತಿರುಗಿ ಕೆಟ್ಟ", "ತಾಯಿ ಮಾರಿ ತೊತ್ತ ಕೊಂಬ ಪಾಮರ", "ಡಿಳ್ಳಿ ರಾಯನ ಕಂಡು ಪುಲ್ಲಿಗೆಯ ಬೇಡುವರೆ?", "ಈ ಗಾಳಿದೀಪ ಸ್ಥಿರವಲ್ಲ", "ಮಾರಿ ಹಬ್ಬದ ಕುರಿಯಂ ತೋರಣವ ಮೆಲುವಂತೆ" ಇಷ್ಟೆಲ್ಲ ವಸ್ತ್ರ ವಂತ್ರ ಮಂಲಂಕಾ ಹಾಕಂವಂಥಂವು, ಕಣ್ಣೆದುರಲ್ಲಿ ನಡೆವಂಥವು, ಅನುಭವ ಆಗುವಂಥವೂ ಕೂಡ. ವಾದಿ ರಾಜರ "ಗುಂಡಕ್ರಿಯೆ" ಅಂಥದೆ ಒಂದು ಸಂಗೀತಪ್ರಧಾನ ಹಾಗೂ ಅನ್ಯಮತ ಖಂಡನ-ಸ್ವಮತ ಮಂಡನ ಪ್ರತಿಪಾದಕ ಕೃತಿ. ಹರಿಸರ್ವೋತ್ತಮಸಾರ, ಸ್ವಪ್ನಪದ ಕೂಡ ಇದೇ ಗುಂಪಿಗೆ ಸೇರುತ್ತವೆ. ಅದ್ವೈತ ಮತ ಖಂಡನೆ ಸಾಕಷ್ಟು ಇದೆ. ಭಕ್ತಿ ಯುತ ಕೀರ್ತನೆಗಳಲ್ಲಿ ತಿರುಪತಿಯ ಶ್ರೀನಿವಾಸನನ್ನು ಕುರಿತ ಸ್ತುತಿ ಎಂಥವರ ಮನ ವನ್ನೂ ಸೆರೆಹಿಡಿಯುವ ಭಾವಗೀತೆಯಾಗಿದೆ.[69]

ವಾದಿರಾಜರ ವಿಶಿಷ್ಟ ರಚನೆಗಳೊಂದಿಗೆ ಅವರಿಂ ಅಂದು-ಐದು ಶತಮಾನಗಳ ಹಿಂದೆ-ನಡೆಸಿದ ಸಮಾಜ ಸುಧಾರಣಾ ಕಾರ್ಯ ಮರೆತರೆ ನಾವು ಹರಿದಾಸ ಆಂದೋಲ ನದ ಗತಿ ಸೂಚಿಸುವುದನ್ನೂ ಮರೆತಂತಾಗುತ್ತದೆ. ಅವರ ಕಾಲದಲ್ಲಿ ಕೋಟಿ-ಕೋಟೀಶ್ವರ ಗಳೆ ಸ್ಮಾರ್ತ ಬ್ರಾಹ್ಮಣರಲ್ಲಿ ನಡೆಯುತ್ತಿದ್ದ ವಿವಾದ ಪರಿಹರಿಸಿ, ಅವರನ್ನು ಮಧ್ವ ಮತಕ್ಕೆ ಸೇರಿಸಿಕೊಂಡುದು,[60] ಉತ್ತರ ಕನ್ನಡ ಜಿಲ್ಲೆಯ ಸೊನಗಾರರನ್ನು (ಸ್ವರ್ಣ ಕಾರರು-ಅಕ್ಕಸಾಲಿಗರು) ತನ್ನ ಶಿಷ್ಯರಾಗಿ ಮಾಡಿಕೊಂಡದ್ದು ಒಂದು ಕ್ರಾಂತಿಯೆ. ಅಲ್ಲಿನ ಗೌಡಸಾರಸ್ವತರನ್ನು ಮಾಧ್ವ ಸಂಪ್ರದಾಯಕ್ಕೆ ಸ್ವೀಕರಿಸಿದುದು ತುಳು ಭಾಷೆ ಯಲ್ಲಿ ಅಸ್ಪೃಶ್ಯ-ಕೀಳು ವರ್ಗದವರೆನ್ನಿಸಿಕೊಂಡವರಿಗಾಗಿ ಅನೇಕ ದೇವರನಾಮ ರಚಿಸಿ ಅವರನ್ನು ಅನುಗ್ರಹಿಸಿದುದು ಇವುಗಳು ವಾದಿರಾಜರ ಕೆಲವು ಸುಧಾರಣೆಗಳು. ಇದಲ್ಲದೆ ಉಡುಪಿಯ ಪರ್ಯಾಯ ಪದ್ಧತಿಯನ್ನು ಆಗ್ಗೆ ಇದ್ದ ಎರಡು ತಿಂಗಳಿಂದ[61] ಎರಡು ವರ್ಷ ಗಳಿಗೊಮ್ಮೆ ಆಗುವಂತೆ ಮಾಡಿ, ಆ ಉಳಿದ ಅವಧಿಯಲ್ಲಿ ವಿಕ್ರಮರಂ ಪ್ರವಾಸ ಮಾಡಿ ಶಿಷ್ಯಾರ್ಜನೆ, ಮಾಡಲವಕಾಶ ನೀಡಿದ್ದು ಒಂದು ಮಾರ್ಪಾಡು, ಉಡುಪಿಯ ಅನಂತೇಶ್ವರ ಮತ್ತು ಚಂದ್ರಮೌಳೀಶ್ವರ ದೇವಾಲಯಗಳ ಆಡಳಿತವರ್ಗದವರಲ್ಲಿದ್ದ ಬಹುಕಾಲದ ವಿವಾದ ಶಾಂತಿಯುತ ರೀತಿಯಲ್ಲಿ ಬಗೆಹರಿಸಿದ್ದು, ಸೋದೆ ಪಾಜಕಕ್ಷೇತ್ರ ಗಳಲ್ಲಿ ಮಧ್ವಾಚಾರ್ಯರ ಪ್ರತಿಮೆ ಪ್ರತಿಷ್ಠಾಪನೆ, ಸೋದೆಯಲ್ಲಿ ಸುಂದರವಾದ ರಥಾ ಕಾರದ ಶಿಲ್ಪವುಳ್ಳ[62] ತ್ರಿವಿಕ್ರಮ ದೇವಾಲಯ ಪ್ರತಿಷ್ಠಾಪನೆ, ಧವಳಗಂಗಾ ಸರಸ್ಸಿನ

ನಿರ್ಮಾಣ, ಹೀಗೆ ಅವರ ಕಾರ್ಯಗಳನೇಕ. ಅಲ್ಲಿ ಧಾರ್ಮಿಕ, ಸಾಮಾಜಿಕ, ಮನೋಧರ್ಮವೆ ಅಲ್ಲದೆ ದೂರದೃಷ್ಟಿಯು ಸುಧಾರಣಾ ಮನೋಧರ್ಮವೂ ಕಾಣುತ್ತದೆ.

ವಾದಿರಾಜರಿಗೆ ಹಯಗ್ರೀವರೊಲಿದಿದ್ದ ಬಗ್ಗೆ ಅನೇಕ ದೃಷ್ಟಾಂತಗಳಿವೆ. ಅದರಲ್ಲಿ ಒಂದು ಪ್ರಚಲಿತ ಆಗಿರುವುದು, ಅವರಿಗೆ ಪ್ರತಿ ದಿನವೂ ಹಯಮುಖರೂಪಿ ದೇವರು ಪ್ರತ್ಯಕ್ಷವಾಗಿ ಅವರು ಅರ್ಪಿಸುತ್ತಿದ್ದ "ಹಯಗ್ರೀವ" (ಕಡಲೆ ಹೂರಣ, ಪ್ರಸಾದ ವನ್ನು ಮೆಲ್ಲುತ್ತಿದ್ದುದು ; ಸ್ವಲ್ಪ ಭಾಗ ಉಳಿಸುತ್ತಿದ್ದುದು ; ಆ ಶೇಷವನ್ನು ಅವರು ಭಕ್ತಿಯಿಂದ ಸೇವಿಸುತ್ತಿದ್ದುದು ಪದ್ಧತಿ. ಒಮ್ಮೆ ಅಡಿಗೆಯವನು ಕಡಲೆ ಹೂರಣದಲ್ಲಿ ವಿಷ ಬೆರಸಲು, ಅಂದು ಹಯಗ್ರೀವನು ವಾದಿರಾಜರಿಗೇನನ್ನೂ ಉಳಿಸದೆ ಎಲ್ಲವನ್ನೂ ಭುಂಜಿಸಿದನು. ಆಗ ಗುರುಗಳು ಕಾರಣವನ್ನು ಕೇಳಿದಾಗ, ನಿಜಾಂಶ ತಿಳಿಯಿತು ಹಾಗೂ ಹಯಗ್ರೀವದೇವರ ಕಂಠದಲ್ಲಿ ಈಗಲೂ ಕಾಣುವ ಕಪ್ಪು ಕಲೆ, ವಿಷಪ್ರಯೋಗ ಆದದ್ದರ ಗುರುತೆಂದು ಸಾರುವ ಕಥೆಯಿದೆ. ವಾದಿರಾಜರು ಆಗ ಉದ್ಯಾವರದ (ಅಗ್ಗಿ ಉದಯಪುರ) ಬಳಿ "ಗುಳ್ಳ"ದ (ಬದನೆಕಾಯಿಯ ಒಂದು ಜಾತಿ) ಕಾಯಿಗಳ ಶಾಖ ವನ್ನು ದೇವರಿಗೆ ಇತ್ತು, ಅನಂತರ ಇಡೀ ಶರೀರವಾವರಿಸಿದ್ದ ನಂಜು ಕಡಿಮೆ ಯಾಯಿತೆಂದೂ ಹೇಳಂತ್ತಾರೆ. ಇಲ್ಲೆಲ್ಲ ಭಕ್ತಿ ಪವಾಡ ಕಂಡು ಬಂದರೂ ವಾದಿರಾಜರಿಗೆ ಜನತೆಯಲ್ಲಿ ಇರುವ ಅಭಿಮಾನ, ಗೌರವ ವ್ಯಕ್ತ ಆಗುತ್ತದೆ.

ವಾದಿರಾಜರು ಉತ್ತಮ ವಾಗ್ಮಿಗಳೆಂದು ಮೊದಲೆ ತಿಳಿಸಿದೆ. ಅವರು ತಮ್ಮ ಸಮಕಾಲೀನರಾಗಲಿ, ಹಿರಿಯರಾಗಲಿ, ಅನೇಕ ವಿದ್ವಾಂಸರೊಡನೆ ಶಾಸ್ತ್ರ ಚರ್ಚೆ ನಡೆಸಿದ್ದುಂಟು. ವ್ಯಾಸರಾಜರ ನ್ಯಾಯಾಮೃತಕ್ಕೆ ವ್ಯಾಖ್ಯಾನ ಬರೆದ (ಕಂಟಕೋದ್ಧಾರಕ) ಪಾಂಡುರಂಗಿ ಆನಂದಭಟ್ಟನೆಂಬಾತ ಇವರ ಸಮಕಾಲೀನ. ಒಮ್ಮೆ ಗುರುಗಳು ಪರ್ಯಾಯದ ಮುಹೂರ್ತಕ್ಕೆ ಹೋಗುವ ವೇಳೆಗೆ ಸರಿಯಾಗಿ ಅದ್ವೈತ ವಿದ್ವಾಂಸ ರೊಬ್ಬರು ವಾದಕ್ಕೆ ಆಹ್ವಾನಿಸಲು, ವಾದಿರಾಜರು ಆನಂದಭಟ್ಟರನ್ನು ತನ್ನ ಪರವಾಗಿ ಕಳಿಸಿದರೆಂದೂ ಭಟ್ಟರು ಜಯಶಾಲಿಯಾಗಿ ಬಂದಾಗ ಅವರಿಗೆ ಶ್ರೀಕೃಷ್ಣನ ಪೂಜೆ ಮಾಡುವ ಅಪೂರ್ವ ಅವಕಾಶವಿತ್ತುದೆ ಅಲ್ಲದೆ, ಹಯಗ್ರೀವ ದೇವರ ವಿಗ್ರಹವನ್ನು ಕೊಟ್ಟರೆಂದು "ಶ್ರೀ ವಾದಿರಾಜ ಗುರುವರ ಚರಿತೆ"ದಲ್ಲಿ ಉಲ್ಲೇಖಿಸಿದೆ. ಆನಂದ ಭಟ್ಟರು ಅನಂತರ ತಮಗೆ ಆದ ಗಂಡು ಮಗುವಿಗೆ ಗುರುಗಳ ಸ್ಮರಣೆಗಾಗಿ "ಗುರುರಾಜ" ನೆಂದು ಹೆಸರಿಟ್ಟರಂತೆ.

ವಾದಿರಾಜರು ರಚಿಸಿರುವ ಕನ್ನಡ ಕೃತಿಗಳೆ ಒಂದು ಸಂಶೋಧನ ನಿಬಂಧದ ಸಾಮಗ್ರಿಗೆ ಆಕರವಾಗಬಲ್ಲುವೆನ್ನಿಸುತ್ತದೆ. ಇನ್ನೂ ಅವರ ದೇವರನಾಮಗಳು, ಸುಳಾದಿ-ಇತ್ಯಾದಿ ರಚನೆ, ಎಲ್ಲದರಲ್ಲೂ ಅವರ ವಾಗ್ವೈಖರಿ, ಉಪಮೆ, ರೂಪಕ, ಕನ್ನಡಜ್ಞಾನ, ಸಾಮಾನ್ಯರಿಗೂ ಅರ್ಥ ಆಗುವಂತೆ ಬರೆಯಬಲ್ಲಂತೆಯೆ ಸಂಸ್ಕೃತದಲ್ಲಿಯೂ "ರುಕ್ಮಿಣೀಶ ವಿಜಯ" ದಂಥ ಮಹಾಕಾವ್ಯ ರಚಿಸಬಲ್ಲ ಸಾಮರ್ಥ್ಯ, 'ಲಕ್ಷ್ಮೀಶೋಭಾನೆ' ಯಂಥ ಮಂಗಳಕರ ಗೀತಗಳು, ಸಮಾಜ ಸುಧಾರಣಾ ಮನೋ

ಧರ್ಮ, ಅವರಲ್ಲಿದ್ದ ಅಪಾರ ಕರುಣೆ,[63] ತಾಳ್ಮೆ, ದೈವಭಕ್ತಿ, ಎಲ್ಲವೂ ಒಂದನ್ನೊಂದು ಸ್ಪರ್ಧಿಸುವಂತಿವೆ. ಅವೆಲ್ಲವೂ ಮೂರ್ತೀಭವಿಸಿ, ವಾಗ್ಮಿತೆಯ ವಿಶೇಷ[64] ಪಡೆದವರು 'ವಾದಿರಾಜ'ರೆನ್ನಬಹುದು. ಅವರದ್ದೆ ಆದ ಒಂದು ಕೃತಿಯೊಂದಿಗೆ ಈ ವಿಹಂಗಮ ನೋಟಕ್ಕೆ ಮಂಗಳವನ್ನು ಹಾಡಬಹುದೆನ್ನಿಸುತ್ತದೆ :

ಕುದುರೆ ಬಂದಿದೆ ಚೆಲುವ
ಕುದುರೆ ಬಂದಿದೆ ॥ ಪ ॥

ಕುದುರೆ ಬಂದಿದೆ ವಾದಿರಾಜಗೆ
ಮುದದಿ ವಿಜ್ಞಾನ ಭಕುತಿ ಕೊಡುವ ॥ ಅ.ಪ. ॥
ಹಿಂಗಾಲಿಂ ರಕ್ಕಸರ ಒದೆವ ಕುದುರೆ
ಮುಂಗಾಲು ಕೆದರಿ ಬಾಲವ ಬೀಸಿ
ತಗ್ಗಿಸಿ ತಲೆಯ ಅಡಿಗಡಿಗೆ
ಜಿಗಿದುಹಾರಿ ಹುಂಕರಿಸುವ[65]

ಬೊಮ್ಮನಿಮ್ಮ ಹೆಮ್ಮೆಗಿಮ್ಮೆ ಸುಮ್ಮನೆ ಕಮ್ಮುಕಿಮ್ಮನ್ನಬೇಡ (ಸುಳಾದಿ)
ರಮ್ಮ ರಮೇಶ ಹಯವದನ ಅಮ್ಮಮ್ಮ ನಿಮ್ಮ ಗುರುವಲ್ಲದೆ
ಹಮ್ಮು ಉಮೇಶ ನಿಮಗೆ ಪರಬೊಮ್ಮವಿದಿರಮ್ಮದಯ್ಯ
ನಮ್ಮ ಇವನ ಧರ್ಮದಿಂದ ಭಸುಮಾಸುರನ ಗೆಲ್ಲಿಯ
ತಮ್ಮ ತಮ್ಮ ಸೀಮೆಯೊಳ್ಳಿಕ್ಕ ಸುಮ್ಮನೆಸರಸಮ್ಮೋಹವನು
ಕ್ರಮ ಕ್ರಮದಿಂದಾಳು ಹರಿಗೆ ಸಮರಾದವರ ಮಹಿಯೊಳು ಕಾಣೆನು
ಸನ್ಮುನೀಂದ್ರರಮರ ಸ್ತೋಮದಿ ಮನಸವರಿತು ಹರಿಯ ಸರ್ವೋ
ತ್ತಮ್ಮ ಮಹಾಮಹಿಮೆನೆಂಬುದನೊಳ್ಳನಿವಿಟ್ಟು ನಮಿಸರೆ
ಆಮ್ನಾಯಣಾರ್ಥದ ಸೊಮ್ಮು ನಮ್ಮ ಕಾಮನಯ್ಯನೆಂಬುದು
ನಿರ್ಮಲ ಮಾತ್ಸರ್ಯವಿರ್ದ ಮಿಕ್ಕಿನ ದುರ್ಮರ ಭ್ರಮೆಯೆನುತ.*

ಇಲ್ಲಿಯ ಕನ್ನಡ ಗಮನಾರ್ಹ.

**ಶ್ರೀರಾಘವೇಂದ್ರ ತೀರ್ಥರು ಹಾಗೂ ಅವರ ಬೃಂದಾವನ ಕ್ಷೇತ್ರಸ್ಫೂರ್ತಿ : (ಅಂಕಿತ : ಧೀರವೇಣುಗೋಪಾಲ, ೧೭ ಕ್ರಿ.ಶ.)**

ಮಧ್ವಾಚಾರ್ಯರ ಶಿಷ್ಯರಲ್ಲಿ ಜನಪ್ರಿಯ ಗುರುವರ್ಯರು ಇವರೇ. ದ್ವೈತ ಸಿದ್ಧಾಂತವನ್ನು ಹಾಗೂ ಹರಿಸರ್ವೋತ್ತಮತೆಯ ಸಮರ್ಥ ಪ್ರತಿಪಾದನೆ ಇವರ ಪ್ರಮುಖ ಧ್ಯೇಯವೆ ಆದರೂ ತಮ್ಮ ಅಪಾರ ಕರುಣೆ, ವಾತ್ಸಲ್ಯಗಳಿಂದ ಎಲ್ಲರಿಗೂ ಪೂಜನೀಯರಾಗಿದ್ದಾರೆ. ವಾದಿಗಳ ರಾಜರು ವಾದಿರಾಜರಾದರೆ, ಗುರುಗಳ ರಾಜರು ಗುರುರಾಜರು.

ಶ್ರೀರಾಘವೇಂದ್ರತೀರ್ಥರು ಹರಿದಾಸರೆಂದು ಪ್ರಸಿದ್ಧರಾಗದಿದ್ದರೂ ಅವರ ಬೃಂದಾವನ ಸ್ಫೂರ್ತಿ ದಾಸಕೂಟದ ಚೈತನ್ಯದ ನೆಲೆಯಾಯಿತು. ದಾಸಕೂಟದ ಪಂಥ ಮುಂದುವರಿಯಿತು. ವಿಜಯನಗರಸಾಮ್ರಾಜ್ಯ ಒಡೆದುಹೋದ ಮೇಲೆ ಸ.ಮಾರು ಒಂದು ಒಂದೂವರೆ ಶತಮಾನಕಾಲ ಸ್ಥಗಿತಗೊಂಡ ವ್ಯಾಸಕೂಟ ವ್ಯಾಸಕೂಟ ಪರಂಪರೆ (ಈ ನಡುವಿನ ಅವಧಿಯಲ್ಲಿ ಆಗಿ ಹೋದ ಒಬ್ಬರೇ ಹರಿದಾಸರೆಂದರೆ, ಹರಿದಾಸದೀಕ್ಷೆ ತೆಗೆದು ಕೊಂಡಿದ್ದ ಬಿಜಾಪುರ ಜಿಲ್ಲೆಯ ಕಾಖಂಡಿಕಿಯ ಮಹೀಪತಿದಾಸರು) ಮತ್ತೆ ಮುಂದು ವರಿಯಲು ಚೇತನ ಬಿಂದು ಆದದ್ದು ರಾಘವೇಂದ್ರತೀರ್ಥರೇ. ಇವರು ಬೃಂದಾವನ ಸ್ಫೂರ್ತಿಯ ಸುಮಾರು ೪೦ ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ದ್ವೈತ ಸಿದ್ಧಾಂತ ಪ್ರವರ್ತಕರಾದ ಮಧ್ವಾಚಾರ್ಯರು, ಜಯತೀರ್ಥರು ಮತ್ತು ವ್ಯಾಸತೀರ್ಥರ ಬಿರುದುಗ್ರಂಥಗಳ ಮೇಲಿನ ಟಿಪ್ಪಣಿಗಳೆ ಹೆಚ್ಚು. ಇವರಿಗೆ ''ಟಿಪ್ಪಣಿಯ ಆಚಾರ್ಯ''ರೆಂದೇ ಹೇಳುವುದನ್ನು ಹೇಳುವ ರೀತಿಯಲ್ಲಿ ಎಷ್ಟೊ ಅಷ್ಟೆ, ಹೇಳಲು ರಾಘವೇಂದ್ರರು ಮಾತ್ರ ಬಲ್ಲರೆಂಬುದು ಅನೇಕ ವಿದ್ವಾಂಸರ ಅಭಿಮತ.೪೫ ಇದರ ಜತೆಗೆ ಜಯ ತೀರ್ಥರ ''ನ್ಯಾಯಸುಧಾ''ಕ್ಕೆ ''ಪರಿಮಳ''ವೆಂಬ ಟಿಪ್ಪಣಿ ಬರೆದು ''ಪರಿಮಳಾಚಾರ್ಯ'' ರೆಂದೂ ಹೆಸರಾಗಿದ್ದಾರೆ ಹಾಗೂ ಶ್ರೀರಾಘವೇಂದ್ರರು ಅವರ ಹಿರಿಯ ಪರಂಪರೆ ಯಿಂದಲೂ ವೀಣಾವಿದ್ವಾಂಸರೆಂದೇ ಪ್ರಸಿದ್ಧ.

ಶ್ರೀರಾಘವೇಂದ್ರತೀರ್ಥರ ಪೂರ್ವಾಶ್ರಮದ ಹೆಸರು ವೆಂಕಟನಾಥರೆಂದು. ವೆಂಕಟಭಟ್ಟರೆಂದೆ ಕರೆಯುತ್ತಿದ್ದದ್ದು. ತಂದೆ ತಿಮ್ಮಣ್ಣ ಭಟ್ಟರು, ತಾಯಿ ಗೋಪಾಂಬೆ. ತಿರುಪತಿಯ ಶ್ರೀನಿವಾಸನ ವರಪ್ರಸಾದದಿಂದ ಜನಿಸಿದ ಇವರಿಗೆ ತಂದೆ ತಾಯಿ ಅದೇ ಹೆಸರಿಸಿದರು (ವೆಂಕಟನಾಥ). ಬಾಲ್ಯದಲ್ಲಿ ತಂದೆ ತಾಯಿಗಳನ್ನು ಕಳೆದುಕೊಂಡ ವೆಂಕಟನಾಥರು, ಅಣ್ಣ ಗುರುರಾಜನ ಹತ್ತಿರ ಕೆಲವು ಕಾಲವಿದ್ದು, ತಮ್ಮ ಬಂಧು ಗಳಾದ ಶ್ರೀ ಲಕ್ಷ್ಮೀನರಸಿಂಹಾಚಾರ್ಯರೆಂಬುವರ ಬಳಿ ವಿದ್ಯಾಭ್ಯಾಸ ನಡೆಸಿದರು. ಮದುವೆಯೂ ಆಯಿತು. ಅನಂತರ ಉನ್ನತ ವ್ಯಾಸಂಗಕ್ಕಾಗಿ ಕುಂಭಕೋಣದಲ್ಲಿದ್ದ (ಮೂಲ ಸಂಸ್ಥಾನ ಆಗ ಅಲ್ಲೆ ಇದ್ದದ್ದು) ಶ್ರೀವಿಜಯೀಂದ್ರರ ಶಿಷ್ಯರಾದ ಶ್ರೀಸುಧೀಂದ್ರತೀರ್ಥರಲ್ಲಿಗೆ ಹೋದರು. ಸುಧೀಂದ್ರರಿಗೂ ಬೇಕಾಗಿದ್ದುದು ಇದೇ. ವೆಂಕಟನಾಥರು ಪ್ರಹ್ಲಾದನ ಅಂಶ ಹಾಗೂ ಅವರ ಅವತಾರದ ಉದ್ದೇಶವೆ ಸಂನ್ಯಾಸ- ಜನತೆಯ ಸೇವೆ ಎಂದು ಗುರುಗಳು ಅರಿತಿದ್ದರು. ಹಾಗೂ ವೆಂಕಟನಾಥರೆ ತಮ್ಮ ಉತ್ತರಾಧಿಕಾರಿಯಾಗಲೆಂದು ಅವರ ಇಚ್ಛೆ. ಈ ನಡುವೆ ತಂಜಾವೂರಿನ ರಾಜ ರಘುನಾಥ ಭೂಪಾಲನ ಆಸ್ಥಾನದಲ್ಲಿ ನಡೆದ ವಿದ್ವತ್ಸಭೆಯಲ್ಲಿ ವೆಂಕಟಭಟ್ಟರು, ಯಜ್ಞ ನಾರಾಯಣನೆಂಬ ಅದ್ವೈತಿಯನ್ನು ವಾದದಲ್ಲಿ ಸೋಲಿಸಿದ್ದು, ಅವರು ಉಲ್ಲೇಖಿಸಿದ 'ತಪ್ತಮುದ್ರಾಂಕನ' ಗ್ರಂಥ, ತಮ್ಮದೆ ಆದ ವಿಶಿಷ್ಟ ರೀತಿಯಲ್ಲಿ ದ್ವೈತ ಸಿದ್ಧಾಂತ ಪ್ರತಿಪಾದಿಸಿದ ದೃಢತೆ, ಸ್ಪಷ್ಟತೆ, ಖಚಿತ ಜ್ಞಾನ, ಕಂಡು ಸುಧೀಂದ್ರರು ಮಾರು

ಹೋದರು ಅವರ ಮನದಿಚ್ಛೆ, ಮೂಲರಾಮನಲ್ಲಿ ಅನು ನಿತ್ಯಸಲ್ಲಿಸುವ ಪ್ರಾರ್ಥನೆಯೆ ಆಯಿತು.

ಸುಧೀಂದ್ರರು ಒಮ್ಮೆ ವೆಂಕಟಭಟ್ಟರಲ್ಲಿ ತಮ್ಮ ಇಂಗಿತ ತಿಳಿಯಪಡಿಸಿದಾಗ ಆತ ಒಪ್ಪಲಿಲ್ಲ. ತನ್ನ ಮನಃಪರಿಪಾಕ ಸನ್ಯಾಸದೆತ್ತರ ತಲುಪಿಲ್ಲವೆಂದೆ ತಿಳಿಸಿದ. ಆದರೆ, ದೈವೇಚ್ಛೆ! ಮೂಲರಾಮ, ಹಾಗೂ ವಾಗ್ದೇವತೆಯೆ ಕನಸಿನಲ್ಲಿ ಕಾಣಿಸಿಕೊಂಡು, ಸನ್ಯಾಸ ಸ್ವೀಕರಿಸೆಂದು ತಿಳಿಸಿದರೆಂದು ಪ್ರತೀತಿ. ವೆಂಕಟನಾಥರು ಸನ್ಯಾಸಕ್ಕೊಪ್ಪಿದರು. ರಘುನಾಥ ಭೂಪಾಲನ ಆಸ್ಥಾನದಲ್ಲಿ ಸನ್ಯಾಸ ಸ್ವೀಕಾರ ನಡೆದು, ''ಶ್ರೀರಾಘವೇಂದ್ರ''ರೆಂಬ ಆಶ್ರಮನಾಮ ಪಡೆದರು (ಕ್ರಿ. ಶ. ೧೬೨೧) ಕೆಲವೇ ಸಮಯದಲ್ಲಿ ಗುರುಗಳು ವೃಂದಾವನಸ್ಥರಾದ ಪ್ರಯುಕ್ತ, ಶ್ರೀರಾಘವೇಂದ್ರರೇ ಮಠಾಧಿಪತಿಗಳಾದರು.

ಕುಂಭಕೋಣದಿಂದ, ಅಲ್ಲಲ್ಲಿ ಪರ್ಯಟನ–ದ್ವೈತ ಸಿದ್ಧಾಂತ–ಹರಿಭಕ್ತಿ–ಹರಿಸರ್ವೋತ್ತಮತ್ವದ ಪ್ರತಿಪಾದನೆ ನಡೆಸುತ್ತಿರಲು ಶ್ರೀ ರಾಘವೇಂದ್ರರಿಗೆ ದೊರೆತ ಆಪ್ತಶಿಷ್ಯ ಆದವಾನಿಯ ವೆಂಕಣ್ಣ ಪಂತ. ಗುರುಗಳ ಕೃಪೆಯಿಂದ ಅನಕ್ಷರಸ್ಥನಾದ ಆತ ಸ್ಥಳೀಯ ನವಾಬನಾಗಿದ್ದ ಸಿದ್ದೀಮಸೂದಖಾನನ ಖಾಸ ದಿವಾನನಾದ. ರಾಘವೇಂದ್ರರ ತಪಸ್ಸು, ಪರ್ಯಟನ, ಜತೆ ಜತೆಗೇ ಸಾಗಿತು. ಅವರೇ ಇಚ್ಛೆಪಟ್ಟಂತೆ, ಮಂಚಾಲೆಯ ಹಿರಿಮೆಯನ್ನು ಗುರುಗಳಿಂದ ಅರಿತ ವೆಂಕಣ್ಣ, (ಈಗಿನ ಮಂತ್ರಾಲಯವನ್ನು) ರಾಘವೇಂದ್ರರಿಗೆ ದಾನ ಕೊಡಿಸಿದ. ಮಂತ್ರಾಲಯ ಕ್ಷೇತ್ರ ಪರಿಸರ, ತುಂಗಾ ನದಿ ತೀರ, ಶ್ರೀರಾಘವೇಂದ್ರರಿಗೆ ತುಂಬ ಪ್ರಿಯವಾಯಿತು. ಅಲ್ಲೆ ನೆಲಸಿದ ಅವರು ತಮ್ಮ ಅಧಿದೇವತೆಯಾದ ಶ್ರೀನಿವಾಸನನ್ನೂ ಹಾಗೂ ಕ್ಷೇತ್ರ ದೇವತೆಯಾದ ಮಂಚಾಲಮ್ಮನನ್ನೂ ವಿಶೇಷವಾಗಿ ಪೂಜಿಸುತ್ತ, ಹರಿದಾಸಕೂಟಕ್ಕೆ ಸ್ಫೂರ್ತಿ ಕೇಂದ್ರ ಆಗಿ ಮಂತ್ರಾಲಯವನ್ನೂ ಬೆಳಸಿ, ಹರಿಭಕ್ತಿ ಪಂಥವನ್ನು ಸಂಘಟಿಸಿದರು. ಅನಂತರ ಮಂತ್ರಾಲಯದಲ್ಲಿ ಶಾ. ಶ. ೧೫೯೩ (ಕ್ರಿ. ಶ. ೧೬೭೧) ಶ್ರಾವಣ ಬಹುಳ ಬಿದಿಗೆಯ ದಿನ ಸಶರೀರ ವೃಂದಾವನಸ್ಥರಾದರು.

ರಾಘವೇಂದ್ರರ ಜೀವನವಿಡೀ ಪವಾಡವೆ. ಕನಕದಾಸರು ಇನ್ನೊಂದು ಜನ್ಮ ತಳೆದು ಬಂದು, ಮಾನ್ವಿಯಲ್ಲಿ ಶ್ರೀರಾಯರ ಮೂಲಕ ಮುಕ್ತಿ ಪಡೆದರೆಂದೂ ಬಲ್ಲವರು ತಿಳಿಸುತ್ತಾರೆ. ಶ್ರೀವ್ಯಾಸರಾಯರ ಅವತಾರವೆಂದೆ ಶ್ರೀರಾಘವೇಂದ್ರರು ಪ್ರಸಿದ್ಧ. ಶ್ರೀಪಂಚಮುಖಿಯವರು ಹೇಳುವಂತೆ, ''ಶ್ರೀರಾಘವೇಂದ್ರತೀರ್ಥರು ಪುರಂದರದಾಸರ ಗುಂಪಿಗೂ ವಿಜಯದಾಸಾದಿ ಹರಿಭಕ್ತರ ಗುಂಪಿಗೂ ಮಧ್ಯವರ್ತಿಗಳಾಗಿದ್ದು, ಪರಂಪರೆಯಿಂದ ಬಂದ ದಾಸಕೂಟ-ವ್ಯಾಸಕೂಟಗಳ ತಿರುಳನ್ನು ಮುಂದಿನ ಭಕ್ತವೃಂದಕ್ಕೆ ನೀಡುವ ಜೀವನಳಿಕೆಯಂತೆ ಆದರು.[67] ಅವರ ಟೀಕೆ-ಟಿಪ್ಪಣಿಗಳು ವೇದ ವಾಙ್ಮಯ ದ್ವೈತ ವಾಙ್ಮಯಕ್ಕೆ ಸ್ಥಿರಕಾಣಿಕೆ ವ್ಯಾಸಕೂಟ ಪ್ರವರ್ಧನೆಗೆ ಸ್ಫೂರ್ತಿಯಾದರೆ ದಾಸಕೂಟಕ್ಕೆ ಹಾಗೂ ಅನೇಕ ಹರಿದಾಸರಿಗೆ ಅವರ ಬೃಂದಾವನ ಸ್ಫೂರ್ತಿ ನೀಡಿತು.

ಮುಂದಣ ದಾಸಕೂಟದ ವೈಭವ ವಿಜಯದಾಸಾರ್ಯರಿಂದ ಆರಂಭ ಆದದ್ದು. ಹಾಗೂ ಆದರ ಸರ್ವತೋಮುಖರಾದ ಜಾಗೃತಿಗೆ ಕಾರಣರು ಶ್ರೀರಾಯರೇ. ಆ ನಂತರ ಬಂದ ದಾಸ ಪರಂಪರೆಯು ಸೃಷ್ಟಿ ಸಾಂಪ್ರದಾಯಿಕ-ಸುಪ್ರದಾಯ ಭೂಯಿಷ್ಠ ಆದರೂ ಅಲ್ಲಿನ ಆನೇಕ ರಚನೆ ಚರ್ವಿತ ಚರ್ವಣವೆನಿಸಿದರೂ ಹರಿದಾಸ ಆಂದೋಲನ ದೃಷ್ಟಿಯಿಂದ ಈ ಅವಧಿ ಅವಿಸ್ಮರಣೀಯ. ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರಂಥ ಹರಿದಾಸ ಶ್ರೇಷ್ಠರಿಗೆ ಶ್ರೀರಾಘವೇಂದ್ರರೇ ಸ್ಫೂರ್ತಿ ಬಿಂದು. ಶ್ರೀ ಪ್ರಸನ್ನ ವೆಂಕಟ ದಾಸರಂತೂ ತಮ್ಮ ಕೃತಿಗಳಲ್ಲಿ ಶ್ರೀರಾಘವೇಂದ್ರರನ್ನು ಮನ ತುಂಬಿ ಕೊಂಡಾಡಿದ್ದಾರೆ.

ಶ್ರೀ ರಾಘವೇಂದ್ರರ ಕನ್ನಡ ಕೃತಿ ರಚನೆ ದೊರೆತಿರುವುದು ಒಂದೇ, "ಧೀರವೇಣು ಗೋಪಾಲ" ಅಂಕಿತದಲ್ಲಿ ರಚಿಸಿರುವ "ಇಂದು ಎನಗೆ ಗೋವಿಂದ ನಿನ್ನ ಪಾದಾರ ವಿಂದವ ತೋರೋ ಮುಕುಂದನೆ" ಎಂಬ ಕೀರ್ತನೆ. ಈ ಒಂದೇ ಕೃತಿ ಆವರಲ್ಲಿದ್ದ ಭಕ್ತಿ ಭಾವ, ಸಮರ್ಪಣ ಮನೋಭಾವ, ಲೌಕಿಕ ಭಾವನೆಗಳ ತುಮುಲ, ಕನ್ನಡ ದೇಸಿ, (ಗಾಡಿ ಕಾರ ಕೃಷ್ಣ ಬೇಡಿಕೊಂಬೆನೊ ನಿನ್ನ) ಎಲ್ಲದಕ್ಕೂ ನಿದರ್ಶನ. ಅದಕ್ಕಿಂತ ಹೆಚ್ಚು ಎಂದರೆ, ದಾಸಕೂಟ-ವ್ಯಾಸಕೂಟಗಳಿಗೆ ಅವರು ಸ್ಫೂರ್ತಿ ಚೇತನ ಆದದ್ದು.

## ಪ್ರಮುಖ ಹರಿದಾಸರು – ವಿಶಿಷ್ಟ ಕೃತಿಗಳು

ಇಲ್ಲಿನವರೆವಿಗೂ ನಾವು ಗಮನಿಸಿದುದು, ಹರಿದಾಸ ಪರಂಪರೆಗೆ ಪ್ರವರ್ತಕರಾಗಿ, ಸ್ಫೂರ್ತಿದಾಯಕರಾಗಿ, ತಾವೇ ಹರಿದಾಸರಂತೆ ಹಾಡಿ ಕುಣಿದು, ಕೃತಿ ರಚಿಸಿದ ಮಠಾಧೀಶರ ಬಗ್ಗೆ. ಇನ್ನು ಮುಂದೆ ಹರಿದಾಸಪಂಥದ ಪ್ರಮುಖ ಹರಿದಾಸರ ಹಾಗೂ ಅವರ ವಿಶಿಷ್ಟ ರಚನೆಗಳ ಕುರಿತಾದ ಸಂಕ್ಷಿಪ್ತ ಸಮೀಕ್ಷೆ ನಡೆಸಬಹುದೆಂದೆನ್ನಿಸುತ್ತದೆ. ಮನುಷ್ಯನ ಬದುಕು, ನಡೆವಳಿ ಕುರಿತು ರಚಿತವಾದ ಕೃತಿ ಯಾವುದಾದಾಗಲಿ ಕೆಲವರ ಗಮನಕ್ಕಾದರೂ ಪಾತ್ರ ಆಗುತ್ತದೆ. ಆದರೆ ಆ ಸಾಹಿತ್ಯ ಕೃತಿ, ಮಾನವ ಬದುಕಿನ ಶಾಶ್ವತ ಮೌಲ್ಯಗಳಾದ ನೀತಿಯೊ, ಸಮಾಜಧರ್ಮ ಕುರಿತೊ, ಮಾನವ ಕೋಟಿ ನಂಬಿ ರುವ ದೇವರನ್ನು ಕುರಿತೊ, ಈ ಯಾವುದೇ ವಿಚಾರ ಕುರಿತಾದರೂ ಎಲ್ಲರ ಆದರಕ್ಕೂ ಪಾತ್ರ ಆಗುತ್ತದೆ. ಇದನ್ನು ಉತ್ತಮ ಸಾಹಿತ್ಯ, ಗಟ್ಟಿ ಸಾಹಿತ್ಯ ಎನ್ನಬಹುದು. ಸಾಹಿತ್ಯದ ಮೂಲಕ ಸಮಾಜದುನ್ನತಿ, ಉದ್ಧಾರ ಕೇವಲ ಹೇಳಿಕೆ ಮಾತ್ರ ಆಗದೆ. ನಿಜವೆನ್ನಿಸಲು ಈ ಕೃತಿಗಳು ಮಾರ್ಗಸೂಚಿ ಆದಾವು. ಹಿಂದಿನವರು ಧರ್ಮದ ಹೆಸರಿನಲ್ಲಿ ಸಮಾಜ-ವ್ಯಕ್ತಿಯ ನಡವಳಿಕೆ, ಇತಿಮಿತಿ ವಿವಿಧ ಲಕ್ಷಣತೆ ಕುರಿತು ಚರ್ಚಿಸಿರುವುದುಂಟು. ನೀತಿ, ದೈವ ಭಕ್ತಿ, ಬಿತ್ತಿದ್ದುಂಟು, ಪ್ರಚೋದಿಸಿದುದೂ ಉಂಟು. ಇದರಲ್ಲಿ ಹರಿದಾಸರ ಗುಂಪು ಅಗ್ರಪಂಕ್ತಿಯದು. ವಚನಕಾರರ ಆಂದೋಲನ, ಭಕ್ತಿ ಚಳುವಳಿಯ ನಂತರ ಬಂದ ಹರಿದಾಸರ ಗುಂಪು ನಡೆಸಿದುದೂ ಅದನ್ನೇ, ಬೇರೊಂದು ತೆರನಾಗಿ. ಅಲ್ಲಿ ಶಿವಭಕ್ತಿ ಪಾರಮ್ಯ, ಇಲ್ಲಿ ಹರಿಭಕ್ತಿ ಪಾರಮ್ಯ, ಈ ಹಿನ್ನೆಲೆಗಳಲ್ಲಿ ಹರಿದಾಸರ ಹಾಗೂ ಅವರ ಕೊಡುಗೆ ಕುರಿತು ವಿಚಾರ ಮಾಡಬೇಕಾಗುತ್ತದೆ. ಅಲ್ಲಿ ಮಠೀಯ ಸಂಕುಚಿತ ಭಾವನೆಗೆ

ಪುಷ್ಟಿಕೊಡುವುದಕ್ಕಿಂತ ಮಾನವೀಯ ಭಾವನೆಗಳ ಕಂಡರಿಸುವಿಕೆಯ ಅರಿವಿನ ಬೆಳಕಿಗೆ ಹೆಚ್ಚು ಪ್ರಾಮುಖ್ಯ ನೀಡಬಹುದೆಂದೆನಿಸುತ್ತದೆ.

ಹರಿದಾಸರು ಆಗಿಹೋಗಿರುವುದು ಸುಮಾರು ೨೫೦ ಕ್ಕೂ ಹೆಚ್ಚು. ಮೊದಲೆ ಹಮ್ಮಿಕೊಂಡಿರುವಂತೆ, ನಾವು ತೆಗೆದುಕೊಂಡಿರುವುದು ಪ್ರತಿನಿಧಿಗಳನ್ನು ಮಾತ್ರ. ಅಂತೆಯೇ ಪುರಂದರದಾಸರೊಂದಿಗೆ ನಾವು ಹರಿದಾಸ ವಾಙ್ಮಯದ ಕೊಡುಗೆಯ ಸ್ವರೂಪ ಗಮನಿಸಬಹುದು.

## ಪುರಂದರದಾಸರು (ಕ್ರಿ. ಶ. ೧೪೮೪–೧೫೬೪)

ಪುರಂದರದಾಸರ ಜೀವನ, ಕೃತಿ, ಅವರ ಜನ್ಮಸ್ಥಳ ಕುರಿತು ಬೇಕಾದಷ್ಟು ಚರ್ಚೆ ನಡೆದಿವೆ. 'ದಾಸರೆಂದರೆ ಪುರಂದರದಾಸರಯ್ಯ' 'ಪುಣ್ಯಾತ್ಮ'ರೆಂದೆಲ್ಲ ಗುರುಗಳಾದ ವ್ಯಾಸರಾಯರ ಪ್ರಶಂಸೆಗೆ ಪಾತ್ರರಾದ ಪುರಂದರದಾಸರ ಎಂಭತ್ತನಾಲ್ಕು ನಿಡಿದಾದ ಬದುಕಿನಲ್ಲಿ ನಡೆದ ಒಂದೆರಡು ಘಟನೆಗಳ ಬಗೆಗೆ ಅವರದ್ದೆ ಕೃತಿಗಳ ಮೂಲಕ ಕೆಲವು ಅಂಶ ಹೊರಡುವುದಾದರೂ, ಜೀವನ ಇತಿವೃತ್ತ ಹೀಗೆಯೇ ಎಂದು ಖಚಿತವಾಗಿ ಹೇಳಲು ಇನ್ನು ಸಾಧ್ಯ ಆಗಿಲ್ಲ. ಆದರೂ ದೊರೆತಿರುವ ಸಾಮಗ್ರಿಗಳ ಮೂಲಕ, ಅವರ ಕಥೆ ತಿಳಿಸಲು ಹೋಗಿಲ್ಲ. ಅವರ ಬದುಕಿನ ಘಟನೆಗಳ, ಕೃತಿಗಳತ್ತ ಮಾತ್ರ ಇಲ್ಲಿ ಹೆಚ್ಚು ಗಮನ ನೀಡಲಾಗಿದೆ.

### ೧. ಪುರಂದರದಾಸರ ಜೀವನ-ಜನ್ಮಸ್ಥಳ

ಇದರ ಬಗ್ಗೆ ಅವರ ಅನಂತರ ಸುಮಾರು ೧೫೦ ವರ್ಷದ ನಂತರ ಬಂದ ವಿಜಯದಾಸರು ಕೆಲವು ಅಂಶಗಳನ್ನು ತಮ್ಮ ಸುಳಾದಿಯಲ್ಲಿ ನೀಡುತ್ತಾರೆ. ಹಾಗೂ ವಿದ್ವಾಂಸರ ಸಂಶೋಧನೆ, ಅಭಿಪ್ರಾಯಗಳ ಪ್ರಕಾರ, ಹಾಗೂ ಪುರಂದರದಾಸರ ಮಕ್ಕಳಾದ ಮಧ್ವಪತಿದಾಸರು ತಂದೆಯವರು ವೈಕುಂಠಕ್ಕೆ ಗಮಿಸಿದ ಬಗ್ಗೆ ನುಡಿದಿದ್ದಾರೆ.

ತೆರಳಿದರು ಪುರಂದರದಾಸರು ॥ ಪ ॥

ತೆರಳಿದರು ಭೇರಿದುಂದುಭಿ ಮೊರೆಯುತಲಿವೆ
ಪುರಂದರದಾಸರು ನಿಜವೈಕುಂಠಕ್ಕೆ ॥ ಅ. ಪ. ॥

ವಿದ್ಯಾನಗರದಿ ವಿಠ್ಠಲನ ಸನ್ನಿಧಿಯಲಿ....
ರಕ್ತಾಕ್ಷಿ ಸಂವತ್ಸರ ಪುಷ್ಯ ಬಹುಳದತಿಶಯದಮಾವಾಸ್ಯೆ ಮಂದವಾದ ॥
ಗುರುಮಧ್ವಪತಿವಿಠಲನ ಧರೆಗೆ ತೋರಿ
ಪುರಂದರದಾಸರು ನಿಜ ವೈಕುಂಠಕ್ಕೆ ॥........

ಇಲ್ಲಿ ಸಂಶೋಧಕರ ಪ್ರಕಾರ, ಕ್ರಿ.ಶ. ೧೫೬೪ ಎಂದು ತಿಳಿಯುತ್ತದೆ. ಆದರೆ ಅವರ ಜನನವೆಂದಾಯಿತು ಖಚಿತವಾಗಿ ತಿಳಿಯದು. ಮಂಪ್ಪದರುವವರಿಗೂ ಬದುಕಿದ್ದ ದಾಸರು, "ದೇಹದಲ್ಲಿ ಬಲವಿಲ್ಲ ವಾಸಿಪಂಥಗಳೆಂಬ ಒಲುಮೆ ಎನಗಿಲ್ಲ ಹರಣದಲಿ ಹುರುಪಿಲ್ಲ ಕರಣದಲಿ ದೃಢವಿಲ್ಲ..."ಎಂದೆಲ್ಲ ಹೇಳಿಕೊಂಡು, ಅಂದಿನ ವಿಜಯನಗರದ ಪರಿಸ್ಥಿತಿ ತಿಳಿಸುವಂತೆ "ಯಾಕಿನ್ನ ಈ ರಾಜ್ಯಕೆಳೆತಂದೆ ಹರಿಯೆ" ಎಂದು ಆಗಂತುಕರಂತೆ, ಬೇಡಿಕೊಂಡಿದಾರೆ. ಈವರೆಗೆ ನಡೆದಿರುವ ಸಂಶೋಧನೆಯ ಪ್ರಕಾರ ೧೪೮೪ ಅವರು ಹುಟ್ಟಿದ ವರಷವೆಂದು ಸದ್ಯಕ್ಕೆ ಒಪ್ಪಿತ ಆಗಿದೆ.[68] ಅಂದರೆ, ಅವರು ಪಾರ್ಥಿವ ಶರೀರ ತ್ಯಜಿಸಂವಾಗ್ಗೆ ಅವರಿಗೆ ೮೦ ಸಂದಿದ್ದಿತು. ಇಷ್ಟಾದರೂ ಇಂಥ ಶ್ರೇಷ್ಠ ಸಂತ ಕಣ್ಮರೆಯಾಗಿ ಇನ್ನೂ ಐದು ಶತಮಾನ ಆಗಿರದಿದ್ದರೂ ನಮಗೆ ಇವರ ಬಗ್ಗೆ ಖಚಿತ ಆಧಾರ ದೊರೆಯದಿರುವುದು, ಐತಿಹಾಸಿಕ ವಿಪರ್ಯಾಸವೆಂದೆ ಹೇಳಬೇಕು. ಪುರಾಣ, ಪವಾಡಗಳ ಕಟ್ಟಿರೆಯಲ್ಲಿ ಪುರಂದರದಾಸರ ನಿಜವಾದ ಚರಿತೆ ಎಲ್ಲೊ ಅಡಕವಾಗಿಬಿಟ್ಟಿದೆ. ಅವರ ಚರಿತೆಯುದ್ದೆಲ್ಲ ಅವರ ನಂತರ ಬಂದವರು ಕಕೆಕಟ್ಟಿ ಹಾಡಿರುವ ಪವಾಡ, ಕತೆ ತುಂಬಿವೆ. ವಿಜಯದಾಸರು ಬಂದದ್ದೆ ಒಂದೂವರೆ ಶತಮಾನದ ನಂತರ. ಆದರೂ ಅವರೇ ಹತ್ತಿರದವರು ಕಾಲದೃಷ್ಟಿಯಿಂದ. ಆದ್ದರಿಂದ ಅವರ ಸುಳಾದಿಯ ಕೆಲವು ಸಾಲುಗಳಿಂದ ನಾವು ಪುರಂದರದಾಸರ ಬಗ್ಗೆ ತಿಳಿಯಬಹುದಾದರೂ ಖಚಿತ ಮಾಹಿತಿ ದೊರೆತಿಲ್ಲ : ಅದಕ್ಕೆ ಪ್ರತ್ಯಕ್ಷ ಕಾರಣ, ಪುರಂದರದಾಸರು ನಿರ್ಯಾಣವಾದ ತರುಣದಲ್ಲಿ (೧೫೬೫) ನಡೆದ ರಕ್ಕಸತಂಗಡಿ ಪತನದಿಂದಾಗಿ, ವಿಜಯನಗರ ದುರಂತ. ಇದರಿಂದಾಗಿ ವ್ಯಾಸರಾಯರು, ಪುರಂದರದಾಸರ ನೇತೃತ್ವದಲ್ಲಿ ಸಂಘಟಿಸಿ ಕಟ್ಟಿದ ದಾಸಕೂಟ ಪರಂಪರೆ ಚದುರಿಹೋಯಿತು.

ಪುರಂದರದಾಸರ ಜನ್ಮಸ್ಥಳದ ಬಗ್ಗೆಯೆ ಅನೇಕ ವಾದ ವಿವಾದ ನಡೆದಿದ್ದೆ ಇನ್ನೂ ಇತ್ಯರ್ಥ ಆಗಿಲ್ಲ. ವಿಜಯದಾಸರ ಒಂದು ಸುಳಾದಿಯಂತೆ,

> "ಪುರಂದರನಗರದ ಒಳಗೆ ಸಿರಿಯ ಸಾಹುಕಾರನೆನಿಸಿ ।
> ಪರಿ ಪರಿ ಸೌಖ್ಯಗಳ ಸುರಿಯುತ್ತಾ । ಇರುತಿರಲು ನರಹರಿತ್ವರಿತದಿಂದ ಬ್ರಾಹ್ಮಣ
> ತಾನಾಗುತಾ । ಕಾರುಣ್ಯದಿಂದಿರುವ್ದರಿಸಲೋಸುಗ ಮನೆಗೆ ಹೋಗುತ್ತ ।
> ಯಜಮಾನ ಕಂಡು । ಹೊರಗೆ ತನ್ನನು ದಬ್ಬಿಸಿದರೂ ।
> ಮರುದಿವಸ ಮತ್ತೊಗಿ ನಿಂತ

ಮತ್ತೊಗಿ ನಿಂತ ಎಂಬ ಸಾಲುಗಳಲ್ಲಿರುವ ಪ್ರಕಾರ, ಪುರಂದರದಾಸರ ಊರು ಪುರಂದರಗಡ ಎಂದು[69] ಕೆಲವರು ಅಭಿಪ್ರಾಯಪಟ್ಟರೆ, ಇನ್ನು ಕೆಲವರು ಮಹಾರಾಷ್ಟ್ರದಲ್ಲಿನ ಪುಣೆಯ ಬಳಿ ಇರುವ ಪುರಂದರಗಡದಿಂದ ಬಂದವರು ಎಂದು ತಿಳಿಸಂತ್ತಾರೆ.[70] ಆದರೆ ಶ್ರೀ ಕಪಟರಾಳ[71] ಕೃಷ್ಣ ರಾಯರು ತಿಳಿಸುವುದಿದು: "ಶ್ರೀಪುರಂದರದಾಸರ ಮೂಲ

ಸ್ಥಳದ ವಿಷಯದಲ್ಲಿ ವಿಜಯದಾಸರು ಮುಂತಾದವರ ಪದ ಸುಳಾದಿಗಳಿಂದ "ಪುರಂದರಾಲಯ ಘಟ್ಟ" ವೆಂದು ತಿಳಿದು ಬರುತ್ತದೆ. 'ಪುರಂದರರಾಲಯ ಘಟ್ಟ'ವೆಂದರೆ ಈಗಿನ ಪೂನಾ ಹತ್ತಿರ ಇರುವ "ಪುರಂದರಘಾಡ" ಎಂದು ಎಲ್ಲರೂ ನಂಬಿರುವರು. ಪುರಂದರ ಗಡದಲ್ಲಿಯ "ಘಡ" ಎಂಬ ಶಬ್ದವು ದುರ್ಗ, ಅಥವಾ ಕಿಲ್ಲೆಯೆಂಬ ಅರ್ಥದಲ್ಲಿ ರೂಢಿಯಲ್ಲಿದೆ. ಆದರೆ "ಘಟ್ಟ" ಶಬ್ದಕ್ಕೆ ಪರ್ವತ ಶ್ರೇಣಿಯಲ್ಲಿರುವ ಉನ್ನತ ಪ್ರದೇಶವೆಂದು ಅರ್ಥವಾಗುತ್ತದೆ. ಅದರಲ್ಲೂ ಘಟ್ಟವೆಂಬ ಹೆಸರು ಕರ್ನಾಟಕದ ಪಶ್ಚಿಮದಲ್ಲಿರುವ ಪರ್ವತಶ್ರೇಣಿಯ ಮೇಲ್ಭಾಗಕ್ಕೆ ಬಳಕೆಯಲ್ಲಿದೆ." ಕೃಷ್ಣರಾಯರ ಈ ಅಭಿಮತವನ್ನು ಪಾಂಡುರಂಗ ದೇಸಾಯಿಯರು ಖಂಡಿಸಿ ಬರೆದಿದ್ದಾರೆ[73] ; ಹೆಸರಿನ ಸಾಮ್ಯವೊಂದಲ್ಲದೆ ಶ್ರೀಪುರಂದರರ ಊರು ಪುರಂದರಗಡ ಎನ್ನುವುದಕ್ಕೆ ಯಾವ ಆಧಾರವೂ ಇಲ್ಲ. ಮೊದಲನೆಯದಾಗಿ ಆ ಊರು ಕನ್ನಡದ ಗಂಧವಿಲ್ಲದ ಕೇವಲ ಮಹಾರಾಷ್ಟ್ರದ ಒಳನಾಡಿನ ಪ್ರದೇಶವಾಗಿದೆ. ಅಲ್ಲಿ ಶ್ರೀಪುರಂದರರ ವಿಚಾರದಲ್ಲಿ ಆಖ್ಯಾಯಿಕೆ, ಐತಿಹ್ಯದಂತ ಕತೆಯ ಗಾಳಿಯು ಕೂಡ ಸುಳಿದಿಲ್ಲ. ೧೮ನೆ ಶ.ದಲ್ಲಿ ಕಟ್ಟಿದ ಪುರಂದೇಶ್ವರ ಎಂಬ ಶಿವಾಲಯವೊಂದಿದೆ. ಆದರೆ ಅದಕ್ಕೂ ಶ್ರೀಪುರಂದರರಿಗೂ ತಳಕು ಹಾಕುವದು ಮೇಲಿನ ಕಾರಣದಿಂದ ಹಾಸ್ಯಾಸ್ಪದವಾಗಿದೆ..... ಇದನ್ನು ಸಮರ್ಥಿಸುವಂತಿದೆ, ಡಾ ಬಿ. ಎನ್. ಕೆ. ಶರ್ಮರು ಬರೆದಿರುವ ಅನುಬಂಧ ಲೇಖನ. ಪುರಂದರಗಡದ ಆಸುಪಾಸಿನ ಪ್ರಾಂತ್ಯ ಪ್ರವಾಸ ಮಾಡಿ ಬರೆದಿರುವ ಈ ಲೇಖನ ಅಮೂಲ್ಯವಾದದ್ದೆಂದೆನಿಸುತ್ತದೆ: "The main difficulties in accepting the identification of the Dasa's birthplace with the fort or its vicinity are that there is, and has been, no town or village of the name with any civil population affording facilities for peaceful life, flourishing business and trade for miles around the historic and strategic fort of Purandar which is situated amidst the ghats at 4655 ft. above sea-level". ಈ ಕೋಟೆಯಲ್ಲಿ ಜನ ವಸತಿ, ವ್ಯಾಪಾರ ಉದ್ಯಮಗಳಿಗೇನೂ ಅನುಕೂಲತೆಗಳಿಲ್ಲ.....ಮುಂದುವರೆದ ಶರ್ಮರು ತಿಳಿಸುವುದಿದು : I am now fully satisfied that fort Purandar and its neighbourhood could not at all havve been the birthplace of the Dasa." 'ಪುರಂದರ' ಎಂಬ ಅಂಕಿತದ ಆಧಾರದ ಮೇಲೆ ವಾದಿಸುವುದು ತಪ್ಪು ಎಂದಿದ್ದಾರೆ.

ಕಪಟರಾಳ ಕೃಷ್ಣರಾಯರ ಪ್ರಕಾರ "ಪುರಂದರದಾಸರು ಬಹುಶಃ ಶಿವಮೊಗ್ಗ ಜಿಲ್ಲೆ ಸಾಗರ ತಾಲ್ಲೂಕಿನ ಗೇರುಸೊಪ್ಪೆ ಅಥವಾ ಶಾಸನದಲ್ಲಿ ಬರುವ ಪರ್ಯಾಯ ಹೆಸರಿನ "ಕ್ಷೇಮ ಪುರಕ್ಕೆ" 'ಪುರಂದರಪುರ' ಎಂದೂ ಹೆಸರಿತ್ತು ಎಂದು ವಿವರಿಸುತ್ತ ಅದೇ ದಾಸರ ಮೂಲಸ್ಥಳ ಏಕಾಗಿರಬಾರದು ಎಂದು ಪ್ರಶ್ನಿಸಿದ್ದಾರೆ.[74] ಅಲ್ಲಿರುವ "ಪುರಂದರ ಪ್ರಖ್ಯಂ" ಎಂಬ ಪದ ಬಳಕೆ ಕೃಷ್ಣರಾಯರಿಗೆ ಈ ಸಂದೇಹ[75] ಬಂದಿರಬಹುದೇನೊ : "..... ಶ್ರೀಪುಂಡ್ರವದ್ಭಾಸತೇ ಶ್ರೀಮತ್ಕ್ಷೇಮಪುರಂ ಪುರಂದರ

ಪ್ರಖ್ಯಂ ಸ್ಫುರದ್ಗೋಪುರಂ" ಎಂಬ ಪದ್ಯದ ಸಾಲುಗಳು ನೀಡುವ ಅರ್ಥ ಪುರಂದರ ಪುರವಂತೆ ಕ್ಷೇಮಪುರ ಪ್ರಖ್ಯಾತಿಯಾಗಿತ್ತೆಂದು. ಅಂದರೆ, ಪುರಂದರನ-ಇಂದ್ರನ-ಅಮರಾವತಿಯಂತೆ ಇದ್ದಿತು. ಇದನ್ನು ಕೃಷ್ಣರಾಯರು ಪುರಂದರದಾಸರ ಹುಟ್ಟೂರೆಂದು ಊಹಿಸಿರುವುದು ಸರಿಯಲ್ಲ. ಇದು ಸಂಭವನೀಯ ಎನಿಸುವುದೂ ಇಲ್ಲ ಸದ್ಯಕ್ಕೆ.

ಪುರಂದರದಾಸರ ಊರು, ಅವರ ವ್ಯಕ್ತಿಗಳ ಬಗ್ಗೆ ಚರ್ಚಿಸಿ ಇತ್ತೀಚೆಗೆ[76] ಬಂದಿರುವ ಸಂಶೋಧನ ಲೇಖನ, ಶ್ರೀ ಸೀತಾರಾಮ ಜಾಗೀರದಾರರು ಬರೆದ ಲೇಖನ. ಜಾಗೀರದಾರರು[77] ಕೃಷ್ಣರಾಯರ ವಾದದಲ್ಲಿ ಇರುವವೆನ್ನಲಾದ ನ್ಯೂನತೆಯನ್ನು ಸೂಚಿಸಿದರೂ ಪುರಂದರಗಢ ಅಥವಾ ಪುರಂದರಾಲಯ ಘಟ್ಟವು, ಪುರಂದರದಾಸರು ಇದ್ದ ಸ್ಥಳವೆಂಬ ನಿರ್ಧಾರಕ್ಕೆ ಬಂದಿದಾರೆ. ಇದು ಸರಿಯಲ್ಲವೆಂದು ನಾವು ತಿಳಿಸಬೇಕಾಗಿವೆ. ಪುರಂದರದಾಸರು ಇದ್ದ ಪರಿಸರ-ಅವರ ಕೃತಿಗಳಲ್ಲಿ ತಿಳಿದು ಬರುವಂತೆ ಹಾಗೂ ಅವರ ಬಗ್ಗೆ ವಿಜಯದಾಸಾದಿಗಳು ತಿಳಿಸುವಂತೆ-ಹಾಗೂ ಅವರ ಕೃತಿಗಳ ಭಾಷೆ, ಎಲ್ಲ ಗಮನಿಸಿದಾಗ ಅವರು ದೂರದ ಪುಣೆಯಿಂದ ಬಂದವರಲ್ಲವೆನಿಸುತ್ತದೆ. ಪುರಂದರಗಡದಲ್ಲಿ ಕನ್ನಡವಿದ್ದಿರಬಹುದು. ಅಂದ ಮಾತ್ರಕ್ಕೆ ಯಾವುದೇ ರೀತಿಯ ವ್ಯಾಪಾರ, ವಾಣಿಜ್ಯ, ವ್ಯವಹಾರದ ಸೌಲಭ್ಯವಿರದೆ ಕೋಟೆಯಿಂದ ನವಕೋಟಿ ನಾರಾಯಣ ಶೀನಪ್ಪನಾಯಕ[78] ಬಂದಿರುವ ಸಾಧ್ಯತೆ ಕಡಿಮೆ : ಈ ಬಗ್ಗೆ ಅಧಿಕೃತ ಹಾಗೂ ನಂಬಲರ್ಹ ಆಧಾರ ದೊರೆವತನಕ, ಪುರಂದರದಾಸರ ಜನ್ಮಸ್ಥಳವಿದೇಯೆಂದು ಖಚಿತವಾಗಿ ನಿರ್ಧರಿಸುವವರೆಗೂ ನಾವು ಜಾಗೀರದಾರರ ಅಭಿಪ್ರಾಯವನ್ನು ಸ್ವೀಕರಿಸಲಾಗುವುದಿಲ್ಲ.[79] ಈ ಬಗ್ಗೆ ಡಾ ದೇಸಾಯಿಯವರ ಅಭಿಮತ ಸದ್ಯಕ್ಕೆ ಸರಿಯೆನ್ನಿಸುತ್ತವೆ. ತಮ್ಮ ಲೇಖನದಲ್ಲಿ ಶರ್ಮರು ಇನ್ನೂ ಕೆಲವು ಅಂಶ ತಿಳಿಸುತ್ತಾರೆ : ನಾಯಕ ಎಂಬ ಪದ ಸಾಗರದ ಬಳಿಯ ಗೌಡ ಸಾರಸ್ವತರೂ ಇರಿಸಿಕೊಳ್ಳುತ್ತಾರೆ.[80] ಪುರಂದರದಾಸರ ಊರನ್ನು ಅವರ ಹೆಸರಿನೊಂದಿಗೆ ಬೆರಸುವುದು ತಪ್ಪು. "ಪುರಂದರ ವಿಠಲದಾಸ', ಸಂಕ್ಷೇಪಗೊಂಡು ಪುರಂದರದಾಸನಾಗಿರಬೇಕು. ನವಂಗೆ ದಾಸಕೂಟದ ಹರಿದಾಸರಿಂದ ತಿಳಿಯುವ ಪ್ರಕಾರ ಎಲ್ಲರಿಗೂ ವಿಠಲನ ಹೆಸರು ಸೇರ್ಪಡೆಯಾಗಿ ಅಂಕಿತ ವಿರುತ್ತದೆ : ವಿಜಯವಿಠಲ, ಗೋಪಾಲವಿಠಲ, ಜಗನ್ನಾಥವಿಠಲ-ಹೀಗೆ. ಹಾಗಾದರೆ 'ಪುರಂದರ" ಎಂದರೇನು ? ವಿಷ್ಣುಸಹಸ್ರನಾಮ ಸ್ತೋತ್ರದಲ್ಲಿ ಬರುವ ವಿಷ್ಣುವಿನ ಅನೇಕ ನಾಮಗಳಲ್ಲಿ 'ಪುರಂದರ' ಎಂಬುದೂ ಒಂದು ಶ್ರೇಷ್ಠವಾದ ಹೆಸರು. ಪುರಂದರ ಎಂದರೆ, ಪರಮಾತ್ಮ, ಮೋಕ್ಷಕ್ಕೆ ಮೊದಲು ಜೀವರಿಗಿರುವ "ಲಿಂಗಶರೀರ"ವನ್ನು ನಾಶಪಡಿಸುವವನು ಎಂದರ್ಥ. ಸಂಸ್ಕೃತದ ನಿಷ್ಪತ್ತಿ : 'ಪುರಂದಾರಯತೀತಿ ಪುರಂದರಃ : ಎನು ಭಗವಂತನ ಸೇವಕ, ಹರಿಚರಣ ದಾಸವೆನ್ನುವ ಪುರಂದರದಾಸರು 'ಪುರಂದರ'ನ ಭಕ್ತರೆಂದು ಅನ್ನಿಸಿಕೊಳ್ಳಲು (ಮೇಲ್ಕಾಣಿಸಿದ) ಈ ದಿಸೆಯಲ್ಲಿ ಅರ್ಹರು. ಇದರಿಂದ, ನಾವು ಇಷ್ಟಕ್ಕೆ ಈ ಇತ್ಯರ್ಥವಾಗದ ವಿಚಾರ ಹೀಗಿರಿಸುವುದೇ ವಾಸಿಯೆನ್ನಿಸುತ್ತದೆ.

ಶ್ರೀ ಸೀತಾರಾಮ ಜಾಗೀರದಾರರು ತಮ್ಮ ಲೇಖನದಲ್ಲಿ ಪುರಂದರದಾಸರ ವೃತ್ತಿಯ ಬಗ್ಗೆಯೂ ಪ್ರಸ್ತಾಪಿಸಿದ್ದಾರೆ. ಇಲ್ಲಿನವರೆವಿಗೂ ಜನಜನಿತ ಆಗಿರುವ ಪ್ರಕಾರ ಪುರಂದರದಾಸರು ಚಿನಿವಾರ ವೃತ್ತಿ ನಡೆಸುತ್ತಿದ್ದರು. ಹಣ-ಕಾಸು ವ್ಯವಹಾರ, ಮುತ್ತುರತ್ನಪಡಿ ವ್ಯಾಪಾರ. ಇದನ್ನು ಜಾಗೀರದಾರರು ಒಪ್ಪಿಲ್ಲ. ಪುರಂದರದಾಸರು "ಒಂದು ಸಂಸ್ಥಾನಕ್ಕೆ ಅಧಿಪತಿಗಳಾಗಿದ್ದರು"[81] ಎಂದು ಹೇಳಿ "ಹಾಗಾದರೆ ಆ ಸಂಸ್ಥಾನವು ಎಲ್ಲಿದ್ದಿತ್ತೆ"ಂಬ ಪ್ರಶ್ನೆಯನ್ನೂ ಹಾಕಿ ಬಿಡಿಸಲೆತ್ನಿಸಿರುವಂತಿದೆ. ಆದರ ಸಮರ್ಥನೆಗಾಗಿ ಪುರಂದರದಾಸರ ಎರಡು ಕೀರ್ತನೆಗಳನ್ನು (ಪಾಠಾಂತರಗಳನ್ನೂ) ಉದ್ಧರಿಸಿದ್ದಾರೆ : "ಆದದ್ದೆಲ್ಲ ಒಳಿತೆ ಆಯಿತು" ಎಂಬುದೆ ಆ ಪದ್ಯ. ಇಲ್ಲಿ ಪಾಠಾಂತರಗಳನ್ನು ಕೊಡುವುದರಿಂದ, ಅನಂತರದ ನಮ್ಮ ಅನಿಸಿಕೆಗಳನ್ನು ತಿಳಿಯಿಸುವುದು ಸುಲಭ ಆಗುತ್ತದೆ.

| | |
|---|---|
| 1) ಆದದ್ದೆಲ್ಲ ಒಳಿತೇ ಆಯಿತು, ನಮ್ಮ | ಆದದ್ದೆಲ್ಲ ಒಳಿತೇ ಆಯಿತು |
| ಶ್ರೀಧರನ ಸೇವೆ ಮಾಡಲು ಸಾಧನ | ಶ್ರೀಧರನ ಸೇವೆಯ ಮಾಡಲು ಸಾಧನ |
| ಸಂಪತ್ತಾಯಿತು ‖ | ಸಂಪತ್ತಾಯಿತು ‖ |
| ದಂಡಿಗೆ ಬೆತ್ತ ಹಿಡಿಯುವುದಕ್ಕೆ | ದಂಡಿಗೆ ಬೆತ್ತ ಹಿಡಿಯುವುದಕ್ಕೆ |
| ಮಂಡೆ ಬಾಚಿ ನಾಚುತಲಿದ್ದೆ | ಮಂಡೆ ಮಾಚಿ ನಾಚಿತಲಿದ್ದೆ |
| ಹೆಂಡತಿ ಸಂತತಿ ಸಾವಿರವಾಗಲಿ | ಹೆಂಡತಿ ಸಂತತಿ ಸಾವಿರವಾಗಲಿ |
| ದಂಡಿಗೆ ಬೆತ್ತ ಹಿಡಿಸಿದಳಯ್ಯ ‖ | ದಂಡಿಗೆ ಬೆತ್ತ ಹಿಡಿಸಿದಳಯ್ಯ ‖ ೧ ‖ |
| ಗೋಪಾಳ ಬುಟ್ಟಿ ಹಿಡಿಯುವುದಕ್ಕೆ | ಗೋಪಾಳ ಬುಟ್ಟಿ ಹಿಡಿಯುವುದಕ್ಕೆ |
| ಭೂಪತಿಯೆಂದು ಗರ್ವಿಸುತಿದ್ದೆ | ಭೂಪತಿಯಂತೆ ಗರ್ವಿಸುತ್ತಿದ್ದೆ |
| ಆ ಪತ್ನೀಕುಲ ಸಾವಿರವಾಗಲಿ | ಆ ಪತ್ನೀಕುಲ ಸಾವಿರವಾಗಲಿ |
| ಗೋಪಾಳ ಬುಟ್ಟಿ ಹಿಡಿಸಿದಳಯ್ಯ ‖ | ಗೋಪಾಳ ಬುಟ್ಟಿ ಹಿಡಿಸಿದಳಯ್ಯ ‖ ೨ ‖ |
| ತುಳಸೀ ಮಾಲೆ ಹಾಕುವುದಕ್ಕೆ | ತುಳಸೀಮಾಲೆಯ ಹಾಕುವುದಕ್ಕೆ |
| ಅರಸನೆಂದು ತಿರುಗುತಲಿದ್ದೆ | ಅರಸನಾಗಿ ನಾಚುತಲಿದ್ದೆ |
| ಸರಸಿಜಾಕ್ಷ ಶ್ರೀಪುರಂದರವಿಠಲನು | ಸರಸೀಜಾಕ್ಷ ಶ್ರೀಪುರಂದರವಿಠಲನು |
| ತುಳಸೀಮಾಲೆ ಹಾಕಿಸಿದನು ‖ | ತುಳಸೀಮಾಲೆ ಹಾಕಿಸಿದನು ‖ ೩ ‖ |

3. ಆದದ್ದೆಲ್ಲ ಒಳಿತೇ ಆಯಿತು । ಮಾಧವನನುಪ್ರಿಯ ಸೇರಿಸುವುದಕೆ ಸಾಧನ ಸಂಪತ್ತಾಯಿತು : ಎರಡನೆ ನುಡಿಯ ಎರಡನೆ ಸಾಲು । ಇಲ್ಲಿ ಭೂಪತಿಯೆಂದು

ನಾಚುತಲಿದ್ದೆ ಮೂರನೆಯ ನುಡಿಯ

ಎರಡನೆ ಸಾಲು : ಅರಸನಾಗಿ ತಿರುಗುತಲಿದ್ದೇ ಎಂದು ಮುದ್ರಿತವಾಗಿದೆ. ಈ ಮೂರು ಪಾಠಾಂತರಗಳನ್ನು ಉದ್ಧರಿಸಿರುವ ಜಾಗೀರದಾರರು, "ಎ. ಬಿ. ಪಾಠ

ವನ್ನು ಗಮನಿಸಿದರೆ ಪುರಂದರದಾಸರು ಕೇವಲ ಬಡ್ಡಿ ವ್ಯವಹಾರ ಮಾಡಿದ ವ್ಯಕ್ತಿಯಲ್ಲ : ಅವರು ಭೂಪತಿ/ಅರಸ ಪದವಿಯಲ್ಲಿದ್ದರು. ಅಂತೆಯೇ ಅವರಿಗೆ ಮಠ-ಮಾನ್ಯಗಳಲ್ಲಿ ರಾಜರ ಆಸ್ಥಾನಗಳಲ್ಲಿ ಮನ್ನಣೆ, ಇಲ್ಲದಿದ್ದರೆ ಪುರಂದರದಾಸರನ್ನು ಯಾರೂ ಕೇಳುತ್ತಿದ್ದಿಲ್ಲ. ಅವರಾದರೂ ತಾವು 'ಭೂಪತಿಯೆಂದು' 'ಅರಸನಾಗಿ' ತುಳಸೀಮಾಲೆಯನ್ನು ಹಾಕಲು 'ನಾಚಿಂತಲಿದ್ದೆ' ಎಂದು ಹೇಳಿದ್ದಾರೆಯಲ್ಲದೆ ಯಾವುದೋ ಬಡ್ಡಿ ವ್ಯವಹಾರ ಮಾಡುವ 'ಶೆಟ್ಟಿ' ಎಂದು ಹೇಳಿಲ್ಲ...." ಎಂದಿರುವುದು ಸರಿ ಎನಿಸುವುದಿಲ್ಲ.

ಮೇಲ್ಕಂಡ ಕೀರ್ತನಗಳಲ್ಲಿಯಲ್ಲದೆ, "ಶ್ರೀಪುರಂದರ ಸಾಹಿತ್ಯ" ಸಂಪುಟಗಳನ್ನು ಹೊರ ತಂದಿರುವ 'ವಿಂಚಿನ ಬಳ್ಳಿ' ಮಾಲೆಯೂ ಹೊತ್ತಿಗೆಯಲ್ಲಿನ ಪಾಠವನ್ನು ಗಮನಿಸಬಹುದು. ಇವಲ್ಲ ಪಾಠಗಳಲ್ಲಿ ಬರುವ ಅರ್ಥ ಇದು. ರಾಜನ ಹಾಗೆ ನಾನೂ ಎಂಬುದಾಗಿ ಅಹಂಕಾರದಿಂದ ಇದ್ದ ("ನೀನೇನಯ್ಯ ರಾಜ" : ಅಂತ ಸಾಮಾನ್ಯವಾಗಿ ಅನ್ನುವುದಿಲ್ಲವೆ ಹಾಗೆ : ರಾಜತ್ವ ಹೋದರೂ ರಾಜ ಅಂದರೆ ಗರ್ವ, ಅಟ್ಟಹಾಸ, ವೈಭವೋಪೇತ ಬದುಕು ನಡೆಸುವಾತ ಎಂಬ ಭಾವನೆಯ ಪ್ರಚಲಿತವಾಗಿರುವುದು) ರಾಜನಂತೆ ಗರ್ವಿಸುತ್ತಿದ್ದೆ. ನಾನೇ ರಾಜ ಎಂದುಕೊಂಡಿದ್ದೆ, ಎಂಬುವ ಸಾಮಾನ್ಯ ಅರ್ಥ ಆಗುವುದೆ ವಿನಹ ಜಾಗೀರದಾರರ ದೂರದೃಷ್ಟಿ ಇಲ್ಲಿ ಅನಗತ್ಯ ಎನ್ನಿಸುತ್ತವೆ. ಆದ್ದರಿಂದ ಶ್ರೀಪುರಂದರದಾಸರು ಅರಸರಾಗಿರಲಿಲ್ಲ ಅರಸು ಕುಲದವರೂ ಅಲ್ಲ ಸಂಸ್ಥಾನಾಧಿಪತಿಯೂ ಆಗಿರಲಿಲ್ಲ ಎಂದು ಮಾತ್ರ ಹೇಳಬೇಕಾಗಿದೆ.

ಮೇಲೆ ತಿಳಿಸಿದಂತಲ್ಲದೆ, ಪುರಂದರದಾಸರು ಪೂರ್ವಾಶ್ರಮದಲ್ಲಿ ವ್ಯಾಪಾರಸ್ಥರಾಗಿದ್ದರು, ವ್ಯಾಪಾರ ವೃತ್ತಿಯಾಗಿತ್ತೆನ್ನಲು ಅನೇಕ ಕೀರ್ತನೆಗಳ ಆಧಾರ ದೊರೆಯುತ್ತದೆ : ಅಲ್ಲದೆ, ಅವರ ನಂತರ ಬಂದ ದಾಸರೆಲ್ಲರೂ[83] ಶ್ರೀಪುರಂದರದಾಸರು 'ಚಿನಿವಾರ'ರಾಗಿದ್ದರೆಂದೂ,[84] "ರತ್ನಪಡಿವ್ಯಾಪಾರಿ"ಗಳಾಗಿದ್ದರೆಂದೂ ತಿಳಿಸಂತ್ಸಾರೆ. ಡಾ॥ಜಿ. ವಿ. ಹೇಳಿಕೆಯಲ್ಲಿ[85] "(ಆದದ್ದೆಲ್ಲ ಒಳಿತೇ ಆಯಿತು ಎಂಬಲ್ಲಿ) ಅವರ ಜೀವನದಲ್ಲಿ ಯಾವುದೋ ಒಂದು ಅನಿರೀಕ್ಷಿತ ಘಟನೆ ನಡೆದಿರುವ ಸಂಗತಿ ಸೂಚಕವಾಗುತ್ತದೆ. ಆ ಘಟನೆ, ಅವರ ಶ್ರೀಧರನ ಸೇವೆಗೆ ಹೇಗೆ ಹೆಬ್ಬಾಗಿಲಾಯಿತು ಎನ್ನುವುದೂ ಸಹ ಇಲ್ಲಿ ಗಮನಾರ್ಹವಾದ ಸಂಗತಿ.......ತಾವು 'ಭೂಪತಿ'ಯೆಂದೂ 'ಅರಸ' ನೆಂದೂ ಬೀಗುತ್ತಿದ್ದರು ಎಂಬಲ್ಲಿ ಅವರು ಎಷ್ಟು ಶ್ರೀಮಂತರಾಗಿದ್ದರು ಎನ್ನುವುದು ಸ್ಪಷ್ಟವಾಗುತ್ತದೆ" ಎಂಬ ಮಾತು ನಮ್ಮ ನಿಲುವನ್ನು ಪುಷ್ಟೀಕರಿಸುತ್ತವೆ. ಅಂಥ ಅಟ್ಟಹಾಸ, ಮದದಲ್ಲಿ ಬೀಗುವಾತ ದಂಡಿಗೆ, ಬೆತ್ತ, ದಾಸಯ್ಯನ ಗೋಪಾಳ ಹಿಡಿಯುತ್ತಾನೆಯೆ ? ಅಂಥ ಯೋಚನೆ ಸಹ ಆವನ ತಲೆಯಲ್ಲಿ ಇಣುಕುವುದಿಲ್ಲ, ಆವನ ಕಿಲುಬು ಕಾಸು ಬಿಡದ ಲೋಭಿತನ ಹೋರತಾಗಿ, ಅಂದರೆ, ಇಲ್ಲಿ ನಡೆದಿರುವ ಯಾವುದೋ ಅಲೌಕಿಕ, ಸಾಮಾನ್ಯ ಅನುಭವಕ್ಕೆ ಮೀರಿದ ಒಂದು ಘಟನೆ, ಖಂಡಿತ ನಡೆದಿರಲೇಬೇಕು. ಇನ್ನು ಕೀರ್ತನೆಯನ್ನು ಗಮನಿಸುವ :

ವ್ಯಾಪಾರ ನಮಗಾಯಿತು ॥ ಪ ॥
ಶ್ರೀಪತಿ ಪಾದಾರವಿಂದ ಸೇವೆಯೆಂಬ ॥ ಅ.ಪ. ॥

ಹರಿ ಕರುಣವೆ ಅಂಗಿ ಕರುಣ ಮುಂಡಾಸು
ಹರಿದಾಸರ ದಯವೆಂಬೊ ವಲ್ಲಿ
ಪರಮ ಪಾಪಿ ಕಲಿ ಎಂಬೊ ಪಾಪಾಸು ಮೆಟ್ಟಿ
ದುರಾತ್ಮರಾದವರ ಎದೆಮೇಲೆ ನಡೆವಂತ ॥ ೧ ॥

ಬಿಳಿಯ ಕಾಗದ ಹೃದಯ ಬಾಯಿ, ಕಲಮದಾನಿ
ನಾಲಿಗೆ ಎಂಬೋದು ಲೇಖಣಿಕೆಯು
ಶ್ರೀಲೋಲನ ಕಥೆ ದಿವ್ಯ ನಾಮಂಗಳ
ಶೀಲ ಮನದಿ ಬರೆದು ಹರಿಗೆ ಒಪ್ಪಿಸುವಂಥ ॥ ೨ ॥

ಮುಂದಣ ಆಗಮ ಸಂಸಾರದ ಬಾಧೆ
ಎಂದೆಂದಿಗು ಅದರ ಭಯ ಬಿಟ್ಟಿತು
ಹಿಂದಣ ಸಂಚಿತ ಸಾಲ ಭಾರಕ್ಕೆಲ್ಲ
ಸಂದಾಯವನು ಮಾಡಿ ಕತಬ ಹರಿಸಿಬಿಟ್ಟ ॥ ೩ ॥

ನುಡಿನುಡಿಗಾನಂದ ಬಾಷ್ಪ ರೋಮಾಂಚನ
ಮುಡುಪಿಯೊಳಗೆ ಇಟ್ಟ ಕೈಜೀತವು
ಕಡೆಯ ಸಂಬಳಕ್ಕೆಲ್ಲ ಮುಕುತಿ ಸಾಧನವನ್ನು
ಕೊಡುವಂತೆ ತಿರುಗದ ಚೀಟಿ ಬರೆಸಿಕೊಟ್ಟ ॥ ೪ ॥

ಕಂಡ ಕಂಡವರಿಗೆ ಕಾರ್ಪಣ್ಯವ ಪಟ್ಟು
ಮಂಡೆ ಅಡ್ಡಾಗ ನಾ ಬಳಲಲಿಲ್ಲ
ಪುಂಡರೀಕಾಕ್ಷ ಶ್ರೀ ಪುರಂದರವಿಠಲನು
ದಂಡಿಸಿ ವೀಳ್ಯವ ಕೊಟ್ಟು ಸೇವೆಯೊಳಿಟ್ಟ ॥ ೫ ॥

ಇಲ್ಲಿ ಪುರಂದರದಾಸರು ತಾವು ಮೊದಲು ಮಾಡುತ್ತಿದ್ದ ವ್ಯಾಪಾರಕ್ಕೂ, ಈಗ (ಹರಿದಾಸದೀಕ್ಷೆ ಪಡೆದ ಮೇಲೆ) ಕೈಕೊಂಡಿರುವ ದೇವರ ಶ್ರೀಪಾದಯುಗ್ಮಗಳೆಂಬ ನೂತನ ವ್ಯಾಪಾರಕ್ಕೂ (ಅಲೌಕಿಕ) ಇರುವ ಅಂತರವನ್ನು ಸ್ಪಷ್ಟಪಡಿಸುತ್ತದೆ. ಯಾವಾಗಲೂ ವ್ಯಾಪಾರ, ದುಡ್ಡುಕಾಸು, ವ್ಯವಹಾರ ಇವಿಷ್ಟರಲ್ಲಿಯೇ ಮರೆತು ಬಿಟ್ಟಿದ್ದ ಮನಸ್ಸು, ಯಾವುದೊ ಅಲೌಕಿಕ ಘಟನೆಯಿಂದ ಥಟ್ಟನೆ ಎಚ್ಚತ್ತಿದೆ. ತನ್ನಷ್ಟಕ್ಕೆ ತಾನೆ (introspection) ಪರಿಶೀಲನೆ ಮಾಡಿಕೊಳ್ಳುತ್ತ ಇದೆ. ಇಲ್ಲಿ ಒಂದಂ ನಂಡಿ ನುಡಿಗೂ ಆನಂದಬಾಷ್ಪ, ರೋಮಾಂಚನ....... ಹಿಂದೆ ಸಂಚಿತ ಸಾಲ ಭಾರಕ್ಕೆಲ್ಲ ಸಂದಾಯವನ್ನು ಮಾಡಿ ಕತಬಿ ಹರಸಿ ಬಿಟ್ಟ, ತಿರುಗದ ಚೀಟಿ ಬರೆಸಿ

ಕೊಟ್ಟನಂತೆ ಆ ವೇಷಧಾರಿವಿಪ್ರ. "ಇಲ್ಲಿ ಆತ್ಮ ಸಂತೋಷ ಒಡಮೂಡಿದೆ. ಅಂದಿದ್ದ ಉಡುಪೆಲ್ಲಿ ಈಗಿನದೆಲ್ಲಿ?" ಇಂದು "ಹರಿಕರುಣವೆ ಅಂಗಿ, ಗುರುಕರುಣವೆ ಮುಂಡಾಸು ಹರಿದಾಸರ ದಯವೆಂಬುದೇ ವಲ್ಲಿ.[87] ಕಲಿಯನ್ನು ಮೆಟ್ಟಿ ನಿಂತಹಾಗಿರುವುದೆ ಕಾಲಿನ ರೇಕ್ಷೆ ದುರಾತ್ಮರನ್ನು ದಂಡಿಸುವುದೆ ಇಂದಿನ ನಡಿಗೆ." ಆಗ ವ್ಯವಹಾರದಲ್ಲಿ ಬಳಿಯು ಕಾಗದ ಬಳಕೆಯಲ್ಲಿತ್ತೆಂದೂ ಪುರಂದರದಾಸರು ಧ್ವನಿಸುತ್ತಾರೆ. ಇಲ್ಲಿ ಪ್ರತಿ ನುಡಿಗಳಲ್ಲೂ ಎದೆ ಬಿರಿದು ತನ್ನಿಂ ತಾನೆ ತೋರುವ ಮಾರ್ಮಿಕ ಚಿತ್ರಣವಿದೆ. ಹಣ, ಹಣ, ಹಣವೆಂದೆಣಿಸಿ, ಚೀಲದೊಳಗೆ ಸುರುವಿ, ಪೆಟ್ಟಿಭದ್ರಪಡಿಸಿ ಬೀಗ ಜಡಿದು, ಮತ್ತೆ ಎಳೆದು ಎಳೆದು ನೋಡುತ್ತಿದ್ದ ಕೈಗಳು ಇಂದು ಶ್ರೀಲೋಲನ ಸೇವೆಗಾಗಿ ಮುಡಿಪಾಗಿವೆ. ಬಂದ ಬಂದ ಗಿರಾಕಿಗಳಿಗೆ ತಲೆ ತಗ್ಗಿಸುವ, ಬಾಯಿ ಬಡಿವ ಕಷ್ಟ ತಪ್ಪಿತು. ಅಲ್ಲಿಗೆ ಅಂದಿನ ಸಿರಿವಂತಿಕೆಯ ಸೊಕ್ಕು ಇಂದಿನ ಪರಮಾತ್ಮ ಪ್ರೀತಿಗಾಗಿ ಇರುವ ವಿನಯ, ಭಯಭಕ್ತಿ. ಅದೇ ಬೇರೆ ತೀರಾ ಭಿನ್ನ.

ಈ ಕೀರ್ತನೆಯಿಂದ ದಾಸರಿಗೆ ಹಿಂದಿದ್ದ ಲೋಭಿತನ ಈಗಿನ ವಿರಕ್ತಮನ ಎರಡೂ ತಿಳಿಯುತ್ತದೆ. "ವ್ಯಾಸರಾಯರ ಚರಣಕಮಲದರುಶನವೆನಗೆ ವಿಸು ಜನ್ಮದ ಸುಕೃತ ಫಲದೊರಕಿತೊ" ಎಂದು ಗುರುಗಳನ್ನು ಕಂಡ ನಂತರ ಭಕ್ತಿಯಿಂದ ಹಾಡುತ್ತಾರೆ "ಶ್ರೀಶನ್ನ ಭಜಿಸುವುದಧಿಕಾರಿನಾನಾದೆ" ಎಂಬಲ್ಲಿ ತಾನು ನಂತರ ಸೈಪನ್ನು ಪಡೆದೆನೆಂಬ ಭಾವ ಹೊಮ್ಮಿದೆ. ಮೇಲ್ಕಂಡ ಕೀರ್ತನೆಯೊಂದೆ ಅಲ್ಲದೆ, ಇನ್ನೂ ಅನೇಕ ಕೃತಿಗಳಲ್ಲಿ ಪುರಂದರದಾಸರ ಮಾನದಳಲು, ಹಿಂದಣ ಬದುಕಿನಲ್ಲಿ ಅವರು ಇದ್ದ ವ್ಯಾವಹಾರಿಕ ಸ್ವರೂಪವನ್ನು ಅಭಿವ್ಯಕ್ತಗೊಳಿಸುತ್ತವೆ.[88] ಪುರಂದರದಾಸರು ಪೂರ್ವಾಶ್ರಮದಲ್ಲಿ ಕೃಪಣನಾಗಿದ್ದರು : ಅವರಿಗೆ ಧನವೆ ಧರ್ಮ ಆಗಿತ್ತು, ಧನವೇ ದೇವರಾಗಿತ್ತು. ಆತನ ಧರ್ಮಪತ್ನಿಯು ಧರ್ಮಶ್ರದ್ಧೆ, ದೈವಭಕ್ತಿ ಅವರನ್ನೆಚ್ಚರಿಸಿತು. ಎಷ್ಟೋ ವೇಳೆ ಪತಿಯು ಕಡುಲೋಭಿತನ ಕಂಡು, ಚಾಪಲ್ಯ ಕಂಡು, ಬೇಸತ್ತ ಅವಳಿಗೆ, ಗಂಡನಿಗೊದಗಿ ಬಂದ ಎಚ್ಚರದ ಅಮೃತ ಘಳಿಗೆಯೊಂದು ಬಂದಿತೆಂದೆನ್ನಿಸಿತಷ್ಟೆ.

ಇವೆಲ್ಲದರಿಂದ ಪುರಂದರದಾಸರ ಕತೆಯನ್ನು ಮತ್ತೆ ಹೇಳುವುದನಗತ್ಯ. ಅದು ಸುವಿದಿತ, ಜನಜನಿತ. ನವಕೋಟಿ ನಾರಾಯಣ, ಧನವೆ ಉಸಿರಾಗಿ ಇದ್ದ ಲೋಭಿ ಧನಿಕ, ಶ್ರೀಹರಿಯು ವಿಪ್ರನಾಗಿ ಬಂದು ಯಾಚಿಸಿದಾಗ ಕಿಲುಬು ಕಾಸಿತ್ತು, ಕಡೆಗೆ ಹೆಂಡತಿಯು ಮೂಗುತಿ, ನಾಯಕರ 'ಮುಕುತಿ ಮೂಗುತಿ'[89] ಯಾದದ್ದೆ ಕಥೆ. ಇಲ್ಲಿ "ಗುರುಪುರಂದರವಿಠಲ" ಎಂಬ ದಾಸರು ರಚಿಸಿದ 'ಪುರಂದರದಾಸರ ಮಹಿಮಾ' ಗಳಲ್ಲಿನ ಕತೆ ಅಪ್ರಸ್ತುತ. ಅವರಲ್ಲಿ ಪವಾಡವೆ ಹೆಚ್ಚು. ವಿಜಯದಾಸರು, ಇನ್ನಿತರರು ಹೇಳುವ ವೃತ್ತಾಂತಕ್ಕಿಂತ ಭಿನ್ನವಾಗಿದೆ.[90] "ಮಾತ್ರವಲ್ಲದೆ, ಅಸ್ವಾಭಾವಿಕ ಘಟನೆಗಳಿಂದ ಕೂಡಿದೆ"...... ಇದರ, ಭಾಷೆ, ನಿರೂಪಣಾ ರೀತಿ[91] ಅವ್ಯವಸ್ಥಿತವಾಗಿದೆ. ಇದು ಈಚೆಗೆ ೧೮ ನೆ ಶತಮಾನದಲ್ಲಿ ರಚಿತವಾದಂತೆ ತೋರುತ್ತದೆ" ಇವೆಲ್ಲದರಿಂದ ಸೀತಾರಾಮ ಜಾಗೀರದಾರರ ಅನಿಸಿಕೆಗೆ ಪುಷ್ಟಿ ದೊರೆಯುವುದಿಲ್ಲ. ಒಂದು ಕಾಲಕ್ಕೆ

ಅವರು ವ್ಯಾಪಾರಿಯಾಗಿದ್ದರೆಂದು, ಪುರಂದರಗಡದವರಲ್ಲವೆಂದು, ಸಾಮಾನ್ಯರಲ್ಲಿ ಇರಬಹುದಾದ ಕೆಲವಾರು ಮನೋವಿಕಾರವಿದ್ದವರೆಂದು ಅವರ ಕಡು ಕೃಪಣತನ ತೊಡೆವಂಥ ಅಲೌಕಿಕ ಘಟನೆಗಳೆರಡು ನಡೆದಿರುವುದು, ಇವೆಲ್ಲ ಎಳೆ ಎಳೆಯಾಗಿ ತಿಳಿದು ಬರುತ್ತವೆ: ಬರ ಬರುತ್ತ ಐತಿಹ್ಯ ಹಬ್ಬಿ, ದಾಸರ ನಿಜವಾದ ಬದುಕಿನ ಸುತ್ತ ಪವಾಡದ ಮಬ್ಬು ಕವಿಯುತ್ತಿರುವುದು ಭಾರತೀಯರ ಇತಿಹಾಸದ ಅರಿವಿನ ಅಭಾವದ ಪ್ರತೀಕವಷ್ಟೆ. ಇನ್ನು ಪುರಂದರದಾಸರ ರಚನೆಗಳ ಕುರಿತು ವಿಚಾರ ಮಾಡಬಹುದು. ದಾಸ ದೀಕ್ಷೆ ಸ್ವೀಕರಿಸಿದ ಕೂಡಲೆ ಪುರಂದರದಾಸರಿಗೆ ಕವಿತಾಶಕ್ತಿ, ಸಂಗೀತವಿಶೇಷಜ್ಞಾನ ಎಲ್ಲ ಒಮ್ಮೆಲೇ ಬಂದಿತೆನ್ನಲಾಗುವುದಿಲ್ಲ. ಅವರು, ಆಗಿನ ಕಾಲದ ಸಮಾಜದ ಶ್ರೀಮಂತರನೇಕರು ಗಾಯನ ಪದ್ಧತಿ, ನರ್ತನ, ಇವುಗಳಿಗೆಲ್ಲ ಮಾನ್ಯತೆ ಇತ್ತ ಹಾಗೆ ತಾವೇ ಕಲಿತು, ದಾಸದೀಕ್ಷೆ ಪಡೆವ ಪ್ರೌಢ ವಯಸ್ಸಿನ ವೇಳೆಗೆ ಸಂಗೀತಜ್ಞಾನ ಸಹ ಅವರಲ್ಲಿ ಬೆಳೆದಿತ್ತೆನ್ನುವುದರಲ್ಲಿ ಸಂಶಯವೇ ಇಲ್ಲ.

**ದಾಸವೃತ್ತಿ-ಮಧುಕರ ವೃತ್ತಿ :**

ಪುರಂದರದಾಸರು ಹರಿದಾಸಕೈಂಕರ್ಯವನ್ನು ಕೈಗೊಂಡ ನಂತರ ಮೊದಲು ನಾಯಕರಾಗಿ ಮೆರೆಯುತ್ತಿದ್ದವರು ಅನಂತರ ಗಾಯಕರಾಗಿ, ಹೆಗಲಲ್ಲಿ ಜೋಳಿಗೆ, ಗೋಪಾಳ ಬುಟ್ಟಿ ಹಿಡಿದು, ಒಂದು ಕೈಯಲ್ಲಿ ಚಿಟಿಕೆ ಬಾರಿಸುತ್ತ, ಮತ್ತೊಂದು ಕೈಯಲ್ಲಿ ತಂಬೂರಿ ಮೀಟುತ್ತ ಸಂಸಾರ ಸಮೇತರಾಗಿ "ಮಧುಕರ ವೃತ್ತಿ ಎನ್ನದು" ಎಂದು ದಾಸರಾಗಿ ಬದುಕಲು ಮಾಡಿದ ಸಂಕಲ್ಪ ದೊಡ್ಡದೆ. ಆದರೆ ಅದರಲ್ಲಿ ಪ್ರಯಾಸ ಬಹಳ. ಅವರ ಅನಂತರದ ಕೃತಿಗಳಲ್ಲಿ ಆತ್ಮನಿವೇದನೆ, ಪರಿಶೀಲನೆ, ಸಂಬಂಧಿಸಿದ ಕೃತಿಗಳನ್ನು ಅವಲೋಕಿಸಿದಾಗ ಅವರ ಸತತ ಸಾಧನೆಯ ವಿವಿಧ ಹಂತ ಗೋಚರಿಸುತ್ತವೆ, ನಲವತ್ತು ವರ್ಷಕ್ಕೂ ಹೆಚ್ಚು ಕಾಲ ಲೌಕಿಕವಾಗಿ ಸಂಸಾರದಲ್ಲಿ ಬಾಳಿದವರಿಗೆ ಅದರಿಂದ ಪಾರಾಗಿ ಒಮ್ಮೆಲೆ ಬರಲು ಸುಲಭವೆ ?[92] "ಮನವ ನಿಲಿಸುವುದು ಬಹಳ ಕಷ್ಟ, ಹರಿದಾಡುವಂಥ ಮನವ ನಿಲಿಸುವುದು ಬಹು ಕಷ್ಟ ಎಂದು ತಿಳಿಸಿ,"[93] ಮನೆ ಹೆಂಡಿರ ಆಸೆಯು ಎನ್ನ ಮಂದಗೆಡಿಸುತಿದೆ, ಮನೆವಾರುತೆಯು ಎನ್ನ ಭಂಗಪಡಿಸುತಿದೆ, ಸುತ್ತಬಳಗವು ಎನ್ನ ದೈನ್ಯಪಡಿಸುತಿದೆ, ಇನಿತಾಸೆಯುಳಿದು ಬಂದು ನಿನ್ನಲ್ಲಿ ನಿಲುವಂತೆ ಮಾಡೊ ಸಿರಿಪುರಂದರವಿಠಲ" ಎಂದು ಕೋರಿ ಹಲುಬುತ್ತಾರೆ. ಏನು ಮಾಡಿದರೂ ಸಮಾಧಾನವಿಲ್ಲ–'ಅನುಗಾಲವು ಚಿಂತೆ ಈ ಜೀವಕ್ಕೆ'[94] ಎಂಬ ತುಮುಲ

"ಹಗಲು ನಿನ್ನ ನೆನೆಯಲಿಲ್ಲ ಹಸಿವು ತೃಷೆಯಿಂದ
ಇರುಳು ನಿನ್ನ ನೆನೆಯಲಿಲ್ಲ ನಿದ್ರೆಭರದಿಂದ
ಈ ಎರಡರ ಬಾಧೆಗೆ ನಾನೊಳಗಾದೆನೊ ಪುರಂದರವಿಠಲ"[95]

ಎಂದು ತಮ್ಮ ದುರ್ಬಲತೆಯನ್ನು ತೋಡಿಕೊಳ್ಳುವರು. 'ಈ ಮನವು ಮಾಧವನೊಳು ಮೆಚ್ಚುತನಕ', ಎಂದಿಗೆ ನಾ ನಿನ್ನ ಧನ್ಯನಹೆ ಎಂದಿಗೆ ನಿನ್ನ ಚಿತ್ತಕೆ ಬಾಹೆ

ಅಚ್ಯುತನೇ ಎಂದು ಬೇಡುತ್ತಾರೆ. ಇಂದ್ರಿಯಗಳ ಚಾಪಲ್ಯ ಅನೇಕ ರೀತಿಯ ತಾಪತ್ರಯ, ಇದರಿಂದ ಪಾರಾಗುವ, ಸ್ಥಿರಚಿತ್ತನಾಗುವುದೆಂತು ?[96] "ದಾಸನ್ನ ಮಾಡಿಕೊ ಎನ್ನ, ಇಷ್ಟು ಘಾಸಿ ಮಾಡುವರೇನೊ ಕರುಣಾಸಂಪನ್ನ" ಎಂದು ಬೇಡುತ್ತ ದೃಢಭಕ್ತಿ, ಬೇಡುತ್ತಾರೆ.[97] "ಬಿನ್ನಹಕ್ಕೆ ಬಾಯಿಲ್ಲವಯ್ಯ, ಅನಂತ ಅಪರಾಧ ಎನ್ನಲ್ಲಿ ಇರಲಾಗಿ! ಶಿಶುಮೋಹ, ಸತಿಮೋಹ, ಜನನಿಜನಕರ ಮೋಹ ರಸಿಕ ಭ್ರಾಂತರ ಮೋಹ[98] ರಾಜಮೋಹ ಪಶುಮೋಹ ಭೂಮೋಹ ಬಂಧುವರ್ಗದ ಮೋಹ, ಅಸು ರಾರಿನಿನ್ನ ಮರೆತೆನೊ ಕಾಯೊ ಹರಿಯೆ" ಎಂಬ ಮೋಹಗಳ ಪಟ್ಟಿ ನೀಡಿದವರು ಅಷ್ಟಮದಗಳನ್ನು ತಿಳಿಸುತ್ತ, "ಇಷ್ಟು ದೊರಕಿದರೆ ಮತ್ತಷ್ಟು ಬೇಕೆಂಬಾಸೆ .." ಎನ್ನುತ್ತಾರೆ. ತನ್ನ ಎಲ್ಲ ಅಪರಾಧ ಕ್ಷಮಿಸೆಂದು ಬೇಡುತ್ತಾರೆ. ಇಲ್ಲೆಲ್ಲ ಭಕ್ತನ 'ಸಾಧಕನ ಕಾಳರಾತ್ರಿಯ'[99] ನೆನಪಾಗುತ್ತದೆ. ಈ ವಿತ್ವಲಸ್ಥಿತಿ ಮುಂದುವರೆಯುತ್ತದೆ. ಅವರು ದೇವರನ್ನು ಆಕ್ಷೇಪಿಸುವತನಕ.[100] "ತಿರುಮಂಬ ದಾಸರಲಿ ಕಷ್ಟವ ಕೊಂಬೆ । ಗರುಡವಾಹನ ನಿನ್ನ ಚರಿಯುವರಿಯೆ । ಧೊರೆ ಪುರಂದರವಿಠಲ ನಿನ್ನನ್ನು ನಂಬಿದರೆ । ತಿರುಪೆಯೂ ಹುಟ್ಟಲೊಲ್ಲದು ಕೇಳೊ ಹರಿಯೆ ॥" "ಆರು ಬದುಕಿದರಯ್ಯ ಹರಿ ನಿನ್ನ ನಂಬಿ । ತೋರು ಈ ಜಗದೊಳಗೆ ಒಬ್ಬರನು ಕಾಣೆ" ಪುರಂದರದಾಸರ ಈ ತುಮುಲ, ಭಾವಾವೇಶ, ಒಳಗುದಿಗೆ ನಿದರ್ಶನವಾಗಿ ಅನೇಕ ಕೃತಿಗಳಿವೆ. ಅದೇ ರೀತಿ ಪರಿತಪಿಸಿ, ಪರಿತಾಪದ ಮೂಸೆಯಲ್ಲಿ ಬೆಂದು, ಅನಂತರ ಪರಿಪಕ್ವ ಚೇತನರಾಗುವ ಅವರಿಗೆ ಪರಮಾತ್ಮನ ಸಂದರ್ಶನ ಆಗಲಾಗುತ್ತದೆ. ಇದೂ ವಿವಿಧ ಹಂತಗಳಲ್ಲಿ ಗುರುತಿಸಬಹುದಾಗಿದೆ.[101] "ಕಂಡೆ ನಾ ಗೋವಿಂದನ ಪುಂಡರೀಕ್ಷನ ಪಾಂಡವ ಪಕ್ಷನ", "ಕಂಡೆನಾ ಕನಸಿನಲಿ[102] ಗೋವಿಂದನ । ಕಂಡೆನಾ ಕನಸಿನಲಿ ಕನಕರತ್ನದ ಖಣಿಯ । ನಂದನ ಕಂದ ಮುಕುಂದನ ಚರಣವ ।" ಎಂದು ಹಿರಿಹಿರಿ ಹಿಗ್ಗುತ್ತಾರೆ. ಅನಂತರ ಅದನ್ನೊಂದು ಸುಳಾದಿಯಲ್ಲಿ ವರ್ಣಿಸುತ್ತಾರೆ: "ಅಪಾರ ಆನಂದ ಅಸುಖ ಆನಂದ । ಅಚಾನು ಆಚಂಥ, ಆನಂದಮಯಮಯ್ಯ" ಎಂದು ಆಪಾದಮಸ್ತಕ ತಾವು ಸಂದರ್ಶಿಸಿದ ರೂಪನ್ನು ಬಣ್ಣಿಸುತ್ತಾರೆ. "ಪಾದನಖ ಪರಿಪೂರ್ಣ, ಜಾನುಜಂಘೆ ಪರಿಪೂರ್ಣ" ಇತ್ಯಾದಿ ಪರಿಪೂರ್ಣನಾದ ಸ್ವಾಮಿಯನ್ನು ಬಣ್ಣಿಸಿ, "ಕಣ್ಣಾರೆ ಕಂಡೆನಚ್ಯುತನ"[103] ಎಂದು "ನಂಬಿಕೆಟ್ಟವರಿಲ್ಲವೊ ರಂಗಯ್ಯನ" ಎನ್ನುವುದರೊಂದಿಗೇ "ಎಲ್ಲಿ ಭಕ್ತರು ಕರೆದರಲ್ಲಿ ಒದಗುವನು ಎಲ್ಲಿರುವನೊ ರಂಗ ಎಂಬ ಸಂಶಯ ಬೇಡ"ವೆಂದು ಭರವಸೆ ಕೊಡುವಷ್ಟು ಅವರ ಚೇತನ ಸುಸ್ಥಾಪಿಸಿದೆ. ಇಲ್ಲೆಲ್ಲ ಪುರಂದರದಾಸರ ಪುರಾಣ ಪ್ರಜ್ಞೆ, ಭಾಗವತ ಪ್ರಜ್ಞೆ, ಪ್ರಹ್ಲಾದ, ನಾರದಾದಿಗಳ ಉದಾಹರಣೆ ಅವರ ಕೃತಿಗಳುದ್ದಕ್ಕೂ ಅನೇಕ ಕಡೆ ಬರುತ್ತವೆ. ಶ್ರೀಹರಿಯ ದರ್ಶನ ಪಡೆದ ದಾಸರು, "ಏನು ಧನ್ಯಳೊ ಲಕುಮಿ । ಎಂಥ ಮಾನ್ಯಳೊ । ಸಾನುರಾಗದಿಂದ ಹರಿಯ ತಾನೆ ಸೇವೆ ಮಾಡುತ್ತಿಹಳು" ಎಂದು ತಾಯಿ ಲಕ್ಷ್ಮೀದೇವಿಯ ಧನ್ಯತೆಯನ್ನು ಪ್ರಶಂಸಿಸುತ್ತ ಆಕೆಯ ಸೇವಾ ನಿಷ್ಠೆ ತಮಗಾದರ್ಶವಾಗಲೆಂದುಕೊಳ್ಳುತ್ತಾರೆ. ವಿದುರ, ಅಕ್ರೂರರಿಗೆ ಒಲಿದ ಭಾಗವತ

ಪ್ರಿಯನನ್ನು "ಶ್ರೀಪತಿತಾ ಶಿಶುರೂಪಿ ನಲಿರುವ" "ಗೋಪಿಯ ಭಾಗ್ಯ"ವನ್ನು ಹೊಗಳಂತ್ಯ ಯಶೋದೆ ಶ್ರೀಕೃಷ್ಣನನ್ನು ಆಡಿಸಿದ ಪರಿಯನ್ನು ಹಾಡುತ್ತಾರೆ.[104] ಪುರಂದರದಾಸರ ಸುಮಾರು ಎಲ್ಲ ಕೃತಿಗಳೂ ಭಕ್ತಿಯುತ ಭಾವಗೀತೆಗಳು.[105] "ನಿಲ್ಲಬೇಕಯ್ಯ ಕೃಷ್ಣಯ್ಯ ನೀ ನಿಲ್ಲಬೇಕಯ್ಯ, ಮಲ್ಲಮರ್ದನ ಸಿರಿ ವಲ್ಲಭ ಎನ್ನ ಹೃದಯದಲ್ಲಿ ಸತತ ನೀ

"ಚುಪ್ಪಾಣಿ ಮುತ್ತಿಟ್ಟು ನೋಡುವೆ ಎನ್ನ !
ಚಪ್ಪಾಳೆ ತಟ್ಟಿ ನಾ ಪಾಡುವೆ"

ದಿಂಬಲ್ಲಿ ಒಂದಿರುವ ಕನ್ನಡ ದೇಸಿ ಪುರಂದರರ ಒಂದು ವಿಶೇಷ. ಅವರ ಕೃಷ್ಣಲೀಲಾ ವಿನೋದ ವೈಭವ ಬಣ್ಣನೆಯಲ್ಲಿಯಂತೂ ದೇಸಿ ತಾನೇ ತಾನಾಗಿ ಹಾಸುಹೊಕ್ಕಾಗಿ ಸಾಮಾನ್ಯರನ್ನೂ ಸಂಗೀತಜ್ಞರಾಗಿರಿಸುತ್ತದೆ. "ಅಮ್ಮ, ಮಮ್ಮ, ಗುಮ್ಮ" ಎಂದೆಲ್ಲ ಪದಗಳ ಅಪರೂಪ ಬಳಕೆ ಕನ್ನಡತನದ ಜಾನಪದ ಸೊಗಡನ್ನು ಹೆಚ್ಚಿಸುತ್ತದೆ. ಅವರ "ಕೃಷ್ಣಮೂರ್ತಿ ಕಣ್ಣ ಮುಂದೆ ನಿಂತಿದ್ದಂತಿದೆ"[106] ಸುಪ್ರಸಿದ್ಧ ಕೀರ್ತನೆ ಹಾಗೂ ಅದು ಒಬ್ಬ ಭಕ್ತನ ಹೃದಯದಲ್ಲಿ ಪರಮಾತ್ಮನ ಶ್ರೀರೂಪವನ್ನು ಪ್ರತಿಷ್ಠೆ ಮಾಡಿಕೊಂಡಿರುವ ಚಿತ್ರಣ ಕೂಡ. ರಾಮ,ಕೃಷ್ಣ, ನರಸಿಂಹ, ವ್ಯಾಸರು, ಲಕ್ಷ್ಮಿ, ಹನುಮಂತ, ಎಲ್ಲರೂ ದಾಸರ ಆರಾಧ್ಯರೆ, ಕೀರ್ತನೆಯ ಪ್ರೇರಕ ಸ್ಫೂರ್ತಿಗಳೆ.

ಪುರಂದರದಾಸರು ಹರಿದಾಸರಾಗುವ ಮುನ್ನ ಸ್ಮಾರ್ತರಾಗಿದ್ದರೆಂದು ಕೆಲವರು ತಿಳಿಸಿದ್ದರೆ ಇನ್ನು ಕೆಲವರು ಭಾಗವತ ಸಂಪ್ರದಾಯದ ಅದ್ವೈತಿಯಾಗಿದ್ದರೆನ್ನುತ್ತಾರೆ.[107] ಅನಂತರ ವ್ಯಾಸರಾಯರಿಂದ ಹರಿದಾಸದೀಕ್ಷೆ ಸ್ವೀಕರಿಸಿ, ಮಧ್ವಮತವನ್ನಪ್ಪಿದರೆಂದು ಹೇಳಲಾಗುತ್ತಿದೆ. ಅವರ ಕೆಲವು ಕೀರ್ತನೆಗಳಲ್ಲಿಯೂ ಈ ಸುಳಿವು ಸ್ವಲ್ಪ ಕಾಣುತ್ತದೆ. ಹರಿದಾಸರಾದ ನಂತರ ದಾಸರು ಅನೇಕ ಪುಣ್ಯಕ್ಷೇತ್ರ ಸಂದರ್ಶಿಸಿದ ಬಗ್ಗೆ ಕೀರ್ತನೆಗಳಿವೆ.[108] ತಾವು ಹೋದಕಡೆ ಧರ್ಮಶ್ರದ್ಧೆ ನೀತಿ, ಬಿತ್ತಿದ್ದಲ್ಲದೆ, ಸಮಾಜ ಸುಧಾರಣೆಗಳ ಬಗ್ಗೆಯೂ ದಾಸರು ಮನಗೊಟ್ಟಂತಿದೆ :

"ಆಚಾರವಿಲ್ಲದ ನಾಲಿಗೆ ನಿನ್ನ
ನೀಚಬುದ್ಧಿಯ ಬಿಡು ನಾಲಿಗೆ"[109]

"ಮನಶುದ್ಧಿಯಿಲ್ಲದವಗೆ ಮಂತ್ರದ ಫಲವೇನು
ತನುಶುದ್ಧಿಯಿಲ್ಲದವಗೆ ತೀರ್ಥದ ಫಲವೇನು"[110]

"ಎಲ್ಲಾನೂ ಬಲ್ಲೆನೆಂಬುವರಿಲ್ಲ
ಅವಗುಣ ಬಿಡಲಿಲ್ಲ"[111]

"ತನುವ ನೀರೊಳಗದ್ದಿ ಫಲವೇನು। ಮನದಲ್ಲಿ ದೃಢಭಕ್ತಿಯಿಲ್ಲ ಮನುಜನು"[112]

"ಮಡಿ ಮಡಿ ಮಡಿಯೆಂದಡಿಗಡಿಗ್ಹಾರುತಿ । ಮಡಿಮಾಡುವ ಬಗೆ ಬೇರುಂಟು॥
ಬಟ್ಟೆಯ ನೀರೊಳಗದ್ದಿ ಒಣಗಿಸಿ । ಉಟ್ಟುಕೊಂಡರೆ ಅದು ಮಡಿಯಲ್ಲ ।
ಹೊಟ್ಟೆಯೊಳಗಿನ ಕಾಮ ಕ್ರೋಧವ । ಬಿಟ್ಟು ನಡೆದರೆ ಅದು ಮಡಿಯು॥ "[113]

"ಹೊಲೆಯ ಹೊರಗಿಹನೆ ಊರೊಳಗಿಲ್ಲವೆ ।"

ಎಂದೂ ವ್ಯಾಖ್ಯಾನಿಸಿರುವ ರೀತಿ.[114]

"ಹೊಲೆಯ ಬಂದನೆಂದು ಒಳಗೆ ದೇವರ ಮಾಡಿ ।
ಗಣಗಣ ಗಂಟೆಯ ಬಾರಿಸುವವರಯ್ಯ" [115]

ಎಂಬ ಉಗಾಭೋಗದಲ್ಲಿ ಒಡಮೂಡಿಸಿರುವ ತಿಳಿವು, "ಪರಧನ ಪರಸತಿ ಹೊಲೆ", "ತನುವಿನ ಕೋಪವೇ ಹೊಲೆ" ಎಂದು ತಿಳಿಸುವ ಕೌಶಲ, ಕ್ರಾಂತಿ ಕಾರಕ ಮನಸ್ಸು, ಅಂದಿನ ಕಾಲಕ್ಕೆ ಮೆಚ್ಚುವಂಥದ್ದೆ. ಇದೆಲ್ಲದರ ಜತೆ "ಧರ್ಮವೆ ಜಯವೆಂಬ ದಿವ್ಯಮಂತ್ರ" ಎಂಬುದನ್ನು ದಾಸರು ಬಿಡಲಿಲ್ಲ, "ಮಾನವ ಜನ್ಮ ದೊಡ್ಡದು" ಎಂದೂ ಹೇಳದಿರಲಿಲ್ಲ. ಈ ಎಲ್ಲ ರೀತಿಯ ವಿಶಿಷ್ಟತೆ, ತಿಳಿವಿನಾಗರ ವಾಗಿದ್ದರಿಂದಲೆ ಅವರ ಗುರುಗಳೆ ಹೊಗಳಿ ಹಾಡಿದ್ದು "ದಾಸರೆಂದರೆ ಪುರಂದರ ದಾಸರಯ್ಯ" ಎಂದು, ಹಾಗೂ 'ಪುರಂದರೋಪನಿಷತ್ತೆಂದು' ಅವರ ಕೃತಿಗಳನ್ನು ಪೂಜಿಸಿದ್ದು ವ್ಯಾಸರಾಯರ ಗುಣಸ್ವಭಾವಕ್ಕೆ ಸಾಕ್ಷಿ. ಇನ್ನು ಹರಿದಾಸರ ಪರಂಪರೆ ಯಂತೂ ಪುರಂದರದಾಸರನ್ನು ನಾರದರ ಅವತಾರಾಂಶ ಸಂಭೂತರೆಂದೇ ಗೌರವಿಸುತ್ತದೆ.

ಪುರಂದರದಾಸರಲ್ಲಿ ಕೀರ್ತನೆಗಳೇ ಹೆಚ್ಚು, ಸುಳಾದಿ, ಉಗಾಭೋಗ ಕಡಿಮೆ. ಮಧ್ವಮತ ಸಿದ್ಧಾಂತ, ಹನುಮ ಭೀಮ ಮಧ್ವರ ಅವತಾರತ್ರಯ ಸ್ತೋತ್ರದಿಂದ ಎಲ್ಲಾರು ಮಾಡುವುದು ಹೊಟ್ಟೆಗಾಗಿ, ಎನ್ನುವತನಕ ಹಾಗೂ "ಜಂಗಮರು ನಾವು", "ತುರು-ಕರು ಕರೆದರೆ ಉಣ್ಣ ಬಹಂದಣ್ಣ" ಎಂಬ ಶುದ್ಧ ಹಾಸ್ಯದ ಪ್ರಜ್ಞೆಯತನಕ, ಪಂಚಭೇದಗಳನ್ನು 'ಸತ್ಯ ಜಗವಿದು' ಎಂದು ಸಾರಿದಂತೆಯೆ ಕೃಷ್ಣನಧಿಕನೆಂದೂ ಘೋಷಿಸಿದವರು. "ಅಣೋರಣೀಯಾನ್ ಮಹತೋ ಮಹೀಯಾನ್" ಎಂಬ ಉಪ ನಿಷದ್ವಾಕ್ಯ "ಅಣುವಾಗಬಲ್ಲ, ಮಹತ್ತಾಗಬಲ್ಲ, ಅಣುಮಹತ್ತೆರಡೊಂದಾಗಬಲ್ಲ"[116] ಎಂಬ (ಸುಳಾದಿ) ಸುಂದರ ರಚನೆಯಲ್ಲಿ ಕನ್ನಡದಲ್ಲಿ ಮೈದಾಳಿ ಬಂದಿದೆ. ಭಾಗವತ, ರಾಮಾಯಣ, ಭಾರತ, ಗೀತೆ, ಕೃಷ್ಣಗೋಪಿಯರ ಗೋಪಿಕಾಗೀತೆ, ಎಲ್ಲವೆಲ್ಲವೂ ಮಡುಗಟ್ಟಿ ನಿಲ್ಲುತ್ತವೆ ಪುರಂದರರಲ್ಲಿ. "ಏಕವೇದ ಪುರಾಣ ವಿವಿಧ ಶಾಸ್ತ್ರ", "ಅನಂತ ಮಕುಟ ಅನಂತ ಶಿರಸ್ಸು ಅನಂತನಯನ", "ಧ್ಯಾನವು ಕಲಿಯುಗದಲ್ಲಿ ಯಜ್ಞಯಾಗವು ತ್ರೇತಾಯುಗದಲ್ಲಿ । ಅರ್ಚನೆ ದ್ವಾಪರದಲ್ಲಿ । ಕೀರ್ತನಮಾತ್ರದಿ ಕಲಿಯುಗದಲ್ಲಿ ವೈಕುಂಠಿಯನೀವ ಪುರಂದರವಿಠಲ"[117], "ವಿಶ್ವತೋಮುಖ, ವಿಶ್ವತಶ್ಚಕ್ಷು, ವಿಶ್ವತೋ

ಬಾಹು ವಿಶ್ವಉದರ ವಿಶ್ವವ್ಯಾಪಕ ವಿಶ್ವಸೂತ್ರಧಾರಕ" ಎಂಬ ಮಂತ್ರಗಳು ಕನ್ನಡದಲ್ಲಿ ಬಂದಿರುವುದು ಪುರಂದರದಾಸರು ಸಾಮಾನ್ಯರಿಗೆಸಗಿದ ಉಪಕಾರವಾಗಿದೆ.[119] ಭಗವಂತನ ಸಾಕಾರ ಸಗುಣ ವಿಗ್ರಹವಂತೂ "ಮಸ್ತಕದಲಿ ಮಾಣಿಕ ಕಿರೀಟ, ಕಸ್ತೂರಿ ತಿಲಕ ಹೊಳೆವ ಲಲಾಟ, ಹಸ್ತದಿಕೊಳಲು, ಝಗಝಗಿಸುವ ಸೋಗೆಯ ಸಂಗುರಳು, ಚಿಗುರು ತುಳಸಿ ವನಮಾಲೆಯಿಟ್ಟ ಕೊರಳು....ಉಡುದಾರ ಒಡ್ಯಾಣ ಸಕಲಾಭರಣ.... ಬೆಡಗಿನ ಪೀತಾಂಬರ...ಕಡಗ ಉಂಗುರ ಗೆಜ್ಜೆ ಇಕ್ಕಿದ ಚರಣ"ವೆಂದು ಬಣ್ಣಿಸುವಲ್ಲಿ ನಮ್ಮ ಮನವಲ್ಲಿ ನಿಲ್ಲುತ್ತದೆ. ಹಾಗೂ ದಾಸರ ಸಗುಣೋಪಾಸನೆಗೆ ಜ್ವಲಂತ ನಿದರ್ಶನ ವಾಗುತ್ತದೆ. ದೇವರ ಸರ್ವಶಕ್ತತೆ, ಸೃಷ್ಟಿ, ಸೃಜನೆ, ಪುರಂದರದಾಸರು ಹೇಳದೆ ಬಿಡುವುದೆ ಇಲ್ಲ. "ಹರಿಗುರುಗಳಿಗೆರಗದ"ವನನ್ನು ನಿಂದಿಸುವಂತೆಯೆ, ಹರಿಪಾರಮ್ಯ ವನ್ನು ಬಗೆಬಗೆಯಿಂದ ಪ್ರತಿಪಾದಿಸುವ ಕೌಶಲ, ಅನೇಕ ಬಾರಿ ದಾಸರನ್ನು ಕವಿಗಳಾಗಿಸು ತ್ತದೆ : "ಹರಿ ನಡೆಯದಿರಲು ನಡೆಯಲಿಲ್ಲ ಜಗವು। ಹರಿ ಎವೆಯಿಕ್ಕದಿರಲು ಎವೆ ಯಿಕ್ಕದೀ ಜಗವು। ಹರಿಉಸಿರಿಕ್ಕದಿರೆ ಉಸಿರಿಕ್ಕದೀ ಜಗವು, ಹರಿಸರ್ವ ಚೇಷ್ಟಕ ಹರಿ ಪುರಂದರ ವಿಠಲ। ಹರಿ ಆಡಿಸಿದಂತೆ ಆಡುತ್ತಿಪ್ಪುದೀ ಜಗವು" ಎನ್ನುತ್ತಾರೆ. ಭಕ್ತರಿಗಾಗಿ ಬಾಳುವ ಅವನು, ಬದುಕುವ ಅವನು, ಭಕ್ತರಿಗಾಗಿ ತನ್ನ ಜೀವನವೆಂದರು ಭಕ್ತವತ್ಸಲನೆಂದು ಹೊಗಳಿಕೆಗೆ ಪಾತ್ರನಾಗುತ್ತಾನೆ ; ಇಲ್ಲಿ ಭಗವಂತನ ಮಹಿಮಾತಿಶ ಯಕ್ಕೆ ಮಾರು ಹೋಗುವ ಭಕ್ತನ ನಿಲುವೂ ಇದೆ. ಹರಿದಾಸ ಹೃದಯ ಹರಿಯ ಕರುಣೆಗೆ ಪುಲಕಿತಗೊಂಡಿದೆ.

ಪುರಂದರದಾಸರಲ್ಲಿ ದಾಸ್ಯಭಾವವಂತೂ ಹಾಸುಹೊಕ್ಕಾಗಿದೆ. "ನಿನ್ನ ದಾಸ ನಾಗಿ ನಿನ್ನೆಂಜಲುಂಡವನ ನೀನುದಾಸೀನ ಮಾಡಿದರೆ ಲೋಗರು ನಗರೆ ನಿನ್ನ ಚರಣ ಕಮಲವನ್ನು ಕೊರಳಲಿ ಕಟ್ಟಿಕೊಂಬುವೆ ಪುರಂದರವಿಠಲ" ಎಂಬ ಉಗಾಭೋಗದಲ್ಲಿ ಕಾಣಬರುವ ದಾಸಭಾವದ ಉತ್ಕರ್ಷ, ಮನೋವಚನ ಕಾಯ ಕರ್ಮಗಳಲ್ಲಿ ನೀನೇ ನೀನೇ ಎಂದು ತ್ರಿಕರಣಪೂರ್ವಕವಾಗಿ ವಿಸಲೀಸುತ್ತಿದೆ. ಹಾಗೂ ಹರಿದಾಸ, ಭಕ್ತ, ದಿನವೂ ಭಂಗಪಟ್ಟು, ಅನ್ನ ನೀರು ಬಟ್ಟೆ ಕಾಣದೆ, ರೋಗ ಕಾಡಿದರೂ, ಛೀ ಎಂದು ತನ್ನವ ರೆಲ್ಲ ಆಡಿದರೂ ಪುರಂದರವಿಠಲನ ಸ್ಮರಣೆ ಮಾತ್ರ ಮಾಡುತಿರಬೇಕು.

ಪುರಂದರದಾಸರ ನಿಂದಾಸ್ತುತಿಗಳನೇಕ. ಹಾಗೆಯೆ ಅವರ ಮಧ್ವ ನಿಷ್ಠೆ ಅಷ್ಟೇ ಅಚಲ. ಅದನ್ನೂ "ಆಚಾರ್ಯ ಸುಳಾದಿಯಲ್ಲಿ"[120] ಸವಿಸ್ತಾರವಾಗಿ ಕಂಡರಿಸುತ್ತಾರೆ ಅವರ ಗದ್ಯ ವರ್ಣನೆಯಂತೂ ಹೇಳಲಸಳ.[121] ಹಾಗೂ ಹರಿಕಥೆಯ ಹರಿದಾಸರ ಸಂಗ ಹರಿದಾಸರ ಮಹಿಮೆ, ಅನೇಕ ಕೃತಿಗಳಲ್ಲಿ ಮೂಡಿ ಬಂದಿದೆ* ಹರಿಯೆ ಸರ್ವೋತ್ತಮ, ಹರನೆಂದು ಹೊಡೀ ನಗಾರಿ ಮೇಲೆ ಕೈಯನೆನ್ನುತ್ತಾರೆ. ಇನ್ನು ಬದುಕನ್ನು ಕುರಿತಂತೆ ದಾಸರ ಕೃತಿಗಳಲ್ಲಿ ಎಲ್ಲೂ ನಿರಾಶೆ ಇಲ್ಲ, ಅವರದ್ದು "ಸಂಸಾರವೇದ".[122]

ಪುರಂದರದಾಸರ ಸಮಾಜ ಸುಧಾರಣಾ ಮನೋಭಾವ, ಅಂಥ ಪರಿಪೂರ್ಣವಲ್ಲ. ಎಲ್ಲೋ ಮೇಲೆ ತಿಳಿಸಿದ ಕೆಲವು ರಚನೆ, ಮಡಿ, ಜಾತಿ, ಪ್ರಸ್ತಾಪ ಬಿಟ್ಟಿವೆ. ಅವರು

ಭಕ್ತಕವಿ. ಮಾನವತಾವಾದಿ ಎಂದು ಬೇಕಾದರೆ ಕರೆಯಬಹುದು. (ಮಾನವ ಜನ್ಮದೊಡ್ಡದು ಇದಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ.) ಆದರೆ, ಅವರ ದೃಷ್ಟಿಯಲ್ಲಿ ದೈವ ಪಟುತ್ವ, ನಿಯಮಕ್ಕೆ ಪ್ರಧಾನತೆ. ಶೋಷಣೆಗೆ ಅವಕಾಶವಿಲ್ಲ. ಸಂಗ್ರಹವನ್ನಂತೂ ಅವರು ಮಾಡರು (ಮಧುಕರವೃತ್ತಿ ಎನ್ನದು-ಭಿಕ್ಷಾಟನೆ). ಪುರಂದರದಾಸರು ಪರೋಪಕಾರ ಮಾಡುವವರನ್ನೂ ಪ್ರಶಂಸಿಸುವಂತೆಯೇ, ಸ್ವಾರ್ಥಿಗಳನ್ನು ಟೀಕಿಸುತ್ತಾರೆ. ಭಿಕ್ಷಕ್ಕೆ ಬೇಡ ಹೋದಾಗ "ಕಡವ ಮುಚ್ಚಿದಳಿದೆಕೊ ಗಯ್ಯಾಳಿ" ಎಂಬಲ್ಲಿ ಅವರ ನೋವು ವ್ಯಕ್ತವಾಗಿದೆ. "ಕೆರೆಯ ಕಟ್ಟಿಸು, ಪೂದೋಟವ ಹಾಕಿಸು, ಸೆರೆಯುಬಿಡಿಸು......" ಎಂಬಲ್ಲಿ ಶಾಸನ ಪಾಠದ "ಕೆರೆಗಳಂ ಕಟ್ಟಿಸು : ಅಚ್ಚೆರೆಗಳೊಳ್ ಸಿಲ್ಕಿದನಾಥರಂ ಬಿಡಿಸು ಎಂಬುದು ನೆನಪಾಗುತ್ತದೆ. ಅನ್ನದಾನದ ಮಹತಿಯಂತೂ ಅವರು ಬಗೆ ಬಗೆಯಾಗಿ ತಿಳಿಸಿದ್ದಾರೆ. ಪುರಂದರದಾಸರದು ಒಂದು ಬಗೆಯ ಸಮುದಾಯವಾದ.

ಹೆಣ್ಣಿನ ವಿಚಾರ, ಆಕೆಯ ಸ್ಥಾನಮಾನದ ಬಗ್ಗೆ ಪುರಂದರದಾಸರು ಪರಂಪರೆಯ ದೃಷ್ಟಿಯವರು. ಅವರ ವಿಚಾರದಲ್ಲಿ ಸಹಾನುಭೂತಿ ಇದೆ. ಆದರೆ "ಹೆಂಡತಿಗೆ ಸ್ವಾತಂತ್ರ್ಯ ಕೊಡದಿರು" ಎಂದೂ ಹೇಳುವಲ್ಲಿ ಎಚ್ಚರಿಕೆಯ ಮಾತಿದೆ. ಕಾಮಾಸಕ್ತಿ ಖಂಡಿಸುವ ಇವರು ಸ್ತ್ರೀನಿಂದಕರಲ್ಲ : ಐಹಿಕ ಬದುಕಿನ ವಿರೋಧಿಯೂ ಅಲ್ಲ.

ಪುರಂದರದಾಸರ ಕೀರ್ತನೆಗಳಲ್ಲಿ ನೀತಿತತ್ತ್ವ, ಅರ್ತಭಾವ,[132] ಪೂಜೆ ಪುನಸ್ಕಾರ ಕುರಿತ ವಿಶ್ಲೇಷಣೆ, ಮಹಾತ್ಮ್ಯಜ್ಞಾನದೊಡಗೂಡಿದ ಭಕ್ತಿ, ಲೋಕನೀತಿ ಎಲ್ಲವೂ ಅಡಕವಾಗಿವೆ. ಅವುಗಳಲ್ಲಿರುವ ಆತ್ಮಶೋಧನೆ, ಆತ್ಮನಿವೇದನ, ವಿಡಂಬನೆ, ಸಮರ್ಪಣ ಭಾವ ಅನನ್ಯವಾದದ್ದು. ಅವರ ಅನೇಕ ಕೃತಿಗಳಲ್ಲಿ ಪ್ರಪಂಚ ವೈವಿಧ್ಯವಿವೆ. ಅವರು ವಾಸ್ತವತಾವಾದಿ, ಬರಿಯ ಕಾಲ್ಪನಿಕ ಬಣ್ಣಗಾರನಲ್ಲ: ಬದುಕಿನ ಕಷ್ಟ ನಿಷ್ಠುರಗಳನ್ನು ಯಥಾರ್ಥವಾಗಿ ಚಿತ್ರಿಸುವಂತೆಯೆ ಜಾಗೃತಿಗೊಳಿಸುವ ಚೈತನ್ಯವೂ ಅವುಗಳಲ್ಲಿವೆ. ಪುರಂದರದಾಸರ ಲೋಕಾನುಭವವೂ ಸಾಕಷ್ಟು ವಿಸ್ತಾರವಾದುದು. ಬಹುಮಟ್ಟಿಗೆ ಅದು ಅಧ್ಯಾತ್ಮಿಕ ಕ್ಷೇತ್ರದ ಪರಿಮಿತಿಯಲ್ಲಿದ್ದರೂ, ಮಾನವನ ಗುಣಾವಗುಣಗಳನ್ನು ವಿಶ್ಲೇಷಣೆ ಮಾಡುವ ಅವರ ಸಾಮರ್ಥ್ಯ ಸ್ತುತ್ಯರ್ಹ. "ಹರಿಕೊಟ್ಟ ಕಾಲಕ್ಕೆ ಉಣಲಿಲ್ಲ ಪ್ರಾಣಿ" ಎಂಬುದಾಗಿ ಜಿಪುಣನನ್ನು ವಿಡಂಬನಗೈವ ಕೃತಿ, ಅವರ ಪೂರ್ವಾಶ್ರಮದ ಬದುಕಿಗೂ, ಈಗಿನ ಮಾರ್ಪಾಡಿಗೂ ಆಗಿರುವ ಅಂತರವನ್ನು ಗುರುತಿಸುತ್ತದೆ. ಅಂಥ ಅನೇಕ ಚಾಟಿಯೇಟು ಅವರ ಕೀರ್ತನ, ಸುಳಾದಿ, ಉಗಭೋಗಗಳಲ್ಲಿ ಚುರುಕಾಗೇ ಬಂದಿವೆ.

ಪುರಂದರದಾಸರ ಸಾಹಿತ್ಯ ಹೀಗೆಂದು ಒಂದೇ ಮಾತಲ್ಲಿ ಹೇಳಲಾಗುವುದಿಲ್ಲ. ಅಲ್ಲಿಯ ಪುರಂದರ ಪ್ರಪಂಚವೇ[133] ಬೇರೆ. "ಅದು ವೈವಿಧ್ಯ ವೈಶಿಷ್ಟ್ಯಪೂರ್ಣ, ಜಾಗೃತ ಚೇತನವಿರುವಂಥದು. ಅವರ ಕೃತಿಗಳಲ್ಲಿ ವೇದಾಂತದ ಸಾರವಿದೆ, ಸಾಹಿತ್ಯದ ಸ್ವಾರಸ್ಯವಿದೆ : ಸಂಗೀತದ ಸಾಮರಸ್ಯವಿದೆ. ಈ ತ್ರಿವೇಣೀ ಸಂಗಮದಲ್ಲಿ ಮಿಂದು

ಬಂದ ಬದುಕು ಎಂದೆಂದಿಗೂ ಕೃತಾರ್ಥವಾದೀತು."[135] ಪುರಂದರದಾಸರ ಉಪಮೆ, ಸಹಜ ಪ್ರತಿಮೆಗಳು[136] ಗಾನಮಾಧುರ್ಯ ಅವರನ್ನು ಕರ್ನಾಟಕ ಸಂಗೀತ ಪಿತಾಮಹ ರೆಂದೇ ಪ್ರಶಸ್ತಿ ನೀಡಿವೆ. ಸಂಗೀತ ಪ್ರಪಂಚದಲ್ಲಂತೂ ಪುರಂದರದಾಸರ ಕೊಡುಗೆ ಅನನ್ಯ : ಮಕ್ಕಳಿಗೆ 'ಪಿಳ್ಳಾರಿಗೀತೆ', "ಜಂಟಿವರಸೆ"ಗಳನ್ನು ರಚಿಸಿಕೊಟ್ಟವರೆ ಪುರಂದರದಾಸರು. ಅನಂತರ ೧೮ನೇ ಶತಕದ ಕೊನೆಗೆ ಬಂದ ತಿರುವಯ್ಯಾರಿನ ವಾಗ್ಗೇಯಕಾರರಾದ ತ್ಯಾಗರಾಜರು ಶ್ರೀರಾಮ ಭಕ್ತರು, ಅನೇಕ ಕೀರ್ತನ ಕರ್ತೃಗಳು. ಅವರು ತಮ್ಮ "ಪ್ರಹ್ಲಾದ ಭಕ್ತವಿಜಯ"ವೆಂಬ ಸಂಗೀತ ರೂಪದಲ್ಲಿ ಪುರಂದರದಾಸ ರನ್ನು ಭಕ್ತಿ ವಿನಯಗಳಿಂದ ಸ್ಮರಿಸಿದ್ದಾರೆ.

"ದುರಿತವ್ರಾತಮುಲಿಲ್ಲನು ಬದಿಮಾರ್ಚೀತಿ ಹರಿಗುಣಮುಲ ಬಾಡುಚುನೆ ಪುಡಮಿ ಬರವಶುಡೈವೆಲಯು ಪುರಂದರದಾಸುನಿ ಮಹಿಮಮುಲನು ದ್ಯಚೆದ ಮಂದಿಲೋನ್" ಈ ಪರಂಪರೆಯನ್ನು ಅನಂತರ ಬಂದ ಗಾಯಕರಾದ ತುಳಜಾಜಿರಾಜ ತನ್ನ 'ಸಂಗೀತ ಸಾರಾಮೃತ' ದಲ್ಲಿಯೂ, ಸುಬ್ಬರಾಮ ದೀಕ್ಷಿತರೆಂಬ ಹಿರಿಯರು, ತಮ್ಮ 'ಸಂಗೀತ ಸಂಪ್ರದಾಯ ಪ್ರದರ್ಶಿನೀ' ಎಂಬ ಲಕ್ಷಣ ಗ್ರಂಥದಲ್ಲಿ ಪುರಂದರದಾಸರ ಅನೇಕ ರಚನೆ ಗಳನ್ನು ಲಕ್ಷ್ಯಗಳಾಗಿ ಉದಹರಿಸುವುದರ ಮೂಲಕ ಸ್ಮರಿಸಿದ್ದಾರೆ.[137]

ಪುರಂದರದಾಸರು ೪,೭೫,೦೦೦ ಕೃತಿಗಳನ್ನು ರಚಿಸಿದರೆಂದು ಅವರ ಕೀರ್ತನೆ ಯೊಂದರಲ್ಲಿ ತಿಳಿದು ಬರುತ್ತದೆ.[138] ಅದನ್ನು ವಿಜಯದಾಸರೂ ತಿಳಿಸುತ್ತಾರೆ. ಆದರೆ, ಅದರಲ್ಲಿ ದೊರೆತಿರುವುದು ಕೆಲವು ನೂರು ಕೃತಿ ಮಾತ್ರ. (ವಾಸುದೇವನ ನಾಮಾ ವಳಿಯ ಕ್ಲುಪ್ತಿಯನು ; ವ್ಯಾಸರಾಯರದಯದಿಂದ ಬಣ್ಣಿಸೆನು) ಇದಕ್ಕೆ ಕಾರಣ : ವಿಜಯನಗರ ಸಾಮ್ರಾಜ್ಯ ಪತನ, ದಾಸಕೂಟಸ್ಥರ ಚೆದುರುವಿಕೆ. ವಿಜಯನಗರದ ಪತನಕ್ಕೆ ಪೂರ್ವಭಾವಿಯಾಗಿ ಈ ಬಗ್ಗೆ ದೊರೆಯಬಹುದಾದ ಲಿಖಿತ ಸಾಕ್ಷ್ಯಗಳನ್ನು ಸಂಶೋಧಿಸಿದರೆ ಆಗ ಈ ಸತ್ಯಸಂಗತಿ ಸಂಶೋಧಿತ ಆದೀತೆನ್ನಿಸುತ್ತದೆ. ಇದರಿಂದ ಪುರಂದರದಾಸರ ರಚನೆಗಳ ನಿಜ ಸ್ವರೂಪ, ಅವರೇ ನಿರ್ದೇಶಿಸಿದ್ದ ಸಂಗೀತ ಲಕ್ಷಣ ಗಳು, ಎಲ್ಲವೂ ತಿಳಿಯಬಹುದೇನೊ. "ಕೇಳನೊ ಹರಿ ತಾಳನೊ। ತಾಳಮೇಳಗಳಿದ್ದು ಪ್ರೇಮವಿಲ್ಲದಗಾನ" ಎಂಬಲ್ಲಿ ದಾಸರ ಸಂಗೀತ ಸವಿವ ಪರಿ, ದೈವಭಕ್ತಿ, ಎಲ್ಲವೂ ಅವರನ್ನು ಅನಂತರ ಬಂದ ಹರಿದಾಸರು 'ನಾರದಾಂಶ'ರೆಂದು ಕರೆದಿರುವುದರಲ್ಲಿ ಎಷ್ಟು ನಿಜವಾದ ಅರ್ಥಅಡಗಿದೆ ಎನ್ನುವುದು ವೇದ್ಯವಾಗುತ್ತದೆ. (ಸಾತು ಅಸ್ಮಿನ್ ಪರಮ ಪ್ರೇಮರೂಪಾ-ನಾರದ ಭಕ್ತಿಸೂತ್ರದಲ್ಲಿ ದೈವಭಕ್ತಿಯ ಪ್ರೇಮವೆಂದೇ ಕರೆದಿದ್ದಾರೆ) ಪುರಂದರರ ಅನೇಕ ಕೃತಿಗಳಲ್ಲಿ ಪ್ರೇಮ, ಭಗವದ್ಭಕ್ತಿ ಹೊನಲಾಗಿ ಹರಿದಿವೆ.

ಪುರಂದರದಾಸರ ಕೆಲವಾರು ಕೃತಿಗಳಲ್ಲಿ ಅವರು ಪಟ್ಟ ಬವಣೆ, ಕ್ಲೇಶ, ವ್ಯಥೆಗಳ ಚಿತ್ರಣವಿದೆ. "ಯಾಕೆನ್ನ ಈ ರಾಜ್ಯಕೆಳೆತಂದೆ ಶ್ರೀಹರಿಯೆ" ಎನ್ನುವಲ್ಲಿ ವ್ಯಾಸರಾಯ ರಿಲ್ಲದ ವಿಜಯನಗರ, (ಕ್ರಿ.ಶ. ೧೫೩೯ರಲ್ಲಿ ವ್ಯಾಸರಾಯರು ವೃಂದಾವನಸ್ಥರಾದರು), ರಾಜಕೀಯ ವಿಪ್ಲವ, ಕ್ಷೋಭೆ, ಜನತೆಯಲ್ಲಿ ಕಾಣಬಂದ ಭಾವನೆಗಳು, ಎಲ್ಲವೂ

ತಿಳಿಯುತ್ತವೆ. ವಯೋಧರ್ಮಕ್ಕನುಸಾರ ಆಗಿ ಮುಪ್ಪಡರಿದಾಗ ಬರುವ ಪಾಡನ್ನೂ ದಾಸರು ಮಾರ್ಮಿಕವಾಗಿ ಚಿತ್ರಿಸಿದ್ದಾರೆ. "ನಂಬದಿರು ಈ ದೇಹ ನಿತ್ಯವಲ್ಲ", "ಪುಟ್ಟಿಸಬೇಡವೋ ದೇವ ಎಂದೆಂದಿಗೂ", "ಮಾನಭಂಗವ ಮಾಡಿ ಮತ್ತೆ ಉಪಕಾರಗಳೇ। ಏನು ಮಾಡಿದರೇನು ಇರಬಾರದು"–ಎಂಬಲ್ಲಿರುವ ಅಳಲು, "ಸತ್ಯವಂತರಿಗಿದು ಕಾಲವಲ್ಲ" (೧೬ನೇ ಶತಮಾನದ ಮಾತಿದು), "ಎನ್ನ ಕಡೆ ಹಾಯಿಸುವುದು ನಿನ್ನ ಭಾರ", ಹರಿದಾಸರಾಗಿ ಭಿಕ್ಷೆ ಬೇಡುವಾಗ ಪಟ್ಟ ಪಾಡು, (ಕದವ ಮುಚ್ಚಿದಳದೆಕೊ ಗಯ್ಯಾಳಿ) ಇವೆಲ್ಲ ಕೃತಿಗಳಲ್ಲಿ ಅವರ ಮಧುಕರವೃತ್ತಿ ಅನುಭವಿಸಿದ ನೋವು ಚಿತ್ರಿತವಾಗಿದೆ. ಇದಲ್ಲದೆ, ಮುಪ್ಪಿನ ವಯಸ್ಸಿನಲ್ಲಿ ಬೆಳೆದ ಮಗನನ್ನು ಕಳಕೊಂಡ ಕೊರಗು (ಗಿಳಿಯು ಪಂಜರದೊಳಿಲ್ಲ–ಎಂಬ ಕೃತಿ[129]), ದಾಸರ ಮುಪ್ಪಿನ ದಿನಗಳು ಕಷ್ಟಕರವಾಗಿದ್ದವು ಎಂಬ ಭಾವನೆ ತರಿಸುತ್ತದೆ.

ಪುರಂದರದಾಸರ ಕೃತಿಗಳನ್ನು ಅವಲೋಕಿಸುವುದು ಸಾಗರವನ್ನ ಕಂಡಂತೆ ಎಂದೆನಿಸುತ್ತದೆ. ಅದಕ್ಕೆ ಅದೇ ಹೋಲಿಕೆ. ಅಲ್ಲಿ ಏರಿಳಿತ, ತೆರೆ ಬಂಡೆ, ಇದ್ದರೂ ಅದು ಭಕ್ತಿಸಾಗರ. ಅವರೊಬ್ಬ ಶಕ್ತ ಕವಿ ಎನ್ನೋಣವೆ : ಅಲ್ಲಿ ಹಿತವಾದ ಸಂಸ್ಕೃತ ಕನ್ನಡ ಬಳಕೆ ಕಾಣುತ್ತೇವೆ : ಉಪಮೆ, ವರ್ಣನೆ, ಅಲಂಕಾರ, ಧ್ವನಿರಮ್ಯತೆಗಳಿವೆ. ಅಲ್ಲಿ ಸರಳತೆಯಿದೆ : ನಿರರ್ಗಳವಾದ ಸಂಪತ್ತಿ ಇದೆ: ಅದೇ ಅವರ ಕೃತಿಗಳಿಗೆ ವಿಶೇಷ ಸೊಬಗು ನೀಡುತ್ತವೆ. ಕನಕದಾಸರನ್ನು ಪ್ರಶಂಸಿಸಿ ಮಾಡಿರುವ ಕೃತಿ, ಅಂದಿನ ಮತಾಂಧ ಭಾವನೆಗೂ ನಿದರ್ಶನವಾಗಿದೆ. ಡಾಂಭಿಕತೆಗೂ, ಮಂತ ಪ್ರದರ್ಶನದ ಸೋಗಿಗೂ ಉದಾಹರಣೆಯಾಗಿ ನಿಲ್ಲುತ್ತದೆ. ಪುರಂದರದಾಸರು ಹರಿದಾಸ ಪರಂಪರೆಯ ವಿಚಾರಸರಣಿಯನ್ನು ಸ್ವೀಕರಿಸಿದವರು. ಅಲ್ಲಿ ಅವರು ಬದ್ಧ (committed) ಆಗುತ್ತಾರೆ. ಇಷ್ಟೆಲ್ಲ ಹೇಳಿದರೂ ಪುರಂದರರ ಕೃತಿಗಳಲ್ಲಿ ಲೋಕಾನುಭವ ಸಂಪತ್ತಿ, ನೈಜತೆ, ಅತಿರೇಕವಲ್ಲದ ಸಹಜ ದೇಸಿ, ನೇರ ಅಭಿವ್ಯಕ್ತಿ, ಭಕ್ತಿಯೊಡಗೂಡಿ, ಹದವಾಗಿ ಕಾಯಿಸಿದ ಹಸುವಿನ ಅಚ್ಚ ಹಾಲಿಗೆ ಪಚ್ಚಕರ್ಪೂರ, ಕೇಸರಿ, ದ್ರಾಕ್ಷಿ, ಗೋಡಂಬಿಗಳ ಮಿಶ್ರಣದಂತೆ, ಹದವಾಗಿ ಮಿಳಿತಗೊಂಡಿವೆಯೆಂಬ ಮಾತು ಹೇಳಬಹುದು. ದಾಸರ ಕೃತಿಗಳಲ್ಲಿ ಅಡಕವಾಗಿರುವ ನವವಿಧಭಕ್ತಿ, ಮಧುರಭಾವ, ಯಾವುದನ್ನು ಸ್ವೀಕರಿಸಿ, ಯಾವುದನ್ನು ಉದ್ಧರಿಸದೆ ಬಿಡಲಾದೀತು ?

ಕಡೆಯದಾಗಿ ಪುರಂದರದಾಸರ ಉಗಾಭೋಗಗಳಲ್ಲಿ ಕಾಣಬರುವ ವಚನಕಾರರ ವಚನಗಳ ಸಾಮ್ಯ[130] ಡಾ. ಚಿದಾನಂದಮೂರ್ತಿಯವರು ತಮ್ಮ ದೀರ್ಘ ಪ್ರಬಂಧದಲ್ಲಿ ಪುರಂದರದಾಸರ ಕೆಲವು ಉಗಾಭೋಗಗಳಿಗೂ, ಹಾಗೂ ಬಸವಣ್ಣನವರ ವಚನಗಳಿಗೂ ಇರುವ ಪ್ರಭಾವ, ಸಾಮ್ಯತೆ, ತಿಳಿಸಿಕೊಟ್ಟಿದ್ದಾರೆ. ವಚನಕಾರರ ಪ್ರಭಾವ ದಾಸರ ಮೇಲಾಗಿರುವ ಸ್ಪಷ್ಟ ಕುರುಹು ಕಾಣುತ್ತದೆ. "ಮನೋಭಾವವನ್ನು ಗಮನಿಸಿ ಹೇಳುವುದಾದರೆ ಅವರೂ ಬಸವಣ್ಣನವರೂ ಒಂದೇ ಗೊಂಚಲ ಎರಡು ಹೂಗಳು. ಭಕ್ತಿ ವೃಕ್ಷದ ಎರಡು ಪಕ್ವ ಫಲಗಳು......" ಎಂಬ ಮಾತು ಸಾರ್ವತ್ರಿಕವಾಗಿ ಒಪ್ಪ

ವಂಥದು.[131] ಹಾಗೂ "ಮಹಾತ್ಮರು ಸದೃಶವಾಗಿ ಆಲೋಚನೆ ಮಾಡುತ್ತಾರೆ" ಎಂಬ ಮಾತೂ ಇಲ್ಲಿ ಉಲ್ಲೇಖಾರ್ಹ. ಇಲ್ಲಿ ಮಾದರಿಗಾಗಿ ಒಂದು ವಚನ, ಉಗಾಭೋಗ ಉದ್ಧರಿಸಿ, ನಮ್ಮ ಪುರಂದರ ಸಮೀಕ್ಷೆಗೆ ಸದ್ಯಕ್ಕೆ ವಿರಾಮ ಕೊಡಬೇಕಾಗಿದೆ :

| ಪುರಂದರದಾಸರ ಕೃತಿ | ಬಸವಣ್ಣನವರ ವಚನ |
|---|---|
| 1. ಉರಿಗಂಜೆ ಸೆರೆಗಂಜೆ ಶರೀರದ | 1. ಹರಿವ ಹಾವಿಗಂಜೆ ಉರಿವ ನಾಲಗೆ |
| ಭಯಕಂಜೆ | ಗಂಜೆ ಸುರಗಿಯ ಮೊನೆಗಂಜೆ |
| ಹಾವಿಗಂಜೆ ಚೇಳಿಗಂಜೆ ಕತ್ತಿಯ | ಒಂದಕ್ಕಂಜುವೆ ಒಂದಕ್ಕಳುಕುವೆ |
| ಧಾರೆಗಂಜೆ | ಪರಸ್ತ್ರೀ ಪರಧನಲೋಭ |
| ಇನ್ನೊಂದಕ್ಕಂಜುವೆ ಇನ್ನೊಂದ | ಜೂಬಿಗಂಜುವೆ |
| ಕ್ಕಳುಕುವೆ | ಮುನ್ನಂಜದ ರಾವಣನೇ |
| ಪರ ಧನ ಪರಸತಿಗೆರಡಕ್ಕಂಜುವೆನಯ್ಯ | ವಿಧಿಯಾದ |
| ಹಿಂದೆ ಕೌರವ ರಾವಣರೇನಾಗಿ | ಅಂಜುವೆನಯ್ಯಾ ಕೂಡಲಸಂಗಮ |
| ಪೋದರು | ದೇವಾ ॥ |
| ಮುಂದೆ ಸಲಹೊ ಪುರಂದರವಿಠಲ ॥ | |
| 2. ಜಗವ ಸುತ್ತಿಹುದೆಲ್ಲ ನಿನ್ನ | 2. ಜಗವಸುತ್ತಿಪ್ಪುದು ನಿನ್ನ |
| ಮಾಯೆಯಯ್ಯ | ಮಾಯೆಯಯ್ಯಾ |
| ನಿನ್ನ ಸುತ್ತಿಹುದೆಲ್ಲ ಎನ್ನ | ನಿನ್ನ ಸುತ್ತಿಪ್ಪುದು ಎನ್ನ ಮನ |
| ಮನವಯ್ಯ | ನೋಡಯ್ಯಾ |
| ಜಗವು ನಿನ್ನೊಳಗೆ ನೀನು | ನೀನು ಜಗಕ್ಕೆ ಬಲ್ಲಿದನು, ಆನು |
| ಎನ್ನೊಳಗೆ | ನಿನಗೆ ಬಲ್ಲಿದನು ಕಂಡಯ್ಯಾ |
| ಜಗಕೆ ಬಲ್ಲಿದ ನೀನು, ನಿನಗೆ | ಕರಿಯು ಕನ್ನಡಿಯೊಳಗಡಗಿ |
| ಬಲ್ಲಿದ ನಾನು | ದಂತಯ್ಯ |
| ಕರಿಯು ಕನ್ನಡಿಯೊಳು ಅಡಗಿಪ್ಪ | ಎನ್ನೊಳಗೆ ನೀನಡಗಿಹ ಕೂಡಲ |
| ತೆರನಂತೆ | ಸಂಗಮದೇವಾ ॥ |
| ನೀನು ಎನ್ನೊಳಡಗಿಪ್ಪೆ ಪುರಂದರ | |
| ವಿಠಲ ॥ | |

ಇಲ್ಲಿ ಕೆಲವು ಮಾತ್ರ ಸಾದೃಶ್ಯ ಸ್ಪಷ್ಟವಾಗಿವೆ. ಹರಿದಾಸರ ರಚನೆಗಳ ಮೇಲೆ ವಚನಕಾರರ ಪ್ರಭಾವ ಅನೇಕ ಕಡೆ ಕಂಡು ಬರುತ್ತದೆ. ಡಾ. ಎಂ. ಸಿ. ಎಂ. ಅವರ ಒಂದು ಅನಿಸಿಕೆ ಇಲ್ಲಿ ಉಲ್ಲೇಖಾರ್ಹ : ಹರಿದಾಸರು ಶಿವಶರಣರ ವಚನಗಳನ್ನು ಓದಿ ಆನಂದಿಸಿ ಅದರ ಗುರುತುಗಳನ್ನು ತಮ್ಮ ಕೃತಿಗಳಲ್ಲಿ ಉಳಿಸಿರುವುದು ಹರಿದಾಸರ

ವಿಶಾಲಹೃದಯಕ್ಕೆ ಸಾಕ್ಷಿ. ವಚನಗಳ ಶ್ರೇಷ್ಠತೆಗೆ ಅತ್ಯಪೂರ್ವ ರೀತಿಯ ವಿಮರ್ಶೆ. ಭಕ್ತರೆಲ್ಲರೂ ಒಂದೇ..... ಎಂಬ ಮಾತನ್ನು ಇದು ಪುಷ್ಟೀಕರಿಸುವುದಲ್ಲವೆ ? ಸಾಹಿತ್ಯದಲ್ಲಿ ಈ ರೀತಿಯ ಕೊಡುಕೊಳುವಿಕೆ ಇದ್ದೇ ಇರುತ್ತದೆ. ಇದಕ್ಕೆ ಭಾವೋದ್ವೇಗಬೇಕಿಲ್ಲ. ಆದರೆ ವಚನ-ಉಗಾಭೋಗಗಳ ನಡುವಣ ಸಾಮ್ಯ, ವೈದೃಶ್ಯಗಳಿಗೆ ಇನ್ನೂ ಹೆಚ್ಚಿನ ಐತಿಹಾಸಿಕ ಆಧಾರಗಳ ಅವಶ್ಯಕತೆಯಿದೆ. ಹಾಗೆ ನೋಡಿದಾಗ ಉಗಾಭೋಗಗಳಲ್ಲಿ ವಚನಗಳ ಪ್ರಭಾವ ಅಷ್ಟು ದಟ್ಟವಾಗಿ, ಕಾಣುವುದಿಲ್ಲ. ಅನಂತರದಲ್ಲಿ ಯಾರಾದರೂ ಕೆಲವಾರು ಉಗಾಭೋಗಗಳನ್ನು ವಚನ ಖಂಡಗಳಿಂದ ಸಿದ್ಧಪಡಿಸಿ ರಚಿಸಿದರೆ ಎಂಬ ಊಹೆ ಏಳುತ್ತದೆ ಹಾಗೂ ವಚನ-ಉಗಾಭೋಗಗಳ ಮೂಲ ಒಂದೇ ಇರಬಹುದೆ ? ಎಂಬ ಪ್ರಶ್ನೆಯೂ ಉದ್ಭವಿಸುತ್ತದೆ. ಇವುಗಳಿಗೆ ಉತ್ತರ ಸದ್ಯಕ್ಕೆ ಇನ್ನೂ ದೊರೆತಿಲ್ಲ.

## ಶಾಸನ ಇತ್ಯಾದಿ

ಪುರಂದರದಾಸರ ಬಗ್ಗೆ ಇತರ ಐತಿಹಾಸಿಕ ಮಾಹಿತಿ ದೊರೆತಿರುವುದು, ಈಗಾಗಲೆ ಸುವಿದಿತ ಆಗಿರುವ[139] ಕೃಷ್ಣದೇವರಾಯನ ಕಮಲಾಪುರದ ತಾಮ್ರ ಶಾಸನದಿಂದ. ಇದನ್ನು ಮೊದಲಿಗೆ ಸಂಸ್ಕರಿಸಿದ ಡಾ ಪಿ. ಬಿ. ದೇಸಾಯಿ ಅವರು ಸುದೀರ್ಘ ಲೇಖನವನ್ನು ಬರೆದಿದ್ದಾರೆ. ಈ ತಾಮ್ರಲಿಪಿಯಿಂದ ಕೆಲವು ಅಂಶ ತಿಳಿಯಬರುತ್ತವೆ.

ಶಾಸನ ತೇದಿ : ೧೫೨೬, ಫೆಬ್ರವರಿ ೨೪, ಶಾ. ಶ. ೧೪೪೭

ಪಾರ್ಥಿವ,

ಫಾಲ್ಗುಣ-೧೨, ಶುಕ್ರವಾರ.

## ಮುಖ್ಯಾಂಶಗಳು

1. ಕೃಷ್ಣದೇವರಾಯ ತುಂಗಭದ್ರಾ ತೀರದ ಹಂಪೆಯ ವಿಠ್ಠಲರಾಯನ ಸನ್ನಿಧಿಯಲ್ಲಿರಾಜ ಶಾಸನವನ್ನು ನಿರೂಪಿಸುತ್ತಾನೆ. ಬ್ರಹ್ಮಣ್ಯತೀರ್ಥರ ಶಿಷ್ಯರು ಬ್ರಹ್ಮಚಿಂತನಪರರು, ಸಕಲ ಶಾಸ್ತ್ರಗಳ ವ್ಯಾಖ್ಯಾನಕರ್ತರು ಆದ ವ್ಯಾಸತೀರ್ಥರಿಗೆ ವ್ಯಾಸಸಮುದ್ರ ಎಂಬ ಹೆಸರಿನ ಬೆಟ್ಟಕೊಂಡ ಗ್ರಾಮವನ್ನು ಸರ್ವಮಾನ್ಯ ಏಕಭೋಗ್ಯ ದತ್ತಿಯಾಗಿ ಬಿಡುತ್ತಾನೆ.

2. ಈ ಊರಿನ ಇನ್ನೊಂದು ಹೆಸರು ಕೃಷ್ಣರಾಯಪುರ. ಈ ದತ್ತಿ ಗ್ರಾಮ ಘನಗಿರಿ ರಾಜ್ಯದ ಕೊಯ್ಯಕುರಿಸಿ ಸೀಮೆಯ, ಮುಕ್ಕಟ್ಟ ಸ್ಥಲದಲ್ಲಿ ನೆಲಸಿತ್ತೆಂದು ಶಾಸನಪಾಠ ತಿಳಿಸುತ್ತದೆ.

3. ......ದತ್ತಿ ದಾನ ಪಡೆದ ವ್ಯಾಸತೀರ್ಥರು ಆ ದತ್ತಿ ಭೂಮಿಯಲ್ಲಿ ಹಲವು ವಿಭಾಗಗಳನ್ನು ಮಾಡಿ, ಅನೇಕರಿಗೆ ವೃತ್ತಿಗಳನ್ನು ಹಾಕಿಕೊಟ್ಟರು. ಒಬ್ಬೊಬ್ಬ ಬ್ರಾಹ್ಮಣನಿಗೆ ಇಂತಿಷ್ಟು ವೃತ್ತಿಯೆಂದು ನಿರ್ದಿಷ್ಟಪಡಿಸಿದರು. ಇಲ್ಲಿ[140] ಶ್ರೀವ್ಯಾಸ

ರಾಯರು ಪುರಂದರದಾಸರ ಮೂವರು ಮಕ್ಕಳಿಗೆ ಎರಡೆರಡು ವೃತ್ತಿಗಳನ್ನು ಹಾಕಿ ಕೊಟ್ಟಿರುವ ವಿಚಾರವಿದೆ :

1. ವಸಿಷ್ಠ ಗೋತ್ರದ ಯಜುಶ್ಶಾಖೆಯ ಶ್ರೀಪುರಂದರದಾಸರ ಮಗ ಲಕ್ಷ್ಮಣ ದಾಸನಿಗೆ ಎರಡು ವೃತ್ತಿಗಳು.

2. ವಸಿಷ್ಠ ಗೋತ್ರದ ಯಜುಶ್ಶಾಖೆಯ ಶ್ರೀಪುರಂದರದಾಸರ ಮಗ ಹೇಬಣ ದಾಸನಿಗೆ ಎರಡು ವೃತ್ತಿಗಳು.

3. ವಸಿಷ್ಠ ಗೋತ್ರದ ಯಜುಶ್ಶಾಖೆಯ ಶ್ರೀಪುರಂದರದಾಸರ ಮಗ ಮಧ್ವ ಪತಿದಾಸನಿಗೆ[134] ಎರಡು ವೃತ್ತಿಗಳು.

ಶಾಸನದಲ್ಲಿ ಉಕ್ತವಾಗಿರುವ ವ್ಯಾಸತೀರ್ಥರೆ ಸುಪ್ರಸಿದ್ಧ ವ್ಯಾಸರಾಯರು ಪುರಂದರ ದಾಸರ ಗುರುಗಳು. ಇಲ್ಲಿ ಶಾಸನದಲ್ಲಿ ಪುರಂದರದಾಸರು, ಅವರ ಮೂವರು ಮಕ್ಕಳ ಹೆಸರು ಬಂದಿದೆ.ಶ್ರೀಪುರಂದರರು ದಾನ ಪಡೆದಿಲ್ಲ. ಎಲ್ಲ ತ್ಯಜಿಸಿದ್ದ ಅವರು ಅನಂತರ ಧನನ್ನು ಯಾರಿಂದಲೂ ಪಡೆಯಲಿಲ್ಲವೆಂಬುದು ಶಾಸನದಿಂದ ಖಚಿತಗೊಳ್ಳುವ ಅಂಶ. ಆದರೆ ಅವರು ಜೀವಂತವಿದ್ದರು.

ಈ ಶಾಸನದಿಂದ ತಿಳಿದು ಬರುವ ಐತಿಹಾಸಿಕ ಅಂಶಗಳಿವು.

1. ಶ್ರೀಪುರಂದರದಾಸರು ವಸಿಷ್ಠ ಗೋತ್ರ, ಯಜುಶ್ಶಾಖೆಯವರು, ಯಜುರ್ವೇದಿಗಳು.

2. ಕ್ರಿ. ಶ. ೧೫೬೬ರಲ್ಲಿ ಅವರ ಮೂವರು ಮಕ್ಕಳೂ ಇದ್ದರು. ಇವರು ಕೂಡ ತಂದೆಯಂತೆ ದಾಸ ಅಂಕಿತ ಪಡೆದಿದ್ದರು. ಹರಿದಾಸ ಪರಂಪರೆಯ ಶಾಸನಕ್ಕನುಗುಣ ವಾಗಿ ಈ ಲಕ್ಷ್ಮಣದಾಸ, ಹೇಬಣದಾಸರು ಕಾಣಿಸಿಕೊಳ್ಳುವುದಿಲ್ಲ.

ಶಾಸನ ಕಾಲಕ್ಕೆ ಪುರಂದರದಾಸರಿಗೆ ಸುಮಾರು ೮೬ ವರ್ಷ. (ಅವರು ನಿರ್ಯಾಣ ಹೊಂದಿದ್ದು ೧೫೬೪ರಲ್ಲಿ ಎಂದು ಸ್ಪಷ್ಟವಾಗಿದೆ). ಈ ದಿಸೆಯಲ್ಲಿ ಸಂಶೋಧನೆಗೆ ತಕ್ಕ ಆಕರ ಇನ್ನೂ ದೊರೆತಿಲ್ಲ.

ವಿಜಯದಾಸರ ಒಂದು ಸುಳಾದಿಯಲ್ಲಿ ಪುರಂದರದಾಸರು, ಪುರಂದರ, ವರದ ಗುರು, ಅಭಿನವಗುರು, ಮಧ್ವಪತಿ ಎಂಬ ಅಂಕಿತಗಳಿಂದ ಕೃತಿ ರಚನೆ ಮಾಡಿದರೆಂದು ತಿಳಿಸಿದ್ದಾರೆ :

ಇದರಲ್ಲಿ ನಾಲ್ವರು ಮಕ್ಕಳ ಹೆಸರಿದೆ. ಮಧ್ವಪ್ಪದಾಸ–ಮಧ್ವಪತಿ ಎಂಬುದರಲ್ಲಿ ಸಂದೇಹವಿಲ್ಲ. ಹೇಬಣ ಅಂದರೆ ಹೀಗಿರಬಹುದು ಎಂದು ನಮ್ಮ ಊಹೆ:(ಹೆಬ್ಬೆರಳು–ಹಿರಿದಾದ ಬೆರಳು) ಹೆಬ್ಬಣ್ಣ ಹೇಬಣ್ಣ–ಹೇಬಣ ಇರಬೇಕು. ಹಿರಿಯಣ್ಣನೆಂದೇ

ಅನೇಕ ಜನ ಇರಿಸಿಕೊಳ್ಳುವುದಿದೆ. ಪುರಂದರದಾಸರ ತಂದೆ ವರದಪ್ಪನಾಯಕ. ಅವನ ಹೆಸರನ್ನೆ ಹಿರಿಯ ಮಗನಿಗೆ ಇರಿಸಿದ್ದ ಪ್ರಯುಕ್ತ ಅದು ಹೆಬ್ಬಣ್ಣ–ಹೆಬಣ್ಣ–ಹೇಬಣ ಆಗಿರಬೇಕು. 'ವರದ ಶ್ರೀವೆಂಕಟಪುರಂದರವಿಠಲ' ಅಂಕಿತದ ಒಂದು ಕೀರ್ತನೆಯೂ ಇದೆಯೆಂದು ಉದ್ಧರಿಸಿರುವ ಜಾಗೀರದಾರರು,[136] ಅವನೆ ಹೇಬಣ್ಣನೆಂದು ಊಹಿಸಿ-ದ್ದಾರೆ. ನಾಲ್ಕನೆಯವನಿದ್ದು, ಅವನಿಗೆ ಉಪನಯನ ಆಗದ ಪ್ರಯುಕ್ತ ಅವನ ಗೋತ್ರ, ಪ್ರವರ ಇರಲು ಸಾಧ್ಯವಿಲ್ಲ. ದಾಸರ ಅನಂತರ ಕೆಲವು ಕಾರ್ಪಣ್ಯದ ದಿನ ಗಳನ್ನು, ಡಾ ಆರ್. ಜಿ. ರಾನಡೆಯವರೂ ಪ್ರಸ್ತಾಪಿಸಿದ್ದಾರೆ.[137]

ಶ್ರೀಪುರಂದರದಾಸರ ಈ ಕೆಲವು ವಿವರ ಶಾಸನ ನೀಡಿದರೂ, ಅವರ "ಚರಿತ್ರೆ ಐತಿಹಾಸಿಕ ಅಂಧಕಾರದಿಂದ ಆವೃತವಾಗಿದೆ". ಸಾಂಪ್ರದಾಯಿಕವಾದ ವಿಷಯ ಪ್ರಕಾರ ದಾಸರಿಗೆ ಒಬ್ಬ ಹೆಣ್ಣು ಮಗಳು ವರದ, ಗುರು, ಅಭಿನವಪುರಂದರ, ಮಧ್ವಪತಿ ಎಂಬ ನಾಲ್ವರು ಗಂಡು ಮಕ್ಕಳಿದ್ದರೆಂಬುದು ಇವರಲ್ಲಿ ಮಧ್ವಪತಿ –ಶಾಸನದ ಮಧ್ವಪ ಒಬ್ಬನೇ. ಮಿಕ್ಕ ಅಂಶಗಳಲ್ಲಿ ಊಹೆಗೇ ಸ್ವಲ್ಪ ಅವಕಾಶ.[138] ಐತಿಹಾಸಿಕ ಅಂಶಗಳಿಗೇ ಹೆಚ್ಚು ಬೆಲೆ ತೂಗಬೇಕಾದ್ದರಿಂದ ಶಾಸನ ನಿರ್ವಿವಾದವೆಂದು ಹೇಳಬಹುದು.[139] "ಅವರ ಜೀವನದ ವಾಸ್ತವ ಸಂಗತಿಗಳನ್ನು ಹೇಳದೆ ಅಂಧ ಶ್ರದ್ಧೆಯ ಕಟ್ಟುಕತೆಗಳನ್ನು ಮಾತ್ರ ದಾಸರ ಸಮಕಾಲೀನರು ಮುಂದಿನ ತಲೆಮಾರಿಗೆ ಬಿಟ್ಟು ಹೋದುದು ಅವರ (ಪುರಂದರರ) ವಿಷಯದಲ್ಲಿ ಮಾಡಿದ ಅಪಕಾರ ಎಂದು ಧೈರ್ಯವಾಗಿ ಹೇಳಬಹುದು."

ಪುರಂದರದಾಸರ ನಿರ್ಯಾಣ ಸ್ಥಳದ ಬಗ್ಗೆಯೂ ವಿವಾದವಿದೆ. ಅದಿಲ್ಲಿ ಅಪ್ರಸ್ತುತ. ಅವರ ಮಗ ಮಧ್ವಪತಿಯ ಕೀರ್ತನೆಯಂತೆ, ರಕ್ತಾಕ್ಷಿ ಸಂವತ್ಸರದ ಪುಷ್ಯಾಂತ ರವಿವಾರ........ತೆರಳಿದರು ಹರಿಪುರಕಿಂದು ಪುರಂದರದಾಸರು ದೀನಬಂಧು ....ವಿರೂಪಾಕ್ಷಕ್ಷೇತ್ರದಿ ವಿಠಲನ ಸನ್ನಿಧಿಯಲ್ಲಿ ಶರೀರವನ್ನು ಇರಿಸಿ" ಎನ್ನುತ್ತಾರೆ. ಇಲ್ಲಿ ಆ ಕ್ಷೇತ್ರ ಹಂಪೆಯೆ ಎಂದು ಊಹಿಸಬಹುದು. (ವಿದ್ಯಾನಗರದ ಸನ್ನಿಧಿಯಲ್ಲಿ ಎಂಬ ಪಾಠ–ಕರ್ಣಾಟಕ ಭಕ್ತವಿಜಯ : ಪುಟ–೨೨೦) ವಿಜಯದಾಸರು ಹೇಳುವುದು ರಕ್ತಾಕ್ಷಿ ವತ್ಸರ ಅರ್ಕವಾರ, ಇಂದು ಕ್ಷಯ...ಯುಕ್ತ ಪುಷ್ಯಮಾಸ..."ವಿಜಯದಾಸರು ಮಧ್ವಪತಿಯ ಕೀರ್ತನೆಯನ್ನ ಅನುಸರಿಸಿದಂತಿದೆ. ಇಲ್ಲಿವರೆಗೆ[140] ನಡೆದಿರುವ ವಿದ್ವಾಂಸರ ಸಂಶೋಧನೆಯಂತೆ ಪುರಂದರದಾಸರು ಕ್ರಿ. ಶ. ೧೫೬೪ರಲ್ಲಿ[141] ಹರಿಪುರಕ್ಕೆ ದಿರಬೇಕು. ಆಗ್ಗೆ ಅವರಿಗೆ ೮೦ ವರ್ಷ ಸಂದಿತ್ತು. "ಕಲ್ಲನ್ನು ಕಡೆದು ಚೆಲುವಾದ ವಿಗ್ರಹ ಮಾಡಿ ಆ ವಿಗ್ರಹವನ್ನು ದೇವರಾಗಿ ಸಮೆದ ರೂಪಣ. ಅದು ಪುರಂದರ ದಾಸರ ಸಾಹಿತ್ಯದಲ್ಲಿ ಪ್ರತಿಬಿಂಬಿಸುತ್ತದೆಂಬ" ಮಾತು ಯಥಾರ್ಥವಾದದ್ದು.[142]

**ಕನಕದಾಸರು**

ಹರಿದಾಸಸಾಹಿತ್ಯದಲ್ಲಿ ಪುರಂದರದಾಸರ ತರುವಾಯ ಕೂಡಲೆ ನೆನಪಿಗೆ ಬರುವ ಹೆಸರು ಕನಕದಾಸರದು. ಹರಿದಾಸಸಾಹಿತ್ಯದಲ್ಲಿ ಹೆಸರಾಂತ ಇವರಿಬ್ಬರನ್ನು ದಾಸ ಪಂಥದ ಅಶ್ವಿನೀ ದೇವತೆಗಳೆಂದೆ ಕರೆಯುವ ವಾಡಿಕೆ.[143] ವ್ಯಾಸರಾಯರ ನೇತೃತ್ವದಲ್ಲಿ ಇವರಿಬ್ಬರೂ ತಮ್ಮದೆ ವಿಶಿಷ್ಟ ಸ್ವಂತಿಕೆಯಿಂದ ಇದ್ದು ಹರಿದಾಸ ಸಂಪ್ರದಾಯಕ್ಕೆ ಶೋಭಾಯಮಾನರಾಗಿದ್ದಾರೆ. ಪುರಂದರದಾಸರು ಸಂಗೀತಶಾಸ್ತ್ರದ ಪಿತಾಮಹರೆನಿಸಿ ಕೀರ್ತನೆಗಳಲ್ಲಿ ಹೆಸರು ಗಳಿಸಿದ್ದರೆ ಕನಕದಾಸರು ಕಾವ್ಯಲೋಕದಲ್ಲಿಯೂ ಒಂದು ಸ್ಥಾನ ಪಡೆದಿದ್ದಾರೆ. "ಕನಕದಾಸರು ದಾಸರಲ್ಲಿ ಕವಿಗಳು : ಅದೇ ಅವರ ವೈಶಿಷ್ಟ್ಯ."[144] ಪುರಂದರದಾಸರಷ್ಟು ಸಂಖ್ಯೆಯಲ್ಲಿ ಕೀರ್ತನೆಗಳನ್ನು ಕನಕದಾಸರು ರಚಿಸಿಲ್ಲವಾದರೂ, ಅವರ ಕೀರ್ತನೆಗಳಲ್ಲಿ ಕಾಣಬರುವ ಅತುಳ ಭಕ್ತಿ ಕಾವ್ಯ ಕೃತಿಗಳಲ್ಲೂ ಕಂಡುಬಂದಿರುವುದು ಅವರ ಕಾವ್ಯಪ್ರಜ್ಞೆಗೆ ದ್ಯೋತಕ. ಸಂಖ್ಯೆಯ ದೃಷ್ಟಿಯಿಂದ ಕಿರಿದಾದರೂ-ಕನಕ ದಾಸರ ಕೀರ್ತನೆಗಳು ಅವುಗಳದ್ದೆ ಸ್ವಂತಿಕೆ, ವಿಶಿಷ್ಟತೆ ಪಡೆದಿವೆ. ಕಾವ್ಯ ಕ್ಷೇತ್ರದಲ್ಲಿಯೂ ಉಳಿದ ಹರಿದಾಸರಿಗಿಂತ ಭಿನ್ನ ಆದ ಕಾವ್ಯಪ್ರಜ್ಞೆ ಪಡೆದಿರುವವೆಂಬುದನ್ನು ಕನಕದಾಸರ ಕೃತಿಗಳ ಅವಲೋಕನದಿಂದ ತಿಳಿಯಬಹುದು.[145] ಕನಕದಾಸರ ವ್ಯಕ್ತಿತ್ವ ದಾಸಪರಂಪರೆ ಯಲ್ಲಿ ಭಕ್ತಿಪ್ರಜ್ಞೆಗೆ ಒಳಗಾದರೂ, ಅವರ ಭಕ್ತಿಭಾವನೆ ಕಾವ್ಯಪ್ರಜ್ಞೆಗೆ ಮೂಲಭಕ್ತಿ ಯಾಗಿ ಪರಿಣಮಿಸಿತು. ಆದರಿಂದಾಗಿಯೆ ಅವರು ಕೀರ್ತನಕಾರರು ಮಾತ್ರ ಅಲ್ಲ, ಕವಿಗಳೂ ಹೌದು. ಏಕೆಂದರೆ ಹರಿದಾಸಸಾಹಿತ್ಯದ ಹರಹು ಪರಂಪರಾನುಗತವಾಗಿ ಸುಳಾದಿ, ಕೀರ್ತನೆ, ಉಗಾಭೋಗಗಳಿಗಷ್ಟೇ ಸೀಮಿತಗೊಂಡಿದ್ದು ಕನಕದಾಸರ ಕಾವ್ಯ ಕೃತಿಗಳಿಂದಾಗಿ ಇನ್ನೂ ವಿಸ್ತಾರಗೊಂಡಿತು. ಆ ಯಶಸ್ಸು ಖಂಡಿತ ಕನಕದಾಸರದ್ದೆ. ಕನಕದಾಸರ ಈ ಕಾವ್ಯಪ್ರಜ್ಞೆ, ಕೃತಿರಚನೆ, ಮುಂಬಂದ ಹರಿದಾಸರಿಗೂ ಕಾವ್ಯ ರಚನೆಗೆ ಪ್ರೇರಣೆನೀಡಿತೆಂದೂ ಹೇಳಬಹುದು.

**ಕನಕದಾಸರ ವಿಶಿಷ್ಟತೆ**

ಕನಕದಾಸರಲ್ಲಿ ಎದ್ದು ಕಾಣುವ ವಿಶಿಷ್ಟತೆ, ೧೬ನೇಶತಕದಲ್ಲಿ ಸಮಾಜದ ಕೆಳಸ್ತರ ದಿಂದ ಒಬ್ಬ ಶೂದ್ರ, ಎಂಥ ಪ್ರತಿಷ್ಠಾವಂತ ಕೀರ್ತನಕಾರ, ಕವಿ ಅವತರಿಸಿ ಬಂದ ಎನ್ನುವು ದೊಂದು. ಎರಡನೆಯದು, ಪರಂಪರೆಯಾಗಿ ಬಂದ ಹರಿದಾಸರಲ್ಲಿ ಪ್ರಮುಖರಾದ ಶ್ರೀವ್ಯಾಸರಾಯರು ಕನಕನಿಗೆ ಇತ್ತ ಮನ್ನಣೆ ಹಾಗೂ ಈಗಲೂ ಅನಂತರ, ಕನಕನನ್ನು "ಅಪರೋಕ್ಷಜ್ಞಾನಿಗಳು", "ಯಮಾಂಶ ಸಂಭೂತರು" ಎಂದೆಲ್ಲ ವಿಶೇಷಗಳನ್ನು ಸೇರಿಸುವ ಅನೇಕ ಮಾಧ್ವ ಸಂಪ್ರದಾಯಸ್ಥರು ಹರಿದಾಸರಲ್ಲಿ ಮಾತ್ರ ಸೇರಿಸುವುದಿಲ್ಲ. ಅದಕ್ಕೆ ಕಾರಣ, ಮಧ್ವಸಂಪ್ರದಾಯ ರೀತ್ಯಾ ವ್ಯಾಸರಾಯರು ಕನಕದಾಸರಿಗೆ ದಾಸದೀಕ್ಷೆ ನೀಡಲಿಲ್ಲವೆಂಬುದು. ಈ ನಿಟ್ಟಿನಲ್ಲಿಯೂ ಕನಕದಾಸರು ಏಕಮೇವಾದ್ವಿತೀಯರಾಗಿ ಸ್ವತಂತ್ರರಾಗಿ, ಆಗ್ಗೆ ಹಬ್ಬಿದ್ದ ಬ್ರಾಹ್ಮಣ–ಡಾಂಭಿಕರ ನಡುವೆ ಹೇಗೆ ಎದ್ದು ತೋರು

ತ್ತಾರೆ. ಅವರು ಪಟ್ಟಿರಬಹುದಾದ ಬವಣೆ, ತಿಳಿಯುವಂತೆಯೆ ಹರಿದಾಸ ಆಂದೋಲನಕ್ಕೆ ಒಂದು ರೀತಿಯ ತಿರುವನ್ನು ನೀಡಿರುವುದೂ ಗಮನಾರ್ಹ.

ಕನಕದಾಸರ ಜೀವಿತದ ಅವಧಿ ಇನ್ನೂ ಖಚಿತವಾಗಿ ನಿರ್ಧಾರ ಆಗಿರದಿದ್ದರೂ ಅವರ ಕೃತಿಗಳು, ಅಲ್ಲಿ ಕೊಂಡಾಡಿರುವ ಗುರುವರ್ಯರು, ಇತರ ಕವಿಗಳು, ಅರಸರು ಇವರುಗಳ ಕಾಲಾವಧಿ ಗುರುತಿಸುವುದರ ಮೂಲಕ ನಿರ್ಧರಿಸಬೇಕಾಗುತ್ತದೆ. ಅದಕ್ಕೆ ಅವರ ಕೃತಿಗಳಲ್ಲಿನ ರಾಜಕೀಯ, ಸಾಮಾಜಿಕ ಘಟನೆಗಳೂ ನೆರವಾಗುತ್ತವೆ. ಪುರಂದರ ದಾಸರ ಜೀವನಾವಧಿ ೧೪೮೪-೧೫೬೪ ಎಂಬುದು ವಿದ್ವಾಂಸರಿಗೆ ಒಪ್ಪಿತವಾಗಿದೆ. ೧೫೨೧, ಕೃಷ್ಣದೇವರಾಯ ಕುಹುಯೋಗವನ್ನು ವ್ಯಾಸರಾಯರು ಪರಿಹರಿಸಿದ್ದು. ೧೫೩೯, ವ್ಯಾಸರಾಯರು ವೃಂದಾವನಸ್ಥರಾದ ಸಮಯ ಪುರಂದರ-ಕನಕದಾಸ ರಿಬ್ಬರೂ ಆಗ ಗುರುಗಳ ನೇತೃತ್ವದಲ್ಲಿಯೆ ಹರಿದಾಸರಾಗಿದ್ದರು. ಈ ಎಲ್ಲ ಆಧಾರ ಗಳಿಂದ, ಹಾಗೂ ಪುರಂದರದಾಸರಿಗಿಂತ ಕಿರಿಯರಾದ ಪ್ರಯುಕ್ತ, ಕನಕದಾಸರು ಸುಮಾರು ಕ್ರಿ. ಶ. ೧೪೮೮ರಲ್ಲಿ ಜನಿಸಿದರೆಂದು ಖಚಿತಪಡಿಸಬಹುದು. (ಇದಕ್ಕೆ ಮೋಹನತರಂಗಿಣಿಯ ಕೆಲವು ವರ್ಣನೆ-ಕೃಷ್ಣದೇವರಾಯನ ರಾಯಚೂರು ಯುದ್ಧದ ದೃಶ್ಯ-ಎಲ್ಲ ಇಂಬುಕೊಡುತ್ತವೆ.)

ಕನಕದಾಸರು ಹುಟ್ಟಿದ 'ಜಾತಿ, ಕುಲ ಯಾವುದೆಂಬುದು[146] ಒಂದು ಒಡೆಯ ಲಾರದ ಒಗಟವೆ ಆಗಿದೆ'ಯೆಂದಿದ್ದರೂ ಇತ್ತೀಚಿನ ಸಂಶೋಧನೆ, ಕನಕದಾಸರು ಜಾತಿ ಯಿಂದ ಕುರುಬರೆಂದು ಸ್ಪಷ್ಟೀಕರಿಸಿವೆ.[147] ಅವರನ್ನು ನಾಯಕ (ಬೇಡ)ರೆಂದೂ ಹೇಳುವವರಿದಾರೆ. ಶ್ರೀಪುರಂದರದಾಸರ ಕೀರ್ತನೆ ಎಂದು ಪ್ರಚಾರದಲ್ಲಿರುವ "ದಾಸರ ನಿಂದಿಸಬೇಡೊ ಮನುಜ-ಹರಿದಾಸರ ನಿಂದಿಸಬೇಡ" ಎಂಬುದರಲ್ಲಿ ಕನಕದಾಸರು ಕಬ್ಬಲಿಗ ಜಾತಿಯವರೆಂದು, ತುಂಬುರರವತಾರಾಂಶರೆಂದೂ ಹೇಳಿದೆ. ಇವು ನಮ್ಮ ವಾಸ್ತವ ಜ್ಞಾನದ ಅಭಾವವಷ್ಟೆ. ಕನಕದಾಸರು ಜಾತ್ಯಾ ಅಂಡೆ ಕುರುಬರೆಂದು, ಶ್ರೀ ಶಿವಮೂರ್ತಿ ಶಾಸ್ತ್ರಿಗಳು ಒಂದೆಡೆ ಇದಮಿತ್ಥಂ ಎಂಬಂತೆ ತಿಳಿಸಿಬಿಟ್ಟಿದಾರೆ.[148] ಕನಕ ದಾಸರು ಬ್ರಾಹ್ಮಣರಲ್ಲ, ಲಿಂಗವಂತರಲ್ಲ, ಹಾಗಾದರೆ ಅವರು ಯಾವ ಜಾತಿ ? ಅವರದ್ದು "ಹರಿಭಕ್ತ" ಜಾತಿಯೆಂದೆನ್ನಬೇಕಷ್ಟೆ, ಅವರು ಹರಿಭಕ್ತಿಯಲ್ಲೇ ಮಿಂದೇಳುವ ಸಂತರಾದ್ದರಿಂದ.

ಕನಕದಾಸರು 'ಕುರುಬ'ರೆಂದು ನಿರ್ಧರಿಸಲು ಒಂದು ಕಾರಣ ಅವರ ತಂದೆ-ತಾಯಿ ಯರ ಹೆಸರು. ಬೀರಪ್ಪ-ಬಚ್ಚಮ್ಮ ಎಂಬುವವರ ಮಗನಾಗಿ, ಕನಕದಾಸರು ಹುಟ್ಟಿದರು. 'ಬೀರಪ್ಪ' ಎಂಬ ಹೆಸರು ಕುರುಬರಲ್ಲಿಯಲ್ಲದೆ ಬೇರೆಡೆ ನಾವು ಕಾಣುವುದಿಲ್ಲ. ಬೀರೇದೇವರು, (ಬೀರೇದೇವರ ಒಕ್ಕಲು) ಕುರುಬ ಪಂಗಡದ ದೇವತೆಗಳು.[149] ಎರಡನೆಯದಾಗಿ, ಅವರು ತಮ್ಮ ಒಂದೆರಡು ಕೃತಿಗಳಲ್ಲಿ ಆಸಂಸರಿಸಿ ರುವ ಧಾಟಿ 'ಬೀರಪ್ಪ' ಎಂಬ ಹೆಸರನ್ನ ಇರಿಸಿಕೊಂಡ ಕುರುಬರು ಶೈವಮತಸ್ಥರೂ ಹೌದು, ತಿರುಪತಿಯ ಶ್ರೀನಿವಾಸನಿಗೆ ನಡೆದುಕೊಳ್ಳುವವರೂ ಇದಾರೆ. ಕನಕದಾಸರು

ತಮ್ಮನ್ನು ಎಲ್ಲಿಯೂ ನಾಯಕರು, ಕಬ್ಬಲಿಗರೆಂದು ಕರೆದುಕೊಂಡಿಲ್ಲ. ಆದರಿಂದ ಕನಕದಾಸರನ್ನು 'ಕುರುಬ' ಪಂಗಡದಿಂದ ಬಂದವರೆಂದೆ ಹೇಳಬಹುದು. ಈ ಕುಲ ಆ ಕುಲವೆಂಬುದನ್ನು ಮರೆತು, ಏರಿ ಬೆಳೆದಮ್ಮ ಅವರ ಸಾಧನೆ,[150] ಅವರು ಕಾಲ-ದೇಶ, ಮತತತ್ತ್ವ ಇವುಗಳನ್ನು ಮೀರಿದ ದೇವ ಜೀವಿ, ಸರ್ವ ಸಮದರ್ಶಿಗಳು ಅದೇ ಅವರ ವಿಶಿಷ್ಟತೆ.

ಕನಕದಾಸರು ಹರಿದಾಸರಾಗುವ ಮೊದಲು ಕಾಗಿನೆಲೆಯವರಾಗಿದ್ದು, ಬಾಡ ದೊಂದಿಗೆ ನಿಕಟ ಸಂಪರ್ಕ ಹೊಂದಿರಲೇಬೇಕು (ಬಾಡದಾಸ, ಬಾಡದಾದಿಕೇಶವ ಎಂಬೆಲ್ಲ ಅಂಕಿತ, ಕೀರ್ತನೆಗಳಲ್ಲಿವೆ). ಇವೆರಡರಲ್ಲಿ ಯಾವುದು ಅವರ ಹುಟ್ಟೂರು ಎಂಬುದಿನ್ನೂ ಖಚಿತವಾಗಿಲ್ಲ. ಇತಿಹಾಸದಂತೆ ಬಾಡ, 'ಪನ್ನೆರಡರ' 'ಹಿದಿಯೂರಾ ದಂತೆ', ಕಾಗಿನೆಲ್ಲಿ ಕ್ರಿ.ಶ. ೧೧ನೆ ಶತಮಾನದಿಂದಲೇ ಪ್ರಸಿದ್ಧಿ ಪಡೆದ, ಅನಂತರ ವಿಜಯ ನಗರದ ಪಡಿಮೂಲೆಯಾಗಿ ಮೆರೆದ ಊರು. ಊರು ಎಂಬುದಕ್ಕಿಂತ ''ಕಾಗಿನೆಲೆಪುರ'' ವೆಂದ[151] ಶಾಸನಗಳು ವರ್ಣಿಸುತ್ತವೆ. ಕನಕದಾಸರಿಗೂ ಮೊದಲಿನಿಂದ ಅಲ್ಲಿ ತನ್ನ ಹಳಮ ಸಾರುವ ಅನೇಕ ಶಿಲಾಶಾಸನ ಇವೆ. ಕನಕದಾಸರ ಉಪಾಸ್ಯ ದೇವತೆಯಾದ 'ಕಾಗಿನೆಲೆ ಯಾದಿಕೇಶವ' ನಿಗೆ ಸಮೀಪದಲ್ಲಿ ಹಳೆಯ ಕಾಲದ ನರಸಿಂಹ ದೇವಾಲಯವೂ ಇದೆ. ಕಾಗಿನೆಲೆಯು ಬೃಹತ್‌ಕೆರೆ, ಗ್ರಾಮವನ್ನು ತೆಂಗು-ಕೌಂಗುಗಳ ಆಗರವಾಗಿಸಿದೆ. ಇಂದಿನ ಕಾಗಿನೆಲೆ ಜನವಸತಿದಲ್ಲಿರುವುದು ಕನಕದಾಸರ ಅಂಕಿತ ದೈವವಿರುವ ಸ್ಥಳವೆಂದು ಪ್ರಸಿದ್ಧಿಗೆ ಬಂದಿರುವುದರಿಂದಲೇ. ಕಾಗಿನೆಲೆಗೆ ಸಮೀಪದಲ್ಲಿರುವ ಕನಕದಾಸರ ಜನ್ಮಸ್ಥಳವೆನ್ನುವ ''ಕುಮ್ಮೂರು'' – ''ದಾಸ'' ಪಂಗಡದವರ ಗ್ರಾಮ. ಇಲ್ಲಿ ಇರುವ ತಿಮ್ಮಕೇಶವ ದೇವರಗುಡಿ, ಕನಕನ ತಂದೆ ಬೀರನಾಯಕ ಕಟ್ಟಿಸಿದ್ದು, ಚಿಕ್ಕಗುಡ್ಡವೊಂದರ ಮೇಲಿದೆ. ದಾಸರೆ ಇಲ್ಲಿ ಅರ್ಚಕರು. ಅವರೆಲ್ಲ ''ಬೇಡ''ರ ಗುಂಪಿಗೆ ಸೇರುವಂಥವರು. ರಾಮಾನುಜೀಯ ಗುರು ಪರಂಪರೆಯ ಶಿಷ್ಯರು. ಆನೆ ಗೊಂದಿಯ ರಾಮಾನುಜ ಪರಂಪರೆಯ ಗುರುಗಳು ಇಂದೂ ಈ ಕಡೆ ಬಂದು, ವೈಷ್ಣವ ದೀಕ್ಷೆ ನೀಡುತ್ತಾರೆ. ಹಾಗಾದರೆ ಕನಕದಾಸರಿಗೂ ಬಾಡಕ್ಕೂ ಏನು ನಂಟು? ಅಲ್ಲಿಯ ಕೆಲವು ಸ್ಥಳಗಳು ಅವರ ನೆನಪಾಗಿ, ಇವೆ. ಇವೆಲ್ಲದರಿಂದ ತಿಳಿಯಬಹುದೆಂದರೆ, ಕನಕ ದಾಸರು ಕಾಗಿನೆಲೆ ಬಾಡಗಳಿಗೆ ಸೇರಿದ ಪ್ರಾಂತ್ಯವನ್ನಾಳುವ ಸಾಮಂತ ರಾಜರಾಗಿದ್ದರು. ಅರಸುತನ, ತಂದೆಯಿಂದ ಪರಂಪರಾನುಗತ ಆಗಿ ಬಂದುದು.

ಕನಕದಾಸರು ದ್ವೈತ ಪಂಥೀಯರೆ ಅಥವಾ ರಾಮಾನುಜೀಯ ಪಂಥದವರೆ ಎಂಬುದೊಂದು ಪ್ರಶ್ನೆ. ಈ ವಿಚಾರದಲ್ಲಿ ಒಂದು ಮಾತನ್ನು ಹೇಳಬಹುದು. ''ಕಾಲಮಾನದ ಒಂದು ಸಂಪ್ರದಾಯದ ಜಡತೆ ಅವರ ಭಾಗವತ ಧರ್ಮದಲ್ಲಿಯೂ ಸೇರಿರುವುದು ಸ್ವಾಭಾವಿಕವಾಗಿದ್ದರೂ, ಅವರು ಕಾಲ, ದೇಶ,[152] ಮತ-ತತ್ತ್ವ ಇವು ಗಳನ್ನು ಮೀರಿದ ದೇವ ಜೀವಿಗಳು, ಸರ್ವಸಮದರ್ಶಿಗಳು. ಈ ಅನುಮಾನಕ್ಕೆ ಕಾರಣ, ಮೋಹನತರಂಗಿಣಿಯಲ್ಲಿ ಪೀಠಿಕೆಯ ಪದ್ಯದಲ್ಲಿ ರಾಮಾನುಜರಿಗೆ ಶರಣು

ಹೋಗಿ, ಅನಂತರ ರಾಮಾನುಜ ಪರಂಪರೆಯಲ್ಲಿದ್ದ 'ತಾತಾಚಾರಿಯರಿಗೆರಗುವೆ' ನೆಂದಿದ್ದಾರೆ : ಅವರಲ್ಲಿ ಮೊದಲು ಅವರ ಅಧಿದೇವತೆಯಾದ ಕಾಗಿನೆಲೆಯ ಆದಿಕೇಶವನ ಸ್ತುತಿ ಕಾಣಿಸುತ್ತದೆಯೇ ವಿನಾಹ ಬೇರೆ ಇಲ್ಲ :

ಶ್ರೀಗಿರಿಜೇಶ್ವರನಾತ್ಮಾಭಿರಾಮ ಸದ್
ವಾಗೀಶಪಿತ ಪರಂಧಾಮ ॥
ಕಾಗಿನೆಲೆಯರಂಗ ಸುರಸಾರ್ವಭೌಮ ಸು
ಶ್ಯಾಗಿ ಪಾಲಿಸೊ ಪೂರ್ಣಕಾಮ ॥

ಇಲ್ಲಿ ಶ್ರೀಹರಿಯ ಸರ್ವೋತ್ತಮಂತೆ ಕಂಡು ಬಂದಿದೆ : ಹಾಗೆಯೇ ತ್ರಿಮೂರ್ತಿಗಳಲ್ಲಿಯ ತಾರತಮ್ಯತೆಯೂ ಕೂಡ ಅನಂತರ ಬರುವ ಪದ್ಯದಲ್ಲಿ

ಶ್ರೀಮದ್ಗುರುರಾಯ ದುರಿತ ವಿಜೇಯ ದು ।
ಷ್ಕಾಮ ವ್ಯಿಚ್ಛೇದನಾಹ್ಲಾದ ॥
ತಾಮಸಗುಣನಾಶ ಸಾತ್ವಿಕೋಲ್ಲಾಸ ಶ್ರೀ ।
ರಾಮಾನುಜಮುನಿ ಶರಣು ॥

ಎಂದು ಆಚಾರ್ಯ ರಾಮಾನುಜರನ್ನು ಭಕ್ತಿಯಿಂದ ಸ್ಮರಿಸಿದ್ದಾರೆ. ಅಲ್ಲದೆ :

"ರಾಮಾನುಜರೇ ನಮೋ ನಮೋ"
ಸ್ವಾಮಿ ಲಕ್ಷ್ಮಣರೂಪ ನಮೋ ನಮೋ

ಎಂದು ಹಾಡಿದ್ದಾರೆ.

ಪಿಡಿದಿರ ದಂಡಿಕಾವೇಷ್ಟಿ...ಮೃತ್ತಿಕಾ ।
ನಿಡುಶಿಖಿಯಜ್ಞೋಪವೀತದಿಂದ ॥
ತೊಡೆದ ದ್ವಾದಶನಾಮ ಶ್ರೀಚೂರ್ಣದಿ ಒಪ್ಪುವ
ಒಡೆಯರಾಮಾನುಜರೇ ನಮೋ ನಮೋ॥

ಎಂದು ರಾಮಾನುಜರನ್ನು ಕೊಂಡಾಡಿದ ನಂತರ

"ಈ ರೀತಿಯ ಕೆಂಪುವಡೆದ ಸದ್ಗುರುಕರ
ವಾರಿಜೋದ್ಭವ ಶಿಷ್ಯಜನರ ।
ಪ್ರೇರಿಸಿ ನಾಲ್ಕಗೆ ಫಲವೀವ ತಾತಾ ।
ಚಾರಿಯರಡಿಗೆರಗುವೆನು॥ [163]

(ನಾಲ್ಕು ರೀತಿ : ಧರ್ಮ, ಅರ್ಥ, ಕಾಮ, ಮೋಕ್ಷ).

ಎಂದು ತಮ್ಮ ಗುರುಗಳಾದ ತಿರುಮಲೈ ತಾತಾಚಾರಿಯವರನ್ನು ಸ್ಮರಿಸಿದ್ದಾರೆ. 'ಮೋಹನತರಂಗಿಣಿ'ಕಾವ್ಯದಲ್ಲಿ ಕನಕದಾಸರು ವ್ಯಾಸರಾಯರ ಅಥವಾ ಇನ್ನಾವ ಮಾಧ್ವ ಗುರುಗಳನ್ನು ಕುರಿತು ಪ್ರಸ್ತಾಪಿಸಿಲ್ಲ. ಈ ಸ್ತುತಿಯಲ್ಲಿ ವಿಶಿಷ್ಟಾದ್ವೈತ ತತ್ತ್ವದ ಒಲವೇನೂ ಕೂಡ ಅಲ್ಲಲ್ಲಿ ಇಣಿಕಿದೆ. ಮೋಹನತರಂಗಿಣಿ ಪೌರಾಣಿಕ ಕೃತಿಯಾದರೂ, ಇದರಲ್ಲಿ ಬ್ರಾಹ್ಮಣರೆಲ್ಲ ತಿರುನಾಮಧಾರಿಗಳೆ ; ಆದರೆ ಈ ಗುರುಗಳು ಕನಕರಿಗೆ ದೀಕ್ಷೆ ನೀಡಿದರೆ ? ಈ ಬಗ್ಗೆ ಸ್ಪಷ್ಟ ಸೂಚನೆಗಳಿಲ್ಲ. ಅಂಕಿತ ಪಡೆದಿರುವುದೂ ಅಸಂಭವವೆ. ತಂದೆ ಬೀರನಾಯಕನ ಕಾಲದ ತಿಮ್ಮಪ್ಪನಭಕ್ತಿ, ರಾಮಾನುಜೀಯ ಗುರುಪರಂಪರೆ ಮೇಲೆ ಭಕ್ತಿ ಇದೇ ಪ್ರೇರಣೆಯಾಗಿದ್ದಿತು. ಅಷ್ಟೇ ಅಲ್ಲ 'ತಾತಾಚಾರಿಯ' ಆಡಿಗೆರಗಿರಲೂ ಬಹುದು. ಇನ್ನೊಂದು ವಿಶೇಷ ಕನಕದಾಸರ ದೃಷ್ಟಿಯಲ್ಲಿ ಶ್ರೀ ವೇದವ್ಯಾಸರು ಶ್ರೀಹರಿಯ ಅವತಾರವಲ್ಲ : ಒಬ್ಬ ಭಕ್ತ ಶ್ರೇಷ್ಠರಷ್ಟೆ. ಅವರ ಸ್ತುತಿಗಳಲ್ಲಿ ಮಾಧ್ವ ಸಂಪ್ರದಾಯದ ತಾರತಮ್ಯಸ್ತುತಿ ಕಾಣಬರುವುದಿಲ್ಲ. "ರಾಮಾನುಜರು ಮಾನವನ ದೈವೀ ಸಾಧನೆಗೆ ಭಕ್ತಿಯನ್ನೆ ವಿವಿಧ ರೀತಿಯಲ್ಲಿ ಬಳಸಬೇಕೆಂಬುದನ್ನು ತಿಳಿಸಿ ಕೊಟ್ಟ ರೇನೊ ನಿಜ. ಹರಿಸರ್ವೋತ್ತಮತ್ವವನ್ನೂ ಪ್ರತಿಪಾದನೆ ಮಾಡಿದರು. ಇದರಿಂದ ಕನಕದಾಸರು, ರಾಮಾನುಜ ಪಂಥವನುಸರಿಸಿದ ಹರಿಭಕ್ತರೆಂದು ತಿಳಿಯಬರುತ್ತದೆ. ಹೀಗಿದ್ದಾಗ್ಯೂ, ಕರ್ನಾಟಕದ ಹರಿದಾಸರಲ್ಲಿ-ದ್ವೈತ ಸಂಪ್ರದಾಯದ ಭಕ್ತಿ ಪ್ರತಿ ಪಾದಕರ ಜತೆ ಕನಕದಾಸರ ಹೆಸರನ್ನೂ ಸೇರಿಸಲು ಕಾರಣ ? ಕನಕದಾಸರ ಹೆಸರು ಉಳಿದುಕೊಂಡು ಬಂದಿರುವುದು ಹರಿದಾಸ ಪರಂಪರೆಯವರಿಂದೆ. ಅದಲ್ಲದೆ ಕೀರ್ತನೆ ಗಳಲ್ಲೂ ಕೆಲವು ಸುಳುಹು ಕಾಣುತ್ತವೆ. ಆದರೆ, ಒಂದು "ವೈದಿಕ ಧರ್ಮದ ತಿರುಳಾದ ವರ್ಣಾಶ್ರಮ ಧರ್ಮವನ್ನು ಪರಿಶುದ್ಧವಾದ ವಿಷ್ಣುಭಕ್ತಿಯ ತಳಹದಿಯ ಮೇಲೆ ನಿಲ್ಲಿಸಿದವರು ದ್ವೈತ ಸಿದ್ಧಾಂತದ ಪ್ರವರ್ತಕರಾದ ಶ್ರೀಮಧ್ವಾಚಾರ್ಯರು"[154] ಎಂಬ ಈ ಮಾತಿನ ಪ್ರಕಾರ ಹುಟ್ಟಿನಿಂದ ಶೂದ್ರನಾದ (ಕುರುಬ) ಕನಕನಿಗೆ ಮಾಧ್ವ ಸಿದ್ಧಾಂತದ ಹರಿದಾಸದೀಕ್ಷೆ ದೊರೆಯುವುದು, ಮಧ್ವಮತಾವಲಂಬಿಯಾಗುವುದು ಕನಸಿನಲ್ಲಿಯೂ ಸಾಧ್ಯವಿಲ್ಲದ ಮಾತು. ಶೂದ್ರ ಯಾವ ಮಟ್ಟಕ್ಕೆ ಪರಿವರ್ತನೆಯಾದರೂ ಆತ ಹುಟ್ಟು ಶೂದ್ರನೆ. ಬೇರೆಯವರು ಇವನನ್ನು ಪರಿಗಣಿಸರು. ಅದು ಅವರ ಪ್ರತಿಷ್ಠೆಗೆ, ಜಾತಿಗೆ ಅಗೌರವ. ಏಕಲವ್ಯನ ಗುರುಭಕ್ತಿಯಂತೆಯೆ ಕನಕನಿಗೆ ದೊರೆತ ದೀಕ್ಷೆ : "ಕನಕದಾಸನ ಮೇಲೆ ದಯಮಾಡಲು ವ್ಯಾಸಮುನಿ" ಎಂಬ ಪುರಂದರದಾಸರ ಕೃತಿ ಅಂದಿನ ಕೆಲವು ಮತಾಂಧರನ್ನು ಗುರುತಿಸುತ್ತದೆ. ಇಲ್ಲಿ ಕನಕದಾಸರಿಗೆ ಅವರು ದಾಸದೀಕ್ಷೆ ಪಡೆದು (ಒಲಿದ ಸ್ವಾಮಿ ಕಾಗಿನೆಲೆಯಾದಿಕೇಶವನ ಅಂಕಿತ ಅವರೇ ಇರಿಸಿ ಕೊಂಡದ್ದಿರಬೇಕು. ಏಕೆಂದರೆ ಅವರಿಗೆ ದಾಸದೀಕ್ಷೆ ಕೊಟ್ಟ ಬಗ್ಗೆ ಈವರೆಗೆ ಖಚಿತ ಪ್ರಮಾಣ ದೊರೆತಿಲ್ಲ) ಹಂಪೆಗೆ ಬಂದ ನಂತರ, ಅಂದು ರಾಜಗುರುಗಳಾಗಿ-ಹರಿದಾಸರ ಸಂಘಟಕರಾಗಿ, ವಿಶೇಷ ವರ್ಚಸ್ಸಿನಿಂದೊಡಗೂಡಿದ್ದ ಶ್ರೀವ್ಯಾಸರಾಯರ ಪರಿಚಯವೂ ಆಗಿರಬಹುದು. ಹಾಗೂ ಅವರ ಪಾಂಡಿತ್ಯ, ಪ್ರತಿಭೆ, ಶೂದ್ರನಾದ ತನ್ನನ್ನು

ಪುರಸ್ಕರಿಸಿದ[155] ಕ್ರಾಂತಿಕಾರಕ ಮನೋಭಾವ ಕುಡು ತಾನೇ ತಾನಾಗಿ ಒಳಗಾಗಿರಬೇಕು. ಹಾಗೂ ಅಲ್ಲಿ ಉಪಸ್ಥಿತರಿದ್ದ-ಶ್ರೀಪುರಂದರದಾಸರು, ಹರಿದಾಸಕೂಟ, ವ್ಯಾಸರಾಯರ ಶಿಷ್ಯ ವೃತ್ತಿ ಸ್ವೀಕರಿಸಿ ತಮ್ಮ ಸ್ವತಂತ್ರ ಪ್ರತಿಭೆಯಿಂದ ವಿರಾಜಿಸುತ್ತಿದ್ದ ಶ್ರೀವಾದಿ ರಾಜರು ಮುಂತಾದವರ ಪರಿಚಯ ಸಹ ಆಗಿರಲು ಸಾಧ್ಯ.[156] ಪುರಂದರದಾಸರು ರಚಿಸಿರುವ ಕೀರ್ತನೆ :

ಕನಕದಾಸರ ಮೇಲೆ ದಯೆಮಾಡಲು-ವ್ಯಾಸ ।
ಮುನಿಯು ಮಠದವರೆಲ್ಲ ದೂರಿಕೊಳ್ಳುವರು ॥

ಎಂಬುದು ಕನಕದಾಸರ-ವ್ಯಾಸತೀರ್ಥರ ಶಿಷ್ಯ ಸಂಬಂಧ ಎಂತಿತ್ತೆಂದು ತಿಳಿಸುವ ಪ್ರಮಾಣ ವಾಗಿದೆ. ಆದರೆ, ಕನಕದಾಸರು ತನ್ನ ಜೀವನವನ್ನು ಮುಂದೆ ಸಾರ್ಥಕಗೊಳಿಸಿಕೊಂಬಲ್ಲಿ ಒಂದು ಪಂಥ ಅನುಸರಿಸಬೇಕಾಗಿಯೂ ಇತ್ತು. ಅವರ ಸಾಹಿತ್ಯದಲ್ಲಿ ಒಂದು ವಿಶಿಷ್ಟತೆ, ಶ್ರೀವಾಯುದೇವರಿಗೆ ದ್ವೈತ ಮತೀಯರು ಕೊಡುವ ಸ್ಥಾನ, ತಾರತಮ್ಯ ಅನು ಸರಿಸದಿರುವಿಕೆ ವಿರಳ: ಇಲ್ಲವೇ ಇಲ್ಲ ಎನ್ನಲಾಗದು.

ಉದಾ :

"ಪರಮ ಪದವಿಯನೀವ ಮುಖ್ಯಪ್ರಾಣ"
ಧರೆಯೊಳಗೆ ಉತ್ತಮ ಮಾನವರೆಲ್ಲ ಭಜಿಸಿ ॥

ಎಂಬ ಕೀರ್ತನೆಯ ಕೊನೆಯ ಸಾಲುಗಳು :

ಕಲಿಯುಗದಲ್ಲಿ ತುರೀಯಾಶ್ರಮವನೆ ಧರಿಸಿ[157] ।
ಕಲುಷರಾದ ಮಾಯಿಗಳನು ಸೋಲಿಸಿ ॥
ಬಲವಾದ ಮಧ್ವಮತವನ್ನು ಬಲಿದೆಂದೆನಿಸಿರಾಗಿ ।
ನೆಲೆಯಾದಿಕೇಶವನೆ ಪರದೈವವೆನಿಸಿ ॥

ಎಂಬದೂ,

"ಜಯ ಮಂಗಲಂ ನಿತ್ಯ ಶುಭಮಂಗಲಂ" ॥ಪ॥

ಎಂಬ ಮಂಗಲ ಗೀತದ ಕೊನೆಯಲ್ಲಿರುವ,

"ಮಧ್ಯಗೃಹದಾತನಾ ಸತಿಯಲ್ಲಿ ಉದಿಸಿದಗೆ ।
ಬೌದ್ಧ-ಚಾರ್ವಾಕ-ಮಾಯ್ಗಳಜರಿದಗೆ ॥

ಮಧ್ವಶಾಸ್ತ್ರವನೆಲ್ಲ ಸಜ್ಜನರಿಗೊರೆದಗೆ ।
ಮೆದ್ದು ಶ್ರೀ ಆದಿಕೇಶವ ಭಜಕನಿಗೆ ॥'' [158]

ಎಂಬ ಸಾಲುಗಳಲ್ಲಿ ಕನಕದಾಸರು ತೋರ್ಪಡಿಸಿರುವ ಮಧ್ವಮತ ಪಾರಮ್ಯ ಪ್ರತಿಪಾದನ ವನ್ನು ಗಮನಿಸಿದರೆ, ಅವರ ಮೇಲೆ ವ್ಯಾಸರಾಯರ ಮೂಲಕ ಮಧ್ವತತ್ವಜ್ಞಾನ ಹೇಗೆ ಪ್ರಭಾವ ಬೀರುತ್ತಿಲಿದುದೂ ತಿಳಿಯಬರುತ್ತದೆ. ಇಲ್ಲಿ ಕನಕದಾಸರು ಮೂಲತಃ[159] ಕುರುಬರಾಗಿದ್ದು[160] ಶೈವಧರ್ಮಾವಲಂಬಿಗಳಾದರೂ, ವೈಷ್ಣವ ಪಂಥದ ಪ್ರಭಾವ ಕ್ಕೊಳಗಾಗಿ ಹರಿಭಕ್ತರಾದುದೂ ವಿಶೇಷವೆ. ಒಟ್ಟಾರೆ, ಕನಕದಾಸರಿಗೆ ಸಹಜ ಆಗಿ ಬಂದದಂ ಭಕ್ತಿ. ಅದು ಶೈವವೊ ವೈಷ್ಣವವೊ. ಹಾಗೆಯೇ ಅವರ ದೇವತಾ ತಾರತಮ್ಯ ಕೂಡ ಒಂದೆಡೆ ಒಡಮೂಡಿದೆ :

ಬಲ್ಲವರನಿಸಿಪರು ಬಲ್ಲವರದಿಯರು ।
ಪುಲ್ಲಲೋಚನ ಪೂರ್ಣಬ್ರಹ್ಮನೆಂಬುದನು ॥ ಪ ॥

ಅಜ ಜ್ಞಾನಾಧಿಕ ಬಲ್ಲ ಅನಲಸ್ನೇಹಿತಬಲ್ಲ ।
ಗಜಚರ್ಮಾಂಬರ ಬಲ್ಲ ಗರುಡಬಲ್ಲ ॥
ಭುಜಗೇಶ್ವರಬಲ್ಲ ಭೂರಿಲೋಚನ ಬಲ್ಲ ।
ತ್ರಿಜಗಧಿಪತಿ ತ್ರಿವಿಕ್ರಮನೆಂಬುದನು ॥೧॥ [161]

ಇದು ದ್ವೈತ ಪಂಥೀಯರ ತಾರತಮ್ಯ ಪ್ರಕಾರಕ್ಕನುಗುಣವಾದ ಕೃತಿ. ಇಲ್ಲಿ ಬ್ರಹ್ಮ ವಾಯುಗಳನ್ನು ಒಂದೇ ಕಕ್ಷೆಯಲ್ಲಿ ಸೇರಿಸಿರುವುದೂ ವಿಶೇಷ. ಇದರಿಂದ ಕನಕದಾಸರಿಗೆ ಬೇಕಾಗಿದ್ದುದು ಭಕ್ತಿ, ಪ್ರಮೇಯ ತತ್ವಗಳ ತಿಕ್ಕಾಟ, ಪ್ರತಿಪಾದನ ಪ್ರದರ್ಶನ ವೈಭವ ಅಲ್ಲ : ಅವರು ಮತ ತತ್ವಗಳ ವಿವಾದದ ಗೋಜಿಗೇ ಹೋಗರು, ಅದಕ್ಕೂ ಮಿಗಿಲಾದ್ದೆಂದರೆ, ''ಹುಟ್ಟಿಸಲಿ ಬೇಡ ಹುಟ್ಟಿಸಿದಕೆ ಪಾಲಿಸಿನ್ನು'' ಎಂದು 'ಈಶ ನಾಮ'ದಲ್ಲಿ ಬೇಡಿಕೊಂಬ ದಾಸರಿಗೆ ಮುಕ್ತಿಶ್ರೀಯೊಂದೇ ಬೇಕಾಗಿದ್ದುದ್ದು ; ಕನಕ ದಾಸರ ಹರಿಭಕ್ತಿ, ಹರಿಭಕ್ತರ ಗುಂಪು-ಹರಿದಾಸಕೂಟದವರೆಲ್ಲ ಇವರನ್ನು ತಮ್ಮವ ನೆಂದುಕೊಂಬಂತಿದೆ. ಅವರ ಕೃತಿಗಳಲ್ಲೆಲ್ಲ ಕಾಣುವುದು, ತನ್ನ ಇಷ್ಟದೈವ ಆದ ಕಾಗಿನೆಲೆಯಾದಿಕೇಶವನ ಸರ್ವೋತ್ತಮತೆ. ಕನಕದಾಸರನ್ನು ''ಯಾವುದೊ ಒಂದು ಭಾಗವತ ಸಂಪ್ರದಾಯದ ಭಕ್ತಿಪಂಥಕ್ಕೆ ಸೇರಿದವರಾಗಿರಬೇಕೆ''ಂತಲೂ ಹೇಳುವುದಿದೆ. ಆಗ್ಗೆ ಬೆಳೆದು ಬರುತ್ತಿದ್ದ ಭಕ್ತಿಪಂಥದ ಮಹತ್ವ-ಗಂಡುಹೆಣ್ಣೆನ್ನದೆ ಜಾತಿ ಭೇದ ಇರದೆ ಎಲ್ಲರಿಗೂ, ಮುಕ್ತಿಗೆ ಅವಕಾಶ ನೀಡಿ, ಧಾರ್ಮಿಕರಂಗದಲ್ಲಿ ಅವರವರ ಸುಖದುಃಖ ಹೇಳಿಕೊಳ್ಳಲು ಬಾಯಿತ್ತುದು.[162] ಜಾತಿಯಲ್ಲಿ ಯಾರೆ ಆಗಲಿ ಅವರ ಭಕ್ತಿಪಂಥ ವನ್ನು ಪರಿಗಣಿಸಿ, ಪ್ರಗತಿಶೀಲವಾನದ ಉದಾರ ಹೃದಯಿಗಳಾದ ವೈದಿಕರು ತಮ್ಮ

ಧರ್ಮದ ಶಾಸ್ತ್ರ, ವೇದೋಪನಿಷತ್ತುಗಳ ನೀತಿ, ತತ್ವ ಎಲ್ಲ ತಿಳಿಯಹೇಳಿ, ವರ್ಣಾಶ್ರಮ ವ್ಯವಸ್ಥೆಯ ಬುನಾದಿಯನ್ನು ಸಮಾಜದ ಭದ್ರತೆಗಾಗಿ ಬಳಸಿಕೊಂಡರು. ಇದಕ್ಕಾಗಿ ಪುರಾಣಗಳ ಮಾಧ್ಯಮವನ್ನು ಯಥೇಚ್ಛವಾಗಿ ಪ್ರಯೋಗಿಸಿದರು. ವ್ಯಾಸರಾಯರು ಇಂಥ ಪ್ರಗತಿಶೀಲರಲ್ಲೊಬ್ಬರು. ಪುರಂದರದಾಸ–ಕನಕದಾಸರನ್ನು ಪುರಸ್ಕರಿಸಿ, ತಮ್ಮ ಧ್ಯೇಯ ಆದ ಹರಿದಾಸಕೂಟ ಸಂಘಟನೆಗೆ ಇವರನ್ನು ಸೇರಿಸಿಕೊಂಡರು. ಇದರಿಂದಾಗಿ,[164] ಬ್ರಾಹ್ಮಣರಾಗಿ ಹುಟ್ಟಿದ ಅವರು ಮಾಧ್ವಮತಕ್ಕೆ ಚಾಚೂತಪ್ಪದೆ ನಡೆದುಕೊಳ್ಳುವುದು ಅಗತ್ಯವಾಗಿಲ್ಲ. ರಾಮಾನುಜರಲ್ಲಿ ಶ್ರೀವೈಷ್ಣವ ತತ್ವಗಳನ್ನು ಇತರರು ಆರಿತು ಧನ್ಯರಾಗಬಹುದಾದರೂ ಅವರು ಬ್ರಾಹ್ಮಣರಾಗಲು ಸಾಧ್ಯವಿಲ್ಲ. ಆದ್ದರಿಂದ ಕನಕದಾಸರು ವಿಷ್ಣುಭಕ್ತಿಯನ್ನು ಕೈಗೊಂಡರೂ ಶಿವದ್ವೇಷಿಗಳಾಗಲಿಲ್ಲ. ಭಾಗವತರಾದರೂ ಬ್ರಾಹ್ಮಣರಾಗಲಿಲ್ಲ. ಮಠಾಚಾರ್ಯರ ಅನುಗ್ರಹ ಪಡೆದರೂ ಮತಾನುಯಾಯಿ ಆಗಲಿಲ್ಲ ಎಂಬ ಮಾತು, ಒಪ್ಪುವಂಥದು. ಉಡುಪಿಯ ಶ್ರೀಕೃಷ್ಣ ದೇವಾಲಯದ 'ಕನಕ ಕಿಂಡಿ' ಇದನ್ನು ಸಮರ್ಥಿಸುತ್ತದೆ. ಕನಕನಿಗೆ ಕಂಡ ಅರಿವಿನ ಬೆಳಕು, ಸದಾ ಪೂಜಿಸುತ್ತಿದ್ದ ಪುರೋಹಿತರಿಗೆ-ಅರ್ಚಕರಿಗೆ ಕಾಣಲಿಲ್ಲ. ಕನಕದಾಸರ ಭಕ್ತಿಗೆ, ಕಲ್ಲುಕರಗಿ, ಕಿಂಡಿಯೊಡೆದು ದರ್ಶನಭಾಗ್ಯವಿತ್ತರು, ದೇವಾಲಯದ ಅರ್ಚಕರ ಹೃದಯ ಮಾತ್ರ ಪಾಷಾಣವಾಗಿತ್ತು. ಇದು ದಂತಕತೆಯೆ ಆಗಲಿ, ಕಾಣುವ ದೃಶ್ಯ ತರಿಸುವ ನೈಜಭಾವನೆ.

## ಜೀವನ ದೆಳೆಗಳು

ಕನಕದಾಸರ ಬದುಕು ಮತ ಕುಲ ಕುರಿತು ಪ್ರಸ್ತಾಪಿಸುವಾಗ ತಂದೆ-ತಾಯಿಯರ ಹೆಸರು ತಿಳಿಸೇವೆ. ತಂದೆ, ಕಾಗಿನೆಲೆ ಬಾಡದ ವನ್ನಿಯ ನಾಯಕನಾಗಿ ಆಳುತ್ತಿದ್ದು, ಬಾಡ, ಬಂಕಾಪುರ ವಿಭಾಗದ ೭೮ ಗ್ರಾಮಗಳ ಡಣಾಯಕತನ ಬೀರಪ್ಪನದು. ಇಷ್ಟಾದರೂ ಮಕ್ಕಳಿರದ ಚಿಂತೆ. ವಿಜಯನಗರದ ಅರಸರು ಶ್ರೀವೈಷ್ಣವ ಮತವನ್ನು ಸ್ವೀಕರಿಸಿದವರು. ಮೇಲಾಳು ಅನುಸರಿಸುವ ಮತ ಕಾಲಾಳು ಅನುಸರಿಸುವುದು ಸಂಭವನೀಯ. ವೈಷ್ಣವ ಭಕ್ತಿಧರ್ಮ ಪ್ರೀತಿಸಿದ ಬೀರಪ್ಪ, ತನ್ನ ಮಡದಿಯೊಡಗೂಡಿ ತಿರುಪತಿಗೆ ಹೋಗಿ, ಭಕ್ತಿಯಿಂದ ಶ್ರೀನಿವಾಸನನ್ನು ಸೇವಿಸಿ ಬಂದು ಅವನ ಇಷ್ಟಾರ್ಥವೂ ನೆರವೇರಿತು. ತಿರುಪತಿಯ ತಿಮ್ಮಪ್ಪನ ವರಪ್ರಸಾದದಿಂದ ಜನಿಸಿದ ಮಗುವಿಗೆ ತಿಮ್ಮಪ್ಪನೆಂದೆ ಹೆಸರಿಸಿದರು.

ತಿಮ್ಮಪ್ಪ ಚೆನ್ನಾಗಿಯೆ ಬೆಳೆದ. (ಕನಕದಾಸ ಕೃತಿಗಳಲ್ಲಿ ಅವರ ಕಾವ್ಯಪ್ರಜ್ಞೆ, ಲೋಕಾನುಭವ, ಶೃಂಗಾರಪ್ರಿಯತೆ, ಸಾಹಿತ್ಯ ಪರಿಣತಿಗಳನ್ನು ಗಮನಿಸಿದರೆ) ಡಣಾಯಕನಿಗೆ ತಕ್ಕ ಹಾಗೆ ಕುಸ್ತಿ, ಯಿಂದ್ದವಿದ್ಯೆ, ಓದುಬರಹ, ಮತ-ಧರ್ಮ, ಸಾಹಿತ್ಯ ಸಂಗೀತ ಎಲ್ಲದರಲ್ಲೂ ಅವರಿಗೆ ಅಭ್ಯಾಸ ಆಗಿರಬೇಕು. ಶಾಸ್ತ್ರ, ಪುರಾಣ

ಅಂಗಸಾಧನೆ, ನಿಯತಿಗಳಿಂದ ಜಟ್ಟಿಯಾದ ತಿಮ್ಮಪ್ಪ ಯುದ್ಧವಿದ್ಯೆಗಳಲ್ಲಿ ಪರಿಣತಿ ಗಳಿಸಿದ.

"ಕನಕ ದಳದಲ್ಲಿ ಕಲಿತನೆಂದರೆ ಫೌಜು ।
ಕನಕು ಮಣಕಾಗುವುದು ಹರಿಯ ! "

ಎಂಬಂಥ ಪರಾಕ್ರಮಿಯಾತ : ತಿಮ್ಮಪ್ಪನಿಗೆ ಹರೆಯದಲ್ಲಿ ತಂದೆ-ತಾಯಿ ತೀರಿಕೊಂಡಿರ ಬೇಕು. ಒಮ್ಮೆ ಭೂಮಿಯನ್ನು ಅಗೆಸಂತ್ತಿದ್ದಾಗ ಏಳು ಕೊಪ್ಪರಿಗೆಗಳ ಹೊನ್ನಿನ ನಿಧಿ ದೊರೆಯಿತು. ಅದನ್ನು ಬಡಬಗ್ಗರಿಗೆ, ದೇವಾಲಯ ನಿರ್ಮಾಣ, ಜೀರ್ಣೋದ್ಧಾರ, ಹೀಗೆ ವಿನಿಯೋಗಿಸಿದ. ಅವನಿಗೆ 'ಕನಕ' ದೊರೆತುದರಿಂದ "ಕನಕನಾಯಕ", "ಕನಕ" ನೆಂದ ಪ್ರಖ್ಯಾತನಾದ, ತನ್ನ ಆಡಳಿತ ದಕ್ಷತೆ, ಜನಪ್ರೀತಿಯಿಂದಾಗಿ ಕೂಡ ಕನಕ ಒಳ್ಳೆ ಹೆಸರು ಗಳಿಸಿದ್ದ. ಶ್ರೇಷ್ಠ ಕೃತಿಗಳ ಅಭ್ಯಾಸಕೂಡ ಮಾಡುತ್ತಿದ್ದುದರ ಸಂಕೇತ "ಮೋಹನತರಂಗಿಣಿ"ಯಲ್ಲಿ ಸಿಗುತ್ತದೆ.

ಉರಗಾಲಯ ಪೆಸರ್ವಡೆದನಮಹೋ್ಯ ।
ದರ ಜಾತೆಯಾತ್ಮಾಸಂಭವ ।
ವರಪುರಾಣಂಗಳ ಕನ್ನಡಿಸಿದ ಕವಿ ।
ವರರ ಕೊಂಡಾಡೆ ಮುದದಿ

ಇಲ್ಲಿ ಕುಮಾರವ್ಯಾಸ, ಕುಮಾರ ವಾಲ್ಮೀಕಿಯರನ್ನು ಕೊಂಡಾಡಿದ್ದಾನೆ.

"ಬುಧರಾಮ್ನಾಯ ಶಾಸ್ತ್ರವ ತಿಳಿದು ।
ನಾನಿದ ಪೇಳ್ವ ಕೇಳಾಯತಾಕ್ಷಿ ॥" ಎಂಬುದರಿಂದ ಅವನಿಗಿದ್ದ ಶಾಸ್ತ್ರ ಸಾಹಿತ್ಯಾಭಿರುಚಿ, ಹಾಗೂ ಒಲವಿನ ಮಡದಿ ಸಹ ಇದ್ದಳೇನೊ ಎನಿಸುತ್ತದೆ. ಆ ಕಾವ್ಯದ ಸಂಭಾಷಣೆಯ ಶೈಲಿಯಲ್ಲಿ ಕನಕದಾಸರ ಪೂರ್ವಾಶ್ರಮದ (ಹರಿದಾಸ್ಯ ವೃತ್ತಿಗೆ ಮೊದಲಿನ) ಒಡನಾಡಿಯಾಗಿದ್ದ ಹೆಣ್ಣಿನ ಚಿತ್ತಾಕರ್ಷಕ ವ್ಯಕ್ತಿತ್ವ ಧ್ವನಿಪೂರ್ಣ ಚಿತ್ರಣ, ಕವಿಹೃದಯದೊಂದಿಗೇ ನೆನಪನ್ನೂ ತೆರುತ್ತದೆ. ಅವಳು ಅಕಾಲಮೃತ್ಯುವಿಗೆ ಈಡಾಗಿರಬೇಕು. ತಂದೆ–ತಾಯಿ–ಮಡದಿ–ಮಗ ಯಾರೂ ಇಲ್ಲದ ಅನಾಥನಾದ ಕನಕದಾಸನಿಗೆ ವಿರಕ್ತಿ ಅಂಕುರಿಸುತ್ತಿತ್ತು. ಆದರೂ ಆತ ನಾಡಿಗಾಗಿ–ನಾಡವರಿಗಾಗಿ ದುಡಿದ. ಈ ನಡುವೆ ಮೊದಲಿಂದ ಕನಕನಿಗೆ ಶ್ರೀನಿವಾಸ ಬಂದು ನನ್ನ ದಾಸನಾಗೆಂದು ಕನಸಿನಲ್ಲಿ ಬಂದು ಹೇಳುತ್ತಿದ್ದಂತೆಯೂ, ಅದಕ್ಕೆ ಕನಕದಾಸ ಆಗುವುದಿಲ್ಲ ಎಂದು ಹೇಳುತ್ತಿದ್ದನೆಂದು, ಒಂದು ದಂತ ಕತೆ ಇದೆ : ಕನಕನಾಯಕ, ತನ್ನ ಹರಿದಾಸ ದೀಕ್ಷೆ

ಪಡೆದ ನಂತರ, ಮುನ್ನಿನ ಬದುಕಿನ ದಿನಗಳಂ, ಯುದ್ಧ ತಾನಂ ರಣದಲ್ಲಿ ಸೋತಂ ಬೀಳಲಿಪ್ಪರ ಕೊಡುತ್ತಿದ್ದದರಿಂದಾಗಿಯೊ ಏನೊ ತಮ್ಮ ದೊರೆತನದ ಬಗ್ಗೆ ಕನಕದಾಸರಾಗಿ ತಿಳಿಸಿರುವ ಪರಿ ಇದು :

ಹರಿನಿನ್ನ ಪರಮಾರ್ಥ ನಿರುಪದಿಂದಲಿ ಎನಗೆ ।
ದೊರೆಯಿತೀ ಗುರುಪಾದ ಹರಿಯೇ........ ॥ಪ॥

ದೊರೆತನದ ಬಿಡಿಸಿ ಸುಸ್ಥಿರ ಮಾರ್ಗ ತೋರಿಸಿದೆ ।
ನರಮಾತ್ರದವ ನೆನದೆ ಹರಿಯೆ ॥

ಗರುವದಲ್ಲಿಹೆನೆಂಬುದಂತೆನ್ನ ನಿನ್ನ ದಾ ।
ಸರಿಗೆ ಮಾರಿದೆಯೊ ಹರಿಯೆ ॥

ಧುರದಲ್ಲಿ ನಾಲ್ಕು ಸಾವಿರ ನಿಲ್ವದೆನದೆಸೆಗೆ । (ಎಂಟುಂ ದಿಕ್ಕಿಗೆ)
ಪರಪರಿಸಿದೆಯಲೊ ಶ್ರೀಹರಿಯೆ ॥

ಪರಬಲವ ನೋಡಿದರೆ ಉರಿದುದಿದು ಬೀಳ್ವಮಾನ ।
ಸೆರೆಹಾಕಿನಿಲಿಸಿದೆಯೊ ಹರಿಯೆ ॥೧॥

ಕನಕದಳದಲ್ಲಿ ಬಂದು ಕಲಿತನೆಂದರೆ ಫೌಜು
ಕನಕು ಮನಕಾಗುವುದು ಹರಿಯೆ ॥
ಮೊನೆಗಾರಧಣಿಯೆಂಬ ಧೈರ್ಯವ ಬಿಡಿಸಿ
ಸೇವಕನ ಮಾಡಿಸಿದೆಯೊ ಹರಿಯೆ ॥೨॥

ಹಂದಿಕ್ಷುಖ್ಯಾತಿ ಪೌರುಷಲೋಭ ಬಹುಜನರ ।
ಉರುವೀರರನ್ನು ಕೈಪಿಡಿದೆ ಹರಿಯೆ ॥
ಮರೆವು ತಾಮಸ ಅಹಂಕಾರ ದುರ್ಮತಿಯೆಂಬ
ದುರಿತಸನು ಹೊರಡಿಸಿದೆ ಹರಿಯೆ ॥೩॥

ಪರಮಮೂರ್ಖನು ನಿನ್ನ ಅರಿವಿದ್ದ ದಾಸರಿಗೆ ।
ಶರಣೆನದ ರಾಜಸವೊ ಹರಿಯೆ ॥
ಸಿರಿಬಿಡಿಸಿ ಹರಿಯೆ ಹರ-ಸುರರಿಗಳವಲ್ಲದಿಹ ।
ಸ್ಮರಣೆ ಜಿಹ್ವೆಗೆ ಬರೆದೆಯೊ ಹರಿಯೆ ॥೪॥

"ಮದವೆಲ್ಲ ಬಿಡಿಸಿ ಸನ್ಮೈದು ರೂಪವನುಧರಿಸಿ ।
ಹೃದಯದಲಿ ನೀನಿದ್ದೆ ಹರಿಯೆ ॥
"ಸ್ವಾರಿಹೊರಟರೆ ಛತ್ರ-ಭೇರಿಯು ನಗಾರಿಗಳು ।
ಘೋರೆಂಬ ಪೊಂಗಹಳೆ ಹರಿಯೆ ॥೫॥

(ಸ್ವಾತಿ ಮಳೆ) ಧೀರರಾಹುತರಾಣ್ಯಪರಿವಾರ ಲಂಕಾಟ
ಭಾರವನು ತೆಗೆದೆಯೋ ಹರಿಯೆ ॥

ನೀರಸಂಗವ ಬಿಟ್ಟು ಆಣಿಮುತ್ತಾದ ಕ್ರಿಯೆ
ಸೇರಿದೆನೊ ನಿನ್ನ ಪಾದ ಹರಿಯೆ ॥........
ಅರಿಗಂಜಿನೊ ನಾನು ಅಧಿಕಪುರಿ ಕಾಗಿನೆಲೆ
ಯಾದಿಕೇಶವರಾಯ ಹರಿಯೆ ॥

ಇದರಿಂದ ಅಂದಿದ್ದ ವೈಭವ, ರಣಖ್ಯಾತಿ. ಯುದ್ಧಪ್ರೀತಿ, ಶೃಂಗಾರದೊಲುಮೆ ಎಲ್ಲ ತಿಳಿಯುತ್ತದೆ. ಹಾಗೆಯೆ ಕನಕನಿಗೆ ಕದನದಲ್ಲಿ ಕತ್ತರಿಸುವ ಪೆಟ್ಟುಬೀಳಲು, ದೈವದಾ ದೇಶದಂತೆ, ಹಾಗೂ ಆ ಸಂದರ್ಭದಲ್ಲಿ ದೊರೆತ ದೈವ ಸಹಾಯದಂತೆ (ಆದಿಕೇಶವನೇ ರಣದಲ್ಲಿ ಉಪಚರಿಸಿದನಂತೆ) ಕನಕನಾಯಕ, ದೊರೆತನ, ತೊರೆದು, ಶ್ರೀಲೋಲನ ದಾಸದೀಕ್ಷೆ ವಹಿಸಿದ. ಅನಂತರ ಪ್ರತಿಷ್ಠಾಪನೆ ಆದದ್ದೆ ಆದಿಕೇಶವನ ಅರ್ಚಾವಿಗ್ರಹ. ತಮಗೆ ದೊರೆತ, ಆ ರಣರಂಗದ ಪೆಟ್ಟಿನ ಬಗ್ಗೆ ಕೂಡ, ಕನಕದಾಸರು ಸ್ಮರಿಸಿ, ಆದಿ ಕೇಶವನ 'ಕರುಣೆಯುವಾರ'ವೆಂದು ಶಂಸಿಸಿ ಹಾಡಿದ್ದಾರೆ :

"ರಣದೊಳಗೆ ದೇಹವ ಖಂಡ ತುಂಡವ ಮಾಡಿ ।
ಪ್ರಣವಗೋಚರನಾಗಿ ಲೀಲೆಯಿಂದಲಿ ಬಂದು ।
ಹೆಣಕೆ ಪ್ರಾಣವನು ತಂದಿತ್ತ ಮಹಾತುಮನೆ ॥೧॥

"ಬೆನ್ನಲೊಸರುವ ರೋಹಿತಕೆ........" ಎಂದು ಬಣ್ಣಿಸುತ,
"ಓದಿಕೇಳಿದರಿದೇ ಕಥೆಯಾಗುತಿದೆ ದೂರ ।
ಆದಿಮೂರುತಿ ಕಾಗಿನೆಲೆಯಾದಿ ಕೇಶವನೆ ॥
ಹೋದ ಜೀವನಕೆ ವೈದ್ಯನ ಸ್ಮರಣೆಯನ್ನಿಟ್ಟು ।
ವಾದಗುಣಬಿಡಿಸಿ ದಾಸನ ಮಾಡಿಕೊಂಡೆಯೊ ॥"

ಇದರ ನಂತರ ಕನಕದಾಸರು ಹಂಪೆಗೆ ಬಂದು[166] ವ್ಯಾಸರಾಯರನ್ನು ಭೇಟಿಯಾಗಿ, ಅಲ್ಲಿಯ ಹರಿದಾಸ ಕೂಟಕ್ಕೆ ತಮ್ಮನ್ನು ಒಳಗು ಮಾಡಿಕೊಂಡಿರಬೇಕು...... ಹರಿದಾಸ ಕೂಟದಲ್ಲಿ ಕನಕನ ತತ್ವಜ್ಞಾನ, ಭಕ್ತಿಮಹತಿ, ದೈವಪ್ರಸಾದ ಜನತೆಗೆ ಗೊತ್ತಾಗಲು ವ್ಯಾಸರಾಯರು ಅನೇಕ ಬಾರಿ ಪರೀಕ್ಷೆ ನಡೆಸಿದ ಬಗ್ಗೆ ಕತೆ, ಕೀರ್ತನೆ ಸಹ ಇವೆ ಅವು ಹೀಗೆ :

1. ಒಮ್ಮೆ ವ್ಯಾಸರಾಯರು ಶಿಷ್ಯನನ್ನು ಪರೀಕ್ಷಿಸಲು, ಪ್ರತಿಯೊಬ್ಬರಿಗೂ ಬಾಳೆ ಹಣ್ಣುಗಳನ್ನಿತ್ತು ಯಾರೂ ಇರದ ಜಾಗದಲ್ಲಿ ಈ ಹಣ್ಣು ತಿಂದು ಬರಬೇಕೆಂದಾಗ,

ಶಿಷ್ಯರನೇಕರಿಗೆ ಇದರ ಮರ್ಮ ಅರಿಯದೆ ತಿಂದುಬಂದದ್ದು, ಕನಕ "ದೇವರೆಲ್ಲೆಲ್ಲೂ ಇದ್ದಾನೆ. ಆದರಿಂದ ನಾನು ತಿನ್ನಲಾಗಲಿಲ್ಲ" ಎಂದು ಹಣ್ಣನ್ನು ಗುರುಗಳಿಗೆ ಹಿಂತಿರುಗಿಸಿದ ಪ್ರಸಂಗ.

2. ಗುರುಗಳೊಮ್ಮೆ ಪಲ್ಲಕ್ಕಿಯಲ್ಲಿ ಕುಳಿತು ಹೋಗುವಾಗ, ಶ್ರೀಹರಿಯ ಮಾನಸ ಪೂಜೆಯಲ್ಲಿ ನಿರತರಾಗಿದ್ದರು. ಆಗ ಶ್ರೀಹರಿಗೆ ಪುಷ್ಪಮಾಲೆ ಅರ್ಪಿಸುವಲ್ಲಿ ಕಿರೀಟ ತೆಗೆಯುವುದೆ, ಬಿಡಬೇಕೆ ಎಂದು ಆಲೋಚನೆ ಬಂತಂತೆ : ಆಗ ಕನಕ ಹೊರಗಿನಿಂದಲೇ "ಗುರುಗಳೆ ಸಂದೇಹವೇಕೆ ದೇವರ ಪಾದಗಳಲ್ಲಿ ಸಮರ್ಪಿಸಿ ಬಿಡಿ" ಎಂದಾಗ ವ್ಯಾಸರಾಯರು ಕನಕನ ದಿವ್ಯ ಜ್ಞಾನಶಕ್ತಿಗೆ ಬೆರಗಾದರಂತೆ.

3. ಒಮ್ಮೆ ಗುರುಗಳ ಸಮಕ್ಷಮ ನಡೆದ ಸಭೆಯಲ್ಲಿ "ಯಾರು ಮೋಕ್ಷಕ್ಕೆ ಹೋಗುತ್ತಾರೆ" ಎಂಬ ಪ್ರಶ್ನೆ. ವಿದ್ವಾಂಸ ಶಿಷ್ಯರು ತಂತಮ್ಮ ಬುದ್ಧಿಗೆ ತೋರಿದ ಉತ್ತರ ಹೇಳಿದರು. ಗುರುಗಳು ಕನಕನತ್ತ ತಿರುಗಿದರೆ, "ನಾನು ಹೋದರೆ ಹೋಗಬಹುದು" ಎಂದನಂತೆ. ಶಿಷ್ಯರಿಗೆ ಹೊಟ್ಟೆಯಲ್ಲಿ ಮೆಣಸರೆ ದಂತಾಯಿತು. ವ್ಯಾಸರಾಯರು ಮುಗುಳ್ನಕ್ಕು "ಕನಕ, ನಿನ್ನ ಮಾತಿನರ್ಥ ?" ಎಂದರಂತೆ. "ನಾನೆಂಬ ಅಹಂಕಾರ ಹೋದರೆ ಯಾರಾದರೂ ಮುಕ್ತಿಗೆ ಹೋಗಬಹುದೆ"ಂದನಂತೆ.

4. ಒಂದು ದಿನ ವ್ಯಾಸರಾಯರು ಕೈಲಿ "ಸಾಲಿಗ್ರಾಮ" ಹಿಡಿದು ಶಿಷ್ಯರನ್ನು ಕುರಿತು, "ನನ್ನ ಕೈಲೇನಿದೆ ಹೇಳಿ" ಎಂದರಂತೆ. ಎಲ್ಲರೂ ತಮಗೆ ತೋಚಿದ್ದು ಹೇಳಿದರು. ಕನಕ "ಈತನೀಗ ವಾಸುದೇವನು" ಎಂಬ ಕೀರ್ತನೆಯನ್ನೆ ರಚಿಸಿ, ಭಕ್ತಿಪರವಶತೆಯಿಂದ ಹಾಡಿ, ಭಗವಂತನ ಪ್ರತೀಕ ಆದ ಸಾಲಿಗ್ರಾಮವಿದೆ ಎಂದರು. ವ್ಯಾಸರಾಯರು ಮುಗುಳ್ನಕ್ಕು ಕೈಬಿಚ್ಚಿ ತೋರಿದರು.

ಇದೆಲ್ಲ ಕನಕದಾಸರ ಅನುಭಾವಿತನ, ಅಪರೋಕ್ಷಾನುಭೂತಿ, ತೋರುವ ಕತೆಗಳೆನ್ನಬಹುದು. ಇಂಥ ಪ್ರಸಂಗಗಳೆಷ್ಟೊ :

ಪುರಂದರದಾಸರ ನಿರ್ಯಾಣ ಆದ ನಂತರವೂ ಕನಕದಾಸರು ಅನೇಕ ವರ್ಷ ಬದುಕಿದ್ದರೆನ್ನಲು ಅಧಿಕೃತ ಪ್ರಮಾಣ ದೊರೆತಿಲ್ಲ. ಬದುಕಿನ ಕೊನೆ ಕೊನೆಗೆ, ವಿಜಯ ನಗರದ ಯುದ್ಧ ಕಂಡು, ಕೊರಗಿದ ಕನಕದಾಸರು ತಮ್ಮ ಕಡೆಯ ದಿನಗಳನ್ನು "ಕದರ ಮಂಡಲಿಗೆ"ಯೆಂಬಲ್ಲಿ ಕಳೆದರೆಂದೂ ಐತಿಹ್ಯ. ಪುರಂದರದಾಸರ ದೇಹತ್ಯಾಗದ ನಂತರ (೧೫೬೪) ಅವರ ತಂಬೂರಿಯನ್ನು ಕನಕದಾಸರು ತಿರುಪತಿಯ ತಿಮ್ಮಪ್ಪನಿಗೆ ತಲುಪಿಸಿ ಬಂದರೆಂಬೊಂದು ಐತಿಹ್ಯ : ಜೀವನದ ಕಡೆಗಾಲದಲ್ಲಿ ಯಾವುದೇ ರೀತಿ ಜರ್ಝರಿತರಾಗಿ, ಕದರಮಂಡಲಿಗೆ ಶ್ರೀಪ್ರಾಣದೇವರ ಸೇವೆ ಮಾಡಿಕೊಂಡು ದಿನಗಳೆದರೆಂದೂ ಜನವಾರ್ತೆಯಿದೆ. ಒಟ್ಟಾರೆ ಅವರು ಸುಮಾರು ೯೦ ವರ್ಷಕಾಲ ಬದುಕಿದ್ದರೆಂದು ಒಂದು ನಂಬುಗೆ. ಅವರ ಮರಣ ವರ್ಷ "ಸುಮಾರು ಕ್ರಿ. ಶ. ೧೫೭೮ ಎಂದು ಇಟ್ಟು ಕೊಳ್ಳಲಡ್ಡಿಯಿಲ್ಲ."[166]

ಇದಿಷ್ಟು ಕನಕದಾಸರ ಇತಿವೃತ್ತ. ಅವರ ಸಾಹಿತ್ಯಿಕ ಕೊಡುಗೆಗಳನ್ನು ಗಮನಿಸದಿದ್ದರೆ ಈ ಅವಲೋಕನ ಅಪೂರ್ಣ ಆಗುತ್ತದೆ.

ಮೊದಲೆ ಹೇಳಿದಂತೆ ಉಳಿದ ಹರಿದಾಸರಿಗಿಂತ ಕನಕದಾಸರು ಭಿನ್ನರಾಗಿ, ವಿಶಿಷ್ಟರಾಗಿ ಕಾಣುವುದು ಅವರ ಕಾವ್ಯ ಪ್ರಜ್ಞೆಯಿಂದ. ಅವರು ದಾಸರಲ್ಲಿ ಕವಿಗಳಾದ್ದರಿಂದ, ಕನಕದಾಸರ ಸಾಹಿತ್ಯದವಲೋಕನವನ್ನು ಈ ನಿಟ್ಟಿನಲ್ಲಿ ಗಮನಿಸುವಾಗ, ಎರಡು ಮುಖಗಳನ್ನು ಕಾಣುತ್ತೇವೆ. ಒಂದು ಅವರು ರಚಿಸಿರುವ ಭಕ್ತಿಸಾಹಿತ್ಯ ಕೀರ್ತನ ಸಾಹಿತ್ಯ, ಎರಡನೆಯದು[167] "ಭಕ್ತನೂ ಆದ ಕವಿಯಿಂದ ನಿರ್ಮಿತ ಆದ ಸಾಹಿತ್ಯ. ಒಂದು ವ್ಯಕ್ತಿನಿಷ್ಠ, ಇನ್ನೊಂದು ವಸ್ತುನಿಷ್ಠ"

ಪುರಂದರದಾಸರ ಕೀರ್ತನೆಗಳಷ್ಟು ಕೀರ್ತನೆಗಳನ್ನು ಕನಕದಾಸರು ರಚಿಸಿಲ್ಲ. ಆದರೆ ಸತ್ವದಲ್ಲಿ ಪುರಂದರದಾಸರ ಕೀರ್ತನೆಗಳ ಸತ್ವದೊಂದಿಗೆ ಸಮಸಮವಾಗಿ ಸ್ಪರ್ಧಿಸಬಲ್ಲುವು. ಒಂದು ರೀತಿ ನೋಡಿದರೆ, ಕಾವ್ಯಗುಣ ಕನಕದಾಸರಲ್ಲಿ ಒಂದು ಕೈ ಹೆಚ್ಚೇ ಇರುವಂತೆ ತೋರುತ್ತದೆ. ಇದಕ್ಕೆ ಕಾರಣ, ಕನಕದಾಸರ ಕವಿಪ್ರಜ್ಞೆ. ಪುರಂದರದಾಸರ ಕೃತಿಗಳಂತೆ ಪಲ್ಲವಿ-ಅನುಪಲ್ಲವಿಗಳಲ್ಲಿ ನಿಯಂತ್ರಿಯಾಗಿದ್ದು, ಉಳಿದ ಸಾಲುಗಳಲ್ಲಿ ಅದರ ಸಮರ್ಥನೆ ಅಥವಾ ಪಲ್ಲವಿಯ ಧ್ವನಿಯನ್ನು ವಾಚ್ಯ ಆಗಿ ವಿವರಿಸುವುದರಲ್ಲಿಯೆ ಪರ್ಯವಸನಗೊಳ್ಳುವುದು ಕನಕದಾಸರಲ್ಲಿ ಕಡಿಮೆಯೆ. ಇನ್ನೊಂದು ಅಂಶ, ಕನಕನ ಭಕ್ತಿ. ಅವರು ಮುಖ್ಯವಾಗಿ ಹರಿಭಕ್ತಿ ಪ್ರತಿಪಾದಕರು. ಸರ್ವಸಮರ್ಪಣಭಾವ ಅವರದ್ದು. ಅಲ್ಲಿ ಮಾಧ್ವತತ್ವ ಪ್ರತಿಪಾದನ-ಸಮರ್ಥನ, ರಾಮಾನುಜರ ತತ್ವ ಒಪ್ಪಿರಲಿ, ಬಿಡಲಿ ಅದಾವುದರ ನಿರ್ದಿಷ್ಟ ಪ್ರಚಾರದ ತಂಟೆಗೆಳಸಿಲ್ಲ. "ವಾಸುದೇವರ ಬಲಗಳಿದ್ದಲ್ಲಿ ಫಲವೇನು ವಾಸುದೇವನ ಬಲವಿಲ್ಲದವಗೆ" ಎಂಬುದು ಅವನ ಏಕದೇವೋಪಾಸನೆಯ ಕುರುಹು. ಕಾಗಿನೆಲೆಯಾದಿಕೇಶವ ದಾಸರ ಪರದೈವ.

ಕನಕದಾಸರ ಕೀರ್ತನೆ ಇತರ ಹರಿದಾಸರಿಗಿಂತ ವಿಶಿಷ್ಟವಾಗಿರಲು ಕಾರಣ ಹಲವಾರು. ಅವರು ಬಳಸಿರುವ ಸಹಜ ದೇಸಿ, ಲೋಕಾನುಭವ, ಉಪಮೆಗಳಲ್ಲಿ ಸಹಜತೆ, ವರ್ಣಕ ಕಾವ್ಯಗಳಂತೆಯೂ ಕೆಲವೊಮ್ಮೆ ಇರುವುವು. "ಭಕ್ತನೊಬ್ಬ ಮುಂಕ್ತಿ ಪಡೆವ ಹಂಬಲದಿಂದ ಭಗವಂತನೊಂದಿಗೆ ನಡೆಸಿದ ಭಾವನಾತ್ಮಕ ಭಕ್ತಿ ಸಂಭಾಷಣೆಯೆ ಕೀರ್ತನೆಗಳ ವಸ್ತು"[169] ಎಂಬ ಮಾತು ಇಲ್ಲಿ ಒಪ್ಪಬೇಕಾದ್ದೆ. ಕನಕದಾಸರ ಕೀರ್ತನೆಗಳಲ್ಲಿ ಸಾಹಿತ್ಯ, ಸ್ತೋತ್ರ, ನಾಮಸಂಕೀರ್ತನೆ (ಈಶನಾಮ), ಆತ್ಮಶೋಧನೆ, ಸಮಾಜ ವಿಮರ್ಶೆ, ಲೋಕನೀತಿ, ಮಧ್ವತತ್ವ-ರಾಮಾನುಜತತ್ವ ಇವರ ಬಗ್ಗೆ, ಹೀಗೆ ಎಲ್ಲ ಇವೆ-ಭಾವನೆ. ಭಕ್ತಿ ಇಲ್ಲಿ ಪ್ರಧಾನ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಇರುವ ಹಾಡೂ ಉಂಟು. "ಭಕ್ತಿ ಸೂತ್ರ ಮಾತ್ರ ಈ ಮುಕ್ತಕಗಳನ್ನು ಜೋಡಿಸುವ ಒಂದು ಕೊಂಡಿ." [170] ಇಲ್ಲಿ ಒಂದು ಐತಿಹಾಸಿಕ ಅನುಮಾನ ಬರುವುದು ಕನಕದಾಸರ ಕೀರ್ತನೆಗಳಲ್ಲಿ ವಿಠಲ ಭಕ್ತಿಯ ಮಾತು ಕೇಳಬಾರದಿರುವುದು. ಕನಕದಾಸರಲ್ಲಿ ಕಾಗಿನೆಲೆಯಾದಿಕೇಶವ, ಬಾಡದಾದಿಕೇಶವ, ಕಾಗಿನೆಲೆಯರಂಗ, ಹೀಗೆ ಬಂದಿವೆ. ಅವರ ಕೀರ್ತನ

ಕೃತಿಗಳಲ್ಲಿ ಸುತ್ತುಬಳಸು, ನಾರಿಕೇಳಪಾಕವೆ ಹೆಚ್ಚು. ಏಕಾಂತ ಭಕ್ತಿ, ಧರ್ಮ, ನೀತಿ ಇವೆಲ್ಲ ದಾಸರು ಬೋಧಿಸಿದ್ದಾರೆ. ಡಂಭಾಚಾರ, ಡಾಂಭಿಕತೆ, ಸಂಕುಚಿತ ಪ್ರವೃತ್ತಿ ಖಂಡಿಸಿರುವುದೂ ಇದೆ. ದಾಸಕೂಟದ ಕ್ರಮದಂತೆ, ದೇವತಾಸ್ತುತಿ, ನಾಮಸ್ಮರಣೆಯ ಕೀರ್ತನೆಯಿದ್ದರೂ ಹೆಚ್ಚು ಇಲ್ಲ. ಭಾವಾವೇಶ ಸಹಜವಾಗಿಯೆ ಇದೆ. ತಿಳಿಹಾಸ್ಯದ ಎಳೆ ಕೀರ್ತನೆಯಲ್ಲೂ ಬರುವುದು ಒಂದು ವಿಶೇಷ :

ಉದಾ : ಅವರ ದೇವತಾಸ್ತುತಿ :

ನಮ್ಮಮ್ಮ ಶಾರದೆ ಉಮಾಮಹೇಶ್ವರಿ
ನಿಮ್ಮೊಳಗಿಹನ್ಯಾರಮ್ಮ ॥ಪ॥

ಕಮ್ಮಗೋಲನ ವೈರಿ ಸುತನಾದ ಸೊಂಡಿಲ
ಹಮ್ಮಯ್ಯ ಗಣನಾಥನೆ ॥ಅ.ಪ.॥

ಮೋರೆಕಪ್ಪಿನಭಾವ ಮೊರದಗಲ ಕಿವಿ
ಕೋರೆದಾಡೆಯನ್ಯಾರಮ್ಮ
ಮೂರುಕಣ್ಣಿನಸುತ ಮುರಿದಿಟ್ಟ ಚಂದ್ರನ
ಧೀರ ತಾ ಗಣನಾಥನೆ ॥೧॥

ಎಂಬಲ್ಲಿ ಗಣೇಶನನ್ನು ಸ್ತುತಿಸುವ ಧಾಟಿ ವಿಶಿಷ್ಟವಾದ ರೀತಿಯದಾಗಿದೆ. ಹಾಗೆಯೆ ಅವರ ಜಿಜ್ಞಾಸೆ ವಿಸ್ಮಯಗೊಳ್ಳುತ್ತ ಹೋಗುವ ರೀತಿ : ಅಲ್ಲಿ ವಿಚಾರ, ತಾತ್ವಿಕತೆ, ಸೌಂದರ್ಯ ಕಡೆಗೆ "ಈ ಲೋಕದ ಮೂಲಭೂತ ವಿಸ್ಮಯದ ಪೊಳಟಿನಲ್ಲಿ ನಿಲುಗಡೆ ಯನ್ನು ಕಂಡುಕೊಳ್ಳುವ ರೀತಿ ಅಪೂರ್ವ"[171] ಉದಾ :

ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ ॥ಪ॥
ಬಯಲು ಆಲಯದೊಳಗೊ ಆಲಯವು ಬಯಲೊಳಗೊ
ಬಯಲು ಆಲಯವೆರಡು ನಯನದೊಳಗೊ
ನಯನ ಬುದ್ಧಿಯೊಳಗೊ ಬುದ್ಧಿ ನಯನದೊಳಗೊ
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ॥೧॥

ಕುಸುಮದೊಳು ಗಂಧವೋ ಗಂಧದೊಳು ಕುಸುಮವೊ
ಕುಸುಮ ಗಂಧಗಳೆರಡು ಘ್ರಾಣದೊಳಗೊ" ಎಂಬಲ್ಲಿರುವ ಜಿಜ್ಞಾಸೆ ಕನಕ ದಾಸರ ಕವಿಹೃದಯಕ್ಕೆ ಸಾಕ್ಷಿ. ಅವರಲ್ಲಿ ಲೋಕಾನುಭವ ಮಡುಗಟ್ಟಿ ನಿಲ್ಲುತ್ತದೆ. ಜನತೆಯ ಬದುಕಿನ ನಾಡಿಮಿಡಿತ ಅವರು ಬಲ್ಲರು. ಹಾಗೆಯೆ ಉಚಿತ ಉಪಮೆ ರೂಪಕ ಎಲ್ಲವೂ ಅವರ ಕೀರ್ತನೆಗಳಲ್ಲಿ ಇರುತ್ತವೆ. "ಅಲ್ಪದೊರೆಗಳ ಜೀತ ಎಷ್ಟು ಮಾಡಿದರೇನು" ಎಂಬಲ್ಲಿ ಇರುವ ಅಸ್ವತಂತ್ರತೆ "ಸಾಕು ಸಾಕು ಮನುಜ ಸೇವೆಯು ಶ್ರೀರಂಗರಾಯ" ಸಾಕು ಸಾಕು ಮನುಜ ಸೇವೆ ಮಾಡಿ ಬೆಂದು ಬಳಲಿದೆನು : ಬೇಕು ನಿನ್ನ ಪಾದ ಭಜನೆಯೆಂದು ಬಯಸುತಿಹೆನು ರಂಗ॥

ಹೊತ್ತರೆದ್ದು ಹೋಗಿ ಪರರ ಚಿತ್ತವೃತ್ತಿಗಳನ್ನೆ ಹಿಡಿದು ।

ಭೃತ್ಯನಂತೆ ಹಲ್ಲ ತೆರೆದು ಕೆಲಸ ಮಾಡಿ ದಣಿಯುವೆ...... ಈ ಸಾಲುಗಳಲ್ಲಿ ಕಾಳಿಕಾ ವಂನಂಜರ ಸೇವೆ ಮಾಡಲಾಗದ ದೀನತೆ, ಲೋಕಾನುಭವ ಮಂಡಿ ಬರುತ್ತವೆ. ಹಾಗೆಯೇ ವ್ಯಂಗ್ಯವನ್ನು ಸೂಚಿಸುವಲ್ಲಿ "ಎನ್ನ ಕಂದ ಹಳ್ಳಿಯ ಹನುಮಾ : ಚೆನ್ನಾಗಿ ಇಹರೆ ಲಕ್ಷ್ಮಣದೇವರು ॥" ಎಂದು ಹನುಮಂತನನ್ನ ಕೇಳಿದ್ದಕ್ಕೆ ಅವನ ಉತ್ತರವಿದು: "ತುಪ್ಪಪಂಚಾಮೃತವಂದು ಅಡವಿಗಡ್ಡೆಗಳಿಂದು ಶ್ರೀಪತಿ ರಾಘವ ಕ್ಷೇಮದಲ್ಲೆದ್ದಾರ"

ಕನಕದಾಸರ ಕೀರ್ತನೆಗಳಲ್ಲಿ ಸಮಾಜ ವಿಮರ್ಶೆ, ನೇರ. ಅವರ ಮಾತು ಹರಿತ ವಾದದ್ದು. "ಮರೆಯದಿರು ಮರೆಯದಿರು ಎಲೆ ಮಾನವ ನಿನ್ನ ಸಿರಿಯ ಹವಣೇನು ಹೇಳಲೊ ಮಾನವಾ ॥" ಎಂಬ ಕೀರ್ತನೆಯಲ್ಲಿ ಬರುವ ಹೋಲಿಕೆ ಪುರಾಣಪ್ರಜ್ಞೆ

ಬೆರೆಯದಿರು ಬೆರೆಯದಿರು ಎಲೆ ಮಾನವಾ ।
ಗುರುವಿವೇತನಕೊ ನಿನ್ನ ತೆರನಾವುದೊ ॥
"ತೀರ್ಥಹಿಡಿದವರು ತಿರುನಾಮಧಾರಿಗಳೆ । ಜನ್ಮ ಸಾರ್ಥಕವಿರದವರು ಭಾಗವತರಹುದೆ :
ಪಟ್ಟೆನಾಮವನಿಟ್ಟು ಪಾತ್ರಕೈಯಲಿ ಹಿಡಿದು"

ಎಂಬಲ್ಲಿ ಬರುವ ಡಾಂಭಿಕತೆಯ ಟೀಕೆ "ಮುಸ್ಲಿಂ-ವೀರಶೈವ ಎಲ್ಲರನ್ನೂ ಟೀಕಿಸುವ ಧೈರ್ಯ ಕನನಿಗೇಸ್ಕೆ" ಎಂದೆನ್ನಿಸುತ್ತದೆ.

ಕನಕದಾಸರ ಭಕ್ತಿಸಾಹಿತ್ಯವಂತೂ ಅಸದಳ. ಅಲ್ಲಿ ಬರುವ ಭಕ್ತಹಂಬಲ, "ಎಳ್ಳುಕಾಳಿನೊಳಿಷ್ಟು ಭಕುತಿಯೆನ್ನೊಳಗಿಲ್ಲ" ಎಂಬಲ್ಲಿ ಮತ ಪ್ರದರ್ಶನದ ರೀತಿ, ಗುಂಡು ಮಣಿಕ ಹಕ್ಕಿಗೆ ಹೋಲಿಸುವ ಉಪಮೆ, ಅದರದ್ದೆ ಸಹಜತೆ ಪಡೆದಿದೆ.

"ಬಂದೆವಯ್ಯ ಗೋವಿಂದ ಸೆಟ್ಟಿ ।......ಒಡಲು ತುಂಬಿಮಿಕ್ಕ ಅನ್ನವ ಮಾಡಿಸಿ ।
ಒಡವೆಯ ಗಳಿಸುವ ಕಡು ಲೋಭಿ ಸೆಟ್ಟಿ ॥"ಎಂಬ ನಿಂದಾಸ್ತುತಿ,

"ನಾವು ಕುರುಬರು ನಮ್ಮ ದೇವರು ಬೀರಯ್ಯ : ಕಾವನಪ್ಪಜ್ಜ ನರಗುರಿಯ ಹಿಂಡುಗಳ" ಎಂಬ ಕೀರ್ತನೆಯಲ್ಲಿ ಬರುವ ಕುರಿಕಾಯುವ ವರ್ಣನೆ.

"ಏನು ಕಾರಣ ಬಾಯ ತೆರೆದೆ ಪೇಳೆಲೊ ದಾನವಾಂತಕ ಆಹೋಬಲ ನಾರ ಸಿಂಹನೆ" ಎಂಬ ಕೃತಿಯಲ್ಲಿರುವ ನರಸಿಂಹ ಸ್ತುತಿ ವಿಶಿಷ್ಟತೆ, "ಯಾಕೆ ನೀನಿಲ್ಲಿ ಪವಡಿಸಿದೆ ಹರಿಯೆ" ಎಂದು ಪಶ್ಚಿಮದ ಶ್ರೀರಂಗಪಟ್ಟಣದ ರಂಗನಾಥನನ್ನು ಕುರಿತು ಕಟ್ಟಿರುವ ಕೀರ್ತನೆಯೊಳಗೆ ಕಲ್ಪಕತೆ, ವಿಡಂಬನೆ, "ಇನ್ನೆಷ್ಟು ಕಾಲದಲ್ಲಿ ಮೈಮರೆದು ಮಲಗಿದರೆ ನಿನ್ನನೆಬ್ಬಿಸುವರಾರನು ಕಾಣೆಸೊ" ಎಂಬಲ್ಲಿ "ವಿಷಾದಪೂರ್ಣ ವಾದ ಮುಕ್ತಾಯ ಅಭೂತಪೂರ್ವವಾಗಿದೆ. ಕನಕದಾಸರು ಕವಿಗಳು ಎನ್ನುವ ಮಾತಿಗೆ ಜೀವಂತ ಸಾಕ್ಷಿಯಾಗಿದೆ."

"ಹೂವತರುವರ ಮನೆಗೆ ಹುಲ್ಲತರುವೆ"ನೆಂಬ ಕೃತಿಯಲ್ಲಿ ತನ್ನನ್ನು ಕಾಡುತ್ತಿರುವ ಘೋರ ದುರಿತ ವಾರಿಧಿ ಬತ್ತಿಸಬೇಕೆಂದೂ, ತಾನು ಹರಿಯದಾಸನೆಂಬುದನ್ನು ರಂಗನಾಥ ಭಕ್ತನೆಂಬುದನ್ನು ಜಾಹೀರುಪಡಿಸೆಂದು ದೇವರನ್ನು ಅನನ್ಯ ಭಕ್ತಿಯಿಂದ ಪ್ರಾರ್ಥಿಸುವ ಭಕ್ತಿ, ಮನಮಿಡಿಸುವಂಥವು. "ಅಡಿಗೆಯನು ಮಾಡಬೇಕಣ್ಣ", "ನಾರಾಯಣನೆಂಬ ನಾಮದ ಬೀಜವನು ನಾಲಿಗೆಯ ಕೂರಿಗೆಯ ಮಾಡಿಬಿತ್ತಿರಯ್ಯ" ಎಂಬುವು ಕನಕದಾಸರ ಆಲಂಕಾರಿಕ ಪ್ರಜ್ಞೆಗೆ ನಿದರ್ಶನ.

ಕಿಲುಬಿನಾ ಬಟ್ಟಲೊಳು ಹುಳಿಕಲಸಿ ಉಣಬಹುದೆ।
ಚಳಿಯುರಿಗೆ ಚಂದನದ ಲೇಪ ಹಿತವೆ।
ಮೊಲೆಬಿದ್ದ ಹೆಣ್ಣಿನೊಳು ಮೋಹಕ್ಕೆ ಸೊಗಸಹುದೆ।
ಬೆಲೆ ಬಿದ್ದ ಸರಕಿನೊಳು ಲಾಭವುಂಟೆ॥

ಎಂಬಲ್ಲಿ ಉಪಮೆ, ಸಾದೃಶ, ಸಲಿಲದಂತೆ ಪ್ರವಹಿಸಿವೆ: "ದಾನಧರ್ಮವ ಮಾಡಿ ಸುಖಿಯಾಗು ಮನವೆ" ಎಂಬಲ್ಲಿ ನೂರೆಂಟು ದೇವರ ಉಪಾಸನೆ ಜರಿದು, ಏಕದೇವರ ಪಾಸನೆ ಮಾಡಿರೆನ್ನುತ್ತಾರೆ.

"ಜಪವ ಮಾಡಿದರೇನು ತಪವ ಮಾಡಿದರೇನು ಕಪಟ ಗುಣವಿದ್ದರೆ" ಎಂದು ಡಾಂಭಿಕತೆ-ಕಂದಾಚಾರ ಜರಿಯುವ ಸಮಾಜ ಪ್ರಜ್ಞೆ.

"ಕುಲ ಕುಲ ಕುಲವೆಂದು ಹೋರಾಡದಿರಿ। ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ॥ ಕುಲ ಕುಲ ಕುಲವೆನ್ನುತಿಹರೋ। ಕುಲವಾವುದು ಸತ್ಯಸುಜನರಿಗೆ" ಎಂಬ ಕೀರ್ತನೆಗಳಲ್ಲಿ ಕುಲದ ಬಗ್ಗೆ ಬಂದಿರುವ ವ್ಯಾಖ್ಯೆ, ಹಾಗೂ ಅವರು ಅನುಭವಿಸಿರಬಹುದಾದ ಸಂಕಟ, ಬ್ರಾಹ್ಮಣರಿಂದಾದ ತೊಂದರೆ.

"ಅಂಧಂತಮಸು (ನರಕದ ಒಂದು ಬಗೆ) ಇನ್ನಾರಿಗೆ" ಎಂಬಲ್ಲಿರುವ ಮಧ್ವಮತ ನಿಷ್ಠೆ "ಏಕೆ ನಡುಗಿದೆ ತಾಯಿಭೂಮಿ" ಎಂಬಲ್ಲಿರುವ ಆತ್ಮನಿವೇದನೆಯ ಭಾವಗೀತೆ, "ದಾಸ ದಾಸರ ಮನೆಯ ದಾಸಾನುದಾಸ ನಾನು" ಎಂಬ ದಾಸ್ಯಭಾವ, (ಸ್ವಾಮಿಭೃತ್ಯಭಾವ)

"ಶರೀರ ಸೌಖ್ಯಕನುಕ್ಕಾಗದ ಹೆಣ್ಣು ಊರಲ್ಲಿದ್ದರೇನು ತವರೂರಲ್ಲಿದ್ದರೇನು" ಎಂಬ ಸಾಮಾನ್ಯರಲ್ಲಿಯೂ ಕಾಣುವ ಬದುಕಿನ ಪ್ರಜ್ಞೆ, ಯಾವುದೂ ಬಿಡಲಾಗುವುದಿಲ್ಲ.

ಕನಕದಾಸರ ಕೃತಿಗಳಲ್ಲಿರುವ ವೈವಿಧ್ಯ, ರಾಗ ತಾಳಕ್ಕೆ ಸರಿಯಾಗಿ ಮಿಡಿತ ಕನ್ನಡ ನುಡಿ, ದೇಸಿ, ಕವಿತಾಮನೋಧರ್ಮ ಎಲ್ಲವೆಲ್ಲ ಗುರುತಿಸುವಂಥವು. ಕೆಲವೊಮ್ಮೆ ಅವರಿಗೆ ಸಂಸ್ಕೃತ ವ್ಯಾಮೋಹ ಬರುವುದೂ ಉಂಟು. ಅಲ್ಲಲ್ಲಿ ಅವರಿಗೆ ಇದ್ದ

ಭಾಷೆಯು ಪ್ರಭುತ್ವ ಗೋಚರ ಆಗುತ್ತದೆ. ಏಕ್‌ದಂ ಕವಿ ಆದವರಲ್ಲ ಎನ್ನುವ ಮಾತಿಗೆ ಪುಷ್ಟಿಯಾಗಿ. "ಮೊಲೆ ಹೋದ ಹೆಣ್ಣಲ್ಲಿ ಮೋಹಕ್ಕೆ ಸೊಗಸಹುದೆ" "ಎಲ್ಲರೂ ಮಾಡುವುದು ಹೊಟ್ಟೆಗಾಗಿ" ಎಂಬಲ್ಲಿರುವ ಲೋಕ ಸೂಕ್ತಿ,

"ದೇವಿ ನಮ್ಮ ದ್ಯಾವರು ಬಂದರು ನೋಡಬನ್ನಿ ಸಿರ।"
"ಕಂಡಕಂಡಲ್ಲಿ ಕುಂಡೆ ಬಿಟ್ಟುಕೊಂಡು
ಭಂಡತನದಲಿ ನಿಂತಾನಮ್ಮ" ಎಂಬುದರಲ್ಲಿ ಹಾಗೂ
[172]"ಛೀ ನಿನ್ನ ಮೋರೆ ಮೇಲೆ ಕೊಣ್ಣ : ಛೀ ನಿನ್ನ ಮೋರ ಮೇಲೆ ॥ಪ॥
..........ಹೊತ್ತರೆದ್ದು ಮುಖತೊಳೆದು ಮನೆ ಮನೆ ಪೋಕರ ಕಂಡಿದ್ದ"
.........."ಬೋಡಿ ಮಾತುಗಳನೂ ಹೇಳಿ ಮಂದಿಯು ಕುಂಡೆ ಚಿವುಟಿದ್ದ"

ಶಬ್ದ ಚಮತ್ಕಾರಗಳಿಗೆ ಎಂಟು ಸಾಲುಗಳಲ್ಲಿ ಗ್ರಾಮ್ಯದ ಬನಿಗನುನಾರ್ಹ. "ಈತನೀಗ ವಾಸುದೇವನು" ಕೀರ್ತನೆಯ ಸಾಲುಗಳು, ನೆಲ್ಲೀಕಾಯಿಯ ಮೂಲಕ ಹರಿ ಧ್ಯಾನ ಮಾಡುವ ವಿಧಾನ ಮೆಚ್ಚುವಂಥದ್ದೆ. ದೇಹದ ಅನಿತ್ಯತೆ, ಅಸಾರತೆ, ಸಂಸಾರದ ಕ್ಷಣಿಕ ಭಂಗುರತೆಯನ್ನು ಪ್ರತಿಪಾದಿಸುವ ಕೀರ್ತನೆಗಳು ಅನೇಕ. ಜ್ಞಾನ ಸಾಧನೆ ನಿರಂತರ ನಡೆಯಬೇಕಾದ ತದೇಕ ಚಿತ್ತದಿಂದೊಡಗೂಡಿದ ವಿಶೇಷ ಕ್ರಿಯೆ ಎಂಬುದು ಮನದಟ್ಟು ಮಾಡಿಕೊಡುತ್ತಾರೆ ಭಕ್ತಕವಿ ಕನಕರು.

ಕನಕದಾಸರ 'ಮುಂಡಿಗೆ',[173] ಗಳಂತೂ "ಕನಕನನ್ನು ಕೆಣಕಿ ತಿಣುಕಬೇಡ"ವೆಂಬ ಗಾದೆ ಮಾತಿಗೆ ಉದಾಹರಣೆ. ಇದರ ಅರ್ಥಗಳನ್ನು ಇನ್ನೂ ಬಿಡಿಸುವುದು ಕಷ್ಟವೆನಿಸಿದೆ. ದಿನನಿತ್ಯ ವ್ಯವಹಾರದ ಭಾಷೆಗಿಂತ ಭಿನ್ನ ಆದ, ಆಧ್ಯಾತ್ಮಿಕ ಕ್ಷೇತ್ರದಲ್ಲಿ ಮಾತ್ರ ಬಳಸುವ ಒಗಟಿನ ಮಾತುಗಳು ಇವು. ಈ ರಹಸ್ಯ ಭಾಷೆ ಎಲ್ಲ ಧಾರ್ಮಿಕ ಪಂಥಗಳಲ್ಲಿಯೂ ರೂಢಿಯಲ್ಲಿದೆ. ಇಲ್ಲಿ ಬಳಸುವ ಭಾಷೆ ಸರಳವಾದರೂ ಸಂಕೇತಗಳಿಂದ ಕೂಡಿ ತತ್ವವನ್ನು ತಿಳಿಸಿಕೊಡುವಲಕ್ಷ್ಯವಿರಿಸಿ ರಚಿಸಿದ ಮುಂಗಡಿಗೆಯಿವು. (ಉದಾ : ಶಿಶುನಾಳ ಷರೀಫರ ವಚನಗಳು) ಕನಕದಾಸರ ಬೆಡಗಿನ ವಚನಗಳು"[174] ಅವರ ಬುದ್ಧಿವಂತ್ರೆಯ ಚಿಂತನ ತೀವ್ರತೆಯ ಸಾದೃಶ್ಯ ಶ್ರೀಮಂತಿಕೆಯ ಭಾಷಾಸಿದ್ಧಿಯ ಹೆಗ್ಗುರುತುಗಳಾಗಿವೆ. ಕನಕದಾಸರು ಈ ಹಾಡುಗಳನ್ನು ರಚಿಸಿದ ಉದ್ದೇಶವೇನೊ ತಿಳಿಯದು. ಸಾಮಾನ್ಯರಿಗೆ ಧರ್ಮನೀತಿ, ಜ್ಞಾನ, ಆಧ್ಯಾತ್ಮದ ತಿಳಿವು ಬಿತ್ತರಿಸುವ ಕಾರ್ಯ ಕೈಗೊಂಡ ಕನಕದಾಸರ ಹರಿದಾಸವ್ಯಕ್ತಿಯಲ್ಲಿ ಈ ಒಗಟಿನ ರಚನೆ ಏಕೆ? ಇದಕ್ಕೆ ಕೆಲವು ಕಾರಣ ಇವೆ : "ಒಂದನೆಯದು, ಅವರು ಕುರುಬರ ಜಾತಿಯವರಾಗಿದ್ದರಿಂದ ಹೆಚ್ಚು ಜ್ಞಾನ, ಬಂದ್ಧಿಯುಳ್ಳವರಲ್ಲ ಎಂಬ ಇತರರ ಸಾಂದರ್ಭಿಕ ಟೀಕೆಗಳಿಗೆ ಉತ್ತರವಾಗಿ ; ತಮ್ಮ ಜ್ಞಾನ, ಭಾಷೆಯ ಪರಿಣತಿ, ಪಾಂಡಿತ್ಯ ಪ್ರದರ್ಶಿಸಲಿಕ್ಕಾಗಿ, ಇತರರ ಬಂದ್ಧಿ ಪ್ರಜ್ಞೆ ಎಷ್ಟು ದೂರ ಹೋಗುತ್ತದೆಂದು ಪರೀಕ್ಷಿಸಲೋಸುಗ, ಹರಿದಾಸ ಪರಂಪರೆಯ ಹಿನ್ನೆಲೆಯಲ್ಲಿ ಬಂದಿದ್ದ

ಜನತಾಚಳವಳಿಯಾದ ವಚನಕಾರರ ಚಳವಳಿಯಲ್ಲಿ ಬಂದ ಅನೇಕ ವಚನಗಳಂ, ಅವರ ಆಧ್ಯಾತ್ಮ ಪ್ರವೃತ್ತಿ, ಇದನ್ನು ವಂನಗಂಡು ವೈಷ್ಣವಭಕ್ತಿ ಪ್ರಸರಣ ಕಾರ್ಯಕ್ಕಗೊಂಡ ಕನಕದಾಸರು ತಾವೂ ಏಕೆ ಆಧ್ಯಾತ್ಮವನ್ನು ಸಾಂಕೇತಿಕ ಭಾಷೆಯಲ್ಲಿ ಪ್ರಯೋಗಿಸಬಾರ ದೆಂದು ರಚಿಸಿದರೆ ? ಎಂದು ಅನ್ನಿಸುತ್ತದೆ. ಒಟ್ಟಾರೆ, ಕನಕನ ಮುಂಡಿಗೆಗಳ ಅರ್ಥ ಇನ್ನೂ ಬಿಡಿಸಲಾಗಿಲ್ಲ ಎಂಬುದೆ ತಿಳಿದವರ ಅಭಿಮತ.[175]

ಕನಕನ ಮುಂಡಿಗೆಗಳಲ್ಲಿ ಒಂದನ್ನು ಸಂಬೋಧ ರಾಮರಾಯರೂ, ಇನ್ನೊಂದು 'ಕನಕದಾಸರ ಕೀರ್ತನೆಗಳ' ಸಂಪಾದಕರಾದ ಡಾ|| ಕೆ. ಎಂ. ಕೃ. ಶಿವಮೂರ್ತಿ ಶಾಸ್ತ್ರಿಗಳವರಂ, ಇನ್ನೊಂದನ್ನು "ಕನಕದಾಸನ ಭಕ್ತಿಗೀತ" ಸಂಪಾದಿಸಿರುವ ಡಾ|| ಬೆಟ ಗೇರಿಯವರೂ ಬಿಡಿಸಲೆತ್ನಿಸಿದ್ದಾರೆ. ನಾವು ಒಂದನ್ನು ಇಲ್ಲಿ ಉದ್ಧರಿಸಬಹುದು.

ಮರನುಂಗುವ ಪಕ್ಷಿ ಮನೆಯೊಳಗೆ ಬಂದಿದೆ-ಇದರ
ಕುರುಹು ಕೇಳಿ ಕುಳಿತಿದ್ದ ಜನರು ||ಪ||

ಒಂಟಿಕೊಂಬಿನ ಪಕ್ಷಿ ಒಡಲೊಳಗೆ ಕರುಳಿಲ್ಲ |
ಗಂಟಲುಮೂರುಂಟು ಮೂಗಿಲ್ಲವು ||
ಕುಂಟಮನುಜನಂತೆ ಕುಳಿತಿಹುದು ಮನೆಯೊಳಗೆ |
ಎಂಟುಹತ್ತರ ಅನ್ನವನು ಭಕ್ಷಿಸುವುದು ||೧||
ನುಡಿಯುತಲುಂಟು ನಡುನೆತ್ತಿಯಲಿಬಾಯಿ |
ಕಡುನಾದದ ಗಾಯನ ಮಾಡುತಿಹುದು ||
ಅಡವಿಯೊಳು ಹುಟ್ಟುವುದು ಅಗಲಿ ಎರಡಾಗುವುದು |
ಒಡತನವು ಬಂದರೆ ಬಹಳ ರಕ್ಷಿಪುದು ||೨||
ಪಂಚವದನೆಯುವರ ಕರದಿ ನಲಿದಾಡುವುದು |
ಎಂಜಲತಿನಿಸುವುದು ಮೂಜಗಕೆ ||
ರಂಜಿಪಮಣಿಯ ಸಿಂಹಾಸನದ ಮೇಲಿಪ್ಪ |
ಕುಂಜರವರದಾದಿಕೇಶವ ತಾ ಬಲ್ಲ ||೩||

ಇಲ್ಲಿ 'ಬೀಸುವ ಕಲ್ಲ'ನ್ನು ಕುರಿತು ಕನಕದಾಸರು ಮುಂಡಿಗೆ ರಚಿಸಿರುವುದು :

ಮರವನುಂಗುವದು : ಮರದ ಗೂಟ-ತಳಗೂಟವಿರುವ, ಹಕ್ಕಿಮನೆಯೊಳಗೆ ಇದೆ.

ಒಂಟಿಕೊಂಬಿನ ; ಒಂದೇ ಗೂಟ-ಮೇಲಿನ ಕಲ್ಲಲ್ಲಿರುವಂಥದು ಬೀಸುವ ಕಲ್ಲಿನಗೂಟ ಎಂದೇ ಕರೆವ ವಾಡಿಕೆ.

ಗಂಟಲುಮೂರುಂಟು : ಕಣ್ಣಿನಂತೆ ಮೂರು ತೂತುಗಳು, ಧಾನ್ಯಹಾಕಲು. ಕಲ್ಲಾದ್ದ ರಿಂದ ಜಡ ಅಥವಾ ಕುಂಟ ಮನುಜನಂತೆ ಅಲ್ಲಾಡದೆ ಮನೆ ಯಲ್ಲಿ ಕುಳಿತಿದೆ.

ಸಡುನೆತ್ತಿಯಲಿಬಾಯಿ : ಕಾಳು ಹಾಕಲು ಇರುವ ಬಾಯಿ.
ಅಡವಿಯೊಳುಹುಟ್ಟುವುದು : ಕಲ್ಲಾಗಿಹುಟ್ಟಿ, ಬೀಸುವ ಕಲ್ಲಾದಾಗ,
ಅಗಲಿಎರಡಾಗುವುದು : ಎರಡು ಕಲ್ಲು ಸೇರಿ, ಒಂದು ಬೀಸುವ ಕಲ್ಲಾಗುವಂಥದು.
ಕೋಮಲೆಯರ ಕೈಯಲ್ಲಿ ಬಳೆ, ಕಡಗಗಳ ಝುಲ್ ಝುಲ್ ನಾದದ ಜತೆ, ರಾತ್ರಿಯ ನೀರವ ಮೌನವನ್ನು ಸೀಳುವಂಥ ಇಂಪಿನ ಗಾನದ ಜತೆ ಹರಿವ ಬೀಸುವ ಕಲ್ಲು.

ಇನ್ನೊಂದೆಡೆ, ಅವರ ರಚನಾ ವೈಶಿಷ್ಟ್ಯ ಹೀಗೆ :

ಸಹಜವಿದು ಈ ನುಡಿಯ ಸತಿಯ ಮಾತಲ್ಲ ।
ಮಹಿಯೊಳಗೆ ಪೇಳುವೆನು ವಿಹಿತವಾಕ್ಯಗಳ ॥ಪ॥

ಶ್ರುತಿ ಶಾಸ್ತ್ರಪೌರಾಣಗಳ ನೋದುವವನೆ ಶೂದ್ರ ।
ಅತಿಥಿಯಾದರಿಸುವನು ಅತಿಲುಬ್ಧನು ॥
ವ್ರತನಿತ್ಯ ಸಂಧ್ಯಾನ್ನ ಮಾಡುವವನೇ ಪಾಪಿ ।
ಪತಿಯಾಜ್ಞೆಯಿಂದಿಹಳ ಪರಮ ಪಾತಕಿಯು ।೧।

ಇಂಥವು ಅನೇಕವಿವೆ. ಮುಂಡಿಗೆಗಳಲ್ಲಿ ಪ್ರಧಾನವಾಗಿ ರೂಪಕಗಳು ಇರುವುದು. ಈಚೆಗೆ ಜನಪ್ರಿಯತೆ ಗಳಿಸಿರುವ ಶಿಶುನಾಳ ಷರೀಫರ "ಕೋಡಗನ ಕೋಳಿನುಂಗಿತ್ತ . . ." ಎನ್ನುವಂತೆ ಕನಕದಾಸರ ಒಂದು ಗೂಢ ಅರ್ಥವುಳ್ಳ ರಚನೆಯ ಒಂದು ಸಾಲು ಹೀಗಿದೆ :

"ಎಂದೆಂದು ಇಂಥ ಜೋದ್ಯಕಂಡಿದ್ದಿಲ್ಲವೊ ॥ಪ॥

ಅಂಗಡಿ ಬೀದಿಯಲೊಂದು ಆಕಳ ಕರು ನುಂಗಿತು ।
ಲಂಘಿಸುವ ಹುಲಿಯ ಕಂಡು ನರಿಯು ನುಂಗಿತ್ತು॥೧॥

ಇಲ್ಲಿ ಆಕಳು ಎಂದರೆ "ಹಸು" ಮಾತ್ರ ಅಲ್ಲ, "ಜೀವ" ಕರು- ಎಂದರೆ ಕಂಡಲಾಗ್ನಿಯು ಅನ್ನತೃಪ್ತಿ ಕಡೆಯಲ್ಲಿ "ಬೆಳದಿಂಗಳಾಯಿತಮ್ಮ" ಎಂದು ಬರುತ್ತದೆ. ಅಂದರೆ ಜ್ಞಾನ ದಂದಯವಾಯ್ತು ಎಂದರ್ಥ. ಹೀಗೆ ಕನಕನ ಮುಂಡಿಗೆ, ಅದರ ಸಂಕೇತಾರ್ಥ ಬಲ್ಲವರಿಗೆ ಮಾತ್ರ ಗಮ್ಯ. ಇಲ್ಲವೆ ನಿಗೂಢಾರಣ್ಯ. ಇವುಗಳನ್ನು ರೂಪಕದ ತೊಡಕ್ಕಿಲುಗಳೆಂದು ಬಲ್ಲವರು ಕರೆದಿದ್ದಾರೆ. ಭಾವಾರ್ಥ ಒಳಗೊಳಗೇ ಆಡಂತಿದ್ದು, ಸಾಹಿತ್ಯ ಗುಣ ಒಳಗೇ ಹುದುಗಿರುತ್ತದೆ, ಕನಕನ ಮುಂಡಿಗೆಗಳಲ್ಲಿ. ಈ ರಚನೆಗಳ ವೈಶಿಷ್ಟ್ಯ ತಿಳಿಯುವುದು, ಅರ್ಥ ಆದಾಗ ಮಾತ್ರವೆ.

ಕನಕದಾಸರು ದಾಸರಲ್ಲಿ ಕವಿಗಳಿದ್ದರಿಂದ ಅವರ ಕಾವ್ಯಸೃಜನೆ ಕುರಿತೆರಡು ಮಾತು ತಿಳಿಸಿದರೆ, ಅಲ್ಲಿಗೆ ಅವರ ಸಾಹಿತ್ಯಾವಲೋಕನ ಒಂದು ಹಂತ ತಲುಪುತ್ತದೆ.

"ಇತರ ಹರಿದಾಸರಿಗಿಂತ ಭಿನ್ನವಾಗಿ ಅವರು ವರ್ಣಕ ಪರಂಪರೆಯನ್ನು ಅನುಸರಿಸಿ ಷಟ್ಪದಿ, ಸಾಂಗತ್ಯ ಕಾವ್ಯ ರಚಿಸಿದ್ದಾರೆ. 'ಹರಿಭಕ್ತಿಸಾರ', 'ರಾಮಧಾನ್ಯ ಚರಿತ್ರೆ', "ನಳಚರಿತ್ರೆ", "ಮೋಹನತರಂಗಿಣಿ", ಅವರ ಕಾವ್ಯಗಳು. ಇದರ ಜತೆ, ಕವಿಚರಿತೆಕಾರರ ಊಹೆಯಂತೆ. "ನೃಸಿಂಹಸ್ತವ"ವೆಂಬ ಚಿಕ್ಕ ಸಾಂಗತ್ಯ ಕೃತಿಯೂ ಸೇರಿದೆ. ಕೀರ್ತನೆಗಳಲ್ಲಿ "ವಾಸುದೇವಾಯ ನಮೋ" ಎಂಬ ಕೃತಿ ದ್ರೌಪದಿಯ ಮಾನಸಂರಕ್ಷಣೆ ಕುರಿತದ್ದು ಒಂದು ಖಂಡಕಾವ್ಯದಂತಿದೆಯೆಂದು ಬೆಟಗೇರಿಯವರ ಅಭಿಮತ".

'ಹರಿಭಕ್ತಿಸಾರ' ಕನಕದಾಸರ, ಹರಿದಾಸಪಂಥದ ಧ್ಯೇಯ ಆದ ಹರಿಭಕ್ತಿ ಪ್ರತಿಪಾದಕ ಕೃತಿ. ಭಕ್ತಿಸಾಹಿತ್ಯ ಭಾವಿನೀಪಟ್ಟದಿಯ ಈ ಕಾವ್ಯದ ಪ್ರತಿಪದ್ಯವೂ "ರಕ್ಷಿಸುನಮ್ಮನನವರತ" ಎಂಬ ಶರಣಾಗತಿ ಭಾವನೆಯೊಂದಿಗೆ ಕೊನೆಗೊಳ್ಳುತ್ತದೆ. ಇಲ್ಲಿ ಶತಕವಸ್ತು, ವಿನ್ಯಾಸವಿದ್ದು, ೧೧೦-ಪದ್ಯಗಳಿವೆ. ಜ್ಞಾನ, ಭಕ್ತಿ ವೈರಾಗ್ಯ-ನೀತಿಬೋಧೆ ಇಲ್ಲಿನದಾದರೂ, ಹರಿಪಾರಮ್ಯ, ಕವಿಯ ಆತ್ಮನಿವೇದನೆ, ಅವರ ಅನನ್ಯ ಭಕ್ತಿ, ಕಾವ್ಯದ ಜೀವಾಳ. ಹಾಗೂ ಕನಕದಾಸರ ಸಾತ್ವಿಕ ಸ್ವಭಾವವನ್ನು ಪ್ರತಿಬಿಂಬಿಸುವ ಸರಳ ರಚನೆಯಿಂದಂದರೂ ಅಡ್ಡಿಯಿಲ್ಲ.

ಜನಪ್ರಿಯ ಪದ್ಯವಾದ : ದೀನನಾನು ಸಮಸ್ತಲೋಕಕೆ
ದಾನಿನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು ।
ಏನ ಬಲ್ಲೆನು ನಾನು ನೆರೆಸು
ಜ್ಞಾನಮೂರುತಿ ನೀನು ನಿನ್ನನ
ಮಾನದುಂಟೇ ದೇವ ರಕ್ಷಿಸು ನಮ್ಮನನವರತ ॥

ಅಲ್ಲದೆ ಭಗವಂತನಲ್ಲಿ ಭಕ್ತಿಯೆ ಅವನನ್ನು ಪ್ರಧಾನ ಪಡೆವ ಸಾಧನವೆಂಬುದು ಈ ಕಾವ್ಯದ ತಿರುಳು ಎನ್ನಬಹುದು. ಕನಕದಾಸರು ಈ ಕೃತಿಯನ್ನು "ವರವುರದ ಚೆನ್ನಿಗರಾಯ ಚತು ರೋಪಾಯ ರಕ್ಷಿಸೆ"ಂದು ಆರಂಭಿಸಿರುವುದು, ಕಾಗಿನೆಲೆಯ ಸಮೀಪದಲ್ಲಿರುವ "ಇಂಗಳ ಗೊಂದಿ"ಯ ಚೆನ್ನಕೇಶವನ ಈ ಉಪಾಸ್ಯದೇವತೆಯ ಎಂದೆನಿಸುತ್ತದೆ. ಇಂಗಳಗೊಂದಿ ಕಾಗಿನೆಲೆಯ ಸಮೀಪದ ಉಪಗ್ರಾಮ. ಇದನ್ನೆ ಕನಕದಾಸರು "ವರಪುರ" ಎಂದು ಕರೆದಿರುವುದು.

ಹರಿಭಕ್ತಿಸಾರದ ಧ್ಯೇಯ, ಪರಮಾತ್ಮನೇ ತತ್ವ, ಭಕ್ತಿ, ಶರಣಾಗತಿಮಾರ್ಗವೇ ಹಿತ, ಮೋಕ್ಷವೇ ಪುರುಷಾರ್ಥ. ಇಲ್ಲಿ ಮಹಾವಿಷ್ಣುವಿನ ಲೀಲಾವತಾರಗಳ ಉಪಾಸನೆ ಯಿದೆ. ಅವನ ಐದು ಸ್ವರೂಪಗಳನ್ನು ಮಾನ್ಯ ಮಾಡಿದ್ದಾರೆ. ರಾಮಾಯಣ, ಭಾರತ, ಭಾಗವತಗಳ ಭಕ್ತರ ಚರಿತೆಯನ್ನು ಸ್ಮರಿಸಿದ್ದಾರೆ. ಹರಿಯೇ ಸರ್ವೋತ್ತಮ, ಎಲ್ಲ ಇತರ ಜೀವರೂ ಹರಿಯ ಅಧೀನರು, ಹಾಗೂ ದಾಸರು, ಮೋಕ್ಷಕ್ಕೆ ನಿರ್ಮಲ ಭಕ್ತಿಯೇ ಸಾಧನ ಎನ್ನುವ ದ್ವೈತ ಪಂಥ ಇಲ್ಲಿ ಧ್ವನಿತವಾಗಿದೆ. ಆದರೆ, ಇಲ್ಲಿನ

ಒಂದಂ ಪದ್ಯದಲ್ಲಿ ಕನಕದಾಸರು "ಕುಸುಮ ಷಟ್ಪದಿಯಲ್ಲಿ" ಈ ಪದ್ಯಗಳನ್ನು ಬರೆದೆ ನೆಂದಂ ಹೇಳಿಕೊಂಡಿರುವುದಂ ಅಚ್ಚರಿಯ ಸಂಗತಿ. ಅಥವಾ ಇದು ಪ್ರಕ್ಷಿಪ್ತವೊ? ಎಂಬ ಅನುಮಾನ ಬರುತ್ತದೆ.

## ರಾಮಧಾನ್ಯ ಚರಿತ್ರೆ

ಮೇಲ್ನೋಟಕ್ಕೆ ತಮಾಷೆಯ ಕತೆಯಂತೆ ಕಂಡು ಬರುವ ಸರಳ ವಸ್ತುವಿನ ಹಿಂದೆ, ಆಧುನಿಕ ಕಾಲದವರೂ ಆಶ್ಚರ್ಯಪಡುವ ಮತ್ತು ಮೆಚ್ಚುವ ಗಂಭೀರ ಅರ್ಥವನ್ನು ಕನಕ ದಾಸರು ತಮ್ಮ ರಾಮಧಾನ್ಯ ಚರಿತೆಯಲ್ಲಿ ಅಡಕ ಮಾಡಿದ್ದಾರೆ.

ಅರಣ್ಯವಾಸದಲ್ಲಿದ್ದ ಧರ್ಮರಾಜನಿಗೆ ಶಾಂಡಿಲ್ಯ ಋಷಿಗಳು ಹೇಳಿದ ಕಥೆ, ಈ ಕಾವ್ಯದ ವಸ್ತು. ಈ ಕಥೆಯ ಪ್ರಕಾರ ರಾಗಿಗೆ ಮೊದಲು "ನರೆದಲೆಗ" ಎಂದು ಹೆಸರಿದ್ದು, ಭತ್ತಕ್ಕೆ "ವ್ರೀಹಿ" ಎಂಬ ಹೆಸರಿತ್ತು. ಋಷಿಗಳಾಶ್ರಮಕ್ಕೆ ಬಂದ ಶ್ರೀರಾಮನ ಸನ್ನಿಧಿಯಲ್ಲಿ ಇವೆರಡರ ನಡುವೆ "ನಾನು ಹೆಚ್ಚು" ಎಂಬ ಜಗಳ ಬರುತ್ತದೆ. ಆಗ ಶ್ರೀರಾಮನು ಇವುಗಳ ಸತ್ವಪರೀಕ್ಷೆಗೆಂದು ಎರಡು ಧಾನ್ಯಗಳನ್ನೂ ಆರು ತಿಂಗಳ ಕಾಲ ಸೆರೆಯಲ್ಲಿರಿಸಿ, ಅಯೋಧ್ಯೆಗೆ ನಡೆದ. ಅಲ್ಲಿ ಪಟ್ಟಾಭಿಷೇಕವಾಯಿತು. ಮುಂದೆ ಆರು ತಿಂಗಳ ನಂತರ, ಎಲ್ಲ ರಾಜರೂ, ಋಷಿಗಳೂ ನೆರೆದರು. ಋಷ್ಯಾಶ್ರಮದಲ್ಲಿ ಸೆರೆಯಾಗಿದ್ದ ಆ ಧಾನ್ಯಗಳನ್ನು (ಸೆರೆಮನೆಯ ಪ್ರತಿವಾದಿಗಳು) ಹನುಮಂತನೇ ಕರೆ ತಂದ. ಈಶ್ವರ, ಇಂದ್ರ ಎಲ್ಲ ದೇವತೆಗಳೂ ಸೇರಿದ್ದರು. ಚತುರ್ವರ್ಣದವರೂ ಸೇರಿದರು. ಆರು ತಿಂಗಳ ಜೈಲು ವಾಸದಲ್ಲಿ ಭತ್ತ ಕಂಗೆಟ್ಟು ಬಾಡಿ ಹೋಗಿದ್ದರೆ ರಾಗಿ ಮಾತ್ರ ಸ್ವಲ್ಪವೂ ತನ್ನ ಕಾಂತಿಯನ್ನು ಕಳೆದುಕೊಳ್ಳದೆ ದೃಢವಾಗಿತ್ತು. ಕಪಿಲಮುನಿ ಹೊಗಳಿದ "ಎಲ್ಲ ನವಧಾನ್ಯದಲಿ ಈತನೆ ಬಲ್ಲಿದ, ಬಡವರ ಬಲ್ಲಿದ" ಎಂದು: ಶ್ರೀರಾಮ ಎಲ್ಲರ ಮುಂದೆ, ರಾಗಿಗೆ ತನ್ನ ಹೆಸರಾದ "ರಾಘವ" ಎಂದಿರಿಸಿದ. "ರಾಘ"ವ ಅಪಭ್ರಂಶವೇ ರಾಗಿ ಇಲ್ಲಿ ಬರುವ ಜಗಳ ಪ್ರಸಂಗ, ನರೆದಲೆಗೆ-ವ್ರೀಹಿಯರ ಸಂವಾದ ಸ್ವಾರಸ್ಯವಾಗಿವೆ.[176]

ರಾಮಧಾನ್ಯ ಚರಿತೆಯಲ್ಲಿ ಕನಕದಾಸರಿಗೆ ತಾವು ಕೆಳವರ್ಗದಲ್ಲಿ ಜನಿಸಿದ ನೋವು-ತುಮುಲ ತೋರುವ ಉದ್ದೇಶವಿದೆ. ಅದು ಸಾಧಿತ ಆಗಿದ್ದರೂ ಇಲ್ಲಿ ಪೌರಾಣಿಕ ಪ್ರಸಂಗ ತಂದದ್ದು ಕವಿಯ ಸಾಹಿತ್ಯಿಕ ಪ್ರಜ್ಞೆ ಹಾಗೂ ಆಗ್ಗೆ ಕಾವ್ಯ ಬರೆದ ಪದ್ಧತಿಯ ಅನುಕರಣೆಯೇ ಕಾರಣವೆಂದೆನ್ನಿಸುತ್ತದೆ. ಮುಂದೆ, ಕನಕನಿಗೆ ಉಡುಪಿಯ ಶ್ರೀಕೃಷ್ಣ ದರುಶನಕ್ಕೆ, ದೇವಾಲಯ ಪ್ರವೇಶಕ್ಕೂ ಅವಕಾಶವೀಯದ ಕತೆ ಸುವಿದಿತ ಆದದ್ದೆ. ಇದರ ಸತ್ಯಾಂಶವೇನೆ ಇರಲಿ, ಮೇಲುವರ್ಗದ ಜನ ಕನಕನನ್ನು ಅವಹೇಳನ ತಿರಸ್ಕಾರ ಮಾಡಿದ್ದುದರಲ್ಲಿ ಸಂದೇಹವೆ ಇಲ್ಲ. ಅವನ ಜಾತಿಯೆ ಅವನಿಗೆ ಭೂತವಾಗಿ ಕಾಡಿದ್ದರೆ ಅಚ್ಚರಿಯೇನಿಲ್ಲ.

ಬಲ್ಲವರು ಬರೆ ಬಡವರಲಿ ನಿ
ಸ್ಸಲ್ಲಿ ಯೋಟು ಪ್ರಪೇಕ್ಷೆ ನಮ್ಮಲಿ
ಸಲ್ಲದೀ ಪರಿ ಪಕ್ಷಪಾದವನಿಲ್ಲ ಭಾವಿಸಲು ॥

ಒಟ್ಟಾರೆ ರಾಮಧಾನ್ಯ ಚರಿತೆ, ಒಂದು ವರ್ಗ ಸಂಘರ್ಷ ಚಿತ್ರಣ. ಬ್ರಾಹ್ಮಣ-ಬ್ರಾಹ್ಮಣೇತರರ ತಿಕ್ಕಾಟವೆಂಬುದು ಒರಟು ತೀರ್ಮಾನ. ಆದರೂ ಇಲ್ಲಿ ವರ್ಣಭೇದ, ಮೇಲುವರ್ಗದ ಜಾತಿ-ನಿಮ್ನವರ್ಗದ ಜಾತಿಯವರ ನಡುವೆ ನಡೆದ ಜಗಳ,-ಶ್ರೀಮಂತ-ಬಡವರ ನಡುವಣ ಸಂಘರ್ಷ, ಕೆಳವರ್ಗದವರ ಜಾಗೃತಿ, ಪ್ರತಿಭಟನೆ ಎಲ್ಲ ತನ್ನದೆ ವಿಶಿಷ್ಟ ರೀತಿಯಲ್ಲಿ ವಿಶ್ಲೇಷಿಸುತ್ತಾನೆ ಕನಕ ಕವಿ.

'ಮೋಹನ ತರಂಗಿಣಿ' ಕನಕದಾಸರ ಸಾಂಗತ್ಯ ಕಾವ್ಯ ; ಇದೊಂದು ವರ್ಣಕ ಕಾವ್ಯ. ಸುಮಾರು ೨೮೦೦ ಸಾಂಗತ್ಯ ಪದ್ಯ, ಮೃದು ಪದಗತಿಯಲ್ಲಿ ಲಲಿತವಾಗಿ ಸಾಗುವ ಈ ಕೃತಿಗೆ ಹೆಸರೂ ಒಪ್ಪುವಂಥದೆ. ಇದರಲ್ಲಿ ಕನಕದಾಸರೆ ಕೃತಿಕಾರರೆಂಬುದನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. ಭಾರತ-ಭಾಗವತಗಳಲ್ಲಿ ಬಂದಿರುವ ಮನ್ಮಥಸಂಹಾರ, ಉಷಾ-ಅನಿರುದ್ಧರ ಪ್ರಣಯ, ಕೃಷ್ಣಬಾಣಾಸುರರ ಕದನ, ಇದೇ ಈ ಕಾವ್ಯದ ವಸ್ತು. ಪೌರಾಣಿಕ ಕಥಾವಸ್ತು. ಸಂಗತ್ಯ ಹಾಡಂಗಬ್ಬವಾದದ್ದರಿಂದ, ಜನಪದಕ್ಕೆ ಸಮೀಪ ಛಂದೋಬಂಧ ಆಗಿರುವ ಪ್ರಯುಕ್ತ, ಮೋಹನತರಂಗಿಣಿಯನ್ನು ಚೆನ್ನಾಗಿ ಹಾಡಲ ವಕಾಶವಿದೆ. ವರ್ಣನೆಯು ಈ ಕಾವ್ಯದ ತಿರುಳು, ಜೀವಾಳ. ಇಲ್ಲಿರುವುದು ವಿಜಯ ನಗರದ "ಕೃಷ್ಣದೇವರಾಯನ ಚರಿತೆ"ಯೆ ವಿನಾ "ಕೃಷ್ಣ ಚರಿತೆ"ಯೆನ್ನಿಸದು. ಕವಿ ತಾನು ಕಂಡ ವಿಜಯನಗರದ ಕಾಲದ ಸಾಮಾಜಿಕ ಪರಿಸರ, ಜನಜೀವನ, ಸಂಸ್ಕೃತಿ ಮೌಲ್ಯಗಳೆಲ್ಲವನ್ನೂ ತಂದಿದ್ದಾನೆ. ಇಲ್ಲಿ ವಸಂತೋತ್ಸವ ವರ್ಣನೆ, ದೇಶಘರ ವರ್ಣನೆ, ಸೂಳೆಗೇರಿಯ ವರ್ಣನೆಯೂ ಇದೆ

"ನಾಡೊಳಗಳ್ಳು ಜಾಣರು ಜಾಣೆಯರೊಡ
ನಾಡುವ ಸವಿವಾತುಗಳ ।
ಪಾಡುಗಬ್ಬವ ಪರುಠವಿಸಿದ ಬಗೆಯ ನೀ
ನೋಡು ಮಾನಿನಿ ಮುಂದೆ ಮುಂದೆ" ॥

ಎಂಬುದಾಗಿ ಪೀಠಿಕೆಯಲ್ಲಿ ಕವಿ ನುಡಿಯುತ್ತಾನೆ. ಮೋಹನತರಂಗಿಣಿಯ ಸಂಭಾಷಣಾ ರೀತಿ, ನಲ್ಲೆಯ ವಿವಿಧ ಸಂಬೋಧನೆ, ಇವೆಲ್ಲ ಕನಕದಾಸರ ತಾಳ, ತಂಬೂರಿ, ತಿರು ನಾಮದ ಬದಲು ರಸಿಕ ಕವಿಯ ದರ್ಶನ ಮಾಡಿಸುತ್ತದೆ. "ಎಲೆ ಎನ್ನ ಕಣ್ಗೆ ಮಂಗಳವಪ್ಪ ಬಿಟ್ಟ ಒಮ್ಮೊಲ್ಲೆಯ ಮಂಗಳರಕ್ಷೆ", "ಕಣ್ಣು ಮನವನಿರ್ಕುಳಿಗೊಳ್ಳ ಕಡು ಚಾಣವೆಣ್ಣುಗಳ ಅಧಿದೇವಿ" "ತೆಂಗಿನಕಾಯಿ ತೋರದ ಮೊಲೆವೆತ್ತ ಲತಾಂಗಿಯ

ಬರದಂಗಿವಾಯ ರಂಗಿಪ ಚೆಂದುಟಿಯಳೆ" ಎಂಬ ತೆರನಾದ ಅನೇಕ ಸಂಬೋಧನೆಗಳಿವೆ. ಸಾಂಸ್ಕೃತಿಕ ಅಧ್ಯಯನಕ್ಕೆ ಈ ಕೃತಿ ತುಂಬ ಸಹಾಯಕವಾಗುತ್ತದೆ.

**ಮಹೀಪತಿದಾಸರು**

ಮಹೀಪತಿದಾಸರು ಇದ್ದುದು ಸುಮಾರು ಕ್ರಿ. ಶ. ೧೬೧೧-೧೬೮೧ರ ಅವಧಿ ಯಲ್ಲಿ ಎಂದು ನಿರ್ಧರಿಸಲಾಗಿದೆ. ಮೂಲತಃ ದಾಸರ ಪೂರ್ವಜರು ಬಿಜಾಪುರ ಜಿಲ್ಲೆಗೆ ಸೇರಿದ ಬಾಗಲಕೋಟೆಯವರಾಗಿದ್ದು, ಅನಂತರ ಬಿಜಾಪುರದಲ್ಲಿ ನೆಲಸಿದರು. ಮಹೀಪತಿರಾಯರ ತಂದೆ ಕೋನೇರಿರಾಯರದು, ವೈದಿಕವೃತ್ತಿಯಿಂದ ಜೀವನ, ಬಾಲ್ಯ ದಿಂದಲೂ ಮಹೀಪತಿರಾಯರಿಗೆ ರಾಮಾಯಣ, ಭಾರತಾದಿ ಕಾವ್ಯ-ಇತಿಹಾಸಗಳಲ್ಲಿ ಆಸಕ್ತಿ. ಸಂಸ್ಕೃತ, ಕನ್ನಡ, ಮರಾಠಿ, ಹಿಂದಿ, ಉರ್ದು ಭಾಷೆಗಳನ್ನು ಕಲಿತು, ಉಪಸ್ಯಾಸ ಮಾಡುವ ಭಾಷಾಪ್ರಭುತ್ವ ಅವರದಾಗಿತ್ತು. ಅನಂತರ ಮಹೀಪತಿರಾಯರು ತಮ್ಮ ಆದಿಲ್‌ಷಹನ ಆಪ್ತ ಸಚಿವರಾದದ್ದು ಅವರ ನಡೆ ನುಡಿ-ಹಾಗೂ ಬುದ್ಧಿತೀಕ್ಷ್ಣತೆ ಗಳಿಂದಲೆ ಮಹೀಪತಿರಾಯರಿಗೆ ದಾಸದೀಕ್ಷೆ ಸ್ವೀಕಾರ ಮಾಡುವ ಮೊದಲು, ಆದಿಲ್‌ಷಹನ ಆಪ್ತಸಚಿವರಾಗಿದ್ದಾಗ ನಡೆದ ಒಂದೆರಡು ಘಟನೆ, ಅವರ ಮನಸ್ಸಿನ ಪರಿ ವರ್ತನೆಗೆ ಕಾರಣವಾಯಿತು. ಮೊದಲಿನದು, ವಿಜಾಪುರದಲ್ಲಿದ್ದ ಷಹನಂಗನ ಭೇಟಿ. ಈತ ಸೂಫಿಪಂಥದ ವಿರಕ್ತ. ಪೊರಗಣ ಜಗತ್ತಿಗೆ ಈತ ಹುಚ್ಚ. ಆದರೆ ಅಂತರ್ಯದಲ್ಲಿ ಈತ ಯೋಗಿ. ಇವನು ರಾಯರು ಲೌಕಿಕತೆಯನ್ನು ಬಿಟ್ಟು ಆಧ್ಯಾತ್ಮಿಕತೆಡೆಗೆ ಹೊರಳಲು ಕಾರಣನಾದದ್ದು ಒಂದು ಪ್ರಸಂಗದ ಮೂಲಕ (ಪುರಂದರದಾಸರಲ್ಲಿದ್ದಂತೆ). ಎರಡನೆಯ ದೆಂದರೆ, ಮಹೀಪತಿರಾಯರಿಗೆ ಸಾರವಾಡದ ಭಾಸ್ಕರಸ್ವಾಮಿಗಳ ಭೇಟಿ, ಅನುಗ್ರಹ ವಾದದ್ದು. ಭಾಸ್ಕರಸ್ವಾಮಿಗಳ ಹಾರೈಕೆಯಿಂದ ಮಹೀಪತಿರಾಯರಿಗೆ ಮಂತ್ರಾದರೂ ಗಂಡಂಗಳ ಯೌಗಿಕಸಿದ್ಧಿ, ನಿರ್ಲಿಪ್ತತೆಗೆ ಮನಸೋತ ಅವರು, ತಮ್ಮ ಎಲ್ಲ ಅಧಿಕಾರಕ್ಕೂ ತಿಲಾಂಜಲಿಯಿತ್ತರು. ಆದಿಲ್‌ಷಹನಿಗೆ ಸುದ್ದಿ ತಿಳಿದು ಆತನಿಗೆ ರಾಯರ ಮೇಲಿದ್ದ ಪ್ರೀತ್ಯಾಭಿಮಾನ ಇನ್ನೂ ಹೆಚ್ಚಿತು. ಇಲ್ಲಿಗೆ ಮಹೀಪತಿರಾಯರ ಲೌಕಿಕ ಘಟ್ಟ ಮುಗಿಯಿತು.

ಭಾಸ್ಕರಸ್ವಾಮಿಗಳಲ್ಲಿ ಮಹೀಪತಿರಾಯರು ಸತತ ಯೋಗಾಭ್ಯಾಸ ಮಾಡಿದರು. ರಾಯರು ಹರಿದಾಸ ದೀಕ್ಷೆ ಯಾವಾಗ ಸ್ವೀಕರಿಸಿದರೊ, ಯಾರು ಅಂಕಿತವಿತ್ತರೊ ತಿಳಿಯದು. ಗುರುಗಳನ್ನು ಕುರಿತು, ಗುರುಅರಿವ ಮಾರ್ಗ ಕುರಿತು, ಗುರುಮಹಾತ್ಮೆ, ಜ್ಞಾನ, ಕುರಿತು ಅನೇಕ ಕೀರ್ತನೆಗಳನ್ನು ಬರೆದಿದ್ದಾರೆ. 'ಮಹಿಪತಿ, ತರಳಮಹೀಪತಿ, ಗುರುಮಹಿಪತಿ' ಎಂದೆಲ್ಲ ಅಂಕಿತ ಬಳಸುವ ಇವರು ಆಗ ಇದ್ದ ಸತ್ಯಬೋಧತೀರ್ಥರನ್ನು (ಉತ್ತರಾದಿಮಠ) ಸ್ತುತಿಸಿರುವುದು, ಮಧ್ವಾಚಾರ್ಯರ ಶಿಷ್ಯ ಪರಂಪರೆ ಸ್ತುತಿಸಿರು ವುದು, ಮಧ್ವಾಚಾರ್ಯರ ದ್ವೈತ ಸಿದ್ಧಾಂತದ ಪ್ರಭಾವ ಆಗಿರುವುದು ಬರುತ್ತದೆ. ಇದರೊಂದಿಗೆ ದಾಸರ ಹರಿಭಕ್ತಿ, ಗುರುಭಕ್ತಿ, ಪ್ರಶಂಸನೀಯ. ಅವರ ಕೀರ್ತನೆಗಳಲ್ಲಿ

ಹರಿಸರ್ವೋತ್ತಮತ್ವ ಭಕ್ತಿ-ನೀತಿ, ಗುರುಭಕ್ತಿ, ಶ್ರೀಕೃಷ್ಣ, ವಿಷ್ಣು-ಲಕ್ಷ್ಮಿಯರ ಸ್ತುತಿ, ಮಧ್ವಾಚಾರ್ಯರ ಅನತಾರತ್ರಯ ಸ್ತುತಿ (ಹನುಮ-ಭೀಮ-ಮಧ್ವ) ಯೌಗಿಕ ಸಿದ್ಧಿಗಳ ಬಗ್ಗೆ ಅನೇಕ ಪರಿಭಾಷೆಯುಳ್ಳಿರುವ ಕೀರ್ತನೆ, ಇವೆಲ್ಲ ಅನೇಕ ಕೃತಿಗಳ ರೂಪದಲ್ಲಿ ಬಂದಿವೆ. ಅವರ ಹೃದಯ ವೈಶಾಲ್ಯಕ್ಕೆ ಗುರುತೆಂಬಂತೆ, "ದ್ವೈತ ಅದ್ವೈತೆಂದು ಹೊಡೆದಾಡದಿರೊ ಪ್ರಾಣಿ ಚಿಂತಿಸಿ ಬ್ಯಾರಿಹ ವಸ್ತುಗಾಣೆ" "ದ್ವೈತ ಎಂದವನೆ ತಾಂ ಪರಮ ವೈಷ್ಣವನಲ್ಲ ಅದ್ವೈತವೆಂದವನೆ ಸ್ಮಾರ್ತನಲ್ಲ," ಎಂಬ ಮಾತುಗಳು ಬರುತ್ತವೆ. ಮಹೀಪತಿರಾಯರಿಗೆ ಭಾಸ್ಕರಸ್ವಾಮಿಗಳ ಪ್ರಭಾವವಿದ್ದುದರಿಂದ ಪ್ರಾಸಂಗಿಕವಾಗಿ "ದತ್ತ" ಭಕ್ತಿ (ದತ್ತಾತ್ರೇಯ) ನವವಿಧ ಭಕ್ತಿ, ಭಕ್ತಿಯಿಂದ ಮನಬಿಚ್ಚಿ ಹಾಡುವಿಕೆ ಪ್ರಕಟವಾಗುತ್ತದೆ. ಎಲ್ಲ ಪರಮಾತ್ಮನ ವಿವಿಧ ರೂಪುಗಳೆಂದು ಅವರಿಗೆ ವಿಶ್ವಾಸ. 'ಅವರೊಬ್ಬ ಶ್ರೇಷ್ಠ ಆಧ್ಯಾತ್ಮಿಕ ಕವಿಗಳು' ಎಂದಿದ್ದಾರೆ ಡಾ॥ ಆರ್. ಡಿ. ರಾನಡೆಯವರು (He is one of the greatest spiritual poets.........) ಅವರೊಬ್ಬ ಯೋಗಿಗಳು, ಸ್ವಾನಂದವನ್ನೂ ಕಂಡುಕೊಂಡ ಅನುಭಾವಿಗಳು. ಉತ್ತರ ಕರ್ನಾಟಕದ ನಡು ಗನ್ನಡ ಭಾಷೆ ಎಲ್ಲ ಕೀರ್ತನೆಗಳಲ್ಲಿ ಹಾಸುಹೊಕ್ಕಾಗಿದೆ. ಅವರಿಗಾದ ಆಧ್ಯಾತ್ಮಿಕ ಅನುಭವಗಳನ್ನು ಬಗೆ ಬಗೆಯಾಗಿ ಬಣ್ಣಿಸಿದ್ದಾರೆ. ಸಾಧನೆ, ಸಾಧಕ ಪರಿಚಯ ಆಗುತ್ತದೆ. ಜಾನಪದ ಧಾಟಿಗಳ ರಚನೆಗಳೂ ಇವೆ. "ಬಡವರ ಮಕ್ಕಳ ಪಂಡಿವಿನಿಂಖಳು ಧುಮಂಕಿಸಿ ಕಡಿಯಾಲಿದ್ದು ನೆಲೆ ನೋಡುವರೇನಯ್ಯ" ಎಂಬ ಸಮಾಜ ಟೀಕೆಯೂ ಒಮ್ಮೊಮ್ಮೆ ಮೊನಚಾಗಿ ಕಾಣಬರುತ್ತದೆ. ಅಧ್ಯಾತ್ಮ ಅನುಭವಗಳಂತೂ ಅವರ ಅನೇಕ ಕೀರ್ತನೆಗಳಲ್ಲಿ ವಿದಿತವಾಗುತ್ತದೆ. ಅದರ "ಒಂದೊಂದು ನಿಲುವೂ ಮನಸ್ಸನ್ನು ಒಲಿಸುತ್ತದೆ ...... ...ಇದೊಂದು ಅಪೂರ್ವವಾದ ಸಾಮರಸ್ಯ (ಸಂಪ್ರದಾಯ ನಿಷ್ಠೆ ಹಾಗೂ ಸ್ವಾನುಭವ ಸಿದ್ಧಿ) ಹಾಗೂ ಅತಿಶಯವಾದ ಪ್ರಯೋಗ".

ಮಹೀಪತಿರಾಯರು ಬಂದ ಕಾಲ, ಹರಿದಾಸ ಸಾಹಿತ್ಯದ ಮೊದಲ ಹಂತ ವಿಜಯನಗರದ ಬದುಕಿನಲ್ಲಿ ಬಾಳಿಬೆಳಗಿ, ಸಾಮ್ರಾಜ್ಯದ ಅಸ್ತಮಾನದೊಂದಿಗೆ ಸಂಘಟನೆಯೊಡೆದು ವಿಚ್ಛಿದ್ರಗೊಂಡ ಸಂಧಿಸಮಯ. ಅವರು ತಮ್ಮ ಮುಂಚಿನ ಹರಿದಾಸರನ್ನು ಸ್ಮರಿಸಿಲ್ಲವೆಂದು ಡಾ॥ ಜಿ. ವರದರಾಜರಾಯರ ಅಭಿಮತ. ಈ ಬಗ್ಗೆ ಇನ್ನೂ ಸಂಶೋಧನೆ ಆಗತಕ್ಕ.

ಒಟ್ಟಾರೆ ಮಹೀಪತಿರಾಯರ ಶೈಲಿಯ ವಿವಿಧ ವಿನ್ಯಾಸ ಅವರ ಕೃತಿಗಳಲ್ಲಿ ಮಡುಗಟ್ಟಿ, ಅವರ ಸ್ವಾನಂದಾನುಭವ ತಿಳಿಸುವ ಆಧ್ಯಾತ್ಮಿಕ ಭಾವಗೀತೆಗಳಾಗುತ್ತವೆಂದೆನ್ನಬಹುದು. ಅವರ ತತ್ವಜ್ಞಾನ, ಯೋಗಸಿದ್ಧಿ, ದತ್ತಾತ್ರೇಯ ಅವಧೂತ ಪ್ರಜ್ಞೆ, ಭಾಷೆಗಳ ಮೇಲಣ ಪ್ರಭುತ್ವ, ಅಲ್ಲಲ್ಲಿ ಬಳಸುವ ರೂಪಕಗಳು, ಸೂಕ್ತಿಗಳು ಕೆಲವೆಡೆ ತಾನಾಗಿಯೆ ಹೊರಹೊಮ್ಮಿ ಭಾವೋತ್ಕರ್ಷ, ಬೆಡಗಿನ ವಚನ ಪ್ರಾದೇಶಿಕ ಭಾಷೆ ('ಸಖಿರಿ', 'ಅಖಿರಿ', 'ಇಷ್ಕ' 'ಸೂಷ್ಕ', 'ಖರೆ ಆದ', 'ಖೂನೆ') ಆಧ್ಯಾತ್ಮಿಕ ಜಿಜ್ಞಾಸೆ, ಎಲ್ಲವೂ ಅವರ ನೂರಾರು ಕೃತಿಗಳಲ್ಲಿ ಪ್ರಕಟವಾಗಿ ಅವರನ್ನು ಹರಿದಾಸರಲ್ಲಿ

ಉನ್ನತ ದರ್ಜೆಯ ಆಧ್ಯಾತ್ಮಿಗಳಾಗಿಸಿವೆ. "ಹರಿದಾಸರ ಹಿರಿಮೆ, ಕೀರ್ತನಕಾರರ ಆತ್ಮಶೋಧನೆ, ಲೋಕನೀತಿ……. ಉಪಮಾನ. ರೂಪಕ ……" ಎಲ್ಲವೂ ವೇದ್ಯ ಆಗುತ್ತವೆ. ಹರಿದಾಸಸಾಹಿತ್ಯದ ತಟಸ್ಥ ಅವಧಿಯಲ್ಲಿ ಬಂದ ಅವುಗಳನ್ನು ಕೀರ್ತನ ಸಾಹಿತ್ಯ ಪರಂಪರೆಯ ಸಂಶೋಧನ ದೃಷ್ಟಿಯಿಂದ ಪರಿಗಣಿಸಬೇಕಾಗುತ್ತದೆ. ಒಂದೆರಡು ಉದಾಹರಣೆಗಳನ್ನು ನೀಡುವುದರ ಮೂಲಕ ಮಹೀಪತಿರಾಯರ ಸಾಧನೆಯನ್ನು ಗಮನಿಸಬಹುದು :

ನೋಡುಮನವೆ ನಿನ್ನೊಳಾಡುವ ಹಂಸದ
ಇಡಾಪಿಂಗಳ ಮಧ್ಯನಾಡಿವಿಡಿದು
ಆಧಾರವದ ಒಲಿದು ಸ್ವಾಧಿಷ್ಠಾನದವಾಟಿ
ಹಾದಿವಿಡಿದು ನೋಡು ಮಣಿಪುರ
ಒದಗಿ ಕಂಡುವ ಅನಾಹತ ಹೃದಯಸ್ಥಾನವ
ಸಾಧಿಸಿನೋಡುವುದು ವಿಶುದ್ಧವ……..
ಮೂಲಸ್ಥಾನದ ನಿಜನೆಲೆ ನಿಭವನೋಡು
ಬಾಲಕನೊಡೆಯ ಮಹಿಪತಿಸ್ವಾಮಿಯ

ಎಂಬಂತೆಯೇ ರಾಯರ ಭಾಷಾ ಪರಿಚಯದ ತುಣುಕು :

ಬಾಟಿಪಕಡೊ ಸೀದಾ। ನಘಡೇ ತೇಢೆ ಬಾಧಾ
ಇಮುವೆ ಗುರು ನಿಜಬೋಧ। ಸ್ವಸುಖ ಸಮ್ಮತಪಾದಾ ॥ಪ॥
ಬಂದಗೀಕರ್ತಾ ಕರಕೇ ರಘಾಟಾ। ತಿಳಿಯದು ನಿಜಘನದಾಟಾ ॥೧॥
……..ಮಹೀಪತಿಗಾಯಿತು ಬಲು ಆನಂದಾ ಹರಿಮಣಾ ಗೋವಿಂದ ॥೨॥

ಇದರಿಂದ ಮಹೀಪತಿದಾಸರು, ಉಳಿದ ಹರಿದಾಸರಿಗಿಂತ ಸ್ವಲ್ಪ ಭಿನ್ನವ್ಯಕ್ತಿತ್ವವುಳ್ಳವರೆಂದು ತಿಳಿಯ ಬರುತ್ತದೆ. ದಾಸರ ಹರಿಭಕ್ತಿ, ಶರಣರ ಅನುಭಾವ, ಯೋಗಿಗಳ ಅನುಭೂತಿ, ದತ್ತಾತ್ರೇಯರ ಪೂಜಿ, ಇವುಗಳನ್ನು ಮೈಗೂಡಿಸಿಕೊಂಡು ತಮ್ಮ ಕೃತಿಗಳಲ್ಲಿ ಅಭಿವ್ಯಕ್ತಗೊಳಿಸಿರುವವರೆಂದರೆ ಮಹೀಪತಿದಾಸರೊಬ್ಬರೆ. ಸಮನ್ವಯ ಮನೋಧರ್ಮವೆ ಅವರ ವೈಶಿಷ್ಟ್ಯ.

## ವಿಜಯದಾಸರು (ಕ್ರಿ.ಶ. 1682–1773)

ಹರಿದಾಸಸಾಹಿತ್ಯ ಪರಂಪರೆಯಲ್ಲಿ ನಾಲ್ಕು ಪ್ರಮುಖರ ಹೆಸರು ಕೇಳಿ ಬರುವ ಶ್ಲೋಕ ಕುರಿತು ಹಿಂದೆಯೆ ಪ್ರಸ್ತಾಪಿಸಿದೆ :

ನಮಃ ಶ್ರೀಪಾದರಾಜಾಯ। ನಮಸ್ತೇ ವ್ಯಾಸಯೋಗಿನೇ।
ನಮಃ ಪುರಂದರಾರ್ಯಾಯ। ವಿಜಯಾರ್ಯಾಯ ತೇ ನಮಃ ॥

ಎಂಬ ಶ್ಲೋಕದಲ್ಲಿ ಹರಿದಾಸಸಾಹಿತ್ಯದ ಪ್ರವರ್ತಕರು (ಶ್ರೀಪಾದರಾಜರು), ಸಂಘಟಕರು (ಶ್ರೀವ್ಯಾಸರಾಯರು) ದಾಸಕೂಟದ ಮೊದಲಿಗರಾದ ಪುರಂದರರ ನಂತರ ಕೇಳಿ ಬರುವ ಹೆಸರು ವಿಜಯದಾಸರದು. ದಾಸಸಾಹಿತ್ಯ-ಹರಿದಾಸ ಆಂದೋಲನದ, ದ್ವಿತೀಯ ಹಂತದ ಸಂಘಟನೆ, ಪ್ರಮುಖ ಕೇಂದ್ರ ಬಿಂದು ಆದ ಮಂತ್ರಾಲಯದ ಶ್ರೀರಾಘವೇಂದ್ರತೀರ್ಥರ ಬೃಂದಾವನ ಸ್ಫೂರ್ತಿಯಿಂದ ಮುಂದುವರೆಯಿತು. ವಿಜಯ ನಗರದಲ್ಲಿ ಶ್ರೀವ್ಯಾಸತೀರ್ಥರು ತತ್ತ್ವವಾದ ಮತ್ತು ಹರಿಭಕ್ತಿಯ ಕೇಂದ್ರವನ್ನು ಸ್ಥಾಪಿಸಿ ದಂತೆ ಶ್ರೀರಾಯರು ಮಂತ್ರಾಲಯದಲ್ಲಿ ಅದನ್ನು ಬೆಳಸಿದರು ; ಇವರ ಪ್ರಭಾವ ದಿಂದಾಗಿ, ಮಂತ್ರಾಲಯದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅನೇಕ ಹರಿದಾಸಸಂತರು ಅವತರಿಸಿಬಂದರೆನ್ನಬೇಕು.

ದಾಸಸಾಹಿತ್ಯದ ದ್ವಿತೀಯ ಘಟ್ಟದ ಪ್ರಮುಖರು ಶ್ರೀವಿಜಯದಾಸರು. ಅನಂತರ ಈ ಮೊದಲೆ ಹೇಳಿದಂತೆ, ಅವರ ಶಿಷ್ಯ ಪ್ರಶಿಷ್ಯರಾದ ಗೋಪಾಲದಾಸರು, ಜಗನ್ನಾಥದಾಸರು, ಪ್ರಾಣೇಶವಿಠಲರು, ಮೋಹನವಿಠಲದಾಸರು, ಹೀಗೆ ಅನೇಕ ಹರಿದಾಸರು ತಮ್ಮ ತಮ್ಮ ವಿಶಿಷ್ಟ ಕೊಡುಗೆಗಳಿಂದ ದಾಸಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಹರಿದಾಸ ಆಂದೋಲನ ಭರದಿಂದ ಮುಂದುವರಿಯಿತು. ವಿಜಯದಾಸರು ಹೆಚ್ಚಿನ ಸಂಖ್ಯೆಯಲ್ಲಿ ಸುಳಾದಿಗಳನ್ನು ರಚಿಸಿರುವುದರಿಂದ ಅವರನ್ನು "ಸುಳಾದಿಗಳ ದಾಸ"ರೆಂದೆ ಕರೆವ ವಾಡಿಕೆ. ವಿಜಯದಾಸರು ಹರಿದಾಸದೀಕ್ಷೆ ವಹಿಸಿದ ದಲ್ಲದೆ ತಮ್ಮ ಪ್ರಭಾವದಿಂದ ಅನೇಕರಿಗೆ ಹರಿದಾಸದೀಕ್ಷೆಯಿತ್ತು, ಪುರಂದರದಾಸರ ತರುವಾಯ ತಟಸ್ಥ ಆದಂತಿದ್ದ ದಾಸಕೂಟ, ಹರಿದಾಸ ಪರಂಪರೆ ಮುಂದುವರೆಯಲು ಸ್ಫೂರ್ತಿಚೇತನರಾದರು.

ವಿಜಯದಾಸರಿಗೆ ಸ್ಫೂರ್ತಿ ಚೇತನರು ಮಂತ್ರಾಲಯದ ಶ್ರೀರಾಘವೇಂದ್ರರು. ಶ್ರೀರಾಘವೇಂದ್ರರು... ವ್ಯಕ್ತವರಲ್ಲಿ ತತ್ತ್ವನಿರ್ಣಯವೂ ಉಪಾಸನಾಭಾಗವೂ ಖಿಲ ಆಗುತ್ತ ಬಂದುದನ್ನು ಗಮನಿಸಿ, ಅನೇಕ ಅನ್ಯಮತೀಯ ವಿದ್ವಾಂಸರ ಪ್ರಭಾವಕ್ಕೆ ಬೆರಗಾಗಿ ತತ್ತ್ವವಾದದಲ್ಲಿ ಸಂಶಯಹೊಂದಿದ ಜಿಜ್ಞಾಸುಗಳಿಗೆ ಉಪಕಾರವಾಗುವಂತೆ ಆಗಂತುಕ ಪೂರ್ವಪಕ್ಷಗಳನ್ನು ನಿವಾರಿಸಿ, ಶ್ರೀಮಧ್ವಾಚಾರ್ಯರ ಗ್ರಂಥಗಳಿಗೂ, ಉಪನಿಷತ್ತು, ಶ್ರೀವೇದವ್ಯಾಸರ ಬ್ರಹ್ಮಸೂತ್ರ ಗೀತಾದಿ ಗ್ರಂಥಗಳಿಗೂ ಸಂಲಭವಾದ ಅರ್ಥ, ಗಂಭೀರವಾದ ಟೀಕೆ ಟಿಪ್ಪಣಿ ನಿವೃತ್ತಿಗಳನ್ನೂ ಖಂಡಾರ್ಥಗಳನ್ನು ಸಂಸ್ಕೃತದಲ್ಲಿ ರಚಿಸಿದರು. ವ್ಯಾಸಕೂಟವೂ ಇದರಿಂದ ಕಳೆಕೊಂಡಿತು ಎಂಬ ಮಾತು "ಒಪ್ಪುವಂಥ ದಾದರೂ ಇದರ ಜತೆ ರಾಘವೇಂದ್ರರ ಬೃಂದಾವನ ಸ್ಫೂರ್ತಿ ದಾಸಕೂಟ ಸಂಘಟಿಸಿದ ಅಂಶವನ್ನು ಗಣನೆಗೆ ತೆಗೆದುಕೊಂಡಾಗ ಮಾತ್ರ ಪೂರ್ಣ ಆಗುತ್ತದೆ. ೧೫ನೆ ಶ.ದಿಂದ ಬಂದ ಶ್ರೀಪಾದರಾಜಾದಿ ಪರಂಪರೆಯಲ್ಲಿ ಬಂದ ವ್ಯಾಸರಾಯರು ದಾಸಸಾಹಿತ್ಯಕ್ಕೆ ಪ್ರತ್ಯಕ್ಷ ಪ್ರೇರಕ ಶಕ್ತಿ. ಅವರ ಇನ್ನೊಂದು ಅವತಾರ ಸ್ವರೂಪರೇ ಶ್ರೀರಾಘವೇಂದ್ರ ತೀರ್ಥರು. ಮುಂದೆ ಆಗಿ ಹೋದ ಹರಿದಾಸರಿಗೆಲ್ಲ ಮಂತ್ರಾಲಯ ಒಂದು ಪ್ರಮುಖ

ಕೇಂದ್ರ ಬಿಂದು, ಕ್ಷೇತ್ರವಾಯಿತು. ಇದಕ್ಕೆ ಶ್ರೀರಾಘವೇಂದ್ರರ ಕುರಿತ ಹರಿದಾಸರ ನೂರಾರು ಕೃತಿಗಳೇ ನಿದರ್ಶನ.

ವಿಜಯದಾಸರ ಬದುಕಿನ ಕೆಲವು ವಿವರಗಳನ್ನು ಅವರ ಸೋದರರಾದ ಹರಿದಾಸ ದೀಕ್ಷೆ ಸ್ವೀಕರಿಸಿದ್ದ ಆನಂದದಾಸರು (ಹಯವದನವಿಠಲ) ಹಾಡಿರುವ ಕೀರ್ತನೆಯನ್ನನುಸರಿಸಿಕೊಡಬಹುದು : ರಾಯಚೂರು ಜಿಲ್ಲೆಯ ಮಾನವಿಗೆ ಸೇರಿದ ಚೀಕಲಪರವಿ ತುಂಗಭದ್ರಾ ತೀರದಲ್ಲಿರುವ ಊರು. (ಚಿಕ್ಕಬದರಿಯೆಂದೂ ಕರೆವ ವಾಡಿಕೆ.) ಇದೇ ವಿಜಯದಾಸರ ಜನ್ಮಸ್ಥಳ. ಹುಟ್ಟಿದ್ದು ಸುಮಾರು ಕ್ರಿ. ಶ. ೧೬೮೨ರಲ್ಲಿ ಸಂಪ್ರದಾಯಸ್ಥ ಮಾಧ್ವ ಮನೆತನ. ಶ್ರೀನಿವಾಸಪ್ಪ, ಕೂಸಮ್ಮ ವಿಜಯದಾಸರ ತಂದೆತಾಯಿಂಗಳು. ವಿಜಯದಾಸರ ಮೊದಲ ಹೆಸರು ದಾಸಪ್ಪ. ಚೀಕಲಪರವಿಯನ್ನು ಅಶ್ವತ್ಥನಾರಸಿಂಹ ಕ್ಷೇತ್ರವೆಂದೂ ಕರೆಯುವುದು ಸಂಪ್ರದಾಯಸ್ಥರ ಹಾಗೂ ಸ್ಥಳೀಯರ ವಾಡಿಕೆ. (ಇದು ಶ್ರೀಪಾದರಾಜರು ಸ್ಥಾಪಿಸಿದ ಅಶ್ವತ್ಥವೆಂದು ಪ್ರಸಿದ್ಧ) ಶ್ರೀನಿವಾಸಪ್ಪ, ಕೂಸಮ್ಮನಿಗಾದ ಮಕ್ಕಳು ಮೂರು ; ಹಿರಿಯವನೆ ದಾಸಪ್ಪ.

ಮೊದಲಿಂದಲೂ ಅಂಟಿ ಬಂದ ಬಡತನ. ಜತೆಗೆ ಹಳ್ಳಿವಾಸ. ಇದರಿಂದಾಗಿ ದಾಸಪ್ಪನಿಗೆ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಅವಕಾಶವಾಗಲಿಲ್ಲವೆಂದು ತೋರುತ್ತದೆ. ಪ್ರತಿ ನಿತ್ಯವೂ ಬಡತನದ ಬವಣೆತಾಪ ಅನುಭವದ್ದೆ. ಕೆಲವಾರು ದಾಸಪ್ಪನನ್ನು "ಕೂಸೀ ಮಗದಾಸ"ನೆಂದು ಅಡಿಕೊಳ್ಳುತ್ತಿದ್ದರು. ಬಡತನ, ಕಾರ್ಪಣ್ಯಕ್ಕೆ ನೊಂದು ಬೇಸತ್ತ ದಾಸಪ್ಪ ಯಾರಿಗೂ ಹೇಳದೆ ಕೇಳದೆ ಮನೆ ಬಿಟ್ಟು ನಡೆದ. ಹೊರಟದ್ದು ದೂರದ ಕಾಶಿಗೆ ಅಲ್ಲಿ ಸಾಧು, ಸಂತರ ಸಹವಾಸ ದೊರೆಯಿತು. ಹಾಗೂ ಹೀಗೂ ಮತ್ತೆ ಮರಳಿದ. ಹಿರಿಯರೆಲ್ಲ ಸೇರಿ, ಮಗನನ್ನು ಕಂಡು ಮರುಗಿ, ಅವನಿಗೊಂದು ನೆಲೆ ದೊರಕಿದರೆ ಓಡಿ ಹೋಗುವದಿಲ್ಲೆಂದು ಮದುವೆ ಮಾಡಿದರು. ಕಾಶಿಯಾತ್ರೆಯ ಪಥಿಕನಾಗಿದ್ದ ದಾಸಪ್ಪನಿಗೆ, ಸಹಜ ವಿರಕ್ತಿ ಬಂದಿದ್ದು, ಮತ್ತೆ ಅತ್ತ ಕಡೆಗೇ ಮನಸ್ಸು ಸೆಳೆಯಿತು. ಪರಊರೇ ಪ್ರಿಯವೆನಿಸಿತು. ಮತ್ತೆ ಹೊರಟ, ದಾಸಪ್ಪನ ಬಟ್ಟೆಬರೆಯೆಲ್ಲವನ್ನು ದಾರಿಗಳ್ಳರು ಲೂಟಿಮಾಡಿ ಕದ್ದೊಯ್ದಿದ್ದರು. ನೋವು, ಅದರ ಮೇಲೆ ಬಾವು ಅನ್ನೊ ಹಾಗೆ, ಕಾಶಿ ಸೇರಿದ ನಂತರ ಅಲ್ಲಿ ಸಾಧು ಸಂತರ ಜತೆಯಲ್ಲಿದ್ದ, ಕಾಶಿಯತ್ತ ಹೊರಟಾಗ ದಾಸಪ್ಪನಿಗೆ ಹದಿನಾರು ವರ್ಷವಷ್ಟೆ. ಹರಿಕೃಪೆಯಿಂದ ಬದುಕು ನೆಮ್ಮದಿಗೊಳಿಸಿಕೊಂಬಂದೆ ದಾಸಪ್ಪನ ಗುರಿ. ಗಯೆ, ವಿಷ್ಣುಪಾದ ಎಲ್ಲ ಸೇವಿಸಿ, "ಪಿಂಡವನ್ನಿತ್ತು" ಎಂದು ಕೀರ್ತನೆಯಲ್ಲಿ ಬಂದಿರುವುದು, ಆವೇಳೆಗೆ ಆಗಲೆ ದಾಸಪ್ಪ ಪಿತೃಕಾರ್ಯ ಮಾಡುವ ಸ್ಥಿತಿ ಬಂದಿತ್ತೆಂದೆನ್ನಿಸುತ್ತದೆ. ಕಾಶಿಯಲ್ಲಿ ಗಂಗಾ ಸ್ನಾನ, ಜಪತಪ, ವಿರಾಗಿಯ ಬದುಕು ದಿನಚರಿ. ಹೀಗಿರಲು ಒಂದು ರಾತ್ರಿ ನಿದ್ರೆಯಲ್ಲಿ ಆತನಿಗೊಂದು ವ್ಯೆನವಿರೆಬ್ಬಿಸುವ ಕನಸಾಯಿತು. ಅಲ್ಲಿಂದ 'ಸುರನದಿಯ ದಾಟಿಸಿಕರೆತಂದು' ಇದ್ದ 'ವ್ಯಾಸಕಾಶಿ'ಯ ಪುರದ ದೊರೆಯಾದ "ಶಿರಿವಾಸುದೇವ (ಪರಮಾತ್ಮ) ದೇವತೆಗಳ ಸಭೆಯಲ್ಲಿ 'ಪರನಾಗಿ ಕುಳಿತಿರಲು', 'ಸುಸ್ಥಿರರಾಗಿ ಸ್ತುತಿಸೆನುತ" ಕರೆದು ಹೇಳಿ ದಾಸರನ್ನು ಆದರಿಸಿ,

ಪುರಂದರಾರ್ಯರೆ "ಹರುಷದಿಂದಲಿ ನೀನು ಹರಿಚರಿತೆ ಪೇಳೆನೆಂತ" "ವಿಜಯವಿಠಲ" ಎಂಬ ಅಂಕಿತವನ್ನು ಅನುಗ್ರಹಿಸಿದರು. ಕನಸು ತಿಳಿದಚ್ಚೆತ್ತ ದಾಸಪ್ಪನಿಗೆ ತನ್ನ ಮನದ ಅಳಲೆಲ್ಲ ಪರಿಹಾರ ಆಯಿತೆಂದೆನಿಸಿತ್ತು. ಅವನ ದಿನಚರ್ಯೆ ಬದಲಾಯಿತು. ದಾಸಪ್ಪ ವಿಜಯದಾಸರಾದರು. ಒಂದು ವಿಶಿಷ್ಟ ತೇಜದಿಂದ, ಹರಿದಾಸದೀಕ್ಷೆ ಪಡೆದ ವಿಜಯ ದಾಸರು ಆನಂತರ ಆಡಿದ್ದೆ ಹಾಡು, ಜನಮನ್ನಣೆ ಗಳಿಸಿದ ಆಧ್ಯಾತ್ಮ ಕಥನಕಾರರಾದರು ಆದೇನು ಪುಣ್ಯವೊ ಜನರು ದಾಸಪ್ಪನನ್ನು ವಿಶೇಷ ವಂದ್ಯಾದಿಯಿಂದ ಕಂಡರು.

ಇಲ್ಲಿಂದ ವಿಜಯದಾಸರು ಮರಳಿ ಬಂದದ್ದು ಊರಿಗೆ. ಹರಿದಾಸದೀಕ್ಷೆ ವಹಿಸಿದೆ ನೆಂದು ಹೆಂಡತಿ, ಸಂಸಾರವನ್ನು ತೊಂದರೆಗೀಡು ಮಾಡಬಾರದೆಂದೆನಿಸಿತು. ದಾರಿ ಯುದ್ದಕ್ಕೂ ಅಪರೋಕ್ಷಜ್ಞಾನಿಗಳೆಂಬ ಆದರ: ವಿಜಯದಾಸರು ಹೀಗೆ ಮನ್ನಣೆ ಜನಾದರಗಳಿಸಿದರು. ಅನೇಕ ಅಲೌಕಿಕ ಘಟನೆ ಅವರ ಬದುಕಿನಲ್ಲಿ ನಡೆಯಿತೆಂಬ ಐತಿಹ್ಯ ಇವೆ.

1. ಕೇಶವರಾಯನೆಂಬುವನಿಗೆ ಅವನ ಮಗನನ್ನು ಬದುಕಿಸಿದ್ದು (ಮೊದಲಿಗೆ ಅವನ ಮನೆಯಲ್ಲಿ ದೊರೆತ ಪ್ರೀತಿ, ಆತಿಥ್ಯ, ಆನಂತರ ಬಹುವರ್ಷ ಕಳೆದ ಮೇಲೆ ಈ ಘಟನೆ ನಡೆದದ್ದು).
2. 'ಕಲ್ಲೂರು ಸುಬ್ಬಣ್ಣಾಚಾರ್ಯ' ರೆಂಬುವ ವಿದ್ವಾಂಸರಿಗೆ ದಾಸರ ಬಗ್ಗೆ ಇದ್ದ ಅಲಕ್ಷ್ಯ ಅಟ್ಟಹಾಸ, ಸಂಸ್ಕೃತದ ಅಭಿಮತದಿಂದ, ಕನ್ನಡ ಪದಕುರಿತ ನಿರ್ಲಕ್ಷ್ಯ ಮದ ವನ್ನು ಅಡಗಿಸಲು "ಸಂಧಾ" ಗ್ರಂಥದ ಅನುವಾದ ಒಬ್ಬ ಅಡಿಗೆಯ ಪರಿಚಾರಕ ನನ್ನು ಹರಸಿ ಅವನ ಮೂಲಕ ಮಾಡಿಸಿ, ಹರಿದಾಸರನ್ನು ನಿಂದಿಸಬಾರದೆಂದು ಬುದ್ಧಿ ಹೇಳಿದ್ದು.
3. ಮೋಹನದಾಸರು ಹಾಗೂ ಅವರ ತಾಯಿಯನ್ನು ಅನುಗ್ರಹಿಸಿ, 'ಮೋಹನ ವಿಠಲ' ನೆಂಬ ಅಂಕಿತ ನೀಡಿದ್ದು, ಮೋಹನದಾಸರು ವಿಜಯದಾಸರ ಬಳಿಯೇ ಇದ್ದರು. ಅವರ ವಂಶಜರು ಈಗಲೂ ಚಿಪ್ಪಗಿರಿಯಲ್ಲಿ ಇದ್ದಾರೆ.
4. ಆದವಾನಿಯ ದಿವಾನರ ಮಗನಿಗೆ "ಪಂಗನಾಮದ ತಿಮ್ಮಣ್ಣ" ನೆಂದು ಕರೆದು, ಅವನಿಗುಂಟಾದ ದೈವಭಕ್ತಿ, ವೈರಾಗ್ಯಗಳಿಗೆ ಮೆಚ್ಚಿ, 'ವೇಣುಗೋಪಾಲವಿಠಲ' ನೆಂದು ಅಂಕಿತವಿತ್ತು ದಾಸದೀಕ್ಷೆಯಿತ್ತುದು, ಹರಿದಾಸ ಆಂದೋಲನವನ್ನು ಬೆಳೆಸಿದುದು–

ಹೀಗೆ ಅನೇಕ ಕಾರ್ಯಗಳನ್ನು ವಿಜಯದಾಸರೆಸಗಿರುವುದಕ್ಕೆ ಅದರ ಸಮಕಾಲೀನ ರಾಗಿದ್ದ ತಮ್ಮಂದಿರ ಆದ ಆನಂದದಾಸರು (ಹಯವದನವಿಠಲ), ಮೋಹನದಾಸರು, ತಿಮ್ಮಣ್ಣದಾಸರು, ಮಂಚಾಲದಪ್ಪರು ಮಾಡಿರುವ ಕೃತಿಗಳೇ ಆಧಾರ. ಅದಲ್ಲದೆ, ವಿಜಯದಾಸರು ಮಾಡಿದ ಇನ್ನೊಂದು ಮಹತ್ತರ ಕಾರ್ಯ, ತಮ್ಮ ಶಿಷ್ಯರಾದ ಗೋಪಾಲದಾಸರ್ಯರ ಮೂಲಕ, ಪಂಡಿತ ಶ್ರೀನಿವಾಸಾಚಾರ್ಯರಿಗಿದ್ದ ಹರಿದಾಸರ ಮೇಲಣ ಅನಾದರವನ್ನು ಹೋಗಲಾಡಿಸಿ, "ಜಗನ್ನಾಥದಾಸ" ರೆಂದು ಹರಿದಾಸದೀಕ್ಷೆ ಪಡವಂತೆ

ಮಾಡಿದ್ದು. ಜಗನ್ನಾಥದಾಸರಿಗೆ ಒದಗಿದ ಅಪಮೃತ್ಯುವನ್ನು ಪರಿಹರಿಸಿ, ಗೋಪಾಲದಾಸರ ಆಯುಷ್ಯದಲ್ಲಿ ನಲವತ್ತು ವರ್ಷದ ಆಯುಸ್ಸನ್ನು ದಾನ ಮಾಡಿಸಿ, ಆಶೀರ್ವದಿಸಿದ್ದು. ಇದಕ್ಕೆಲ್ಲ ಪ್ರತ್ಯಕ್ಷ ಪ್ರಮಾಣ-ಗೋಪಾಲದಾಸರ್ಮೃಗಳ ಕೃತಿಗಳು. ಪರಂಪರಾನುಗತವಾಗಿ ಹರಿದಾಸರು ಈ ಬಗ್ಗೆ ಹಾಡಿದರೆ ಜಗನ್ನಾಥದಾಸರೂ ತಮ್ಮ ಕೃತಿಗಳಲ್ಲಿ ವಿಜಯದಾಸರ ಪ್ರೀತಿ, ವಾತ್ಸಲ್ಯ, ಗೋಪಾಲದಾಸರ ಭಕುತಿ ಮಹಿಮೆ, ತಮ್ಮನ್ನು ಸಾಕಿಸಲಹಿದ ಅಭಿಮಾನ ವಾತ್ಸಲ್ಯಗಳನ್ನು ನೆನೆದು ಕೊಂಡಾಡಿದ ಕೃತಿಗಳಿವೆ. ಜಗನ್ನಾಥದಾಸರು ಮುಂದೆ ಮಧ್ವಶಾಸ್ತ್ರ, ಹರಿಸರ್ವೋತ್ತಮತ್ವ ಸಮರ್ಥ ರೀತಿಯಲಿ ಪ್ರತಿಪಾದಿಸುವ "ಹರಿಕಥಾಮೃತಸಾರ" ಗ್ರಂಥ ರಚಿಸಿದ್ದು ಇತಿಹಾಸದ ಮಾತೆ ಆಗಿದೆ.

ವಿಜಯದಾಸರು ಮಂತ್ರಾಲಯದ ಶ್ರೀರಾಘವೇಂದ್ರರನ್ನು ನುತಿಸಿ ಅನೇಕ ಕಾರ್ಯ ನಿರ್ವಹಿಸಿ, ಹರಿದಾಸರನೇಕರನ್ನು ಸಂಘಟಿಸಿ, ದಾಸಕೂಟವನ್ನು ಪುನಶ್ಚೇತನಗೊಳಿಸಿ, ತಮ್ಮ ೭೫ ವರ್ಷದ ನಿಡಿದಾದ ಬದುಕಿಗೆ ಮಂಗಳಹಾಡಿದ್ದು "ಚಿಪ್ಪಗಿರಿ"ಯಲ್ಲಿ. (ಚಿಪ್ಪಗಿರಿ ಈಗಿನ ಗುಂತಕಲ್ ರೈಲು ನಿಲ್ದಾಣದಿಂದ ಐದು ಮೈಲು ದೂರದಲ್ಲಿದೆ).ಅಲ್ಲಿ ಅವರಿಗೆ ದೊರೆತ ಗೋಪಾಲಕೃಷ್ಣನನ್ನು ಪ್ರತಿಷ್ಠಾಪಿಸಿ, ತಿರುಪತಿಯ ಯಾತ್ರೈಗೈದು ಬ್ರಹ್ಮೋತ್ಸವವನ್ನು ವೀಕ್ಷಿಸಿ, ಮರಳಿದ ನಂತರ ಕ್ರಿ. ಶ. 1755ನೆ ಕಾರ್ತಿಕ ಶುದ್ಧ ದಶಮಿ ಬೃಹಸ್ಪತಿವಾರದಂದು ವಿಜಯವಿಠಲನ ಪಾದವನ್ನು ಸೇರಿದರು.

### ವಿಜಯದಾಸರ ಕೃತಿ-ಸುಳಾದಿ ಬಾಹುಳ್ಯ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ, ಹರಿದಾಸ ಪರಂಪರೆಯಲ್ಲಿ ವಿಜಯದಾಸರ ಸ್ಥಾನ ತುಂಬ ಹಿರಿದು. ಅವರಿಗೆ "ಸುಳಾದಿಗಳದಾಸ"ರೆಂದೆ ಹೆಸರು. ನೂರಾರು ಸುಳಾದಿ, ಕೀರ್ತನೆ ಮಧ್ವಮತ ಪ್ರಮೇಯಗಳನ್ನು ತಿಳಿಸುವ ಕೃತಿಗಳು, ತೀರ್ಥಕ್ಷೇತ್ರ ಮಹಿಮೆ, ಹೀಗೆ ಪುರಂದರದಾಸರು ರಚಿಸಿದ್ದ ೪,೭೫,೦೦೦ ಕೃತಿಗಳ ಜತೆ ಇವರು ೨೫,೦೦೦ ಕೃತಿ ರಚಿಸಿ ಒಟ್ಟು ಐದು ಲಕ್ಷ ಕೃತಿಗಳಾಗುವಂತೆ ಮಾಡಿದರೆಂಬ ಖ್ಯಾತಿ ಇದೆ. ಮಾಧ್ವರಲ್ಲಿ ಒಂದು ನಾಣ್ಣುಡಿ ಬಳಕೆಯಲ್ಲಿದೆ, "ಸುಧಾ ಓದಿ ಪದ ಹೇಳು" ಎಂದು. ಜಯತೀರ್ಥರಿಂದ ರಚಿತವಾದ "ನ್ಯಾಯಸುಧಾ" ಎಂಬ ಗ್ರಂಥ ಎಷ್ಟು ಶ್ರೇಷ್ಠವೆಂದು ಮಾಧ್ವರು ಪರಿಗಣಿಸಿದಾರೆಯೊ ಅಷ್ಟೇ ಗಹನ, ಅರ್ಥಗರ್ಭಿತ ಹಾಗೂ ವೇದೋಪನಿಷತ್ತು ಇತ್ಯಾದಿ ಶಾಸ್ತ್ರಗ್ರಂಥಗಳ ಆಕರಗಳು ಅಡಕವಾಗಿರುವ ಹರಿದಾಸರ ಕೃತಿಗಳೂ ಕೂಡ. ಇದರ ವ್ಯಾಪ್ತಿ ತಿಳಿಯಬೇಕಾದರೆ, ವಿಜಯದಾಸರ ಸುಳಾದಿ, ಕೀರ್ತನೆಗಳನ್ನು ಪರಿಶೀಲಿಸಬೇಕಾಗುತ್ತದೆ. ಹರಿದಾಸರ ಪ್ರಥಮ ಹಂತದಲ್ಲಿ ಶ್ರೀಪಾದರಾಜರ ಕೃತಿಗಳ, ವ್ಯಾಸರಾಯರ ಸರಳತೆ, ಪುರಂದರದಾಸರಲ್ಲಿ ಕಾಣಬರುವ ಪ್ರಸನ್ನಗುಣ, ಕನಕದಾಸರ ವಿಡಂಬನ-ಕೆಚ್ಚಿನ ಮನೋಭಾವ, ಭಾಗವತದೃಷ್ಟಿ, ವಾದಿರಾಜರ ವಾಗ್ವಿಲಾಸ, ಹೀಗೆ

ವ್ಯಕ್ತಿತ್ವದ ವಿಶಿಷ್ಟಗಳೂ ಹಾಗೆ ವಿಜಯದಾಸರಲ್ಲಿ ಮಧ್ವನಿಷ್ಠೆ, ಶಾಸ್ತ್ರಸಂಪನ್ನತೆ ಪ್ರಶಿಷ್ಟ್ಯವೆನ್ನಬಹುದು.

ಮಂತ್ರಾಲಯದ ಶ್ರೀರಾಘವೇಂದ್ರರು ಇದ್ದ ಕಾಲ ಪರಿಸ್ಥಿತಿ (೧೬೭೧) ವಿಜಯದಾಸರ ಕಾಲದಲ್ಲೂ ಮುಂದುವರಿದಿತ್ತೆಷ್ಟೆ (೧೬೮೭-೧೭೫೫) ಅದೇ ರಾಜಕೀಯ ಪ್ರಕ್ಷುಬ್ಧತೆ. ವಿಜಯನಗರದ ಅರಸೊತ್ತಿಗೆ ಛಿದ್ರಗೊಂಡು ಕುಂಭಕೋಣದತ್ತ ಸರಿದಿತು. ಅಲ್ಲಿ ಇಲ್ಲಿ ಮಾಂಡಲಿಕರು ತಾವೆ ಸ್ವತಂತ್ರರಾಗಿ ಮೆರೆಯುತ್ತಿದ್ದರು. ಬಹುಮನಿ ರಾಜ್ಯವೂ ಒಡೆದು, ಬಿಜಾಪುರದ ಆದಿಲ್‌ಷಹ ನವಾಬ ಅಟ್ಟಹಾಸದಿಂದ ತಾನೆ ಸ್ವತಂತ್ರನೆಂದು ಘೋಷಿಸಿಕೊಂಡು ಮೆರೆಯುತ್ತಿದ್ದ. ಅವನಿಗೆ ಸಹಜವಾಗಿಯೆ ಹಿಂದೂ ಧರ್ಮ, ಹಿಂದೂಗಳ ಬಗ್ಗೆ ಗೌರವವಿರಲಿಲ್ಲ. ಕ್ರಿ. ಶ. 17ನೆ ಶತಮಾನದಿಂದ 18 ನೆ ಶತಮಾನದ ಪೂರ್ವಾರ್ಧವರೆಗೆ ಕರ್ಣಾಟಕದಲ್ಲಿದ್ದದ್ದು ಇದೇ ಗೊಂದಲವೆ ಉತ್ತರಕರ್ನಾಟಕದ ರಾಯಚೂರು, ಬಾಗಲಕೋಟೆ, ಉತ್ತರಕರ್ಣಾಕದ ರಾಯಚೂರ, ಬಾಗಲಕೋಟೆ, ಬಾದಾಮಿ, ಉತ್ತನೂರು, ಆದವಾನಿ, ಗದ್ವಾಲ್, ಎಲ್ಲೆಡೆ ಮಂಚ್ಸಿಮರ ಆಳ್ವಿಕೆಯೆ ಇದ್ದದ್ದು. ೧೭೦೪ ರಿಂದ ೧೭೬೧ ರವರೆಗೆ ಕರ್ಣಾಟಕದ ಇತಿಹಾಸದಲ್ಲಿ ದಳವಾಯಿಗಳ ಕಾಲವೆಂದೆ ಪ್ರಸಿದ್ಧ. ಯುದ್ಧ ಅಲ್ಲಿ ಇಲ್ಲಿ ಇದ್ದದ್ದೆ. ಜತೆಗೆ ಉತ್ತರಭಾರತದಲ್ಲಿ ವೈಭವದಿಂದ ಮೆರೆದ ಮೊಗಲ್ ಸಾಮ್ರಾಜ್ಯಷಾಹಿ ಕಂಸಿದು ಬಿದ್ದಿತ್ತು. ಹೈದರಾಬಾದಿನ ನಿಜಾಮ, ಮರಾಠಾಪೇಷ್ವೆಗಳು ರಾಜ್ಯ ವಿಸ್ತರಣಾ ಕಾರ‍್ಯದಲ್ಲಿ ಆಸಕ್ತರಿದ್ದ ಮೇಲೆ ಸಾಮಾನ್ಯರ ಪರಿಸ್ಥಿತಿಯಲ್ಲಿ ತಳಮಳವೇ ಹೆಚ್ಚಲ್ಲವೆ ? ಸಾಮಾನ್ಯ ಜನರಿಗೆ ೧೭-೧೮ನೆ ಶ.ದಲ್ಲಿ ಇದ್ದದ್ದೆ ಬಡತನ. ಇಂಗ್ಲಿಷರ ಕಿರುಕುಳ ಬೇರೆ.

## ವಿಜಯದಾಸರು-ಹರಿದಾಸರ ಎರಡನೆಯ ಹಂತದ ಆಂದೋಲನದ ಸ್ವರೂಪ

ಇಂಥ ಅತ್ಯಪ್ಪ ಬದುಕಿನ ಕಾಲದಲ್ಲಿ ಬಂದವರು ವಿಜಯದಾಸರು. ಸಾಮಾನ್ಯರ ಜೀವನ ಪಥದಲ್ಲಿ ಬರುವ ಅನೇಕ ಎಡರು-ತೊಡರುಗಳನ್ನು ತಾವೇ ಕಿತ್ತಿ ಕೊಂಡು, ಸಮಾಜದ ಶಾಶ್ವತ ಮೌಲ್ಯಗಳಾದ ಸತ್ಯ-ಧರ್ಮ-ನೀತಿ, ದೈವಭಕ್ತಿಗಳಿಗೆ ಬೆಂಬಲ ನೀಡಿ ಹರಿದಾಸರನ್ನು ಸಂಘಟಿಸಿ, ಹರಿಭಕ್ತಿ ಬೆಳೆಸಲು ವಿಜಯದಾಸರು ಆರಿಸಿ ಕೊಂಡದ್ದು ಹರಿದಾಸದೀಕ್ಷೆ. ಮನೆಮನೆಗೆ ಆಧ್ಯಾತ್ಮದ ಆಂದೋಲನ ಸಂದೇಶ ತಲುಪಿಸುವ ತಾಳ, ತಂಬೂರಿ. ತಂಬೂರಿಯ ಶ್ರುತಿ ಮಾಡಿದಂತೆ ಆದರ ಹಿನ್ನೆಲೆಯಲ್ಲಿ ಆಂದೋಲ ನವೂ ಮುಂದುವರೆಯಿತು. ಕಂಗೆಟ್ಟ ವಿಧರ್ಮೀಯರ ಬಲಾತ್ಕಾರಕ್ಕೊಳಗಾದ ಎಷ್ಟು ಜನ ಹಿಂದೂಗಳು ಮತಾಂತರ ಆದರೂ, ಹರಿದಾಸರ ದ್ವಿತೀಯ ಹಂತದ ಆಂದೋಲನ, ಇದನ್ನು ತಕ್ಕ ಮಟ್ಟಿಗೆ ನಿವಾರಿಸಿತು. ಬದುಕಿನಲ್ಲಿ ಬದುಕುವಾಸೆ, ಉತ್ಸಾಹ, ಧೈರ್ಯ, ಆಧ್ಯಾತ್ಮ ತತ್ವ, ಸಾಹಿತ್ಯ ಇದಿಷ್ಟೂ ಅವರು ಕೊಡಲೆತ್ನಿಸಿದರು, ತಮ್ಮ ನೂರಾರು ಕೃತಿಗಳ ಮೂಲಕ. "ದಾಸ ಸಾಹಿತ್ಯದಲ್ಲಿ ವಾದಿರಾಜರಲ್ಲಿ ಮೊಳಕೆಯ ರೂಪದಲ್ಲಿ ತೋರಿಬಂದ ಶಾಸ್ತ್ರಜ್ಞಾನ ವಿಜಯದಾಸರಲ್ಲಿ ವಿಜೃಂಭಿಸಲಾರಂಭಿಸಿತು. ಅನಂತರ

ಒಂದ ಜಗನ್ನಾಥದಾಸರ 'ಹರಿಕಥಾಮೃತಸಾರ'ದಲ್ಲಿ ಅದು ಅತ್ಯುನ್ನತವಾದ ಶ್ರೇಣಿ ಯನ್ನು ಮುಟ್ಟಿತು ಎಂಬ ಮಾತು ಹೊಂದುವಂಥದು.

### ವಿಜಯದಾಸರ ರಚನಾ ವೈಶಿಷ್ಟ್ಯ

ವಿಜಯದಾಸರ ಮನೋಧರ್ಮ ಅವರ ರಚನೆಗಳಲ್ಲಿ ಎದ್ದು ಕಾಣುತ್ತದೆ. ಅಲ್ಲಿ ಮಧ್ವಶಾಸ್ತ್ರ ನಿಷ್ಠೆ, ಮಧ್ವಮತ ಪ್ರಸಾರ, ಆಚಾರ-ವಿಚಾರ, ಪ್ರತಿಪಾದನೆ, ಹರಿ ಪಾರಮ್ಯ ವಿದ್ಯೆಯ ವಿನಾ ಬೇರೆ ಸುಳಿಯುವಂತಿಲ್ಲ. ಇದು ಎಷ್ಟರವರೆಗೆ ಮುಂದುವರಿಯಿತೆಂದರೆ ಅದ್ವೈತ ಖಂಡನೆಯಲ್ಲಿ ಲೌಕಿಕ ಮಟ್ಟ ತಲುಪುವ ವೀರ ವೈಷ್ಣವ ನಿಷ್ಠೆಯೆಂಬಂತೆ (ವೀರಶೈವರಲ್ಲಿ ಮಾಹೇಶ್ವರ ನಿಷ್ಠೆಯಿದ್ದಂತೆ). ಮಧ್ವಮತ-ವೈಷ್ಣವ ಧರ್ಮ ಹರಿಸರ್ವೋತ್ತಮತೆಯ ದೃಷ್ಟಿಯಲ್ಲಿ ವೇದಾಂತ ಸಾರುವ ಆದ ಕೃತಿಗಳೇ ವಿಜಯದಾಸರಲ್ಲಿ ಹೆಚ್ಚು-ಅದೂ ಸುಳಾದಿಗಳಲ್ಲಿ. ಅದರಿಂದಲೇ ಅವರು ಇಂದಿಗೂ ಮಧ್ವತತ್ತ್ವಪ್ರಿಯರಿಗೆ, ಮಾಧ್ವ ಆಚಾರ ಪ್ರಿಯರಿಗೆ ಹೆಚ್ಚು ಪ್ರಿಯರಾಗಿದ್ದಾರೆ. ಆದರೆ ಈ ವಿಚಾರ ಎಷ್ಟು ಮುಂದರಿಯಿತೆಂದರೆ ನಮಾನ್ಯಸರ್ವೋಮತಃ ಎನ್ನುವಷ್ಟರ ಮಟ್ಟಿಗೆ, ವಿಜಯದಾಸರ ಕೆಲವು ಕೀರ್ತನೆಗಳಲ್ಲಿ ಲಲಿತ ಬಂಧ ರಚನೆ, ಸುಕುಮಾರತೆ ಕಂಡು ಬಂದರೆ, ಸುಳಾದಿಗಳಲ್ಲಿ ಮಾತ್ರ ತತ್ತ್ವ ನಿಷ್ಠೆ, ಗಹನತೆ, ಜಟಿಲತೆಯೆ ಪ್ರಮುಖ ಗುಣ. ಅವರು ರಚಿಸಿದ ಮೊದಲ ಸುಳಾದಿಯೆಂದು ಹೇಳಲಾಗುವ ರಚನೆಯಲ್ಲಿ.

> ಗುರುಪುರಂದರದಾಸರೆ ನಿಮ್ಮ ಚರಣ ಸರಸಿಜನಂಬಿದೆ
> ಗರುವ ರಹಿತರ ಮಾಡಿ ನಮ್ಮನು ಪೊರೆವ ಭಾರವು ನಿಮ್ಮದೆ ॥ ಎಂದು ಹೇಳಿ
> ದಾಸಪುರಂದರ ಪಾದವನು ಪೊಂದಿದನೊ

ವಿಸುಜನ್ಮದ ಪುಣ್ಯವಾಗಿ ಫಲಿಸಿತೋ ಎನಗೆ ಎಂದು ಅಂಕಿತವಿತ್ತ ಗುರುಗಳನ್ನು ಸ್ಮರಿಸಿದಂತೆಯೆ, ತಾವು ತಮ್ಮ ಭೌತಿಕ ಶರೀರದಲ್ಲಿ ಎಪ್ಪತ್ತೂರು ವರ್ಷ ಮಾತ್ರ ಇದ್ದನೆಂದು ಹೇಳಿದಾರೆ. ಅಂದರೆ ೧೭೫೫ ರಲ್ಲಿ ಇದು ರಚಿತವಾಗಿರಬೇಕು. ವಿಜಯ ದಾಸರು ಭೃಗುವಂಶಿಗಳ ಅಂಶರೆಂಬ ವಿಚಾರವನ್ನು ಅವರ ಸಾಕುಮಕ್ಕಳಾದ ಮೋಹನದಾಸರು ತಿಳಿಸುತ್ತಾರೆ.[177] ಹರಿದಾಸ ದೀಕ್ಷೆವಹಿಸಿದ ತಾರುಣ್ಯದಲ್ಲಿ ಅವರಿಗೆ ಎಲ್ಲ ಸಮಸ್ಯೆಗಳೂ ಮಾಯವಾದವೇನು ? ಬಡತನದ ಬೆಂಕಿಗೆ ಬೆಂದುಮಾಧವನನ್ನು ಮೊರೆಹೊಕ್ಕರಷ್ಟೆ : ಕಡು ಬಡವರಾದವರನ್ನು ದೇವರೇಕೆ ಹುಟ್ಟಿಸಿದನೆಂದು ಕೊರಗಿ ಪ್ರಶ್ನಿಸುತ್ತಾರೆ :

> ಯಾಕೆ ಪುಟ್ಟಿಸಿದಿ ಇನ್ನು ಎಲೆ ಹರಿಯೆ
> ಲೋಕದೊಳಗನುಗಾಲ ತಿರಿದು ತಿಂಬುವಂತೆ ಮಾಡಿ ॥೧॥

ಎಲ್ಲಿ ಬೇಡಿದರಿಲ್ಲವೆಂಬೊ ಸೊಲ್ಲಿಲ್ಲದೇ-
ಒಲ್ಲೆನೋ ಸಾಕು ಈ ನರಜನ್ಮ......

ಬಡವ ಬಲ್ಲಿದರಸ, ಸಿರಿವಿಜಯವಿಠಲ ನಿ
ನ್ನಲ್ಲಿದೂತರ ಸಂಗದಲ್ಲಿ ಸುಖಿಪಡಿಸೋ......

"ಇರಬಾರದು ಬಡವ ಜಗತ್ತಿನೊಳಗೆ : ಪರದೇಶಿ ಮಾನವಗೆ ದಿಕ್ಕು ವಂತ್ಯಾವನೋ" ಎಂಬುದಾಗಿ ಹಾಡಲು ಅವರಿಗೆ ತಾವು ಅನುಭವಿಸಿದ ಬಡತನದ ಬೇಗೆಯೂ ಕಾರಣ. ನೋವಿನೊಂದಿಗೆ ತಂದ ಸ್ಫೂರ್ತಿಯದು. ಕಡೆಗೆ[16] "ಕೊಡುಂವವನು ನೀನು ಕೊಂಬು ವವನು ನೀನೆ" ಎಂದೂ ಹಾಡಿದರು : ಬಡವನಾನೇನು ಬೇಡಲಿ :

ಹದಿನಾರು ಪಲ್ಲಗಳ ಅಲ್ಕಿಂದು ಬೇಡಿದರೆ (ಬಾಯ್ದೆರೆದು-ಪಾಠಾಂತರ)
ಇದು ಸಮಯವಲ್ಲೆಂದು ಪೇಳಿ ತಾನು
ಮನದ ಕೇಳಿಗೆ ನೂರನೊಂದಾಗಿ ನೋಡುವನು
ಮನದಮುನವನೇನು ಕೊಡಬಲ್ಲ ಹರಿಯೆ ॥
ಹೀನವೃತ್ತಿಯ ಜನರಿಗಾಸೆಯನು ಬಡುವುದು
ಗಾಣದೆತ್ತು ತಿರುಗಿ ಬಳಲಿದಂತೆ
ಭಾನುಕೋಟಿ ತೇಜ ವಿಜಯ ವಿಠಲರೇಯ
ನೀನಲ್ಲದನ್ಯತ್ರ ಕೊಡುಕೊಂಬರುಂಟೆ ॥

ಎಂಬಲ್ಲಿ ಗಾಣದೆತ್ತಿನ ಉಪಮೆ ತುಂಬ ಸಹಜವಾಗಿದೆ.

ವಿಜಯದಾಸರಂಥ ಹಿರಿಯ ಜೀವ ತಾನು ನೊಂದು ನೋವುಂಡು, ಬೆಂಡಾದ ನಂತರ ಶ್ರೀಹರಿಕೃಪೆಯಿಂದ ದೊರೆತ ಹರಿದಾಸದೀಕ್ಷೆ ಹಾಗೂ ಗುರುಕೃಪೆಯಿಂದಾಗಿ ಆಡಿದ್ದು ಹಾಡಾಗಿ, ಅನೇಕರಿಗೆ ದಾತಾರನಾಗುವ ಸಂದರ್ಭ ಬಂದಾಗ, ಹಿಂದೊಮ್ಮೆ ಕಳೆದ ಕಾರ್ಪಣ್ಯದ ದಿನಗಳನ್ನು ನೆನೆನೆನೆದು ನಕ್ಕು ಹಾಡಿರುವಂತಿದೆ :

ನಿನ್ನ ವೊಲುಮೆಯಿಂದ ನಿಖಿಳ ಜನರು ಬಂದು
ಮನ್ನಿಸುವರೊ ಮಹರಾಯ ॥ಪ॥

ಎನ್ನ ಪುಣ್ಯಗಳಿಂದ ಈಪರಿಯುಂಟೇನೊ
ನಿನ್ನದೆ ಸಕಲ ಸಂಪತ್ತು. ॥ಅ. ಪ॥

ಒಬ್ಬ ಹೆಂಗಸಿನ ಹೊಟ್ಟೆಗೆ ಹಾಕುವುದಕನ್ನು
ತಬ್ಬಿಬ್ಬುಗೊಂಡೆನೊ ಹಿಂದೆ

ನಿಬ್ಬರದಿಂದಲಿ ಸರ್ವರ ಕೊಡುಂಬೊ
ಹಬ್ಬವನುಣಿಸುವಿ ಹರಿಯೆ ॥

ಸಂಚಿತನಕವಿದ್ದು ಸಣ್ಣ ಸೌಟಿನ ತುಂಬ
ಗಂಜಿ ಕಾಣದೆ ಬಳಲಿದೆನೋ
ವ್ಯಂಜನ ಮೊದಲಾದ ನಾನಾರಸಂಗಳು
ಭುಂಜಿಸುವುದು ಮತ್ತೇನೊ ॥

ಜೀರ್ಣ ಮಲಿನವಸ್ತ್ರ ಕಾಣದ ನರನಿಗೆ
ಊರ್ಣ ವಿಚಿತ್ರ ಸುವಸನ (ಊರ್ಣ=ಉಣ್ಣೆ)
ವರ್ಣವರ್ಣದಿಂದ ಬಾಹೊದದೇನೊ ಸಂ
ಪೂರ್ಣಗುಣಾರ್ಣವ ದೇವ ॥

ನೀಚೋಚ್ಚ ತಿಳಿಯದೆ ಸರ್ವರ ಚರಣಕ್ಕೆ
ಚಾಚಿದೆ ನೊಸಲ ಹಸ್ತಗಳ
ಯೋಚಿಸಿ ನೋಡಲು ಸೋಜಿಗವಾಗಿದೆ
ವಾಚಕ್ಕೆ ನಿಲುಕದ ಹರಿಯೆ ॥

ಮಧ್ಯಾಹ್ನಕಾಲಕ್ಕೆ ಅತಿಥಿಗಳಿಗೆ ಅನ್ನ
ಮೆದ್ದೆನೆಂದರೆ ಈಯುಗಾಣೆ
ಈಧರೆಯೊಳಗೆ ಸತ್ಪಾತ್ರರ ಕೊಡುಂಬೊ
ಇದ್ದತಿನೋಡೊ ಪುಣ್ಯಾತ್ಮಾ ॥

ಮನೆಮನೆತಿರಿದರು ಕಾಸು ಪುಟ್ಟದೆ ಸು
ಮ್ಮನೆ ಚಾಲ್ವರಿದು ಬಳಲಿದೆನೊ
ಹಣಹೊನ್ನು ದ್ರವ್ಯಂಗಳಿದ್ದಲ್ಲಿಗೆ ತನಗೆ
ತಾನೆ ಪ್ರಾಪ್ತಿನೋಡೊ ಜೀಯಾ ॥

ವೈದಿಕಪದವಿಯ ನೀವಗೆ ಲೌಕಿಕ
ಐದಿಸುವುದು ಬಹು ಖ್ಯಾತೆ
ಮೈದುನಗೊಲಿದ ಶ್ರೀ ವಿಜಯವಿಠ್ಠಲ ನಿನ್ನ
ಪಾದಸಾಕ್ಷಿಯನುಭವವೊ ॥

ಇದು ಅವರಿಗೊದಗಿ ಬಂದ ಭಾಗ್ಯ-ಹಿಂದಿನದಿನಗಳನ್ನುಕುರಿತ ವಿಮರ್ಶೆ. ದುರುಳ ಜನರ ಸಂಗವೆಂಬುದು ವಿಜಯದಾಸರಿಗೆ "ನೊಣ ಬೆರಸಿದ ಊಟವು ಎಂದಿಗು" ಅದೇ ಪರಮ ಭಾಗವತರ ಪದಸಂಗ "ಮಸ್ತಕದ ಮಕುಟ" ಈ ಶರೀರವೊ "ಗಾಳಿಗೊಡ್ಡಿದ ದೀಪ",

ಹರಿಗೆ ಅರ್ಪಿಸದ ಯಾವ ಕರ್ಮವೂ "ಸೂಳೆಗಿಕ್ಕಿದವಿತ್ತ" ಎಂದೆಲ್ಲ ಬದುಕಿನ ಕಠೋರ ಸತ್ಯವನ್ನು ಸುರುವ ದಾಸವರ್ಯರು ಕಡೆಗೆ ತಿಳಿಸುವುದು ಇದು : "ಸಾವಿರಕೊಂದೆ ಮಾತು ಹರಿದಾಸನಾಗೋದು ಇಂತಾದರ ಅವರ ತೊಳಲಿಕೆ ಇನ್ನೂ ಹರಿದಿಲ್ಲ."

ಹರಿಯೆ ನಿನ್ನಾಧೀನ ಜ್ಞಾನೇಂದ್ರಿಯಂಗಳು
ಹರಿಯೆ ನಿನ್ನಾಧೀನ ಕರ್ಮೇಂದ್ರಿಯಂಗಳು
ಹರಿಯೆ ನಿನ್ನಾಧೀನ ಪಂಚ ಭೂತಾತ್ಮಗಳು (ದೀಕ್ಷಾ ಸುಳಾದಿ)
ಹರಿಯೆ ನಿನ್ನಾಧೀನ ಮನ ಚಿತ್ತಾದಿಗಳು
ಹರಿಯೆ ನಿನ್ನಾಧೀನ ಸಕಲ ಚೇತನವು
ಹರಿಯೆ ನಿನ್ನಾಧೀನ ಸಕಲ ಚೇಷ್ಟೆಗಳು

ಎಂದು ಬಿನ್ನವಿಸಿ ನೀನು "ಕುಣಿಸಿದರೆ ಕುಣಿವೆ ನಗಿಸಿದರೆ ನಗುವೆ। ಮಣಿಸಿದರೆ ಮಣಿವೆ ಆಳಿಸಿದರೆ ಆಳುವೆ। ಉಣಿಸಿದರೆ ಉಣುವೆ ಉಡಿಸಿದರೆ ಉಡುವೆ" ಎಂದು ತಿಳಿಸುತ್ತಾರೆ. ಇಲ್ಲಿ ಹರಿಯು "ನೇಮಿಸಿದ ಕಾರಣ ಎನ್ನ ಶರೀರದೊಳಗೆಭರಿತವಾಗಿದೆ ಹೊರಗಿದ್ದ ಸರಕು ಬೆಲೆಮಾಡಿದಂತೆ ಈ ಸರಕು ಧನವಿತ್ತು ತುಂಬಲಿಲ್ಲ" ಎಂಬ ಜೀವ ಎರವಲೆಂಬುವ ಪರಿ ಪರಿಚಯ ಮಾಡಿಕೊಡುವಲ್ಲಿ ಅವರ ಶಾಸ್ತ್ರಜ್ಞಾನ ತುಂಬ ಹಿರಿದೆನ್ನಿಸುತ್ತದೆ. ಮಂತ್ರ, ಮಂಧ್ವನಿಷ್ಠರಲ್ಲದವರನ್ನು ಜನ್ಮಾಂತರಕೆ ಆದರಿಸುವವರಲ್ಲ ; ಅಂಥ ನಿಷ್ಠೆ ಮಹಾನ ಮೀಯು ದೃಷ್ಟಿಯಿಂದ ಒಮ್ಮೊಮ್ಮೆ ಸರಿಯೆ ಎಂಬ ಅನುಮಾನ ಬರುತ್ತದೆ. "ತಪ ಮುದ್ರೆಗಳಿಲ್ಲದಂಥ ಮಾನವ ನಿನ್ನ ಅಪರೋಕ್ಷೀಕರಿಸಿ ಪ್ರತ್ಯಕ್ಷ ಕಾಣುತಿರಲು ಉಪ್ಪ ಚಾರವನು ಮಾಡೆ ಜನ್ಮಾಂತರಕೆ ನಾನು" ಎಂಬುದು ಹಾಸುಹೊಕ್ಕಾಗಿ ದಾಸರ ಸುಳಾದಿ ಗಳಲ್ಲೆಲ್ಲ ಯಾವುದೋ ರೀತಿಯಲ್ಲಿ ಹೊರಹೊಮ್ಮಿರುವುದನ್ನು ಗಮನಿಸಬಹುದು :

"ವರ್ಣಾಶ್ರಮದಲ್ಲಿ ಹಿರಿದು ಭೂಸುರ ಜನ್ಮ[179]।
ಬರಲದರವಳಿಗೆ ಮರುತಮತಕೆ ಬಂದು" ಹಾಗೂ "ಧೊರೆ ನೀನೆ ಇರಲಿಕ್ಕೆ ಆರಾರು ಹಿರಿಯರೋ" ಎಂಬ ಪರಿಪಾರವ್ಯ, 'ಹರಿಯೆ ಸ್ವತಂತ್ರ ನಿರ್ದೋಷ ಶಿಖಾ ಮಣಿ। ಪರದೈವ ಸರ್ವವ್ಯಾಪ್ತ" ಎಂದು ಪ್ರತಿಪಾದಿಸುತ್ತಾರೆ. 'ಕರುಣಬಾರದೆ ನಿನಗೆ ಅಕಟಕಟ ಅಕಟಕಟ' ಎಂದು ಮೊರೆಯಿಡುತ್ತ "ವಿಜಯವಿಠ್ಠಲ ನೀನೆ ಗತಿಯೊ ಆರೊಂದು ಪುರದೊಳು" ಎಂದು ದೈನ್ಯತೆಯಿಂದ ಬೇಡುತ್ತಾರೆ.

ಸಪ್ಪತಿಮೆಲುವಾಗ ಉಪ್ಪಿನ ಯೋಚನೆ
ಉಪ್ಪುದೊರೆತಾಗ ಸೊಪ್ಪಿನ ಯೋಚನೆ
ಸೊಪ್ಪುದೊರೆಕಿದಾಗ ತುಪ್ಪದ ಯೋಚನೆ

ಕುಪ್ಪದೊರಕಿದಾಗ ಕುಪ್ಪೆಯ ಯೋಚನೆ
ಕುಪ್ಪೆದೊರಕಿದಾಗ ಕೊಪ್ಪರಿಗೆ ಯೋಚನೆ
ಕೊಪ್ಪರಿಗೆ ಉಂಟಾಗೆ ಸಪ್ತದ್ವೀಪದ ಚಿಂತೆ ॥

ಎಂದಾಗ ಭವ, "ಆಸೆಯು ಮ್ಯಾಲೆಯೆ ಇರುವುದೆಂದೆನಿಸುತ್ತದೆ. ಆದರೆ ಅದೊಂದು ಸಹಜ ದುರ್ಬಲತೆ. ದಾಸದೀಕ್ಷೆ ಪಡೆದ ವೇಲೆ ವಿಜಯದಾಸರ ಅಂತಸ್ಸಾಧನೆ, ಇನ್ನೂ ಹೆಚ್ಚಿತು. ಅವರ ಭಕ್ತಿ ಪರಾಕಾಷ್ಠೆ ಮುಟ್ಟುತ್ತದೆ ಇಲ್ಲಿ :

"ನಿನ್ನ ದಾಸರು ಪೊದ್ದ ವಸನವೆ ಎನಗಾಗಲಿ
ನಿನ್ನ ದಾಸರು ಉಂಡ ಎಂಜಲು ಎನಗಾಗಲಿ

ಎನ್ನುತ ಕೊನೆಗೆ

"ನಿನ್ನ ಭಕುತಿಗಿಂತ ನಿನ್ನದಾಸರ ಪಾದ
ವನ್ನುಜದಲಿ ಭಕುತಿ ಎನ್ನಗದು ಬಲು ಪ್ರೀತಿ"

ಎನ್ನುತ್ತ ದೇವರಿಗಿಂತ "ಡಿಂಗರಿಗನು ಹೆಚ್ಚೆಂಬ" ಸಾರುವಿಕೆ ವಿಜಯರಾಯರದು : ಅವರಿಗೆ ಹೊನ್ನು, ಹಣ, ಮನ್ನಣೆ, ನಾಸು ನನ್ನದೆಂಬ ಮಹಾತು ಎಂದೆಂದೂ ಬೇಡ, ನಿನ್ನವನು ನಿನ್ನವನೆಂದೆನಿಸಿ ಮನ್ನಿಸಿ ಸಲಹಬೇಕು ವಿಜಯವಿಠ್ಠಲ : ಇಲ್ಲಿ ಲೌಕಿಕ ಅಲೌಕಿಕಗಳ ನಡುವಣ ದಾಸರ ಹೊಯ್ದಾಟವೂ ತಿಳಿಯಬರುತ್ತದೆ.

ಪ್ರತಿಯೊಬ್ಬ ಹರಿದಾಸರಿಗೂ ತನ್ನ ಇಷ್ಟದೈವವನ್ನು (ಬಿಂಬಮೂರ್ತಿ-ಮಧ್ವ ಪರಿಭಾಷೆ) ಕುರಿತು ಧ್ಯಾನಿಸುವ "ಉಪಾಸನಾ" ವಿಧಿ ಇರುತ್ತದೆ. ಉಪಾಸನಾ ಭಾಗದ ಸುಳಾದಿಗಳೆಂದೆ ವಿಜಯದಾಸರು ಅನೇಕ ಸುಳಾದಿ ರಚಿಸಿದ್ದಾರೆ. ಉಪಾಸನೆ ಆಧ್ಯಾತ್ಮಿಕ ಸಾಧನೆಯಲ್ಲೊಂದು ಪ್ರಮುಖ ಹಂತ. "ಧ್ಯಾನವನು ಮಾಡು ಬಿಂಬ ಮೂರುತಿಯ" ಎಂಬ ಸುಳಾದಿಯಲ್ಲಿ ಯೋಗ ಮಾರ್ಗವನ್ನೇ ತೋರುತ್ತಾರೆ ವಿಜಯದಾಸರು

"ಗುಣ ನಾಲ್ಕರಿಂದಲಿ ಉಪಾಸನವನೆಮಾಡು ।
ಕ್ಷಣಕ್ಷಣಕೆ ಹರಿಪಾದವನು ನೋಡುತ
ಅಣುರೇಣು ಚೇತನಾ ಚೇತನಕೆ ನೇಮಕ
ಫಣಿಶಯನನಿಲ್ಲದೆ ಮತ್ತೊಬ್ಬರಿಲ್ಲವೆಂದು"

(ನಾಲ್ಕು ಗುಣ : ಸತ್, ಚಿತ್, ಆನಂದ, ಆತ್ಮ.)

ಹರಿಯ ದಶಾವತಾರ ವರ್ಣನೆಯಂತೂ ದಾಸರಲ್ಲಿ ಮನದುಂಬಿ ಮೂಡಿಬಂದಿದೆ :

ಸೋಮಕನ ಕೊಂದು ಕಮಲಾಸನನ ಕಾಯಿದೆ
ಸೋಮಪಾನವೆರೆದಮರರಸಾಕಿದಾ
ಹೇಮಗಣ್ಣನ ಕೊಂದು ಭೂಮಿಯ ನುಳುಹಿದ

ನೃಮೃಗರೂಪನಾಗಿ ಆಮಗುವಿಗೊಲಿದಾ

ಎಂದು ಕಲ್ಕಿಯತನಕ ಮುಂದುವರಿದಿದೆ. ಓತಪ್ರೋತವಾಗಿ

ಭೂಮಿನಳೆದು ಸುತ್ರಾಮಗೆ ಪುರವಿತ್ತ
ಜಾಮದಗ್ನಿಯಾಗಿ ಭೀಮನೃಪರ ಗೆದ್ದ
ರಾಮಮೂರುತಿಯಾಗಿ ತಾಮಸನ ಮುರಿದಾ
ಪ್ರೇಮಕೇಶನ ಸಂಗ್ರಾಮವ ಗೆಲಿಸಿದಾ
ಈ ಮಹಿಯೊಳು ಲಲಾಮರಾವ್ರತನಾದಾ
ರೋಮ ರೋಮ ಕೋಟಿ ತಾಮರಸಜಾಂಡಾ
ಸೋಮವನಾಮ ಸಿರಿವಿಜಯವಿಠಲ ಸಾರ್ವ
ಭೌಮ ಸಕಲ ಉದ್ದಾಮನು ಈಶನೆ ॥

ಈ ರೀತಿಯ ಸುಳಾದಿಗಳು ವಿಜಯದಾಸರಲ್ಲಿ ಹೆಚ್ಚು. ಆಲ್ಲಿ ಹರಿಸೇವೆ, ದಾಸತ್ವ ಅಪರೋಕ್ಷಾನುಭವ, ಸಾಧನೆ, ಶಾಸ್ತ್ರನಿಷ್ಠೆಗೆ ಪ್ರಾಧಾನ್ಯ.

ವಿಜಯದಾಸರ ಸಾಧನೆ, ಉಪಾಸನೆ, ದಾಸ್ಯಭಾವ, ಆರ್ತತೆ, ಪೂಜಾವನೋಧರ್ಮ, ಎಲ್ಲವೂ ಶ್ರೀಹರಿಗೆ ಪ್ರೀತಿಯಾಗಿ ಆತ ಒಲಿದು ಬಂದ ಸುದಿನವ ವಿಜಯದಾಸರು ಹಾಡಿ, ಕುಣಿದದ್ದೆಷ್ಟೋ :

"ಸುಳಿದವರಾರೆನ್ನ ಕಣ್ಣಮುಂದೆ, ಪೊಳೆದವರಾರೆನ್ನ ಕಂಗಳಿಗೆ ಥಳಥಳಿಸುವ ಪುತ್ಥಳಿ ಗೊಂಬೆಯಂದದಿ : ಎಳೆಮಿಂಚಿನಂತೆ ಕಂಗಳು ಥಳ ಥಳಿಸುವಂತೆ"

ಎಂದು ಹಾಡುತ್ತ, ಆ ಸಾರ್ಥಕತೆ, ಸರಣಿಯ ಬೇರೆ ಪರಿ :

"ಅಂತರಂಗದ ಕದವು ತೆರೆಯಿತಿಂದು
ಎಂತು ಪುಣ್ಯದ ಫಲವು ಪ್ರಾಪ್ತಿದೊರಕಿತೊ ಎನಗೆ"

ಎಂದು ಹಾಡುತ್ತ ತಮ್ಮ ತುಮುಲವೆಲ್ಲ ಹಾರಿಹೋಯಿತೆಂದು ಹಾಡಿದ್ದಾರೆ. ಹರಿ ಕರುಣೆ, ಗುರುಕರುಣೆಗಾಗಿ ಹಂಬಲಿಸುತ್ತ :

ಹರಿ ಕರುಣವೆಂಬಂಥ ಕೀಲಿ ಕೈದೊರಕಿತು
ಗುರುಕರುಣವೆಂಬಂಥ ಶಕ್ತಿಯಿಂದ
ಪರಮ ಭಾಗವತರ ಸಹವಾಸದಲಿ ಪೋಗಿ
ಹರಿ ಸ್ಮರಣೆಯಿಂದಲ್ಲಿ ಬೀಗ ಮಂದ್ರೆಯ ತೆಗೆದೆ ॥೨॥

ಭಕ್ತಿ ಕಕ್ಕಡವೆಂಬ ಜ್ಞಾನದೀಪದಿಂದ
ಜತ್ತಾಗಿ ಹಿಡಕೊಂಡು ದ್ವಾರದೊಳಗೆ ಪೊಕ್ಕೆ
ಎತ್ತನೋಡಿದರತ್ತ ಶೃಂಗಾರ ಸದನ ॥೨॥

"ಆ ನಂದಕಂದನೊಲಿಯೆ ತಾನಂದದ್ದೆ ವೇದ ವೃಂದ" ವೆಂದೆನಿಸಿತವರಿಗೆ.

ವಿಜಯದಾಸರ ಸುಳಾದಿಗಳಲ್ಲಿ ಆಚಾರನಿಷ್ಠೆ ಬಗ್ಗೆ ಹೇಳಿದೆವು. ಅದಕ್ಕೇ ಮಿಗಿಲಾಗಿಸಿದ್ದಾರೆ ''ಪ್ರಮೇಯಭಾಗ ಸುಳಾದಿ'' ''ಸಾಧನ ಸುಳಾದಿ''-ಹೀಗೆ ಅನೇಕ ಸುಳಾದಿಗಳನ್ನು ತನ್ನ ಸ್ವಮತಾಭಿಮಾನ ಮಧ್ವಮತ ಶ್ರೇಷ್ಠವೆಂಬ ಪ್ರತಿಪಾದನೆ, ಅದ್ವೈತ-ಮಾಯಾವಾದ ಖಂಡನೆ : ''ಆವಾವ ನರಕದಲಿ ಬಹುಕಾಲವಿಟ್ಟರು ಇಷ್ಟೆ। ನಾನೊಲ್ಲೆ ವಿಂಧ್ಯವಂತವ'' ಎಂದು ಸಾರುವ ದಾಸರು ''ಮಧ್ವಮತವ ಪೊಂದದವನ ಭಕಂತಿ ಯಾತಕೆ ಊರ್ಧ್ವ ಪುಂಡ್ರ ಶಿದ್ದದವನ ಕರ್ಮವ್ಯಾತಕೆ'' ಎಂದೂ ಘೋಷಿಸಿದರು. ಇಲ್ಲಿ ಅವರಿಗೆ ಮಧ್ವಾಚಾರ್ಯರಲ್ಲಿರುವ, ಮಧ್ವವಂಶದಲ್ಲಿರುವ ದ್ವೈತಪಂಥದಲ್ಲಿರುವ ದೃಢ ವಿಶ್ವಾಸವೇ ಕಾರಣ, ಅದೇ ಕೆಚ್ಚು ; ಅವರ ಕೀರ್ತನೆಗಳು ಸುಲಭಗ್ರಾಹ್ಯ ಅಲ್ಲ ; ಸುಳಾದಿಗಳಂತೂ ಶ್ರೀರಾಮವಂದ್ಯೆ : ಅವು ನಾರಿಕೇಳಪಾಕವು: ಅವರು 'ಕೊಸೀಮಗದಾಸ' ನಾದರೂ ಆರ್ಜಿಸಿದ್ದ ವಿದ್ವತ್ತು, ಸಾಧನೆ-ಸುಳಾದಿಗಳಲ್ಲಿ ಮಂಡಂಗಟ್ಟಿದೆ. ವ್ಯಾಸಕೂಟದವರ, ಆಚಾರ್ಯರ ಸಂಸ್ಕೃತ ಗ್ರಂಥ, ವೇದಾಂತ ವಿಚಾರವೆಲ್ಲವನ್ನು ವಿಜಯರಾಯರು ಕವ್ಯಾ ರಚನೆಗಳಲ್ಲಿ ಭಟ್ಟಿಯಿಳಿಸಿದ್ದಾರೆ. ಇಲ್ಲಿ ಹರಿದಾಸರ ಆಂದೋಲನದ ಪ್ರಧಾನ ಧ್ಯೇಯಂಗಳಲ್ಲೊಂದಾಗಿದ್ದ ವೈಷ್ಣವ ಧರ್ಮ-ಮಧ್ವಮತ ಪ್ರಸರಣ, ತತ್ವ ಭೂಮಿಕೆ ಮತ್ತೆ ವಿದ್ದು ಕಾಣಂತ್ತದೆ : ಶ್ರೀಹರಿಯೆ ಸರ್ವತಂತ್ರ ಸ್ವತಂತ್ರತ್ವ, ಇತರ ದೇವತೆಗಳು ಅವನ ಅಧೀನರೆಂಬುದಕ್ಕೆ ಒಂದು ಸುಳಾದಿಯ ಭಾಗವಿದು :

ಬೊಮ್ಮನೊಳಗೆ ಬೊಮ್ಮ ಶಿವನೊಳಗೆ ಶಿವರೂಪ
ರಮ್ಮೆಯರಸ ನೀನೆ ವಾಸವಾಗಿ
ಒಮ್ಮನದಲಿ ಅವರ ವಶವಾಗಿ ಸರ್ವದಾ
ಅಮ್ಮಮ್ಮಾ ವ್ಯಾಪಾರಗಳ ಮಾಡುವ
ಸುಮ್ಮನಸರಲ್ಲಿ ಶುಭಕರ್ಮವೆಸಗುವೆ
ಹಮ್ಮಿನವರಲ್ಲಿ ಅಶುಭಕರ್ಮ......

ಎಂದನ್ನುತ್ತ ಅರ್ಜುನನಿಗೆ ಶ್ರೀಕೃಷ್ಣ ಹೇಳಿದ ವಿಶ್ವವಿರಾಡ್ ಸ್ವರೂಪದ ದರ್ಶನವನ್ನು ಮಾಡಿಸುವ ಈ ರೂಪಾರಿ ವಿಧಾನ, ದ್ವಿತೀಯಾಕ್ಷರ ಪ್ರಾಸ ಬಳಕೆ ಅನನ್ಯ ಆದದ್ದು.

ವಿಜಯದಾಸರ ಭಾಗವತಪ್ರಜ್ಞೆ, ಪುರಾಣಪ್ರಜ್ಞೆ, ಭಕ್ತಿಭಾವ, ಮಿಗಿಲಾದದ್ದು ಹರಿದಾಸರು ಹೇಗಿರಬೇಕೆನ್ನಲು ''ಹರಿದಾಸ ಲಕ್ಷಣ ಸುಳಾದಿ'' ಎಂಬ ಒಂದು ಸುಳಾದಿಯನ್ನೆ ರಚಿಸಿದ್ದಾರೆ. ಹರಿಯ ನೆನೆದಂದು ಶುಭವಂಗಳ, ಹರಿಯ ನೆನೆಸದ ದಿವಸ ಅವಮಂಗಳ : ಅದೇ ಅವರ ವೈಶಿಷ್ಟ್ಯ :

''ತೊಟ್ಟಿಲೊಳಗೆ ಇಪ್ಪ ಶಿಶುವಿನ ಮೊಗನೋಡಿ ।
ತುಷ್ಟನಾಗಿ ಜನನಿ ತೆಗದೆತ್ತಿ ಮೊಲೆಯ ।
ಕೊಟ್ಟು ಸಂತೈಸುವ ತೆರ'' ವಿಜಯವಿಠ್ಠಲನ ಮಾತೃವಾತ್ಸಲ್ಯ. ಅದನ್ನು

ಅವರು ಸರಳ ಕನ್ನಡದಲ್ಲಿ ತಂದಿದಾರೆ. ಹೀಗೆಯೇ ದಾಸರು, ಹಾಡಿರುವ "ವಿಗ್ರಹವನು ನಿಲಿಸೊ ವೆಂಕಟ", ಕೃತಿ "ಈಸೊಬಗು ಇನ್ನಾವ ಕ್ಷೇತ್ರದಲಿ ಕಾಣೆ" ಎಂಬುದು ಪುರಂದರರ "ಈಪರಿಯ ಸೊಬಗಾದ ದೇವರೊಳು ಕಾಣೆ" ಎಂಬ ಕೀರ್ತನೆಯನ್ನೆ ಹೋಲುವುದಾದರೂ, ಅಲ್ಲಿ ಸ್ವಂತಿಕೆಯಿದೆ. ತಿರುಪತಿಯ ಯಾತ್ರೆ, ವಿಜಯದಾಸರು ಅದೆಷ್ಟು ಸಲ ಮಾಡಿದರೊ ; ಒಮ್ಮೆ ಬ್ರಹ್ಮೋತ್ಸವದ ಸಮಯ ಸ್ವಾಮಿಯ ಸೇವೆ ದೊರೆಯಲಿಲ್ಲ. ಅವರು ಹಾಡಿದ್ದು ಯಾರನ್ನು ಕುರಿತು :

"ನಿನ್ನ ದರುಶನಕೆ ಬಂದವನಲ್ಲವೋ ಮಹಾ
ಪುಣ್ಯವಂತರ ದಿವ್ಯಚರಣ ನೋಡಲು ಬಂದೆ" ಇದು ಹರಿದಾಸ ಭಾವ :

"ಸ್ವಾಮಿಯ ಹಿರಿಮೆ ಹಾಗೂ ಹರಿದಾಸ ಗರಿಮೆ ಏಕ ಕಾಲದಲ್ಲಿ ಕೊಂಡಾಡುವ ಈ ಕೀರ್ತನೆಯ ಸರಣಿ ಸ್ವಾರಸ್ಯವಾಗಿದೆ."

"ಎಲ್ಲೆಲ್ಲಿಯೂ ನಿನ್ನ ವ್ಯಾಪ್ತಿತಾನಾಗಿರಲು । ಇಲ್ಲಿಗೇ ಬರುವ ಕಾರಣವ್ಯಾವುದೊ ।
ಸೊಲ್ಲಿಗೇ ಸ್ತಂಭದಲಿ ತೋರಿದ ಮಹಾಮಹಿಮ । ಎಲ್ಲಿಲ್ಲವೋ ನೀನು ಬಲ್ಲ
ಭಕುತರಿಗೆ ॥"

ಇದಲ್ಲದೆ, ತಿರುಪತಿಯ ಶ್ರೀನಿವಾಸನನ್ನು ಕುರಿತ ಈ ನಿಂದಾಸ್ತುತಿ ಪ್ರಸಿದ್ಧವಾದದ್ದು

ಜಯಮಂಗಳಂ ನಿತ್ಯ ಶುಭಮಂಗಳಂ
ತೊಳಸದಕ್ಕಿಯ ತಿಂಬ ಕಿಲುಬು ತಳಿಗೆಯಲುಂಬ
ಇಲ್ಲ ತನಗೆಂದೆಂಬ ಸುಳ್ಳು ಮಾತಾಡಿದರೆ
ಎಲ್ಲವನು ಕಸುಕೊಂಬ ಕಳ್ಳದೊರೆಗೆ...... ॥೧॥
ತನ್ನ ನೋಡುವನೆಂದು ಮುನ್ನೂರ್ಗಾವುದ ಬಂದು
ತನ್ನ ಗುಡಿಯ ಪೊಕ್ಕ ಜನರಿಗೆಲ್ಲ
ಹೊನ್ನು ಹಣಕಾಸು ಕೊಂಡು ತನ್ನ ದರುಶನ ಕೊಡದೆ
ಬೆನ್ನೊಡೆಯ ಹೊಡೆಸುವ ಅನ್ಯಾಯಕಾರಿಗೆ...... ॥೨॥

ದಾಸರು ತರುವ ಪ್ರಾಸ, ರಮ್ಮೆ, ಅನಿಪಮ್ಮ, ಇಮ್ಮಹಿಪೇರು, ಈ ಪದಪ್ರಯೋಗಗಳು ಜಾನಪದ ಧಾಟಿಯನ್ನು ಹೋಲುತ್ತವೆ. ಅಲ್ಲದೆ, "ಭೀಮ ಶಾಮಕಾಮಿನಿಯಾದನು" ಕೃತಿ, ವಾದಿರಾಜರ "ಭೀಮಸೇನಕಾಮಿನಿಯಾದನು" ಎಂಬ ಕೃತಿ ಹೋಲುವಂತಿದೆ.

ವಿಜಯದಾಸರ ಹುಟ್ಟಿದ ವ್ಯಾಖ್ಯೆ, ಹೊಲೆಯ ಸುಳಾದಿ, ನಿಜವಾಗಿಯೂ ಅವರಿಗೆ ಬ್ರಾಹ್ಮಣೇತರರಲ್ಲಿ ಆ ಮನೋಭಾವವಿತ್ತೆ ಎಂದು ಪ್ರಶ್ನೆ ಮೂಡಿಸುತಾತು.

"ಹೊಲೆಯನಾವನೊ ಈ ಕಲಿಯುಗದೊಳಗೆ ನ !

ಸ್ಥಲವಾಗಿ ತಿಳಿವುದು ಸುಲಭ ಮಾನವರು" ಎಂದು ಆರಂಭ ಆಗುವ ಈ ನಿಡಿದಾದ ಸುಳಾದಿ, ನಿತ್ಯ ನೈಮಿತ್ತಿಕ ನಿಷ್ಠೆಯಿಂದ ಮಾಡದ, ಅಪಕೀರ್ತಿವೃತ್ತ, ಹೀಗೆಲ್ಲ ಪಟ್ಟಿ ಮಾಡಿ ಕೊನೆಗೆ "ಅಸುರಾರಿ ವಿಜಯವಿಠಲನ ದೈವವೆಂದು ಕಪಲದಿ ಹಾಡಿ ಪಾಡದವ ಹೊಲೆಯ"ನೆಂದಿದ್ದಾರೆ. ಇಲ್ಲಿ ಅಂಥ ಸಂಧಾರಣಾ ಮನೋಧರ್ಮ ಕಾಣದು. ಕಲ್ಲಿನ ಮಹಿಮೆ ಕುರಿತು ದಾಸರು ಹಾಡಿರುವ ಕೀರ್ತನೆ, "ಕಲ್ಲಿನಿಂದ ಸರ್ವಫಲ ಬಾಹುದೊ" ಎಂದಾರಂಭ ಆಗುತ್ತದೆ. ಇಲ್ಲಿ ಸ್ವಾರಸ್ಯದ ಜತೆಗೆ ಪುರಾಣ ಪ್ರಜ್ಞೆಯೂ ಇದೆ. ಕೊನೆಗೆ "ಕಲ್ಲೆನುಮವೀಕ್ಷಿಸದೆ ಕಾಲ ಕಾಲದಿ ನಿಮ್ಮ. ಕಲ್ಲು ಮನಸನು ಬಿಟ್ಟು ಪೂಜೆ ಮಾಡಿ" ಆಗ ಕಲ್ಲಿನಂಥ ಸ್ಥಿರ ಮುಕುತಿ ಪದವಿ ವಿಜಯವಿಠಲ ಕೊಡುವನೆಂದು ಸಾರುತ್ತಾರೆ.

ವಿಜಯದಾಸರ ಕ್ಷೇತ್ರ ದರ್ಶನ ಕುರಿತ ಸುಳಾದಿಗಳೆ ಸಾಕಷ್ಟಿವೆ. ಅದರಲ್ಲಂತೂ ವೆಂಕಟೇಶ ದೇವರ ಸುಳಾದಿಗಳೆ ಹೆಚ್ಚು. "ಧ್ವಜವಜ್ರಾಂಕುಶ ರೇಖೆಯಿಂದೊಪ್ಪುವ ಚರಣ" ಎಂಬ ವೆಂಕಟೇಶನ ಪಾದ ವರ್ಣನೆಯ ಪೈಖರಿ ಸರಳ, ಸುಂದರವಾಗಿದೆ. ಏಕದೇವೋಪಾಸನೆಯ ನಿಷ್ಠೆ, ಇತರ ಊರದೇವತೆಗಳ ಪೂಜೆ ಏಕೆಂಬ ಮನೋಜ್ಞವಾಗಿದೆ :

> ಬ್ಯಾಸತ್ತು ಬೇಲಿಯ ಮೇಲೆ ಹಾಸಿ ಒರಗಿದಂತೆ
> ಕಾಣಗಾಗಿ ಪೋಗಿ ಕಾಲು ಮುರಿದು ಬಿದ್ದಂತೆ

ಉಳಿದ ದೈವಗಳ ಸೇವೆ ಹೀಗೆ

ವಿಜಯದಾಸರ ಕೃತಿಗಳಿಂದ ಒಟ್ಟಾರೆ ಹಾಸುಹೊಕ್ಕಾಗಿ ಕಂಡು ಬರುವುದು ಅವರ ಹರಿಸುಹಿಶಿ ಪ್ರತಿಪಾದನೆ, ಹರಿದಾಸ ಮಹಿಮೆ ಸಾರುವಿಕೆ, ಮಧ್ವಮತ ನಿಷ್ಠೆ, ಅದ್ವೈತ ಖಂಡನ, ಇದು ದಾಸಕೂಟ ಬೆಳಸಿ, ವೈಷ್ಣವ ಧರ್ಮಪ್ರಸಾರಕ್ಕೆ ಚೇತನ ನೀಡಿತೆ ವಿನಾ ಕನಕನಂಥ ಸಮಾಜ ವಿಡಂಬನ ದೃಷ್ಟಿ, ಕಾಣಬರುವುದಿಲ್ಲ. ಇದಕ್ಕೆ ಕಾರಣ ವಿಜಯದಾಸರ ತೀವ್ರ ಮಧ್ವನಿಷ್ಠೆ, ಸ್ವಮತಾಭಿಮಾನ, ಎಂದು ಹೇಳಬಹುದು ಅಥವಾ ಆಗಿನ ಕಾಲಕ್ಕೆ ಧರ್ಮದ ಮೇಲಿದ್ದ ಮುಂತ್ತಿಗೆಯೂ ಕಾರಣ ಆಗಿದ್ದಿತು. ಒಟ್ಟಾರೆ ವಿಜಯದಾಸರ ಕೃತಿಗಳಲ್ಲಿ ಆಧ್ಯಾತ್ಮಿಕತೆ, ಅಪರೋಕ್ಷಾನುಭವ, ಸಿದ್ಧಿ, ಸಂದೇಶ, ಮಡುಗಟ್ಟಿದೆ. ದಾಸಸಾಹಿತ್ಯದ ಮೌಲ್ಯವನ್ನು ಹೆಚ್ಚಿಸಿ ಹರಿದಾಸ ಪರಂಪರೆ, ಹರಿದಾಸಕೂಟವನ್ನು ಸಂಘಟಿಸಿದ ಇವರ ಪ್ರಯತ್ನ ಇನ್ನೂ ಮುಂದುವರೆಯಿತು. ವಿಜಯದಾಸರ ಮೊರೆಯೆ ಎಲ್ಲ ಭಕ್ತರ ಮೊರೆಯಾಗುತ್ತದೆ.

> "ಚರಣ ಹೊಳೆಯಾಗದೆ ಭವವೆಂಬ ವಾರಿಧಿ
> ಕರುಣಾಳು ವಿಜಯ ವಿಠಲ ನಿನ್ನ ದಯವಾಗ"

ಈ ನಿಟ್ಟಿನಿಂದ ವಿಜಯದಾಸರು ಈ ಮೊದಲು ಶ್ಲೋಕದಲ್ಲಿ ತಿಳಿಸಿದಂತೆ ದಾಸಸಾಹಿತ್ಯದ ದ್ವಿತೀಯ ಘಟ್ಟದ ಪ್ರಮುಖ ಪ್ರತಿನಿಧಿಗಳಾಗುತ್ತಾರೆ. ಹಾಗೂ ದಾಸಕೂಟದ ಸಂಘಟಕರೆನಿಸಿದ್ದಾರೆ.

## ಪ್ರಸನ್ನ ವೆಂಕಟದಾಸರು (ಕ್ರಿ. ಶ. ೧೬೮೦–೧೭೫೨)

(ಅಂಕಿತ : ಪ್ರಸನ್ನ ವೆಂಕಟಕೃಷ್ಣ)

ಪ್ರಸನ್ನ ವೆಂಕಟದಾಸರು, ವಿಜಯದಾಸರ ಕಾಲದಲ್ಲಿದ್ದ ಹರಿದಾಸರು. ಒಬ್ಬರೇ ಇದ್ದು ತಮ್ಮ ಪಾಡಿಗೆ ತಾವು ಬಾಗಲಕೋಟೆಯಲ್ಲಿ ಬದುಕಿಬಾಳಿದರು. ಇವರ ಜನ್ಮಕಾಲ ಖಚಿತ ಆಗಿತಿಳಿದಿಲ್ಲ, ಪ್ರಸನ್ನ ವೆಂಕಟದಾಸರ ಕೃತಿಗಳು, ಅವರ ವಂಶದವರಿಗೆ ಸಂಬಂಧಿಸಿದ ಆಧಾರಗಳಿಂದ, ಕ್ರಿ.ಶ. ೧೬೮೦ ರಿಂದ ೧೭೫೨ ರವರೆಗೆ ಎಂದು ನಿರ್ಧಾರ ಆಗಿದೆ. ತಿರುಪತಿಯ ಶ್ರೀನಿವಾಸನಿಂದಲೆ ಅನುಗ್ರಹೀತವಾದ ಶ್ರೀವೆಂಕಟದಾಸರ ಬಗ್ಗೆ ಹೆಚ್ಚು ವಿವರ ದೊರೆತಿಲ್ಲವೆನ್ನಬಹುದು.

ಪ್ರಸನ್ನರ ಸಾಹಿತ್ಯಶಕ್ತಿ, ಕೃತಿ ರಚನಾ ಕುಶಲತೆಗೊಂದು ಸಣ್ಣ ಉದಾಹರಣೆ ಅವರು ಒಮ್ಮೆ ಪೇಶ್ವೆ ಬಾಜಿರಾಯರ ಕರಣೀಕರನ್ನು ಗೇಲಿ ಮಾಡಿದ ಪ್ರಸಂಗ. ಕರಣೀಕ ಕಿವಿಗೆ ಸಿಕ್ಕಿಸಿದ್ದ ಲೇಖನಿ ಕಂಡದಾಸರು ''ಇದೇನೀ ಕರ್ಣ ಭೂಷಣ''ವೆಂದರೆ ಆತ, ತನ್ನ ಶೀಘ್ರಬರಹದ ಗುರುತಾಗಿ ಪೇಷ್ವೆಯರಿತ್ತ ಬಹುಮಾನವೆಂದು ನುಡಿದ. ದಾಸರು ಒಡನೆಯೆ ''ಬರಕೊ'' ಎಂದು ಹಾಡಿದರು :

ಎಂಥಾ ಶ್ರೀಮಂತನೆಂತಾನು !
ಶ್ರೀಕಾಂತೆಯ ಕಾಂತಾ ॥ಪ॥
ಬಮ್ಮನು ಹೆಮ್ಮಗ ಮೊಮ್ಮ ಮೃಡಮ್ಮರಿ !
ಮೊಮ್ಮ ಶಚಿಮ್ಮ ಸ್ವರಮ್ಮ ಪರಮ್ಮ !
ಅಮ್ಮರ ಸಮ್ಮೋಹ ನಿಮ್ಮಣುಗಮ್ಮದು !
ನಮ್ಮೋನಮ್ಮ ಪರಮ್ಮ ಮಹಿಮ್ಮ ॥ ಕರಣಿಕ ಬರೆಯಲಾರದೆ ಬೆವತು ನೀರಾದ.

ಪ್ರಸನ್ನ ವೆಂಕಟದಾಸರು ಇತರ ಹರಿದಾಸರಂತೆ ದೇಶ ಪರ್ಯಟನ ಮಾಡಲಿಲ್ಲವೆಂದು ಅವರ ಬದುಕಿನ ಎಳೆಗಳಿಂದ ಹಾಗೂ ಕೃತಿಗಳಿಂದ ತಿಳಿದು ಬರುತ್ತದೆ. ದೂರದ ವೃಂದಾವನಕ್ಕೆ ಒಮ್ಮೆ ಹೋಗಿ ಬಂದುದಕ್ಕೆ ಒಂದು ಕೀರ್ತನೆ ದಾಖಲಿಸುತ್ತದೆ. ಮಂತ್ರಾಲಯದ ಗುರುಗಳ ಬಗ್ಗೆ ಕೀರ್ತನೆಯುಂಟು. ಕೀರ್ತನೆ ಹೊರತಾಗಿ ಪ್ರಸನ್ನರ ಇತರ ವಿಶಿಷ್ಟ ರಚನೆಗಳಿವು

1. ಭಾಗವತ.
2. ಸಮಸ್ತನಾಮ ಮಣಿಗಣ ಷಟ್‌ಚರಣ ಪದ್ಯಮಾಲೆ.

3. ನಾರದರು ಕೊರವಂಜಿ ವೇಷ ಧರಿಸಿದ ಕತೆ
4. ನವವಿಧ ಭಕ್ತಿ ಕೃತಿಗಳು.
5. ಶ್ರೀಕೃಷ್ಣ ಪಾರಿಜಾತ ಪ್ರಸಂಗ.
6. ಕೋಲುಪದ
7. ನಾರಾಯಣಪಂಜರ
8. ದಾಸರು ಮಾಡಿದ್ದ ಕೆಲವಾರು ಟಿಪ್ಪಣಿ

ಮಹಾಭಾರತಸಾರ ನಿರ್ಣಯ ಟೀಕಾ, ಭಾಗವತ ಪ್ರಥಮ-ಚತುರ್ಥ, ಷಷ್ಠ ಸ್ಕಂಧಗಳ ಟಿಪ್ಪಣಿ, ಬ್ರಹ್ಮಸೂತ್ರಭಾಷ್ಯ, ಅಥರ್ವಣವೇದ ಟೀಕಾ, ತರ್ಕ ಸಂಗ್ರಹ ದೀಪಿಕಾ, ಹಾಗೂ ದಾಸರು ತಾವೆ ಬರೆದ 2000 ಗೀತಾ ಪ್ರತಿಗಳು-ದಾನವೀಯ ಲೆಂದು.

ಪ್ರಸನ್ನ ವೆಂಕಟದಾಸರು ತಮ್ಮ ಕೊನೆಯ ದಿನಗಳನ್ನು ಆಗ್ಗೆ ದಕ್ಷಿಣ ಕಾಶಿ ಎಂದೆನಿಸಿಕೊಂಡಿದ್ದ ಬಾದಾಮಿಯಲ್ಲಿ ಕಳೆದರೆಂದು ಪ್ರತೀತಿ. ಅವರು ವೈಕುಂಠ ವಾಸಿಗಳಾದುದು, ಕ್ರಿ. ಶ. ೧೭೫೨ನೆ ಆಂಗೀರಸ ಸಂವತ್ಸರ ಭಾದ್ರಪದ ಶುದ್ಧ ಏಕಾದಶಿ ಮಧ್ಯರಾತ್ರಿ. ಒಂದು ಐತಿಹ್ಯವೆಂದರೆ, ಪ್ರಸನ್ನ ವೆಂಕಟರಿಗೆ ಅವರ ಅಂತ್ಯ ಕಾಲದಲ್ಲಿ ಶ್ರೀಹರಿಯು ಅವರ ಉಪಾಸ್ಯದೇವತೆಯಾಗಿದ್ದ ಬಾಲಕೃಷ್ಣನ ರೂಪದಲ್ಲಿ ದರ್ಶನವಿತ್ತದ್ದು.

ದಾರೊ ! ನೀ ಚಿನ್ನದಾರೊ ! ರಾತ್ರಿಯೊಳೆಮ್ಮಗಾರಕೆ ಬಂದಿ ॥ಪ॥
......ಇಕ್ಕಿದ ಕದಗಳೆಕ್ಕ್ಯಾವೊ ! ನಿದ್ರೆ ! ಉಕ್ಕೇರಿ ಕಣ್ಣು ಮುಚ್ಚ್ಯಾವೊ !
ನಮ್ಮ ತಕ್ಕೈಸುವಂತೆ ನೀಕಲ್ಕಿ ! ಚಿಕ್ಕಮಕ್ಕಳಾಟ ವಿದಲ್ಲೊ ಚಲುವಾ ॥೧॥

ಈ ಸಾಲುಗಳಲ್ಲಿ ದಾಸರು ಕಂಡ ಚಿಣ್ಣ ಕೃಷ್ಣನ ರೂಪ ಚಿತ್ರಿತವಾಗಿದೆ. ದಾಸರದು ಅನೇಕ ಭಕ್ತಿನಿರ್ಭರ ಕೀರ್ತನೆ, ವೇಣುಗೀತೆ-ಸುಳಾದಿ ರಚನೆಗಳಿವೆ. ಅದರಲ್ಲೂ "ವಂಕ್ಯಾಲಯದ ಶ್ರೀರಾಘವೇಂದ್ರರನ್ನು ಕುರಿತ ಕೃತಿ, "ವಿಠಲ ಪಿಡಿ ಎನ್ನಕೈಯ್ಯಾ", "ದಯ ಮಾಡು ದಯ ಮಾಡು ಶ್ರೀನಿವಾಸಾ", "ಹರಿಯೆ ಎನಗಾರು ಗತಿಯೋ ನೀನಲ್ಲದೆ" ಕೃಷ್ಣಲೀಲೆ, ಪುರಂದರರ ಕೃತಿ ರಚನೆ ಹೋಲುವ "ಆನೆ ಬಂತಾನೆ ಬಂತಮ್ಮ", (ಆನೆ ಬಂದಿತಮ್ಮ ಮರಿಯಾನೆ ಬಂದಿತಮ್ಮ-ಪುರಂದರರ ಕೃತಿ ತುಂಬ ಪ್ರಿಯ ಆದವು. ಕಾವ್ಯಮೌಲ್ಯ, ಸಾಹಿತ್ಯಕಮೌಲ್ಯ, ಒಳಗೊಂಡಮೂಲ ದಿನಬಳಕೆ ಭಾಷೆಯನ್ನು ಬಳಸಿರುವ ಕನ್ನಡತನ ದಾಸರದ್ದು. ಅವರ ಭಾವತುಂಬಿದ ರಚನೆಗೆ ವೇಣುಗೀತದ ಒಂದು ಪದ್ಯ ಉದಾಹರಣೆ.

ಕುಂದ ಕುಸುಮ ಮಾಲೆ ತುಳಸಿ ಗಂಧ ನೀಲೋತ್ಪಲಗಾತ್ರ
ವೃಂದಗೋಧನ ರಕ್ಷಕ ನಂದನಿನ್ನ ಪುತ್ರ

ಅಂದು ಮಲಯಾಚಾನಿಲವ ಹೊಂದಿದ ಯಮುನಾತೀರದಲ್ಲಿ
ಮಂದ ಮಂದಗತಿಯ ಮಾಳ್ಪ ಸುಂದರ ನೇತ್ರ

ನಾರದರು ಕೊರವಂಜಿ ವೇಷಧರಿಸಿ, "ಜಗದ ಮೋಹಿನಿ" ಯಾಗಿ "ಅಡಿಗಡಿಗೆ ಝಣಿ ಝಣಿರೆಂದು, ನಡೆತಂದು ನಡೆತಂದೂ ನಡೆತಂದು, ಮಂದದಿರಾಜಬೀದಿಲಿನಿಂದಳಿಂತೆ" (ಜಯಂಪ್ರಜಕ್ಕೆ ನೀಜನ್ಮ ಶಧಿಕವು ಎಂಬ ಗೋಪೀಗೀತೆಯಂತೂಸಂಸ್ಕೃತದ ಕನ್ನಡೀ ಕರಣವಾಗಿದೆ. ಭ್ರಮರಗೀತೆಯು ಶ್ರೀಪಾದರಾಜರ ಭ್ರಮರಗೀತೆಯ ಸೆಳಲಿನಂತಿದೆ. 'ಕಾಮನಯ್ಯನ ಕಾಮಿನಿಯರ' ಎಂಬ 'ರಾಸಕ್ರೀಡೆ'ಯ ವರ್ಣನೆಯು ಒಂದು ಕವನ, ವೆಂಕಟದಾಸರ ಕವಿಹೃದಯ, ಕಾವ್ಯಪ್ರಜ್ಞೆಗೆ ನಿದರ್ಶನ

ಕರೆದ ಹಾಲು ಬಿಸುಟು ತಮ್ಮಯ
ತರಳರ್ಗೆ ಮೊಲೆಪಾಲ ಕೊಡದೆ
ಪರಿವೇಷಣವ ಮಾಡುತ ಬಿಟ್ಟರು
ಹರಿಯ ಕೊಳಲಧ್ವನಿಗೇಳಿ
ಕರವಲಯವ ಕಾಲಿಗಿಟ್ಟುಕೊಂಡು
ಚರಣಭೂಷಣ ಕೈಗೆ ಸಿಕ್ಕಿಸಿ
ಕರಣಕುಂಡಲನಾಸದಲಿಟ್ಟು
ಬರಿಯ ಮೂಗುತಿ ಕಿವಿಗಿಟ್ಟು

ಅವರ ಪ್ರಸಿದ್ಧ ಕೃತಿ "ಭಜಿಸಿ ಬದುಕಲೊ ಮಾನವ! ಅಜಭವೇಂದ್ರಾದಿಗಳು ಪೂಜಿಸುವ ಪಾದವನು" ಎಲ್ಲರೂ ಕೇಳಿರುವುದೆ.

ಹರಿದಾಸರಲ್ಲಿ ಸಾಮಾಜಿಕ ಪರಿಸ್ಥಿತಿಯ ವಿಶದವಾದ ಸುಳಿಹು ನೀಡುವವರಲ್ಲಿ ಕನಕ ದಾಸರು ಮಾನ್ಯರು. ಹಾಗೇ ಪ್ರಸನ್ನವೆಂಕಟರಲ್ಲಿ ರಾಜಕೀಯ ಪರಿಸ್ಥಿತಿಯ ಬಣ್ಣನೆ ಇದೆ. ಆಗ್ಗೆ ನಡೆಯುತ್ತಲಿದ್ದ ಯುದ್ಧ, ಸೇನೆಯ ಒಗ್ಗಿ, ಪಡುಗಗಳ್ಳರ ಸುಲಿಗೆ ಸಹ ಅವರ ಕೃತಿಗಳಲ್ಲಿ ಪ್ರಕಟ ಆಗುತ್ತವೆ.

ಇವಿಷ್ಟು ಕೀರ್ತನೆಗಳಾದರೆ. ಇತರ ಕೃತಿಗಳಲ್ಲಿ 'ನಾರಾಯಣ ಪಂಜರ' ಎಂಬುದು ನಾರಾಯಣನ ಸ್ತೋತ್ರ. ಭಾಗವತದಲ್ಲಿ ಪ್ರಸನ್ನರು ದಶಮಸ್ಕಂಧದ ಕೃಷ್ಣ ಲೀಲೆಯನ್ನಷ್ಟೆ ಆಯ್ದು ಕನ್ನಡಕ್ಕೆ ಅದೂ ಉತ್ತರ ಕರ್ನಾಟಕದ ಕನ್ನಡನುಡಿಯಲ್ಲಿ ತಂದಿದ್ದಾರೆ. ಈ ಕೆಲವಾರು ಅವರ ವಿಶಿಷ್ಟ ಕೊಡುಗೆಗಳಿಂದಾಗಿ, ಹರಿದಾಸಸಾಹಿತ್ಯ ದಲ್ಲಿ ಪ್ರಸನ್ನ ವೆಂಕಟದಾಸರ ಸ್ಥಾನ ಗಮನಾರ್ಹ.

## ಗೋಪಾಲದಾಸರು (೧೭೨೨-೧೭೬೨)

ವಿಜಯದಾಸರು ಕೈಗೊಂಡ, ಶಾಸ್ತ್ರನಿಷ್ಠೆಗಳನ್ನು ಅವರ ಶಿಷ್ಯರಾದ ಗೋಪಾಲ ದಾಸರು ಬೆಳಸಿದುದು ಹಾಗೂ ಹರಿದಾಸ ಸಾಹಿತ್ಯದ ದ್ವಿತೀಯ ಹಂತದಲ್ಲಿ ಪ್ರಮೇಯ

ಭಾಗವನ್ನೂ ಪುಷ್ಟಗೊಳಿಸಿದ್ದೆ ಇವರ ವೈಶಿಷ್ಟ್ಯ. ಜಗತ್ಸತ್ಯ, ಹರಿಪಾರಮ್ಯ, ಹರಿದಾಸ್ಯ ಭಾವ-ಪಂಚಭೇದ-ತಾರತಮ್ಯ ಇವುಗಳನ್ನು ಪ್ರತಿಪಾದಿಸುವ ವರ್ಣನೆ, ವೈರಾಗ್ಯ ನಿಷ್ಠೆಗೇ ಗೋಪಾಲದಾಸರು ಹೆಚ್ಚು ಮಹತ್ವ ನೀಡಿದುದು. ಅಂತೆಯೇ ಅವರ ಕೃತಿಗಳು ಶಾಸ್ತ್ರಕ್ಕೆ ಹೆಚ್ಚು ಒತ್ತು ನೀಡಿ ಶಾಸ್ತ್ರನಿಷ್ಠರ ಪ್ರೀತ್ಯಾದರಗಳಿಗೆ ಪಾತ್ರ ಆಗಿವೆ. ಈ ಹಿನ್ನೆಲೆಯಲ್ಲಿ ಗೋಪಾಲದಾಸರ ಬದುಕಿನೆಡೆಗೆ ನ್ನು ನಾವು ಗಮನಿಸಬೇಕಾಗುತ್ತದೆ.

ಗೋಪಾಲದಾಸರು "ಭಕ್ತಿಯಲಿ ಭಾಗಣ್ಣ"ನೆಂಬ ಹೆಸರಿನಿಂದ ಪ್ರಸಿದ್ಧರು. ಗಣಪತಿಯ ಅಂಶಸಂಭೂತರೆಂದೂ ಪ್ರತೀತ. ತಂದೆಯ ಮರಣದ ನಂತರ ಇದ್ದ ಆಸ್ತಿ ಕರಗಿತು. ತಾಯಿ, ಮಕ್ಕಳೊಂದಿಗೆ ಹತ್ತಿರದ ಸಂಕಾಪುರಕ್ಕೆ ಬಂದು, ಏಳು ವರ್ಷ ಅಲ್ಲಿದ್ದು ಅನಂತರ ಸನಿಹದ ಉತ್ತನೂರಿಗೆ ಬಂದಳು. ಭಾಗಣ್ಣ, ಮೊದ ಮೊದಲು ಪೆದ್ದನಂತೆ ಹೊರನೋಟಕ್ಕೆ ಕಂಡರೂ, ಧ್ಯಾನಪರವಶನಾದರೆ, ವೈರಾಗ್ಯಯುಕ್ತನಿದ್ದ. ಸಂಕಾಪುರದಲ್ಲಿದ್ದಾಗಲೇ ಅಲ್ಲಿಯ ಶ್ಯಾನುಭೋಗರ ನೆರವಿಂದ, ಭಾಗಣ್ಣನಿಗೆ ಉಪನಯನವಾಯಿತು. ಅಲ್ಲಿಂದ ಭಾಗಣ್ಣ ಗಾಯತ್ರಿ ಮಂತ್ರದ ಪುನಶ್ಚರಣೆ ಮಾಡಿ, ಸಾಧನೆ ನಡೆಸಿದ. ಅನಂತರ ಅವನ ಒಡಮೂಡಿದ ಜ್ಞಾನದ ಫಲವಾಗಿ, ಆತ ಜ್ಯೋತಿಷದಲ್ಲಿ ಪರಿಣತನಾದ, ಅದನ್ನೆ ಉದ್ಯೋಗ ಆಗಿಸಿಕೊಂಡ ಭಾಗಣ್ಣನ ಸದಾಚಾರ ಗದ್ವಾಲ್ ಸಂಸ್ಥಾನದ ಅರಸನಿಗೂ ಮುಟ್ಟಿತು. ದೊರೆ ಬಂದು, ಸನ್ಮಾನಿಸಿದ. ಕ್ರಮೇಣ ಕುಟುಂಬದ ಹಣಕಾಸು ಪರಿಸ್ಥಿತಿ ಸುಧಾರಿಸಿತು. ಸಂಕಾಪುರದಿಂದ ಉತ್ತನೂರಿಗೆ ಬಂದು ನೆಲಸಿಂತರು. ಆದಾಯ ಹೆಚ್ಚಿದಂತೆ, ಭಾಗಣ್ಣನ ಅತಿಥಿ ಸತ್ಕಾರವೂ ಹೆಚ್ಚಿತು. ಈ ನಡುವೆ ಶ್ರೀಲಿಂಗ ದೇಶದ ಕವಿಯೊಬ್ಬ "ಐಜಗೆ" ಬಂದು (ಒಂದು ಊರು) ತನ್ನ ವಿದ್ವತ್ತನ್ನು ಪ್ರದರ್ಶಿಸಿ, ಜಯಪತ್ರ ಕೊಡೆಂದು ಕೇಳಲಾಗಿ, ಜನರು ಆವನನ್ನು ಭಾಗಣ್ಣನ ಬಳಿಗೆ ಕರೆತಂದರೆಂದೂ, ನರಸ್ತುತಿಗಾಗಿ ಶಾರದೆಯನ್ನು ಬಳಸದೆ ಭಗವಂತನನ್ನು ಸ್ತುತಿಸುವ ಸಾಧನೆ ಮಾಡೆಂದೂ ಭಾಗಣ್ಣ ಹೇಳಿಕಳಿಸಿದನಂತೆ. ಈ ವೇಳೆಗಾಗಲೆ ಭಾಗಣ್ಣ "ವೆಂಕಟಕೃಷ್ಣ" ಎಂಬ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸಿ, ಹಾಡುತ್ತಿದ್ದು ಮುಂದೆ ಒಮ್ಮೆ ಕಾಶಿಗೆ ಹೋದಾಗ, ವಿಜಯದಾಸರ ಭೇಟಿ ಆಯಿತು. ವಿಜಯದಾಸರ ಹಿರಿಯತನ, ದಯಾಪರ ಮನಸ್ಸು, ಶಾಸ್ತ್ರನಿಷ್ಠೆ, ಹರಿದಾಸ್ಯಭಾವ, ಭಾಗಣ್ಣನ ಮನಸ್ಸನ್ನು ಸೆಳೆದವು. ಆವನು ಆವರ ಪ್ರಿಯ ಶಿಷ್ಯನಾದ, ವಿಜಯದಾಸರೆ ತನ್ನ ಸ್ವರೂಪೋದ್ಧಾರಕ ಗುರುಗಳೆಂದರಿತು, ಸೇವಿಸಿದ. ವಿಜಯವಿಠಲರು ಭಾಗಣ್ಣನಿಗೆ "ಗೋಪಾಲವಿಠಲ"ನೆಂಬ ಅಂಕಿತ ನೀಡಿದರು. ಅಂದಿನಿಂದ ಭಾಗಣ್ಣ, 'ಗೋಪಾಲದಾಸ'ರಾದರು. ವಿಜಯದಾಸರನ್ನು ಕುರಿತಂತೆ ಒಂದು ಕೃತಿಯನ್ನು ರಚಿಸಿದರು. ತಮ್ಮಂದಿರಿಗೆ ಗುರುಗೋಪಾಲ, ವರದಗೋಪಾಲ, ತಂದೆಗೋಪಾಲ ಎಂಬ ಅಂಕಿತ, ದೀಕ್ಷೆಯಿತ್ತವರು ಗೋಪಾಲದಾಸರೆ. ದಾಸಕೂಟ ಹೀಗೆ ಮುಂದರಿಯಿತು. ಗೋಪಾಲದಾಸರು ತಮ್ಮ ತಮ್ಮಂದಿರಿಬ್ಬರ ಸಹಿತ ರಾಯಚೂರಿಗೆ ಬಂದಾಗ, ಅಲ್ಲಿದ್ದ ಉತ್ತರಾಧಿ ಮಠದ ಸತ್ಯಬೋಧತೀರ್ಥರು ಅವರನ್ನು ಕರೆದು, ಮೂವರೂ ಒಂದು ಕೀರ್ತನೆಯನ್ನು

ರಚಿಸಿರೆಂದು ತಿಳಿಸಿದರಂತೆ. ಮೂವರನ್ನೂ ಬೇರೆ ಬೇರೆ ಕೋಣೆಗಳಲ್ಲಿ ಕುಳ್ಳಿರಿಸಿದರು. "ಮಾರ ಮಂದಳನ್ನ ಸಮೀರ" ಎಂಬ ಕೃತಿ ಮೂವರೂ ಸೇರಿ ಒಬ್ಬೊಬ್ಬರು ಒಂದೊಂದು ನುಡಿ ಹಾಡಿ, ಅನಂತರ ಒಟ್ಟು ಫಲಶ್ರುತಿ ಹಾಡಿದರು. ಸತ್ಯಬೋಧರನ್ನು ಕುರಿತು ರಚಿಸಿರುವ ಕೀರ್ತನೆಯಿದು. ಅಶಂಕವಿತ್ವ ಸಾಮರ್ಥ್ಯ ಗೋಪಾಲದಾಸರಲ್ಲಿ ತುಂಬ. ಇದೊಂದು ಘಟ್ಟ.

ಎರಡನೆಯದು, ಗೋಪಾಲದಾಸರು ಅವರ ತಮ್ಮಂದಿರ ಹಾಗೂ ಶಿಷ್ಯರೊಡ ಗೂಡಿ ನಡೆಸುತ್ತಿದ್ದ ಕ್ಷೇತ್ರ ಸಂದರ್ಶನ. ತಿರುಪತಿಯ ಬ್ರಹ್ಮೋತ್ಸವಕ್ಕಂತೂ ಪ್ರತಿ ವರ್ಷ ಹೋಗಿ ಬರುತ್ತಿದ್ದರಂತೆ. ಹಂಪೆ, ಶ್ರೀಮುಷ್ಣ, ವರಾಹ ಕ್ಷೇತ್ರ ದರ್ಶನ ಅವರ ಪದಗಳಿಂದ ಆಗುತ್ತದೆ. ಇಷ್ಟಾದರೂ, ಹರಿದಾಸ ಪರಂಪರೆಯ ಪ್ರಮುಖ ಕೇಂದ್ರ ಗಳಲ್ಲಿ ಒಂದಾದ ಪಂಢರಾಪುರಕ್ಕೆ ಮಾತ್ರ ಹೋಗಿರಲಿಲ್ಲ. ಒಮ್ಮೆ ತುಳಸಿ ಸಂಗ್ರಹಣೆ ಯಲ್ಲಿರುವಾಗ ಕುದುರೆಯೇರಿದ ರಾಹುತನೊಬ್ಬ ದಾಸರ ಬಳಿ ಬಂದು, ಮರಾಠಿಯಲ್ಲಿ "ಅಲೆನಾಹಿ" (ಬರಲಿಲ್ಲವೇನು?) ಎಂದು ಪ್ರಶ್ನೆ ಕೇಳಿ, ಅದೃಶ್ಯನಾದನಂತೆ ಗೋಪಾಲ ದಾಸರಿಗಾದ ಅಲೌಕಿಕ ಸ್ವಾಗತವದು.

ಅದನ್ನು ಅನುಭವಿಸಿದ, ದಾಸರು ಒಂದು ಸುಳಾದಿಯನ್ನೆ ಹಾಡಿದ್ದಾರೆ :

ನೀಲ ಕುದುರೆಯನ್ನೇರಿ ಶಾಲು ಟೊಂಕಕೆ ಸುತ್ತಿ
ಕಾಲುಕುಪ್ಪುಸತೊಟ್ಟು ಮೇಲೆ ಮೋಹನ್ನ ಹಾಕಿ
ಫಾಲ ಕಸ್ತೂರಿ ಇಟ್ಟು ಮೈಗೆ ಗಂಧವ ಪೂಸಿ
ಪಲಾಯನದಿ ಅಶ್ವವೇರಿ ಹಾರಾಡಿಸುತ್ತ
'ಅಲೆನಾಹಿ' ಎಂದು ಕೇಳಿದನಾತ ?
ಶರಣು ಪಂಢರಿರಾಯ ಗೋಪಾಲವಿಠಲ

ಎಂದು ಹಾಡಿ ಎಂದು ಪಂಢರಿಗೆಯ ಅಧಿದೈವವನನ್ನು ಕಂಡು ಬಂದರಂತೆ.

ಗೋಪಾಲದಾಸರು ಪಾಪ ಪ್ರಿಯರು ಹಾಗೂ ಮೊದಲೆ ಹೇಳಿದಂತೆ ಶಾಸ್ತ್ರ ವಿಚಾರ ತಿಳಿಸುವುದೆ ಇವರ ರಚನೆಗಳ ಧ್ಯೇಯ. ಭಕ್ತಿಮಾರ್ಗವನ್ನು ಅನುಸರಿಸುವ ಪ್ರತಿಯೊಬ್ಬ ಸಾಧಕನೂ ಅಪರೋಕ್ಷದನುಭವ ಪಡೆವನಕ ಕೆಲವು ರೀತಿಯ ಮನಸ್ಸಿನ ಆಂತರಿಕ ತೊಳಲಾಟ ಅನುಭವಿಸುತ್ತಾನೆ. ಇಲ್ಲಿ ಆತ್ಮನಿವೇದನೆ ಪ್ರಾಧಾನ್ಯ ಇದು ಗೋಪಾಲದಾಸರಲ್ಲೂ ಮೂಡಿದೆ. ಶ್ರೀಹರಿಯ ಸುಂದರ ವಿಗ್ರಹ ನೋಡಲಾಗದ ದೃಷ್ಟಿಮಾಂದ್ಯ, ಶ್ರೀಹರಿ ಕೀರ್ತನೆ ಕೇಳಲು ಸಾಧ್ಯ ಆಗದ ಕಿವುಡುತನ ಹೀಗೆ ಶರೀರಕ್ಕೆ ಒದಗಬಹುದಾದ ಅಂಗಾಂಗ ದೌರ್ಬಲ್ಯವನ್ನು ಗೋಪಾಲರಾಯರು ಬಿನ್ನವಿಸಿಕೊಂಬ ಬಗೆ ಹೊಸತು

ಆವ ರೋಗವೊ ಎನಗೆ ಧನ್ವಂತ್ರಿ
ಸಾವಧಾನಾದಿ ಕೈಯ ಪಿಡಿದು ನೀನೋಡಯ್ಯ ॥

ವಿಷಯಾಸಕ್ತಿಗಳಿಸುವ ಇಂದ್ರಿಯಗಳನ್ನು ವಿಮುಖವಾಗಿಸಿ, ಭವಭಂಜಕ. "ಜಗತನ ದೊಳ್ ಸುಖವಿಲ್ಲ ಒಲ್ಲೆ ಎಂದರೆ ನೀ ಹೊರೆಯಲ್ಲ" ಎಂದು ಬೇಡುತ್ತಾರೆ. ಗೋಪಾಲ ದಾಸರ ರೂಪಕರಚನೆಗೆ ಎರಡು ಕೀರ್ತನೆ ಸಾಲುಗಳನ್ನು ಉದಹರಿಸಬಹುದು :

"ಕಮಲಮುಖಿಯೆ ಕಮಲಾಲಯೆ ಕಮಲೆ ॥ಪ॥
ಕಮಲಾಕ್ಷಿಯೆ ಕೋರುವೆ

ಕಮಲನಾಭನ ಪಾದಕಮಲಯುಗಳ ಮಧುಪೆ
ಕಮಲ ಜನನಿಯೆ ಕಮಲಮಿತ್ರೆ ಸುಪ್ರಭೆ ॥ಅ. ಪ.॥

ಈ ಪರಿಯ ಅಧಿಕಾರ ಒಲ್ಲೆ ನಾನು ॥ಪ॥
ಶ್ರೀಪತಿಯೆ ನೀನೊಲಿದು ಏನುಕೊಟ್ಟದೆ ಸಾಕು
ಚಿರಕಾಲ ನಿನ್ನ ಕಾದು ತಿರುಗಿದುದಕೆ ನೀನು
ಕರುಣದಿಂದಲಿ ರಚಿಸಿ ಈ ದುರ್ಗದಿ
ಇರವೇಳಿದುದಕೆ ನಾ ಹೊಕ್ಕು ನೋಡಿದೆ ಒಳಗೆ
ಪುರುಳುಲೇಶವು ಕಾಣೆ ಕರೆ ಕರೆಯು ಮೇಲೆ॥

ಇಲ್ಲಿ ಕೊಟ್ಟರಿಂವ ಕೋಟೆ, ಅನಂತರದ ಸಾಲುಗಳಲ್ಲಿ ಬರುವ ರೂಪಕಗಳು (ಅರಿಷಡ್ವರ್ಗ, ಇತ್ಯಾದಿ) ಮನಸೆಳೆಯುತ್ತವೆ.

ದಾಸ್ಯಭಾವದ ಭಕ್ತಿ ಗೋಪಾಲರಿಗೆ ಹೆಚ್ಚು ಪ್ರಿಯ.

"ನಿನ್ನ ದಾಸರ ದ್ವಾರವನ್ನು ಕಾಯ್ವರಮನೆ
ಕುನ್ನಿ ಎಂದೆನಿಸೆನ್ನ ಗೋಪಾಲವಿಠಲ"

ಎಂಬಲ್ಲಿ ವಿನಯ. ಕೃಷ್ಣನ ಬಾಲಕ ರೂಪು ಹೊಗಳುವ ಈ ಪರಿ ಒಂದು ಭಾವ ಗೀತೆಯೆ :

"ಆಕಳಕಾಯ್ವ ಗೋಕುಲದಾಸನು
ಕೊಳಲನೂದುತ್ತ ಕಿಲಕಿಲನಗುತ
ಗಿಳಿ ಚಕೋರವು ಅಳಿ ಮಯೂರಾ
ವಳಿ ಚಳಿಯಲ್ಲಿ ಸುಳಿಯಲು
ಕೃಷ್ಣ ನಲಿವ ನಿಂದವ ವೇಳಲಳವಲ್ಲ"

ಇದಲ್ಲದೆ ಸ್ವಮತನಿಷ್ಠೆ ಪ್ರತಿಪಾದಕ, ಅದ್ವೈತ ಖಂಡನ ಕೃತಿರಚನೆಯೂ ಇವೆ. ಇದು ಎಲ್ಲ ಹರಿದಾಸರಲ್ಲೂ ಇದ್ದದ್ದೆ.

"ಕರವ ಮುಗಿದ ಮುಖ್ಯಪ್ರಾಣ" ಎಂಬ ಕೀರ್ತನೆಯಲ್ಲಿ ಬರುವ ಸಾಲು ಇದು :

"ಜೀವೇಶರೈಕ್ಯವು ಜಗತು ಮಿಥ್ಯೆಯೆಂದು
ಈವಿಧ ಪೇಳುವ ಮಾಯಿಗಳಿಳಿಯೆಂದು......

ಇಲ್ಲಿ ಮಾತ್ರವು ಭೇದ ಅಲ್ಲಿ ಒಂದೆ ಎಂಬೊ
ಕ್ಷುಲ್ಲಕರ ಹಿಡಿದಲ್ಲು ಮುರಿಯೆಂದು.......... ಹೀಗೆ

ಸಾಮಾಜಿಕ ಪ್ರಜ್ಞೆ ಗೋಪಾಲವಿಠಲರಲ್ಲಿ ವಿರಳ. ಮಧ್ವತತ್ವ ಪ್ರಸಾರವೆ ಅವರ ಧ್ಯೇಯ. "ನಂಬಿನೀ ಕೆಡದಿರು ಇಹಲೋಕ ಸುಖವೆಂಬ ಕಂಬಳಿಯೊಳು ಬಂಠಿ", ಮಂಡಿ, ಡಂಭಾಚಾರಿಗಳನ್ನು ಖಂಡಿಸುವ 'ಮಂಡಿ ಸುಳಾದಿ', "ವೈರಾಗ್ಯ ಸುಳಾದಿ" ಎಂಬಲ್ಲಿ ಸ್ವಲ್ಪ ಪ್ರಾರವಿದೆಯಷ್ಟೆ. ಇಲ್ಲೂ ಕ್ರಾಂತದರ್ಶಿತ್ವವಿಲ್ಲ.

ಮಡಿಮಾಡಬೇಕು ಒಳ್ಳೆನಡತೆ ಕಲಿಯಬೇಕು
ದೇಹ ಮುಗ್ಗುತ ನೀರ ಮಡುವಿನೊಳಗೆ ಪೋಗಿ
ಬುಡುಗುಳಿಯಂತೆ ಮಿಂದು ಗುಡುಗುಡುಗುಟ್ಟುಗಲಿ'

ಎಂಬಲ್ಲಿ ಪದ ಬಂಧ ಕಾಣಬಹುದು.

ಗೋಪಾಲದಾಸರು ಎಸಗಿದ ಮಹತ್ಕಾರ್ಯ, ಶ್ರೀನಿವಾಸಾಚಾರ್ಯರನ್ನು ಉದ್ಧರಿಸಿದ ಪರಿ. ಆಚಾರ್ಯರು ಸಂಸ್ಕೃತ ವಿದ್ವಾಂಸರು (ಮುಂದೆ ಜಗನ್ನಾಥದಾಸರೆಂದು ಪ್ರಖ್ಯಾತ ರಾದವರು.) ವಿಜಯದಾಸರನ್ನು ನಿಂದಿಸಿದುದರಿಂದ ಬಂದ ಹೊಟ್ಟೆನೋವಿಗೆ ಗೋಪಾಲ ದಾಸರು ಜೋಳದ ಭಕ್ಕರಿಗಳನ್ನು ಅಭಿಮಂತ್ರಿಸಿ, ತಿನ್ನಲುಹೇಳಿದರಂತೆ–ಶ್ರೀನಿವಾಸಾ ಚಾರ್ಯರ ವ್ಯಾಧಿ ಗುಣ ಆಯಿತು. ಪ್ರತಿ ವರುಷದಂತೆ ಗೋಪಾಲದಾಸರು ತಿರುಪತಿಗೆ ಬ್ರಹ್ಮೋತ್ಸವಕ್ಕೆಂದು ಹೊರಟಾಗ ಶ್ರೀನಿವಾಸಾಚಾರ್ಯರೂ ಜತೆಗೆ ಹೊರಟರು. ಕಾಲು ನಡಿಗೆಯಲ್ಲಿ ಬೆಟ್ಟ ಹತ್ತಿದ ಆಯಾಸವೊ ಏನೊ ಶ್ರೀನಿವಾಸಚಾರ್ಯರ ಅವಸಾನ ಪ್ರಾಪ್ತ ಆದಾಗ, ಗೋಪಾಲದಾಸರು ತಮ್ಮ ಗುರುಗಳಾದ ವಿಜಯದಾಸರನ್ನು ಸ್ಮರಿಸಿ ಅವರ ಆದೇಶದ ಮೇರೆಗೆ ಭವರೋಗ ಧನ್ವಂತ್ರಿಯನ್ನು ಬೇಡಿಸ್ತುತಿಸಿ, ತಮ್ಮ ಆಯುಸ್ಸಿನಲ್ಲಿ ೪೦ ವರ್ಷಗಳನ್ನು ದಾನ ಮಾಡಿದರೆಂಬುದು ಇತಿಹಾಸದ ಸಂಗತಿಯಾಗಿದೆ : ಈ ಕೃತಿ ಅಷ್ಟೇ ಪ್ರಸಿದ್ಧ :

"ಎನ್ನ ಭಿನ್ನಪಕೇಳೊ ಧನ್ವಂತ್ರಿ ದಯಮಾಡೊ
ಸಣ್ಣವನು ಇವ ಕೇವಲ

ಬನ್ನ ಬಡಿಸುವ ರೋಗವನ್ನು ಮೋಚನ ಮಾಡಿ
ಚೆನ್ನಾಗಿ ಪಾಲಿಸುವುದೊ ವಿಭವದೆ (ಕ್ರಿ.ಶ. ೧೭೫೪ರಲ್ಲಿ)

ಮುಂದೆ ವ್ಯಾಸತತ್ವಜ್ಞರು, ಹೆಳವನಕಟ್ಟೆ ಗಿರಿಯಮ್ಮ ಮುಂತಾದ ಪ್ರಸಿದ್ಧ ಹರಿದಾಸರನ್ನು ಪ್ರೋತ್ಸಾಹಿಸಿದವರು ಗೋಪಾಲದಾಸರು, ಮುಕ್ತಿಯೋಗ್ಯರ ಸಾಧನ ವಿಚಾರ, ಬಿಂಬೋಪಾಸನೆ (ಧ್ಯಾನವನೆ ಮಾಡು ಬಿಂಬಮೂರುತಿಯು) ಈ ರೀತಿಯ ತತ್ವ ಪ್ರತಿಪಾದನೆಯಲ್ಲಿ ಭಾಷೆ ಬಿಗಿಯಾದರೂ ಹಲವೆಡೆ ಸರಳತೆ, ಬಂಧುರ ರಚನೆ ಕಾಣುತ್ತದೆ.

ನಡೆದು ಬಾರಯ್ಯ ನೀನು ವೆಂಕಟರಾಯ
ನಡೆದು ಬಾರಯ್ಯ ಕಡಲಿಗೆ ಕುಂಭಸಂಭವ
ಸಡಗರದಿಂದ ನೀಮೆಲ್ಲಡಿಯನಿಡುತ ಬೇಗ
ಎಡಬಲದಲಿ ನಿನ್ನಮಡದೇರಿಂದೊಪ್ಪುತ
ತಡಮಾಡದೆ ಬಾ ಮೃಡಸಖವೆಂಕಟ ॥

ಎಂಬಲ್ಲಿರುವ ಸಂಗೀತ ಛಾಯೆ, ತತ್ವಭೂಯಿಷ್ಠ ಸುಳಾದಿ ರಚನೆಗಳು ಗೋಪಾಲದಾಸರನ್ನು ಹರಿದಾಸ ಆಧ್ಯಾತ್ಮಿಕ ಆಂದೋಲನದ ಪ್ರಮುಖರಾಗಿಸುತ್ತವೆ.

## ಜಗನ್ನಾಥ ದಾಸರು (೧೭೨೮–೧೮೦೯)

ಇಂದಿಗೂ ಜನತೆಯ ಸ್ಮೃತಿಪಟಲದಲ್ಲಿ ನಿಂತಿರುವ ದಾಸಚತುಷ್ಟಯದ ನಾಲ್ಕನೆಯವರು ಜಗನ್ನಾಥದಾಸರು. (ಉಳಿದ ಮೂವರು, ಪುರಂದರದಾಸರು, ವಿಜಯದಾಸರು ಹಾಗೂ ಗೋಪಾಲದಾಸರು.) ಜಗನ್ನಾಥದಾಸರ ಪಾಂಡಿತ್ಯ, ಸಂಸ್ಕೃತಪ್ರಿಯತೆ, ತಿಳಿಗನ್ನಡ ನುಡಿಗಟ್ಟು ಅವರನ್ನು ಜನತೆ ಮರೆಯದಂತಿರಿಸಿದೆ. ಮಾಧ್ವ ಮನೆತನ, ತತ್ವನಿಷ್ಠೆ, ಹರಿದಾಸ ಕೃತಿಗಳಿಗೆ ಇವರ ವೈಶಿಷ್ಟ್ಯ. ಅಧ್ಯಯನದ ದೃಷ್ಟಿಯಿಂದ, ದಾಸಸಾಹಿತ್ಯದ ದ್ವಿತೀಯ ಹಂತದ ಹರಿದಾಸ ಆಂದೋಲನ ಹೆಚ್ಚು ಮತೀಯ-ಶಾಸ್ತ್ರ ನಿಷ್ಠೆ ಆಗುವಲ್ಲಿ ಅಪರೋಕ್ಷ ಜ್ಞಾನಿಗಳಾದ ಜಗನ್ನಾಥದಾಸರ ಕೊಡುಗೆ ಮಹತ್ವದ್ದು. ಇವರನ್ನು "ರಂಗನೊಲಿದ ದಾಸ"ರೆಂದೂ ಕರೆವುದುಂಟು ಹಾಗೂ ಮಂತ್ರಾಲಯದ ಶ್ರೀ ರಾಘವೇಂದ್ರರ ಪ್ರೀತಿಗೆ ಪಾತ್ರರಾದ ಬಗ್ಗೆ ಅನೇಕ ಪ್ರತೀತಿಗಳುಂಟು. ಅದೇನೆ ಇರಲಿ ಹರಿದಾಸ ಆಂದೋಲನ ಹಾಗೂ ಸಾಹಿತ್ಯದ ದೃಷ್ಟಿಯಲ್ಲಿ ಜಗನ್ನಾಥದಾಸರ ಹಿರಿಮೆ-ಗರಿಮೆಗಳು ಪರಿಶೀಲನಾರ್ಹ.

ಜಗನ್ನಾಥದಾಸರು ವಿಜಯದಾಸರ ಹಾಗೂ ಗೋಪಾಲದಾಸರ ಪ್ರೀತಿಗೆ ಪಾತ್ರ ನವರು. "ದಾಸವರ್ಯರು ದಯಾಯುಕ್ತರು ದೂರೀಕೃತ ದುರಾಶಿಷಮ್ । ಹರಿಕಥಾ

ಮೃತಸಾರಂ ಜಗನ್ನಾಥ ಗುರುಂ ಭಜೇ" ಎಂದು ದಾಸರನ್ನು ಸ್ಮರಿಸುತ್ತಾರೆ. ಇದರಲ್ಲಿ ಸೇರಿರುವ 'ಹರಿಕಥಾಮೃತಸಾರ' ಜಗನ್ನಾಥದಾಸರ ಮಹತ್‌ಕೃತಿ (Magnum opus) ದೊಡ್ಡ ಸಾಧನೆ, ಸಾಹಿತ್ಯಿಕ ಕೊಡುಗೆಯೂ ಹೌದು. ಜಗನ್ನಾಥದಾಸರು ಜನಪ್ರಿಯ ರಾಗಿರಲು ಕಾರಣ, ಅವರು ಕರ್ನಾಟಕಾದ್ಯಂತ ಸಂಚರಿಸಿ ಭಕ್ತಿತತ್ವ ಪ್ರಸಾರ ಮಾಡಿದ್ದು ಅನೇಕರಿಗೆ ಹರಿದಾಸದೀಕ್ಷೆಯಿತ್ತು ಗುರುಗಳಾದದ್ದು, ಶಿಷ್ಯಪ್ರಶಿಷ್ಯರ ಸಂಘಟನೆಯ ಮೂಲಕ ದಾಸಕೂಟ ಬೆಳಸಿದ್ದು, ಆದರಿಂದಾಗಿ ಶಿಷ್ಯರಾದ ದಾಸರು ಸ್ತುತ್ಯರಾಗಿದ್ದಾರೆ. (ಜಗನ್ನಾಥದಾಸರ ಶಿಷ್ಯ ಪಶಿಷ್ಯರ ಸುಳಾದಿಗಳು ಹನುಮಂತರಾವ್ ಗೋರೆಬಾಳರ ಪ್ರಕಟನೆ) ಇದರಿಂದಾಗಿ ಹರಿದಾಸ ಆಂದೋಲನ ಮುಂದುವರಿಯಿತು.

ಜಗನ್ನಾಥದಾಸರ ಜೀವನ ಚರಿತ್ರೆಗೆ ಅವರ ಗುರುಗಳಾದ ವಿಜಯದಾಸರ, ಗೋಪಾಲದಾಸರ ಹಾಗೂ ಜಗನ್ನಾಥದಾಸರು ತಾವೇ ರಚಿಸಿರುವ ಕೃತಿಗಳಲ್ಲದೆ, ಅವರ ಸಮಕಾಲೀನ ಶಿಷ್ಯರು ರಚಿಸಿರುವ ಕೃತಿಗಳನ್ನು ಆಧಾರವಾಗಿರಿಸಿಕೊಳ್ಳಬೇಕಷ್ಟೆ.

ಜಗನ್ನಾಥರ ಶಿಷ್ಯ ಪರಂಪರೆಗೆ ಸೇರಿದ ಶ್ರೀ ಕೋಸಗಿಸ್ವಾಮಿರಾಯಾಚಾರ್ಯ ಎಂಬುವವರು-ಗುರು ಜಗನ್ನಾಥವಿಠಲಾಂಕಿತರು. ಶ್ರೀಜಗನ್ನಾಥ ಸ್ತೋತ್ರ ರಚಿಸಿದ್ದಾರೆ. ದಾಸರು ಅರ್ವಾಚೀನರಾದ ಪ್ರಯುಕ್ತ ಒಂದು ಶತಮಾನದ ಹಿಂದೆಯೂ ಅವರನ್ನು ಪ್ರತ್ಯಕ್ಷ ಕಂಡವರು ಸಿಗುತ್ತಿದ್ದರೇನೊ. ಅವರೆಲ್ಲ ಜಗನ್ನಾಥಾಚಾರ್ಯರ ಸಾಧನೆ-ಕೃತಿ ಗಳನ್ನು ತಿಳಿಸಿದರೆ ವಿನಾ ದಾಸರ ಲೌಕಿಕ ಬದುಕನ್ನು ಕುರಿತು ಹೇಳುತ್ತಿರಲಿಲ್ಲ. ದಾಸಾರ್ಯರ ಶಿಷ್ಯರಾದ ತಂದೆ ವೆಂಕಟೇಶವಿಠಲಾಂಕಿತರು ತಮ್ಮ ಒಂದು ಕೃತಿಯಲ್ಲಿ ಹೀಗೆ ಹೇಳಿದ್ದಾರೆ :

ಮಾನವೀ ಮಂಡಲದ ಶಾನುಭೋಗ ನೃಸಿಂಹ
ಮಾನಿನಿ ಲಕ್ಷ್ಮಮ್ಮ ಸೂನುವಾಗಿ ಶಾಲಿ
ವಾಸ ಕೀಲಕ ಶುದ್ಧಮಾಸ ಶ್ರಾವಣ ಬಿದಿಗೆ
ಶ್ರೀನಿವಾಸ ನಾಮದಿ......

ಈಗಿನ ರಾಯಚೂರು ಜಿಲ್ಲೆಯ ಮಾನವಿ ತಾಲ್ಲೂಕಿಗೆ ಸೇರಿದ ಬ್ಯಾಗವಟ್ಟಿ ಎಂಬ ಗ್ರಾಮದಲ್ಲಿ ಜಗನ್ನಾಥದಾಸರು ಜನಿಸಿದರು. (ದಿನಾಂಕ ೨೭-೦೭-೧೭೨೮) ಶಾ. ಶ. ೧೬೫೦ನೆ ವರ್ಷ ಶ್ರಾವಣ ದ್ವಿತೀಯದಂದು ; ಶ್ಯಾನುಭೋಗ ಕುಟುಂಬ. ತಂದೆ-ತಾಯಿ ಯರು ನರಸಪ್ಪ-ಲಕ್ಷ್ಮೀಬಾಯಿ. ಶ್ಯಾನುಭೋಗಿಕೆಯ ವೃತ್ತಿ ಕುಲ ಪರಂಪರೆಯಿಂದ ಬಂದುದಾಗಿತ್ತು. ನರಸಪ್ಪ ಕೂಡ ಪಂಗನಾಮದ ತಿಮ್ಮಣ್ಣದಾಸರಿಂದ ಹರಿದಾಸದೀಕ್ಷೆ (ನರಸಿಂಹ ವಿಠಲ) ಪಡೆದವರು.

ರಾಯಚೂರು ಆಗಿನ ಕಾಲಕ್ಕೆ ಅನೇಕ ಹರಿದಾಸರಿದ್ದ ಜಿಲ್ಲೆ. ಚೀಕಲಪರಿವೆ ಯಲ್ಲಿದ್ದ ಶ್ರೀ ವಿಜಯದಾಸರು, ಅವರ ಸಾಕುಮಕ್ಕಳಾದ ಶ್ರೀ ಮೋಹನದಾಸರು,

ಕಲ್ಲೂರಿನ ಸುಬ್ಬಣ್ಣದಾಸರು, ಉತ್ತನೂರಿನ ಗೋಪಾಲದಾಸರು ಹಾಗೂ ಅವರ ತಮ್ಮಂದಿರು, ವೇಣೀಸೋಮಪುರವೆಂಬಲ್ಲಿದ್ದ ವ್ಯಾಸತತ್ವಜ್ಞರು (ಐಜಿ ಸ್ವಾಮಿಗಳು) ಹೀಗೆ.

ನರಸಪ್ಪನವರಿಗೆ, ಬಹುಕಾಲ ತಿರುಪತಿಯ ಶ್ರೀನಿವಾಸ ಸೇವೆಯಿಂದ ಜನಿಸಿದವನು ಶ್ರೀನಿವಾಸ. ಅವನನ್ನು ಲೌಕಿಕ ಶಿಕ್ಷಣಕ್ಕೆ ಕಳಿಸದೆ, ಆಂದು ಮಂತ್ರಾಲಯ ಪೀಠಸ್ಥರಾಗಿದ್ದ ಶ್ರೀ ವರದೇಂದ್ರತೀರ್ಥರ ಬಳಿ ವಿದ್ಯಾಭ್ಯಾಸಕ್ಕಾಗಿ ಕಳುಹಿಸಿದರು. ಶ್ರೀನಿವಾಸನಿಗಿದ್ದ ಕುಶಾಗ್ರ ಬುದ್ಧಿಗೆ ಮೆಚ್ಚಿ ಸ್ವಾಮಿಗಳೆ ಅವರಿಗೆ ವೇದಾಂತ ಪಾಠ ಹೇಳಿದರು. ಶ್ರೀನಿವಾಸನಿಗೆ ಆ ವೇಳೆಗಾಗಲೇ ಕನ್ನಡ ಸಂಸ್ಕೃತಗಳಲ್ಲಿ ಅಶುಕವಿತ್ವ ರಚಿಸುವಷ್ಟು ಪ್ರೌಢಿಮೆಯಿತ್ತು. ವೇದಾಂತದ ಪ್ರೌಢ ವ್ಯಾಸಂಗ ಮುಗಿಸಿ ಗುರುಗಳಿಂದ "ಆಚಾರ್ಯ"ರೆಂದು ಬಿರುದು ಪಡೆದು, ಶ್ರೀನಿವಾಸ ಊರಿಗೆ ಬಂದ. ಮಾನ್ವಿಯಲ್ಲಿ ಜೀವನ ಸುಗಮವಾಗಿ ನೆರವೇರುವಷ್ಟು ಆಸ್ತಿಯಿತ್ತು. ಸಂಸ್ಕೃತ ಪ್ರೌಢಿಮೆ, ಪಂಡಿತ ಸಹಜ ಗರ್ವ, ಅಹಂಭಾವ, ಶ್ರೀನಿವಾಸಾಚಾರ್ಯರಲ್ಲಿ ಮನೆ ಮಾಡಿದವು. ಅದಿಷ್ಟರ ಮಟ್ಟಿಗೆಂದರೆ, ಕನ್ನಡದಲ್ಲಿ ಆ ಕಾರಣವಾದ ಅನಾದರ, ಕನ್ನಡದಲ್ಲಿ ಪದಗಳನ್ನು ಬರೆದ ಹರಿದಾಸರ ಮೇಲೆ, ಅವರಲ್ಲೇನಿದೆ ಪಾಂಡಿತ್ಯವೆಂಬ ಅಹಂಕಾರ ಪ್ರಕಟ ಆಗ ತೊಡಗಿತು ; ಜನರೆಲ್ಲರ ಶ್ರದ್ಧೆ-ಗೌರವಕ್ಕೆ ಪಾತ್ರರಾದ ಹಿರಿಯ ಹರಿದಾಸರಾಗಿದ್ದ "ವಿಜಯದಾಸ"ರನ್ನೂ "ಕೂಸಿಮಗ ದಾಸ"ನೆನ್ನುವಷ್ಟು ಅಗೌರವ ಮೂಡಿತು! ಸ್ವಯಂ ವಿಜಯದಾಸರೆ ಒಮ್ಮೆ ಮಾನವಿಗೆ ಬಂದಾಗ ಆಚಾರ್ಯರು ಅವರಿಗೆ ಅವಮಾನಿಸಿದರು. ಅನಂತರ ಉದರಶೂಲೆಯ ರೋಗ ಬಂದದ್ದೂ, ಅದರಿಂದ ಆಚಾರ್ಯರು ವಿಜಯದಾಸರಿಗೆ ಮೊರೆಹೋದದ್ದು. ಆಗ ಶ್ರೀವಿಜಯದಾಸರು ತಮ್ಮ ಶಿಷ್ಯರೆ ಆದ ಶ್ರೀಗೋಪಾಲದಾಸರ ಮೂಲಕ ಆಚಾರ್ಯರ ರೋಗ ಪರಿಹಾರ ಮಾಡಿಸಿದುದೂ ಗೋಪಾಲದಾಸರ ಸಂಗಡ ಆಚಾರ್ಯರು ತಿರುಪತಿಗೆ ಶ್ರೀಶ್ರೀನಿವಾಸರ ಸೇವೆಗಾಗಿ ತೆರಳಿದಾಗ (ಬ್ರಹ್ಮೋತ್ಸವಕ್ಕೆ) ಅಲ್ಲಿ ಆಚಾರ್ಯರಿಗೆ ಇದ್ದ ಅಪಮೃತ್ಯು ಪರಿಹರಿಸಿ, (ವಿಜಯದಾಸರ ಆದೇಶದ ಮೇರೆಗೆ) ತಮ್ಮ ಆಯುಷ್ಯದ ನಲವತ್ತು ವರ್ಷ ಧಾರೆಯೆರೆದು ಆಚಾರ್ಯರನ್ನು ಬದುಕಿಸಿದ್ದು, ಅವರಿಗೆ ಹರಿದಾಸದೀಕ್ಷೆ ಇತ್ತುದೂ, ಈಗ ವಾಸ್ತವ ಸಂಗತಿ ಅಲ್ಲದಂತೆ ತೋರಿದರೂ ಅಲ್ಲೇನೊ ಅಲೌಕಿಕ ಘಟನೆ ನಡೆದಿರುವಂತಿದೆ. ಇದಕ್ಕೆ ಆಧಾರವಾಗಿ ಜಗನ್ನಾಥದಾಸರು, ಗೋಪಾಲದಾಸರು ರಚಿಸಿರುವ ಕೀರ್ತನೆಗಳು ಇವೆ. ಜಗನ್ನಾಥದಾಸರೆ ಇದನ್ನು ಅನನ್ಯ ಕೃತಜ್ಞಭಾವದಿಂದ ಸ್ಮರಿಸಿದಾರೆ ಹಾಗೂ ತಮ್ಮ ದೀಕ್ಷಾ ಗುರುಗಳಾದ ಗೋಪಾಲದಾಸರ ಕರುಣೆ ಸ್ಮರಿಸಿ ಹಾಡಿರುವಂತಿದೆ :

ಗೋಪಾಲದಾಸರಾಯಾ-ನಿನ್ನಯ ಪಾದ
ನಾಪೊಂದಿದೇನೊ ನಿಶ್ಚಯಾ– ॥ ಪ ॥

ಈ ಪೀಡಿಪ ತಾಪತ್ರಯಗಳ ನೋಡಿಸಿ
ಕೈಹಿಡಿದೆನ್ನನು ನೀಪಾಲಿಸನು ದಿನ ॥ ಅ. ಪ. ॥

ಘೋರವ್ಯಾಧಿಗಳ ನೋಡಿ–ವಿಜಯರಾಯ
ಭೂರಿಕರುಣವ ಮಾಡಿ......
............
ಅಪಮೃತ್ಯುವನು ತೊಡೆದೆ–ಎನ್ನೊಳಗಿಪ್ಪ : ಅಪರಾಧಗಳ ಮರೆದೆ...... ॥

ಇದಲ್ಲದೆ ಜಗನ್ನಾಥದಾಸರ ಸಮಕಾಲೀನ ದಾಸರ ಪದಗಳೂ ಈ ಘಟನೆಯನ್ನು ಸ್ಪಷ್ಟ ಪಡಿಸಿವೆ. ಇಷ್ಟಲ್ಲದೆ, ತಾವು ಮೊದಲು ಹೀಗಳೆದಿದ್ದ ವಿಜಯದಾಸರನ್ನು ಪುನಃ ಪುನಃ ನಮಿಸಿ

"ರತುನದೊರಕಿತಲ್ಲಾ–ಎನಗೆ ದಿವ್ಯ ದರಶುನ ದೊರೆಕಿತಲ್ಲ
ಪ್ರಯತನವಿಲ್ಲದೆ ವಿಜಯರಾಯರು"

ಎಂದು ಹಾಡಿದಾರೆ.

ಗೋಪಾಲದಾಸರಿಂದ ಹರಿದಾಸದೀಕ್ಷೆ ಪಡೆದ ಶ್ರೀನಿವಾಸ ಆಚಾರ್ಯರು ಗುರುವಿನ ಆದೇಶದಮೇರೆಗೆ ಪಂಢರಾಪುರದ ವಿಠೋಬನ ದರ್ಶನಕ್ಕೆ ಬಂದರಂತೆ. ಬಂದವರು ಚಂದ್ರಭಾಗ ನದಿಯಲ್ಲಿ ಮಿಂದು ಏಳುವಾಗ್ಗೆ ಅವರ ಕೈಗೊಂದು ಶಿಲಾಫಲಕ ದೊರೆಯಿತು. ಅದರಲ್ಲಿ 'ಜಗನ್ನಾಥವಿಠಲ' ಎಂಬ ಅಕ್ಷರ ಇದ್ದವು. ಅಂದಿನಿಂದಲೇ ಆಚಾರ್ಯರುದಾಸರಾಗಿ ಕುಣಿದು ಹಾಡಿದರಂತೆ ಈ ಹಾಡಿನ ಧಾಟಿ, ಆ ಘಟನೆ ಸಮರ್ಥಿಸುವಂತೆ :

ವಿಠಲಯ್ಯ ವಿಠಲಯ್ಯ ॥ ಪ ॥
ಹಟಕೋಟಿ ನಿಭಕಾಯ ಜಗನ್ನಾಥ ॥ ಅ. ಪ. ॥
ಭಜಿಸುವೆ ನಿನ್ನನು ಅಜಭವ ಸುರನುತ
ಭಜಕಾಮರತರು ಕುಜನ ಕುಠಾರಿ ॥೧॥
ನೀ ಕರುಣಿಸದೆ ನಿರಾಕರಿಸಲು ಎನ್ನ
ಸಾಕುವರಾರೊ ದಯಾಕರ ಮೂರುತಿ ॥ ೨ ॥
ಶರಣಾಗತರನು ಪೊರೆವ ತವ ।
ಬಿರುದು ಕಾಯೊ ಸಿರಿವರದ ಜಗನ್ನಾಥ ॥ ೩ ॥
ವಿಠಲಯ್ಯ ವಿಠಲಯ್ಯ...

ಹಾಗೂ "ಕಂಡೆ ಪಂಢರಿರಾಯನ : ಶ್ರೀಮಾನಿನಿಪ್ರಿಯನ" ಎಂಬುದಂತೂ ಭಕ್ತ್ಯಾತ್ಮಕ ಭಾವಗೀತೆಯೆ ಆಗಿದೆ. ಸಂಸ್ಕೃತ, ಕನ್ನಡದಲ್ಲಿ ಅತ್ಯುನ್ನತ ಪರಿಣತಿ ಗಳಿಸಿದ್ದ ದಾಸರ ಪಾಂಡಿತ್ಯ, ಅವರ ಎಲ್ಲ ಗೀತೆಗಳಲ್ಲಿ ಮಡಂಗಟ್ಟಿವೆ. ಇದು ಜಗನ್ನಾಥವಿಠಲರ ಒಂದು

ಪ್ರಮುಖ ಘಟ್ಟ–ಅವರ ಬದುಕಲ್ಲಿ. ಅನಂತರ ಅವರು ರಚಿಸಿದ್ದ ಹೆಚ್ಚಿನ ಕೃತಿ ತಿರುಪತಿಯ ಶ್ರೀನಿವಾಸನನ್ನು ಕುರಿತದ್ದೆ. ಇದಕ್ಕೆ ಐತಿಹಾಸಿಕ ಕಾರಣವೂ ಇದ್ದೀತು. ಪಂಢರಾಪುರ ಆಗ್ಗೆ ಮಹಾರಾಷ್ಟ್ರದ ಸಂತರ ಕೈಗೆ ಸೇರಿತ್ತು. ಕನ್ನಡದ ಅಭಂಗ ವಿಠ್ಠಲನು ಮಹಾರಾಷ್ಟ್ರದ ಸಂತ ಕವಿಗಳಿಂದ "ಕಾನಡಾ ವಿಠ್ಠಲ ಕಾನಡಾ ಬೋಲ" ಎಂದು ಹಾಡಿಸಿಕೊಳ್ಳುತ್ತಿದ್ದರೂ, ಮರಾಠಿಯ ಅಭಂಗಗಳನ್ನೆ ಕಿವಿಯಲ್ಲಿ ತುಂಬಿಕೊಂಡಿದ್ದ ಕಾರಣವೂ ಇದೆ. ಅಂದಿನ ವೈಷ್ಣವ ಸಂತರ ಭಕ್ತಿ, ಮೂಲತಃ ರಾಮಾನುಜರ ಸಂಪ್ರದಾಯದ್ದು ; ಹರಿದಾಸರು ದ್ವೈತಿಗಳು. ಆದರೂ ಹರಿದಾಸರ ಪರಮಪ್ರಿಯ ಕ್ಷೇತ್ರ ಪಂಡರಿಗೆಯೆಂಬುದು ಸುವಿದಿತ.

ದಾಸರಾದನಂತರ ಜಗನ್ನಾಥದಾಸರು ಪರ್ಯಟನ ಕೈಗೊಂಡರು. ಅವರ ಶಾಸ್ತ್ರ ಪಾಂಡಿತ್ಯ, ಹರಿಭಕ್ತಿ–ಜನರನ್ನು ಸೆಳೆದವು ; ದಾಸಾರ್ಯರು ಸವಣೂರಿಗೆ ಬಂದರು. ಆಗ ಅಲ್ಲಿದ್ದ ಶ್ರೀಸತ್ಯಬೋಧತೀರ್ಥರ ಅನುಗ್ರಹಕ್ಕೆ ಪಾತ್ರರಾದರೆಂದೂ ಅಲ್ಲಿಯೆ ಅವರ ಉದ್ಧ್ಯಕೃತಿ "ಹರಿಕಥಾಮೃತಸಾರ"ದ ಕೆಲವು ಭಾಗ ರಚಿಸಿದರೆಂದೂ ಪ್ರತೀತಿ. ಸ್ವಾಮಿಗಳನ್ನು ಕುರಿತೂ ಹಾಡಿರುವ ಕೃತಿಗಳಿವೆ. ಶ್ರೀದವಿಠಲರೆಂಬ ಜಗನ್ನಾಥಾಚಾರ್ಯರ ಶಿಷ್ಯರು "ಸಂಗಸುಖವ ಬಯಸಿ ಬದುಕಿರೊ. ರಂಗನೊಲಿದ ಭಾಗವತರ" ಎಂದು ಮನದುಂಬಿ ಹಾಡಿದಾರೆ. ಹಾಗೂ ಅವರೇ ಹರಿಕಥಾಮೃತಸಾರದ 'ಫಲಶ್ರುತಿ' ಸಂಧಿಯನ್ನು ರಚಿಸಿದ್ದು.

ಜಗನ್ನಾಥದಾಸರ ಅನೇಕ ರಚನೆಗಳು ಸಾಹಿತ್ಯ, ಸಂಗೀತಗಳೆರಡರ ದೃಷ್ಟಿಯಿಂದಲೂ ಸುಭಗವೆನಿಸುತ್ತದೆ ; ಅಲ್ಲಲ್ಲಿ ಪಾಂಡಿತ್ಯದ ಮಿಂಚು, ಪ್ರತಿಭೆಯಾಗಿ ಹೊಳೆವುದುಂಟು. (ಮಂತ್ರಾಲಯದ ಶ್ರೀರಾಯರ ಕರುಣೆಯಂತೂ ದಾಸರ ಮೇಲೆ ಸದಾ ಇತ್ತೆಂಬ ಬಗ್ಗೆ ಅನೇಕ ಕತೆಗಳಿವೆ.) ಉದಾಹರಣೆ :

ಶ್ರೀನಿಕೇತನ ಪಾಲಯಾಮಾಂ, ಶ್ರೀನಿಕೇತನ ॥ಪ॥
ಜ್ಞಾನಗಮ್ಯ ಕರುಣಾ ನಿಧಿ ನಿನ್ನಡಿ
ಗಾನಮಿಸುವೆ ಪೊರೆ ದೀನದಯಾಳೊ ॥ಅ.ಪ.॥

ಜ್ಞಾನಮಾನದ ಶರಣರಸುರ
ಧೇನುಸರ್ವದ
ನೀನೆಂದರಿತು ಸದಾನುರಾಗದಲಿ
ಧ್ಯಾನಿಪೆ ಮನದನುಮಾನವ ಕಳೆಯೊ ॥

ಯಾತರ ಭಯ ಶ್ರೀನಾಥನ ಪರಮ । ಪ್ರೀತಿಯ ಪಡೆದವನಿಗೆ ಎಂಬ ಕೆಚ್ಚು
ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ ।
ಸಂಗ ಸುಖವಿತ್ತು ಕಾಯೊ ಕರುಣಾಸಾಗರ ।

ನಗುವರೋ ರೋದಿಸುವರೋ ನಾಟ್ಯವಾಡೋರೊ
ಬಗೆಯರೊ ಬಡಜನ ಭಾಗ್ಯ ಭಾಗವತರು
ತೆಗೆಯರೊ ನಿನ್ನಲ್ಲಿ ಮನವೊಮ್ಮೆಯಾದರೂ
ಜಗನ್ನಾಥ ವಿಠ್ಠಲ ನಿನ್ನವರೇನು ಧನ್ಯರೊ

ಎಂಬಲ್ಲಿ ಜಗನ್ನಾಥದಾಸರು ಗೆಜ್ಜೆ ಕಟ್ಟಿ, ಚಿಟಿಕೆ ಬಾರಿಸುತ್ತ, ನರ್ತಿಸಿದಂತಿದೆ. ಹಾಗೆಯೆ ಅವರ ವಿಶಿಷ್ಟ ರಚನೆ,

ಶ್ರೀವೇಂಕಟಾಚಲ ನಿವಾಸ, ನಿನ್ನ
ಸೇವಾನು ಸೇವಕರದಾಸ ಎನಿಸಿ
ಜೀವಿಸುವ ನರಗೆ ಆಯಾಸಯಾಕೆ
ಶ್ರೀವರನೆ ಕೊಡು ಎನಗೆ ಲೇಸ...

ಎಂಬ ನೀಳ್ಗವನದಲ್ಲಿ ತಿರುಪತಿಯ ಶ್ರೀನಿವಾಸನನ್ನು ಒಗೆ ಬಗೆಯಾಗಿ ಸ್ತುತಿಸಿದ್ದಾರೆ. ದಾಸರ ಅವತಾರತ್ರಯ ಸ್ತುತಿ (ಹನುಮ-ಭೀಮ-ಮಧ್ವ) "ಮಾರುತಿಮಂಜ್ಜನಕ" ಎಂಬಲ್ಲಿ ಮಧ್ವಮತ ಸಮರ್ಥಿಸುವ ವೈಷ್ಣವ ನಿಷ್ಠೆ ಸುಪ್ರಕಟಗೊಳ್ಳುತ್ತದೆ. ಶ್ರೀಹರಿಯ ಶೇಷ ಪರ್ಯಂಕವನ್ನೆ ತಮ್ಮ ಕವಿ ಹೃದಯದಿಂದ ಸುಂದರವಾಗಿ ಬಣ್ಣಿಸುತ್ತಾರೆ ದಾಸರು. 'ಬಲು ರಮ್ಯವಾಗಿದೆ ಹರಿ ಮಂಚ' ಎಂಬ ಕೃತಿಯಲ್ಲಿ ಜಗನ್ನಾಥದಾಸರ ಭಾವಪರವಶತೆ 'ಫಲವಿದು ಬಾಳ್ದುದಕೆ...' ಎಂಬ ಕೃತಿಯಲ್ಲಿ ಭಕ್ತಿಯ ಪರಾಕಾಷ್ಠೆ ಮುಟ್ಟುತ್ತದೆ. ಸಿರಿನಿಲಯನ ಗುಣಗಳು ತಿಳಿದು ಭಜಿಸುವುದೆ ಅವರ ಧ್ಯೇಯ. ಗಣಪತಿಯನ್ನು ಕುರಿತ "ಲಂಬೋದರ ರಕ್ತಾಂಬರಧರ । ಅಂಬರಾಧೀಶ್ವರ ಗೌರಿಕುಮಾರ"[180] ಒಂದು ಹೊಸ ಬಗೆಯ ಸ್ತುತಿ.

ಜಗನ್ನಾಥದಾಸರ ಬದುಕಿನಲ್ಲಿ ಏರುಪೇರು, ಅವರ ಆತ್ಮಶೋಧನೆ-ಡಂಭದೂಷಣೆ ಕೂಡ ಗಮನಾರ್ಹ :

ಕಾಸಿನಾಸೆಗೆ ಹೋಗಿ ದಾಸ ವೇಷವ ಧರಿಸಿ
ಮೋಸ ಮಾಡುವ ಜನರ ಕಾಸಬೇಡಿ

ಹಾಗೆಯೆ ಹರಿಯ ಪೂಜೆ ಅರಿತವರಿಗತಿ ಸುಲಭವೆಂದೂ ತಿಳಿಸುತ್ತಾರೆ :

ಹೈಮಾಂಡ ಮಂಟಪವು, ಭೂಮಂಡಲವೆ ದೀಪ ।
ಸೋಮಸೂರ್ಯರೆ ದೀಪ ಭೂರುಹಗಳು ।
ಚಾಮರಗಳತಿ ವಿಮಲ ವ್ಯೋಮ ಮಂಡಲ ಛತ್ರ
ಯಮಾಷ್ಟಕಗಳಷ್ಟದಳು ಪದ್ಮವು ಎಂದೂ

ಇದು ಪಂಡಿತ ರಚನೆ ; ಪಾಂಡಿತ್ಯ ಪ್ರತೀಕ.

ಜಗನ್ನಾಥದಾಸರನ್ನು ಅಂದಿನ ಕರ್ನಾಟಕದ ಜನತೆ ಮನ್ನಿಸಿ ಆದರಿಸಿದ್ದಾರೆ. ನೂರಾರು ಜನ ಇವರ ಸ್ಫೂರ್ತಿ-ಪ್ರಭಾವದಿಂದ ಹರಿದಾಸ ದೀಕ್ಷೆ ಪಡೆದಿರುವ ಸಂಭವವಿದೆ. ಇದಕ್ಕೆ ಇವರ ದೇಶ ಪರ್ಯಟನವೂ ಕಾರಣ. ಹುಕ್ಕೇರಿಯ ದಾಸರು, 'ಸಿರಿವತ್ಸ ವಿಠಲ' ಅಂಕಿತರಾದ ಚಿಕ್ಕೋಡಿದಾಸರು, ಜಗನ್ನಾಥಾರ್ಯರ ಸಾಕ್ಷಾತ್ ಶಿಷ್ಯರು. ಗದ್ವಾಲದರಾಜ, ಮೈಸೂರಿನ ದಿವಾನ್ ಪೂರ್ಣಯ್ಯನವರು ಸತ್ಕರಿಸಿದ ಪ್ರಸಂಗ ಇದೆ. ಒಟ್ಟಾರೆ ಹರಿದಾಸ ಆಂದೋಲನ ಮುಂದುವರಿಸಿದ ಹಾಗೂ ಸಂಘಟಿಕ ಪ್ರವರ್ತಕರಿವರು ಸುಮಾರು ಇಪ್ಪತ್ತೊಂದು ಶಿಷ್ಯ ಪ್ರಶಿಷ್ಯರು, ಈ ದಾಸ ಪರಂಪರೆ ಹರಿದಾಸ ಆಂದೋಲನವನ್ನು ದ್ರುತಗತಿಯಲ್ಲಿ ಮುಂದುವರಿಸಿದರು.

ಜಗನ್ನಾಥದಾಸರ ಭಾಷೆ, ಪುರಾಣ ಪ್ರಮೇಯ ತತ್ತ್ವಜ್ಞಾನ, ಕನ್ನಡ ಶಬ್ದಪ್ರಭುತ್ವ. ಸಾಮಾನ್ಯರಿಗೆ ಇವರ ರಚನೆಯ ಬಹುಭಾಗ ಉಕ್ಕಿನ ಕಡಲೆಯೆಂದೆನ್ನಿಸಿಯಾತು, ಅವರಿಗೆ ▪ ರಚನೆ ಸರಳ, ನಿರಾಳ ಆದರೂ ಕೂಡ ಹರಿದಾಸ ಸಂಪ್ರದಾಯಸ್ಥರು. ಜಗನ್ನಾಥದಾಸರನ್ನು ಕೃತಯುಗದ ಪ್ರಹ್ಲಾದನ ತಮ್ಮ 'ಸಹ್ಲಾದನ' ಅವತಾರವೆಂಶರೆಂದು ಭಾವಿಸುವುದಿದೆ. ಶ್ರೀ ಪ್ರಾಣೇಶದಾಸರಲ್ಲೂ ಈ ವಿವರ ಬಂದಿವೆ (ಅವರ ಈ ರಚನೆಯಲ್ಲಿ 'ದಾಸಕೂಟ' ಪದ ಪ್ರಯೋಗವೂ ಆಗಿದೆ) ಇದು ಶೈವ-ವೈಷ್ಣವ ಭಕ್ತಿ ಪರಂಪರೆಯಲ್ಲೂ ಇದ್ದಂತಿದೆ. ಶ್ರೀ ಬಸವಣ್ಣನವರೂ, ಸರ್ವಜ್ಞ ಕವಿಯೂ ತಮ್ಮ ಪೂರ್ವಭವಗಳ ಬಗೆಗೆ ಹೇಳಿದ ವಚನ ತ್ರಿಪದಿ ಸುವಿದಿತ.

ಜಗನ್ನಾಥದಾಸರು ವೈಕುಂಠವಾಸಿಗಳಾದದ್ದು ೧೭-೯-೧೮೦೯ ರಂದೆಂದು ವಿದ್ವಾಂಸರಿಂದ ಒಪ್ಪಿತ ಆಗಿದೆ. ಈ ಬಗ್ಗೆ ದಾಸರ ಶಿಷ್ಯರಾದ ಶ್ರೀಪದವಿಠಲರು "ಸಂಗ ಸುಖವ ಬಯಸಿ ಬದುಕಿರೊ" ಎಂಬ ಕೃತಿಯಲ್ಲಿ ವಿವರವಾಗಿ ತಿಳಿಸಿದಾರೆ.

ಜಗನ್ನಾಥದಾಸರ ಕೀರ್ತನ, ತತ್ತ್ವಸುವಾಲಿಗಳೆಂಬ ವಿಶಿಷ್ಟ ತ್ರಿಪದಿ ರಚನೆ, ಸುಮಾರು ೫೪೦ ಇನ್ನೂ ದೊರೆಯಬೇಕೆನ್ನಿಸುತ್ತದೆ. ಆದರೆ ಅವರ ಸಾಹಿತ್ಯ ದ್ವೈತವಂತ ಮರಿ ಭಾಷೆ ಸಾಮಾನ್ಯರಿಗೆ ಅರ್ಥವಾಗದಿರುವುದು, ಸಾರ್ವತ್ರಿಕವಾಗಿ ಹರಡುವಂತಾಗದೆನ್ನಿಸುತ್ತದೆ. ಇನ್ನು ಗೋಪಾಲದಾಸರ, ವಿಜಯದಾಸರ ಹೆಜ್ಜೆ ಜಾಡಿನಲ್ಲಿ ಜಗನ್ನಾಥದಾಸರೂ ಸಾಗಿರುವುದು ನಿಚ್ಚಳವಾಗಿ ತಿಳಿಯುವುದರಿಂದ, ಪುರಂದರ–ಕನಕರಲ್ಲಿ ಕಾಣುವ ಸಾಮಾಜಿಕ-ಲೋಕನೀತಿ, ಸಮಾಜ ಸುಧಾರಣಾ ಭಾವ ತರಿಸುವ ಕೃತಿಗಳು ಜಗನ್ನಾಥ ದಾಸರಲ್ಲಿ ಕಾಣುವು

ಜಗನ್ನಾಥದಾಸರ, ಬೃಹತ್‌ರಚನೆ–ಒಂದು ಶಾಸ್ತ್ರಗ್ರಂಥ 'ಶ್ರೀಹರಿಕಥಾಮೃತ ಸಾರ' ಸುಮಾರು ೧೦೦೦ ಪದ್ಯಗಳ ೩೨ ಸಂಧಿಗಳ ಭಾಮಿನೀಷಟ್ಪದಿಯ ಗ್ರಂಥ ಜಗನ್ನಾಥದಾಸರ ವಿಶಿಷ್ಟ ಸಾಹಿತ್ಯಿಕ ಕೊಡುಗೆ. ಮತೀಯ ಗ್ರಂಥವೆಂಬುದು ದಿಟ. ಮಧ್ವಮತಪ್ರಸಾರ-ಅನ್ಯಮತ ಖಂಡನವೆ ಈ ಗ್ರಂಥದ ಧ್ಯೇಯ ಆದರೂ, ಭಾಮಿನೀ ಷಟ್ಪದಿಯ ಗೇಯಗುಣ ಸಹಜ ಆಗಿ ಮೂಡಿಬಂದಿದೆ. ಈ ಗ್ರಂಥದ ಬಗ್ಗೆ ಬಂದಿರುವ ವ್ಯಾಖ್ಯಾನಗಳು ಈ ಕೃತಿಯ ಪ್ರಿಯತೆ ಸಾರುತ್ತವೆ :

ಮಲಗಿಪರಮಾದರದಿ ಪಾಡಲು
ಕುಳಿತು ಕೇಳುವ ಕುಳಿತುಪಾಡಲು
ನಿಲ್ಲುವ ನಿಂತರೆ ನಲಿವ ನಲಿದರೆ ಒಲಿವೆ ನಿಮಗೆಂಬ !
ಸುಲಭನೋ ಹರಿ ತನ್ನವರ ನರ
ಗಳಿಗೆ ಬಿಟ್ಟಗಲನೊ ರಮಾಧವ
ನೊಲಿಸಲರಿಯದೆ ಪಾಮರರು ಬಳಲುವರುಧರೆಯೊಳಗೆ

ವೇದಾಗಮ, ಉಪನಿಷತ್ತು, ಯೋಗ, ಸ್ಮೃತಿ ಪುರಾಣ–ಇತಿಹಾಸ, ಮಧ್ವಾಚಾರ್ಯರ ತತ್ವ ಗ್ರಂಥ-ಎಲ್ಲದರ ಅಧ್ಯಯನ ಗೈದ ಫಲ ಆಚಾರ್ಯರ ಈ ಕೃತಿ. ತತ್ವ ಸುವ್ವಾಲಿ ಗಳಲ್ಲೂ ದಾಸರ ಮಧ್ವ ಮತನಿಷ್ಠೆಗೇ ಪ್ರಾಧಾನ್ಯ : (ಡಾ॥ ಕೆ. ಎಂ. ಕೃಷ್ಣರಾಯರು ಹೇಳುವ 'ಜಗನ್ನಾಥದಾಸರ ತಂತ್ರಸಾರ'ವೆಂಬ ಕೃತಿಯನ್ನು ಪ್ರಭಂಜನರು ವರದೇಂದ್ರರು ರಚಿಸಿದ್ದೆಂದು ತಿಳಿಸಿದ್ದಾರೆ.

ಜಗನ್ನಾಥದಾಸರಿದ್ದದ್ದು ಈ ೮೧ ವರ್ಷ ಒಂದು ತಿಂಗಳು ೨೦ ದಿನ. ಹರಿದಾಸ ಪರಂಪರೆಯನ್ನು ಸಂಘಟಿಸಿ, ಬೆಳಸಿ, ಹರಿದಾಸತತ್ವ ಪ್ರಚಾರ ಕೈಗೊಂಡು ನಡೆಸಿ ವಿಶಿಷ್ಟ ಸಾಹಿತ್ಯಿಕ ಕೊಡುಗೆ ನೀಡಿ ದಾಸಸಾಹಿತ್ಯ ದ್ವಿತೀಯ ಹಂತದ ಪ್ರಮುಖ ಹರಿದಾಸರೆಂಬ ಯಶಸ್ಸಿಗೆ ದಾಸರು ಪಾತ್ರರು.

ಇನ್ನು ಮುಂದೆ ಬರುವ ಹರಿದಾಸರ ಪೈಕಿ, ಗುರುತಿಸುವಂಥ ರಚನೆಗಳು ಮೋಹನದಾಸರವು, ಪ್ರಾಣೇಶವಿಠಲರವು ಹಾಗೂ ಅನಂತರ ಗೋಪಾಲದಾಸರೇ ಅಂಕಿತವಿತ್ತು, ಹರಿದಾಸ್ಯ ದೀಕ್ಷೆ ಪಡೆದ ಹೆಳವನಕಟ್ಟೆ ಗಿರಿಯಮ್ಮನನ್ನು ನಾವು ನೆನಪಿಸಿ ಕೊಂಡಿದೇವಷ್ಟೆ.

ಪ್ರಮುಖ ಹರಿದಾಸರು ಹಾಗೂ ಅವರ ವಿಶಿಷ್ಟ ಸಾಹಿತ್ಯಿಕ ಕೊಡುಗೆಗಳನ್ನು ಗಮನಿಸಿದಾಗ, ದಾಸಸಾಹಿತ್ಯದ ಬಗ್ಗೆ, ಅಲ್ಲಿ ಬಳಸಿರುವ ಕನ್ನಡದ (ಪ್ರಾದೇಶಿಕ) ಬಳಕೆಯ ಬಗ್ಗೆ, ಅಂದು ನಡೆದ ಭಕ್ತಿಯ ಆಂದೋಲನದ ಸ್ವರೂಪದ ಬಗ್ಗೆ, ಮನದಲ್ಲಿ ಅನೇಕ ಭಾವನೆಗಳು ತಲೆದೋರುತ್ತವೆ ; ಕೌತುಕರು ಆಗುತ್ತೇವೆ. "ದಾಸಸಾಹಿತ್ಯ"ದ ಕೆಲವೆಡೆ ತೂಕ ತಪ್ಪಿದ ಮತಾಭಿಮಾನ, ಬಿರುಸು ಮಾತು ಬಂದಿವೆಯೆಂಬುದನ್ನು ಅಲ್ಲಗಳೆಯಬೇಕಾಗಿಲ್ಲ...ಸಮನ್ವಯವು ಆಚರಣೆಯಲ್ಲಿ ಸುಲಭವಲ್ಲದೆಂಬುದೆ ಇದರರ್ಥ ಎಂಬ ಮಾತನ್ನು ಉಲ್ಲೇಖಿಸಬಹುದಾಗಿದೆ.

## ಹರಿದಾಸರ ಇತರ ಸಾಹಿತ್ಯಿಕ ರಚನೆಗಳು

ಹರಿದಾಸ ಪರಂಪರೆಯಲ್ಲಿ ೨೫೦ ಕ್ಕೂ ಹೆಚ್ಚು ಜನ ಹರಿದಾಸರು ಬಂದಿದ್ದರೂ, ಅವರಲ್ಲಿ ಪ್ರಮುಖರೆನ್ನಿಸಿಕೊಂಡವರ ಸಾಹಿತ್ಯಿಕ ಪ್ರಯೋಗ, ಅವರ ವಿಶಿಷ್ಟ ರಚನೆ ಗಳನ್ನು ಪ್ರಾತಿನಿಧಿಕವಾಗಿ ಮಾತ್ರ ವಿಚಾರ ಮಾಡುವಷ್ಟಕ್ಕೇ ನಾವು ತೃಪ್ತರಾಗ ಬೇಕಾಗಿರಲು ಎರಡು ಕಾರಣ : ಒಂದನೆಯದು, ಸಾಹಿತ್ಯಿಕ ಪ್ರಕಾರಗಳ ಮೂಲಕ

ಪ್ರಯೋಗಿಸಿದವರ ಸೃಜನಾತ್ಮಕ ರಚನೆಗಳನ್ನು ಪರಿಗಣಿಸಿ, ಅನಂತರ ಬಹುಮಟ್ಟಿಗೆ ಚರ್ವಿತಚರ್ವಣವೆನಿಸುವುದನ್ನು ಬಿಡಬೇಕಾಗಿ ಬಂದಿರುವುದು. ಎರಡನೆಯದು, ದಾಸಸಾಹಿತ್ಯ ವಿಸ್ತಾರದ ಬಾಹುಳ್ಯ ಸಹಜವಾಗಿಯೆ ಪರಿಮಿತಿಯನ್ನೊಡ್ಡಿದೆ. ಹಾಗೆಯೆ ಹರಿದಾಸರ ಕೀರ್ತನ, ಸುಳಾದಿ, ಉಗಾಭೋಗ ಹೊರತಾದ ವಿಶಿಷ್ಟ ರಚನೆಗಳನ್ನು ಗಮನಿಸದಿದ್ದಲ್ಲಿ ಹರಿದಾಸ ಆಂದೋಲನದ ಒಂದು ಅವಿಭಾಜ್ಯ ಅಂಗವಾದ ಸಾಹಿತ್ಯ ಸೃಷ್ಟಿ-ದೃಷ್ಟಿಗಳನ್ನು ಸಂಪೂರ್ಣವಾಗಿ ಪರಿಚಯಿಸಿದಂತಾಗುವುದಿಲ್ಲ. ಆದರಿಂದ ಹರಿದಾಸರನೇಕರ ಇತರ ವಿಶಿಷ್ಟ ರಚನೆಗಳನ್ನು ಮಾತ್ರ ಮುಂದೆ ಗಣರೀಕರಿಸಲಾಗಿದೆ. ಹೀಗೆ ಮಾಡುವಲ್ಲಿ ವಿವಿಧ ಛಂದಸ್ಸುಗಳಲ್ಲಿ ರಚಿಸಿರುವ ಕೃತಿಗಳ ಸ್ವರೂಪ, ಪರಿಚಯಿಸಲಾಗಿದೆ ಯಷ್ಟೆ.

(1) ವೃತ್ತನಾಮ
(2) ದಂಡಕ
(3) ತ್ರಿಪದಿ
(4) ಷಟ್ಪದಿ
(5) ಸಾಂಗತ್ಯ

1. ವೃತ್ತನಾಮ : ಈ ಪ್ರಕಾರ ಕನ್ನಡ ಸಾಹಿತ್ಯಕ್ಕೇ ಹೊಸದು. ವೃತ್ತನಾಮದಲ್ಲಿ ಕೃತಿರಚನೆ ಮೊತ್ತಮೊದಲಿಗೆ ಮಾಡಿದವರು, ಹರಿದಾಸಸಾಹಿತ್ಯ-ದಾಸಪಂಥದ ಪರಂಪರೆಯ ಆದ್ಯ ಪ್ರವರ್ತಕರಾದ ಶ್ರೀಪಾದರಾಜರು. ಮುಂದೆ ಇದನ್ನು ಅನುಸರಿಸಿ ಕೆಲವು ಹರಿದಾಸರರು, ಕೃತಿರಚನೆಗೈದಿರುವರಷ್ಟೆ. ಕನ್ನಡ ಸಾಹಿತ್ಯ ಚರಿತ್ರಕಾರರಾಗಲಿ, ಕವಿಚರಿತಕಾರರಾಗಲಿ, ಈ ಅಪರೂಪ ಛಂದೋರಚನೆಯ ಸ್ವರೂಪ, ವೈಶಿಷ್ಟ್ಯದ ಬಗ್ಗೆ ಹೆಚ್ಚು ಪ್ರಸ್ತಾಪಿಸಿಲ್ಲ. ಒಂದು ಪದ, ಹಾಗೂ ಒಂದು ಶ್ಲೋಕ (?) ಇರುವ ಛಂದೊ ಸೂಚನೆಯೆ ವೃತ್ತನಾಮ ಎಂಬುದು ವಿದ್ವಾಂಸರ ಅಭಿಮತ, ಹಾಗೆಂದು ಇದು ಶ್ಲೋಕದ ಛಂದಸ್ಸಲ್ಲ. ಇದನ್ನು ವೃತ್ತವೆಂದು ಭಾವಿಸಿದ್ದರಿಂದಲೇ ಇದಕ್ಕೆ 'ವೃತ್ತನಾಮ'ವೆಂಬ ಹೆಸರಾಯಿತೊ ಎಂದೆನಿಸುತ್ತದೆ. ಕನ್ನಡಕ್ಕೆ ಆವರೆವಿಗೂ ಅಪರಿಚಿತ ಆಗಿದ್ದ ಈ ಬಂಧವನ್ನು ಶ್ರೀಪಾದರಾಜರು, ಜಯದೇವ ಕವಿಯ "ಗೀತಗೋವಿಂದ"ದ ಸರಣಿಯನ್ನು ಅನುಸರಿಸಿ ಬರೆದಿರಬಹುದೊ ಏನೊ. ಇಲ್ಲಿ ಉಕ್ತವಾಗಿರುವ 'ಶ್ಲೋಕ' ಹಾಗೂ "ಪದಗಳ" ಲಕ್ಷಣವೂ ಇತರ ಪರಿಚಿತ ಸಾಹಿತ್ಯಿಕ ಪ್ರಕಾರಗಳಿಗೆ ಹೊರ ತಾಗಿದೆ. ಹರಿದಾಸಸಾಹಿತ್ಯಕ್ಕೆ, ಕೀರ್ತನದ ಮೂಲಕ, ಸಂಪ್ರದಾಯ, ದೀಕ್ಷೆಗಳ ಮೂಲಕ 'ಶ್ರೀ'ಕಾರ ಹಾಡಿದ ಶ್ರೀಪಾದರಾಜರ ಈ ವಿಶೇಷ ಛಂದೋರಚನೆಯ ಮೊದಲ ಪ್ರವರ್ತಕರಾಗಿರುವುದೂ ವೈಶಿಷ್ಟ್ಯವೆ. ಶ್ರೀಪಾದರಾಜರು, ಶ್ರೀವಾದಿರಾಜರು ಹಾಗೂ ಶ್ರೀಗೋಪಾಲದಾಸರಲ್ಲಿ ವೃತ್ತನಾಮದ ಬಳಕೆಯನ್ನು ನಾವು ಕಾಣಬಹುದು.

ಉದಾ : ಶ್ರೀಪಾದರಾಜರ ಕೃತಿ : 'ಮಾನನಿಧಿ ಶ್ರೀಕೃಷ್ಣ ಮಧುರೆಗೈದುವನಂತೆ' ಎಂದು ಆರಂಭ ಆಗುವಂಥದು. ಇದಕ್ಕೆ 'ಶೃಂಗಾರ ಪಾರಿಜಾತ'ವೆಂಬ ಹೆಸರೂ ಉಂಟು. 'ವೃತ್ತ'ದಂತಿರುವ ಒಂದು 'ಶ್ಲೋಕ' ಆದಾದ ಮೇಲೆ ಒಂದು 'ಪದ' ಇದರಲ್ಲಿನ ಸಂಭಾಷಣಾ ವಿಧಾನವೂ ಸ್ವಾರಸ್ಯವೆ.

ಶ್ಲೋಕ

ಹಲವು ಕಾಲವು ನಿನ್ನ ಸ್ನೇಹ ಸುಖವ ಹಾರೈಸಿಕೊಂಡಿರುತಿಹ
ಲಲನಾವ್ಯೂಹವ ಬಿಟ್ಟು ಅಕ್ರೂರರೊಡನೆ ನೀಮಧುರೆಗೆ ಪೋದರೆ
ಕಳೆಯಲಾಪೆವೋ ಕಾಂತನೇಳು ದಿನವ ಈ ಕಂತುವಿನ ಬಾಧೆಗೆ
ಘಳಿಗೊಂದು ಯುಗವಾಗಿ ತೋರುತಿಹುದೊ ಜಲಜಾಕ್ಷ ನೀನಿಲ್ಲದೆ ॥

ಪದ

ಬ್ಯಾಡ ಮಧುರೆಗೆ ಪೋಗ ಬ್ಯಾಡಲವೊ ಶ್ರೀ ಕೃಷ್ಣ
ಬೇಡಿಕೊಂಬೆವೋ ದೈನ್ಯದಿ
ನೋಡು ನಮ್ಮಾಲೆ ದಯಮಾಡು ಮದನಗೇಡು
ಮಾಡುವುದೇನು ಚತುರ್ಲೋ ಮಾಧವ ಕೃಪಾಕರನೆ.

......ಇದಾದ ಮೇಲೆ ಮತ್ತೆ ಶ್ಲೋಕ (ವೃತ್ತ) ತದನಂತರ 'ಪದ' ಹೀಗೆ ಗೋಕಲದ 'ಗೋಪಿ'ಯರಿಗೂ ಶ್ರೀಕೃಷ್ಣನಿಗೂ ನಡುವೆ ನಡೆಯುವ ಸಂಭಾಷಣೆ. ಮುಗುದೆಯರಾದ ಗೋಪಿಯರು "ಮಾರನಯ್ಯನೆ ಕೇಳೊ ಅಲ್ಲಿರುತಿಹ ನಾರೇರು ಬಲು ನಿಪುಣರೊ" (ಪಟ್ಟಣದ ಹೆಂಡುಗಿಯರು ಥಳುಕಿನಿಂದ ನಿನ್ನನ್ನು ಸೆಳೆದು ಬಿಡುವ ರೆಂಬ ಹೆದರಿಕೆ ನಮ್ಮದು) ಎಂದು ಹೇಳುವ ಮಾತು, "ಪಳ್ಳಿಯಲಿಪ್ಪ ಗೋಪಿಯರ ವಿಚಾರಂಗಳ ಸ್ಮರಿಪೆಯಾ" ಎಂಬುವರಲ್ಲಿ ಕಾಣುವ ದೈನ್ಯ, ಸರಳ ಮಾರ್ದವತೆಯಿಂದ ಓದಿಸಿಕೊಂಡು ಹೋಗುವ ರಚನೆ-ವೃತ್ತನಾಮದ್ದು. ವಾದಿರಾಜರ "......ರಕ್ಷಿಸೊ ವೆಂಕಟಗಿರಿರಾಜ ರವಿಶತ ತೇಜ ಆಶ್ರಿತಕಲ್ಪಭೂಜ" ಎಂಬ ವೃತ್ತನಾಮವೂ ಒಂದು ವಿಶಿಷ್ಟ ರಚನೆಯೆ ಆಗಿದೆ. ಇದರಿಂದ ಕಂಡು ಬರುವ ಸಾಮಾನ್ಯ ಲಕ್ಷಣವಿದು : ವೃತ್ತ ನಾಮ ಸಂಸ್ಕೃತದಂತೆ ರಚನೆಯಾಗಿದ್ದು, ಶ್ಲೋಕ ಅಕ್ಷರಗಣ. ವೃತ್ತವನ್ನೂ ಒಳ ಗೊಂಡಿರುತ್ತದೆ. (ಆದರೆ ಶ್ಲೋಕ ಛಂದಸ್ಸಲ್ಲ.) ಎಲ್ಲ ವೃತ್ತನಾಮಗಳೂ ಇದೇ ಛಂದಸ್ಸಿನಲ್ಲಿರಬೇಕು ಎಂಬ ನಿಯತಿಯೇನಿಲ್ಲ.

ಹರಿದಾಸ ಸಾಹಿತ್ಯದಲ್ಲಿ ಬರುವ ವೃತ್ತನಾಮಗಳು ಬೆರಳೆಣಿಕೆಯಲ್ಲಿ ಎಣಿಸುವಷ್ಟು ವಿರಳ. ಇದಕ್ಕೆ, ಶಾಸ್ತ್ರ ಪಾಂಡಿತ್ಯ, ಛಂದಸ್ಸಿನ ಮೇಲಣ ಪ್ರಭುತ್ವ ಅತ್ಯಗತ್ಯವೆನಿಸು ತ್ತದೆ. "ಶ್ರೀ ಮಧ್ವಾಚಾರ್ಯರ ದ್ವಾದಶಸ್ತೋತ್ರದಲ್ಲಿಯೂ, ಜಯದೇವ ಕವಿಯ

ಗೀತಗೋವಿಂದದಲ್ಲಿ ಈ ಪ್ರಕಾರ ಪ್ರಾರಂಭವಾಗಿ ಮುಂದೆ ಪ್ರಚಾರಕ್ಕೆ ಬಂದಿತೆಂದು ಪ್ರತೀತಿ'' ಎನ್ನುತ್ತಾರೆ, ಡಾ॥ ಕೆ. ಎಂ. ಕೃಷ್ಣ ರಾಯರು.

2. ದಂಡಕ ಛಂದಸ್ಸಿನ ವಿಶೇಷ ರಚನೆಯೇನೆಲ್ಲ. ಸರಳರಗಳೆ ರೀತಿ ವಿುಂದು ವರಿಯುವ ಪ್ರಕಾರ ಗದ್ಯ ಪದ್ಯದ ನಡುವಿನ ಶೈಲಿ. ಒಂದೇ ರೀತಿ ಸಾಗಂತ್ತದೆ. ಪದ ಗಳ ಕಟ್ಟುಕಟ್ಟಳೆಯೂ ಇಲ್ಲದು. ಇದೊಂದು ರೀತಿಯ ಲಯಬದ್ಧ ಗದ್ಯವನ್ನ ಬಹುದು. ಸಂಗೀತಶಾಸ್ತ್ರದಲ್ಲಿ ಈ ಪ್ರಕಾರ ಪ್ರಚಲಿತವಿಲ್ಲ.

ಶ್ರೀಪಾದರಾಜರ ''ಶ್ರೀಲಕ್ಷ್ಮೀನೃಸಿಂಹ ಪ್ರಾದುರ್ಭಾವ ದಂಡಕ''ವೇ ಹರಿ ದಾಸಸಾಹಿತ್ಯದ ಮೊದಲ ದಂಡಕ. ೫೪೬ ಸಾಲುಗಳಲ್ಲಿ ಮೂಡಿ ಬಂದಿದೆ.

ಶ್ರೀವಿಷ್ಣುವು ನರಸಿಂಹಾವತಾರವೆತ್ತಿ ದಾನವ ಹಿರಣ್ಯಕಶಿಪುವನ್ನು ಸಂಹರಿಸಿ, ಭಕ್ತಪ್ರಹ್ಲಾದನನ್ನು ಅನುಗ್ರಹಿಸಿದುದೇ ದಂಡಕದ ವಸ್ತು.

ಸಂಸ್ಕೃತದಲ್ಲಿ ೨೬ ಅಕ್ಷರಗಳನ್ನು ಮೀರಿ, ನಿಯಮಿತವಾದ ಗಣನಿಯಮಕ್ಕೆ ಒಳಪಟ್ಟು ರಚಿತವಾಗಿರುವ ವರ್ಣವೃತ್ತಗಳಿಗೆ ದಂಡಕವೆಂದು ಹೆಸರು. ಇವು ಹಲವು ರೀತಿಯುಂಟು. ನಾಗವರ್ಮನು ತನ್ನ ''ಛಂದೋಂಬುಧಿ''ಯಲ್ಲಿ ಹೇಳಿರುವ ರೀತಿಯ ದಂಡಕಗಳಿವು : ಚಂಡವೃಷ್ಟಿ ಪ್ರಕಾರ, ಅರ್ಣ ಅರ್ಣವ, ವ್ಯಾಳ, ಜೀವಮೂತಕ, ಲೀಲಾಕರ, ಇವುಗಳೆಲ್ಲ ಸಂಸ್ಕೃತದ ನಿಯಮಕ್ಕನುಸಾರ ಆಗಿ ರಚಿತ ಆಗಿರುವುದೇ (ಕನ್ನಡದಲ್ಲಿ ವಿಶಿಷ್ಟವಾದ ದ್ವಿತೀಯಾಕ್ಷರ ಪ್ರಾಸ ಹೆಚ್ಚಾಗಿ ಕೂಡಿಕೊಂಡು, ವಿಶಿಷ್ಟತೆ ಯಾಗಿಸಿದೆ.)

ಕನ್ನಡ ಕೈಪಿಡಿಕಾರರು, ''ನಿಯತವಾದ ಗಣಗಳಿಂದ ಕೂಡಿ ಪಾದ ವಿಭಾಗವಿಲ್ಲದೆ ದಂಡಾಕಾರವಾಗಿರುವ ಶಬ್ದರಚನಾ ವಿಶೇಷವು ದಂಡಕವೆನಿಸು''ವುದೆಂದಿದ್ದಾರೆ. ದಂಡಕ ವನ್ನು ಗದ್ಯದಲ್ಲಿ ಒಂದು ಪ್ರಭೇದವೆಂದೂ ಪರಿಗಣಿಸಿದ್ದಾರೆ. ''ಕನ್ನಡದಲ್ಲಿ ಈ ಮೊದಲೆ ಪ್ರಚಲಿತವಾಗಿದ್ದ ಲಲಿತ ರಗಳೆಯಲ್ಲಿರುವ ಪ್ರಾಸ ನಿಯಮವನ್ನು ಬಿಟ್ಟು ಆಧುನಿಕ ಕನ್ನಡ ಕವಿಗಳು ಬಳಸಿರುವ ಸರಳ ರಗಳೆಯನ್ನ ದಂಡಕವೂ ಹೋಲುತ್ತದೆ''.

**ತ್ರಿಪದಿ**

''ತತ್ವಸುವ್ವಾಲಿ'' ಎಂಬ ಕೃತಿ, ಜಗನ್ನಾಥದಾಸರಿಂದ ರಚಿತವಾದ ತ್ರಿಪದಿಗಳ ಗುಚ್ಛ. ಅವರು ಕಟ್ಟುನಿಟ್ಟಾಗಿ ಅನುಸರಿಸಿದ ವಹಿಷ್ಠ ನಿಷ್ಠೆ, ಮಧ್ವಮತ ತತ್ವ, ಧರ್ಮ-ನೀತಿಗಳನ್ನು ತಿಳಿಗನ್ನಡದಲ್ಲಿ ತಿಳಿಸುವುದೇ ದಾಸರ ಧ್ಯೇಯ. ಸಂಸ್ಕೃತದ ವಿದ್ವಾಂಸರು 'ಕನ್ನಡದ ಗಾಯತ್ರಿ' ತ್ರಿಪದಿ ರಚಿಸಿದ್ದು ಒಂದು ವೈಶಿಷ್ಟ್ಯ.

''ಸುವ್ವಿ, ಸುವ್ವಲೆ, ಸುವ್ವಾಲಿ'' ಇವೆಲ್ಲ ಒಂದೇ ಅರ್ಥವೀಯುವ ಪದಗಳು, ಜನಪದ ಸಾಹಿತ್ಯದ 'ಸುವ್ವಿಪದಗಳು' ಕನ್ನಡನಾಡಿನಲ್ಲೆ ಪ್ರಸಿದ್ಧ. ಜಗನ್ನಾಥದಾಸರ ಹುಟ್ಟೂರಾದ ರಾಯಚೂರು ಬಳಿಯ ಮಾನ್ವಿಯಲ್ಲಿ ದೊರೆತ ಪ್ರತಿಯಲ್ಲಿ ''ಸುವ್ವಿಪದ'' ಎಂದೇ ಹೆಸರಿಸಿದೆ. ''ಸುವ್ವಿ'' ಎಂಬುದಕ್ಕೆ ಹೆಣ್ಣುಮಕ್ಕಳು ಹಾಡಿಕೊಳ್ಳುವ ಪದ, ಮಂಗಳ ಪದ, ಕುಟ್ಟುವಾಗ, ಬೀಸುವಾಗ ಹಾಡುವ ಹಾಡು ಎಂದೇ ಜಾನಪದ ಕೋಶ

ಅರ್ಥಯಿಸುತ್ತದೆ. ದಾಸರು ಮನೆ ಆಸರೆ ತಪ್ಪಿ ಬಂದ ಸೊಸೆಯ ಮನಶ್ಶಾಂತಿಗಾಗಿ ಈ ಪದಗಳನ್ನು ರಚಿಸಿಕೊಟ್ಟರೆಂದು ಪ್ರತೀತಿ. "ಆಲಿ" ಎಂದರೆ, ಸಾಲು, ಪಂಕ್ತಿ ಎಂಬರ್ಥ ಇವೆ. ಆದರಿಂದ, ತತ್ವ ಸುವ್ವಾಲಿ ಎಂದರೆ "ತತ್ವದ ಮಂಗಳಹಾಡಿನ ಪಂಕ್ತಿ" ಅಥವಾ "ತತ್ವಸೂಕ್ತಿ"ಗಳೆಂದು ಕರೆಯಬಹುದಾಗಿದೆ.

ವಾಲಿ-ವಾಲಿ-ಓಲೆ-ಎಂದರೆ, ಕಿವಿಗೆ ಭೂಷಣವೆಂದೂ ಅರ್ಥ. ಅಂದರೆ, "ಶ್ರವಣ ಮನಕಾನಂದವೀವುದು" ಎಂಬ "ದಾಸರ ಹರಿಕಥಾಮೃತಸಾರ"ದ ಪದ್ಯ ನೆನಪಾಗುತ್ತದೆ. "ತತ್ವಸುವ್ವಾಲಿ" ಗಳು ಕರ್ಣಭೂಷಣಗಳು–(ವಿಶಾಲಕರ್ಣಕೆ ಭೂಷಣ ವಿಷ್ಣುಕಥೆಯು ಶ್ರೀಪಾದರಾಜರು-'ಭೂಷಣಕೆ-ಭೂಷಣ' ಎಂಬ ಕೀರ್ತನೆಯಲ್ಲಿ) ಎಂದರೆ ಕಿವಿಗೆ ಕೇಳಿಸಿಕೊಂಡಂತೆಲ್ಲ ಮನಸ್ಸನ್ನು ಹಿತವಾಗಿರಿಸುವಂಥವು ಎಂದೂ ಅರ್ಥ. 'ತತ್ವಸುವ್ವಾಲಿ' ಗಳನ್ನು ಶ್ರೀಜಗನ್ನಾಥದಾಸರು, 'ತತ್ವವಾದದ ಹಿನ್ನೆಲೆಯಲ್ಲಿ ರಚಿಸಿರುವಂತಿದೆ. ಒಟ್ಟಾರೆ, ಮಧ್ವಮತ ತತ್ವಗಳನ್ನು ಸುಲಭವಾಗಿ ಅರ್ಥ ಆಗುವ ಶೈಲಿಯಲ್ಲಿ ತಿಳಿಸಿಕೊಡುವುದೆ ತತ್ವಸುವ್ವಾಲಿಗಳ ಧ್ಯೇಯ. "ನಿರೂಪಣೆ ಮತ್ತು ಛಂದಸ್ಸಿನ ಜೊತೆಗೆ ರಾಗದ ಸರಳತೆಯನ್ನೂ ಹೊಂದಿರುವುದು ಈ ಕೃತಿಯ ವೈಶಿಷ್ಟ್ಯ. ವಿಘ್ನನಿವಾರಕನಾದ ಗಣಪತಿ, ರುದ್ರ, ತುಳಸಿ (ವೃಂದಾವನ, ಶ್ರೀ, ಭೂ, ದುರ್ಗಾ) ಬ್ರಹ್ಮ, ದಶಾವತಾರಗಳು, ನವಗ್ರಹಗಳು, ಅಗ್ನಿ–ಮೊದಲಾದ ದೇವತೆಗಳನ್ನು ಕುರಿತು ಸ್ತುತಿಸಿರುವುದಲ್ಲದೆ, ಮಾಯಾವಾದ, ಖಂಡನೆ, ಶ್ರೀರುಕ್ಮಿಣಿ-ಶ್ರೀ ಶ್ರೀನಿವಾಸ, ಶ್ರೀ ಕೃಷ್ಣಚರಿತ್ರೆ, ಇವು ತತ್ವ ಸುವ್ವಾಲಿಗಳ ವಸ್ತುವಾಗಿವೆ. ಈಗ ದೊರೆತಿರುವ ತತ್ವ ಸುವ್ವಾಲಿಗಳು ಸುಮಾರು ನಾಲ್ಕು ನೂರು ಮಾತ್ರ.[184]

'ಅಣೋರಣೀಯ ಮಹತೋಮಹೀಯಾನ್' ಎಂಬ ಶ್ರುತಿ ವಾಕ್ಯ[185]
ಅಂಬಲಿಗುಂಬ ತೆರನಾಗಿ ಘನಕೆ ಘನತರನಾಗಿ
ಅಂಬಮಹತ್ತು ಗಳದೆಸೆಯಿಂದ
ದೆಸೆಯಿಂದ ನೀ ವಿಲಕ್ಷಣ ನೆನಿಸಿಕೊಂಬೆ ಶ್ರುತಿಯೊಳು

ಎಂದು ಕನ್ನಡದಲ್ಲಿ ಮೂಡಿದೆ. ಹಾಗೆಯೇ,

ವಿನಬೇಡಲಿ ನಿನ್ನಧೀನ ವೀ ಜಗವು ಸ್ವಾ।
ಧೀನ ವಸ್ತುಗಳ ನಾ ಕಾಣೆ। ನಾ ಕಾಣೆ ಭಕ್ತಿ ವಿ
ಜ್ಞಾನ ವೈರಾಗ್ಯವನೆ ಕರುಣಿಸೋ॥

ಎಂಬಲ್ಲಿ ಶ್ರೀವೈಷ್ಣವ ಸಂತರಾದ ಆಳ್ವಾರರು ಹಂಬಲದ ಪ್ರಾರ್ಥನೆಯ ಸರಳತೆಯೂ ಇದೆ. ಜ್ಞಾನಿಗಳು ಒಂದೇ ರೀತಿಯಾಗಿ ಆಲೋಚಿಸುವರೆಂಬುದಕ್ಕೆ ನಿದರ್ಶನವೆಂಬಂತೆ

ಶಿಷ್ಟನಂದೆ ನಿನ್ನ ಭ್ರಷ್ಟನೆಂದೆನಿಸು ಸ
ರ್ವೆಷ್ಟ ಮೂರುತಿಯ ಜನರಿಂದ। ಜನರಿಂದ ನುಡಿಸಿದ್ದು
ಇಷ್ಟವೇ ಕಾಣೊ ನಿನಗಿನ್ನು॥

ಎಂಬ ನುಡಿಯಿದೆ. ಪರಮಾತ್ಮನ ಭಕ್ತರನ್ನು ಗೌರವದಿಂದ ಕಾಣಬೇಕು, ಸೇವಿಸಬೇಕು. ಅದಿಲ್ಲದೆ ದೇಶ ದೇಶ ತಿರುಗಿದರೇನು ಬಂತು ಫಲ ?

ಲೆಕ್ಕವಿಲ್ಲದೆ ದೇಶ ತಿರುಗಿದರೆ ಫಲವೇನು
ತ್ವಕ್ಕನಾದರೆ ಮಾತ್ರ ಫಲವೇನು । ಫಲವೇನು ನಿನ್ನಸ
ದ್ಭಕ್ತರನು ಕಂಡು ನಮಿಸದೆ ॥

ಇದಲ್ಲದೆ ದೇವರಿಗೆ ಮಾಡುವ ಬಿನ್ನಹವೊ ಹಾಗೂ ಅಲ್ಲಿಯ ಸ್ವಾಮಿಭೃತ್ಯ ಭಾವವೊ :

ಎನ್ನ ಪೋಲುವ ಭಕ್ತರನ್ನಂತ ನಿನಗಿಹರು
ನಿನ್ನಂಥ ಸ್ವಾಮಿ ಎನಗಿಲ್ಲ । ಎನಗಿಲ್ಲದವರಿಂದ
ಬಿನ್ನೈಪೆ ನಿನ್ನ ಸಲಹೆಂದು ॥

ಎನಗೆ ದಾತನು ನೀನು ನಿನಗೆ ದೂತನು ನಾನು
ಇನಿತಿದ್ದ ಬಳಿಕ ಅಧಮರ । ಅಧಮ ಮಾನವರನ್ನೂ
ಅನುಸರಿಸಲ್ಯಾಕೋ ನಾನಿನ್ನು ॥

ಇದಲ್ಲದೆ ಉನ್ನತ ಭಕ್ತಿಯ ಪರಾಕಾಷ್ಠೆಯ ಸ್ಥಿತಿ ಮುಟ್ಟಿದ ಭಕ್ತರಾದ ಶ್ರೀವ್ಯಾಸರಾಯ ರಂಥವರು ಗೈಯುತ್ತಿದ್ದ ಮಾನಸಪೂಜೆಯ ವ್ಯಾಪ್ತ್ಯೋಪಾಸನೆಯ ಪೂಜಾ ಕ್ರಮಕ್ಕನು ಗುಣವಾಗಿ ಎಂಬಂತೆ :

ಭೂಮಂಡಲವೆ ಪೀಠವ್ಯೋಮ ಮಂಡಲಛತ್ರ
ಸೋಮ ಸೂರ್ಯರುಗಳೆ ಮಹದೀಪ : ಮಹದೀಪ ನಕ್ಷತ್ರ
ಸ್ತೋಮವೇ ನಿನಗೆ ಉಪದೀಪ ॥ [186]

ಎಂಬ ಜಗನ್ನಾಥದಾಸರ ಕಲ್ಪನ ಸಾಮರ್ಥ್ಯವೂ ನಮಗೆ ಪರಿಚಯ ಆಗುತ್ತದೆ. ಒಟ್ಟಾರೆ ಈ ತತ್ವ ಸುವ್ವಾಲಿಯ ತ್ರಿಪದಿಗಳಲ್ಲಿನ ಗಣವಿನ್ಯಾಸ ಕೂಡ ವೈವಿಧ್ಯದಿಂದ ಕೂಡಿ, ಅಧ್ಯಯನಕ್ಕೆ ಆಕರವಾಗುವುದೆಂದು ತಿಳಿಸಬಹುದು.

### 3. ಷಟ್ಪದಿ

ಹರಿದಾಸರಲ್ಲಿ ಕವಿಗಳಾದ ಕನಕದಾಸರ ನಳಚರಿತ್ರೆ, ಭಾಮಿನೀಷಟ್ಪದಿಯ ಕಾವ್ಯ. ಹಾಗೆಯೆ ಅವರ ಹರಿಭಕ್ತಿಸಾರ, ರಾಮಧಾನ್ಯ ಚರಿತ್ರೆಯೂ ಷಟ್ಪದಿಯ ಕೃತಿಗಳೆ ಆಗಿವೆ. ಸೋದೆಯ ಶ್ರೀವಾದಿರಾಜರೂ ಕೆಲವು ಷಟ್ಪದಿಗಳನ್ನು ರಚನೆ ಮಾಡಿರುವುದು ಗಮನಾರ್ಹ.[187]

ಕನಕದಾಸ, ವಾದಿರಾಜರಂತೆಯೆ ಪುರಂದರದಾಸರಲ್ಲಿಯೂ ಷಟ್ಪದಿ ರಚನೆ ಕಾಣ ಬರುತ್ತದೆ.[188] ಷಟ್ಪದಿಯನ್ನೆ ಬಳಸಿ ಕಾವ್ಯ ರಚಿಸಿ, ಕಾವ್ಯದೊಂದಿಗೆ ಹರಿದಾಸ ಆಂದೋಲನದ ಪ್ರಧಾನಧ್ಯೇಯ ಆದ ಹರಿಭಕ್ತಿ ಪಾರಮ್ಯ, ಮಧ್ವಮತ ಪ್ರಸಾರ, ಹರಿ ಸರ್ವೋತ್ತಮತೆಯನ್ನು ಸಮರ್ಥಿಸಿದ ಉದ್ಯಕೃತಿ-ಜಗನ್ನಾಥದಾಸರ "ಶ್ರೀಮದ್ಧರಿ ಕಥಾಮೃತಸಾರ". ಇದು ೧೮ನೇ ಶತಕದ ಧಾರ್ಮಿಕ ಯುಗ ಕಾವ್ಯವೆಂದೂ ತಿಳಿಸ ಬಹುದು. ಕನಕದಾಸರದ್ದೊ ಅಥವಾ ಮುಂಚಿನ ಷಡಕ್ಷರಿಯವರದ್ದೊ ಸಂದಿಗ್ಧವೆನ್ನ ಲಾಗುವ ಪ್ರಸಿದ್ಧವಾಗಿರುವ "ತಿರುಕನಕನಸು", ಭೋಗಷಟ್ಪದಿಯಲ್ಲಿ ಇದೆ :

ಧರೆಯ ಭೋಗವನ್ನು ನಂಬಿ
ಹರಿಯ ಮರೆದು ಕಡಲಿಬೇಡ
ಧರೆಯಭೋಗ ಕನಸಿನಂತೆ ಕೇಳು ಮಾನವ ॥

ದಾಸಸಾಹಿತ್ಯದ ಶಾಸ್ತ್ರೀಯ ಕೊಡುಗೆ ಇದು ಹಾಗೂ ಮಧ್ವಮತ ಪ್ರಸಾರ, ಮಧ್ವ ಮತದ ತಿರುಳನ್ನು ಷಟ್ಪದಿಯ ಪಟ್ಟದದಂತೆ ರೇಖೀಕರಿಸುವ ಯಶಸ್ಸು ಜಗನ್ನಾಥದಾಸರ ದ್ದಾಗಿದೆ. "ಇಲ್ಲಿ ಅವರ ಸರಳ ಕನ್ನಡ ಶೈಲಿಯನ್ನು ಕಾಣುತ್ತೇವೆ. ಆದರೂ, ಅವರ ಕೀರ್ತನೆಗಳಲ್ಲಿ ಹಾಗೂ, ಹರಿಕಥಾಮೃತಸಾರದಲ್ಲಿ ಕಾಣುವುದು ಸಂಸ್ಕೃತ ಭೂಯಿಷ್ಠ ವಾದ ಶೈಲಿಯನ್ನೇ ಅದಕ್ಕೆ ಕಾರಣ ಮುಖ್ಯವಾಗಿ ಅವರು ಬೆಳೆದ ವಿದ್ವಗಳಿಸಿದ ವಾತಾವರಣವೇ ಅಲ್ಲದೆ ಮತ್ತೆ ಬೇರೆ ಅಲ್ಲ. ಆದರೂ ಷಟ್ಪದಿ ಛಂದಸ್ಸಿನ ಚೌಕಟ್ಟಿನಲ್ಲಿ ಹರಿಕಥಾಮೃತಸಾರದಲ್ಲಿ ಹೊನಲಾಗಿ ಹರಿದಿರುವ ಕನ್ನಡ ನುಡಿಯ ಸೊಬಗನ್ನು ಸವಿದು ಮನಮೆಚ್ಚಿ ಅವರಿಗೆ ಮಣಿಯಬೇಕಾಗುತ್ತದೆ." ಇಲ್ಲಿ ಪ್ರಸಿದ್ಧವಾದ ಒಂದು ಪದ್ಯವನ್ನು ಉದಾಹರಿಸಿ, ನಾವು, ಹರಿದಾಸರು ರಚಿಸಿರುವ ಇನ್ನಿತರ ವಿಶಿಷ್ಟ ಸಾಹಿತ್ಯಿಕ ಪ್ರಕಾರ ಗಳತ್ತ ಗಮನಹರಿಸಬಹುದು :

ಮಲಗಿ ಪರಮಾದರದಿ ಪಾಡಲು
ಕುಳಿತು ಕೇಳುವ ಕುಳಿತು ಪಾಡಲು
ನಿಲುವ ನಿಂತರೆ ನಲಿವ ನಲಿದರೆ ಒಲಿವ ನಿಮಗೆಂಬ ।
ಸುಲಭನೋ ಹರಿ ತನ್ನವರನರ
ಗಳಿಗೆ ಬಿಟ್ಟಗಲನೊ ರಮಾಧವ
ನೊಲಿಸಲರಿಯದೆ ಪಾಮರರು ಬಳಲುವರು ಭವದೊಳಗೆ ॥

ಸಾಂಗತ್ಯ : ಮೃದು ಪದಗತಿಯಲ್ಲಿ ಬಂಧುರ ರೀತಿಯಲ್ಲಿ ಸಾಗುವ ಛಂದೋರೂಪ, ಹಾಡಲು ಅನುಕೂಲವಾಗುವಂಥ ಹಾಡುಗಬ್ಬ, ಹರಿದಾಸರು ಇದರ ಬಳಕೆಗೆ ಹೊರತಲ್ಲ.

ಅವರಲ್ಲಿ ಪ್ರಮುಖರಾಗಿ ಎದ್ದು ಕಾಣುವಂಥವರು ಶ್ರೀವಾದಿರಾಜರು (೧೪೮೦-೧೬೦೦ ಹಾಗೂ ಕನಕದಾಸರು. ಶ್ರೀವಾದಿರಾಜರು ಮಠಾಧೀಶರಾಗಿದ್ದರು ಹಾಗಾಗಿ ಸಂಸ್ಕೃತದ ಅಭಿಮಾನವಿದ್ದಂತೆಯೆ ಕನ್ನಡದಲ್ಲೂ ಅಭಿಮಾನವಿರಿಸಿ ರಚಿಸಿದ ಕೃತಿಗಳಲ್ಲಿ 'ಲಕ್ಷ್ಮಿ ಶೋಭಾನೆ' ಹಾಡು ಪ್ರಸಿದ್ಧ ಆದದ್ದು. ವಾದಿರಾಜಸ್ವಾಮಿಗಳು ತಮ್ಮ ಭಕ್ತನಾದ ಸೋದೆಯ ಅರಸಪ್ಪ ನಾಯಕನ ಮಗಳಿಗೆ ಅಕಾಲ ವೈಧವ್ಯ ಪ್ರಾಪ್ತವಾಗಲು, ಅದನ್ನು ನಿವಾರಿಸಿ, ಮರಳಿ ರಾಜಕುಮಾರಿಗೆ ಮಾಂಗಲ್ಯಭಾಗ್ಯ ನೀಡಲೆಂದು ಲಕ್ಷ್ಮೀದೇವಿಯನ್ನು ಪ್ರಾರ್ಥಿಸಿ ರಚಿಸಿದ ನೂರೆಂಟು ನುಡಿಯ ಪದವಿದು. (ಫಲಶ್ರುತಿಯ ಸ್ತುತಿಯೂ ಸೇರಿ ೧೧೨ ನುಡಿಗಳಿವೆ.) ಇಲ್ಲಿಯ ಒಂದು ಉದಾಹರಣೆ, ವಾದಿರಾಜರ ಭಾಷಾ ಪ್ರಭುತ್ವ, ಬೆಳೆಸಿರುವ ದೇಸಿಗಳನ್ನು ಬಿಂಬಿಸುತ್ತದೆ.

ಶೋಭನವೆನ್ನಲಿ ಸುರರೊಳು ಸುಭಗನಿಗೆ ।
ಶೋಭನವೆನ್ನಿ ಸುರಪ್ರಿಯಗೆ ।
ಶೋಭನವೆನ್ನಿ ಶ್ರೀವಿಕ್ರಮರಾಯರಿಗೆ ।
ಶೋಭನವೆನ್ನಿ ಸುಗುಣನಿಗೆ ॥ ಶೋಭಾನೆ ॥ ॥೧॥

ಲಕ್ಷ್ಮೀನಾರಾಯಣ ಚರಣಕ್ಕೆ ಶರಣೆಂಬೆ ।
ಪಕ್ಷಿವಾಹನ್ನಗೆರಗುವೆ ।
ಪಕ್ಷಿವಾಹನ್ನಗೆರಗುವೆನನುದಿನ ।
ರಕ್ಷಿಸಲಿ ನಮ್ಮ ವಧೂವರರ ॥೨॥

ಈ ರೀತಿ "ರಕ್ಷಿಸಲಿ ನಮ್ಮ ವಧೂವರರ", "ಪಾಲಿಸಲಿ ನಮ್ಮ ವಧೂವರರ" ಎಂಬ ನುಡಿಗಳು. ಇದನ್ನು ಎಲ್ಲ ವಿವಾಹ ಮಂಗಳ ಸಂದರ್ಭದಲ್ಲಿ ಹಾಡುವುದರಿಂದ, ಮುಂದೆ ಒಳ್ಳೆಯದಾಗುವುದೆಂಬ ಹಾರಯಿಕೆಯೊಡಗೂಡಿದೆ. ಶ್ರೀವಾದಿರಾಜರು ಹಯಗ್ರೀವ ದೇವರ ಉಪಾಸಕರು.

ಸಾಂಗತ್ಯದಲ್ಲೆ ಕಟ್ಟಿ ರಚಿಸಿದವರು ಕನಕದಾಸರು. ಅವರ "ಮೋಹನತರಂಗಿಣಿ" ವಿಜಯನಗರದ ಸಮಕಾಲೀನ ಜನತೆಯ ಜೀವನ ಚಿತ್ರಣ ನೀಡುವುದಲ್ಲದೆ, ಹಾಡುಗಬ್ಬದ ರಚನೆಯಾಗಿದೆ. ಇದಲ್ಲದೆ ವಿವಿಧ ಅಲಂಕಾರ ಛಂದೋಪ್ರಕಾರಗಳನ್ನು ಬಳಸಿರುವುದು ಅವರವರ ಸಾಹಿತ್ಯ ಸಿದ್ಧಿ–ಅಧ್ಯಯನದ ಅಳವಿಗೆ ಸಾಕ್ಷಿ. ಕವಿಯು ಬುದ್ಧಿ ಸಾಮರ್ಥ್ಯದ ಆಧಾರದ ಮೇಲೆ ಕುಶಲತೆಯಿಂದ ಅಕ್ಷರ–ಪದಗಳನ್ನು ಆರಿಸಿ, ವಿಶಿಷ್ಟ ಆದ ರೀತಿಯಲ್ಲಿ ಜೋಡಿಸಿ ಆದರಿಂದುಂಟು ಮಾಡುವ ಶಬ್ದ ವೈಚಿತ್ರ್ಯ–ವೈವಿಧ್ಯದ ಚಿತ್ರಕವಿತೆ ಹರಿದಾಸರಲ್ಲಿದೆ. ಗೋಪಾಲದಾಸರ ಒಂದು ಸಾಲು ಇದಕ್ಕೆ ಉದಾಹರಣೆ :

ಐದುಮಂದಿ ಭಾವನವರು ಐದುಮೈದುನರು ಕೂಡಿ
ಐದು ಪರಿ ತಾನಾಗಿ ಮೂವರ್ಕೈದು ಕತ್ತಲೆ ಕೋಣೆ
ಗೈದುವಂತೆ ಮಾಡುವರು ಐದು ತಂದು ಬಿಚ್ಚಿಸುವರು
ಐದನೆ ಬೊಕ್ಕಸದ ಮನೆಯಲ್ಲಿದೆಯೊ ನಾಕಾಣೆ ॥

ಹರಿದಾಸರು ರಚಿಸಿರುವ ನಿಂದಾಸ್ತುತಿ "ವ್ಯಾಜಸ್ತುತಿ"ಯ ಒಂದು ಪ್ರಭೇದ. ಸ್ತುತಿಸುವಂತೆಯೆ ನಿಂದಿಸುವ ಪರಿ. ಕನಕದಾಸರ, "ಆರು ಬದುಕಿದರಯ್ಯ ಹರಿ ನಿನ್ನನಂಬಿ" ಇದಕ್ಕೆ ಉದಾಹರಣೆ. ವಿಜಯದಾಸರ "ತೊಳಸದಕ್ಕಿಯ ತಿಂಬ, ಕಲಬುದಳಿಗೆಯೊಳುಂಬ ಕೊಳಗದಲಿ ಹಣಗಳನು ಅಳಿಸಿಕೊಂಬ" ಎಂಬುದೂ ಒಂದು ನಿದರ್ಶನ. ಹೀಗೆ ಹರಿದಾಸ ಸಾಹಿತ್ಯ ಇಲ್ಲಿ ಒಂದು ಬಾಳಿ ಬೆಳಗಿದ ಅನೇಕ ಹರಿದಾಸರ ವಿಶಿಷ್ಟ ರಚನೆ ಕೊಡುಗೆಗಳಿಂದ ತನ್ನದೆ ಆದ ಪ್ರಾಮುಖ್ಯತೆ ಪಡೆಯುತ್ತದೆ. ಪ್ರಧಾನರಾಗಿ ಕೀರ್ತನಕಾರರಾದ ಹರಿದಾಸರು, ತಮ್ಮ ಹರಿಭಕ್ತಿ ಪ್ರಸರಣಕ್ಕಾಗಿ ಇತರ ಸಾಹಿತ್ಯ ಪ್ರಕಾರಗಳಿಗೂ ಕೈಹಾಕಿದರು. ಕೀರ್ತನೆಗಳ ರಚನೆಯ ಹಿನ್ನೆಲೆಯಲ್ಲಿದ್ದ ಧ್ಯೇಯ, ಆಶಯಗಳೆ ಈ ಪ್ರಕಾರಗಳಲ್ಲಿಯೂ ಬಿಂಬಿತಗೊಂಡಿತು. ಜೀವಂತಿಕೆಯಿಂದೊಡಗೂಡಿದೆ ಎಂದು ಹೇಳಿ ಈ ಸಮೀಕ್ಷೆಯನ್ನು ಇಲ್ಲಿಗೆ ಮುಗಿಸಬಹುದು.

## ಅಡಿಟಿಪ್ಪಣಿಗಳು

1 ಕನ್ನಡ ವಿಶ್ವಕೋಶ, ಸಂ.3, ಪುಟ-251, ಮೈಸೂರು ವಿಶ್ವವಿದ್ಯಾನಿಲಯ, 1970

2 ಅಲ್ಬೆರೂನಿ, 10ನೇ ಶ.ದಲ್ಲಿ ಬಂದ ಅರಬ್ ವಿದೇಶೀ ಪ್ರವಾಸಿಗ.

3 'ಕರ್ನಾಟಕ ಹರಿದಾಸ ಸಾಹಿತ್ಯ'ದ ಇಂಗ್ಲಿಷ್ ಉಪೋದ್ಘಾತ, ಪುಟ xxiii 1953.

4 ವಿವರಗಳಿಗೆ ವಚನ ಚಳುವಳಿ, ಟಿ. ವಿ. ನಾರಾಯಣ, ಶ್ರೀ ಸರ್ವಭೂಷಣ ಯೋಗೀಶ್ವರ ಗ್ರಂಥಮಾಲೆ, ಬೆಂಗಳೂರು, 1981, ಪುಟ 1.

5 ಮೊದಲ ಅಧಿಕರಣ ನೋಡಿ.

* ಇಲ್ಲಿ ಸಮಾಜ ಸುಧಾರಣೆ ಎನ್ನುವ ಬಳಕೆಯ ಹಿನ್ನೆಲೆ, ಕೃತಿಗಳಿಂದಲೆ ವಿದಿತ ಆದೀತು.

6 ಭೀಮಾಚಾರ್ಯ ವಡವಿ-ಶ್ರೀಪಾದರಾಜಕಥಾಮೃತ (ಶ್ರೀ ಪೂರ್ಣಬೋಧ ಗುರುಮಠ ಕಲ್ಪತರು ಎಂಬ ಗ್ರಂಥದಲ್ಲಿ ಬರೆಯಲಾಗಿರುವುದು) ಕ.ಸಾ.ಪ.ದ ಗ್ರಂಥಾಲಯದಲ್ಲಿ 20 ಸಂಖ್ಯೆಯ ಕೃತಿ ಎಂದು ಡಾ. ಕೆ. ಎಂ. ಕೃಷ್ಣರಾಯರು ತಿಳಿಸಿದ್ದಾರೆ-ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರು ವಿ. ವಿ. ನಿಲಯ, 1978, ಪುಟ 373, ಸಂ-4, ಭಾಗ-2.

7 ಶ್ರೀಪಾದರಾಜರ ಕೃತಿಗಳು, ಪಂಡಿತ ಆವೃತ್ತಿ, ಟೀಕೆ, ಕೆಲವು ಗ್ರಂಥಗಳಲ್ಲಿ ಮುಳುಬಾಗಿಲೇ ಶ್ರೀಪಾದರಾಜರ ಸ್ಥಳವೆಂದಿದೆ. Mystic Teachings of Haridasa of Karnatak, p. 30 (1939) (Apakarmarkar) ಸಹ ಗಮನೀಯ.

9 ಸ್ವರ್ಣತೀರ್ಥರು ಲಕ್ಷ್ಮೀನಾರಾಯಣನನ್ನು ಭೇಟಿಯಾಗಿದ್ದು ಶ್ರೀರಂಗದ ಬಳಿಯೊ, ಅಬ್ಬೂರಿನ ಬಳಿಯೊ ಎಂದು ಡಾ. ಕೆ. ಎಂ. ಕೃಷ್ಣರಾಯರ ಅಭಿಮತ ಸಂದೇಹ ವೆತ್ತಿದ್ದಾರೆ. ಆದರೆ, ಬ್ರಹ್ಮಣ್ಯತೀರ್ಥರು ಇದ್ದುದೆ ಅಬ್ಬೂರಿನಲ್ಲಿ ಎಂಬುದು ನಿರ್ವಿವಾದ. ಅಂತೆಯೇ ಈ ಸಂದೇಹ ಸರಿಯಲ್ಲ. ಶ್ರೀವರದರಾಜರಾಯರ ಟೀಕೆ ಸಮಂಜಸವೆನ್ನಿಸುತ್ತದೆ. ವಿವರಗಳಿಗೆ ನೋಡಿ ಶ್ರೀಪಾದರಾಜರ ಕೃತಿಗಳು, ಟೀಕೆ, (1973) ಡಾ. ಜಿ. ವರದರಾಜರಾವ್.

10 ಸಂಸ್ಕೃತ ಪಾಠ, "ಶ್ರೀ ಪೂರ್ಣಬೋಧ ಗುರುವಂಶ ಕಲ್ಪತರು."

11 ಈ ಸಂದರ್ಭದಲ್ಲಿ ಇದ್ದ ಶಾಸನಪಾಠ ನಾಶವಾಗಿದೆಯೆಂದು ಸ್ಥಳೀಯರು ಹೇಳುತ್ತಾರೆ. ಹಾಗೂ ಎಲ್ಲ ಮಾಧ್ವ ಮುನಿಗಳೂ ಇದನ್ನೊಪ್ಪಿ ಉದ್ಧರಿಸುತ್ತಾರೆ. ವಿದ್ಯಾರಣ್ಯರೆಂಬ ಮತಾರಣ್ಯವನ್ನು ಅಕ್ಷೋಭ್ಯತೀರ್ಥರು. 'ತತ್ವಮಸಿ' ಎಂಬ ಖಡ್ಗದಿಂದ ಕತ್ತರಿಸಿದರೆಂದೂ ಶಾಸನ ಪಾಠವಿದ್ದು ಈ ವಾದಕ್ಕೆ ಉಭಯತ್ರರಿಗೂ ಒಪ್ಪಿಗೆಯಾದ ಶ್ರೀ ವೇದಾಂತ ದೇಶಿಕರು ತೀರ್ಪುಗಾರರು.

12 ಶ್ರೀಪಾದರಾಜರ ಕೃತಿಗಳು, ಪಂಡಿತ ಆವೃತ್ತಿ, 1973, ಪುಟ 223.

13 ಈ ರೀತಿಯ ಪವಾಡ ಪುರಂದರದಾಸರಲ್ಲೂ ಬಂದಿದೆ.

14 ವಿವರಗಳಿಗೆ ಶ್ರೀವ್ಯಾಸರಾಯರ ಹಾಡುಗಳು, ಪುಟ 4, 1977, ಸಂ. ಕಾವ್ಯಪ್ರೇಮಿ, ಸಮಾಜ ಪುಸ್ತಕಾಲಯ, ಧಾರಾವಾಡ.

15 ಡಾ. ಕೆ. ಎಂ. ಕೃ., ಶ್ರೀಪಾದರಾಯ, ಕನ್ನಡ ಸಾಹಿತ್ಯ ಚರಿತ್ರೆ. ಬೆಂಗಳೂರು ವಿಶ್ವ ವಿದ್ಯಾನಿಲಯ.

16 ಈಗಲೂ ಅದರ ಒಂದು ಕೃತಿ ಮುಳುಬಾಗಿಲು ಮಠದಲ್ಲಿದೆ.

17 ಕೃತಿ ಸಂಖ್ಯೆ : 15 : ಶ್ರೀಪಾದರಾಜರ ಕೃತಿಗಳು.

18 ಇದಕ್ಕೆ ಅನಂತರ ಬಂದ ಶ್ರೀಜಗನ್ನಾಥದಾಸರು "ಫಲಶ್ರುತಿ" ರಚಿಸಿರುವುದು ಮನನೀಯ.

19 ಧ್ಯಾಯನ್ ಕೃತೇಯಜನ್ ಯಜ್ಞೈ: ತ್ರೇತಾಯಾಂ ದ್ವಾಪರೇಽರ್ಚಯನ್ ॥ ಯದಾಪ್ನೋತಿ ತದಾಪ್ನೋತಿ : ಕಲೌ ಸಂಕೀರ್ತ್ಯ ಕೇಶವಂ (ವಿ. ಪ್ರ.) ಅಧ್ಯಾಯ 2 ಶ್ಲೋಕ : 17 : ಅಂಗ : 4).

20 ಈ ವಿಚಾರವನ್ನು ಡಾ॥ ಪಿ. ವಿ. ನಾರಾಯಣರವರು ಹೇಳಿದ್ದು ಅದಕ್ಕಾಗಿ ಅವರಿಗೆ ವಂದಿಸುತ್ತೇನೆ.

21 ಅದೇ, 12

22 ಅದೇ, 21

23 ಅದೇ, ಪುಟ 210-211

24 ಅದೇ, ವೃತ್ತನಾಮ, ಪುಟ 113-125

25 ಅದೇ, ಪೀಠಿಕೆ-1

26 ಶ್ರೀಪಾದರಾಜರ ಕೃತಿಗಳು, ಕೀರ್ತನೆ 31

27 ಕಂಗಳಿದ್ಯಾತಕೊ ಕಾವೇರಿ ರಂಗನ ನೋಡದ (ಉದಾ) ಹಾಗೂ ಉಗಾಭೋಗಗಳು,

* ಎಕ್ಕೊ ನೋಡೆರಂಗನಾಥನ ಚಿಕ್ಕಪಾದವ (,,)

28 ವಿವರಗಳಿಗೆ, ದ್ವೈತ ಸಿದ್ಧಾಂತದ ಇತಿಹಾಸ, ಡಾ॥ ಬಿ. ಎನ್. ಕೆ. ಶರ್ಮ, ವ್ಯಾಸ ರಾಯರ ಬಗ್ಗೆ. (ಮೋತಿಲಾಲ್ ಬನಾರ್ಸಿದಾಸ್, ಹೊಸದಿಲ್ಲಿ) (ದ್ವಿತೀಯ ಮುದ್ರಣ) 1081.

29 ಶ್ರೀಪುರಂದರದಾಸಸಾಹಿತ್ಯ, ಪೂಜಾತತ್ವ, ಮಿಂಚಿನಬಳ್ಳಿ ಗ್ರಂಥಮಾಲೆ, ಧಾರವಾಡ, 1964, ಸಂ : ಬೆಟಗೇರಿ ಕೃಷ್ಣಶರ್ಮ, ಪುಟ 30-33

30 ಪುರಂದರದಾಸರ ಕೃತಿಗಳು, ಸುಬೋಧ, ಪುಟ 374-1965.

31 ಶರ್ಮರವರು ತಮ್ಮ History of the Dvitha School of Vedanta and its Literature ನಲ್ಲಿ ವ್ಯಾಸತೀರ್ಥರು ಹುಟ್ಟಿದ್ದು ಕ್ರಿ. ಶ. 1460ರಲ್ಲಿ ಎಂದಿದ್ದಾರೆ. ಇದು ಸರಿ ಅಲ್ಲವೆಂದು ತಿಳಿದು ಬಂದಿದೆ. ಹಾಗೂ ಈ ಬಗ್ಗೆ ಬೇಲೂರು ಕೇಶವದಾಸರು, ತಮ್ಮ 'ಕರ್ನಾಟಕ ಭಕ್ತವಿಜಯ' ಗ್ರಂಥದಲ್ಲಿ ಸ್ವಾಮಿ ಕಣ್ಣುಪಿಳ್ಳೆಯವರ ಪಂಚಾಗವನ್ನುದ್ಧರಿಸಿ, 22-4-1447. ವ್ಯಾಸರಾಯರ ಜನ್ಮದಿನವೆಂದು ತಿಳಿಸುತ್ತಾರೆ. ಇದು ಶಾ. ಶ. 1369 ಪ್ರಭವ ಸಂವತ್ಸರ ವೈಶಾಖ ಶುದ್ಧ ಸಪ್ತಮಿ ಭಾನುವಾರ ಆಗುತ್ತದೆ. ಒಟ್ಟಾರೆ ಕ್ರಿ. ಶ. 1447 ರಲ್ಲಿ ವ್ಯಾಸರಾಯರು ಹುಟ್ಟಿದ್ದು ಎಲ್ಲರೂ ಒಪ್ಪಿದಾರೆ. ಸೋಮನಾಥಕವಿ ವ್ಯಾಸ ಯೋಗಿಗಳ ಶಿಷ್ಯ ಸಮಕಾಲೀನ ವಿವರಗಳನ್ನು ಸಾಧುವೆಂದು ಪರಿಗಣಿಸಬಹುದಾಗಿದೆ.

32 ವಿವರಗಳಿಗೆ, ಹಾಗೂ ಡಾ॥ ಬಿ. ಎನ್. ಕೆ. ಶರ್ಮ, ಬಲ್ಲಣ ಎಂಬುದು ಬಲ ರಾಮನಿಗೆ ಜಾನಪದ ರೂಢಿ ಪದವೆಂದು ಸುಮತಿ ವಂಶದವರು. ಆದರೆ ಶ್ರೀ ವ್ಯಾಸರಾಜ ಮಠದ ಪ್ರಕಾರ, ತಂದೆಯ ಹೆಸರು ಬಲ್ಲಣನಂದೇ ಒಪ್ಪಿತವಾಗಿದೆ.

33 ಅದೇ.

34 ಇಬ್ಬರು ಹೆಂಡತಿಯರಲ್ಲಿ ಯಾರ್‍ಯಾರಿಗೆ ಯಾರ್‍ಯಾರು ಜನಿಸಿದರೂ ಎಂದು ವಿವರ ತಿಳಿದುಬಂದಿಲ್ಲ.

35 ವ್ಯಾಸಯೋಗಿ ಚರಿತದಲ್ಲಿ 'ಶೈಶವ ಚಪಲೇನ' ಎಂದು ಉಕ್ತ ಆಗಿದೆ. ವ್ಯಾಸ ಯೋಗಿ ಚರಿತಮ್, ಸೋಮನಾಥ ಕವಿ (ಕ್ರಿ. ಶ. 1480-1540) ಬೆಂಗಳೂರು ಪ್ರೆಸ್, ಬೆಂಗಳೂರು, 1926.

36 ಪುರಂದರದಾಸರ ಸುಳಾದಿ, ಪೂಜಾತತ್ವ, ಸಿರಿನಾರಾಯಣ ಯೋತ ಶ್ರೀಪಾದರಾಯ ರಲ್ಲಿ ಪದ ವಿದ್ಯಾಭ್ಯಾಸದ ಮಾಡಿದೆ ನೀನು.

37 PAES : Raja being washed by a Brahmin whom he held sacred and who was a great favourite to him. NARIZ : King of Bosnagar Bows before a Brahmin who has never touched wine nor women and recover his blessings.

38 ಅಮಾವಾಸ್ಯೆಯಂದು ಜನ್ಮನಕ್ಷತ್ರಕ್ಕೆ ಸೂರ್ಯ, ಶನಿ, ಅಂಗಾರಕ, ಗುರುಗ್ರಹಗಳು ಲಗ್ನದಿಂದ 12ನೆ ಮನೆಯಲ್ಲಿ ಸಂಧಿಸುವ ಕೆಟ್ಟ ಘಳಿಗೆ.

39 ಇದು 8-3-1539ರ ಶನಿವಾರವಾಗುತ್ತದೆಂದು ಡಾ॥ ಬಿ. ಎನ್. ಕೆ. ಶರ್ಮ ತಿಳಿಸಿರುತ್ತಾರೆ. ಕರ್ನಾಟಕ ಭಕ್ತವಿಜಯದಲ್ಲೂ ಇದೇ ಇದೆ.

40 ದಾಸಗುಪ್ತರ ಒಂದು ಮಾತು ಇಲ್ಲಿ ಉಲ್ಲೇಖಾರ್ಹ, The logical skill and depth of acute dialectical this King shower by Vyasa

thirtha, stands almost unrivalled in the whole of Indian thought" (History of Indian Philosophy-Volume IV ಮುನ್ನುಡಿ)

41 ಶ್ರೀವ್ಯಾಸರಾಯರ ಹಾಡುಗಳು, ಸಂ: ಕಾವ್ಯಪ್ರೇಮಿ, 1977 ಪುಟ-39

42 ಅದೇ, ಪುಟ-29

43 ಅದೇ, ಪುಟ-47

44 ಅದೇ, ಪುಟ-67

45 ಅದೇ, ಉಗಾಭೋಗ, ಪುಟ-127.

46 ವ್ಯಾಸರಾಯರು, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ, 4 ಭಾಗ-2, ಡಾ॥ ವಿ. ಎ. ದಿವಾಣಜಿ, 1978 ಬೆಂಗಳೂರು ವಿ. ವಿ. ನಿಲಯ, ಪುಟ-470.

47 ಅದೇ

48 ಗುಂಡ್ಮಿ ಚಂದ್ರಶೇಖರ ಐತಾಳ. "ದಾಸಕೂಟ ಎಂಬ ಮಾತು ಎಷ್ಟು ಪ್ರಾಚೀನ" ಪ್ರಬುದ್ಧ ಕರ್ನಾಟಕ, ಸಂಪುಟ 51 ಸಂಚಿಕೆ 3.

* ವಾದಿರಾಜರ ಬಗ್ಗೆ ವಿವರ ತಿಳಿಯಲು ನೆರವಾಗುವ ಗ್ರಂಥಗಳು. "ಶ್ರೀವಾದಿರಾಜ ಗುರುವರ ಚರಿತಮ್" ಎಂಬ ಸಂಸ್ಕೃತ ಕಾವ್ಯ (ರಾಮಚಂದ್ರ, ವಿರಚಿಕ ಪ್ರಕಾಶಿತ ಉಡುಪಿ ಮಠದಿಂದ-1954) "ವಾದಿರಾಜ" ಕೀರ್ತನೆ, ಇನ್ನಿತರ ರಚನೆಗಳು ಹಾಗೂ ವಾದಿರಾಜರೆ ಸ್ವಯಂ ಸ್ವಪ್ನದಲ್ಲಿ ಬಂದು ಬರೆಸಿದರೆನ್ನಲಾದ "ಸ್ವಪ್ನ ವೃಂದಾವನಾಖ್ಯಾನಂ" ಎಂಬ ಗ್ರಂಥ. ಸೋದೆ ಮಠದ ಶಾಸನ, ಉಡುಪಿಯ ಮಧ್ವ ಸರೋವರ, ಧರ್ಮಸ್ಥಳದಲ್ಲಿನ ಕುರುಹುಗಳು ಕೂಡ ವಾದಿರಾಜರು ಅಂದು ಇದ್ದ ಬಗೆಗೆ ಕೆಲವು ವಿವರ ನೀಡುತ್ತವೆ.

49 ಎಪಿಗ್ರಾಫಿಯ ಕರ್ನಾಟಿಕ, 1571, 1582, 1583-ಉತ್ತರ ಕನ್ನಡ ಜಿಲ್ಲೆ.

50 ಡಾ॥ ಬಿ.ಎನ್.ಕೆ.ಶರ್ಮಾ.

51 ಅದೇ.

52 ಅದನ್ನು ತಾಯಿಗೌರಮ್ಮ ಮಗ ಹುಟ್ಟುವ ಮುನ್ನ ದೇವರಿಗೆ ಮಾಡಿಕೊಂಡ ಹರಕೆ ಯೆನ್ನಲಾಗಿದೆ. ವಾದಿರಾಜರು ತಾಯಿಯ ಆಸೆ, ಹರಕೆ, ನೆರವೇರಿಸಿದ್ದು ಮಹಾ ಭಾರತದ ಲಕ್ಷ ಶ್ಲೋಕಕ್ಕೆ ಲಕ್ಷ ವಾಕ್ಯಗಳ ಅರ್ಥ ಬರೆದು, 'ಲಕ್ಷಾಭರಣ ಟೀಕೆ' ಯೆಂದು ದೇವರಿಗರ್ಪಿಸಿ.

53 ಶ್ರೀ ವಾದಿರಾಜರ ಕೃತಿಗಳು (ಪಂಡಿತ ಆವೃತ್ತಿ), 1980, ಮೈಸೂರು ವಿ. ವಿ. ನಿಲಯ, ಸಂ: ಡಾ॥ ಟಿ. ಎನ್. ನಾಗರತ್ನ

54 ಅದೇ.

55 ಅದೇ, ಪುಟ 51, ಮಹಾಭಾರತದ ಯುದ್ಧದಲ್ಲಿ ಜಯದ್ರಥನ ವಧೆಯನ್ನು ಒಂದೇ ಸಾಲಿನಲ್ಲಿ ಹೇಳಿರುವ ಕವಿತಾ ಕೌಶಲ.

56 ಹೋಳಿ ಸಂಭ್ರಮ ಕುರಿತ ಜನಪದ ಅಭಿವ್ಯಕ್ತಿ.

57 ಅದೇ.

58 "ವಾದಿರಾಜರ ವಾಗ್ವಿಲಾಸ" "ಹರಿದಾಸ ಹೃದಯ" 1967, ಡಾ॥ ಜಿ. ವರದ ರಾಜರಾವ್.

59 ತಿರುಪತಿಯ ಶ್ರೀನಿವಾಸ ದೇವಾಲಯದಲ್ಲಿ.

60 ಈ ಬಗ್ಗೆ ಒಂದು ಕತೆಯೂ ಪ್ರಚಲಿತವಿದೆ. ಅಕ್ಕಸಾಲಿಗನೊಬ್ಬ ಗಣಪತಿಯ ಪ್ರತಿಮೆ ಮಾಡಲು ಎಷ್ಟು ಪ್ರಯತ್ನಿಸಿ ಎರಕ ಹೊಯ್ದರೂ ಅದು ಅಚ್ಚಿನಿಂದ ತೆಗೆದು ನೋಡಲು ಹಯಗ್ರೀವ ಮೂರ್ತಿಯದಾಗಿತ್ತೆಂದೂ ಅದನ್ನು ಆತ ಶ್ರೀ ವಾದಿರಾಜರಿಗೊಪ್ಪಿಸಿದನಂತೆ. ಅದೇ ವಿಗ್ರಹ ಅವರಿಗೆ ಉಪಾಸ್ಯದೈವ ಆದದ್ದು.

61 ಇಂಥ ನಾಲ್ಕು ಪರ್ಯಾಯಗಳನ್ನು ಶ್ರೀವಾದಿರಾಜರು ನಿರ್ವಹಿಸಿ, ಐದನೆಯ ಬಾರಿ ತಮ್ಮ ಉತ್ತರಾಧಿಕಾರಿಗಳಾದ ಶ್ರೀವೇದವೇದ್ಯರಿಗೆ ಬಿಟ್ಟುಕೊಟ್ಟರು.

62 ಈ ಸಂದರ್ಭದಲ್ಲಿ ವಾದಿರಾಜರಿಗೆ ಇದ್ದ ತಪಸ್ಸಿದ್ಧಿ, ಅವರು ಮಾಡಿದ ಪವಾಡಗಳಲ್ಲಿ ಒಂದು ದೇವಾಲಯ ನಿರ್ಮಿತಿಯಲ್ಲಿ ನಡೆಯಿತು. ಅವರು "ನಾರಾಯಣಭೂತ" ನೆಂಬ ಬ್ರಹ್ಮರಾಕ್ಷಸ ಭೂತವನ್ನು (ಭೂತರಾಜರೆಂದು ಕರೆಯುತ್ತಾರೆ) ವಶಪಡಿಸಿ ಕೊಂಡು ಅವನಿಂದ ಅನೇಕ ಕೆಲಸ ಮಾಡಿಸಿದರು.

63 ಶ್ರೀಜಗನ್ನಾಥದಾಸರ ಕೀರ್ತನೆ : ವಾದಿರಾಜರು ಧ್ಯಾನಸ್ಥರಾಗಿದ್ದಾಗ, ಅವರ ಪಾದಪೀಠ ಕಾಲುಮಣೆಯ ಕೆಳಗೆ ಹಾವಿನಿಂದ ತಪ್ಪಿಸಿಕೊಳ್ಳುವುದು ಇಲಿಯೊಂದು ಒಂದು ಆಶ್ರಯ ಪಡೆದ ಸಣ್ಣ ಸಂದರ್ಭದ ಕೀರ್ತನೆ ಇದೆ.

64 ತೆಲುಗು ಭಾಷೆಯ ಬಳಕೆ

65 ಪುಟ-461, ಶ್ರೀವಾದಿರಾಜರ ಕೃತಿಗಳು.

* ಪುಟ-117

66 ಅವರು ಒಮ್ಮೆ ಬರೆದುದನ್ನು ಯಾವಾಗಲೂ ಅಳಿಸುವುದಿಲ್ಲ. "ಉಕ್ತಂ ನೋ ವಕ್ತಿ ಭೂಯಃ ಕ್ವಚಿದಪಿ ಲಿಖಿತಂ "(ವಾದೀಂದ್ರಶೇಖರ ಗುರುಗುಣಸ್ತವನದ ಒಂದು ಸಾಲು) ಇನ್ನೂ ಹೆಚ್ಚಿನ ವಿವರಗಳಿಗೆ ನೋಡಿ: "ಮಾಧ್ವ ವಾಙ್ಮಯ ತಪಸ್ವಿಗಳು', ಪಂಢರಿನಾಥ ಆಚಾರ್ಯಗಲಗಲಿ

67 ವಿವರಗಳಿಗೆ, ಕರ್ನಾಟಕ ಹರಿದಾಸಸಾಹಿತ್ಯ, ಪೀಠಿಕೆ, (ಇಂಗ್ಲಿಷ್).

68 ವಿವರಗಳಿಗೆ, ಶ್ರೀಪುರಂದರದಾಸರು, ಮಿಂಚಿನಹಳ್ಳಿ, 1967 ಪುಟ-61, ಹಾಗೂ ಡಾ॥ ಪಾಂಡುರಂಗದೇಸಾಯಿ ಅವರ ಲೇಖನ.

69 ಸುಬೋಧ ರಾಮರಾಯರು, ಶ್ರೀಪುರಂದರದಾಸರು. ಪುಟ-19.

70 ವಿಜಯದಾಸರು, 'ಪುರಂದರಾಲಯ ಘಟ್ಟ'ವೆಂದಿದ್ದಾರೆ.

71 ಕರ್ನಾಟಕ ಸಂಸ್ಕೃತಿ ಸಂಶೋಧನೆ, ಉಷಾ ಸಾಹಿತ್ಯ ಮಾಲೆ, ಮೈಸೂರು.

72 ಶ್ರೀಪುರಂದರದಾಸರು. ಪುಟ-42, 1964, ಡಾ॥ ಪಿ. ಬಿ. ದೇಸಾಯಿ.

74 ಕರ್ನಾಟಕ ಸಂಸ್ಕೃತಿ ಶೋಧನೆ, ಪೂರ್ವೋಕ್ತ, ಈ ಅಭಿಮತವನ್ನೇ ಡಾ॥ದಿವಾಣಜಿ ಅವರು ಅನುಮೋದಿಸಿದಾರೆ, ನೋಡಿ "ಪ್ರಸಾದಯೋಗ".

75 ಸಾಗರ, 55, ಎಂ. ಕರ್ನಾಟಕ ಪುಟ-271.

76 ವಿವರಗಳಿಗೆ ನೋಡಿ, ಪುರಂದರದಾಸರು-ಚಾರಿತ್ರಿಕ ಸಂಗತಿಗಳು, ಕ.ಸಾ.ಪ. ಪತ್ರಿಕೆ ಸಂ. 69, ಸಂಚಿಕೆ 1 ಜೂನ್ 84.

77 ಮಹಾರಾಷ್ಟ್ರದಲ್ಲಿ ಪುರಂದರದಾಸರು ಪುರಂದರಗಡದಲ್ಲಿ ಜನ್ಮಿಸಿದರೆಂಬ ಭಾವನೆ ಎಲ್ಲಿಯೂ ಇದ್ದಂತಿಲ್ಲ. ಇಂದಿನ ಪುರಂದರಘಡಕ್ಕೆ ಹೋಗಿ ನೋಡಿದರೆ, ಅಲ್ಲಿ ಪುರಂದರದಾಸರ ಸ್ಮಾರಕವೂ ಇಲ್ಲ. ಅವರ ಸ್ಮರಣೆಯ ಮಾತುಗಳೂ ಇಲ್ಲ. (ಶ್ರೀಪುರಂದರ ಸಾಹಿತ್ಯ-ಸಂಕೀರ್ಣ ಸಂಗ್ರಹ 1965, ಮಿಂಚಿನಬಳ್ಳಿ, ಧಾರವಾಡ, ಪುಟ-62

78 ಹೆಸರಲ್ಲಿಯೂ ಭಿನ್ನಾಭಿಪ್ರಾಯ ಇವೆ. ಕೆಲವರು ಕೃಷ್ಣಪ್ಪನಾಯಕ, ಕೆಲವರು-ಶೀನಪ್ಪನಾಯಕನೆನ್ನುತ್ತಾರೆ.

80 ಈ ಬಗ್ಗೆ ಡಾ॥ ಜಿ. ವರದರಾಜರಾಯರೂ ಅವರ "ಪುರಂದರದಾಸರು" ಪುಸ್ತಕದಲ್ಲಿ ತಿಳಿಸಿದಾರೆ. "ಪ್ರಕೃತದಲ್ಲಿ ಈ ಬಗ್ಗೆ ಹೆಚ್ಚು ಹೇಳುವಂತಿಲ್ಲ. ಅವುಗಳಲ್ಲಿ ಪುರಂದರದಾಸರ ಹಿರಿಯರಿದ್ದರೆ ಎಂಬುದು ಪ್ರಶ್ನೆ."

81 ಇಲ್ಲಿ ಉಲ್ಲೇಖಿಸಿರುವ ಪಾಠಾಂತರಗಳಲ್ಲಿ ಸಾಮಾನ್ಯ ಅಂಶವೇ ಹೆಚ್ಚು.

82 ಪುರಂದರದಾಸರು, ಡಾ॥ ಜಿ. ವಿ., ಸಾಹಿತ್ಯ ಅಕಾಡೆಮಿ.

83 ವಿಜಯದಾಸರ ಕೃತಿಗಳು

84 ಅಭಿನವ ಜನಾರ್ದನ ವಿಠಲರು

85 ಡಾ ಜಿ. ವರದರಾಜರಾವ್, ಶ್ರೀಪುರಂದರದಾಸರು.

86 'ಕಠಬ', ಸಾಲಕ್ಕಾಗಿ ಬರೆದು ಕೊಡುವ ಪತ್ರ, ಕರಾರು ಪತ್ರ.

87 ವಧ, ಹೊದೆವ ಉತ್ತರೀಯ

88 ಪುರಂದರದಾಸರು, ಡಾ॥ ವ. ಅ. ದಿವಾಣಜಿ, ಪ್ರಸಾರಯೋಗ, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಪುಟ 571. ಬೆಂಗಳೂರು ವಿ ವಿ ನಿಲಯ 1978.

89 ಮುಕುತಿ ಮೂಗುತಿ, ಪರ್ವತವಾಣಿಯವರ ನಾಟಕ.

90 ಶ್ರೀಪುರಂದರದಾಸರು, ಡಾ॥ ಪಾಂಡುರಂಗ ದೇಸಾಯಿ, ಪುಟ-43. ಶ್ರೀಪುರಂದರ ದಾಸರು, ಮಿಂಚಿನಬಳ್ಳಿ ಪ್ರಕಟಣೆ.

91 ಅದೇ, ಪುಟ-44.

92 ಶ್ರೀಪುರಂದರದಾಸರ ಕೃತಿಗಳು, ಭಾಗ 1-2, ಸುಬೋಧ 1964 ಪುಟ 101 (ಕೀರ್ತನೆ)

93 ಅದೇ, ಪುಟ 180 (ಉಗಾಭೋಗ)

94 ಅದೇ, ಪುಟ 97

95 ಅದೇ, ಪುಟ 178 (ಉಗಾಭೋಗ)

96 ಅದೇ, ಪುಟ 329 (ಕೀರ್ತನೆ)

97 ಅದೇ, ಪುಟ 159,

98 ಇಲ್ಲಿ ರಾಜಮೋಹ ಎಂದರೆ ರಾಜಾಶ್ರಯವೆಂದಾಗುತ್ತದೆಯೆ ವಿನಹ, ಪುರಂದರ ದಾಸರ ರಾಜರಾಗಿರಲಿಲ್ಲ.

99 ಇಂಗ್ಲಿಷ್‌ನಲ್ಲಿ : Dark night of the soul ಎಂದು ಅನುಭಾವ ಪರಿಭಾಷೆ ಯಲ್ಲಿ ಹೇಳುತ್ತಾರೆ. ವಿವರಗಳಿಗೆ ನೋಡಿ : Pathway to God in Kannada Literature by Dr. R. D. Ranade, Published : Bharathiya Vidya Bhavan.

100 ಅದೇ, ಪುಟ 80.

101 ಅದೇ, ಪುಟ 45.

102 ಅದೇ, ಪುಟ 225.

103 ಅದೇ, ಪುಟ 46.

104 ಆಲಿಸಿದಳು ಮಗನ ಯಶೋದೆ, ಪುಟ 59.

105 ಪುಟ-334.

106 ಪುಟ-36

107 ವಿವರಗಳಿಗೆ, ಶ್ರೀಪುರಂದರದಾಸರು, ಮಿಂಚಿನಬಳ್ಳಿ, 1964.

108 ಉಡುಪಿ, ಪಂಢರಾಪುರ, ತಿರುಪತಿ, ಅಹೋಬಲ, ಮುಳೂರು, ಗೋಕರ್ಣ, ಹಂಪೆ ಎಲ್ಲ ಕ್ಷೇತ್ರಗಳೂ ಬರುತ್ತವೆ.

109 ಸುಬೋಧ, ಪುಟ-99

110 ಅದೇ, ಪುಟ-175 (ಉಗಾಭೋಗ)

111 ಅದೇ, ಪುಟ-87.

112 ಅದೇ, ಪುಟ-129, ಇಲ್ಲಿ ಸ್ನಾನ ಎಂದರೇನು ಎಂಬುದರ ಕಿರು ವ್ಯಾಖ್ಯಾನವೇ ಇದೆ.

113 ಪುಟ, 123 ಮಡಿಯ ಪ್ರದರ್ಶನ ಭಾವ

114 ಅದೇ-ಪುಟ, 296

115 ಅದೇ-ಪುಟ, 367

116 ಸುಳಾದಿ, ಪುಟ-379(ಸುಬೋಧ-ಪೂರ್ವೋಕ್ತ)

117 ವಿಷ್ಣುಪುರಾಣದ ಶ್ಲೋಕದ ಸುಂದರ ಕನ್ನಡೀಕರಣ.

118 ಪುರಂದರದಾಸರ ಕೃತಿಗಳನ್ನು ಪ್ರಮೇಯ, ತತ್ವ ನಿರೂಪಣೆ, ಕ್ಷೇತ್ರ ಮಹಾತ್ಮೆ, ಆರ್ತನಿನಾದ, ಆರಾಧನೆ, ಲೋಕ ಸಂಗ್ರಹ, ಮಾನವ ಧರ್ಮರಹಸ್ಯ-ಈ ವಿಭಾಗ ಗಳಲ್ಲಿ ಅಧ್ಯಯನ ನಡೆಸಬಹುದು. ವಿವರಗಳಿಗೆ, ಪುಟ 125 ಶ್ರೀಪುರಂದರ ದಾಸರು ಮಿಂಚಿನಬಳ್ಳಿ

119 ವಿಶ್ವತಃ ಚಕ್ಷುರುತ ವಿಶ್ವತೋಮುಖೋ
ವಿಶ್ವತೋ ಬಾಹುರುತ ವಿಶ್ವತಃ ಸ್ಪಾತ್
ಸಂಬಾಹುಭ್ಯಾಂ ಧಮತಿ ಸಂಪತತ್ರೈಃ
ದ್ಯಾವಾಭೂಮಿ ಜನಯನ್ದೇವ ಏಕಃ (ಋಗ್ವೇದ ಮಂಡಲ 10-18-3).

120 ಒಬ್ಬಾಚಾರಿಯನು ದೈವವೆ ಇಲ್ಲವೆಂದ, ಎಂದಾರಂಭ ಆಗುತ್ತದೆ ಈ ಸುಳಾದಿ. ಸುಬೋಧ, ಪೂರ್ವೋಕ್ತ ಪುಟ 189.

121 ಪುಟ, 42, 112, 271, 290 ಅನೇಕಡೆ ಉದಾ : ಡಂಗುರವ ಸಾರಿರಯ್ಯ ಡಿಂಗರಿಗರೆಲ್ಲರು ಎಂಬೆಡೆಯಲ್ಲೆಲ್ಲ ಗೈವ ಪಾರಮ್ಯ ಹಾಗೂ ಏಕದೇವೋಪಾಸನೆ (ಹರಿಯುಪಾಸನೆ) ಬಗ್ಗೆ ಒತ್ತು ಕೊಟ್ಟಿದ್ದಾರೆ

122 ಸಮಗ್ರ ಕನ್ನಡ ಸಾಹಿತ್ಯ, ಪುಟ 474, ಸಂ. 4, ಭಾಗ 2 1978.

123 ಆರು ಸಂಪುಟಗಳು, ಶ್ರೀಪುರಂದರದಾಸಸಾಹಿತ್ಯ, ಮಿಂಚಿನಬಳ್ಳಿ.

124 ಪುರಂದರ ಪ್ರಪಂಚ, ಹರಿದಾಸಹೃದಯ, ಡಾ॥ ಜಿ. ವಿ. ರಾವ್, 1967, ಪುಟ-47.

125 ಅದೇ, ಪುಟ-52.

126 "ಕಿಚ್ಚಿಗೆ ಇರುವೆ ಮುತ್ತುವವೆ"
"ಕೋಳಿಗೆ ಏತಕ್ಕೆ ಹೊನ್ನ ಪಂಜರವು"
"ಕಲ್ಲ ಗೋವಿನ ಹಾಲ ಕರು ಬಯಸುವಂತೆ"
"ಹಸಿವೆಗಾರದೆ ಬೆಕ್ಕು ಹತ್ತಿಯನು ಮುದ್ದಂತೆ"

127 ವಿವರಗಳಿಗೆ ಡಾ॥ ಜಿ. ವಿ. ರಾವ್, ಪುರಂದರದಾಸರು, ಹಲಗೂರು ಕೃಷ್ಣಾಚಾರ್ಯ, ಹರಿದಾಸಕೂಟವು, ಕರ್ನಾಟಕ ಸಂಗೀತವು, ಕ. ಸ. ಸಂಸ್ಥೆ, ಧಾರವಾಡ 1931.

128 ವಿವರಗಳಿಗೆ, ಕರ್ನಾಟಕ ಭಕ್ತವಿಜಯ

| | | |
|---|---|---|
| 1 | ಕೇದಾರದಿಂದ ರಾಮೇಶ್ವರ ಪರಿಯಂತರ, ಎಲ್ಲ ತೀರ್ಥಕ್ಷೇತ್ರಗಳ ಮಹಿಮೆಗಳು ಸ್ಥಳ ಪುರಾಣಗಳು ಸಹಿತವಾಗಿ. | 1,25,000 |
| 2 | ಮಧ್ವಾಚಾರ್ಯರ ಮಹಿಮೆ, ಗುರುಪರಂಪರೆಯಲ್ಲಿ ವ್ಯಾಸರಾಯರ ಅವರೆವಿಗೆ ಎಲ್ಲರ ಮಹಿಮೆ, ತಂತ್ರಸಾರ, ದೇವತಾ ತಾರತಮ್ಯ | 5,010 |
| 3 | ಬ್ರಹ್ಮಲೋಕ, ಕೈಲಾಸಲೋಕ, ರಿಕ್ತ್ವಾಲಕಾರ ಲೋಕ ವರ್ಣನೆಗಳು | 90,000 |
| 4 | ಪುರಾಣ ಕಥೆಗಳ ಸಾರ | 90,000 |
| 5 | ದೇವತೆಗಳ ಮೂರ್ತಿಧ್ಯಾನ, ಅವರವರ ಕೀರ್ತಿಮಾನ, ಗಂಡಕೀ ಮಹಾತ್ಮ್ಯ ಕಲ್ಯಾಣ ಚರಿತ್ರೆಗಳು | 60,000 |
| 6 | ಅನ್ಹೀಕ ಪದ್ಧತಿ, ಏಕಾದಶೀ ನಿರ್ಣಯ, ಜಯಂತೀ ನಿರ್ಣಯ, ಶ್ರುತಿಸ್ಮೃತಿಗಳ ಸಹಿತವಾಗಿ | 16, 000 |
| 7 | ಸುಳಾದಿಗಳು | 64, 000 |
| 8 | ದೇವರನಾಮಗಳು (ಕೀರ್ತನೆಗಳು) | 25, 000 |
| | ಒಟ್ಟು | 4, 75, 000 |

ವಚನಕಾರರ ರಚನೆಗಳ ಬಗ್ಗೆಯೂ ಇಂಥ ವಿಪರೀತ ಸಂಖ್ಯೆಗಳ ಉಲ್ಲೇಖವಿದೆ. ವಿವರ.ಕ್ಕೆ ನೋಡಿ, ವಚನ ಸಾಹಿತ್ಯ, ಒಂದು ಸಾಂಸ್ಕೃತಿಕ ಅಧ್ಯಯನ (1983) ಡಾ॥ ಹಿ. ವಿ. ನಾರಾಯಣ ಅವರ ಪಿಎಚ್. ಡಿ. ನಿಬಂಧ, ಪುಟ 55-6, ಪ್ರ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ, ಗದಗ.

129 ಸುಬೋಧ, ಪುಟ-267.

130 ಉಗಾಭೋಗಗಳು ಮತ್ತು ವಚನಗಳು, ಡಾ॥ ಚಿದಾನಂದಮೂರ್ತಿ, ಸಂಶೋಧನ ತರಂಗ, ಪುಟ 48-49, ಸರಸ ಸಾಹಿತ್ಯ ಪ್ರಕಾಶನ, ಮೈಸೂರು 1966,

131 Great people think alike.

132 E. P. India Vol. xxi p. 139 77-Kamalapur plates of Krishnadevaraya Saka-1447 (ಎಂದರೆ ಕ್ರಿ.ಶ. 1525)ಈ ಅವಧಿ ಯಲ್ಲಿ ಪುರಂದರರ ಗುರುಗಳಾದ ವ್ಯಾಸರಾಯರಿದ್ದರು.

133 ಶಾಸನಪಾಠ E.P. India, vol. xxxi P.P. 152, 153, 159.
ಪಂಕ್ತಿ : 269 ಧೀಮಾನ್ ಲಕ್ಷ್ಮಣಸಾಮ್ಯಃ ಶ್ರೀಪುರಂದರ ದಾಸಜಃ, ವಸಿಷ್ಠ ಗೋತ್ರ

271 ಕ್ರಯೋ ವೃತ್ತಿದ್ವಯಮಕ್ಷೇತಿ ಯಾಚುಷಃ. (177) ವಸಿಷ್ಠನ್ವಯ ಸಂಭೂತ (:) ಶ್ರೀಪುರಂದರದಾಸಜಃ

271 ದ್ವಿಜೋ ಹೇಟಣ ದಾಸಾಖ್ಯೋ ಯಾಜುಷೋಕ್ರ ದ್ವಿವೃತ್ತಿಕಃ (178) ಇತ್ಯಾದಿ (ಪುಟ 152-153)

426 ಜ (260) ವಸಿಷ್ಟ (ಷ್ಠ) ಗೋತ್ರ ಸಂಭೂತಃ ಶ್ರೀಪುರಂದರದಾಸಜಃ ದೀವಾನ್ ಮಧ್ವ (ಪ) ದಾಸಾ.

427 ಜ್ಯೋ ಯಾಜುಷೋಕ್ರ ದ್ವಿವೃತ್ತಿಕಃ, (291)......ಇತ್ಯಾದಿ

134 ಇಲ್ಲಿ "ಮಧ್ವಪಂತ" ಎಂದು ಪಠಾರ ತೇಲಿಸಿ ಓದಿರುವುದು ತಪ್ಪೆಂದು ಬಾಗೀರದಾರರು ಅಡಿ ಟಿಪ್ಪಣಿಯಲ್ಲಿ ಸೂಚಿಸಿದ್ದಾರೆ). "ಪ್ಪ" ಒತ್ತಕ್ಷರ-ಊಹಿತ ಪಾಠ-ಗಮನಾರ್ಹ- (ಆದೇ, ಪುರಂದರದಾಸರು ಚಾರಿತ್ರಿಕ ಸಂಗತಿಗಳು ಕ.ಸಾ.ಸ.ಪ, ಪುಟ 19 ಜೂನ್ 1984.)

134 ಪ್ರಸಾದಯೋಗ, ಪುಟ-30, ಡಾ॥ ವ ಅ ದಿವಾಣಜಿ

136 ಶ್ರೀಪುರಂದರದಾಸರು, ಚಾರಿತ್ರಿಕ ಸಂಗತಿಗಳು, ಪುಟ-21.

137 Pathway to God in Kannada Literature, P. 24-25, Bharatiya Vidya Bhavan.

138 "ಗಿಳಿಯು ಪಂಜರದೊಳಿಲ್ಲ" ಎಂಬ ಹಾಡು ಪುರಂದರದಾಸರು ಒಬ್ಬ ಮಗನು ಅಕಾಲ ಮೃತ್ಯುವಿಗೆ ತುತ್ತಾದಾಗ ಹೇಳಿದ್ದೆಂದು ಹೇಳುವರಿದ್ದಾರೆ. ಇದು ಎಷ್ಟರ ಮಟ್ಟಿಗೆ ನಿಜವೆಂಬುದಿನ್ನೂ ನಿರ್ಧರವಾಗಿಲ್ಲ.

139 ಪ್ರಸಾದಯೋಗ, ಪುಟ-41.

140 ವಿವರಗಳಿಗೆ ಪ್ರಸಾದಯೋಗ, ಪುಟ 35. ಡಾ॥ ವಿ. ಪಿ. ದಿವಾಣಜಿ ಪ್ರಕಾರ ಕ್ರಿ. ಶ. 1565, ನಿರ್ಯಾಣ ಕಾಲ.

141 ಪುರಂದರದಾಸರ ನಿರ್ಯಾಣ ಕಾಲ ಕ್ರಿ. ಶ. 1565, ಜನವರಿಯೆಂಬುದು ಪ್ರಮಾಣ ಸಿದ್ಧವಾದ ಮಾತು. ಶ್ರೀ ಕನಕದಾಸರ ಭಕ್ತಿಗೀತೆಗಳು, ಪು. xxi ; ಸಂ. ಬೆಟಗೇರಿ ಕೃಷ್ಣಶರ್ಮ, ಸಮಾಜ ಪುಸ್ತಕಾಲಯ, ಧಾರವಾಡ 1965.

142 ವಿ. ಸೀ., ಶ್ರೀಪುರಂದರದಾಸರು : ಪುಟ-55.

143 ಕನ್ನಡ ಸಾಹಿತ್ಯ ಚರಿತ್ರೆ, ಒಂದು ಸಮೀಕ್ಷೆ, ತ ಸು ಶಾಮರಾಯ ಪು. 189, ಮೊದಲನೆ ಮುದ್ರಣ.

144 ಪರಿಶೀಲನ, ಡಾ॥ ಜಿ. ಎಸ್. ಶಿವರುದ್ರಪ್ಪ, ಕನಕದಾಸರ ವಿಶಿಷ್ಟತೆ ಪುಟ-95, 1972, ಉಷಾ ಸಾಹಿತ್ಯ ಮಾಲೆ, ಮೈಸೂರು.

145 ಪರಿಶೀಲನ, ಪೂರ್ವೋಕ್ತ.

146 ಕನಕದಾಸರ ಭಕ್ತಿಗೀತೆಗಳು, ಸಂ. ಬೆಟಗೇರಿ ಕೃಷ್ಣಶರ್ಮ

147 ವಿವರಗಳಿಗೆ ನೋಡಿ, ಕನಕ ಕಿರಣ ಪೀಠಿಕೆ, ಕಾ. ತ. ಚಿಕ್ಕಣ್ಣ, (1982) ಪ್ರ., ಕಾಳಿದಾಸ ಸಾಂಸ್ಕೃತಿಕ ಸಂಘ, ಬೆಂಗಳೂರು-40.

148 ಕನಕದಾಸರು ಹಾಗೂ ಅವರ ಕೀರ್ತನೆಗಳು, ಪು. vii-xix, 1965, ಶ್ರೀಕನಕ ದಾಸರ 400ನೆ ವರ್ಧಂತಿ ಸಮಿತಿ, ರಾಜ್ಯ ಸರ್ಕಾರ, ಬೆಂಗಳೂರು. "ಇವರು ಧಾರವಾಡ ಜಿಲ್ಲೆ'ಬಾಡ'ಗ್ರಾಮದಲ್ಲಿ ಕುರುಬರ ಜಾತಿಯಲ್ಲಿ ಬೀರಪ್ಪ-ಬಚ್ಚಮ್ಮನ ಮಗನಾಗಿ ಜನಿಸಿ 'ತಿಮ್ಮಪ್ಪ' ಎಂಬ ಹೆಸರಿನಿಂದ ವಿರಾಜಿಸಿದರು. ಜೀವನಾವಧಿಯ ಕಾಲ, 1508-1606ರವರೆಗೆ. ಇದು ಈಗ ಸರಿಯಾದುದಲ್ಲವೆಂದು ನಿರ್ಧರವಾಗಿ ಕನಕದಾಸರ ಕಾಲ ಕ್ರಿ. ಶ. 1488 ಎಂದಾಗಿದೆ".

149 ಚಿಕ್ಕಮಗಳೂರು ಜಿಲ್ಲೆ ಲಕ್ಯ ಹೋಬಳಿಗೆ ಸೇರಿದ 'ಸಾದರಹಳ್ಳಿ' ಎಂಬ ಊರಿನ ದೇವತೆ "ಬೀರೇದೇವರು". ಅಲ್ಲಿ ಸುತ್ತಮುತ್ತ ನಡೆದುಕೊಳ್ಳುವರೆಲ್ಲ ಕುರುಬರೆ. ಇಲ್ಲಿಯ ಕುರುಬರನ್ನು ಹಾಲುಮತಸ್ಥರೆನ್ನುತ್ತಾರೆ. ಕುರಿ, ಆಡು ಮೇಯಿಸುವುದು ಇವರಲ್ಲಿ ಬೆಳೆದು ಬಂದ ಪದ್ಧತಿ.

150 ಬ್ರಹ್ಮೇಶ್ವರ ದೇವಾಲಯದ ಬಳಿಯ ಶಿಲಾಲಿಪಿ-ಚಾಳುಕ್ಯ ವಿಕ್ರಮ ಶಕ 47 ಶುಭ ಕೃತ ಸಂವತ್ಸರ.

151 ಕನ್ನಡ ಸಾಹಿತ್ಯ ಚರಿತ್ರೆ, ರಂ ಶ್ರೀ ಮುಗಳಿ

152 ರಂ. ಶ್ರೀ. ಮುಗಳಿ, ತವನಿಧಿ, ಪುಟ-61.

153 ವಿವರಗಳಿಗೆ ನೋಡಿ, ಕನಕದಾಸರ ಭಕ್ತಿಗೀತೆಗಳು.

154 ಕರ್ನಾಟಕ ಹರಿದಾಸ ಸಾಹಿತ್ಯ, ಆರ್. ಎಸ್. ಪಂಚಮುಖಿ

155 16ನೆ ಶತಮಾನವೆಂಬುದನ್ನು ಗಮನಿಸಿದಾಗ.

156 ಇದಕ್ಕೆ ಪ್ರತ್ಯಕ್ಷ ಪ್ರಮಾಣ, ಆಧಾರ ದೊರೆಯದಿದ್ದರೂ ಕಾಲದೃಷ್ಟಿಯಿಂದ ಊಹೆ ಮಾಡಲಾಗಿದೆ.

157 ಕಲುಷದ ಮಾಯಿಗಳನ್ನು ಸೋಲಿಸಿ
ಖಿಲವಾದ ವೈಷ್ಣಮತವನ ನಿಲಿಸಿ ಕಾಗೆ :
ನಳಿನಜಾದಿಕೇಶವ ಪರದೈವನೆಂದೆನಿಸುವ :
ಎಂಬ ಪಾಠಾಂತರವೂ ಇದೆ.

158 ಅದೇ, ಪು. 171.

159 ಹಿಂದೆಯೆ ತಿಳಿಸಿದಂತೆ, ಕುರುಬ ಜನಾಂಗದವರೆಂದು, 'ವಿಭೂತಿ' ಹಚ್ಚಿಕೊಳ್ಳುತ್ತಾರೆ. ಹಾಗೆಯೆ ತಿರುಪತಿಯ ಶ್ರೀನಿವಾಸನ ಒಕ್ಕಲಾಗಿ ನಡೆದುಕೊಳ್ಳುವವರೂ ಇದ್ದಾರೆ. ಅಂಥ ಕುಟುಂಬದವರು 'ದಾಸಯ್ಯ'ಗಳೆ ಆಗಿ ತಿರುಪತಿಗೆ ಮುಡಿಪು, ಕೊಂಡೊಯ್ಯು ವುದು ನಡೆದು ಬಂದ ಪದ್ಧತಿಯಾಗಿದೆ. ಕನಕದಾಸರ ತಂದೆ ತಿರುಪತಿ ಶ್ರೀನಿವಾಸರ ಭಕ್ತ, ಹಾಗೂ ಶ್ರೀನಿವಾಸನ ದಯದಿಂದ ಹುಟ್ಟಿದ ದಾಸರಿಗೆ, 'ತಿಮ್ಮಪ್ಪ'ನೆಂದೆ ಹೆಸರಿದ್ದರು.

163 ಅದೇ, 153

161 ಕನಕದಾಸರು ಕುರುಬ ಜನಾಂಗದವರೆಂದು ಪ್ರೊ. ಎಸ್. ಕೆ. ರಾಮಚಂದ್ರರಾವ್ ಅವರು ಕಾಗಿನೆಲೆಯ ಕನಕ ಎಂಬ ತಮ್ಮ ಪ್ರಬಂಧದಲ್ಲಿ ತಿಳಿಸುತ್ತಾರೆ. (ಬೀರೇ ದೇವರು-ಬೀರ : ವೀರ ಸಂಸ್ಕೃತದ ತದ್ಭವ.)

162 Renaisance, ಜಾಗೃತಿಯ ಯುಗ ಅದೇ ಸುಮಾರಿನಲ್ಲಿ ಭಾರತದ ಎಲ್ಲೆಡೆ ಆಧ್ಯಾತ್ಮಿಕ ಜಾಗೃತಿ, ಭಕ್ತಿ ಆಂದೋಲನ ನಡೆಯಿತು.

163 ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ, ಕನಕದಾಸರೂ ಅವರ ಕೀರ್ತನೆಗಳೂ, ಪು. vii

164 ಅದೇ, ಪು. 153.

165 ಇಲ್ಲಿ 'ಕೋಣನ ತೂಬು' ಎಂದು ಈಗ ಪ್ರಸಿದ್ಧ ಆಗಿರುವ ವ್ಯಾಸಸಮುದ್ರದ ಬಳಿಯಿರುವ ಕೆರೆತೂಬು, ಕನಕರಿಂದಲೇ ಆಗಿದ್ದು ಎಂದು ಪ್ರತೀತಿ. ವ್ಯಾಸರಾಯರ ಬಳಿ ಬಂದ ಕನಕ, ಮಂತ್ರೋಪದೇಶ ಕೇಳಿದರೆ, ಗುರುಗಳು "ಕುರುಬನಿಗೆಂತಹ ಮಂತ್ರ, ಕೋಣ ಮಂತ್ರ"ವೆಂದರಂತೆ. ಕನಕ ಅದೇ ಪಠಿಸಿದ. ಅವನು ಯಮನಾಂತ ಸಂಘೋಷನಾದ್ದರಿಂದ, ಯಮಧರ್ಮನ ಕೋಣ ಬಂದು, ತೊಟಗಡ್ಡವಾಗಿದ್ದ ಬಂಡೆಕಲ್ಲನ್ನು ಸೀಳಿ ಹಾಕಿತು.

166 ಡಾ॥ ಜಿ. ವರದರಾಜರಾವ್, ಕನಕದಾಸರ ಜೀವನ ವಿಚಾರ, ಕನಕಕಿರಣ, 1982.

167 ಡಾ॥ ಜಿ. ಎಸ್. ಶಿವರುದ್ರಪ್ಪ, ಪರಿಶೀಲನ:

168 ಕನ್ನಡದಲ್ಲಿ ಭಾವಗೀತೆ, ಆರ್. ಪ್ರಭುಶಂಕರ, ಪು 167

169 ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಪ್ರಕಾಶಕರು.

170 ಅದೇ, ಪು. 86.

171 ಪರಿಶೀಲನ, ಡಾ॥ ಜಿ. ಎಸ್. ಎಸ್., ಪು.-96.

172 ಕನಕದಾಸರ ಕೀರ್ತನೆಗಳು, ಪು. 108.

173 ಮುಂಡಿಗೆ ಎಂಬ ಶಬ್ದದ ನಿಷ್ಪತ್ತಿ– "ಕನಕದಾಸರ ಒಗಟಿನಂಥ ಹಾಡು, ಬೆಡಗಿನ ಪದ ಎಂಬುದು ಅವರ ನಿರ್ದಿಷ್ಟ ಹಾಗೂ ಉದ್ದಿಷ್ಟಾರ್ಥ", ಎನ್. ಎಸ್. ತಾರಾನಾಥ, ಕನಕಕಿರಣ, ಪು. 192, ಕಾಳಿದಾಸ ಸಾಂಸ್ಕೃತಿಕ ಸಂಘ, ಬೆಂಗಳೂರು-40, 1982.

174 ಡಾ॥ ಎಚ್. ಕೆ. ಲಕ್ಕಪ್ಪಗೌಡ, ಕನಕದಾಸರ ಕೀರ್ತನೆಗಳ ಕಾವ್ಯ ಪರಿಶೀಲ, ಪು. 159 (ಕನಕಕಿರಣ), ಪ್ರ. ಕಾಳಿದಾಸ ಸಾಂಸ್ಕೃತಿಕ ಸಂಘ, ಬೆಂಗಳೂರು 40 (1982).

175 ಡಾ॥ ಜಿ. ವರದರಾಜರಾಯರ ವೈಯಕ್ತಿಕ ಭೇಟಿಯಲ್ಲಿ ಅವರು "ನಾನು ಕೇಳಿದಂತೆ ಒಬ್ಬರಿದ್ದಾರೆ. ಆದರೆ, ಹೇಳಿದ್ದರೂ ಅವರು ತಾವು ಬರೆದಿರುವ ಅರ್ಥಗಳನ್ನು ಕೊಡುತ್ತಿಲ್ಲ ಇದೆಂಥ ಪ್ರವೃತ್ತಿ"ಎಂದರು (ಸೆಪ್ಟೆಂಬರ್ 84.)

176 ರಾಮಧಾನ್ಯ ಚರಿತೆಯು ಒಂದೇ ಪ್ರತಿಯು ದೊರೆತಿದ್ದು ಪ್ರಕಟಿಸಿದ್ದಾರೆ ದೇಜಗೌ "ಈ ಕೃತಿ...ಮೇಲ್ವರ್ಗದ ವಿದ್ವಾಂಸರಿಗೆ ಪ್ರಿಯವಾಗಲಿಲ್ಲ. ಅಂತೆಯೆ ಒಂದೇ ಹಸ್ತಪ್ರತಿ ದೊರೆತಿರುವುದು ಎಂಬ ಡಾ॥ ಚಿದಾನಂದಮೂರ್ತಿಯವರ ಊಹೆ ಸರಿಯೆಂದೆನ್ನಿಸುತ್ತದೆ. (ಕನಕಕಿರಣ, ಪು. 95 ಎಂ. ಚಿದಾನಂದಮೂರ್ತಿಗಳ ಅಡಿಟಿಪ್ಪಣಿ)

177 ಮೋಹನದಾಸರ ಕೃತಿಗಳು ಸಂ. ಸುಬೋಧ ರಾಮರಾವ್, 1929 (ಮೊದಲ ಮುದ್ರಣ) "ವಿಜಯರಾಯರ ಪಾದ ಭಜಿಸಿದವಗನವರತ। ವಿಜಯವಾಗುವುದಕ್ಕೆ ಸಂದೇಹವ್ಯಾಕೆ ॥ಪ॥...ಒದಗಿ ಭೃಗುಮುನಿಗಳೇ ಸರ್ವೇಶ ವೈಕುಂಠ ಸದನನೆಂದರು ಹಿದರೋ ಇವರು."

178 ಸುಬೋಧ, ಪು.-33.

179 ಸುಬೋಧ, ಪು.-148 'ತಪ್ತಮುದ್ರಾಂಕನ' ಮಾಧ್ವರು ತಮ್ಮ ಮಠದ ಅಥವಾ ಮಾಧ್ವ ಗುರುಗಳಿಂದ ಮಾಡಿಸಿಕೊಳ್ಳುವ ಶಂಖ ಚಕ್ರಾಂಕಿತ ಮುದ್ರೆ.

180 ಅದೇ, ಪು.-311
ಅಂಬರಾಧೀಶ್ವರ ಎಂದರೆ ಆಕಾಶಾಭಿಮಾನಿದೇವತೆ ಗಣಪತಿ ಪ್ರಮೇಯ ಚಿಂತ್ನನ. ಭಾಗವತ ದಶಮಸ್ಕಂಧ-ಚಾರುದೇಷ್ಣ ಹೆಸರಲ್ಲಿ ಗಣಪತಿಯು ರುಕ್ಮಿಣಿಯ ಜಠರದಲ್ಲಿ ಉದಿಸಿ ಬಂದನಂತೆ.

181 ಇದನ್ನು ಎಲ್ಲ ವಿದ್ವಾಂಸರೂ ಒಪ್ಪಿದಾರೆ.

182 ಆಚಾರ್ಯ ಶ್ರೀಮಧ್ವರ ಸಿದ್ಧಾಂತಕ್ಕೆ ಇನ್ನೊಂದು ಹೆಸರು ತತ್ವವಾದ ಇದೇ ಹೆಸರಿನ ಪತ್ರಿಕೆಯೂ ಇದೆ.

183 'ತತ್ವ ಸುವ್ವಾಲಿಗಳು', ಶ್ರೀಪ್ರಭಂಜನ, ವ್ಯಾಸರಾಯನಕೆರೆ, ತುಮಕೂರು-1984 ಪು: xiv

184 600 ತ್ರಿಪದಿಗಳು ದೊರೆತಿವೆಯೆಂದು ಡಾ॥ ಕೆ. ಎಂ. ಕೃ. ಅವರಂ ಬರೆದಿದ್ದಾರೆ ಜಗನ್ನಾಥದಾಸರು. 1932, ಪು. 314.

185 ತತ್ವ ಸುವ್ವಾಲಿ. ಪೂರ್ವೋಕ್ತ, ಪು. 44.

186 ಅಲ್ಲಮಪ್ರಭುವಿನ ವಚನ : ಗಗನವೆ ಗುಂಡಿಗೆ ಆಕಾಶವೆ ಅಗ್ಘವಣಿ
ಚಂದ್ರಸೂರ್ಯರಿಬ್ಬರೂ ಪುಷ್ಪ ನೋಡಾ
ಬ್ರಹ್ಮ ಧೂಪ, ವಿಷ್ಣು ದೀಪ, ರುದ್ರನೋಗರ ಸ
ಯಿಧಾನ ನೋಡಾ :
ಗುಹೇಶ್ವರಲಿಂಗಕ್ಕೆಪೂಜೆ ನೋಡಾ

ಎಂಬ ವಚನ ಗಮನಾರ್ಹ. ಇಲ್ಲಿ ಹರಿದಾಸರು ವಚನಕಾರರ ಭಾವನೆಯೊ ಪಡಿನೆಳ ಲಂತಿರುವ ರಚನ ಮಾಡಿದಾರೆಂಬ ಭಾವನೆ ಬಂದರೂ, ಸ್ವಂತಿಕೆ ಇದ್ದೇ ಇದೆ.

187 ಷಟ್ಪದ : ಷಟ್ಪದಿಯ ರಚನೆಗಳೇ ಆಗಿವೆ :

ನೆನೆವೆ ನಾರಾಯಣನ ಪಾದವ
ನೆನೆವೆ ನಾರಾಯಣಿಯ ಚರಣವ
ನೆನೆವೆ ಪ್ರಾಣನ ಪದವ ಭಾರತೀದೇವಿಯಂಘ್ರಿಯನು

188 ಶ್ರೀವಾದಿರಾಜರ ಕೃತಿಗಳು, ಪು.-591.

189 ಶ್ರೀಮದ್ಧರಿಕಥಾಮೃತಸಾರ, ಹರಿವಿಠ್ಠಲ ಪ್ರಕಾಶನ, ಬೆಂಗಳೂರು-18, ಪು. 2-5.

# ಹರಿದಾಸ ಸಂಪ್ರದಾಯ

ವಿಷ್ಣು ಭಕ್ತಿ, ಹರಿಸರ್ವೋತ್ತಮತೆ, ಹರಿಪಾರಮ್ಯ, ಮಾಧ್ವಮತ-ವೈಷ್ಣವ ಧರ್ಮ ಪ್ರಸಾರ ಇವುಗಳೆಲ್ಲ ಒಳಕೊಂಡ ಹರಿದಾಸ ಸಂಪ್ರದಾಯ, ಕರ್ನಾಟಕದಲ್ಲಿ ಮೂಡಿ ಬಂದ ಬಗೆ, ವಿಶಿಷ್ಟ ಆದದ್ದು. ಆಗಿನ ಕಾಲದಲ್ಲಿ (ಸುಮಾರು 14ನೇ ಶತಮಾನದಿಂದ) ಭಾರತದ ವಿವಿಧೆಡೆ, ವಿಷ್ಣುಭಕ್ತಿಯ ವಿವಿಧ ಮತ ಧರ್ಮ ಪ್ರಸಾರಕರು, ಆಂದೋಲನ ಭಕ್ತಿ ಪಂಥ ಪ್ರಚಲಿತ ಆಗಿದ್ದವು. ಮಧ್ವಾಚಾರ್ಯರ ಪ್ರಭಾವದಿಂದ ಹುಟ್ಟಿದ ವಲ್ಲಭ ಸಂಪ್ರದಾಯ, ಅಸ್ಸಾಮಿನ ಶಂಕರದೇವರ ಭಕ್ತಿಪಂಥ, ಬಂಗಾಲದ ಶ್ರೀಕೃಷ್ಣ ಚೈತನ್ಯ, ಕಬೀರನ ರಾಮಾನಂದಪಂಥ, ಏಕನಾಥ-ಜ್ಞಾನೇಶ್ವರರ ಹರಿಭಕ್ತಿಪ್ರಸಾರ, ಗುಜರಾತ್‌ನ ನರಸಿಮೆಹತಾ, ರಾಜಸ್ಥಾನದ ಮೀರಾ, ತಮಿಳುನಾಡಿನಲ್ಲಿ ಕ್ರಿ.ಶ. ೭ನೇ ಶತಮಾನದಿಂದಲೆ ಹುಟ್ಟಿ ಜನತೆಯನ್ನು ಆಕರ್ಷಿಸಿದ್ದ ಆಳ್ವಾರರ ವಿಷ್ಣುಭಕ್ತಿ ಪ್ರಬಂಧಗಳು ಇವೆಲ್ಲವನ್ನು ಆಂದೋಲನದ ದೃಷ್ಟಿಯಲ್ಲಿ ಅವಲೋಕಿಸಿದಾಗ, ಕಾಣಿಸುವುದು ಹರಿದಾಸರ ಸಂಪ್ರದಾಯ, ಪದ್ಧತಿ ಹೇಗೆ ಬೆಳೆಯಿತು, ಅದೇ ಒಂದು ಪಂಥ ಆಯಿತೆಂಬುದು ವಿಚಾರಯೋಗ್ಯವಾಗುತ್ತದೆ. ತಮಿಳುನಾಡಿನ ಆಳ್ವಾರರ ವಿಷ್ಣುಭಕ್ತಿ, ಜ್ಞಾನ-ಭಕ್ತಿ ಸಮನ್ವಯತೆ ಸಾಧಿಸಿರುವ ದಿವ್ಯಪ್ರಬಂಧ ಸಾಹಿತ್ಯ,[1] "ತ್ವದ್ಭೃತ್ಯ ಭೃತ್ಯ ಪರಿಚಾರಿಕ ಭೃತ್ಯಭೃತ್ಯಭೃತ್ಯಸ್ಯ ಭೃತ್ಯ ಇತಿಮಾಂಸ್ಮರಲೋಕನಾಥ" ಎಂಬ ಭೃತ್ಯಭಾವ,[2] "ನಾಥೇನಃ ಪುರುಷೋತ್ತಮೋತ್ರಿಜಗತಾಃ —" ಎಂಬ ಹಾಗೂ "ನಾವಿಷ್ಣುಃ ಪೃಥಿವೀಪತಿಃ" ಎಂಬ ವಿಷ್ಣು ಸರ್ವೋತ್ತಮ ಭಾವ ಹರಿದಾಸರಿಗೆ ಸ್ಫೂರ್ತಿದಾಯಿಯಾಯಿತಲ್ಲದೆ, ಆನಂದತೀರ್ಥರ ಮಧ್ವಮತತ್ವದ ಹರಿಸರ್ವೋತ್ತಮ ಪ್ರತಿಪಾದನ, ದಾಸಪರಂಪರೆಯ ಭಕ್ತಿಗೆ ದೃಢತೆ ನೀಡಿತು. ಭಕ್ತಿಯನ್ನು ಕುರಿತು ಹರಿದಾಸಸಾಹಿತ್ಯದ ಉಗಮದಲ್ಲಿ ಸ್ವಲ್ಪಮಟ್ಟಿಗೆ ವಿವೇಚಿಸಿದ್ದೇವೆ ಹಾಗೂ ಇನ್ನು ಮುಂದೆ ಹರಿದಾಸರ ಭಕ್ತಿವೈವಿಧ್ಯವನ್ನೆ ಪ್ರತ್ಯೇಕವಾಗಿ ವಿವೇಚಿಸಲಿದ್ದೇವೆ. ಆದರಿಂದಾಗಿ ಇಲ್ಲಿ ಮತ್ತೆ ಭಕ್ತಿಯ ಕುರಿತಾದ ಪ್ರಸ್ತಾಪ ಮಾಡದಿದ್ದರೂ ಹರಿದಾಸ-ಭಕ್ತಿ ಎರಡು ಅವಿಭಾಜ್ಯ ಆದ್ದರಿಂದ ಅಲ್ಲಲ್ಲಿ ಪ್ರಾಸಂಗಿಕ ವಿವರ ಬರುತ್ತದೆ. ಆನಂದತೀರ್ಥರ ಪ್ರಕಾರ, ಮಹಾತ್ಮ್ಯ ಜ್ಞಾನ, ದೃಢವಾದ ಸರ್ವತೋಽಧಿಕ ಸ್ನೇಹ ಇವು ಭಕ್ತಿಯ ಅಗತ್ಯ ಅಂಶಗಳು. ಇದನ್ನೇ ಆನಂದತೀರ್ಥರ ಪ್ರಭಾವದಿಂದ ತಮ್ಮದೆ ಆದ ಒಂದು ಸಂಪ್ರದಾಯ ಸ್ಥಾಪಿಸಿದ ವಲ್ಲಭಾಚಾರ್ಯರು (೧೬ನೇ ಶತಮಾನ) ತಮ್ಮ ಬ್ರಹ್ಮ ಸೂತ್ರ ಭಾಷ್ಯದಲ್ಲಿ ಉದಹರಿಸುತ್ತಾರೆ :

ಮಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಽಧಿಕಃ
ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನ ಚಾನ್ಯಥಾ ॥

ಈ ದೃಢವಾದ ಭಕ್ತಿಯ ನೆಲೆಗಟ್ಟು ಹರಿದಾಸರಿಗೆ ಸ್ಥಿರಸ್ಫೂರ್ತಿಯಾಯಿ ತೆಂಬುದಂ ಅಂತಹ ಅನೇಕ ಕೃತಿಗಳಿಂದ ತಿಳಿಯುವ ಅಂಶ.

ಹರಿದಾಸ ಪಂಥ, ಕರ್ನಾಟಕದಲ್ಲಿ ಮೂಡಿ, ಬೆಳೆದದ್ದು ವಿಶಾಲವಾದ ಭಾಗವತ ಧರ್ಮದ ಅಂತಿಮ ಘಟ್ಟವೆನ್ನಬಹುದು. ಭಗವಂತನನ್ನು ನಂಬಿ ನಡೆಯುವ ಧರ್ಮವೇ ಭಗವಂತನ ಧರ್ಮ. ಆ ಭಗವಂತ ಧರ್ಮದ ನಿಜವಾದ ತತ್ವ ಅದಕ್ಕೆ ವೇದಪ್ರಾಮಾಣ್ಯ ಖಚಿತ ಎಂದು, ಪ್ರತಿಪಾದಿಸಿದವರು ಮಧ್ವಾಚಾರ್ಯರು. ವ್ಯಾಪಕವಾದ ದೃಷ್ಟಿಯಿಂದ ನೋಡಬೇಕಾದರೆ, ಭಾಗವತಧರ್ಮ, ವಿಷ್ಣು ಭಕ್ತಿ ಎರಡೂ ಒಂದೇ. ಗೀತೆ ಭಾಗ ವತಧರ್ಮದ ಒಂದು ಆಧಾರ ಗ್ರಂಥ. ಮಹಾರಾಷ್ಟ್ರದ ವಿಠೋಬನ ಭಕ್ತರಾದ ತುಕಾರಾಮ, ಜ್ಞಾನೇಶ್ವರ ಗೀತೆಯಿಂದ ಸ್ಫೂರ್ತಿ ಪಡೆದು ಭಾಗವತಧರ್ಮಕ್ಕೆ ಪುನಶ್ಚೇತನ ವಿತ್ತರು. "ವಾಸುದೇವಃ ಸರ್ವಮಿತಿ", "ಯೋತ್ಪನ್ನದೇವತಾಸಕ್ತ ಯಂದಂಸ್ತ್ಯತ್ವ ದೃಢವ್ರತಾಃ" "ಅಂತವತ್ತು ಫಲಂತೇಷಾಂ" ಎಂಬೆಲ್ಲ ಗೀತೆಯ ವಾಕ್ಯಗಳು ವಾಸುದೇವನ ಮಹತಿ ಎತ್ತಿ ಹಿಡಿಯುವಂಥವು. ಭಾಗವತ ಧರ್ಮಕ್ಕೆ ಮೊದಲ ಪ್ರಾಶಸ್ತ್ಯ ವಿತ್ತವರು ಶ್ರೀರಾಮಾನುಜರು. ತಮ್ಮ "ವೇದಾರ್ಥಸಂಗ್ರಹ"ದಲ್ಲಿ ಅವರು ಒಂದು ಹೊಸ ಪಂಥ ವನ್ನೇ ತೋರಿದ್ದಾರೆ. ರಾಮಾನುಜರ ವಿಶಿಷ್ಟವಾದ ಅದ್ವೈತದಲ್ಲಿನ ವೇದಪ್ರಾಮಾಣ್ಯದ ಅಭಾವ ಪರಿಹರಿಸಿ, ಅವರ ಹರಿಭಕ್ತಿಯನ್ನು ಮಹಾತ್ಮ್ಯಜ್ಞಾನದೊಂದಿಗೆ ದೃಢವಾಗಿ ವೈದಿಕ ಧರ್ಮದ ಆಧಾರದ ಮೇಲೆ ಪ್ರತಿಪಾದಿಸುವವರು, ಹಾಗೂ ನಾರಾಯಣನೇ ಪರದೈವವೆಂದು ಘೋಷಿಸಿದ ಶ್ರೇಯಸ್ಸು ಮಧ್ವಾಚಾರ್ಯರದು. ಜಗದೀಶ್ವರನ ಮಹಾತ್ಮ್ಯ ಜ್ಞಾನ ಅರ್ಥ ಆಗಬೇಕಾದರೆ, ಅವನ ಅಸ್ತಿತ್ವದಲ್ಲಿ ದೃಢ ವಿಶ್ವಾಸವಿದ್ದೇ ಇರಬೇಕು. ಅದಿಲ್ಲದಿದ್ದರೆ ಭಕ್ತಿಗೆ ದೃಢ ಅರ್ಥವೇ ಇರದು. "ವೇದಾಹಮೇತಂ ಪುರುಷಂ ಮಹಾನ್ತಂ" ಎಂಬ ಪುರುಷಸೂಕ್ತದ ಮಾತೂ ಅದೇ ಅರ್ಥ ತರುವಂತಹದ್ದೆ. ಇದೇ ಮಧ್ವಾಚಾರ್ಯರ ಭಕ್ತಿಕುರಿತ ವ್ಯಾಖ್ಯೆ.

"ಮಹಾತ್ಮ್ಯಜ್ಞಾನ ಪೂರ್ವಕಃ ಸುದೃಢಃ ಸ್ನೇಹಃ".

ಹರಿದಾಸರು ಅನುಸರಿಸಿದ್ದು ಇದನ್ನೆ. ಅವರಿಗೆ ಭಾಗವತ ಗೀತೆ, ಮುಂತಾದ ವೈದಿಕವಾಙ್ಮಯವೆ ಆಧಾರ ಆದರೂ ಲೋಕಾನುಭವ, ಸಮಾಜದ ಬದುಕು ಸಂಪರ್ಕ ಮಾಧ್ಯಮ. ಹಾಗೂ ಪ್ರಸಾರ ಸಾಧನ ಆದವು. ಹರಿದಾಸಕೂಟದ ಪ್ರತಿಯೊಬ್ಬ ದಾಸರು ತಮ್ಮ ಗುರುಗಳನ್ನು ಸ್ಮರಿಸದಿಲ್ಲ ಹಾಗೂ ಭಾರತದಾದ್ಯಂತ ಸಂಚರಿಸಿ ತಾವು ಕಂಡನುಭವಿಸಿದ ಪ್ರತಿಯೊಂದು ದೇವದೇವತೆಗಳ ವರ್ಣನೆ ಮಾಡದೆ ಇಲ್ಲ. ಇಲ್ಲೆಲ್ಲ ಭಾಗವತ ಧರ್ಮದ ತಿರುಳಿನ ಧರ್ಮ ಸಮನ್ವಯತೆಯ ಅವರನುಸರಿಸಿದ್ದು. ಈ ದಿಸೆ ಯಲ್ಲಿ ಪುರಂದರದಾಸರಂತೂ ಎಲ್ಲ ಹರಿದಾಸರನ್ನು ಮೀರಿಸಿರುವರೇನು ಅನಿಸಿತ್ತದೆ. ಹಾಗೆಯೇ ವ್ಯಾಸರಾಯರ ಕೃಷ್ಣಭಕ್ತಿ, ಕನಕದಾಸರ ಭಾಗವತ ಸಮನ್ವಯ ದೃಷ್ಟಿ, ವಾದಿರಾಜ ತೀರ್ಥರ ಅನನ್ಯ ಭಕ್ತಿ ಅನಂತರ ಬಂದ ವಿಜಯದಾಸಾದ್ಯರ ಕೃತಿಗಳಲ್ಲಿನ

ಆಚಾರ್ಯರ ನಿಷ್ಠೆ, ತಾತ್ವಿಕ ನಿಷ್ಠೆ, ವಂತದ ದೃಢ ಪ್ರತಿಪಾದಕ ಮನೋಭಾವ ಎಲ್ಲವೂ ಭಾಗವತ ಧರ್ಮದ ಪ್ರಭಾವ. ಇದಲ್ಲದೆ ಮಧ್ವಮಂತಾನುಯಾಯಿಗಳಲ್ಲದ ಹರಿದಾಸರಲ್ಲಿಯೂ ಕಾಣುವ 'ಏಕದೇವೋಪಾಸನೆ'ಯೂ ಭಾಗವತ ಧರ್ಮ ಎಂದರೆ ಹರಿದಾಸರು, ಅನುಸರಿಸಿದ ಧರ್ಮವೇ ಎಂಬ ಪ್ರತ್ಯಯೀಯುತ್ತದೆ. ಹರಿದಾಸರ ಪರಂಪರೆ ಬೆಳೆಸಿದ ಸಂಪ್ರದಾಯವೇ ಹರಿದಾಸ ಸಂಪ್ರದಾಯ. ಅದೇ ಒಂದು ಪಂಥ. ಅದರಲ್ಲಿ ರೀತಿ ನೀತಿ ನಿಬಂಧನೆ ನಿಯಮ ಉಂಟು. ಹಾಗಾದರೆ ಸಂಪ್ರದಾಯ ಎಂದರೇನು ಎಂಬ ಪ್ರಶ್ನೆ ನಮಗೆ ಬಾರದಿರದು. ಪದ್ಧತಿ ಸಂಪ್ರದಾಯ ಎಂದೇ ಕರೆವುದರ ಅರ್ಥವೇನು ? ಇದು ಸಾಮುದಾಯಿಕ, ವೈಯಕ್ತಿಕ, ಪರಂಪರಾನುಗತವೆ, ಎಂಬೆಲ್ಲ ಭಾವನೆ ಬರುತ್ತದೆ. 'ಏಕೆಂದರೆ ಹರಿದಾಸ ಸಂಪ್ರದಾಯ ಆರಂಭ, ಇನ್ನೊಂದು ಆಂದೋಲನ ಆದ ವಚನ ಚಳವಳಿಯ ಬೆನ್ನಿಗೆ ಆಯಿತು. ವಚನ ಚಳವಳಿಯ ಸ್ವರೂಪ ಹಿನ್ನೆಲೆ ಎಲ್ಲ ಏನೇ ಇರಲಿ ಅದರ ಒಂದು ವಿಶೇಷ ಆಧ್ಯಾತ್ಮಿಕ ಆಂದೋಲನ ವೆಂಬುದು, ಸುವಿದಿತ. ಅಲ್ಲಿ ಅಲೆಯೆದ್ದು ಪಸರಿಸಿದ ಶೈವ ಭಕ್ತಿ ನಿಷ್ಠೆ ವೈದಿಕ ವಾಙ್ಮಯ ನಿರಾಕರಣ, ಎಲ್ಲ ಗಲಿಬಿಲಿ ಎಬ್ಬಿಸಿದಾಗ ಮತ್ತೆ ಎಲ್ಲ ಮೌಲ್ಯಗಳು ಹಾಗೂ ಹರಿಸರ್ವೋತ್ತಮಂತ ಪ್ರತಿಪಾದಿಸಲೆಂದು ಎದ್ದ ಒಂದು ಭಕ್ತಿಯ ಆಂದೋಲನ ಹರಿದಾಸ ಆಂದೋಲನ ; ಸಂಪ್ರದಾಯವೆ ಆಂದೋಲನವಾದ ಪರಿವೀಕ್ಷಣೆ ಬೇರೆಡೆ ನಡೆದಿದೆ.

ಸಂಪ್ರದಾಯ ಅಥವಾ ಪದ್ಧತಿ ಎಂದರೆ ಏನೆಂಬುದನ್ನು ಗಮನಿಸೋಣ. ಇದಕ್ಕೆ ಇಂಗ್ಲೀಷ್ ಸಂವಾದಿ ಪದ "Custom" ಎಂಬುದು. ಇದನ್ನು ಕುರಿತು ಅನೇಕ ನಿರೂಪಣೆಗಳಿವೆ. ಸಮಾಜ ವಿಜ್ಞಾನ, ವೇದಾಂತ ಮನಶ್ಶಾಸ್ತ್ರ, ಹೀಗೆ ವಿವಿಧ ಅಧ್ಯಯನ ವಿಭಾಗಗಳಲ್ಲಿ ವಿವಿಧ ನಿಟ್ಟಿನ ನಿರೂಪಣೆಗಳಿವೆಯಾದರೂ ಇಲ್ಲಿ ನಮಗೆ ಬೇಕಾದುದು ತಾತ್ವಿಕ ಹಾಗೂ ಸಾಮಾನ್ಯಾರ್ಥ ಮಾತ್ರ.

ಮತ-ನೀತಿ ಕುರಿತ ವಿಶ್ವಕೋಶ (Encyclopaedia of Religion and Ethics) ಪ್ರಕಾರ, ಸಂಪ್ರದಾಯದ ಅಂಶಗಳಿವು :

*ಅದೊಂದು ತಾನಾಗಿಯೇ ಉದ್ಭವಿಸಿ ಬೆಳೆವ ವಿಶೇಷ ಪ್ರಕ್ರಿಯೆ ; ಒಂದು ಪಂಗಡ ಅಥವಾ ರಾಷ್ಟ್ರಮಟ್ಟದಲ್ಲಿರುವಂಥದು.[4]

ಸಂಪ್ರದಾಯ ಪದ್ಧತಿಗೂ ಅಭ್ಯಾಸ-ಬಳಕೆ ಎರಡೊಂದಿಗೆ ನಿಕಟ ನಂಟಿದೆ.[5]

ಪದ್ಧತಿ : ಸಂಪ್ರದಾಯ ಸಮಾಜದ ಅನವರತ ಅಗತ್ಯಗಳ, ಬೇಡಿಕೆ, ಅವಶ್ಯಕತೆಗಳಿಗೆ ಸಂಬಂಧಿಸಿರುತ್ತದೆ—ಹಾಗೂ ಸಮಾಜದ ಬದುಕಿನ ಪರಿಸ್ಥಿತಿ ಬದಲಾವಣೆ ಅಥವಾ ಬದುಕಿನ ಸಿದ್ಧಾಂತಗಳು ಮೌಲ್ಯಗಳು ಬದಲಾದಂತೆ ಸಂಪ್ರದಾಯವು ಬದಲಾವಣೆಯಾಗುವುದಿರುತ್ತದೆ.[6]

ಹಿಂದೂ ಸಂಪ್ರದಾಯ, ಪದ್ಧತಿ : ಎಂದರೆ ಸಾಂಸ್ಕೃತಿಕ ಅರ್ಥ-ಆಚಾರ, ಮತೀಯ ಆಚಾರ, ಹಾಗೆಯೇ ತತ್ವಶಾಸ್ತ್ರ (ವೇದಾಂತ)ದ ವಿಶ್ವಕೋಶದಲ್ಲಿ ಸಂಪ್ರದಾಯ : ಪದ್ಧತಿಯನ್ನು ಕುರಿತ ನಿರೂಪಣೆಯನ್ನು ಗಮನಿಸಬಹುದು.

"ಸಂಪ್ರದಾಯವನ್ನು ಕಾಲಿಕವಾಗಿ ನಿರೂಪಿಸಬಹುದು[7] । ಅದೊಂದು ಪ್ರ (ನೀತಿ, ನಿಯಮ, ನಿಬಂಧನೆ) ಸಾಮಾನ್ಯವಾಗಿ ಒಂದು ಗುಂಪಿನವರು / ಸಮುದಾ ಅನುಮೋದಿಸಿ ಆಚರಿಸುವುದು ಹಾಗೂ ಆ ಸಮುದಾಯ ಪದ್ಧತಿಯನ್ನು ಪರಂಪರೆ ಎಂಬುದಾಗಿ ಅದಕ್ಕೆ ಅಂಗೀಕಾರದ ಮುದ್ರೆಯೊತ್ತುತ್ತದೆ."

ಸಂಪ್ರದಾಯ : ಪದ್ಧತಿಗಳು ಒಂದು ಗುಂಪಿನ, ಒಂದು ಬಣದ, ಸಂಸ್ಕೃತಿಗೆ ಆದ ಒಂದು ಭಾಗವಾಗುತ್ತದೆ. ಹಾಗೂ ಆ ಗುಂಪಿನ ಆದರ್ಶ, ಮೌಲ್ಯಗಳನ್ನು ಪ್ರತಿಸ ತ್ತದೆ. ಸಂಪ್ರದಾಯಗಳು ಒಂದು ಪಂಗಡಕ್ಕೆ ಸಂಬಂಧಿಸಿರುವುದಾಗಿರುತ್ತದೆ.

'ಈ ನಿರೂಪಣೆಗಳಿಂದ ತಿಳಿದುಬರುವುದಿದು, ಸಂಪ್ರದಾಯ, ಯಾವು ಒಂದು ಸಮುದಾಯ, ಬಣ, ಗುಂಪಿಗೆ ಸೀಮಿತ ಆಗಿರುತ್ತದೆ. (ದೇಶ ವ್ಯಾಪ್ತ ರಾಷ್ಟ್ರ ಮಟ್ಟದಲ್ಲಾದರೂ ಸರಿಯೆ), ಅದು ಪರಂಪರಾಗತ ಆಗಿ ಬೆಳೆದು ಬಂ ಮಂಥದು. ಅದನ್ನು ಆಯಾ ಬಣದವರು ಮಾತ್ರವೆ ತಾವು ಬದ್ಧ ಆದ ರೀತಿ ಅನುಸರಿಸುತ್ತಾರೆ, ಆಚರಿಸುತ್ತಾರೆ. ಇಲ್ಲಿ ನೀತಿ ಎಂದರೆ, ಪರಧರ್ಮ ಪದ್ಧ ಸಹಿಷ್ಣು ಮನೋಭಾವ. ಒಟ್ಟಾರೆ, ಒಂದು ಸಂಪ್ರದಾಯ, ಪದ್ಧತಿ ಯಾವು ಒಂದು ಬಣ / ಪಂಗಡ / ಸಮುದಾಯದಿಂದ ಆರಂಭಗೊಂಡುದು. ಅದಕ್ಕೆ ಸಮ ಅಂಗೀಕಾರಕ ಮುದ್ರೆ ದೊರೆತಂತೆ ಅದು ಸ್ಥಿರಗೊಳ್ಳುತ್ತದೆ. ಪರಂಪರಾನುಗತ ಮುಂದುವರಿಯುತ್ತದೆ.

ಹರಿದಾಸ ಸಂಪ್ರದಾಯವೂ ಹೀಗೆಯೇ. ಆನಂದತೀರ್ಥರಿಂದ ಆರಂಭ ದ್ವೈತ ತತ್ವ, ಮಧ್ವಮತ, ಆಚಾರ್ಯಕೃತ, ಧರ್ಮಗ್ರಂಥ, ಹರಿಪಾರಮ್ಯ ಪ್ರ ಎಲ್ಲ ಪ್ರತಿಷ್ಠಿತ ವಿದ್ಯಾವಂತರಿಗೆ ಮಾತ್ರ ಅರ್ಥ ಆಗುವ ಗೀರ್ವಾಣ ಭಾಷೆಯಲ್ಲಿ ಗೊಂಡು, ಅದ್ವೈತದ ಜಟಿಲತೆ ಆವರಿಸುವುದೆಂದಾಗ, ಶ್ರೀ ಪಾದರಾಜರಂಥ ಸಂಧಾರಣಾ ಮನೋಭಾವ ತಳೆದು, ಶ್ರೀಸಾಮಾನ್ಯನಿಗೂ ಅರ್ಥ ಆಗಲ ತಮ್ಮೊಡನೆ, ಅವನನ್ನೂ ಒಯ್ಯಬೇಕೆಂಬ ವಿಶಾಲ ಮನೋಭಾವನೆ ಸಮಾಜದ ಎಲ್ಲರ ಆಕರ್ಷಿಸುವ ವ್ಯಾಪೃತೆ ಸಾಹಿತ್ಯಕ್ಕೆ ಬರಲೆಂಬ ಆಲೋಚನೆ, ಹಾಗೂ ಪೂಜಾ ಸಮ ದಲ್ಲಿ ಕನ್ನಡದಲ್ಲೆ ಎಲ್ಲರಿಗೂ ತಿಳಿಯುವಂತಹ ಸ್ತುತಿ, ಸ್ತೋತ್ರ, ಕೀರ್ತನೆ ಇರ ಆರಂಭಿಸಿದ ಹರಿದಾಸ ಸಂಪ್ರದಾಯ, ಅದೇ ಒಂದು ಸಂಪ್ರದಾಯ, ಪಂಥ ಪರಂಪರಾನುಗತವಾಗಿ ಶತಕಪರ್ಯಂತ ಮುಂದುವರಿಯಿತು.

ಹರಿದಾಸರೇ ಒಂದು ಸಂಘಟಿತ ಶಕ್ತಿ. ಹಾಗೆಯೆ, ವ್ಯಾಸರಾಯರಂಥ ಷ ಶೀಲರು ಕ್ರಾಂತದರ್ಶಿಗಳು ಸಮಾಜದ ಚಾತುರ್ವರ್ಣ್ಯ ವ್ಯವಸ್ಥೆಯಲ್ಲೂ ಸಂಧಾ ತರಲೆಳಸಿ, ಎಲ್ಲರನ್ನು ಒಳಗು ಮಾಡಿಸಿಕೊಂಬ ದೂರದೃಷ್ಟಿಯುಳ್ಳವರಾದರೂ ಕಾಲದಿಂದ ಇಲ್ಲಿನವರೆಗೆ ಮುಂದರಿದು ಬಂದಿರುವ, ಅಂದೂ ಇದ್ದ ಇಂದೂ ಇ ಕಂಹಕಿಗಳಿಂದ ಸಂಧಾರಣೆ ಗಣನಿಯ ಪ್ರಮಾಣದಲ್ಲಿ ಆಗಲಿಲ್ಲವೆಂಬುದು ಇತಿ ಸಿದ್ಧಪಡಿಸಿರುವ ಸಂಗತಿಯೇ ಆಗಿದೆ.

ಹರಿದಾಸರ ಸಂಪ್ರದಾಯ ಕುರಿತ ವಿವೇಚನೆಯನ್ನು ಈ ಕೆಳಗಿನ ಹಂತಗಳಲ್ಲಿ ಮಾಡಿದ್ದೇವೆ :

1) ಹರಿದಾಸ ಪದದ ಲಕ್ಷಣ
2) ಹರಿದಾಸನ ಅರ್ಹತೆಗಳು, ವ್ಯಕ್ತಿತ್ವ, ಇತ್ಯಾದಿ
3) ಹರಿದಾಸ ವೃತ್ತಿ, ಪ್ರವೃತ್ತಿ, ದೃಷ್ಟಿ ಸೃಷ್ಟಿ
4) ಸಂಪ್ರದಾಯಶೀಲತೆ

ಹರಿದಾಸ ಆಂದೋಲನ ಜಗತ್ತಿಗೆ ನೀಡಿದ್ದು, ಶುದ್ಧ ಮನಸ್ಸಿನ ಸಾಧು ಸ್ವಭಾವದ ಸಾತ್ವಿಕರನೇಕರನ್ನು. ಶ್ರೀಹರಿಯ ಕೃಪೆ, ಒಲವಿಗಾಗಿ ಹೋರಿ, ಹಂಬಲಿಸಿ, ಹಲುಬಿದವರನ್ನು. ಒಂದು ನಿಜವೆ. ಅದರ (ಹರಿದಾಸ ಪರಂಪರೆಯ) ಪ್ರತಿನಿಧಿಗಳು ಬಹುಂತೇಕ ಬ್ರಾಹ್ಮಣರೆ : ಆದರೆ ಆದೊಂದು ಆಧ್ಯಾತ್ಮಿಕ ಅನುಭವಗಳನ್ನು ಅವಲಂಬಿಸಿದ ಭಕ್ತಿಯ ಆಂದೋಲನ. ಅದರಿಂದಾಗಿ ಸಮಾಜದ ಎಲ್ಲ ವರ್ಗಕ್ಕೂ ಹಬ್ಬಿತು ; ಹೆಣ್ಣು ಗಂಡೆಂಬ ಭೇದವಿಲ್ಲದೆ ಎಲ್ಲರ ಹೃದಯಗಳನ್ನು ಮುಟ್ಟಿತು. ಹರಿದಾಸರ ಆಧ್ಯಾತ್ಮಿಕ ಅನುಭವ ವಿವಿಧ ರೀತಿಯದು ; ಸ್ವಾನುಭವ, ಅನುಭವ, ಆತ್ಮಾನುಭವ, ಬ್ರಹ್ಮ ಸಾಕ್ಷಾತ್ಕಾರ, ಹಾಗೂ ಅಪರೋಕ್ಷ ಜ್ಞಾನ.

''ಭಗವಂತನಿಗೆ ಎಲ್ಲರೂ ದಾಸರೇ. ಈ ಅರ್ಥದಲ್ಲಿ ಹರಿದಾಸಕೂಟ ಅನಾದಿ. ಧರ್ಮವೆಂಬುದು ಪ್ರಕೃತಿಯ ಅಂತರ್ಭೂತ ಮಾನವಗುಣ. ನಿಜವಾದ ಧರ್ಮಕ್ಕೆ ಪ್ರಬೋಧಕರೂ ಅಗತ್ಯವಿಲ್ಲ. ಧರ್ಮವೆಂಬುದು ಪ್ರಚೋದಕವಾಗಿದಷ್ಟು ಒಳ್ಳೆಯದು. ಅಂತಹ ತ್ರಿಕಾಲಾಬಾಧಿತವಾದ ಧರ್ಮವೆಂದರೆ ಹರಿದಾಸರ ಭಾಗವತಧರ್ಮ'' ಎಂಬ ಮಾತು ಈ ದೆಸೆಯಲ್ಲಿ ಮಾನ್ಯವಾಗುವಂಥದು. ಹರಿ-ನಾರಾಯಣ-ಈಶ ನಿತ್ಯನಾದ ವನು ; ಹಾಗೆಯೇ ಜೀವಾತ್ಮರೂ ಕೂಡ. ಅಂದರೆ, ಈಶ-ದಾಸರು ಯಾವಾಗಲೂ ಇರುವವರೇ. ಈ ದೃಷ್ಟಿಯಿಂದ ಹರಿದಾಸ ಪರಂಪರೆ, ಆದಿಯಿಂದಲೇ ಬಂದುದು. ದ್ವೈತಮತ ಸಿದ್ಧಾಂತದಂತೆ, ಪರಮಾತ್ಮನ ಪ್ರಥಮ ದಾಸಿ, ಸಾಕ್ಷಾತ್ ಶ್ರೀ ಲಕ್ಷ್ಮೀ ದೇವಿ. ''ಅಂಭ್ರಣೀಸೂಕ್ತ'' ವೆಂಬ ಸೂಕ್ತದಲ್ಲಿ ಮಹಾಲಕ್ಷ್ಮಿಯೇ ಹೇಳಿಕೊಳ್ಳುತ್ತಾಳೆ, ತಾನು ಪರಮಾತ್ಮನ ದಾಸಿಯೆಂದು. ಅನಂತರ ಮಹಾಲಕ್ಷ್ಮಿಯನ್ನನುಸರಿಸಿ ಬ್ರಹ್ಮ ವಾಯು, ಸರಸ್ವತಿ, ಭಾರತಿ, ಶೇಷ, ಗರುಡ, ರುದ್ರಾದಿಗಳು ಬರುತ್ತಾರೆ. ಹರಿದಾಸ ಪದ ಎರಡು ಪದಗಳಿಂದೊಡಗೂಡಿದ ಸಮುಚ್ಚಯ, ಹರಿ-ದಾಸ ಎಂಬೆರಡು ಪದ ಸೇರಿ ಆದದ್ದು. ಹರಿಯಂದಾಸ, ಹರಿದಾಸ ಅಥವಾ ತಿರುಗುಮುರುಗ, ಹಿಂದುಮುಂದಾಗಿ ಓದಿದರೆ, ಸದಾ, ಹರಿಯ ದಾಸನೆಂದೂ ಅರ್ಥಆಗುತ್ತದೆ. ಅಂದರೆ, ಶ್ರೀ ಹರಿಯಲ್ಲೆ ಅಪರಿಮಿತವಾದ, ದೃಢವಾದ ನಚ್ಚಿಗೆ, ಭಕ್ತಿ ಇರುವಾತ. ಆದಕ್ಕೆಂದು ತನ್ನನ್ನು ತಾನೇ ತೇಯ್ದುಕೊಂಡಾತ. ಈ ತೆರನಾದ ಹರಿದಾಸ ತನ್ನ ಒಲುಮೆಯ ದೈವನಾದ ಶ್ರೀ ಹರಿ, ಅವನ ಇತರ ಸ್ವರೂಪಗಳನ್ನು ಕುರಿತು, ಹಾಗೂ ತನ್ನ ವಿಶಾಲ ಭಕ್ತ ಮನೋಭಾವ ದಿಂದ ಇತರ ದೇವದೇವತೆಗಳನ್ನು ಸ್ಮರಿಸಿ, ರಚಿಸಿರುವ ಕೃತಿಗಳೇ ದೇವರನಾಮಗಳು.

ದೇವರ ನಾಮ ಸಂಕೀರ್ತನೆ. ಇದು ಹರಿದಾಸರ ಜೀವಾಳ ; ಕಾವ್ಯಸ್ಫೂರ್ತಿ
"ನೀನ್ಯಾಕೊ ನಿನ್ನ ಹಂಗ್ಯಾಕೊ, ನಿನ್ನ ನಾಮದ ಬಲವೊಂದಿದ್ದರೆ ಸಾಕೊ"
ಶ್ರೀ ಪುರಂದರದಾಸರು, ಪರಮಾತ್ಮನಿಗೆ ಸವಾಲೆಸೆದದ್ದು, ನಾಮ ಬಲದಿಂದಲೇ.
ಹರಿದಾಸರಂಥ ಭಗವದ್ಭಕ್ತರು ಜಗತ್ತಿನೆಲ್ಲೆಡೆ ಆಗಿಹೋಗಿದ್ದಾರೆ. ಅದು ಆ
ಪರಿಸರಕ್ಕೆ ಸಂಬಂಧಿಸಿದ್ದು. ಅಂಥ ಇಡೀ ಜಾಗತಿಕ ಸಾಹಿತ್ಯದ ವಿಹಂಗಮ ನೋಟ
ಹರಿದಾಸ ಆಂದೋಲನ ವಿಭಾಗದಲ್ಲಿ ಮಾಡಲಾಗುತ್ತದಾದ ಕಾರಣ, ಇಲ್ಲಿ
ಕೊಂಡಿಲ್ಲ.

ಹರಿದಾಸರಿಗೂ ಪಂಢರಾಪುರದ ಪಾಂಡುರಂಗ ವಿಠಲನಿಗೂ ವಿಶಿಷ್ಟ
ಆಗ ಮಹಾರಾಷ್ಟ್ರದ ಸಂತರಿಗೂ ಇದೇ ಮುಖ್ಯ ಭಕ್ತಿ ಕೇಂದ್ರ. ಪಂಢರಿಗೆಯು
ದಾಸ-ಸಂತರನ್ನು ಬೆಸೆವ ಕೊಂಡಿ. ವಿಠಲ "ಕಾನಡಿ"ಯೇ ಆಗಿದ್ದ. ಅಂದರೆ,
ಪಂಢರಿಗೆ ಕರ್ನಾಟಕಕ್ಕೇ ಸೇರಿತ್ತು. ಕನ್ನಡ ಭಕ್ತರ ಮನದ ಮೇಲೆ ವಿಠಲನ ಪ್ರ
ಗಾಢವಾಗಿತ್ತೆನ್ನಲು, ಹರಿದಾಸರೆಲ್ಲರ ಅನೇಕ ಕೃತಿಗಳಲ್ಲಿ ಕಂಡುಬರುವ ವಿಠಲಪರ
ಗಳೇ ನಿದರ್ಶನ. ಆಗಿನ ಮಹಾರಾಷ್ಟ್ರದ ಭಕ್ತ ಜ್ಞಾನೇಶ್ವರ (ಜ್ಞಾನದೇವ) "ಕ
ಹೋ ವಿಠ್ಠಲು ಕರ್ನಾಟಕೂ ತ್ಯಾನೇ ಮಜಲಾ ವಿಲಾವೇಧು" -ಕರ್ನಾಟಕ ದ
ವಿಠ್ಠಲನು ತನ್ನ ಕಡೆಗೆ ನನ್ನ ಮನಸ್ಸನ್ನು ಆಕರ್ಷಿಸಿಕೊಂಡುಬಿಟ್ಟ, ಎಂದು ತಿ
ವುದನ್ನು ಗಮನಿಸಿದರೆ, ವಿಠಲನ ಭಕ್ತಿ ಎಷ್ಟು ಗಾಢವಿದ್ದಿತು, ಕರ್ನಾಟಕದವರಿ
ತಿಳಿಯಬರುತ್ತದೆ. ಆಮೇಲೆ ಬರಬರುತ್ತ ವಿಠಲ ಮಹಾರಾಷ್ಟ್ರದ ಸಂತರ ಕೈಲಿ
ಹಾಕಿಕೊಂಡ ; ರಾಷ್ಟ್ರದೈವವೇ ಆದನೆಂಬುದೂ ಇತಿಹಾಸದ ಮಾತೇ ಆಗಿದೆ. ಹರಿ
ರೆಲ್ಲರಿಗೂ ವಿಠಲನೆ ಸ್ಫೂರ್ತಿ, ತಿರುಪತಿ ತಿಮ್ಮಪ್ಪನೆ ಪರದೈವ ! ಹರಿದಾಸ ಸಂಪ್ರದಾ
ಹೀಗೆ ವಿಠಲೋಪಾಸಕ ಪರಂಪರೆಯಾಗಿ ಬೆಳೆದು ಬಂದಿತು.

ಹರಿದಾಸ ಸಂಪ್ರದಾಯ ಒಂದು ಸಂಪ್ರದಾಯ, ಪದ್ಧತಿಯಾಗಿ ಬೆಳೆದು ಬ
ಪ್ರಮುಖ ಪ್ರವರ್ತಕರು ಮುಳಬಾಗಿಲಿನ ಶ್ರೀ ಪಾದರಾಜರೆಂದು ಮೊದಲೆ ಸೂಚಿ
ಶ್ರೀಪಾದರಾಜರು ದಾಸಸಾಹಿತ್ಯದ ಆದ್ಯ ಪ್ರವರ್ತಕರಾದಂತೆಯೆ ದಾಸ ಸಂಪ್ರದಾಯ
ಮೂಲ ಪುರುಷರಾದರು. ಹೀಗಿದ್ದರೂ, ಪುರಂದರದಾಸರು ತಮ್ಮ ಕೃತಿಯೊಂ
ಹೇಳಿರುವ ಪ್ರಕಾರ, ವಾಯುದೇವರ ಇನ್ನೊಂದು ಅವತಾರರಾದ ಶ್ರೀ ಮ
ಚಾರ್ಯರೆ ಮೊದಲ ಹರಿದಾಸರೆಂಬಿತಿದೆ. (ಹನುಮ, ಭೀಮ, ಮಧ್ವ-ಈ ಅವ
ತ್ರಯದ ಸ್ತುತಿಯನ್ನು ಸಾಮಾನ್ಯವಾಗಿ ಎಲ್ಲ ಮಧ್ವಮತಾನುಯಾಯಿಗಳೂ ಸ್ಮ
ವುದುಂಟು) ಕೃತಿಯ ಪಾಠ, ಹರಿದಾಸ ಪರಂಪರೆ, ಹರಿದಾಸಕೂಟ, ಪ್ರಚಲಿತ ಆದ
ಬಗ್ಗೆಯೂ ತಿಳಿಯಿಸುತ್ತದೆ.

(ಉಗಾಭೋಗ)

ಶ್ರೀಪತಿಯ ನಾಭಿಕಮಲದಿ ಅಜ ಜನಿಸಿದನು[1] :

ಅಜನಮಾನಸಪುತ್ರರೇ ಸನಕಾದಿಗಳು
ದೂರ್ವಾಸರ ಶಿಷ್ಯರೇ ಪರತೀರ್ಥರು
ಪರತೀರ್ಥರ ಶಿಷ್ಯರೇ ಸತ್ಯಪ್ರಜ್ಞರು
ಸತ್ಯಪ್ರಜ್ಞರ ಶಿಷ್ಯರೇ ಪ್ರಾಜ್ಞತೀರ್ಥರು
ಪ್ರಾಜ್ಞತೀರ್ಥರ ಶಿಷ್ಯರೆ ಅಚ್ಯುತ ಪ್ರೇಕ್ಷಕರು
ಅಚ್ಯುತ ಪ್ರೇಕ್ಷರ ಕರಸಂಜಾತರೇ ಮಹಾಭಾಷ್ಯಕಾರರು
ಮಹಾಭಾಷ್ಯಕಾರರೇ ಗುರು ಮುಖ್ಯಪ್ರಾಣರು[8]

ಗುರುಮುಖ್ಯ ಪ್ರಾಣಪತಿ ನಮ್ಮ ಪುರಂದರವಿಠಲನ ದಾಸರಿಗೆ ನಮೋ ನಮಃ. ಇದರೊಂದಿಗೆ ಪುರಂದರರ ಸಮಕಾಲೀನರಾದ ಶ್ರೀ ಗುರುಮಧ್ವಪತಿ ವಿಠಲ ರಚಿಸಿದ ಇನ್ನೊಂದು ಕೃತಿಯಲ್ಲಿ (ಉಗಾಭೋಗ) ಪುರಂದರರ ಹಾಗೂ ಅವರ ಗುರು ವರ್ಯರಾದ ಶ್ರೀ ವ್ಯಾಸರಾಯರ ಬಗ್ಗೆಯೂ ಪ್ರಸ್ತಾಪವಿದೆ.

ವರಧೃವನ ಅವತಾರ ಶ್ರೀ ಪಾದರಾಜರು[9]
ಸಿರಿರಂಗವಿಠಲನ ಉಪಾಸಕರು
ತರಳ ಪ್ರಹ್ಲಾದನ ಜನಿಸಿದ ಶೇಷಾಂಶ
ಗುರುವ್ಯಾಸರ ಶ್ರೀ ಕೃಷ್ಣನ ಉಪಾಸಕರು
ಸುರಮುನಿ ಅವತಾರ ನಾರದರೆ
ಸಿರಿಪುರಂದರ ವಿಠಲನುಪಾಸಕರು
ಧರೆಯೊಳು ಮೂವರಿಗೆ ನರರೆಂದ ನರರಿಗೆ
ನರಕತಪ್ಪದು ಕಾಣೋ ಗುರು ಮಧ್ವಪತಿ ವಿಠಲ

ಎಂಬಲ್ಲಿ ಅವತಾರಾಂಶ ಸ್ವರೂಪರಾದ ಮೂವರನ್ನೂ ಮನುಷ್ಯರೆಂದವರಿಗೆ ನರ ಪ್ರಾಪ್ತಿ ಖಂಡಿತವೆಂಬ ಘೋಷ, ಗುರುಮಧ್ವಪತಿಯ ಭಾವನೆಯ ಪರಾಕಾಷ್ಠೆ ಸೂಚಿಸ ತ್ತದೆ. ಈ ಉಗಾಭೋಗ ಹರಿದಾಸ ಪರಂಪರೆಯ ಮೊದಲ ಹಂತದ ಆಚಾರ್ಯ ಯಾವ ಅವತಾರಾಂಶ ಸಂಭೂತರೆನ್ನಲು ತಿಳಿಸಿದಂಥದ್ದಾಗಿದ್ದು ಅವರ ಶ್ರೇಷ್ಠತೆಗೂ ದ್ಯೋತಕವಾಗಿದೆ. ಹರಿದಾಸ ಸಂಪ್ರದಾಯ ಬೆಳೆದುಬಂದದ್ದರ ಹೆಚ್ಚಿ ಗುರುತುಗಳ ದೊರೆಯಲು ಇವು ನೆರವೀಯುತ್ತವೆ. ಹರಿದಾಸ ಪರಂಪರೆಯನ್ನು ಇವು ತಿಳಿಸುವು ವಿನಃ ಸಂಪ್ರದಾಯದ ಬಗ್ಗೆ ಅರಿಯುವಲ್ಲಿ ನಾವು ಬಹುಪಾಲು ಗ್ರಂಥ ಹಾಗೂ ಹ ದಾಸರ ಕೃತಿಗಳನ್ನೆ ಆಶ್ರಯಿಸಬೇಕಾಗುತ್ತದೆ.

ಹರಿದಾಸ ಸಂಪ್ರದಾಯ ಒಂದರ್ಥದಲ್ಲಿ ಅನಾದಿ ಎಂದು ಅಗಲೆ ತಿಳಿಸಿದೆ. ಆದ ಮೂಲ, ಎಂದಿನಿಂದ ಉಗಮ ಆಯಿತೆಂಬುದಕ್ಕೆ ಖಚಿತ ದಿನಾಂಕ, ಕಾಲ ತಿಳಿಯ ದಾದರೂ ಹರಿದಾಸ ಸಾಹಿತ್ಯದ ಉಗಮವನ್ನು ನಿರ್ಧರಿಸುವುದರ ಮೂಲಕ ಈ ಸಂಪ್

ದಾಯ ಆರಂಭಗೊಂಡ ಅವಧಿಯನ್ನು ತಿಳಿಯಲೆತ್ನಿಸಬೇಕಷ್ಟೆ. ದೇವರ್ಷಿ ನಾರದರೇ ಹರಿದಾಸ ಸಂಪ್ರದಾಯ-ಭಾಗವತಧರ್ಮಗಳ ಪ್ರಸಾರಕ, ಪ್ರಚಾರಕರೆಂಬ ಮಾತೂ ಇದೆ. "ನಾರಾಯಣನೆಂಬ ನಾಮದ ಬೀಜವ ಬಿತ್ತಿದ ಧರೆಯೊಳಗೆ" ಎಂಬ ದಾಸರ ಉಕ್ತಿಯಂತೆ ಹರಿದಾಸತ್ವವನ್ನು ಬೋಧಿಸಿದರು ಬ್ರಹ್ಮಮಾನಸ-ಪುತ್ರರೆಂದು ಪ್ರಖ್ಯಾತ ರಾದ ನಾರದರು. ನಾರದರ ಪ್ರಾರ್ಥನೆಯಂತೆಯೇ ವೇದವ್ಯಾಸರು ಭಾಗವತ ರಚಿಸಿ ದೆಂಬುದು ಹಿರಿಯರ ಮಾತು. ಗೋಪಿಕಾಸ್ತ್ರೀಯರ ಕೃಷ್ಣಭಕ್ತಿ, ಯಶೋದೆಯ ಪುತ್ರ ವಾತ್ಸಲ್ಯ, ಕೃಷ್ಣನ ವಿವಿಧ ಲೀಲಾ ವಿನೋದ, ರಾಧಾ ವಿರಹ ಪ್ರೇಮ-ಉನ್ಮಾದ, ಗಜೇಂದ್ರನ ಮೊರೆ, ಇವೆಲ್ಲ ಭಾಗವತದ ಅನೇಕ ಪ್ರಸಂಗಗಳು. ಇಲ್ಲಿರುವುದೆ ಹರಿ ಭಕ್ತಿಗಾಥೆ, ಹರಿಭಕ್ತಿ ಪಾರವಮ್ಯ. ಪ್ರಹ್ಲಾದ ನಾರದರಾದಿಯಾಗಿ ಭಗವಂತನನ್ನು ಗಾನ ಕೀರ್ತನ ನರ್ತನಾದಿಗಳಿಂದ ಸ್ತುತಿಸುವುದು, ಭಜಿಸುವುದನ್ನು ನಡೆಸುತ್ತಿದ್ದರೆಂದು ತಿಳಿದು ಬರುತ್ತದೆ. ಇದಲ್ಲದೆ ಪದ್ಮಪುರಾಣದ ಪ್ರಕಾರ ಪಂಢರಿಗೆಯ ಬಳಿಯ ಭೀಮಾ ನದಿಯ, ಪಾಂಡುರಂಗನ ಬಗ್ಗೆಯೂ ವಿವರ ದೊರೆಯುತ್ತವೆ. ಇದು ಹರಿದಾಸ ಸಂಪ್ರದಾಯವನ್ನು ಕ್ರಿ. ಶ. ೧೨೩೩ ತನಕ ಒಯ್ಯುತ್ತದೆ. ಪರಂಪರೆಯ ಪ್ರಕಾರ ಪುಂಡಲೀಕನೆಂಬ ಭಕ್ತನ ಅನನ್ಯಭಕ್ತಿಗೆ ಮೆಚ್ಚಿ ಶ್ರೀ ಹರಿ ಬಂದು ನಿಂತಾಗ, ತನ್ನ ಬಳಿ ಯಾವುದೆ ಆಸನ ಸಮರ್ಪಿಸಲು ಇರದ ಆ ಭಕ್ತ ಒಂದು ಇಟ್ಟಿಗೆಯನ್ನೆ ಕೊಟ್ಟು "ಇರು" ಎಂದ, ದೇವರು ನಿಂತ ಈಗಲೂ ಆ ಅಭಂಗ ವಿಠಲ ಅದೇ ಭಂಗಿಯಲ್ಲಿ ನಿಂತಿದ್ದಾನೆ. ಭಾಗವತದ ಪ್ರಕಾರ ಬರುವ ಈ ಶ್ಲೋಕ, ಗೀತ, ನರ್ತನ ಭಜನಗೋಷ್ಠಿಯ ಬಗ್ಗೆ ಮಾಹಿತಿಯೊಯುವುದಾಗಿದೆ:

> ಪ್ರಹ್ಲಾದ ಸ್ತಾಲಧಾರೀ ತರಲಗತಿತಯಾ ಚೋದ್ಧವಃ ಕಾಂಸ್ಯಧಾರೀ
> ವೀಣಾಧಾರೀ ಸುರರ್ಷಿಃ ಸ್ವರಕುಶಲ ತಯಾ ರಾಗಕರ್ತಾರ್ಜುನೋಭೂತ್
> ಇಂದ್ರೋ ವಾದೀನ್ಮೃದಂಗಂ ಜಯಜಯಸುಕರಾ ಕೀರ್ತಯಂತೇಕುಮಾರಾಃ
> ತತ್ರಾಗ್ರೇ ಭಾವಕರ್ತಾ ರಸರಚನತಯಾ ವ್ಯಾಸಪುತ್ರೋ ಶುಕೋಭೂತ್
> ಸತತಂ ಕೀರ್ತಯಂತೋಮಾಂ ಯತಂತಶ್ಚ ದೃಢವ್ರತಾಃ
> ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ (ಭಗವದ್ಗೀತೆ)

ಇದೆಲ್ಲದರಿಂದ ಹಾಗೂ ವಿಠಲೋಪಾಸನೆ, ಭಕ್ತಿಯಿಂದ ನಮಗೆ ಹರಿದಾಸ ಪರಂಪರೆ ಪದ್ಧತಿ, ವಿಠಲನಿಗೆ ಸಮರ್ಪಿಸಿಕೊಂಡಿದ್ದು ಕ್ರಿ. ಶ. ೧೫ನೆ ಶತಮಾನದ ಮೊದಲಿಂದ ಆರಂಭ ಆದರೂ ಅದರ ಸುಳಹು ಶ್ರೀಪಾದರಾಜರಿಗೂ ಮೊದಲೆ ಇದ್ದಿರಬಹುದೆನ್ನ ಬಹುದು.[11] ಹಾಗೆಯೇ ಇದೊಂದು ಅಖಂಡವಾಗಿ ಮುಂದುವರೆದ ಪರಂಪರೆ ಯೆಂಬುದು ಸುವಿದಿತ. ಭಾಗವತ ಧರ್ಮದಂತೆಯೇ ವಿಷ್ಣು ಪುರಾಣದ ಒಂದು ಶ್ಲೋಕ ಈ ದಿಸೆಯಲ್ಲಿ ತುಂಬ ನೆರವಾಗುತ್ತದೆ.

ಧ್ಯಾಯನ್ ಕೃತೇಯಜನ್‌ಯಜ್ಞೈಃ
ತ್ರೇತಾಯಾಂದ್ವಾಪರೇ ಚರ್ಚಯನ್
ಯದಾಪ್ನೋತಿ ತದಾ ಪ್ನೋತಿ
ಕಲೌ ಸಂಕೀರ್ತ್ಯ ಕೇಶವಂ[12] (ಅ. 2, ಶ್ಲೋ. 17)

ಇದನ್ನು ಹರಿದಾಸರಲ್ಲಿ ಆದ್ಯ ಪ್ರವರ್ತಕರಾದ ಶ್ರೀ ಶ್ರೀಪಾದರಾಜರು ಹಾಗೆಯೇ ಸರಳ ಕನ್ನಡದಲ್ಲಿ ಬಟ್ಟಿಯಿಳಿಸಿದ್ದಾರೆ.

ಧ್ಯಾನವು ಕೃತಯುಗದಿ
ಯಜನ ಯಜ್ಞವು ತ್ರೇತಾಯುಗದಿ
ದಾನವಾಂತಕನ ದೇವತಾರ್ಚನೆ ದ್ವಾಪರಯುಗದಿ । ಆ ಮಾನವರಿಗೆಷ್ಟು
ಫಲವೊ ಅಷ್ಟು ಫಲವು । ಕಲಿಯುಗದಿ ಗಾನದಲಿ ಕೇಶವಯೆನಲು ।
ಕೈಗೊಡುವನು ರಂಗ ವಿಠಲ ।[13]

ಇದನ್ನೆ ಶ್ರೀ ಪುರಂದರ ದಾಸರು ಒಂದೆಡೆ ಸರಳ ಕನ್ನಡದಲ್ಲಿ ಸ್ವಲ್ಪ ಬೇರೆ ವಿಧದಲ್ಲಿ ಕಂಡರಿಸಿದ್ದಾರೆ.

ಧ್ಯಾನವು ಕೃತಯುಗದಲ್ಲಿ
ಯಜ್ಞಯಾಗವು ತ್ರೇತಾಯುಗದಲ್ಲಿ
ಅರ್ಚನೆ ದ್ವಾಪರದಲ್ಲಿ ಕೀರ್ತನ ಮಾತ್ರದಿ
ಕಲಿಯುಗದಲ್ಲಿ ಮುಕುತಿಯನೀವ ಪುರಂದರವಿಠಲ.

ಕೀರ್ತನದುಪಾಸನೆ ಹರಿದಾಸ ಸಂಪ್ರದಾಯದಾರಂಭಕ್ಕೆ ಪ್ರೇರಕ, ಪ್ರಚೋದಕ ಕೂಡ. ಹರಿದಾಸ ಸಂಪ್ರದಾಯಕ್ಕೆ ಭಕ್ತಿ, ಸಂಗೀತಗಳೇ, ಜೀವಾಳ, ಸೀಯಾಳ. ವಿವಿಧ ವಿಷಯ ತೃಷ್ಣೆಯನ್ನು ಆರೋಗ್ಯರೀತ್ಯಾ ತೃಪ್ತಿದ್ವಿಪಪಡಿಸಿ ಭಗವದ್ವಿಷದತ್ತ ಪರಿವರ್ತಿಸುವಂತೆ ಮಾಡುವ ಸೀಯಾಳವೆಂದರೂ ತಪ್ಪಾಗದು. ಸಂಗೀತಕ್ಕೆ ಮೃಗ, ಪಶುಪಕ್ಷಿ, ನಾಗಸರ್ಪ ಕೂಡ ಮೈಮರೆಯುತ್ತದೆಂದಾಗ ಮನುಷ್ಯನಿಗೆ ಬೇಡವೇ ? ಸಂಗೀತವನ್ನೆ ಹರಿದಾಸರು ತಮ್ಮ ಆಧ್ಯಾತ್ಮ ವಿಕಸನಸಾಧನವಾಗಿ ಮಾಡಿಕೊಂಡರು. ಬೋಧೆಯ ಮಾತಿಗಿಂತ, ಕಿವಿಗಿಂಪಾದ, ಮನಸ್ಸಿಗೆ ಮುಟ್ಟುವ ಗಾನಮಾಧುರ್ಯವನ್ನು ಅಳವಡಿಸಿಕೊಂಡರು. ವಾಗ್ಗೇಯಕಾರರಾದ ತ್ಯಾಗರಾಜರು ಹೇಳುವಂತೆ,

"ಸಂಗೀತ ಜ್ಞಾನ ವಿಹೀನಲಕು ಮೋಕ್ಷಮು ಗಲದಾ॥" ಸಂಗೀತದ ಜ್ಞಾನ ಗಂಧ ವಿಹೀನರಿಗೆ ಮುಕ್ತಿಯುಂಟೆ ? ಎಂಬ ಮಾತು ಮನನೀಯವಾದದ್ದು. ಹರಿದಾಸ ಸಂಪ್ರದಾಯ, ಸಂಗೀತದೊಡಗೂಡಿ ಹಾಸುಹೊಕ್ಕಾಗಿ ಬೆಳೆದು ಬಂದಿತು.

ಹರಿದಾಸರೆಲ್ಲರೂ ದೇವರದಾಸರೆ. ದಾಸಸಾಹಿತ್ಯದ ದ್ವಿತೀಯ ಹಂತದಲ್ಲಿ ಬಂದ ಪ್ರಮುಖ ಹರಿದಾಸರಾದ ಶ್ರೀ ಪುರಂದರದಾಸರು, ಶ್ರೀ ವಿಜಯದಾಸರೂ ಹರಿದಾಸರ ಲಕ್ಷಣ ಚರ್ಯೆಗಳನ್ನು ಕುರಿತೇ ಒಂದು ಸುಳಾದಿ ರಚಿಸಿದ್ದಾರೆ. ಪರಮಾತ್ಮನ ಹೊರತಾಗಿ ಎಲ್ಲರೂ ಅವನ ದಾಸರಾದರೂ ಎಲ್ಲರೂ ಹರಿದಾಸರಾಗಲು ಸಾಧ್ಯವಿಲ್ಲ. ಇಲ್ಲಿ ಪುರಂದರದಾಸರು ತಮ್ಮ ಪೂರ್ವಾಶ್ರಮದ ವ್ಯಾಪಾರದ ರೂಪಕದ ಮೂಲಕ ಹರಿದಾಸ ವೃತ್ತಿಯನ್ನು ತಿಳಿಸುತ್ತಾರೆ.

ವ್ಯಾಪಾರವೆಮಗಾಯಿತು
ಶ್ರೀಪತಿಯ ಪಾದಾರವಿಂದ ಸೇವೆವೆಂಬೊ ॥ಪ॥

ಹರಿಕರುಣವೇ ಅಂಗಿ ಗುರುಕರುಣ ಮುಂಡಾಸು
ಹರಿದಾಸರ ದಯವೆಂಬೊವಲ್ಲಿ,
ಪರಮಪಾಪಿ ಕಲಿ ಎಂಬ ಪಾಪಾಸುಮೆಟ್ಟ
ದುರಾತ್ಮರಾದವರ ಎದೆಮೇಲೆನಡೆಯುವಂಥ ॥೧॥

ಬಿಳಿಯ ಕಾಗದ ಹೃದಯ, ಬಾಯಿಕಲಮುದಾನಿ
ನಾಲಿಗೆಯೊಂಬೋಲ ಲೇಖನಿಯು ಶ್ರೀ
ಲೋಲನ ಕಥೆ ದಿವ್ಯನಾಮಂಗಳ
ಶೀಲಮನವಿ ಬರೆದು ಹರಿಗೆ ಒಪ್ಪಿಸುವಂಥ ॥೨॥

ನುಡಿನುಡಿಗಾನಂದ ಭಾಷ್ಪ ರೋಮಾಂಚನ
ಮುಡಿಪಿನೊಳಗಿಟ್ಟು ಕೈಜೀತವು
ಕಡೆಯ ಸಂಬಳಕೆಲ್ಲ ಮುಕುತಿಸಾಧನವನ್ನು
ಕೊಡುವಂತೆ ತಿರುಗದ ಚೀಟಿ ಬರೆಸಿಕೊಟ್ಟ ॥೩॥

ಕಂಡಕಂಡವರಿಗೆ ಕಾರ್ಪಣ್ಯವ ಪಟ್ಟು
ಮಂಡೆ ಅಡ್ಡಾಗಿ ನಾ ಬಳಲಲಿಲ್ಲ
ಪುಂಡರೀಕಾಕ್ಷ ಶ್ರೀ ಪುರಂದರ ವಿಠಲನು
ದಂಡಿಸಿ ವೀಳ್ಯವಕೊಟ್ಟು ಸೇವೆಯೊಳಿಟ್ಟ ॥೪॥

ಹರಿದಾಸನ ಕರ್ತವ್ಯಗಳನೇಕ. ಆದರೆ ಹರಿದಾಸ ದೀಕ್ಷೆ ಸ್ವೀಕರಿಸಿದ ಮೇಲೆ ಆ ಪಂಥ-ಆ ಪಥಕ್ಕೆ ಆತ ಬದ್ಧ (ಕಮಿಟೆಡ್), ಅರ್ಪಿತ (ಡೆಡಿಕೇಟೆಡ್), ಜನತೆಗೆ ಧರ್ಮ ಸಾರುವ ಪ್ರವಾದಿ-ಮಿಷನರಿ ಆತ. ಭಕ್ತಿಬೋಧನೆ, ನೀತಿಯನ್ನು ಹಾಡುಗಳ ಮೂಲಕ ಕಲಿಸುವುದು, ಒಟ್ಟಾರೆ, ಸಮಾಜದ ಸಮುದಾಯದ ಉದ್ಧಾರದ ಹಾದಿ ತೋರುವುದು. ಅಂದರೆ, ಅವನು ಧರ್ಮ ಅದರ ಸ್ವರೂಪ-ತಾನು ಹೇಳಬೇಕಾದ್ದೇನೆಂಬುದನ್ನು ಅರಿತಿರಬೇಕು.

ಗುರುವುಮುಖೇನ-ತಿಳಿದವರ ಸೇವಾ ಮೂಲಕ ತಿಳಿವಿನ ಸುಧೆಯನ್ನಾತ ಎಷ್ಟು ಮೊಗೆ ಮೊಗೆದರೂ ಸಾಲದಲ್ಲವೇ? ಹರಿದಾಸನು ಭಕ್ತನೆ ಆಗಿರಬೇಕು ಎಂದು ಹೇಳುವುದು ದ್ವಿರುಕ್ತಿಯಾದಾತು. ಆದರೆ ಆ ಭಕ್ತ್ಯಾವಸ್ಥೆ ಮುಖ್ಯ. ನೀತಿ ಮಾರ್ಗ ಪಾಥೇಯ ನಾಗಿರಬೇಕು. ಉದ್ಧಾರದ ಮಾರ್ಗವನ್ನು ತನ್ನ ಅನುಭವ-ಅನುಭಾವದ ಈ ಬೆಳಕಿನಲ್ಲಿ ಕಂಡುಕೊಂಡಿರಲೂಬೇಕು. ಆಗಲೆ ಆತ ಬೇರೆಯವರಿಗೆ ತಿಳಿಸುವ ಚೈತನ್ಯ ಪಡೆಯಬಲ್ಲ. ಇಷ್ಟೆಲ್ಲ ಮಾಡುವ ಆತ, ಬಡತನವನ್ನೆ ವ್ರತವಾಗಿ ಧರಿಸಿರಬೇಕು. ಮಧುಕರವೃತ್ತಿ (ಭಿಕ್ಷೆ) ಹರಿದಾಸ ಪಂಥದ ಕಾಯಕ. ಇವೆಲ್ಲದರಿಂದ ಹರಿದಾಸರಾಗಿ ಬಾಳುವುದು ಬದುಕಿ ಸಾಫಲ್ಯ ಕಾಣುವುದು ಎಷ್ಟು ಸುಲಭದ ಮಾತಲ್ಲ. ಆದರೂ ಪುರಂದರದಾಸರಂಥವರು, ರಾಜನಾಗಿದ್ದು ದಾಸನಾದ ಕನಕದಾಸರಂಥವರು ತಾವು ಬದುಕಿ, ತೋರಿಸಿಕೊಟ್ಟು ದಾರಿದೀವಿಗೆಗಳಾದರು (beacon light)

ವಿಜಯದಾಸರು ರಚಿಸಿರುವ ಹರಿದಾಸಲಕ್ಷಣ ಸುಳಾದಿಯು ಹೀಗಿದೆ ;

ಹರಿದಾಸರ ಲಕ್ಷಣ ಇರಬೇಕು ಈ ಪರಿ । ಗರುವ ಕೋಪ ಮದಮತ್ಸರಾದಿ ಬಿಡಬೇಕು । ಮರುತ ಮತಕೆ ಎಲ್ಲೆ ಸರಿಗಾಣೆನೆನುತಲಿ । ಧರೆಯೊಳು ಕೂಗಿ ಡಂಗುರವ ಹೊಯಲಿಬೇಕು । ಎರಡಾರು ಪುಂಡ್ರವ ವಿರಚಿಸಿ ಪಂಚಮುದ್ರಾ । ಧರರಾಗಿ ತಪ್ತಾಂಕಿತ ಧರಿಸಬೇಕು ಭುಜದಲ್ಲಿ । ಶಿರಿಯೊಮ್ಮೊಹರಾದ್ಯರಿಗೆ ತಾರತಮ್ಯ ಭಾವದಿಂದ । ಎರಗಿ ಎನ್ನೊಳಗಿದ್ದು ಪೊರೆಯುಂದಾಡಲಿಬೇಕು । ಕರಣ ನಯನ ಶ್ರವಣ ಚರಣದಾಸ ವದನ । ಪರಿ ಪರಿ ಅಂಗಗಳು ಹರಿವಿತ್ರವೆನ್ನಬೇಕು । ಗುರುಹಿರಿಯರಿಗೆ ಆದರಪೂರ್ವಕದಿಂದ ಕರವ ಮುಗಿದು ನಮಸ್ಕರಿಸಿ ನುತಿಸಬೇಕು । ನೆರೆ ಹೊರೆಯವರಿಗೆ ನಿರುತ ಇದ್ದರು ಬೇ । ಸರಗೊಳಿಸದೆ ಸಂಚರಿಸುತ್ತಲಿರಬೇಕು । ಹರಣ ಹರಿಯಾಧೀನ ನೆರೆದ ಸಕಿಸಂತರು । ನಿರುತ ಹರಿಗೆ ದಾಸರು ಎಂದು ಗುಣಿಸಬೇಕು । ಪರಮ ಭಕುತಿ ಜ್ಞಾನ ವಿರಕುತಿ ವರ್ಗಾವು । ದೊರಕುವದಕ್ಕೆ ಸಜ್ಜನರ ಸಂಗವಾಗಬೇಕು । ಹರಿವಾಸರ ಜರಿಚರಿತೆ ಹರಿ ಶ್ರವಣ ಹರಿಪೂಜೆ । ಹರಿಸ್ಮರಣೆ ಅಂತರ ಶುಚಿ ಇರಲಿ ಬೇಕು । ಹರಿಪರದೇವತೆ ವಿಜಯ ವಿಠಲ ಗತಿ । ಸುರರಾದ್ಯರಿಗಿಂದು ಉರವಣಿಸಿ ನಡಿಬೇಕು ॥ ೧ ॥

## ಮಟ್ಟ ತಾಳ

ಪರಧನ ಪರಸತಿ ಪರನಿಂದ್ಯರವರ । ಸರಸದಲ್ಲಿರದೆ ಚರಿಸಬೇಕು ದೂರ । ನರರು ಬೈದರ ಆದರವೆಂದು ತಿಳಿದು । ಹರುಷಪಡಲಿಬೇಕು ಸುರತರು ದೊರೆತಂತೆ । ಕರೆದು ಮನ್ನಿಸಿದರು ಇರಳು ಹಗಲು ಪಾಲುಗರೆವ ಸಂರಕ್ಷೇನು ಬರಡಾಗಿನಿಂದ ಪರಮಂದನೆ ಬೇಕು । ನೆರದು ಸಂದಣಿಯೊಳು ಚರಿಸಬಾರದು ಪೋಗಿ । ಬರಿದೆ ಕಾಳಿತು ಹಾಳ ಹರಟೆಯ ಪೇಳದಲೆ । ವರಿಯದೆ ಸೊಲ್ಲು ಇರಬೇಕು ತನ್ನೊಳಗೆ । ಪರಮ ತತ್ವವ ತಿಳಿದು ದುರುಳರ । ಗರುಹದಲೆ ಸುರಿಯು ಬೇಕು ಸುಖಿವ। ಮರಳೆ ಮರಳೆ ನೆನೆದು ಪರವು ಗಂಪ್ಪನಾದವಿಜಯ ವಿಠಲ । ಲರೇಯನ ನೆರೆ ನಂಬಲಿಬೇಕು ಕರುಹ ಕಾಣುವಂತೆ ॥೨॥

### ತ್ರಿವಿಡಿತಾಳ

ಲೇಸಾದರು ಹರಿಯ ಕಾರುಣ್ಯವೆನಬೇಕು । ಲೇಸಾಗದೆ ಬಲು ನೋಸದಲ್ಲೆ । ಕ್ಲೇಶ ಬಂದಡದಲು ವಿಸು ಜನ್ಮದ ಪಾಪ । ರಾಸಿಯ ಫಲಿಸಿತೊ ಎನ್ನ ಕರ್ಮ । ಈ ಶರೀರಕ್ಕೆ ಬಂದು ಪ್ರಾಪ್ತವಾದದ್ದುರಂ ಅನಂಭವಿಸದಲೇ ಬಿಡದು ಸಿದ್ಧವೆಂದು । ಲೇಶ ವಾದರು ದುಃಖಿಪಟ್ಟಿಕೊಳ್ಳದೆ ಮಹಾ ತೋಷದಲ್ಲಿರಬೇಕು ನೋಯಿಂದಲೆ । ಶ್ರೀಶನೆ ಗತಿ ಎಂದು ಬೇಸರದಲೆ ಬಂದ । ಕ್ಲೇಶಗಳಿರಬೇಕು ಬಂದಾಗಲು । ದೇಶ ಕಾಲಗುಣ ಪರಿಪೂರ್ಣ ಹರಿ ಇರೆ । ಘಾಸಿ ಎಲ್ಲಿದೊ ಎಂದು ನಲಿಯಬೇಕು । ಶ್ರೀಪತಿ ಕಾಲವೇದ ಜೀವ ಪ್ರಳಯದಲ್ಲಿ । ನಾಶವಾಗವು ಭೇದ ಅನಲೆಬೇಕು । ವ್ಯಾಸ ವಚನ ಮಧ್ವ ರಾಯರು ಮಾಡಿದ ಭಾಷ್ಯ ಸಮ್ಮತದಿಂದ ನೋಡಬೇಕು । ವಾಸುದೇವ ನಮ್ಮ ವಿಜಯ ವಿಠಲನ್ನ । ದಾಸಾನುದಾಸರ ದಾಸನಾಗಲೆಬೇಕು ॥ ೩ ॥

### ಅಟ್ಟತಾಳ

ಬಡತನ ಬಂದರು ಹಿಗ್ಗುತಲಿರಬೇಕು । ಜಡನಾಗಿ ಬಾಹಿರದಲ್ಲಿ ತೋರಲೆಬೇಕು । ಅಡಿಗಡಿಗೆ ಲಜ್ಜೆಗೆಡಬೇಕು ಸರ್ವದಾ । ಒಡಲಿಗೆ ಚಿಂತೆ ಮಾಡದೆ ದೃಢ ಇರಬೇಕು । ಒಡವೆ ವಸ್ತ್ರ ತಂದೆ ತಾಯಿ ತ್ರಿಲೋಕದ । ಒಡೆಯ ಶ್ರೀಕೃಷ್ಣನೆಂದು ಬಿಡದೆ ನಂಬಲೀ ಬೇಕು । ಯಡಿಗೆ ಪರಿಮಿತ, ಧಾನ್ಯ ತರಲಿಬೇಕು ಕೊಡಬೇಕು ಒಟ್ಟರಿಗದರೊಳು । ಕಡುಗಲಿ ವಿಜಯವಿಠಲ ರಂಗನ ಪಾದ । ಹಿಡಿದು ಭಜಿಸಬೇಕು ನಲಿನಲಿದಾಡುತ್ತ ॥೪॥

### ಆದಿತಾಳ

ಉಟ್ಟದಕ್ಕಿಂತ ಮೇಲು ತೊಟ್ಟದಕ್ಕಿಂತ ಮೇಲು । ಇಟ್ಟದಕ್ಕಿಂತಮೇಲು ವಿಠಲನ್ನ ಸ್ಮರಣೆ ಮನ । ಮುಟ್ಟಿ ನಮಿಸಲಿ ಬೇಕು ಬಲುವ ಹಿತದಲ್ಲಿ ಅಟ್ಟಹಾಸದಲ್ಲಿ ಚೀರಿ । ಚಟ್ಟಕ್ಕಿ ಕೂಡಿ ತೂಗಿಂತ ಇಷ್ಟ ಸಂಖಕ್ಕಿಂತ ಮೇಲು । ದಟ್ಟಡಿಯಿಂದ ತಿಳಿದು ನಿಷ್ಠೆಯಿಂದ ಇರಲು । ಇಷ್ಟ ಪ್ರಾಪ್ತಿತ ಅವರಿಗಿಷ್ಟವು ಪರಿಹಾರ । ಹುಟ್ಟು ಸಾವಿಲ್ಲದ ವಿಜಯ ವಿಠಲ ತಾನು । ಕೊಟ್ಟು ಸಾಕುವ ದಯವಿಟ್ಟು ದಾಸನ ವಹಾಡಿ ॥೫॥

### ಜತೆ

ಈ ಪರಿ ಇದ್ದವಂಗೆ ಅನಂತ ಜನುಮಕ್ಕೆ ।
ತಾಪತ್ರಯಗಳಿಲ್ಲ ವಿಜಯ ವಿಠ್ಠಲ ಬಲ್ಲ ॥ ೬ ॥

ಇಲ್ಲಿ ವಿಜಯದಾಸರು ಬಹು ಉದ್ದನಾದ ಪಟ್ಟಿಯನ್ನು ಕೊಟ್ಟುಬಿಟ್ಟಿದ್ದಾರೆ. ಹರಿದಾಸನೆಂಬುವನು ಹೇಗಿರಬೇಕು, ಆವನ ಅರ್ಹತೆ ಜೀವನ ಪರಿ ಹೇಗಿರಬೇಕೆನ್ನಲು,

ಹರಿದಾಸರು ದೀಕ್ಷೆ ಪಡೆದು ಹರಿದಾಸನಾಗಬೇಕಾದರೆ ಮೊದಲು ಅಂಕಿತವನ್ನು ಪಡೆಯಬೇಕು (nom de plume) 'ಅಂಕಿತ' ಎಂಬ ಶಬ್ದ ಹರಿದಾಸ ಸಂಪ್ರದಾಯದ ಪರಿಭಾಷೆ "......ನೂತನ ಜೀವನದ ಸಂಕೇತವೆ ಅಂಕಿತ. ಅಂಕಿತವೆಂದರೆ ವಿಶೇಷವೆಂದರೆ ವಿಶೇಷ ಚಿನ್ಹೆ ಎಂದರ್ಥ".

ಸಾಧನ ಮಾರ್ಗವನ್ನು ಅನುಸರಿಸಿ, ಭಕ್ತಿಯ ಒಲುಮೆ ಬಲುಮೆಗಳಿಂದ ಭಗವಂತನನ್ನು ಒಲಿಸಿಕೊಂಡವನ ಬದುಕು ಇತರ ಲೌಕಿಕರಿಗಿಂತ ಸ್ವಲ್ಪ ಭಿನ್ನವಾಗುತ್ತದೆ. ಅಂಕಿತದ ರಹಸ್ಯವೇ ಇದು. ಭಗವಂತನನ್ನೇ ನಂಬಿ, ಅವನ ಪ್ರೀತ್ಯರ್ಥವೆ ಈ ಬದುಕು ಸಾಗಿಸುವನೆಂಬ 'ದೀಕ್ಷೆ'ಯನ್ನು ಸದ್ಗುರುವಿನಲ್ಲಿ ಪಡೆಯುವಾಗಿನ ಸಂದರ್ಭದಲ್ಲಿ ವಿಶೇಷ ಚಿನ್ಹೆಯಿಂದ ಸೂಚಿಸುವುದು. ಗುರುವಿನಿಂದ ಭಗವಂತನ ತತ್ವದ ಬಗೆಗೆ ಉಪದೇಶ ಹೊಂದಿ ದೇವರ ಹೆಸರೊಂದನ್ನು ಗುರುಗಳಿಂದ ಪಡೆವ ಪದ್ಧತಿ-ಅಂಕಿತ ಪದ್ಧತಿ. ಇಲ್ಲಿ 'ವಿಠಲ' ನಾಮ ಸೇರುವುದು, ವಿಠಲಭಕ್ತಿ, ವಿಠಲನುಪಾಸನೆ, ವಿಠಲನ ಪ್ರೀತಿಗಳಿಂದ! (ವಾದಿರಾಜರಲ್ಲಿ ಕನಕದಾಸರಂಕಿತದಲ್ಲಿ ವಿಠಲ ಶಬ್ದವಿಲ್ಲ.

1 ಅ. ಶ್ರುತಿ, ಸ್ಮೃತಿ ಪುರಾಣ ಇತಿಹಾಸಗಳಲ್ಲಿ ಅಚಲ ನಂಬುಗೆ, ವಿಶ್ವಾಸ

ಆ. ಕಟ್ಟುನಿಟ್ಟಾಗಿ, ಹರಿದಾಸ ಸಾಲ ಮಾಡುವಂತಿಲ್ಲ, ಸಾಲದು ಎನ್ನುವಂತಿಲ್ಲ, ತನ್ನ ಸಂಪಾದನೆ ನಾಳೆಗೆಂದು ಇರಿಸುವಂತಿಲ್ಲ. ಇದು ಅವನ ಶಪಥ. ಅದರಂತೆಯೆ ನಡೆದುಕೊಳ್ಳಬೇಕು.

ಇ. ಅಂದು ಆರ್ಜಿಸಿದ್ದು ಅಂದೇ ಉಂಡು, ನಾಳೆಗಿಡದ ಹಾಗೆಯೆ ದಿನನಿತ್ಯದ ಆಹಾರವನ್ನು ಭಿಕ್ಷೆ ಬೇಡಬೇಕು (ಮಧುಕರವೃತ್ತಿ)ಯೆಂದೇ ಪುರಂದರದಾಸರು ಕರೆದಿದ್ದಾರೆ.

ಈ. ಹರಿನಿಂದೆ, ಹರಿಯಪ್ರೀತಿ ಇರದ ಅವಾಚ್ಯವಾಕ್ಯೂ ಕೇಳಕೂಡದು.

ಉ. ಅವನ ಜೀವನವೆ ಹರಿಯರ್ಪಿತ-ಹರಿಯ ಸ್ಮರಣೆ, ಹರಿಯ ಸರ್ವೋತ್ತಮತೆ ಮಹಾತ್ಮೆ, ಅದೇ ಧ್ಯಾನ ನಿರಂತ.

ಊ. ಹರಿದಾಸರ (ಏಕಾದಶಿ) ಹರಿದಿನವ್ರತ ಆಚರಣೆ ಬಿಡುವುದಿಲ್ಲವೆಂಬ ಪ್ರತಿಜ್ಞೆ ಮಾಡಿ ಅಂತೆಯೇ ನಡೆದುಕೊಳ್ಳಬೇಕು.

ಋ. ಹರಿನಿಂದೆ ಕೇಳಿದರೆ ಪ್ರಾಯಶ್ಚಿತ್ತ, ಆತ್ಮಶುದ್ಧಿ ಮಾಡಿಕೊಳ್ಳಬೇಕು. ಅಂಕಿತವನ್ನು ಕೊಡುವಲ್ಲಿ ಈ ಮತ (ಮಧ್ವಮತ) ಜೀವಾತ್ಮ ಪರಮಾತ್ಮರ ವ್ಯೆಯಕ್ತಿಕ ಹಾರ್ದಿಕ ಸಂಗಮ ಹಾಗೂ ಅದರ ಮುಂದುವರಿಕೆ ಎಂಬುದೇ ಅಂತರಾರ್ಥ. ಪ್ರಾರ್ಥನೆ ಧ್ಯಾನ ಇವು ಬದುಕಿನ ಆತ್ಮಂತ ರಚನಾತ್ಮಕ ಕ್ರಿಯೆ. ಮನುಷ್ಯನ ಪ್ರಗತಿಯನ್ನು ಅಭಿವೃದ್ಧಿಗೊಳಿಸುವಂತದ್ದು. ಹರಿದಾಸನಿಗೆ ಇದೇ ಮುಖ್ಯ.

ಅಂಕಿತದ ಬಗ್ಗೆ ಹೇಳಿದವಲ್ಲ, ಅದು ಹೊಸ ಶಿಷ್ಯನ ಅಂಕಿತದಿಂದ ಪ್ರಾರಂಭವಾಗಿ ಗುರುವಿನ ಅಂಕಿತದೊಂದಿಗೆ ಕೊನೆಗೊಳ್ಳುತ್ತದೆ.

ಉದಾ: ಜಗನ್ನಾಥದಾಸರು ತಮ್ಮ ಶಿಷ್ಯರಾದ ಶ್ರೀವಿಠಲರಿಗೆ ಅಂಕಿತ ಅನುಗ್ರಹಿಸಿದಾಗ

ಶ್ರೀದವಿಠಲ ಸರ್ವಾಂತರಾತ್ಮಾ
ನೀದಯದಿ ಒಲಿದು ನಿತ್ಯದಲಿ ಕಾಪಾಡುವುದು ॥ ಪ ॥

ಮಾತರಿಶ್ವಪ್ರಿಯ ಸುರೇತರಾಂತಕನೆಪ್ಪುರು ।
ಪೂತನಂದನ ಸಖ ನಿರಾತಂಕದೀ ।
ನೀ ತೋರು ಮನದಿ ಸಂಪ್ರೀತಿಯಿಂದಲೆ ಒಲಿದು
ಹೋತಾಹ್ವಗುರು ಜಗನ್ನಾಥವಿಠಲ ಬಂಧೂ...

ಇಲ್ಲೆಲ್ಲ ನಂಬುಗೆ, ಅಚಲ ವಿಶ್ವಾಸ, ಭಗವಂತನಲ್ಲಿ ಪ್ರೀತಿಯೇ ಮುಖ್ಯ.

ಮೇಲ್ಕಂಡ ಕೃತಿಯಲ್ಲಿ ಮೊದಲು "ಶ್ರೀದವಿಠಲ"ಎಂದಿದ್ದು ಕೊನೆಗೆ "ಜಗನ್ನಾಥ ವಿಠಲ" ದಂಕಿತವಿದೆ. ಇದನ್ನು "ಮುದ್ರಿಕೆ" (ಗುರುತಿಸುವ ಸಾಧನ) ಎಂದು ಕರೆಯುತ್ತಾರೆ. ಹರಿದಾಸರಲ್ಲಿ ಅಂಕಿತಕ್ಕೆ ವಿಶೇಷ ಪ್ರಾಶಸ್ತ್ಯ. ಗುರುವು ಶಿಷ್ಯನ ಸ್ವರೂಪಗುಣವನ್ನು ಕಂಡು ಹಿಡಿದು ಅವನಲ್ಲಿರುವ ಬಿಂಬರೂಪಿ ಪರಮಾತ್ಮನ ರೂಪವನ್ನು ನೆನೆನೆನೆದು ಅಂಕಿತವನ್ನು ಆರಿಸುವರೆಂದು ತಿಳಿಸುತ್ತಾರೆ. ಗುರುವು ಅಂತೆಯೆ ಆಳವಾದ ಜ್ಞಾನದ ಖನಿಯಾಗಿರಬೇಕು. ಅಂಕಿತಕ್ಕೆ ಪರಮಾತ್ಮನ ಪ್ರೇರಣೆ, ಯಾವುದೊ ಸೂಚನೆ ಆಗುತ್ತವೆಂದು ನಂಬುಗೆ. ಈ ಪ್ರಕಾರ ಮಧ್ವಾಚಾರ್ಯರು ತಮ್ಮ "ದ್ವಾದಶ ಸ್ತೋತ್ರ"ಕ್ಕೆ "ಆನಂದ ತೀರ್ಥ" ಅಂಕಿತವಿರಿಸಿರುವುದು ಗಮನಾರ್ಹ. ಶ್ರೀ ಶ್ರೀಪಾದ ರಾಜರ ಅಂಕಿತ, ಅವರ ಉಪಾಸನಾದೇವತೆಯಾದ 'ರಂಗ ವಿಠಲ', ಅವರ ಪ್ರಿಯ ಶಿಷ್ಯ ಶ್ರೀ ವ್ಯಾಸರಾಯರು ತಾವು ಪ್ರೀತಿಯಿಂದ ಉಪಾಸಿಸಿದ ಕೃಷ್ಣನನ್ನೆ "ಶ್ರೀ ಕೃಷ್ಣ" ಅಂಕಿತದಲ್ಲಿ ಸ್ತುತಿಸಿ, ಹಾಡಿದರು. ಆದರೆ ಪುರಂದರವಿಠಲರ ನಂತರ ಇದೇ ಹರಿದಾಸ ಸಂಪ್ರದಾಯವಾಗಿ, ಪಂಥವಾಗಿ ಮುಂದುವರೆಯಿತು. ಅದಕ್ಕೆ ಪುರಂದರ ದಾಸರ ಪ್ರಭಾವದ ಆಳವು ಅಷ್ಟೇ ಗಮನಾರ್ಹ. ಹರಿದಾಸ ಸಂಪ್ರದಾಯದಲ್ಲಿ ಗುರು ಮುಖೇನ ಅಂಕಿತ ಪ್ರಧಾನ ಮಾಡಿಸಿಕೊಂಡು, ಸಂಪ್ರದಾಯ ಸ್ಥಾಪಿಸಿದವರು ಪುರಂದರದಾಸರು. ಶ್ರೀಪಾದರಾಜರು-ವ್ಯಾಸರಾಯರಿಗೆ ಸಮಯ ಸ್ಫೂರ್ತಿಯ ಅಂಕಿತ, ಆದರೆ, ಪುರಂದರದಾಸರಿಗೆ ಗುರುಮುಖೇನ ದೊರೆಯಿತು. ಅಂಕಿತವಿರದ ಶರೀರ, ಜ್ಞಾನ, ಕೃತಿ, ಶೋಭಿಸದೆಂದೆ ದಾಸರು ಘೋಷಿಸಿದ್ದಾರೆ.

ದಾಸನಾಗುವುದಕ್ಕೆ ಏಸು ಜನ್ಮದ ಸುಕೃತ । ಭಾಸುರರವಿಕೋಟಿ
ಶ್ರೀಶ ಸುಗುಣವಂತ । ನಾಶರಹಿತ ನಿನ್ನ ದಾಸರ ದಾಸ್ಯವ । ಲೇಸಾಹಿ
ಕೊಡು ಕಂಡ್ಯ ಪುರಂದರ ವಿಠಲ
ಅಂಕಿತ ವಿಲ್ಲದ ದೇಹ ನಿಷಿದ್ಧ ।

ಅಂಕಿತವಿಲ್ಲದ ಕಾರ್ಯ (ವ್ಯ) ಶೋಭಿಸದಂ । ಅಂಕಿತವಿಲ್ಲದಿರಬಾರದಂ ಎಂದಂ ।
ಪಂಕಜನಾಭ ಶ್ರೀ ಪುರಂದರವಿಠಲನ । ಅಂಕಿತವೆನಗಿತ್ತ ಗುರಂ ವ್ಯಾಸವಂನಿರಾಯ ।[14]

ಈ ಅಂಕಿತ ದಾಸದೀಕ್ಷೆ, ಪ್ರಾರ್ಥನೆ, ಭಜನೆ, ನಾಮಸಂಕೀರ್ತನೆ, ಹಾಗೂ ಹರಿದಾಸವೃತ್ತಿ -ಸಂಪ್ರದಾಯ ಶ್ರದ್ಧೆ, ಅಚಲ ವಿಶ್ವಾಸಗಳಿಂದಲೇ ಶ್ರೀ ಪುರಂದರ, ವಿಜಯವಿಠಲ ಜಗನ್ನಾಥದಾಸರಂಥ ಹರಿದಾಸರು ದೈವಸಾಕ್ಷಾತ್ಕಾರ ಪಡೆದುಕೊಂಡದ್ದು. ಪುರಂದರದಾಸರ ಉಪಾಸ್ಯದೇವತೆ ಪಂಢರಿಗೆಯ ವಿಠಲ-ಅನವರತವೂ ಅವನ ನಾಮ ಸ್ಮರಣೆಯೇ ದಾಸರಿಗೆ । ಪಂಢರಿಗೆಯ ಪಾಂಡುರಂಗ, ನಾದಬ್ರಹ್ಮ-ದುರಿತನಿವಾರಿಸುವ. ಕ್ಷಮೆಯ ಮೂರ್ತಿವೆತ್ತವನಾತ! ಹಾಗೆಯೇ ತಿರುಪತಿ ತಿರುಮಲೆಯ ಶ್ರೀನಿವಾಸ (ತಿರುಪತಿ ಎಂದರೆ ಶ್ರೇಷ್ಠನಾದ ಗಂಡ, ಶ್ರೇಷ್ಠ ಪತಿ ಎಂದು ಅರ್ಥಯಿಸಬಹುದು) ಹರಿದಾಸರಿಗೆ ಕಾಂಚನಬ್ರಹ್ಮನಾದರೆ ಉಡುಪಿಯ ಶ್ರೀ ಕೃಷ್ಣ ಅನ್ನಬ್ರಹ್ಮನಾದ ; ಭಕ್ತಿ ಮಾರ್ಗದ ಸಾಧನೆಗಳಲ್ಲಿ ತೊಡಗಿದ ಹರಿದಾಸರು ವಿಠಲವಿಠಲನೆಂದು ಭಜಿಸುತ್ತ, ನಂಡಿಸುತ್ತ, ನರ್ತಿಸುತ್ತ, ನಾದಬ್ರಹ್ಮೋಪಾಸನೆ ಮಾಡುತ್ತಿದ್ದರು. ವಿಜಯದಾಸರು ಹೇಳುವಂತೆ : ''ತಪ್ತ ಮುದ್ರಾಂಕಿತ ಧರಿಸಬೇಕು ಭಜಿಪದಿ । ಅನ್ನಪಾನಕ್ಕೆ ಅವಸರ ಬೇಸದಿರಬೇಕು । ಅಂದವರು ತನಗೆ ಬಹಳ ಬಂಧುಗಳೆನಲಿಬೇಕು । ಇಂದ್ರಿಯಗಳನೆಲ್ಲ ನಿಗ್ರಹಿಸಬೇಕು । ಭಾವಶುದ್ಧಿಯಲ್ಲಿ ನಿತ್ಯ ತಿರುಗಬೇಕು ।'' ಇದೇ ಹರಿದಾಸ ದಿನಚರಿ. ಮಧ್ವಮತ '(ಅಥವಾ ಮರುತವಂತಃವಾಯುಂಮತ) ನಿಷ್ಠೆ-ಆದರ ಪದ್ಧತಿ-ಅನುಸರಣೆ, ತಿನ್ನುವುದು ಕಂಡಿವುದರಲ್ಲಿ ಚಪಲವಿಲ್ಲದಿರುವಂಥದು, ಯಾರು ಏನೆ ನಿಂದಿಸಲಿ, ತೆಗಳಲಿ, ಅವರೇ ತನ್ನ ನಂಟರು, ಇಷ್ಟರು ಎಂದರ್ಥ ಮನೋಧರ್ಮ । ಯಾವಾಗ ಯಾವುದೆ ಗಳಿಗೆಯಲ್ಲಿ ತನ್ನ ಇರುವು, ಚಾಪಲ್ಯ ತೋರಬಹುದಾದ ಇಂದ್ರಿಯಪು ನಿಗ್ರಹ, ತನು ಮನ ಅಂತರಂಗ ಭಾವ, ಶುದ್ಧಿ, ಮಧುಕರ ವೃತ್ತಿ! ಇದು ಹರಿದಾಸ ವೃತ್ತಿ, ಇದು ಸಂಪ್ರದಾಯ. ಇದು ಮಹಾರಾಷ್ಟ್ರದ ವಾರಕರಿ ಸಂಪ್ರದಾಯವನ್ನು (Varkari system) ಸ್ವಲ್ಪ ಹೋಲುವುದಾದರೂ, ಆ ಸಂಪ್ರದಾಯಕ್ಕೆ ಬೇರೆ ಬಂಣವಿದೆ. ವಾರಕರಿ ದಾಸರಾದ ಜ್ಞಾನದೇವ, ನಾಮದೇವ, ಏಕನಾಥ, ಹಾಗೂ ಇನ್ನಿತರ ಸಂತರು ವಿವಿಧ ಸಂಪ್ರದಾಯಗಳನ್ನು ಉಪಾಸಿಸಿದರು. ಚೈತನ್ಯ ಸಂಪ್ರದಾಯಕ್ಕೆ ಒಂದು ವೈಶಿಷ್ಟ್ಯ. ಎರಡು ವಿಭಾಗಗಳಿದ್ದು, ಒಂದು ಜಪಮಂತ್ರ, ರಾಮಕೃಷ್ಣ ಹರಿ, ಹಾಗೂ ಓಂ ನಮೋ ಭಗವತೇ ವಾಸುದೇವಾಯ.

ಸಮರ್ಥರಾಮದಾಸರು ಮಹಾರಾಷ್ಟ್ರದ ಇನ್ನೊಬ್ಬ ಸಂತರು. ಛತ್ರಪತಿ ಶಿವಾಜಿ ಮಹಾರಾಜರ ಗುರುಗಳು; ಹನುಮಂತನ ಅಂಶಸಂಭೂತರೆಂದೇ ಪ್ರಸಿದ್ಧಿ. ಹಾಗೂ ಅನೇಕ ಹರಿದಾಸ ಕೃತಿರಚನೆ ಮಾಡಿದ ರಾಮೋಪಾಸಕರು. ಅವರ ಮಂತ್ರವೊಂದೆ : "ಶ್ರೀ ರಾಮ ಶ್ರೀ ರಾಮ" ಎಂಬುದು. ರಾಮದಾಸರ ಸಂಪ್ರದಾಯಕ್ಕೆ ಇನ್ನೊಂದು ಹೆಸರು ಸ್ವರೂಪ ಸಂಪ್ರದಾಯ. ಹಾಗೆಯೇ ಉತ್ತರದ ಕಡೆಯ ಆನಂದ ಸಂಪ್ರದಾಯದ ಅನುಯಾಯಿಗಳಾದ ರಾಮಾನಂದ, ಅವರ ಪ್ರಿಯಶಿಷ್ಯ ಕಬೀರ, ಅವನ ವರ್ಗ ಕಮಾಲ, ಹಾಗೂ ಇನ್ನಿತರರು, ಜನಾರ್ದನ ಸ್ವಾಮಿ, 'ಏಕನಾಥ್‌ ಹೀಗೆ. ಇವರೆಲ್ಲರ ಉಪಾಸನಾಮಂತ್ರ : 'ಓಂ ನಮೋ ನಾರಾಯಣಾಯ'. ಇವರು (ಜನಾರ್ದನಸ್ವಾಮಿ) ಅನುಸರಿಸಿದ್ದು, ಪ್ರಕಾಶ ಸಂಪ್ರದಾಯವನ್ನು. ಹೀಗೆ ವಿವಿಧ ಸಂಪ್ರದಾಯ ಹರಿದಾಸರು ಬಂದ ಅವಧಿಯಲ್ಲಿ ಭಾರತದ ವಿವಿಧೆಡೆ ಪ್ರಚಲಿತಗೊಂಡಿದ್ದವು. ಅವುಗಳಿಗೆ ಸಾಮಾನ್ಯ ಅಂಶವೆಂದರೆ ಹರಿಭಕ್ತಿ ಅಥವಾ ವಿಷ್ಣುವಿನಲ್ಲಿ ಭಕ್ತಿ. ವಾರಕರಿ ಸಂಪ್ರದಾಯದವರ ವೈಶಿಷ್ಟ್ಯವೆಂದರೆ, ಅವರು ಶಂಕರರ ಅದ್ವೈತ ಶಾಖೆಯವರಾದರೂ ಪಂಚ ದೇವತೆಗಳ ಪೂಜಕರು. ವಿಠಲನಾಥನೆ ಅವರ ಪರಮಪ್ರಿಯ ದೈವ. ಅವನೆ ಪರದೈವ, ಕೃಷ್ಣನ (ನಂದಲಾಲ) ಬಾಲಲೀಲೆ ಅವರಿಗೆ ತುಂಬ ಪ್ರಿಯ. ಪಂಢರಿನಾಥನಂತೆಯೆ ವಾರಕರಿಯವರಿಗೆ ಶಿವನು ಇಷ್ಟದೇವತೆಗಳಲ್ಲೊಬ್ಬ. ಹರಿಹರರಲ್ಲಿ ಅವರು ಭೇದವೆಣಿಸಿದರಲ್ಲ. ಏಕಾದಶಿ (ಹರಿವಾಸರ) ಅವರಿಗೆ ಉಪವಾಸದ ದಿನ. ಹಾಗೆಯೆ ಪ್ರತಿ ಸೋಮವಾರವು ಶಿವನಿಗೆ ಪ್ರಿಯವೆಂದು ಆಚರಿಸುವುದು ಅವರ ಸಂಪ್ರದಾಯ. ಏಕಾದಶಿ ದಿನಗಳಲ್ಲಿ ಪಾಂಡುರಂಗವಿಠಲನ ದೇವಾಲಯಕ್ಕೆ ಹೋಗಿ ಪೂಜಿಸುವುದು, ತುಳಸೀಮಾಲೆ ಕೊರಳಲ್ಲಿ ಧರಿಸುವುದು, ವಾರಕರಿ ಸಂಪ್ರದಾಯದವರ ಪ್ರಮುಖ ಲಕ್ಷಣಗಳು. ಭಜನ ಗೋಷ್ಠಿ ಕಥಾಗೋಷ್ಠಿ ನಾಮ ಸಂಕೀರ್ತನೆ, ಇಷ್ಟದೇವತಾ ಮಂತ್ರ ಜಪ ಅವರು ಅನುಸರಿಸುತ್ತಿದ್ದ ಪದ್ಧತಿ. ನಾಮಜಪದ ಬಗ್ಗೆ ಅವರಿಗೆ ಅತೀವವಿಶ್ವಾಸ (ತುಕಾರಾಮ ನಂತೂ ತನ್ನ ಅಭಂಗಗಳಲ್ಲಿ ನಾಮೋಚ್ಚಾರಣೆಯ ಬಗ್ಗೆ ತುಂಬ ಗೌರವ ತೋರುತ್ತಾನೆ.) ಅದನ್ನೆ ಹರಿದಾಸರು ಅನುಸರಿಸಿದಂತಿದೆ: "ರಾಮಮಂತ್ರವ ಜಪಿಸೊ, ಹೇ ಮನುಜ, ಆ ಮಂತ್ರ ಈ ಮಂತ್ರ ಜಪಿಸಿ ಕೆಡಲು ಬೇಡ। ಸೋಮಶೇಖರ ತನ್ನ ಭಾಮಿನಿಗೆ ಪೇಳಿದ ಮಂತ್ರ...."ಇಷ್ಟಾದರೂ ಪ್ರಪಂಚದ ಬದುಕನ್ನು ಅವರು ಯಾವತ್ತೂ ಕಡೆಗಣಿಸಲಿಲ್ಲ. ಅವರದು ಪ್ರತಿನಿತ್ಯದ ಬದುಕಿನಲ್ಲಿ ಅನುಸರಿಸಬೇಕಾದ ಕರ್ಮಯೋಗ.

ಹರಿದಾಸರು ವಾರಕರಿ ಸಂಪ್ರದಾಯವನ್ನು ಒಂದು ನಿಟ್ಟಿನಲ್ಲಿ ಕಟ್ಟುನಿಟ್ಟಾಗಿ ಒಪ್ಪಲಿಲ್ಲ : ಅದು ಶಂಕರರ ಅದ್ವೈತ ಸಂಪ್ರದಾಯ-ಅಲ್ಲಿನ ಜಟಿಲತೆ, ಜ್ಞಾನ ಸಮನ್ವಯತೆ, ಎಲ್ಲರಿಗೂ ಹೇಗೆ ಸಾಧ್ಯ ? ಭಕ್ತಿ-ಜ್ಞಾನ-ವೈರಾಗ್ಯ ಇದೇ ಹರಿದಾಸರು ಸಮನ್ವಯಗೊಳಿಸಿ, ಸಾರಿದ್ದು. ಹರಿದಾಸರು ಕಟ್ಟಾ ವೈಷ್ಣವ ನಿಷ್ಠರು. ಬ್ರಹ್ಮಸತ್ಯ, ಜಗತ್ತೂ ಸತ್ಯ, ಇಲ್ಲಿ ಬದುಕು ಪರದಲ್ಲೂ ಸಲ್ಲುವುದು ಶ್ರೇಯಸ್ಕರವೆಂಬುದು ಹರಿದಾಸರ ನಿಲುವು. ಅದೇ "ಮಾನವ ಜನ್ಮ ದೊಡ್ಡದು", "ಧರ್ಮವೆ ಜಯವೆಂಬ ದಿವ್ಯ

ಮಂಂತ್ರ'', ''ಈಸಬೇಕು ಇದ್ದು ಜಯಿಸಬೇಕು'', ಮುಂತಾದ ದಾಸರ ಕೃತಿಗಳ ತಿರುಳು. ಹರಿದಾಸರಿಗೆ ಮಧ್ವಮತ ನಿಷ್ಠೆ, ಆನಂದ ತೀರ್ಥರ ದ್ವೈತ ಸಂಪ್ರದಾಯವೆ ಪರಮೋಚ್ಚವಾದದ್ದು : ಅದರ ಪ್ರಸಾರ ಹರಿಪಾರಮ್ಯ ಪ್ರತಿಪಾದನೆಯು ಹೇಗೋ ಹಾಗೆಯೇ ಅದ್ವೈತ ಖಂಡಿಸಲೂ ಅವರ ವೀರ ವೈಷ್ಣವ ನಿಷ್ಠೆ ಹಿಂದೆ ಬೀಳುತ್ತಿರಲಿಲ್ಲ. ಹಾಗೆಯೇ ಈ ಲೌಕಿಕ ಗತ್ತು ದಾಟಿದ ಅಲೌಕಿಕ (ಪರಾ)ದಲ್ಲಿ ಅವರಿಗೆ ನಂಬುಗೆ! ದೈವ ಭಕ್ತಿ ಅವರ ಧ್ಯೇಯ, ಅನುಸರಣೆ! ಮನಸ್ಸಿನ ಮನಸ್ಸಿಗೆ ಸುಲಭವಾಗಿ ನಿಲುಕುವ, ಇಂದ್ರಿಯಾತೀತವಾದ, ಬುದ್ಧಿ ದಾಟಿ ಮಾತಿಗೆ ನಿಲುಕುವ, ಹೃದಯ ಸ್ಪಂದಿಸುವ, ಹಾಗೆಯೆ ಜ್ಞಾನ ಚಕ್ಷುಸ್ಸನ್ನು ತೆರೆಯಿಸುವ, ಪ್ರೇಮಭರಿತ ದೈವದೊಲುಮೆಯೇ ಅವರ ಧ್ಯೇಯ, ಅದೇ ಅವರ ಬದುಕು. ಇದನ್ನು ಶಿವಶರಣರು ಅನುಭಾವವೆಂದಂತೆ ಹರಿದಾಸರು ಅಪರೋಕ್ಷಾನುಭೂತಿ ಎಂದರು. ''ಅಂತರ್ಬಹಿಶ್ಚ ತತ್ಸರ್ವಂವ್ಯಾಪ್ಯ ನಾರಾಯಣ ಸ್ಥಿತಃ'' ಒಳಗೆ ಹೊರಗೆ, ಎಲ್ಲೆಡೆಯೂ ನಾರಾಯಣ ವ್ಯಾಪಿಸಿದಾನೆ, (ತೈತ್ತಿರೀಯ) ಆತನನ್ನರಿಯಬೇಕೆಂಬುವುದೆ ಹರಿದಾಸರ ನಿಲುವು, ಸಾಧಕನಿಗಾಗುವ ಎಲ್ಲ ವೇದನೆ ನೋವು ತುಮುಲ, ಆತ್ಮ ಪರಿತಾಪ, ಆತ್ಮ ನಿವೇದ, ಪ್ರಾಯಶ್ಚಿತ್ತ, ಹಿಂದೆ ಮಾಡಿದ ದುರಿತ ಪಶ್ಚಾತ್ತಾಪ, ಎಲ್ಲವನ್ನು ನಿವೇದಿಸಿಕೊಂಡು, ಅನಂತರ ಕಾಳ ರಾತ್ರಿಯನ್ನು ಕಳೆದ ನಂತರವೆ ಹರಿದಾಸರಿಗೆ ತಮ್ಮ ದಾಸ್ಯ, ಆರ್ತಭಾವದ, ಭಕ್ತಿಯ ಒಲ್ಮೆಗೆ ದೂರವ ದೈವದೊಲುಮೆಯ ಸಂಜೀವಿನೀ ದರ್ಶನ, ಸಾಕ್ಷಾತ್ಕಾರ ಆಗುತ್ತಿದ್ದದ್ದು! ಅನಂತರ ಅವರು ಬೇರೆ! ಹರಿದಾಸರು ಹೇಗೆ ಹೇಗೊ ಇರುವಂಥವರು! ''ಮೂಕಬಧಿರರಂತಿರ್ಪರು ನೋಳ್ಪ ಜನಕ್ಕೆ'' ಕಾಕುಮಾನುಜರ ಕಂಯುಕ್ತಿಗಳನ್ನು ಅವರು ಮಂನಕ ತಾರರು. ''ಎಂತುಮಂರುಳಾದೇ! ನಾನರಿತು ಮರುಳಾದೆ! —ಸಂತತ ಪುರಿರಘುಕುಲ ತಿಲಕ ಮಾತಿನಲ್ಲಿ ಹರಿದಾಸತನ! ನೀತಿಯಲ್ಲಿ ಪ್ರಭುದಾಸತನ! '' ಎಂಬ ಶ್ರೀ ನರಹರಿತೀರ್ಥರ ಒಂದು ಕೀರ್ತನೆ, ಬಳಲುವ ಅಜ್ಞಾನಿ ಜೀವರ ಸ್ಥಿತಿ, ಅವರ ಬುದ್ಧಿ ಪಲ್ಲಟ ಗುಣ, ಬುದ್ಧಿ ಪ್ರವೃತ್ತಿ ಮಾತಿನಲ್ಲಿ ಮಾತ್ರ ಹರಿದಾಸತನವಾದರೆ ನೀತಿಯಲ್ಲಿ ಪ್ರಭುದಾಸತನ! ಒಳಗೊಂಡು ಹೊರಗೊಂದು, ಇದೆಲ್ಲ ಚೆನ್ನಾಗಿ ಗೊತ್ತಾಗುತ್ತದೆ! ಪಕ್ವ ಹರಿದಾಸ ಮನೋಭಾವ, ಈ ತುಮುಲನಿವೇದನೆಯಲ್ಲಿ ತಿಳಿಯ ಬರುತ್ತದೆ.

ಹರಿದಾಸರ ನಡೆ ನುಡಿ ಬದುಕಿನಲ್ಲಿ ಭಗವದ್‌ಭಕ್ತರ ನಡೆ ನುಡಿಯೆ ಕಾಣುವಂಥದು. ಲೌಕಿಕ, ಸಾಮಾನ್ಯರ ಜೀವನಕ್ಕಿಂತ ದಾಸರ ಬದುಕು ಭಿನ್ನ. ಪುರಂದರದಾಸರಂಥವರು ಯಾವುದೋ ಸಂದರ್ಭದಲ್ಲಿ ಹರಿದಾಸರಾದರು. ಹಾಗೆಯೇ ಕರ್ಜಗಿ ದಾಸಪ್ಪನೆಂಬ ವೇಶ್ಯಾಲೋಲ ಜಗನ್ನಾಥದಾಸರ ಪ್ರಭಾವ ಮತ್ತು ಅವರ ಕೃತಿಗಳಿಂದಲೇ ತನ್ನ ಬದುಕಿಗಾವರಿಸಿದ್ದ ಕಾಳಿಕೆ, ಕಂಡು ಕೊಂಡ, ಕಳೆದು ಕೊಂಡ ಕೂಡ. ವಿಜಯದಾಸರಂತೆ 'ಕೂಸೀಮುಗದಾಸ'ನಾದವರು, ವ್ಯಾಪ್ತಾನ್ನ ಭೋಜನವೆಂಬ ವಿಜಯವಿಠಲದಾಸರಾದರು; ಧನಿಕ ಲೋಭಿ ಶೀನಪ್ಪನಾಯಕ ಪುರಂದರದಾಸನಾದರು; ಮೋಹನದಾಸರಂತೆ

ಕಡಂರೋಗಿ, ಆರೋಗ್ಯಯುತನಾಗಿ ಹರಿಭಕ್ತಿಯೊಡಗೂಡಿ ದಾಸದೀಕ್ಷೆ ಪಡೆದ ; ಜಗನ್ನಾಥದಾಸರಂತಹ ಉದ್ದಾಮ ಸಂಸ್ಕೃತ ವಿದ್ವಾಂಸರು ಹರಿದಾಸಭಕ್ತರಾದ್ದಲ್ಲದೇ ಶ್ರೇಷ್ಠ ಹರಿದಾಸರೂ ಆಗಿ ತಮ್ಮ ಜಗನ್ನಾಥ ವಿಠಲನ (ಅಂಕಿತ) ಅನಂತ ಲೀಲಾ ವ್ಯಾಪಾರ ಬಣ್ಣಿಸಿದರು; ಕನಕನಂಥ ಅನುಭಾವಿ, ರಾಮಾನುಜ-ಮಧ್ವರನ್ನು ಗುರುಗಳಾಗಿ ಸ್ವೀಕರಿಸಿ ಜ್ಞಾನ ವೈರಾಗ್ಯ ಭಕ್ತಿ ಸಮನ್ವಯಗೊಳಿಸುವ ಹರಿದಾಸನಾದ ; ಅಪರೋಕ್ಷ ಜ್ಞಾನ ಅವರೆಲ್ಲರ ಸಂಗಮ. "ಮನದಲ್ಲಿ ದೃಢವಿರಬೇಕು | ದುರಿತ ಜನರ ಸಂಗತಿಯನು ನೀಗಲುಬೇಕು | ಅನುಮಾನಗಳ ಬಿಡಬೇಕು | ತನ್ನ ತನುಮನ ಹರಿಗೊಪ್ಪಿಸಿಕೊಡಬೇಕು | ಕಾಮಕ್ರೋಧ ಬಿಡಬೇಕು, ಪರನಾರಿಯರ ಹಂಬಲ ಬಿಡಬೇಕು| ಹೇಮದಾಸೆಯ ಸುಡಬೇಕು | ಹರಿನಾಮ ಸಂಕೀರ್ತನೆಯನು ಮಾಡಬೇಕು | ಸಂದಣಿಗಳ ಬಿಡಬೇಕು| ದೇಹ ಬಂಧು ಬಾಂಧವರ ಸ್ನೇಹವ ಬಿಡಬೇಕು | ನಿಂದಿಸಿದರೆ ಹಿಗ್ಗಬೇಕು| ಕೋಪಬಂದಾಗ ಸೈರಣೆ ಬಿಡದಿರಬೇಕು || ಹರಿಯ ಗುರುವೆನ್ನಬೇಕು | ಶ್ರೀಹರಿಯೇ ಪರದೈವ ವೆಂತೆನ್ನಬೇಕು | ಪರವಸ್ತು ಒಲ್ಲೆನೆನ್ನಬೇಕು | ದೇಹ ಅಸ್ಥಿರವಲ್ಲವೆಂತೆಂದು ತಿಳಿಯಲುಬೇಕು ||"

ವ್ಯಾಪಾರವನ್ನು ಬಿಡಬೇಕು | ನಮ್ಮ ಶ್ರೀಪತಿ ಪುರಂದರವಿಠಲೆನ್ನಬೇಕು | ಪಾಪರಹಿತನಾಗಬೇಕು | ಜ್ಞಾನದೀಪವ ಬೆಳಗಲಿ ಓಡಾಡಬೇಕು |[1]

ಇದು ಪುರಂದರದಾಸರೀಯುವ ಹರಿದಾಸನ ದಿನಚರ್ಯೆ-ಮನೋಧರ್ಮ ;

ಹರಿದಾಸರು ಸಾಮಾನ್ಯವಾಗಿ ತಾವು ದಾಸದೀಕ್ಷೆ ಪಡೆದುಕೊಳ್ಳುವ ಮೊದಲು ತಮ್ಮ ಪೂರ್ವದ ಇತಿವೃತ್ತವನ್ನು ತಿಳಿಸದಿರುವುದರಿಂದ ಅವರ ಆತ್ಮಕಥನ ಒಗಟಾಗಿದೆ. ಆದರೂ, ಅವರು ತಮ್ಮ ಕೃತಿಗಳಲ್ಲಿ ಕಾಣಿಸಿರುವ ಅಂದಂದಿನ ಬದುಕಿನೆಳೆಗಳು, ಸಾಂಸ್ಕೃತಿಕ ಮೌಲ್ಯ, ಸಮಕಾಲೀನ ಜೀವನ, ಗುರುದೈವಭಕ್ತಿ ಹಾಗೂ ಅವರ ಅನಂತರದ ಹರಿದಾಸರು ತಮ್ಮ ಪೂರ್ವಜರಾದ ಹಿರಿಯ ಹರಿದಾಸರನ್ನು ಸ್ಮರಿಸುವಿಕೆ, ಅಂದಿನ ಸಾಹಿತ್ಯ ಕೃತಿಗಳಲ್ಲಿ ಕಾಣಬರುವ ಚಿತ್ರಣ ; ಶಾಸನ, ಇವುಗಳ ನೆರವಿನಿಂದ ನಾವು ಹರಿದಾಸರ ಬಗ್ಗೆ ತಿಳಿಯಬೇಕಾಗಿ ಬರುತ್ತದೆ. ಹರಿದಾಸ ಸಂಪ್ರದಾಯಕ್ಕೂ ಅದರ ಮೊದಲಿನ ಪೂರ್ವವ್ಯಕ್ತಿಗೂ ನಂಟು ಅವರ ಕೃತಿಗಳಲ್ಲೇ ಗೋಚರವಾಗುತ್ತದೆ. ಪುರಂದರದಾಸರು ವ್ಯಾಪಾರಿಗಳಾಗಿದ್ದರೆ, ಕನಕದಾಸರು ಪಾಳೆಯ ಪಟ್ಟಿನ ಅರಸರಾಗಿದ್ದರು. ಒಬ್ಬರಿಗೆ ವ್ಯಾಪಾರ ಮೋಹ, ಇನ್ನೊಬ್ಬರಿಗೆ ರಾಜ್ಯ, ವೈಭವದ ಮೋಹ. ಇದನ್ನು ಅವರವರ ಕೃತಿಗಳಲ್ಲಿ ತಂದಿರುವ ಬಗ್ಗೆ ಹಿಂದಿನ ಅಧ್ಯಾಯದಲ್ಲಿ ತಿಳಿಸಿದೆ. ಇಲ್ಲಿ ಸಂಪ್ರದಾಯದ ಬಗ್ಗೆ ಅವರವರು ನುಡಿದು ಒಂದೆರಡು ಕೃತಿಸಾಲು ಗಮನಾರ್ಹವಾಗುತ್ತವೆ.

ಉದಾ : ಪುರಂದರದಾಸರ ಕೃತಿ—

ಆದದ್ದೆಲ್ಲಾ ಒಳಿತೇ ಆಯಿತು, ನಮ್ಮ
ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು ॥ಪ॥
ದಂಡಿಗೆ ಬೆತ್ತ ಹಿಡಿಯುವುದಕ್ಕೆ । ಮಂಡೆಬಾಗಿ ನಾಚುತಲಿದ್ದೆ ।
ಹೆಂಡತಿ ಸಂತತಿ ಸಾವಿರವಾಗಲಿ । ದಂಡಿಗೆ ಬೆತ್ತ ಹಿಡಿಸಿದಳಯ್ಯ ॥1॥
ಗೋಪಾಳ ಬುಟ್ಟಿ ಹಿಡಿಯುವುದಕ್ಕೆ । ಭೂಪತಿಯೆಂದು ಗರ್ವಿಸುತಿದ್ದೆ ।
ಆ ಪತ್ನಿ ಕುಲ ಸಾವಿರವಾಗಲಿ । ಗೋಪಾಳಬುಟ್ಟಿ ಹಿಡಿಸಿದಳಯ್ಯ ॥2॥
ತುಳಸೀ ಮಾಲೆ ಹಾಕುವುದಕ್ಕೆ । ಅರಸನೆಂದು ತಿರುಗುತಲಿದ್ದೆ ।
ಸರಸೀಜಾಕ್ಷ ಪುರಂದರ ವಿಠಲನು । ತುಳಸೀಮಾಲೆ ಹಾಕಿಸಿದನು ॥3॥

ಎಂಬಂತೆಯೆ,

"ವ್ಯಾಪಾರ ಉದ್ಯೋಗಕಿನ್ನು ವ್ಯಾಕುಲದ ಭಯವ್ಯಾಕಿಟು
ಗೋಪಾಳದ ವೃತ್ತಿಗಿನ್ನು ಗೊಡವೆ ಯಾರದಿಲ್ಲವಯ್ಯ ॥
ಸರಕುಬೆಲ್ಲ ತುಪ್ಪ ಧಾನ್ಯ ಸವೆದೀತೆಂಬ ಚಿಂತೆಯುಂಟು ।
ಹರಿನಾಮಾಮೃತಕೆ ಇನ್ನು ಯಾವ ಚಿಂತೆಯಿಲ್ಲವಯ್ಯ॥
"ವಾಸಿಪಂಥಗಳು ನಡೆಯದೆ ಹೋಗಲಿ ।
ಹಾಸ್ಯ ಮಾಡಿ ಜನರೆಲ್ಲ ನಗಲಿ ॥
ಶ್ರೀಪುರಂದರ ವಿಠಲರಾಯನ । ದಾಸತ್ವವು ಶಾಶ್ವತವಾಗಿರಲಿ" ॥

ಹಾಗೆಯೇ, ವಿಜಯದಾಸರ "ಹರಿದಾಸ ಲಕ್ಷಣ ಸುಳಾದಿ" ಹೋಲುವ ಇನ್ನೊಂದು ರಚನೆ "ಇರಬೇಕು ಹರಿದಾಸರ ಸಂಗ, ಇರಬೇಕು ೧ (೪) ಪರಮ ಜ್ಞಾನಿಗಳ ಸಂಪಾದಿಸಬೇಕು" ಎಂಬಲ್ಲಿ "ಹೆಂಟೆಬಂಗಾರ ಸಮಂಕಿಳಿಯಬೇಕು" (೫) "ಸಿಕ್ಕಿದೆಯ ಎಲೆ ಜೀವ, ಕುಕ್ಕಿ ಕೊಲ್ಲದೆ ಬಿಡರು" "ತೊಂಡಿನ ಧನವಂತೆ ಕಂಡವರ ಒಡವೆಗಳ । ಕಂಡೂ ಕಾಣದೆ ನೀ ತಿಂದ್ಯಲ್ಲೋ ॥ ಮಿಂಡೇರ ಒಡವೆಯ ಮುಂಡೇ ಮಗನೇ ।" (ಕಂಡವರ ಒಡವೆಯನು ಬಡ್ಡಿಯ ಧನವನ್ನು—ಪಾಠಾಂತರ)

"ತಾಳದಂಡಿಗೆ ನೃತ್ಯ ಗೀತ ಸಮ್ಮೇಳನದಿ ।
ಉಳಿದವನು ಮಾಳ್ಪ ಹರಿದಾಸರ ।
ಕೇಳುತ್ತಲೆ ಕರವೆತ್ತಿ ಮುಗಿದು ಯಮ ॥"

ಇಲ್ಲೆಲ್ಲ ಪುರಂದರದಾಸರು ತಮ್ಮ ಮುಂಚಿನ "ನಾಯಕ"ರಾಗಿದ್ದ ದಿನಗಳಲ್ಲಿ ವೈಭವ, ವ್ಯಾಪಾರದಿಂದ ಮೆರೆದ ಕುರುಹು ದೊರೆಯುವಂತೆಯೇ, ಅವರ ಭಾವತುಂಬಲ, ಆತ್ಮ ನಿವೇದನೆ, ಆತ್ಮ ಪರಿಶೋಧ ಬಿನ್ನಹಕೆ ಬಾಯಿಲ್ಲವೆಂಬಷ್ಟು ಇನ್ನಿತರೆಡೆ ಕಾಣ

ಬಹುದಾಗಿದೆ. ದಾಸತ್ವಕ್ಕೆ ಮುನ್ನ, ದಾಸರಾದನಂತರ ಎಷ್ಟು ವ್ಯತ್ಯಾಸ ; ಇದು ಒಂದು ಸಂಪ್ರದಾಯ, ಆದರ ನಡವಳಿ, ಬಾಹ್ಯ–ಆಂತರಿಕ ವ್ಯಾಪಾರ್ಗಳೂ ಪರಿವರ್ತನೆ! ಭೂಪತಿಯಂತೆ ಅರಸನಂತೆ ಗರ್ವಿಸುತ್ತಿದ್ದವರು, ಒಡ್ಡಿ ಧನ ಗಳಿಸಿದ ಜಿಪುಣರು ತಾಳ–ತಂಬೂರಿ ಹಿಡಿದದ್ದು, ಒಂದು ಸಂಪ್ರದಾಯ ಅಪ್ಪಿದ್ದರ ಕಥನ ಇಲ್ಲಿ ತಿಳಿಯಂವುದಿಲ್ಲವೆ? ಹಾಗೆಯೇ ಅವರ ಮನೋಧರ್ಮ. ಮನೋಪ್ರವೃತ್ತಿ ಕೂಡ ಬದಲಾಯಿತೆಂಬುದು ಅವರಿಗೆ 'ತುಳಸಿ ಮಾಲೆ' 'ತಾಳತಂಬೂರಿ'ಯ ಮೇಲಣ ಒಲವಿಂದ, ಪುರಂದರವಿಠಲನ ಮೇಲಣ ಪ್ರೇಮಭಕ್ತಿಯಿಂದ ತಿಳಿದು ಬರುತ್ತದೆ. ಕನಕದಾಸರದು ಹಾಗೆಯೇ. ಅವರು ದೊರೆಗಳಾಗಿದ್ದವರು:

"ದೊರೆತನವ ಬಿಡಿಸಿ ಸುಸ್ಥಿರ ಮಾರ್ಗ ತೋರಿಸಿದೆ ।  
ನರಮಾತ್ರದವನೆನದೆ ಹರಿಯೆ ॥  
ಗುರುವರದಲ್ಲಿಹೆನೆಂಬುದರಿತನ್ನ ನಿನ್ನಾ ದಾ  
ಸರಿಗೆ ಮಾಡಿದೆಯೋ ಹರಿಯೆ......।  
ಕನಕದಳದಲಿ ಬಂದು ಕಲಿತನೆಂದರೆ ಫೌಜು ।  
ಕನಕಮನಸಾಗುವುದು ಹರಿಯೇ । ......  
ಶರದಿನ್ಯುಖ್ಯಾತಿ ಪೌರುಷಲೋಭ ಬಹುಜನರ ।  
ಉರವೀಶರನ್ನು ಕೈಪಿಡಿದೆ ಹರಿಯೆ ......  
ಮೊದಲು ನಿನ್ನುಪದೇಶ ಸದರು ಮಾಡದೆ ತಿರುಗು ।  
ವುದನೆಲ್ಲ ಉದುರಿಸಿದೆ ಹರಿಯೆ......

........"ಮದವೆಲ್ಲ ಬಿಡಿಸಿ ಸನ್ಮದುರೂಪವನೆಧರಿಸಿ । ಹೃದಯದಲ್ಲಿ ನೀನಿದ್ದೆ ಹರಿಯೆ । ಸ್ವಾರಿಯ ಹೊರಟರೆ ಛತ್ರ–ಭೇರಿಯು ನಗಾರಿಗಳು । ಭೋರೆಂಬ ಪೊಂಗಹಳೆ ಹರಿಯೆ । ಧೀರರಾಹುತ ರಾಣ್ಯಪರಿವಾರಲಂಕಾರ । ಭಾರವನು ತೆಗೆದೆಯೋ ಹರಿಯೆ......" ಹೀಗಿದ್ದು, ಅಂಜುತಿದ್ದ ಕನಕ ನಾಯಕ ಹರಿದಾಸರಾಗಿ ದಾಸತ್ವ ಸ್ವೀಕರಿಸಿದ ಮೇಲೆ "ಆರಿಗಂಜೇನೋ ನಾನು" ಎಂದು ಘೋಷಿಸಿ ಹಗುರಾದ. ಆವನಿಗೆ "ರಣದೊಳಗೆ ದೇಹವ ಖಂಡತಂಡವ ಮಾಡಿ" "ಹೆಣಕೆ ಪ್ರಾಣಹಸು ತಂದಿತ್ತ ಮಹಾತಂಮ" ಹರಿ, ಹೋದ ಅರಸು ಜೀವನಕ್ಕೆ ವೈದ್ಯನಾದ! ಭವರೋಗವೈದ್ಯನು ಆದ! ಕನಕ–ಕನಕದಾಸನಾದ ; ಹರಿದಾಸ ಸಂಪ್ರದಾಯ ಹೀಗೆಯೆ. ಅನೇಕ ತೆರನಾದ ವರಿಂದ ಒಂದೇ ಸಂಘಟಿತ ಬಣ ಆಗಿ ಬೆಳೆದದ್ದು. ವಿಜಯದಾಸರದ್ದು ಬೇರೆ ತೆರ. ಅವರು ಮೊದ ಮೊದಲಲ್ಲಿ ತುಂಬ ಕಷ್ಟಪಟ್ಟು ಹರಿದಾಸರಾದ ನಂತರ ಹರಿಕೃಪೆಯಿಂದ ವ್ಯಾಪ್ಯಾನ್ನ ಊಟ ಮಾಡುವಂತಾದರು! ಆದರೂ ಅಲ್ಲಿ ಹರಿದಾಸ ನಿಷ್ಠೆ ಸಂಪ್ರದಾಯ ಇನ್ನು ಬಿಗಿಯಾಯಿತಷ್ಟೆ! ಹರಿದಾಸ ಸಂಪ್ರದಾಯ ತನ್ನ ಸಾಂಪ್ರದಾಯಿಕ ಪಂಥೀಯ

ಹಾಗೂ ಮಧ್ವಮತ ಪಾರಮ್ಯ, ಹರಿ ಸರ್ವೋತ್ತಮತೆಯ ವೀರನಿಷ್ಠೆ (Militant)ಯ ಹಾದಿ ಹಿಡಿದು ಗವನಿಸಿದ್ದೆ, 'ವಿಜಯನಗರದಿಂದಾಚೆ ಎನ್ನಬೇಕು (೧೭೮೭-೧೭೫೫). ಇಲ್ಲಿಂದ ಮುಂದೆ ಗೋಪಾಲದಾಸರಂ, ಜಗನ್ನಾಥದಾಸರಲ್ಲೆಲ್ಲ ಸಂಪ್ರದಾಯ ನಿಷ್ಠೆಯ ನಾವು ಹೆಚ್ಚು ಕಾಣುವುದು. ಅದನ್ನು ಅನಂತರ ಗವನಿಸಬಹುದು.

### ಮಧುಕರ ವೃತ್ತಿ

ಹರಿದಾಸ ಸಂಪ್ರದಾಯದ ಇನ್ನೊಂದು ಪ್ರಮುಖ ವೈಶಿಷ್ಟ್ಯ ಅವರು ಅವಲಂಬಿಸಬೇಕಾದ "ಮಧುಕರ ವೃತ್ತಿ"-ಪುರಂದರದಾಸರೇ ಹೆಸರಿಸಿದಂತೇ "ಭಿಕ್ಷೆಗೆ ಬಂದವರನ್ನಟ್ಟಿತ್ತಿದ್ದವರೆ ಭಿಕ್ಷಾಂದೇಹಿ ಎಂದು ಹೊರಡುವಲ್ಲಿ ಮನದ ತುಂಮಲವನಿತಿದ್ದಾ ತಾ !" ಅದನ್ನು ಅವರು ಹರಿದಾಸರಾದ ಮೇಲೆ ಗೆದ್ದರು. ಕಾಲಿಗೆ ಗೆಜ್ಜೆ ಕಟ್ಟಿ ಹಾಡಿ, ಕುಣಿದು, ಬೇಡಿದರು.

ಮಧುಕರ ವೃತ್ತಿ ಎನ್ನದು ಅದು ಬಲು ಚೆನ್ನದು ॥ಪ॥
ಪದುಮನಾಭನ ಪಾದ ಪದುಮ ಮಧುಪವೆಂಬ ॥ಅ. ಪ॥

ಕಾಲಿಗೆ ಗೆಜ್ಜೆ ಕಟ್ಟಿ ನೀಲವರ್ಣನ ಗುಣ
ಆಲಾಪಿಸುತ್ತ ಬಲು ಓಲಗಮಾಡುವಂಥ ॥೧॥
ರಂಗನಾಥನ ಗುಣ ಹಿಂಗದೆ ಪಾಡುತ್ತ
ಶೃಂಗಾರ ನೋಡುತ್ತಾ ಕಂಗಳಾನಂದವೆಂಬ ॥೨॥

ಇಂದಿರಾಪತಿ ಪುರಂದರ ವಿಠಲನಲ್ಲಿ
ಚಂದದ ಭಕ್ತಿಯಿಂದಾನಂದವ ಪಡೆಯುವಂಥ ॥೩॥

ಇಲ್ಲಿ ಹರಿದಾಸರಿಗಾದ ಅನುಭವ, ಅಪಮಾನ, ಜನರ ಹೀಯಾಳಿಕೆ, ದಾರಿದ್ರ್ಯ, ನಿಂದೆಗಳಿರದಿದ್ದೀತೆ ? ಒಂದೆಡೆ ಭಿಕ್ಷೆ ಕೇಳಿದಾಗ ರಪ್ಪನೆ ಬಾಗಿಲು ಮುಚ್ಚಿದರೆ, ಇನ್ನೊಂದೆಡೆ ಹಾಕಲೇ ಇಲ್ಲ. ಹಾಗೆ ಇನ್ನೊಂದೆಡೆ ಅಕ್ಕಿ ಬದಲು ರಾಗಿ ತಂದರು.

ಕದವ ಮುಚ್ಚಿದಳೆಕೊ ಗಯ್ಯಾಳಿ, ಮೂಳಿ,
ಕದವ ಮುಚ್ಚಿದಳೆಕೊ ಚಿಲಕ ಅಲ್ಲಾಡುತ್ತಿದೆ.
ಒಳಗಿದ್ದ ಪಾಪವು ಹೋದಿತು ಹೊರಗೆಂದು......
......ಅಂದಿಗೆ ಕಿರುಗೆಜ್ಜೆ ಮುಂಗಾಲಿಲಟ್ಟು
ಧಿಂದಿಮಿಧಿಮಿಕೆಂದು ಕುಣಿವ ದಾಸ ಕಂಡು......॥

ಭಿಕ್ಷೆ ಕೊಡದಿದ್ದರೆ,

"ಕೊಟ್ಟವರುಸರಿಯೆ ! ಕೊಡದೆ ಬಿಟ್ಟವರು ಸರಿಯೆ,
ಇಕ್ಕಿದವಗುಂಟು ಮದದಲೆ ! ಸೊಕ್ಕಿದರೇನುಂಟು ॥

ಎಂಥ ಬಗೆಬಗೆಯ ನೈಜ ಚಿತ್ರಣ !

ಅರಸನಾದರು ಸರಿಯೆ, ನಮಗೆ । ತಿರುಕನಾದರು ಸರಿಯೆ
ಸರಸವಿರಸದಿಂ ನುಡಿದರೇನು, ನರ । ಹರಿಪದ ಕಮಲವ ನಿರುತ ಬಜಿಪರಿಗೆ
ಫುಟ್ಟಿಸಿದ ದೊರೆಯು ನಮಗೆ ಹೊಟ್ಟೆಗೆ ಕೊಡದಿಹನೆ ॥
ಬೆಟ್ಟದೊಡೆಯ ನಮ್ಮ ಪುರಂದರವಿಠಲನ । ಗಟ್ಟಿಯಾಗಿ ನಂಬಿದ ದಾಸರಿಗೆ ॥

ಎಂದಂತೆಯೇ, ಅಕ್ಕಿ ಹಾಕಲು ಕೈಹಿಂದಾಗಿ ಲೋಭದಿಂದ ಭಿಕ್ಷೆ ಹಾಕಲು ರಾಗಿ ತಂದ ಪರನನ್ನು ಕುರಿತ ದಾಸರು ಹೇಳಿದ್ದಿಷ್ಟು

'ರಾಗಿಯ ತಂದೀರ್ಯ ಭಿಕ್ಷೆಗೆ । ರಾಗಿ ತಂದಿರ್ಯ ॥ಪ॥
ಯೋಗ್ಯರಾಗಿ ಭೋಗ್ಯರಾಗಿ । ಭಾಗ್ಯವಂತರಾಗಿ ನೀವು ॥ಅ.ಪ॥

ಅನ್ನದಾನವ ಮಾಡುವರಾಗಿ । ಅನ್ನ ಛತ್ರವ ನಿಟ್ಟವರಾಗಿ ।
ಅನ್ಯವಾರ್ತೆಯ ಬಿಟ್ಟವರಾಗಿ । ಅನುದಿನ ಭಜನೆಯ ಮಾಡುವರಾಗಿ ।

ಎಂದು ಅಲ್ಲಿ ಹರಿಭಜನೆಯ ಪ್ರತಿಪಾದನೆ ಮಾಡಿದರೆ ವಿನಾ ರೇಗಲಿಲ್ಲ. ಇದಲ್ಲದೆ ವಿಧವೆ ಯೊಬ್ಬಳು ತನ್ನ ಸಣ್ಣಬುದ್ಧಿಯಿಂದ ದಾಸರನ್ನು ತಿರಸ್ಕಾರ ಮಾಡಿದ್ದಕ್ಕೆ ಕೆರಳಿ ದಾಸರು ನುಡಿದ ಸಾಲು ಅಷ್ಟೇ ಸಹಜವಾಗಿ ಬಂದಿವೆ.

ಕೂಳಿಗೆ ಬಿದ್ದಿರುವ ಬೋಳಿಗೆ ಬಿನಗಿಷ್ಟು ।
ಗಯ್ಯಾಳಿತನವೇತಕೆ ॥ಪ॥
ಆಚಾರ ನೋಡಿದರೆ ಅಲ್ಲೇನು ಹುರುಡಿಲ್ಲ
ಮೇಲೆ ಸಣ್ಣ ಮೊಗ ಮುಸುಕಿದ್ದ ।
ವಾಚಾಮಗೋಚರ ಹರಟೆಯ ಹರಡುತ ।
ನೀಚ ಮುಂಡೆಗೆ ನೇಮ ನಿಷ್ಠೆಗಳೇ ॥1॥

ಈ ಪರಟೆ ಮಾತು ಇಂದಿಗೂ ನಮಗೆ ಸಾಮಾನ್ಯ ದೃಶ್ಯವೆ! ಇದಲ್ಲದೆ ದಾಸರಿಗೆ ಭಿಕ್ಷೆ ನೀಡಲು ಜನವೊಡ್ಡುತ್ತಿದ್ದ ನೆಪ, ಸೋಗು, ಇಂದೂ ಹಾಗೇ ಉಳಿದುಬಂದಿದೆ. ಅದು ಪುರಂದರರ ಅಚ್ಚಳಿಯದ ಲೋಕಾನುಭವ ಮೌಕ್ತಿಕವೆ!

ಸ್ಥಳವಿಲ್ಲವೈ ಭಾಗವತರೆ...ಈಗ ।
ಒಳಗೆ ಹೊರಗೆ ಸಂದಣಿ ತುಂಬಿದೆ......

ಎಂದು ನೂಕಿದಂತೆಯೇ

ಇಕ್ಕಲಾರೆ ಕೈಯೆಂಜಲು-ಚಿಕ್ಕ
ಮಕ್ಕಳು ಅಳುತಾವ ಹೋಗೋ ದಾಸಯ್ಯ ॥ಪ॥

ಹರಿದಾಸರು ಮಧುಕರವೃತ್ತಿಗೆ ಇಳಿದ ಮೇಲೆ ಜೀವನಕ್ಕೆ ಕಷ್ಟಕಾರ್ಪಣ್ಯ ಕಡಿಮೆ ಯೇನಲ್ಲ. ಆದರೂ ಧೀರತೆ ಅವರಲ್ಲಿತ್ತು. ದಾರಿದ್ರ್ಯ ಆವರಿಸಿದಾಗ, ದಾಸರು ಅಂದರು 'ಲಂಗೋಟಿ ಬಲು ಒಳ್ಳೇದಣ್ಣ ! ಒಬ್ಬರ್ಹಂಗಿಲ್ಲದ ಮಡಿಗೆ ಒದಗುವುದಣ್ಣ'' ಎಂದಂತೆಯೇ ಹೊಟ್ಟೆ ಹಸಿವಿನಿಂದ ಆದ ಶರೀರದ ಬಳಲಿಕೆಗೆ ತಾನೂ ಹಾಡು ಹಲುಬಿದ್ದಾರೆ.

> ''ಊಟಕ್ಕೆ ಬಂದೆವು ನಾವು, ನಿಮ್ಮ ಆಟಪಾಟವ ಬಿಟ್ಟು ಅಡುಗೆಮಾಡಮ್ಮ ‖ಪ‖
> ಕತ್ತಲಿಟ್ಟಾವಮ್ಮ ಕಣ್ಣು ಬಾಯಿ ! ಬತ್ತಿ ಬರುತಲಿದೆ ಕೈ ಕಾಲು ಝಮ್ಮು
> ಹೊತ್ತುಹೋಗಿಸಬೇಡಮ್ಮ, ಒಂದು! ತುತ್ತಾದರು ಇತ್ತು ಸಲಹು ನಮ್ಮಮ್ಮ ‖1‖

ಎಂದು ಹಾಡಿದಂತೆಯೇ, ತಿರಿದು ತಿನ್ನುವುದು ಎಂಥ ನೋವು ಎಂದೂ ದಾಸರು ನೊಂದು ನುಡಿದಿದ್ದಾರೆ. ಬೇಡುವ ಕಷ್ಟಕ್ಕಿಂತ ಸಾವುದೆ ಕರಲೇಸು-ಇದು ಪುರಂದರದಾಸರಿ ಗೊಬ್ಬರಿಗಲ್ಲದೆ ಎಲ್ಲ ಹರಿದಾಸರ ಅನುಭವವೇ ಎನ್ನಬಹುದು.

ಹರಿದಾಸ ಸಂಪ್ರದಾಯದ ಮಾರ್ಗ ಹಸನಾದ ಹಾದಿಯಂತೂ ಖಂಡಿತ ಅಲ್ಲ. ಬದ್ಧತೆ ಎಷ್ಟು ಅಗತ್ಯವೋ ಕೈಗೊಂಡ ಸಂಪ್ರದಾಯ ಪ್ರೀತಿಯೂ ಅಷ್ಟೇ ಅಗತ್ಯ. ಪ್ರೀತಿ, ನಿಷ್ಠೆಯೇ ಆ ಬದ್ಧತೆಗೆ (Commitment) ಪೋಷಕ, ಆಧಾರ, ಅನೇಕ ಬಾರಿ, ಹರಿದಾಸನಾದವರು ಹೀಗೆ ಬಾಳುವುದು ಕಷ್ಟವಲ್ಲವೆ, ಎಂದು ಪರಿತಪಿಸುತ್ತಾನೆ. ಅಂಥ ಒಂದು ಆರ್ತಭಾವ ಶ್ರೀಪಾದರಾಜರ ''ಯಾಕೆ ಪುಟ್ಟಿಸಿದಿ ನೀ ಸಾಕಲಾರದೆ ಜಗದೇಕ ಕಾರಣ ಪುರುಷನೆ ಕೃಷ್ಣಾ'' ಎಂಬ ಕೀರ್ತನೆಯಲ್ಲಿ ಪರಿಭಕ್ತಿಯ ಒಲವೆಗಾಗಿ ಪರಿತಪಿಸಿದರೂ ''ಏಕೋ ವಿಷ್ಣು ಎಂಬೋ, ವಾಕು ಚಿಂತಿಸಿ, ಇಂತಹ ಕಾಕೂ ಮಾಡುವುದು ಚಿತವೆ, ಕೃಷ್ಣಾ'' ಎಂಬಲ್ಲಿ ನೋವಿನ ಆಳಲು ಸಹ ಕಾಣುತ್ತೇವೆ.

ಶ್ರೀಪಾದರಾಜರಲ್ಲಿ ನಾವು ಕಾಣುವುದು ಅತ್ಯಂತ ವಿನಯಯಿಂತ ದಾಸ್ಯಭಾವ. ರಾಜ್ಯಭೋಗ ಯಾವುದು ಬೇಡ, ಬಂದುದಿಲ್ಲ, ನಾ ನಿನ್ನ ಬಾಗಿಲ ಕಾಯುವ ಭಾಗ್ಯ ಸಾಕೆನ್ನುವ ಪ್ರವೃತ್ತಿ ! ಈ ಭೃತ್ಯ ಭಾವವು ಹರಿದಾಸ ಸಂಪ್ರದಾಯದ ಒಂದು ಪ್ರಮುಖ ವೈಶಿಷ್ಟ್ಯ. ಹರಿದಾಸ ಪರಂಪರೆಯಲ್ಲಿ ಅವರೆಲ್ಲರ ಸಾವಿರಾರು ಕೃತಿಗಳಲ್ಲಿ ನಿಚ್ಚಳವಾಗಿ ಕಾಣಬಂದಿರುವ ವಿಶಿಷ್ಟ ಗುಣ ; ಈ ಸಂಪ್ರದಾಯದ ಲಕ್ಷಣವೂ ಹೌದು. ಹರಿಸ್ಮೃತಿ ಪಾವನ ಘಳಿಗೆಯಾದರೆ, ಹರಿ ವಿಸ್ಮೃತಿ ಅವರು ಬಯಸುವುದೆ ಇಲ್ಲ. ''ವನೆಯಿಂದ ಸಂತೋಷ ಕೆಲವರಿಗೆ ಲೋಕದಲ್ಲಿ'' ಎಂಬ ಉಗಾಭೋಗದಲ್ಲಿ ಶ್ರೀಪಾದ ರಾಜರು ಆದರ ಕೊನೆಗೆ ನುಡಿಯುವುದು ''ನಿನ್ನ ನೆನೆವ ಸಂತೋಷ ಎನಗಾಗಲಿ ರಂಗ ವಿಠಲ''ನೆಂದೆ ! ಶ್ರೀಪಾದರಾಜರ ಪ್ರಿಯ ಶಿಷ್ಯರಾದ ವ್ಯಾಸರಾಯರು ಹರಿದಾಸ ಸಂಪ್ರದಾಯ ಪೋಷಿಸಿ ಬೆಳೆಸಿದ್ದಲ್ಲದೆ, ಹರಿದಾಸ ಕೂಟವನ್ನು ಸಂಘಟಿಸಿದರು. ಕನಕದಾಸನ ಆಂತರಿಕ ಯೋಗ್ಯತೆಯ, ಭಕ್ತಿಯ ಔನ್ನತ್ಯವರಿತು ಅವನ ಹಿರಿಮೆ-ಗರಿಮೆ ತೋರಿಸಿ,

ತಮ್ಮೊಂದಿಗೆ ದಾಸಕೂಟದಲ್ಲಿ ಸೇರಿಸಿಕೊಂಡ ಕ್ರಾಂತದರ್ಶಿಗಳು, ಅವರು. ವ್ಯಾಸರಾಯರಲ್ಲಿ ನಾವು ಕಾಣುವುದು, ಸಂಪ್ರದಾಯ ನಿಷ್ಠೆ–ಮಧ್ವಮತ ನಿಷ್ಠೆ. ಅವರ ಪ್ರಿಯ ಶಿಷ್ಯರಾದ ಪುರಂದರದಾಸರ ಹರಿದಾಸತ್ವವನ್ನು ಪ್ರಶಂಸಿಸುವ ಶಿಷ್ಯಾಭಿಮಾನ! ಹರಿದಾಸನಾದವನು ಹಗಲು ಹಾಗೂ ರಾತ್ರಿ ಕೆಲವು ಝಾವ ಕೂಡ ಹರಿ ಸ್ಮರಣೆಯಲ್ಲಿ, ಶಾಸ್ತ್ರಗಳ ಆಲೋಢನೆಯಲ್ಲಿ, ಹಿರಿಯರ ಸಾನ್ನಿಧ್ಯದಲ್ಲಿ ವಿಚಾರ ವಿನಿಮಯದಲ್ಲೇ ಕಾಲ ಕಳೆಯಬೇಕು. ಅಲ್ಲಿ ನಿದ್ರೆ ಬಂದರೆ "ಹರಿಕಥಾ ಶ್ರವಣ" ಮಾಡುವುದು ಭಕ್ತನ ಹರಿದಾಸನ ಸಾಂಪ್ರದಾಯಿಕ ಕರ್ತವ್ಯ. ಅಂಥದರಲ್ಲಿ "ಪರಮ ಭಕುತಿಯಿಂದ ಕುಳ್ಳಿರಲು। ಕಿರಿಗಣ್ಣನೋಟದಿ ಸ್ಮರಣೆ ತಪ್ಪಿಸುತ್ತ। ಗುರುಗುರುಗುಟ್ಟುತ್ತ ಕೊರಳ ತೂಗಿಸುತ್ತ।" ಎಂಬಲ್ಲಿ ತೂಕಡಿಸುವ ನೈಜಚಿತ್ರಣ ಯಥಾವತ್ತಾಗಿ ಮೂಡಿ ಬಂದಿದೆ. (ಇದು ಇಂದಿಗೂ ನಿಜವೆ.) ಇಂಥವರಿಗೆ, ಪಗಡೆಯಾಡಿದರೆ ನಿದ್ರೆ ಬರುವುದಿಲ್ಲ! ವ್ಯಾಸರಾಯರು ಹರಿದಾಸ ಶ್ರೇಷ್ಠರಲ್ಲೊಬ್ಬರು. ಮಾನಸ ಪೂಜೆಯನ್ನು ಶಾಸ್ತ್ರ ಹಾಗೂ ಭಕ್ತನ ಅಂತರಂಗದೌನ್ನತ್ಯದಿಂದ ಮಾಡುತ್ತಿದ್ದುದನ್ನು ಕನಕದಾಸರು ಬಲ್ಲವರಾಗಿದ್ದರು. "ಅಂತರಂಗದಲಿ ಹರಿಯ ಕಾಣದವನೆ। ಹುಟ್ಟು ಕುರುಡನು" "ಹರಿದಾಸರ ಸಂಗಕ್ಕೆ ಸರಿಯುಂಟೆ" । "ಕಮಲನಾಥನ ಚಿಹ್ನೆಯನ್ನು ಧರಿಸಿಕೊಂಡು ಮೆರೆಯಿರೊ" ಹಾಗೂ ಹರಿದಾಸ ಸಂಪ್ರದಾಯಕನುಗುಣವಾದ ಮಧ್ವಮತ ನಿಷ್ಠೆ ;

ಹರಿದಾಸರ ನೆರವಿಲ್ಲದೆ ಹರಿಸೇವೆ ಎಂಬ ಪಥವ ಕಾಣದೆ ।
ಹರಿಪಾದವೆಂಬ ಜನುಮಭೂಮಿಯ ಪರಿದು ದೂರದಲ್ಲಿ ತಪ್ಪಿ ।
ಮರುಳಾದೆ ಭವಾಟವಿಯಲ್ಲಿ ಸಿರಿಪತಿನಿನ್ನ ಸೇರಿಸೊ ಸಿರಿ ಕೃಷ್ಣ

ಎಂಬಲ್ಲಿ ಹರಿದಾಸ ಮಹತ್ವ ವ್ಯಾಸರಾಯರ ಸಾಂಪ್ರದಾಯಿಕ ಮನೋಧರ್ಮ ಪರಿಚಯಿಸುತ್ತದೆ. ವ್ಯಾಸರಾಯರ ಶಿಷ್ಯರಾದ ವಾದಿರಾಜರಿಗಂತೂ ಆಗ್ಗೆ ಅವರಿಗೆ ವಯಸ್ಸಿನಲ್ಲಿ ಹಿರಿಯರಾಗಿದ್ದ (ಶ್ರೀವೈಷ್ಣವ ಮತಾನುಯಾಯಿಗಳು) ಬೇಲೂರಿನ ವೈಕುಂಠದಾಸರನ್ನು "ದಾಸೋತ್ತಮನೀನೆಂದು ಪ್ರಶಂಸಿಸುವ ಮನೋವೈಶಾಲ್ಯವಿತ್ತು", "ಹರಿದಾಸನಿಂದಕರಿಗೆ ಬಹುನರಕವೆಂತೆಂದು ಘೋಷಿಸಿ ಪರ್ವತಾಗ್ರಹದಿಂದ ಧುಮುಕಬಲ್ಲೆ"ನೆಂಬ ಕೆಚ್ಚು, ಹರಿದಾಸರ ಮಹಾತ್ಮೆ ಕುರಿತೇ ವಾದಿರಾಜರು ತಿಳಿಸುತ್ತಾರೆ. "ಹರಿಭಜನೆಮಾಡೊ ನಿರಂತರ, ಪರಗತಿಗಿದು ನಿರ್ಧಾರ"ವೆಂದೂ ಘೋಷಿಸುತ್ತಾರೆ. "ಕುಲಮದ ವೈಭವ ಮದ, ವಿದ್ಯಾ ಮದಗಳನ್ನುಳಿದು ಹರಿದಾಸರ ಮೊರೆಹೊಕ್ಕು ಸುಖಿಯಾಗೆಂದು" ತಿಳಿಸುವ ಇವರ ಸಂಪ್ರದಾಯ ನಿಷ್ಠೆ, ಅಷ್ಟೆ ತಪಸ್ಸಿನ ಬಲದಿಂದ ಕೂಡಿದ್ದು. ಪುರಂದರದಾಸರಂತೂ ಮೊದಲೆ ತಿಳಿಸಿದಂತೆ, ಹರಿದಾಸಕೂಟದ ಪ್ರಮುಖರು. 'ದಾಸಶ್ರೇಷ್ಠ, ದಯಾನಿಧಿ' ಎಂದೆನ್ನಿಸಿಕೊಂಡವರು, ವ್ಯಾಸರಾಯರು, ಹರಿದಾಸರ ಬಗ್ಗೆ ಹಾಗೂ ಸಂಪ್ರದಾಯದ ಬಗ್ಗೆ ಮಾಹಿತಿ ನೀಡುವ ಮಾತನ್ನೆ ಈ ಕೃತಿಯಲ್ಲಿ ಆಡಿರುವಂತಿದೆ :

ದಾಸರೆಂದರೆ ಪುರಂದರದಾಸರೈಯ್ಯ ॥ಪ॥
ವಾಸುದೇವ ಕೃಷ್ಣನ್ನ ಸೂಸಿಪೂಜಿಸುವ ॥ಅ.ಪ॥

ಗ್ರಾಸಕಿಲ್ಲದೆ ಪೋಗಿ ಪರರ ಮನೆಗಳಪೊಕ್ಕು
ದಾಸನೆಂದೂ ತುಲಸಿಮಾಲೆ ಧರಿಸಿ
ಬ್ಯಾಸರಿಲ್ಲದೆ ಅವರ ಕಾಡಿಬೇಡಿ ಬಳಲಿಸುತ
ಕಾಸುಗಳಿಸುವ ಪುರುಷ ಹರಿದಾಸನೆ ? ॥1॥

ಡಂಭಕದಿ ಪರಿಸ್ಕರಣೆಮಾಡಿ ಜನರಾಮುಂದೆ
ಸಂಭ್ರಮದಿ ತಾನುಂಬ ಊಟ ಬಯಸಿ
ಅಂಬುಜೋದ್ಭವ ಪಿತನ ಆಗಮಗಳರಿಯದೆ
ಕಂಬೂರಿವಿಗಾಟಲವ ಹರಿದಾಸನೇ ॥2॥

ಯಾಯವಾರವ ಮಾಡಿ ವಿಪ್ರರಿಗೆ ಮೃಷ್ಟಾನ್ನ
ಪ್ರೀಯದಲಿ ತಾನೊಂದುಕೊಡದ ಲೋಭಿ
ಮಾಯಸಂಸಾರದಲ್ಲಿ ಮಮತೆ ಹೆಚ್ಚಾಗಿಟ್ಟು
ಗಾಯನವ ಮಾಡಲವ ಹರಿದಾಸನೇ ॥3॥

ಪಾತಕನತೆರದಂತೆ ಪದಗಳನು ತಾ ಬೊಗಳಿ
ಕೂಟಜನರಾ ಮನವ ಸಂತೋಷ ಪಡಿಸಿ
ಗೂಟನಾಮವನಿಟ್ಟು ಕೊಟ್ಟರಿಯ ತಾನೆನುತ
ತೂಟಕವ ಮಾಡಿದವ ಹರಿದಾಸನೆ ॥4॥

ನೀತಿಯಲ್ಲವನರಿತು ನಿಗಮವೇದ್ಯನ ನಿತ್ಯ
ವಾತಸುತನಲ್ಲಿಹನ ವರ್ಣಿಸುತಲಿ
ಗೀತನರ್ತನದಿಂದ ಕೃಷ್ಣನ್ನ ಪೂಜಿಸುವ
ಮಹಾತ್ಮಾ ಪುರಂದರ ದಾಸರಿವರೈಯ್ಯ ॥5॥

ಇಲ್ಲಿ ನಿಜವಾದ ಹರಿದಾಸತನ ನಮಗೆ ಕಾಣಬರುತ್ತದೆ, ಬೇರೊಂದರ್ಥದಲ್ಲಿ, ಅಂದರ ಪುರಂದರದಾಸರು ಪುಣ್ಯಾತ್ಮ ಪುರಂದರದಾಸರೆಂದೂ ತಿಳಿಯಬರುತ್ತದೆ. ಪುರಂದರದಾಸರದೆ ಆದ ಕೀರ್ತನ "ತಪ್ಪುಗಳೆಲ್ಲ ನಿನೊಪ್ಪಿಕೊಳೊ ನಮ್ಮಪ್ಪ ಕಾಯಬೇಕು ತಿಮ್ಮಪ್ಪ ನೀನ" ಎಂಬುದರ ಕೆಲವು ಸಾಲುಗಳಲ್ಲಿ ಹರಿದಾಸ ಸಂಪ್ರದಾಯದ ವೈಶಿಷ್ಟ್ಯಗಳಾದ ಪೂಜೆ, ಸ್ನಾನ ಸಂಧ್ಯಾವಂದನ ನೇಮ ಪಾಲನೆ। ಸುಳ್ಳು ಆಡದಿರುವುದು, ಸಾಲ ಮಾಡದಿರುವುದು, ಚಾಪಲ್ಯ-ಇಂದ್ರಿಯ ನಿಗ್ರಹ ಹರಿಯ ಸೇವೆ (ಪೂಜೆ, ಅಲಂಕಾರ, ಮಂಗಳಾರತಿ, ನೈವೇದ್ಯ ಇತ್ಯಾದಿ)ಅತಿಥಿಗಳನ್ನು ಆದರಿಸುವಿಕೆ, ಎಲ್ಲವೂ ಬಂದಿದೆ. ನಿಡಿದಾದ ಈ ಕೀರ್ತನೆ (೧೫ ನುಡಿ) ಹರಿದಾಸ ಲಕ್ಷಣವನ್ನು ಸಾರುತ್ತದೆ. "ದಾಸನೆಂತಾಗುವೆನು ಧರೆಯೊಳಗೆ

ಸಾನಂ। ವಾಸುದೇವನಲ್ಲಿ ಲೇಶ ಭಕುತಿ ಕಾಣೆ। ಗೋಟಿನಾವಂತ ಹೊಡೆದು ಗುಂಡು ತಂಬಿಗೆ ಹಿಡಿದು। ಗೋಟಿಂಚುದೋತರ ಮಡಿಯುಣ್ಣುಟ್ಟು। ದಾಟಿಂಕಾಲಿಡುಂತ ನಾಧರೆ ಯೊಳಗೆ ಬರಲೆನ್ನ। ಬೂಟಿಕತನ ನೋಡಿ ಭ್ರಮಿಸದರಿ ಜನರ" ಎಂಬಲ್ಲಿ ನಿಜವಾದ ಹರಿದಾಸನ ಹಾಗೂ ಡಾಂಭಿಕತನದ ತುಲನೆ ನಡೆದಿದೆ. ಕೀರ್ತನೆಯಲ್ಲಿನ ತಿರುಳ್ಗನ್ನಡದೇಸಿ, ಸಾಮಾನ್ಯರಿಗೂ ಅರ್ಥವಾಗುವಂತಿದೆ. ಹಾಗೆಯೇ ಹರಿದಾಸರನ್ನು ನಿಂದಿಸಬೇಡವೆಂಬ ಕೀರ್ತನೆಯೂ ಹರಿದಾಸ ಸಂಪ್ರದಾಯವನ್ನು ಪೋಷಿಸಿದ್ದುದೀಕರಿಸುತ್ತದೆ. ಇದಲ್ಲದೆ, ಇದರಲ್ಲಿ ಕನಕದಾಸರ ಬಗ್ಗೆಯೂ ಪ್ರಸ್ತಾಪಿಸಿ. ಅವರನ್ನು ಪ್ರಶಂಸಿಸುವ ಸಾಲಂ ಪುರಂದರರಿಗೆ ಕನಕನಲ್ಲಿದ್ದ ಸ್ನೇಹಕ್ಕೆ ನಿದರ್ಶನ, (ಕನಕದಾಸನಂ ಕಬ್ಬಲಿಗನಂ ಎಂದು। ಅಣಕಿಸಿ ನುಡಿಬೇಡಿರಣ್ಣ ॥ ಜನರಂತೆ, ನರನಲ್ಲ ತುಂಬುರನೀತನು। ಜನಕಜೆರಮಣನ ಪಾದಸೇವಕನು) ಹರಿದಾಸ ಸಂಪ್ರದಾಯವನ್ನು ಮನಸಾರೆ ತಪ್ಪಿ ಸ್ವೀಕರಿಸಿರುವ ಪುರಂದರದಾಸರು ಉದ್ಘೋಷಿಸುವ ಕೆಚ್ಚಿನ ನುಡಿಗಳು ಇವು : "ಅವರು ನಡೆದದ್ದೆ ರಾಜಪಥ ನಾರಾಯಣ। ಅವರು ನುಡಿದಿದ್ದೆ ವೇದಾರ್ಥ ನಾರಾಯಣ। ಅವರದಾಸ ಜಗದೇಕನಾಥ॥ "

ಹರಿದಾಸ ಸಂಪ್ರದಾಯದಲ್ಲಿ ಬಂದವರು ಕನಕದಾಸರಾದರೂ ದಾಸದೀಕ್ಷೆ ಸ್ವೀಕರಿಸದ ವೈಶಿಷ್ಟ್ಯ ಇವರದು. ತೀವ್ರ ಮಧ್ವನಿಷ್ಠೆ ಇರದ ಇವರು ರಾಮಾನುಜ ಸಂಪ್ರದಾಯ ಅನುಸರಿಸಿದ ಹಾಗೆನ್ನಿಸಿದ್ದರೂ, ಸಮನ್ವಯತೆ ಅವರ ಕೃತಿಗಳ ವಿಶಿಷ್ಟತೆ. ವಾಙ್ಮಯ-ವೇದ ಪ್ರಾಮಾಣ್ಯದನುಸಾರ ಆಗಿ ವಿಷ್ಣುಭಕ್ತಿಯ ಬುನಾದಿಯ ಮೇಲೆ ನಿಲ್ಲಿಸ ದಂಥದು. ಇಲ್ಲಿ ಶೂದ್ರ ಕನಕನಿಗೆ ಮಧ್ವಮತಾವಲಂಬಿಯಾಗಲು ಸಾಧ್ಯವಿರಲಿಲ್ಲ. ಮಧ್ವಸಿದ್ಧಾಂತರೀತ್ಯ ದೀಕ್ಷೆ ದೊರೆವುದು, ಅಸಂಭವನೀಯ ಆಗಿತ್ತು. ವ್ಯಾಸರಾಯ ರಂಥ ಕ್ರಾಂತಿಕಾರಿ ಮನೋಭಾವದವರು ಕನಕದಾಸನನ್ನು ತಮ್ಮೊಂದಿಗೆ ಆಧ್ಯಾತ್ಮಿಕ ಸಮಾಲೋಚನಾ ಗೋಷ್ಠಿಯಲ್ಲಿ ಸೇರಿಸಿಕೊಂಡುದೂ ಅದೆಷ್ಟು ಗಲಾಟೆಗೆ ಅವಕಾಶ ವಾಯಿತೋ ? ಒಟ್ಟಾರೆ ಕನಕನ ಅಂತಃಶಕ್ತಿಯ ಹಿರಿಮೆಗರಿವೆಂಗಳರಿದ್ದ ವ್ಯಾಸ ರಾಯರ ಕರುಣೆ ಕನಕನಿಗೊದಗಿ ಬಂದ ವರವೆ. "ಒಟ್ಟಿನಲ್ಲಿ ದಾಸಪಂಥದ ಪದ್ಮ ವ್ಯೂಹವನ್ನು ಪ್ರವೇಶಿಸಿದ ಏಕೈಕ ಶೂದ್ರನಾದ ಕನಕದಾಸನು ತನ್ನ ಭಕ್ತಿಯಿಂದ ದಾಸರ ಅನುಗ್ರಹಕ್ಕೆ (ಹರಿದಾಸ ಪರಂಪರೆಯವರಿಗೆ) ಪಾತ್ರನಾದುದೊಂದು ಪವಾಡವೇ ಸರಿ" ಎಂಬ ಮಾತು ಈ ದಿಸೆಯಲ್ಲಿ ಮನನೀಯ. ಇಷ್ಟಾಗಿ, ಹರಿದಾಸರಾಗಿ ಕನಕದಾಸರನ್ನು ಅಂಗೀಕರಿಸಿದಿದ್ದರೂ ಅಪರೋಕ್ಷಜ್ಞಾನಿಗಳು, ಯಮನಂಶಸಂಭೂತರು ಎಂದೆಲ್ಲ ವಿಶೇಷಣಗಳಿಂದ ಹೊಗಳುತ್ತಾರೆ. ಹರಿದಾಸ ಸಂಪ್ರದಾಯವನ್ನು ಕನಕ ಅನುಸರಿಸಿದ, ಸಂಧ್ಯಾನ್ನ ನೇಮಬಿಟ್ಟವರ, ಡಾಂಭಿಕರ ಡಂಭವನ್ನು ಬಯಲಿಗೆಳೆದ, ರಾಮಧಾನ್ಯ ಚರಿತೆಯು ರೂಪಕದ ಮೂಲಕ ದೀನನುಚ್ಚವರ್ಗದವರ ಜಗಳ, ದೀನದಲಿತರ ಮೇಲೆ ಉಚ್ಚವರ್ಗದವರು ನಡೆಸುವ ದಮನವನ್ನೂ ಪರೋಕ್ಷವಾಗಿ ಖಂಡಿಸಿದ ಮಾದ್ವರು ಹರಿದಾಸನಾಗಿ ಕನಕದಾಸನನ್ನು ಒಪ್ಪದಿದ್ದರು, ಹರಿದಾಸಪರಂಪರೆಯಲ್ಲಿ ಕನಕದಾಸ

ನನ್ನು ಬಿಡಲು ಸಾಧ್ಯವಾಗದಾಯ್ತು. ಅದಕ್ಕೆ ಕಾರಣ ಅವನ ಸಮನ್ವಯ ಮನೋಧರ್ಮವೆ, ಮಧ್ವ-ರಾಮಾನುಜ ಪ್ರತಿಪಾದನೆ, ಅವನ ಕೀರ್ತನೆಗಳೆ, ಅಥವಾ ದಾಸರಲ್ಲಿ ಕವಿಯಾದ ಅವನ ವಿಶಿಷ್ಟ ಸಾಹಿತ್ಯಿಕ ಕೊಡುಗೆಗಳೇ ? ಎಲ್ಲವೂ ಹೌದೆನ್ನಬೇಕಾಗುತ್ತದೆ. ದಾಸರಲ್ಲಿ ಕವಿ, ಹರಿದಾಸರಲ್ಲಿ ದಾಸನಾದ, ತನ್ನ ಮೊದಲ ನಾಯಕತನದ ಪಾಳೆಯ ಪಟ್ಟಿನ ವಿಲಾಸವಿಭ್ರಮ ಜೀವನವನ್ನು ಹೇಳಿಕೊಂಡ ಕನಕ ಕಾಗಿನೆಲೆಯಾದಿಕೇಶವನ: ಬಾಡದಾದಿಕೇಶವನೊ ಒಟ್ಟಾರೆ ಹರಿದಾಸನಾದ ನಂತರ ರೂಪಿಸಿದ ಕೃತಿಗಳಲ್ಲಿ ಕಾಣಬರುವ ಬನಿ, ಕೇವಲ, ಏಕಮುಖಿ ಸಂಪ್ರದಾಯ ಅಲ್ಲ ಹರಿದಾಸರ 'ಬೂಟಕತನ' ಖಂಡಿಸುವ ಅವನಿಗೆ ಗುರುಗಳು ವ್ಯಾಸರಾಯರೆಂಬುದು, ಅವರು ಬೀರಿದ ಪ್ರಭಾವ, ವಿಜಯನಗರದ ಹರಿದಾಸ ಗೋಷ್ಠಿಯಲ್ಲಿ ಕನಕನ ಪಾತ್ರ, ಎಲ್ಲದರ ತುಣುಕು ದೊರೆತಿವೆ, ಪೂರ್ತ ದೊರೆತಿಲ್ಲ, ಪುರಂದರದಾಸರು "ಹರಿದಾಸರನ್ನು ಜರಿಯಬಹುದೆ" ಎಂಬರ್ಥದ ಕೀರ್ತನೆಯೊಂದರಲ್ಲಿ ಕನಕದಾಸನನ್ನು ಕೇವಲ "ಕಬ್ಬಲಿಗನೆನ್ನಬೇಡಿ ಈತ ತುಂಬುರರ ಅಂಶ" ಎಂದಿರುವುದು, ಕನಕದಾಸನ ಮೇಲೆ ವ್ಯಾಸರಾಯರು ಕರುಣೆ ತೋರುವುದು ಆಧ್ಯಾತ್ಮ ಗೋಷ್ಠಿಗೆ ಸೇರಿಸಿಕೊಂಬುದು ಮಂತದವರಿಗೆ ಸರಿಬೀಳದೆ ದೂರು ಬಂದಿತಂತೆ. ಕನಕ ದಾಸರ "ಸಹಜವಿದು ಈ ನುಡಿಯು ಸಟೆಯು ಮಾತಲ್ಲ। ಮಹಿಯೊಳಗೆ ಪೇಳುವೆನು ವಿಹಿತವಾಕ್ಯಗಳ" ಎಂಬ ಕೀರ್ತನೆ ಅಗಿನ ಕಾಲಕ್ಕೆ ಸಡಿಲಾಗುತ್ತಿದ್ದ ನಿಷ್ಠೆಯನ್ನು ತೋರುವಂತಿದೆ. ಅವರು ಆದಿಯಲ್ಲಿ ರಾಮಾನುಜಾಚಾರ್ಯರನ್ನು ವಂದಿಸಿ ಅವರ ಶಿಷ್ಯರಾದ ತಾತಾಚಾರ್ಯನನ್ನು ನೆನೆದರೂ, ಕೊನೆಯಲ್ಲಿ ಗೈದಿರುವ 'ಮಂಗಲ' ಮಧ್ವಮಂತನಿಷೆ ಪ್ರಭಾವವನ್ನು ಸ್ಪಷ್ಟಪಡಿಸುತ್ತದೆ :

> ಜಯಮಂಗಲಂ ನಿತ್ಯ ಶುಭಮಂಗಲಂ
> ... ... ... ... ... ... ...
> ಮಧ್ವಗೃಹದಾತನಾ ಸತಿಯಲ್ಲಿ ಉದಿಸಿದಗೆ।
> ಬೌದ್ಧ ಚಾರ್ವಕ-ಮಾಯ್ಗಳ ಜರಿದಗೆ।
> ಮಧ್ವಶಾಸ್ತ್ರವನೆಲ್ಲ ಸಜ್ಜನರಿಗೊಲಿದ।
> ಮುದ್ದು ಶ್ರೀ ಆದಿಕೇಶವನ ಭಜಕನಿಗೆ ॥

ಹೀಗಿದ್ದರು ಅವರು

> ಕುಲಸಲಂಗಳ ಬಿಟ್ಟು ಬಲುಪಾಶಗಳ ತರಿದು।
> ಹಲವು ಕೊಂಬೆಗೆ ನೀನು ಹರಿದಾಡದೆ

ಎಂಬುದು ಹಾಗೂ

> ತಿರುಮಂತ್ರವನ್ನು ಭಜಿಸು ತಿರುಲಾಂಛನವಧರಿಸು।
> ಪರಮವೈಷ್ಣವರ ಪಂಕ್ತಿಯ ಸೇರುಮನವೆ॥

ಎಂಬುದು ಅವರಿಗಿದ್ದ ಶ್ರೀವೈಷ್ಣವ ನಿಷ್ಠೆಯನ್ನು ಎತ್ತಿ ತೋರುತ್ತದೆ. ಹಾಗೆಯೇ ಅವರ ವಿಡಂಬನೆ :

ತೀರ್ಥಪಿಡಿದವರು ತಿರುನಾಮಧಾರಿಗಳೆ-ಜನ್ಮ !
ಸಾರ್ಥಕವಿರದವರು, ಭಾಗವತರಹುದೆ ॥ಪ॥

ಎಂಬಲ್ಲಿ ಎಲ್ಲರನ್ನು ವಿಡಂಬನೆ ಮಾಡಿದ್ದಾರೆ. "ಎಲ್ಲರು ಮಾಡುವುದು ಹೊಟ್ಟೆಗಾಗಿ" ಎಂಬ ಕೀರ್ತನೆಯಲ್ಲಿ "ನಾಲುಕು ವೇದಪುರಾಣಶಾಸ್ತ್ರ ಪಂಚಾಂಗ ಹೇಳಿಕೊಂಡನು। ಕಾಲ ಕಳೆಯುವುದೆಲ್ಲ ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ ॥" ಎಂಬ ನೇರ ಟೀಕೆಯಿದೆ. ಇದಲ್ಲದೆ ಇನ್ನೊಂದು ವೈಶಿಷ್ಟ್ಯ ಶ್ರೀಪಾದರಾಜರಾದಿಯಾಗಿ ಕಾಣಬರುವ ವಿಠ್ಠಲ ಭಕ್ತಿಯು ಮಾತ್ರ ಕನಕದಾಸನ ಕೃತಿಗಳಲ್ಲಿ ಕಾಣಬರುವುದಿಲ್ಲವೆಂಬುದು. 'ಹರಿದಾಸತನ' 'ಹರಿದಾಸ ಸಂಪ್ರದಾಯ'ವನ್ನು ತತ್ವತಃ ಕನಕದಾಸರು ಒಲಿದರು, ದೀಕ್ಷೆ ತೆಗೆದುಕೊಂಡರ ಹೊರತು ಗುರುಮುಖೇನ ಹರಿದಾಸ ದೀಕ್ಷೆ ಪಡೆದಿರಲಿಲ್ಲ. ಶುದ್ಧ ಹರಿ ಭಕ್ತಿ ಇವರ ಧ್ಯೇಯ, ಸಾಧನ, ಅದೇ ದಾಸಪಥ; ಸಂಪ್ರದಾಯ ಕೂಡ, ಕನಕದಾಸರು ಈ ದೃಷ್ಟಿಗಳಿಂದ ವಿಶಿಷ್ಟರಾಗಿ ಕಾಣುತ್ತಾರೆ. ಹರಿದಾಸ ಸಂಪ್ರದಾಯದಲ್ಲಿ ಮಧ್ವ ಮತನಿಷ್ಠೆ ಹೆಚ್ಚು ಆಗತೊಡಗಿದ್ದು, ತನ್ಮೂಲಕ ಶಾಸ್ತ್ರ ಸಾಹಿತ್ಯವೆ ಬೆಳೆಯತೊಡಗಿದ್ದು ೧೭ನೇ ಶತಮಾನದಲ್ಲಿ ಬಂದ ವಿಜಯದಾಸರ ನಂತರ ದಾಸ ಸಾಹಿತ್ಯದ ದ್ವಿತೀಯ ಹಂತ ವಿದು. ಈ ಎರಡೂ ಹಂತಗಳ ನಡುವೆ ಆಗಿ ಹೋದವರು ಬೀಜಾಪುರದ ಬಳಿಯ ಕಾಖಂಡಿಕಿಯ ಮಹಿಪತಿದಾಸರು. ಮಹಿಪತಿದಾಸರು ಮಧ್ವಸಂಪ್ರದಾಯಸ್ಥರಾದರೂ ಭಾಸ್ಕರ ಸ್ವಾಮಿಗಳೆಂಬ ಅವಧೂತರ ಪ್ರೀತಿಗೆ ಪಾತ್ರರಾಗಿ, ತಮ್ಮೆಲ್ಲ ಲೌಕಿಕ ಪದವಿ ತ್ಯಜಿಸಿ ಸ್ವಯಂ ತಾವೆ "ಮಹಿಪತಿ"ಯೆಂಬ ಅಂಕಿತದಲ್ಲಿ ಹರಿದಾಸ ಸಂಪ್ರದಾಯವನ್ನು ಅನುಸರಿಸಿ, ಕೃತಿರಚಿಸಿದವರೂ, ದ್ವೈತಾದ್ವೈತ ಎರಡೂ ಸಂಪ್ರದಾಯಗಳಿಗೆ ಇಂತಹ ವರು ಇದ್ದದ್ದರಿಂದ ಹರಿದಾಸ ಪೀಳಿಗೆಗೆ ಇವರದು ಒಂದು ವಿಶಿಷ್ಟ ವ್ಯಕ್ತಿತ್ವವೆ. ಯಾವ ಗುರುವೂ ಇವರಿಗೆ ಹರಿದಾಸ ದೀಕ್ಷೆ ನೀಡಲಿಲ್ಲ, ಅಂಕಿತವದ ಮಾಡಲಿಲ್ಲ. ಹರಿದಾಸ ರಂತೆ ಮಧುಕರ ವೃತ್ತಿಯನ್ನು ಮಹಿಪತಿರಾಯರು ಅನುಸರಿಸಿದಂತೆ ಅವರ ಕೃತಿಗಳಲ್ಲಿ ಯಾವ ಸುಳುಹೂ ಇಲ್ಲ. ಇವರದ್ದು ಒಂದು ತರ.

ವಿಜಯದಾಸರದು ಹಾಗಲ್ಲ. ಅವರು ಮಧ್ವ ಸಂಪ್ರದಾಯಸ್ಥರು ಅದನ್ನೆ ತಮ್ಮ ಬಾಳಿನುದ್ದೇಶ ಆಗಿಸಿಕೊಂಡು ಮಧ್ವಮತನಿಷ್ಠೆ–ಹರಿಪಾರಮ್ಯ ಪ್ರತಿಪಾದಿಸಲು ಶ್ರಮಿಸಿದ್ದವರು. ಅದಕ್ಕೆ ಹರಿದಾಸ ಸಂಪ್ರದಾಯವನ್ನು ಸಾಧನವಾಗಿ ಮಾಡಿಕೊಂಡು ಆಡುನುಡಿಯಾದ ಕನ್ನಡದಲ್ಲಿ ಸಂಪ್ರದಾಯಸ್ಥ ಸಾಹಿತ್ಯವನ್ನೆ ರಚಿಸಿದರು. "ಬೂಟಕತನ ದಲಿ ಹರಿದಾಸನಾದರೆ ಕೋಟಲೆಯಿಲ್ಲದೆ ಊಟೆಯೆತ್ತಿದಂತಕ್ಕೂ" "ನಿನ್ನ ದಾಸನೆಂದೆನಿಸ ಬೇಕಾದರೆ ಭಂಗ ಪಡಲುಬೇಕು. ಪ್ರತಿ ದಿನದಲ್ಲಿ, ಅನ್ನ ವಸ್ತ್ರಕ್ಕಿಲ್ಲದೆ ತಿರುಗಬೇಕು.

ಬೆನ್ನ ಬಿಡದೆ ರೋಗಂಗಳು ಬರಬೇಕು" "ಪನ್ನಂಗಶಯನ ಶ್ರೀ ವಿಜಯವಿಠಲರೇಯ ಎನ್ನ ನೀಪರಿಯಲ್ಲಿ ಮಾಡಿದ ಬಗೆ ಏನು"? "ಉತ್ತಮರಲ್ಲಿ ಗುರುಹಿರಿಯರಲ್ಲಿ ಸರ್ವಥಾ ಕ್ರೋಧ ಕೂಡದು" "ಅದು (ಕ್ರೋಧ) ಕತ್ತೆಮರಿಗೆ ಮುದ್ದು ಕೊಟ್ಟಂತೆಲೋ" "ಪಟ್ಟೆ ದ್ದೋತ್ರ ತಂದು ಶುಭ್ರವಾಗಿ ಒಗೆದು ಉಟ್ಟುಕೊಂಡು ಕಾಲೆಗಳೆವಂತೆವೇ। ಪಟ್ಟೆ ನಾಮದ ಬಡಿದು ವಿಂತಿ ಇಲ್ಲದ ಮಂದ್ರ? ಇಟ್ಟು ಸುಣ್ಣಗಾರ ತಿದ್ದಿ ಪಣ್ಣೆಗೇ। ದಳ್ಳಾಳಿಯಾಗಿ ಕೊರಳ ಮಾಲೆ ಜಪಮಣಿ। ಬಟ್ಟೆನೊಳಗೇ ಸಿಗಸಿಕೊಂಡು ಕುಳಿತು ದೃಷ್ಟಿ ಒಂದು ಕಡೆ ಚಲಚಲ (ಮನ)ದಲ್ಲಿ। ಇಟ್ಟಣಿಸೀ ಅನ್ಯ ಸತಿಯರನ। ಕೆಟ್ಟೆಬೆಂದೆ ನೆಂದು ತನ್ನ ಮೂಲ। ಗಂಟು ಇಟ್ಟಂತೆ ಅವಳನ್ನು ಕಣ್ಣುಸನ್ನೆ। ಗಂಟ್ಟು ತೋರದಂತೆ ಕೆಮ್ಮಿ ಖ್ಯಾಕರಿಸಿ"... ಹೀಗೆಲ್ಲ ಮಾಡಿದರೆ ನಿಜವಾದ ಹರಿದಾಸನಾಗುವನೆ? ಇದು ವಿಜಯದಾಸರ ನೇರ ಟೀಕೆ. ಆಗ ಅವರು ಇದ್ದಿರಲೇಬೇಕು! ದಾಸನೆಂಬೊ ನಾಮ ದೇಶದಲ್ಲಿ ಮಾತ್ರ. "ಸೂಸುತಲಿದೆ ಕೇಳು ಗ್ರಾಸನಿಮಿತ್ತವಾಗಿ। ಈಸು ಠಕ್ಕತನದಾಸಿ ಗಳೀ ಉಂಟು।" ಇದು ಅಷ್ಟೆ! ನೇರ ವಾಗ್ಬಾಣ! "ಬಲ್ಲವಗೆ ಭವಾಬ್ಧಿ ನೆಲ್ಲಿಕಾಯಿ ಯಂತೆ", ಎಂದಂತೆಯೆ ಹರಿದಿನ (ಏಕಾದಶಿ) ನಿತ್ಯ ಕರ್ಮಾನುಷ್ಠಾನ, ಎಲ್ಲ ಸಂಪ್ರದಾಯ ಸೂಳಾದಿಗಳೆ, ವಿಜಯದಾಸರು ಹರಿದಾಸರು ಹರಿದಾಸ ಸಂಪ್ರದಾಯದ ಎಳೆಎಳೆಗಳನ್ನು ಬಿಡಿಸಿ ಬಿಡಿಸಿ ಮತ್ತೆಮತ್ತೆ ಒತ್ತಿ ಹೇಳುತ್ತಾರೆ-ಇದರ ಉದ್ದೇಶ, ದೃಢವಾಗಿ ಮನದಲ್ಲಿ ನಾಟಲಿ ಎಂದಿರಬೇಕು. "ಹರಿಶರಣ ಇಲ್ಲದ ಭವನ ಮಹಾತನ" ಎಂದಂತೆಯೆ ವಿಜಯದಾಸರು ತಿಳಿಸುವ ಹರಿದಾಸನ ವ್ಯಕ್ತಿ ಚಿತ್ರಣ ನೋಡಿ :

ತಾಳದಂಡಿಗೆ ಕರದಲ್ಲಿ ಧರಿಸಿ।
ಕಾಲಂದುಗೆ ಕಿರಿಗೆಜ್ಜೆ।
ಫಾಲದಲಿ ಊರ್ಧ್ವ ತಿಲುಕ।
ಲೋಲನಾಗಿ ಕೊರಳೊಳು।
ಮಾಲೆ ತುಲಸಿ ಪದುಮಹಾರ।
ವಾಲಯ ಸಂತರ ನೆರೆಯಲ್ಲಿ।

ತಾಳಿಮಿಕೆ ಎಲ್ಲಿ ನಡೆದು ಹೋದ। ಆಲೋಚನೆ ಹರಿತಾದರ। ಕಾಲಕಾಲಕೆ ಬಿಡದೆ ವಿಜಯ ವಿ। ಠಲನ್ನ ನಂಬಿ ವಿಶ್ವಾಸದಲ್ಲಿ। ಶ್ರೀಪಾದರಾಜರು ಇದನ್ನೇ ಆಚರಿಸಲು ಆರಂಭಿಸಿದ್ದುದೆಂದು ಹಿಂದೆಯೆ ಹೇಳಿದೆ. ತಾವೇ ದೇವರನಾಮ, ಕೀರ್ತನೆ, ಹಾಡುತ್ತ ಕಾಲಿಗೆ ಗೆಜ್ಜೆಕಟ್ಟಿ, ತಾಳ ಚಿಟಕೆ, ಮೃದಂಗ ವಾದ್ಯ ಸಮೇತ ನರ್ತಿಸುತ್ತಿದ್ದರು. ನರ್ತನಕ್ಕಾಗಿಯೆ ಪ್ರತ್ಯೇಕ ಸಾಹಿತ್ಯ ರಚಿಸಿದರು. ಭಜನೆಗಾಗಿ ರಚಿಸಿದ್ದು ಭ್ರಮರಗೀತ ಅದೆಷ್ಟು ಮಧುರಭಾವದಿಂದೊಡಗೂಡಿದೆ ಇದನ್ನೆ ವಿಜಯದಾಸಾರ್ಯರು ವಿಸ್ತರಿಸಿದ್ದು...ಹರಿದಾಸ ಯಾವಾಗಲೂ "ಹರಿದಾಸರೊಡನಾಡು ಹರಿಯಂಘ್ರಿಯೆಂಗ್ಗ

ನೋಡು ! ಹರಿಯೆಂದು ಕೊಂಡಾಡು ಹರಿನಾಮ ಹಾಡಿ ಪಾಡು......" "ಹರಿಯೆ ಪರಮ ಪುರುಷ ಹರಿಪದಾತ್ಪರದೇವ" ವಿಜಯದಾಸರದು ವೀರನಿಷ್ಠೆ. ಹರಿದಾಸ ಸಂಪ್ರದಾಯ ಮುಂದುವರಿಸಿದ್ದು ಜಗನ್ನಾಥದಾಸರಂಥ ಗ್ರಂಥಕರ್ತರರನ್ನು ಕೊಡುಗೆಯಾಗಿ ನೀಡಿತು.

ವಿಜಯದಾಸರ ಪ್ರಿಯ ಶಿಷ್ಯರಾದ, "ಭಕ್ತಿಯಲಿ ಭಾಗಣ್ಣ" ನೆಂದು ಹೆಸರಾದ ಶ್ರೀ ಗೋಪಾಲದಾಸರು, ಗುರು ನಡೆದ ಹಾದಿಯಲ್ಲಿ ನಡೆದರು. ಶಾಸ್ತ್ರನಿಷ್ಠ ಸಾಹಿತ್ಯ ಸಂಪ್ರದಾಯ ಬೋಧಕ, ಪ್ರತಿಪಾದಕ ಕೃತಿಗಳು. ಅವರ ಒಂದು ಕೃತಿ ಹರಿದಾಸರು ಹೇಗಿರುವರೆಂಬುದರ ಚಿತ್ರಣ ನೀಡುತ್ತದೆ !

ಏನು ಸುಖವೋ ಎಂಥಾ ಸುಖವೊ ॥ಪ॥
ಹರಿಯಧ್ಯಾನ ಮಾಡುವವರ ಸಂಗ ಏನು ಸುಖವೊ ॥ಅ.ಪ.॥

ತಂಬೂರಿಮಿಟುತ್ತ ಹೃದಯ
ಅಂಬರದಿಂದ ಆನಂದ
ಅಂಬುಗರೆಯುತ ಬಲು
ಸಂಭ್ರಮದಿಂದಿಹರ ಸಂಗ ॥1॥

ಗೆಜ್ಜೆಯು ಕಾಲಲ್ಲಿ ಕಟ್ಟಿ
ಲಜ್ಜೆ ಬಿಟ್ಟು ಹರಿಯ ನಾಮ
ಗರ್ಜನೆ ಮಾಡುತ್ತಾ ಆಘ
ವರ್ಜರಾಗಿಹರ ಸಂಗ ॥2॥

ಸ್ವರ್ಣಮೋಷ್ಠ ಸಮವೆಂದು
ತನ್ನದೆಂಬೊ ಹಮ್ಮು ತೊರೆದು
ಧನ್ಯ ಮಹಿಮನ್ನ ಪಾಡಿ
ಧನ್ಯರಾಗಿಹರ ಸಂಗ ॥3॥

ಪುಷ್ಪದಿ ಸುಗಂಧ ಹ್ಯಾಂ
ಗಿಪ್ಪದೊ ತದ್ವತ್ತು ಜಗ
ದಪ್ಪ ಬೊಮ್ಮಾದಿಗಳಲ್ಲಿ
ಇಪ್ಪನೆನ್ನುವರ ಸಂಗ ॥4॥

ದರ್ವಿಯಂತೆ ದೇಹವನ್ನು
ಸರ್ವದಾ ತಿಳಿದು ಶೇಷ
ಪರ್ವತವಾಸನ್ನ ನಂಬಿ
ಉರ್ವಿಯೊಳಗಿಹರ ಸಂಗ ॥5॥

ನಡೆವೊಂದು ನುಡಿವೊಂದು ನಿರುತ
ಕೊಡುವೋದು ಕೊಂಬೋದು ಜಗ
ದೊಡೆಯನ ಪ್ರೇರಣೆಯೆಂದು
ನುಡಿದು ಹಿಗ್ಗುವರ ಸಂಗ ॥6॥

ಸೃಷ್ಟಿಗೊಡೆಯನ್ನ ಮನ
ಮುಟ್ಟಿ ಭಜಿಸುತ್ತ ಜ್ಞಾನ
ಕೊಟ್ಟ ಗೋಪಾಲವಿಠಲ
ಗಿಷ್ಟರಾಗಿಹರ ಸಂಗ......

ಈ ಎಲ್ಲ ನುಡಿಗಳೂ ಹರಿದಾಸ ಸಂಪ್ರದಾಯದ ಒಂದೊಂದು ಲಕ್ಷಣಗಳನ್ನು ತಿಳಿಸು ತ್ತವೆಯಾದ್ದರಿಂದ ಇದಕ್ಕೆ ವಿವರ ಅನಗತ್ಯ. ಗೋಪಾಲದಾಸರ ಗುರುಭಕ್ತಿ ಎಲ್ಲ ಹರಿದಾಸರಿಗೂ ಸಾಮಾನ್ಯರಿಗೂ ಅನುಸರಣೀಯ.

ಹರಿದಾಸ ಸಂಪ್ರದಾಯದ ಒಂದು ವೈಶಿಷ್ಟ್ಯ ಬಿಂಬೋಪಾಸನೆ. ತನ್ನ ಬಿಂಬ ಮೂರುತಿಯನ್ನು ಪ್ರತಿಬಿಂಬ ಆದ ಜೀವ ಧ್ಯಾನಿಸುವಿಕೆ. ಅದರ ಬಗ್ಗೆ ಗೋಪಾಲ ದಾಸರು ನಿಡಿದಾದ ಒಂದು ಕೀರ್ತನೆಯನ್ನು ರಚಿಸಿದಾರೆ. ಇದರಲ್ಲಿ ಯೌಗಿಕ ಸಾಧನೆಯೂ ಬೆರೆತಿದೆ. ಹರಿದಾಸನಾದವನು ತೀರ್ಥಕ್ಷೇತ್ರ ಪರ್ಯಟನ ಮಾಡಬೇಕಾದ್ದು ನಿಯಮ. (ವೈಕುಂಠದಾಸರು, ವೆಂಕಟದಾಸರು [ಪ್ರಸನ್ನ] ಹೆಚ್ಚು ಯಾತ್ರೆ ಕೈಗೊಳ್ಳ ಲಿಲ್ಲ. ಅವರಿಗೆ ದೈವ ಸೂಚನೆಯ ಹಾಗೆ ಒಂತೆಂದು ಪ್ರತೀತಿ). ಹರಿಕಥಾ ಶ್ರವಣ, ಮಾನಸಪೂಜೆ, ಸಂಪ್ರದಾಯದ ಇನ್ನೊಂದು ವೈಶಿಷ್ಟ್ಯ.

ಗೋಪಾಲದಾಸರ ಸಂಪ್ರದಾಯನಿಷ್ಠತೆ ಜಗನ್ನಾಥದಾಸರಲ್ಲಿ ಪರಾಕಾಷ್ಠೆಯ ಹಂತ ತಲುಪಿದ್ದು 'ಶ್ರೀಹರಿಕಥಾಮೃತಸಾರ' ಹಾಗೂ ಅವರ 'ತತ್ತ್ವ ಸುವ್ವಾಲಿ' (ತ್ರಿಪದಿ) ಮತ್ತಿತರ ಕೀರ್ತನೆಗಳಲ್ಲಿ. ಜಗನ್ನಾಥದಾಸರು ಮೊದಲಿಗೆ ಸಂಸ್ಕೃತದಲ್ಲಿ ಉದ್ಧಾಮ ಪಂಡಿತರೂ, ಆಶುಕವಿತಾ ಸಾಮರ್ಥ್ಯವುಳ್ಳವರೂ ಆದದ್ದರಿಂದ, ಅವರ ಕನ್ನಡವೂ ಅರ್ಥಯಿಸುವುದು ಕಠಿಣವೆ ಆದರೂ ಶ್ರೀಮದ್ಹರಿಕಥಾಮೃತಸಾರ ಭಾಮಿನೀ ಷಟ್ಪದಿ ಯಲ್ಲಿದ್ದು ಸುಲಭವಾಗಿ ಓದಿಸಿಕೊಂಡು ಹೋಗುತ್ತದೆ. ಗೋಪಾಲದಾಸರಿಂದ (ವಿಜಯರಾಯರ ಆಜ್ಞೆ ಮೇರೆಗೆ) ೪೦ ವರ್ಷ ಆಯುಂದಾನ ಪಡೆದ ಜಗನ್ನಾಥಾರ್ಯರು ಹರಿದಾಸ ಶ್ರೇಷ್ಠರೆಂದೆ ಹೆಗ್ಗಳಿಕೆಗೆ ಪಾತ್ರರಾದರು ಹಾಗೂ ತಮ್ಮ ಅನೇಕ ಶಿಷ್ಯ ಪ್ರಶಿಷ್ಯ ರಿಗೆ ಅಂಕಿತವಿತ್ತು, ದಾಸದೀಕ್ಷೆಯಿತ್ತು, ಹರಿದಾಸ ಸಂಪ್ರದಾಯ ಮುಂದುವರೆಯು ವಂತೆ ಚೇತನಗೊಳಿಸಿದರು. ಶ್ರೀಗುರು ಜನಾರ್ದನವಿಠಲ, ಶ್ರೀದವಿಠಲ, ಶ್ರೀಶವಿಠಲ, ಶ್ರೀಪ್ರಾಣೇಶವಿಠಲ, ಇವರೆಲ್ಲ ಜಗನ್ನಾಥರು ಬಳಸಿದ ಹರಿದಾಸ ಸಂಪ್ರದಾಯದ ಮುಂದಿನ ಪ್ರವರ್ತಕರೇ. ಜಗನ್ನಾಥದಾಸರು ಹರಿದಾಸ ಲಕ್ಷಣವನ್ನು ಕೊಡುವ ಪರಿ ಇದು :

ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ
ಸಂಗ ಸುಖವಿತ್ತು ಕಾಯೊ ಕರುಣಾಸಾಗರ
ಮೂಕ ಬಧಿರ ರಂತಿಪ್ಪರೊ ನೋಳ್ಪ ಜನಕೆ
ಕಾಕು ಯುಕುತಿಗಳನವರು ತಾರರೊ ಮನಕೆ
ಜಯಾಜಯ ಲಾಭಾಲಾಭ ಮಾನಾಪಮಾನ
ಭಯಾಭಯ ಸುಖ ದುಃಖ ಲೋಷ್ಟಕಾಂಚನ
ನಗುವರೊ ರೋದಿಸುವರೊ ನಾಟ್ಯವಾಡೋರೊ
ಬಗೆಯರೊ ಬಡತನ ಭಾಗ್ಯ ಭಾಗವತರು
ತೆಗೆಯರೊ ನಿನ್ನಲ್ಲಿ ಮನವೊಮ್ಮೆಯಾದರು
ಜಗನ್ನಾಥವಿಠಲ ನಿನ್ನವರೇನು ಧನ್ಯರೆ ॥.........

ಈ ಕೃತಿಯಲ್ಲದೆ, ಜಗನ್ನಾಥದಾಸರ 'ಫಲವಿದು ಬಾಳ್ದುದಕೆ' ಎಂಬ ದೀರ್ಘವಾದ ಕೃತಿಯೂ ಹರಿದಾಸ ಸಂಪ್ರದಾಯವನ್ನು ಮನವರಿಕೆ ಮಾಡಿಕೊಡುವಂತಿದೆ.

ಸ್ವೋಚಿತ ಕರ್ಮಗಳಾ ಚರಿಸುತ ಬಲು । ನೀಚರಲ್ಲಿ ಪೋಗಿ ಯಾಚಿಸದೆ ॥
ಪೇಚರವಾಹ ಚರಾಚರ ಬಂಧಕ । ಮೋಚಕ ನಹುದೆಂದ್ಯೋಚಿಸುತಿಪ್ಪುದೆ ॥

ಎಂದು ಹಾಡಿದ ದಾಸವರ್ಯರು, 'ಗೃಹಕರ್ಮದ ಬೇಸರದಲಿ ಪರಮೋತ್ಸಹದಲಿ ಮಾಡುವ ಮಾರ್ಜಗದ ಮಹಿಳನ ಸೇವೆಯಿದೆನುತಲಿ ಮೋದದಿ ಅಹರಹರ್ಮನದಿ ಸಮರ್ಪಿಸುತಿಪ್ಪುದೆ ಫಲವಿದು ಬಾಳ್ದುದಕೆ' ಎಂಬ ಮಾತನ್ನೂ ತಿಳಿಸುತ್ತಾರೆ. ಇಹದ ಬದುಕು ಕಡೆಗಣಿಸದೆ ಬದುಕು, ಎಂಬುದೆ ದಾಸರ ಸಂದೇಶ.

ಹರಿದಾಸರು ಸನ್ಯಾಸಿಗಳಲ್ಲ, ಸಂಸಾರಿಗಳು (ಸನ್ಯಾಸ ಸ್ವೀಕರಿಸಿ, ಮಠಾಧೀಶ ರಾಗಿದ್ದೂ ಹರಿದಾಸ ಸೇವಾ ತತ್ಪರರಾದವರ ಹೊರತಾಗಿ), ಪುರಂದರದಾಸರಂತೆ ಇತರ ಅನೇಕ ಹರಿದಾಸರು ತಮ್ಮ ಎಲ್ಲವನ್ನೂ ತ್ಯಾಗ ಮಾಡಿ ಬಿಟ್ಟು ಭಗವನ್ನಾಮ ಸಂಕೀರ್ತನೆ ಮಾಡುತ್ತ, ಉಂಛ ವೃತ್ತಿ (ಅಥವಾ ಮಧುಕರ)ಯಿಂದಲೇ ಜೀವನೋಪಾಯ ಸಾಗಿಸಿದವರಲ್ಲ. ಅವರು ತಮ್ಮ ತಮ್ಮ ವೃತ್ತಿಗಳ ಜತೆಗೆ ಭಗವದ್ಭಕ್ತಿಯ ಪ್ರಸಾರ ಕಾರ್ಯವನ್ನು ಕೈಗೊಂಡಿದ್ದಿರಬೇಕು, ದಾಸರಲ್ಲಿಯೂ ವಿದ್ಯಾವಂತರೂ ಆಗ ಕಡಮೆಯೆ. ಆದರಿಂದ, ಹರಿದಾಸ ಸಂಪ್ರದಾಯ, ವೇಷವಾಗಿ ಪರಿಣಮಿಸಿ, ದೇವರ ನಾಮ ಹೇಳುತ್ತ ಸಂಲಿಗೆ ಮಾಡುವಾತನೂ ಇರದಿದ್ದರೂ, ತನ್ನ ಪಾಲಿಗೆ ತಾನು ತಾಳ, ತಂಬೂರಿ ಬಡಿದು ಮಿಡಿ ಹಾಡುವುದು, ಬಂದರೆ ಭಿಕ್ಷೆ ಸ್ವೀಕರಿಸುವುದು, ಇಲ್ಲದಿದ್ದರೆ ಇಲ್ಲವೆಂದೆ ಇದ್ದರು. ಈಗಲೂ ಆ ತೆರನಾದ ಹರಿದಾಸರು ಇದ್ದಾರೆ. ಅಪರೂಪ ಕ್ಕೊಮ್ಮೊಮ್ಮೆ ಕಾಣಸಿಗುತ್ತಾರೆ.ಹರಿದಾಸಕೂಟ ಆಗ್ಗೆ ಇದ್ದಂತೆ ಇಲ್ಲವಾದರೂ ದಾಸದೀಕ್ಷೆ,

ಅಂಕಿತ ಪ್ರದಾನ ಮುಂದುವರಿದಿರುವುದೆ ಆಗಿವೆ. "ಹರಿದಾಸ ಸಂಪ್ರದಾಯ"ದ ಬಗ್ಗೆ ಕೆಲವಾರು ಮಾತು ತಿಳಿಸುವಲ್ಲಿ ಹರಿದಾಸನ ಮಾನವೀಯ ಸಹಜ ಸ್ವಭಾವವನ್ನು ನಾವು ಮರೆಯಲಾಗುವುದಿಲ್ಲ, ತಳ್ಳಿ ಹಾಕುವಂತಿಲ್ಲ. ತನ್ನ ಭಕ್ತಿ ಆಧ್ಯಾತ್ಮಿಕತೆಗಳಿಂದ ಜ್ಞಾನ-ವೈರಾಗ್ಯ ಪಥದಲ್ಲಿ ಶ್ರಮಿಸಿದರೂ, ಹರಿದಾಸನೂ ಮನುಷ್ಯನೆ; ಅವನಿಗೂ ಪ್ರಕೃತಿ ಸಹಜ ಆದ ಹಸಿವು-ನೀರಡಿಕೆ, ಇರುತ್ತವೆ; ಹರಿದಾಸನಾಗುವ ಮೊದಲಲ್ಲಿ ಇದ್ದ ಆಸೆ-ಅಭಿಲಾಷ ಅಬಾಧಿಸಬಹುದು. ತನ್ನ ಸಾಧನೆಯಿಂದ ಮನಸ್ಸನ್ನು ವಜ್ರ ಮಾಡುವ ಮುನ್ನ ಅವನು ಬಯಕೆಯ ಬಲಿಪಶು ಆಗುವ ಸಾಧ್ಯತೆ ಇಲ್ಲದಿಲ್ಲ. ಜನಸಮೂಹದ ಸಮಾಜದಲ್ಲಿ ಬಾಳುವೆ ಮಾಡುವಲ್ಲಿ, ಕಾಮ-ಕ್ರೋಧ, ಮದ, ಲೋಭ ಯಾವುದು ತಾನೆ ಬಿಡವು ದೈವದ ಮಾಯೆಯ ಮೋಡಿಯ ಬಲೆ ಬೀಸಿ, ಅವನನ್ನು ಹಲವಾರು ರೀತಿಯ ಕಷ್ಟ ಪರಂಪರೆಗೆ ಸಿಲುಕಿಸಿಯಾತು. ಇವೆಲ್ಲ ಭಕ್ತರಾದ ಶ್ರೀಪುರಂದರರು, ಕನಕದಾಸರು, ಮುಂತಾದ ಹರಿದಾಸ ಭಕ್ತಿ ಸಾಧಕರು ಅನುಭವಿಸಿದ್ದೆ. ಆದರ ಫಲ ಹಾಗೂ ಅವರು ತಾವು ಪಡೆದಂಥ ದೈವ ದರ್ಶನದ ಸುಳುಹು ಕುರುಹುಗಳನ್ನೆ ತಮ್ಮ ಕೃತಿಗಳಲ್ಲಿ ನಮಗೆ ತೋರುವುದೂ ಇಲ್ಲಿ ನೀತಿ ಅಗತ್ಯ ಇದ್ದೆ ಇರುತ್ತದೆ. ಆದರಿಂದಾಗಿ, ಹರಿದಾಸ ಸಾಹಿತ್ಯ ಬರಿಯ ನೀತಿ-ಧರ್ಮಸಾಹಿತ್ಯ ಎನ್ನುವವರುಂಟು. ಜನತೆಯ ಬದುಕಿನ ಜನಪದದಲ್ಲಿ ಹರಿದಾಸರ ಅನೇಕ ಮಾತು, ನಾಣ್ನುಡಿ ಇಂದೂ ಹಾಸುಹೊಕ್ಕಾಗಿವೆ. "ಹಾವಿಗೆ ಹಾಲೆರೆದರೇನು ಫಲ", "ಸತ್ಯವಂತರಿಗಿದು ಕಾಲವಲ್ಲ", "ಮಾನಭಂಗವ ಮಾಡಿ ಮತ್ತೇನುಪಚಾರವ", "ತಾಳುವಿಕೆಗಿಂತ ತಪವು ಇಲ್ಲ", "ಹೇನುಬಲ್ಲದೆ ಹೂವಿನ ಪರಿಮಳ"; "ಹೋತನಾ ಕೊರಳೊಳಗೆ ಮೊಲೆಯಿದ್ದರೇನು" ಇವೆಲ್ಲ ೧೫ನೇ ಶತಮಾನದಿಂದ ಇಂದಿನವರೆವಿಗೂ ಚಲಾವಣೆಯಲ್ಲಿರುವುವೆ.

ಹರಿದಾಸರು ಕೇವಲ ಸಂಪ್ರದಾಯ ಮಾತ್ರ ಅನುಸರಿಸಲಿಲ್ಲ. ತಾವು ಬದುಕುವ, ಮುಂಬರುವ, ಸಮಾಜದ ಸುಖ-ಸಮಾಧಾನ-ಶಾಂತಿಯಂತ ಜೀವನದ ಪಥದೆಡೆ ತಮ್ಮ ದೃಷ್ಟಿ ಹರಿಸಿದರು ; ಅನುಭವ ತಿಳಿಸಿಗೊಟ್ಟವರು. ಅವರದ್ದು ದೂರದೃಷ್ಟಿ, ಹಾಗೂ ಸಂತದೃಷ್ಟಿ ; ಮಾನವಕೋಟಿಗೊಳ್ಳಿತಾಗವೆಂಬ ಹಿರಿಯಾಸೆಯಿಂದ ವಾಙ್ಮಯ ತಪಸ್ಸೆ ನಡೆಸಿದವರು. ಎಲ್ಲರನ್ನು ಕರ್ತವ್ಯನಿಷ್ಠರಾಗಿ, ಜಾಗೃತರಾಗಿಸುವುದೆ ಅವರ ಉದ್ದೇಶ ; "ಮಾನವ ಜನ್ಮದೊಡ್ಡದೋ-ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ" ಎಂಬುದರಲ್ಲಿ ಇದೇ, ನೀತಿ, ಬಯಕೆಯ ಅಡಕಗೊಂಡಿರುವುದು. "ನೀವು ನಿಮ್ಮನರಿಯಿರಿ, ನಿಮಗೇನಿಲ್ಲ ? ಜ್ಞಾನೇಂದ್ರಿಯಗಳಿವೆ, ಕರ್ಮೇಂದ್ರಿಯಗಳಿವೆ. ಕಣ್ಣು, ಕಿವಿ, ಕೈ, ಕಾಲು ನಾಲಗೆ ಎಲ್ಲ ಮುಚ್ಚಿಕೊಂಡಿರುವುದೆ, ಅಥವಾ ಮನಬಂದಂತೆ ಹರಿಯ ಬಿಡುವುದೆ ? ನಾಲಗೆಯಲ್ಲಿ ಮುಳ್ಳುಮುರಿದಿದೆಯೆ (ಮುಳ್ಳು ಎಂದರೆ ನಾಲಗೆಯಲ್ಲಿ ಕಾಣಿಸಿಕೊಳ್ಳುವ ರೋಗ ಸೂಚಕ ಬಿಳಿಯ ಒತ್ತಡವೂ ಹೌದು. ಅದೇ ರೋಗನಿದಾನ ಗುಣ (Diagnosis) ಕೂಡ. ನಾಲಗೆ ಸ್ವಚ್ಛವಾಗಿದ್ದರೆ, ಹೊಟ್ಟೆಯೂ ಕರುಳೂ ಸ್ವಚ್ಛವಾಗಿವೆ ಎಂದು ವೈದ್ಯರ ಅಭಿಮತವೆಂಬುದು ಸುವಿದಿತ. ಇದನ್ನೆ ದಾಸರು

ಬೇರೊಂದು ರೀತಿಯಲ್ಲೂ ಹೇಳಿದಾರೆನ್ನಬಹುದು) ಇಡೀ ಮಾನವಕೋಟಿ, ಮಂಲ್ಕ್ರರಾಗ ಲರ್ಹರಾಗದಿದ್ದರೂ, ಅರಿವು ಕೂಡಿದ ಒಳಂ ಬಾಳನ್ನು ಬಾಳಬೇಕೆಂಬುದೇ ದಾಸರ ಅಪೇಕ್ಷೆ. ಆದೇ ಅವರ ಅನು ನಿತ್ಯದ ಹಂಬಲ.

ಪ್ರತಿಯೊಬ್ಬನೂ ಶ್ರೀಹರಿಯ ದಾಸನಾಗಿರಬೇಕೆಂಬುದು ಶ್ರೀಪುರಂದರದಾಸ ರಂಥ ಭಕ್ತದಾಸರ ದಿವ್ಯ ಸಂದೇಶ. ಅದಕ್ಕಾಗಿ ಸಂಸಾರ ತ್ಯಜಿಸಬೇಕಿಲ್ಲ, ಕಾಡಿಗೆ ಓಡ ಬೇಕಿಲ್ಲ. "ಈಸಬೇಕು ಇದ್ದು ಜೈಸಬೇಕು, ಹೇಸಿಕೆಯ ಸಂಸಾರವಿದನು ಆಶೆ ಲೇಶ ವಿಲ್ಲದ ಹಾಗೆ" ಎಂಬುದೇ ಹರಿದಾಸಕೂಟದವರ ಸಾಧನೆಯ ವೈಶಿಷ್ಟ್ಯ. ಭಗವದ್ಗೀತೆ ಕೂಡ ಬೋಧಿಸಿರುವುದು ಇದನ್ನೆ ತಾನೆ. ಅನಾಸಕ್ತಯೋಗದಲ್ಲಿ ಗೀತ ಉದ್ದರಿಸುವುದೆ ಇದನ್ನು : ಮನಸ್ಸಿನ ವಿಕೃತಿ ಅಜ್ಞಾನಕ್ಕೆ ಮೂಲ. ವಿಕೃತಿಗೆ ಕಾರಣ ಆಸಕ್ತಿ. ಅಜ್ಞಾನ ದಿಂದುಂಟಾದ ಆಸಕ್ತಿ, ಮನಸ್ಸನ್ನು ವಿಕೃತಗೊಳಿಸುವುದರಿಂದ, ಅದೇ (ಅಜ್ಞಾನವೆ) ಎಲ್ಲ ದುಃಖಗಳ ಮೂಲ.

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಭಿಜಾಯತೇ
ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ
ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ......"

ಇದು ಬರೀ ವಿಷಯ ಕಾಮ ಎಂಬ ದೈಹಿಕ ದೃಷ್ಟಿಯೊಂದೆ ಅಲ್ಲ, ಬದುಕಿನಲ್ಲೇರಿಳಿವ ಎಲ್ಲ ರೀತಿಯ ವಿಚಾರಕ್ಕೂ ಅನ್ವಯಿಸುತ್ತದೆ. ಬದುಕಿಗೆ ಧರ್ಮದ ಚೌಕಟ್ಟು ನೆಲೆ, ಶಾಂತಿ ಬರಿಸುತ್ತದೆ. ಇದಲ್ಲದೆ "ಪದ್ಮಪತ್ರಮಿವಾಂಭಸಾ" ನೀತಿ ಹರಿದಾಸರದ್ದೆಂಬುದು ತಿಳಿವುದೇ ವಿನಹ ಅವರು ಬದುಕು ಶೂನ್ಯವೆಂಬ ನಿರಾಶಾವಾದಿಗಳಲ್ಲವೆಂಬ ಸ್ಪಷ್ಟನೆ ತರಿಸುತ್ತದೆ :

"ವಿಷಯದ ವಿಚಾರ ಬಿಡು ವಿಹಿತ ಕರ್ಮವ ಮಾಡು
ವೈರಾಗ್ಯ ಭಾಗ್ಯ ಬೇಡು"

ಎಂದರೆ, ವಿಹಿತಕರ್ಮವೆಂಬಲ್ಲಿ ಮನುಷ್ಯನಿಗೆ ಮಾನವೀಯ ಸಹಜವಾಗಿ ಆವಶ್ಯವೂ, ಕಲ್ಯಾಣ ಉಂಟುಮಾಡುವಂಥದು ಆದ ಕರ್ಮ. ಇಡೀ ಮಾನವೀಯ ಧರ್ಮಾಚರಣೆ ಕೂಡ. "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಂ ಸಮಾಃ "ನೂರುವರ್ಷ ಕರ್ಮಗೈಯುತ್ತ ಬದುಕಬೇಕು. ಅದೇ ತಪಸ್ಸು. ಅದೇ ಮುಕ್ತಿ ಸಾಧನ. ಆದರೂ ಇಹದ ಅಂಟಿಂಪಿಕೆ ಸಲ್ಲ, ಇದ್ದರೂ ಇರದಂತಿರುವುದೇ ಮಾರ್ಗ. "ತಾನು ಬಾರಿಸುತಿದೆ ಕೇಳಿ ಹರಿದಾಸರೆಲ್ಲ ತಾನು ಬಾರಿಸುತಿದೆ ಕೇಳಿ"........ಕಂಡ

ವಿಷಯವ ಕಾವಿಸಿ ಕಷ್ಟಪಡದೆ-ತಾಂಡವ ಕೃಷ್ಣನ ಭಜಿಸಿ-ಪೊಂಡೆನೆ ನಿನಗೆ ಪರಿದಾಸರು ಮಾತ್ರ ಅಲ್ಲ, ಇಡೀ ಮಾನವ ಕೋಟಿಗೇ ಕಲ್ಯಾಣಕಾರಕ ಮಾತುಗಳಿವು :

"ವೃದ್ಧ ಯೌವನ ಬಾಲ್ಯಕಾ-ವಿವೇಕವಿಲ್ಲದ
ಬುದ್ಧಿ ಮಾಂದ್ಯವು ಹಲವು ಕಾಲ-ಆಹಾರ ಸಂಗ
ನಿದ್ರೆಯಿಂದಲಿ ಅತಿಲೋಲ ||
ಈಶನ ಭಜಕರ ಭಜಿಸದ ಮಾನಂಪಾ
ಯುಷ್ಯವೆಲ್ಲವು ವ್ಯರ್ಥವಾಯಿತೆಂದು ತಾಸು ಬಾರಿಸುತಿದೆ ಕೇಳಿ"

ಎಂಬುವಲ್ಲಿ ಆದಿಶಂಕರರ ಭಜಗೋವಿಂದ ಸ್ತೋತ್ರದ "ಬಾಲ್ಯಸ್ತಾವತ್ ಕ್ರೀಡಾಸಕ್ತಃ" ಎಂಬ ಸಾಲೂ ನೆನಪಿಗೆ ಬರುತ್ತದೆ. ಇದು ಪುರಂದರದಾಸರಂಥ ಹರಿದಾಸ ಪುಂಗವರು ಕೇವಲ ಸಾಂಪ್ರದಾಯಿಕವಾಗಿ ಹೇಳಿದ್ದು ಮಾತ್ರವಲ್ಲದೆ ಎಲ್ಲರಿಗೂ ಅನ್ವಯ ಆಗುತ್ತವೆ. ಮನುಷ್ಯನ ಬದುಕಿಗೆ ನೀತಿ ಅಸಾಧ್ಯವೇನಲ್ಲ; ಸುಲಭಸಾಧ್ಯವೆ. ಹರಿದಾಸರ ನೀತಿಬೋಧೆ ಕೇವಲ ಗೊಡ್ಡು, ಧರ್ಮಭೀರುತ್ವ ಕಲಿಸುವಂಥವು ಎಂಬ ಭಾವನೆ ಇಲ್ಲಿ ಬರಬೇಕಿಲ್ಲ. ಆಧುನಿಕತೆಯ ಸೋಗಿನಲ್ಲಿ, ಸಾಂಪ್ರದಾಯಿಕ ಆಚಾರ ವಿಚಾರವೆಲ್ಲವನ್ನು ಪ್ರಶ್ನಿಸುವ ಈ ವೈಚಾರಿಕ ಯುಗಕ್ಕೂ ಜೀವನ ವಿಕಾಸ ದೃಷ್ಟಿ ಆಗತ್ಯವಾಗಿದೆ. ಆ ದೃಷ್ಟಿ ಇಲ್ಲಿ ಹರಿದಾಸ ಸಂಪ್ರದಾಯದ ಸಾಹಿತ್ಯದಲ್ಲಿ ದೊರೆಯುತ್ತದೆ. ಆಸ್ತಿಕತೆ, ತನಗಿಂತಲೂ ಆತ್ಮೋನ್ನತ ಆದದ್ದು ಏನೋ ಒಂದು ಚೇತನ, ಸೃಷ್ಟಿ-ಸ್ಥಿತಿ-ಲಯ ಕರ್ತೃ ಆಗಿ ಇದೆ ಎಂಬುದು ಮಾನವತೆಯ ವಿಕಸನಕ್ಕೆ ಅವಕಾಶವೀಯುತ್ತದೆಯೆ ವಿನಾ ಕುಂದೇನೂ ಮಾಡದು. ಅಸ್ತಿಕ್ಯಭಾವ, ವೈಯಕ್ತಿಕ, ಸಾಂಘಿಕ ಜೀವನದಲ್ಲಿ ಶಾಂತಿ ಸಮಾಧಾನದ ನೆಲೆ ತರಿಸುತ್ತದೆ. ಇದು, ಪರಂಪರಾಗತ ಸತ್ಯವೆ ಆಗಿದೆ. ಇದರಿಂದ, ಪುರಂದರದಾಸರ ಸಂದೇಶದಂತೆ, ರಿದಾಸನಾಗುವುದೆಂದರೆ ಮಾನವತೆಯನ್ನು ಸಂಪೂರ್ಣವಾಗಿ ಅರಳಿಸಿಕೊಳ್ಳುವ ಜೀವನಯೋಗ ಸಾಧನೆಯೆಂದು ಹೇಳಬಹುದು.[9] ಹರಿದಾಸಕೂಟದ ಮುಂಚೂಣಿ ಪ್ರವರ್ತಕರಲ್ಲೊಬ್ಬರಾದ ಪುರಂದರದಾಸರ, ದೂರದೃಷ್ಟಿಯ ಈ ನುಡಿಗಳು ಶತಶತಮಾನಗಳು ಸಂದರೂ, ಹಳಸಲು ಆಗಿಲ್ಲವೆಂಬುದು ಗಮನೀಯ. ಏಕೆಂದರೆ, ಬದುಕಿನ ವಿಕಸನ ದಂತೆಯ ಅವರ ಕೃತಿಯಲ್ಲಡಕಗೊಂಡಿರುವ ಸತ್ವದ ಅರ್ಥವ್ಯಾಪ್ತಿಯೂ ಹೆಚ್ಚುತ್ತಲೆ ಇದೆ.

## ಹರಿದಾಸರ ಕೃತಿಗಳಲ್ಲಿ ಆಚಾರ-ಆಚರಣೆ, ವ್ರತನೇಮ, (ಮಧ್ವ) ಸಂಪ್ರದಾಯ, ಯೋಗ ಮೊದಲಾದ ಅಂಶಗಳು

ಹರಿದಾಸರದ್ದು ಪ್ರಧಾನತಃ ಧಾರ್ಮಿಕ-ಭಕ್ತಿಯ ಆಂದೋಲನವಾದ್ದರಿಂದ, ಅವರಲ್ಲಿ ಸಮಾಜ ಚಿತ್ರಣ ದೊರೆವುದು ಕಡಿಮೆಯೆ. ಅವರು ಸಮಾಜದೆಡೆಗೆ ತೋರುವ

ಮನೋಭಾವವೂ ಅನೇಕ ರೀತಿಯದು. ಅಂತೆಯೇ ಕೆಲವು ಮಾತಂಗಳಲ್ಲಿ ಸಾಮಾಜಿಕ ಅಂಶಗಳನ್ನು ತಿಳಿಸಿದ್ದೇವೆ :

1. ಜಾತಿಪದ್ಧತಿಯ ಬಗ್ಗೆ ಅವರ ಸೌಮ್ಯ ನಿರಾಕರಣೆ
(ಕನಕದಾಸರ ರಾಮಧಾನ್ಯ ಚರಿತ್ರೆ-ಅಂದಿನ ಸಮಾಜದ ಮೇಲಿನವರ್ಗ-ಕೀಳು ವರ್ಗದ ಸಂಘರ್ಷವನ್ನು ಪ್ರತೀಕಾ ವಿಧಾನದಲ್ಲಿ ಚಿತ್ರಿಸಿದ್ದರಿಂದ ಅದರ ಪ್ರಸ್ತಾಪ).
2. ಭಕ್ತಿ-ದೈವಲ ಅಸ್ತಿತ್ವವಾದ-ಸಾಕಾರರೂಪ ಉಪಾಸನೆ-ಅದ್ವೈತಖಂಡನೆ.ಮುಂತಾಗಿ.
3. ಆಚಾರ-ವಿಚಾರದ ಬಗ್ಗೆ ಹರಿದಾಸರು ನೀಡುವ ಚಿತ್ರಣ. ಇಲ್ಲಿ ಸಹಜವಾಗಿಯೆ ನವಮಾಧವ ಸಮೋಮಂತ ಎಂಬ ಧೋರಣೆ ಮತೀಯ ನಿಷ್ಠೆಯ ಪ್ರಧಾನ.
4. ಮಡಿದಂಶಿಕೆ-ಬೂಟಾಟಿಕೆ-ಡಾಂಭಿಕತೆ-ಹರಿದಾಸರ ಟೀಕೆ.

ಇವುಗಳಲ್ಲಿ ಆಚಾರ, ಮಡಿ, ಯೋಗ್ಯ, ಸಂಪ್ರದಾಯದ ಬಗ್ಗೆ ಹರಿದಾಸರು ನೀಡುವ ಚಿತ್ರಣ ಇಲ್ಲಿ ಗಮನಿಸುವಂಥದು. ಏಕೆಂದರೆ, ಮಧ್ವ ಮತದ ಹರಿದಾಸರ ಬದುಕಿನ ಅಮೂಲ್ಯ ಅವಿಭಾಜ್ಯ ನಡವಳಿ, ಪಥ, ಪಂಥ, ಎಲ್ಲವೂ. ಆದರೂ ಇಲ್ಲಿ ಹರಿದಾಸರು ಹಾಡಿರುವುದು / ತಿಳಿಸುವಂಥದು ಕೇವಲ ಮಾಧ್ವ ಮತೀಯರಿಗಾಗಿ ಮಹತ್ವವಲ್ಲದೆ, ವಿಶ್ವಧರ್ಮ-ರೀತಿ ನೀತಿಗಳಿಗೆ, ಇಡಿಯ ಮಾನವ ಸಮಾಜದ ಸ್ವಾಸ್ಥ್ಯಕ್ಕೆ ಅನ್ವಯಿಸುತ್ತದೆಂಬುದು ಗಮನಾರ್ಹ. ಬರಿಯ ಸಂಪ್ರದಾಯದ ಕೋಟಲೆಯಲ್ಲಿ ನಿಂತಿದ್ದ ಮತವು, ಮತ್ತೆ ವಿಚಾರದ ಕಡೆಯುವಿಕೆಯಲ್ಲಿ ಸಿಲುಕಿದರೆ, ಆಚಾರ ಶುದ್ಧ ಆಗಿ, ವಿಚಾರ ಬೆಳೆದು, ಮತ್ತೆ ಅದೇ ವಿಶ್ವಧರ್ಮವೆನಿಸಿ ಲೋಕೋದ್ಧಾರಕ್ಕೆ ಕಾರಣ ವೆನಿಸುತ್ತದೆ. 'ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ' (ಪರೋಪಕಾರ ಪುಣ್ಯಕಾರ್ಯವೆನಿಸುವಂತೆ, ಪಾಪಕಾರ್ಯ ಪರಪೀಡನೆಯೆಂದೆನ್ನಿಸಿಕೊಳ್ಳುತ್ತದೆ) ಎಂಬ ಶ್ಲೋಕದಲ್ಲಿ ಉಕ್ತಗೊಂಡಿರುವ ಧರ್ಮ, ಎಲ್ಲ ಮತಕ್ಕೂ ಆಧಾರವಾಗಿ ನಿಂತು ಸಮಾಜದ ಕಲ್ಯಾಣವೆ ಆಗುತ್ತದೆ. ಸಮಾಜದ-ಮಾನವಕೋಟಿಯ ಸ್ವಾಸ್ಥ್ಯ, ಕಲ್ಯಾಣಗಳ ಹರಿದಾಸರಾಂದೋಲನದ ಧ್ಯೇಯ.

ಆಚಾರ, ವಿಚಾರವೆಂದಾಗ ಒಂದು ನಿಯಮ, ಕಟ್ಟುಪಾಡು, ಪದ್ಧತಿ ಸಂಪ್ರದಾಯವೆಂದೆಲ್ಲ ಅರ್ಥಬರುತ್ತದೆ. ವಿಚಾರಮಂಥನ, ಸಂಪ್ರದಾಯವನ್ನು ಶುದ್ಧೀಕರಿಸುವಲ್ಲಿ ಆಲ್ಲಿಯ ಆಚಾರ ಶುದ್ಧಿಯೂ ಆಗುತ್ತದೆಂದು ತಿಳಿಸಿದ್ದೇವೆ. ಹರಿದಾಸರು ಪ್ರಾಮುಖ್ಯ ನೀಡಿದ್ದು ಇಂಥ ವಿಚಾರಯುತ ಆಚಾರಕ್ಕೇ ವಿನಾ ವಿಚಾರರಹಿತ, ಆಚಾರಕ್ಕಲ್ಲ.

ಮತ, ಧರ್ಮಗಳಿಗೆ ಸಂಬಂಧಿಸಿದಂತೆ, ಅಗೋಚರ ದೈವೀಶಕ್ತಿಗಳ ಪ್ರೀತ್ಯರ್ಥವಾಗಿ ಮಾನವ ನಡೆಸುತ್ತ ಬಂದಿರುವ ಮತಾಚಾರ, ಕರ್ಮವಿಧಿ (ರಿಚುಅಲ್)-ಆಚಾರ

ಎನಿಸಿಕೊಳ್ಳುತ್ತದೆ. ಮತಾಚಾರವೆ ಪ್ರತ್ಯೇಕ ಕ್ರಮಬದ್ಧವಾದ, ವಿಧಿವತ್ತಾದ, ಪರಂಪರಾನುಗತ ಆಗಿ ನಡೆದು ಬಂದ ರೀತಿಯಲ್ಲಿ ನಡೆಯಿಸುವ ಇಂಥ ಕ್ರಿಯೆಗಳ ಹಿನ್ನೆಲೆಯಲ್ಲಿ ನಂಬಿಕೆ ಆಳವಾಗಿ ಬೇರೂರಿರುತ್ತದೆ. ನಂಬುಗೆಯ ಆಗತ್ಯ ಇಲ್ಲಿ ಹಾಗೂ ಧರ್ಮವೆ ಇದರ ಅಡಿಗಲ್ಲು. ಧಾರ್ಮಿಕವಿಧಿಗಳಿಂದ ತಾನು ನಂಬಿದ ಪರಮ ಪವಿತ್ರ ವಸ್ತುವಿನ ಪ್ರೀತಿ–ಪ್ರೇಮವನ್ನು ಸಂಪಾದಿಸಬಹುದೆಂದು ಮನುಷ್ಯ ಎಣಿಸುತ್ತಾನೆ. ಆಚಾರದ ಆಚರಣೆ, ಒಂದು ಕ್ರಿಯೆ. ಲೌಕಿಕ ಹಿನ್ನೆಲೆಯಲ್ಲಿ ಸಂಪ್ರದಾಯಬದ್ಧ ರೀತಿಯಲ್ಲಿ ನಡೆಸುವಂಥ ಕ್ರಿಯೆ.

ದೈಹಿಕ ಅವಶ್ಯಕತೆಗಳಿಗನುಗುಣವಾಗಿ ನಡೆಸುವ ನೈಸರ್ಗಿಕ ಕ್ರಿಯೆಗಳು ಆಚರಣೆ ಎಂದೆನ್ನಿಸಿಕೊಳ್ಳುವುದಿಲ್ಲ. (ಉದಾ : ಮಡಿ–ಸ್ನಾನ ಮಾಡಿ ಶುಚಿಯಾಗುವುದಷ್ಟೆ ವಿನಾ ಅದೇ ಆಚರಣೆಯಾಗುವುದಿಲ್ಲ) (ಧ್ಯಾನ, ತಪಸ್ಸು, ಬೇರೆ–ಅದಕ್ಕೆ ಆಚರಣೆಯೆ ಜೀವಾಳ)। ಹರಿದಾಸರ ಶಂಖ, ತಂಬೂರಿ, ತಾಳ, ಕಂಸಾಳೆ ತಾಳ, ಗೊರವನ ಡಮರುಗ, ದಾಸಯ್ಯನ ಶಂಖ, ಭವನಾಸಿ, ಜಾಗಟೆ–ಇವೆಲ್ಲ ಪವಿತ್ರ ವಸ್ತು ಹಾಗೂ ಅವರು ನಡೆಸುವ ಆಚರಣೆಯ ಸಾಧನಗಳು. ನಡತೆ, ಶಿಷ್ಟರೂ ಉತ್ತಮರೆನ್ನಿಸಿಕೊಂಡವರು ಆಚರಿಸುವ ಪದ್ಧತಿ, ಪರಂಪರಾನುಗತ ಆಗಿ ಒದಗಿ ಬರುವ ನಿಯಮಿತ ನಿತ್ಯಕರ್ಮ (ನಿತ್ಯನೈಮಿತ್ತಿಕರೆಂದೆನ್ನುವ ರೂಢಿ ಇದೆ)ಗಳು, ಪದ್ಧತಿ, ಸಂಪ್ರದಾಯ, ವಾಡಿಕೆ, ವಿಧ್ಯುಕ್ತಕರ್ಮ–ಇವೆಲ್ಲ ಆಚಾರವೆ. ಒಬ್ಬ ವ್ಯಕ್ತಿ ಅಥವಾ ಒಂದು ಗುಂಪು, ಪಂಥ, ನಂಬುವ ತತ್ವ, ಸಿದ್ಧಾಂತ, ಮತ ಏನೆ ಇರಲಿ, ಅವರ ಆಚರಣೆ, ಅನುಷ್ಠಾನ, ನಿತ್ಯ ಜೀವನದಲ್ಲಿ ತನ್ನ ಕೆಲಸ ಕಾರ್ಯ ನಿರ್ವಹಿಸುವ ರೀತಿ, ಇವು ತುಂಬ ಮುಖ್ಯ. ಇದೇ ಧರ್ಮ ರಕ್ಷಣೆ ಎನ್ನಿಸಿಕೊಳ್ಳುವುದು. ಇದನ್ನೆ 'ಧರ್ಮೋ ರಕ್ಷತಿ ರಕ್ಷಿತಃ' ಎಂದರು ಹಿರಿಯರು.

ಆಚಾರ ಚಾತುರ್ವರ್ಣ್ಯಕ್ಕೆ-ಕರ್ಮಗಳಿಗೆ, ವಿವಾಹ-ಆಹಾರನೇಮ-ಸ್ತ್ರೀಧರ್ಮ–ಇವೆಲ್ಲಕ್ಕೂ ಸಂಬಂಧಿಸುವಂಥದು. ಇದನ್ನು ಕುರಿತೆ ಹರಿದಾಸರು ಅನೇಕ ಕೃತಿಗಳಲ್ಲಿ ಹಾಡಿದ್ದಾರೆ. ಮನುಸ್ಮೃತಿಯಲ್ಲೊಂದೆಡೆ ಆಚಾರದಿಂದ ಆಯುಸ್ಸು, ಧನವೃದ್ಧಿ, ಎಲ್ಲ ಆಗುತ್ತದೆಂದೂ ತಿಳಿಸುತ್ತ,

ಆಚಾರಾಲ್ಲಭತೇ ಹ್ಯಾಯುಃ ಆಚಾರಾದ್ಧಿಪ್ಸಿತಾಃ ಪ್ರಜಾಃ
ಆಚಾರಾದ್ಧನಂ ಅಕ್ಷಯ್ಯಾರೂ ಚಾರೋಹಂತ್ಯ ಲಕ್ಷಣಂ ॥

ಎಂದಿದೆ. ಇದಲ್ಲದೆ, ಮಹಾಭಾರತ ಶಾಂತಿಪರ್ವದಲ್ಲೊಂದೆಡೆ ಆಚಾರದ ಬಗ್ಗೆ ಈ ಮಾತಿದೆ :

ಅಕ್ರೋಧಃ ಸತ್ಯವಚನಂ ಸಂವಿಭಾಗಃ ಕ್ಷಮಾ ತಥಾ
ಪ್ರಜನ ಃ ಸರ್ವದಾರೇಷು ಶೌಚಮದ್ರೋಹ ಏವಚ
ಆರ್ಜವಂ ಭೃತ್ಯ ಭರಣಂ ನವೈತೇ ಸಾರ್ವವರ್ಣಿಕಾಃ ।......

ಕೋಪ ಬಿಡುವಿಕೆ, ಸತ್ಯವನ್ನೆ ನುಡಿವುದು, ನ್ಯಾಯವಾದ ಹಂಚಿಕೆ, ಕ್ಷಮೆ, ವ್ಯಭಿಚಾರ ಮಾಡದಿರುವುದು, ಶುಚಿತ್ವ, ದ್ರೋಹ ಮಾಡದಿರುವುದು, ನೇರನಡತೆ, ಭೃತ್ಯ ರಕ್ಷಣೆ-ಇವೇ ಆಚಾರ-ಆಚರಣೆ. ಜಾತಿಯ ಅಹಂಕಾರದಿಂದ ಸಮಾಜದ ಒಡಕಿನ ಶೋಚನೀಯ ಪರಿಸ್ಥಿತಿಯನ್ನು ಶಾಶ್ವತವಾಗಿ ಸುಧಾರಿಸಲು ಮೇಲೆ ತಿಳಿಸಿದ ಶ್ಲೋಕ ಸಾಧನ ಆಗುತ್ತದಲ್ಲವೆ ? ಹರಿದಾಸರು ಪ್ರಾಮುಖ್ಯತೆಯಿತ್ತುದು ಇಂಥ ಆಚಾರಕ್ಕಾಗಿ ಮಾತ್ರ, ಹಿಂದೂ ಧರ್ಮದ ಪ್ರಕಾರ, ಪ್ರತಿಯೊಂದು ಕರ್ಮ-ನಡೆನುಡಿಯಲ್ಲಿಯೂ ದೈಹಿಕ, ಮಾನಸಿಕ ಶುಚಿ (ಅದು ತರುವ ಪರಮಾರ್ಥ) ತುಂಬ ಮುಖ್ಯ. ಅನಾದಿ ಕಾಲದಿಂದಲೂ ಸ್ಮೃತಿ, ಪುರಾಣಸಂಪದ ಶುಚಿಗೆ ಮಹತ್ವವಿತ್ತಿವೆ. ಹಿಂದೆ ಇದ್ದ ಅನೇಕ ಋಷ್ಯಾಶ್ರಮಗಳ ವರ್ಣನೆಯನ್ನು ನಾವು ಅನೇಕ ಕಾವ್ಯಕಬ್ಬಗಳಲ್ಲಿ ಕಾಣುತ್ತೇವೆ. ಆ ಇಡಿಯ ಆವರಣವೆ ಶುಚಿ, ತಪಸ್ಸಿನ......ರೂಕ್ಷದೀಧಿತಿಯಿಂದ ಭೂಭಾಗವಸ್ಥಿವ ಗಳನ್ನು ಅನುಸರಣೆಸುತ್ತಲಿರುತ್ತಿದ್ದಿತೆಂದೂ ತಿಳಿಯುತ್ತೇವೆ. ರಾಜಾಧಿರಾಜರಾದರೂ ಋಷಿಗಳೆದುರು ಬರುವಲ್ಲಿ ಶುಚಿಯಾಗಿ ನಮ್ರತೆ ಭಕ್ತಿಗಳಿಂದ ಪಾದಚಾರಿಗಳಾಗಿ ಮಹರ್ಷಿಗಳಿಗೆ ನಮಿಸುತ್ತಿದ್ದರು. ಶರೀರದಲ್ಲಿ ಶುಚಿ ನೆಲಸದೆ, ಪರಮಾತ್ಮನಾವಾಸ, ಪರಮಾತ್ಮನ ನಾಮೋಚ್ಚಾರಣೆಗೆ ಅಧಿಕಾರವೆ ಇಲ್ಲ. ಮತಾಚಾರ್ಯರೆಲ್ಲ ತಮ್ಮ ತಮ್ಮ ತತ್ವ ಪ್ರತಿಪಾದನೆ,/ ಶಾಸ್ತ್ರ ಗ್ರಂಥಗಳನ್ನು ಬರೆದಿರುವಂತೆಯೆ, ಸದಾಚಾರ ಕುರಿತು ನಿರೂಪಿಸಿದ್ದಾರೆ. ಅದನ್ನೆ ಅನುಷ್ಠಾನ ಎಂದರು, ಆಚಾರ ಎಂದರು. ಒಟ್ಟಾರೆ ಆಚಾರ ಎಂದಾಗ, ಆಚರಣೆ ಮೊದಲು ಎಂಬ ಭಾವ ಒಡನೆ ಸ್ಫುರಿಸುತ್ತದೆ. ಅದೇ ಆಚಾರ-ವಿಚಾರ ನೇಮ-ನಿಷ್ಠೆ-ಸಂಪ್ರದಾಯಗಳನ್ನು ಎಲ್ಲರಿಗೂ ಪ್ರಕಟಿಸುವ ಕ್ರಿಯಾ ವಿಶೇಷ. ಶುಚಿಯನ್ನೆ ಕನ್ನಡದಲ್ಲಿ ''ಮಡಿ''ಯೆಂದು ಕರೆಯುವ ರೂಢಿ. ಆದರೆ ''ಮಡಿ'' ಎಂಬ ಈ ಎರಡಕ್ಷರದ ಶಬ್ದ ಅದೆಷ್ಟೊ ಕಾಲದ ಸೆಳೆತಕ್ಕೆ ಸಿಲುಕಿ, ಅದರ ಬಗೆಗಿನ ವ್ಯಾಖ್ಯಾನ, ನಿರೂಪ ವಿವಿಧ ರೀತಿಗಳದ್ದಾಗಿ ಆದರ ಅರ್ಥ ಈಗಲಂತೂ ಒಂದು ವರ್ಗವನ್ನು ಹಾಸ್ಯ ಮಾಡುವಷ್ಟರಮಟ್ಟಿಗೆ ಸಂಕುಚಿತಗೊಂಡುಬಿಟ್ಟಿರುವುದೂ ಶೋಚನೀಯವೆನಿಸುತ್ತದೆ.

'ಮಡಿ' ಎಂಬ ಶಬ್ದಕ್ಕೆ ಹರಿದಾಸರು ತಮ್ಮ ಅನೇಕ ಕೃತಿಗಳ ಮೂಲಕ ಅರ್ಥ ನೀಯುತ್ತಾರೆ. ಅವರ ಪ್ರಕಾರ, ಹೊರಗಿನ ಮಡಿಯಿರಬೇಕಾದ್ದು ಅತ್ಯಗತ್ಯವೆ ಆದರೂ ಅದಷ್ಟೆ ಸಾಲದು. ಆದರಿಂದ ಪವಿತ್ರತೆ ಬರುವುದಿದ್ದರೆ, ಅಂತಃಶ್ಶುಚಿಗೇಕೆ ಬೇಕಿತ್ತು ಪ್ರಾಧಾನ್ಯ ? ಬಾಹ್ಯ ಶುಚಿಯಷ್ಟೇ ಅದಕ್ಕೂ ಒಂದು ಕೈ ಮಿಗಿಲು ಪ್ರಾಧಾನ್ಯತೆ ಅಂತಃಶ್ಶುಚಿಗೆ. ಪರಮಾತ್ಮನ ನಾಮಸ್ಮರಣೆ, ಉಚ್ಚರಣೆ, ಭಕ್ತಿಯುತ ಪ್ರಾರ್ಥನೆ, ಹೊರಗಣ ಮಡಿಯೊಂದಿಗೆ ಆಚರಿಸಿದಾಗ ಅದಕ್ಕೆ ಪಾವಿತ್ರ್ಯದ ಶ್ರೀರಕ್ಷೆ ದೊರೆತು ದಿವ್ಯತೆಯ ಅನುಭವ, ಅನುಭವದ ತಾನಾಗಿಯೆ ಒಡಮೂಡಿ ಬರುತ್ತದೆ. ಇದಿಲ್ಲದೆ ಹೊರಗಣ ಮಡಿಗೆ ಹರಿದಾಸರು ಪ್ರಾಧಾನ್ಯತೆಯಿಯರು : ಅದು 'ವಿಚಾರ ಶೂನ್ಯ ಆಚಾರ', 'ಡಾಂಭಿಕತೆ', 'ಕುದಾಚಾರ', ಎಂದೆಲ್ಲ ಕರೆದಿದಾರೆ. ಶ್ರದ್ಧೆಯುಳ್ಳವರಿಗೆ-ಗಂಡಾಗಲಿ, ಹೆಣ್ಣಾಗಲಿ-ಮಡಿಯ ಮುಸುಕು ಕವಿದು ಬಿಟ್ಟರೆ, ಆ ಮಡಿ ಬರೀ

ಗಡಿಬಿಡಿ ಆಗಿ ಮನೆ ಮಂದಿಗೂ ಆಪತ್ತು, ಕಳವಳಕಾರಕವೆ ಆಗುತ್ತದೆ. ನೀರು ಹಾಕಿದ್ದೂ ಹಾಕಿದ್ದೆ, ಪ್ರೋಕ್ಷಿಸಿಕೊಂಡದ್ದೂ ಪ್ರೋಕ್ಷಿಸಿಕೊಂಡದ್ದೆ, ಗಾಯತ್ರಿ ಉಚ್ಚಾರಣೆಯ ನಡುವೆಯೂ ಎಷ್ಟೋ ಜನ ಮತ್ತೆ ನೀರನ್ನು ಮಾರ್ಜನ ಮಾಡಿ ಕೊಂಬ ದೃಶ್ಯ ನಿಜಕ್ಕೂ ಇವರು ಭ್ರಾಂತಿಯ ಜೀವರೆಂದೆನಿಸಿ ಬಿಡುತ್ತದೆ. "ಮಧ್ವ ಮತದ ಸಿದ್ಧಾಂತ ಪದ್ಧತಿ ಬಿಡಬೇಡಿ, ಬಿಟ್ಟು ಕೆಡಬೇಡಿ" "ಹರಿಸರ್ವೋತ್ತಮನೆಂದೆಂಬ ಜ್ಞಾನವ ! ತಾರತಮ್ಯದಿಂದ ತಿಳಿಸೊ ಮಾರ್ಗವ" "ಸತ್ಯ ಜಗಕಿದು ಪಂಚಭೇದವು, ವಿಶ್ವತೋಮುಖು ನೀನೆ ವಿಶ್ವತಶ್ಚಕ್ಷು ನೀನೆ, ವಿಶ್ವತೋ ಬಾಹು ನೀನೆ ವಿಶ್ವತೋ ಹಸ್ತನೀನೆ", ಎಂದೆಲ್ಲ ಡಿಂಡಿಮವನ್ನು ಬಾಜಿಸಿದ ಹರಿದಾಸರು ಮಡಿ ಕುರಿತು, ತಮ್ಮ ನಿಲುವನ್ನು ತಿಳಿಯಪಡಿಸುತ್ತಾರೆ. ವಾದಿರಾಜರ ಸಂಡಿಗಳಂತೂ ಆಚಾರ ನಡವಳಿಕೆ ಕುರಿತ ಒಂದು ಚಿತ್ರಣವನ್ನೆ ನೀಡುತ್ತದೆ.

"ಏನು ಶಪಥವ ಮಾಡಲೀ ಮತವು ಪಿರಿದೆಂದು" ಎಂಬಲ್ಲಿ ಅವರ ವೀರವೈಷ್ಣವ ನಿಷ್ಠೆ ಅಭಿವ್ಯಕ್ತಗೊಂಡಂತಿದೆ ಮುಂದಣ ನುಡಿಗಳಲ್ಲಿ :

ಏನು ಶಪಥವ ಮಾಡಲೀ ಮತವು ಪಿರಿದೆಂದು ।
ಜ್ಞಾನಿಗಳ ಸಮ್ಮತವೋ ಪ್ರಾಣೀ ॥
ವರಮಧ್ವಶಾಸ್ತ್ರವೇ ಸಕಲಶಾಸ್ತ್ರಾಧಿಕೆಂದು...
ಪರಮತ ಜಾಲಗಳು ವೇದ ವಿರುದ್ಧವೆಂದು...
ಭಾಗವತಶಾಸ್ತ್ರವೇ ಬಹುಭಾಗ್ಯವೆಂತೆಂದು...
ಭಾಗವತ ನಿಂದಕಗೆ ಬಹುನರಕವೆಂತೆಂದು...
ಪರಲೋಕ ಸಾಧನೆಗೆ ತಾರತಮ್ಯ ಮತವೆಂದು...
ಹರಿದಿನಕೆ ಮರುದಿನ ಸರಿಯಿಲ್ಲವೆಂತೆಂದು...
ವಿದಿತದೈವಗಳೊಳಗೆ ವಿಷ್ಣು ಉತ್ತಮನೆಂದು...
ಅಧಿಕಾರಿಗಳೊಳಗೆ ಅಬುಜಸಂಭವನೆಂದು...
ಗುರು ಮಧ್ವರಾಯರೇ ಆತ್ಮರಕ್ಷಕರೆಂದು...
ಸಿರಿ ಹಯವದನನೇ ಅಮಿತಗುಣಪೂರ್ಣನೆಂದು...

ಇಲ್ಲಿ ಶುಚಿ, ಧರ್ಮದ ಜತೆ, 'ಹರಿದಿನ'ದ ಪ್ರಸ್ತಾಪವೂ ಬಂದಿದೆ. ಏಕಾದಶಿಯನ್ನು, ಹರಿದಿನ, ಹರಿವಾಸರ ಎಂದೆಲ್ಲ ಕರೆಯುವುದು ವಾಡಿಕೆ. ಇಲ್ಲಿ ಏಕಾದಶಿಯೆಂದು ಉಪವಾಸ ಕಟ್ಟುನಿಟ್ಟಾಗಿ ಆಚರಿಸುವುದೂ ಒಂದು ಆಚಾರ. ಇದು ಆರೋಗ್ಯಕರವಾದ ನಡೆವಳಿ ಎಂಬುದೇ ಎಲ್ಲರಿಗೂ ಮರೆತು ಹೋಗಿರುವಂತಿದೆ. ದಶಮಿಯಂದು ಬೆಳಗ್ಗೆ ಊಟ ಮಾಡಿದರೆ ಆ ಅನ್ನ ಪಚನಗೊಳ್ಳುವುದು, ಸಂಜೆವೇಳೆಗೇ ಅಂದು ಏನೂ ತಿನ್ನದೆ ಮರು ದಿನವಾದ ಏಕಾದಶಿಯಂದು ಸಂಪೂರ್ಣ ನಿರಾಹಾರಿಯಾಗಿರಬೇಕು. ಇದು ನಿಯಮ. ಅಂದು ಇರುವ ನಿರಾಹಾರ ವ್ರತ, ಉಪವಾಸ (ಜತೆಯಲ್ಲಿ ವಾಸಿಸುವಿಕೆ-

ಉಪವಾಸವೆಂದರೆ, (starvation)–ಶಿರಿಯಂವಿಕೆ–ಅಲ್ಲ. ಹೊಟ್ಟೆ ಖಾಲಿ ಬಿಟ್ಟೆ ದೇಹಂಡಿಸುವುದೂ ಅಲ್ಲ. ಮನಶ್ಶುದ್ಧಿಗಾಗಿಯೂ ಗಾಂಧೀಜಿ ಉಪವಾಸ ಕೈಗೊಂಡಂದಂಟಂ. ಉಪವಾಸದಿಂದ ದೇಹ, ಮನಸ್ಸು, ಎರಡೂ ಶುದ್ಧಿಗೊಳ್ಳುವುದಲ್ಲದೆ ಬುದ್ಧಿಯೂ ಪ್ರಜ್ವಲಿಸುತ್ತದೆ. ಮರುದಿನ ದ್ವಾದಶಿಯಂದು ಬೆಳಗ್ಗೆ ಊಟ ಮಾಡುವುದರೊಂದಿಗೆ ಮುಕ್ತಾಯಗೊಳ್ಳುತ್ತದೆ. ದ್ವಾದಶಿಯಂದು ಉಪಯೋಗಿಸುವ ನೆಲ್ಲಿಕಾಯಿ ಪದಾರ್ಥ, ಮೆಣಸು ಒಳಸಿದ ಸಾರು, ಇವು ಹಿಂದಿನ ದಿನ ನಿರಾಹಾರದಲ್ಲಿ ಶರೀರದಲ್ಲಿ ಉತ್ಪತ್ತಿಯಾಗಿರಬಹುದಾದ ಪಿತ್ಥ ವಿಕಾರವನ್ನು ಪ್ರಶಮನಗೊಳಿಸುವುದಲ್ಲದೆ, ಹಸಿವನ್ನೂ ಉದ್ದೀಪಿಸುವಲ್ಲಿ ಸಹಕಾರಿ ಆಗುತ್ತವೆ. ಆರೋಗ್ಯದೃಷ್ಟಿಯೂ ಇಲ್ಲಿ ಹರಿದಾಸರಿಗಿತ್ತು ಎಂದಾಯಿತು. ಇದು ಸದಾಚಾರವೇ ತಾನೆ? ಇಲ್ಲಿ ಧಾರ್ಮಿಕತೆಯ ಕವಚವಿರುವುದು, ಶರೀರದ ಆಹಾರ ಬಯಕೆಯನ್ನು ಮನಸ್ಸು ಹರಿಸ್ಮರಣೆಯತ್ತ ಹೊರಳಿಸುವಲ್ಲಿ ಆಗ, ಮನಸ್ಸೆ ಪ್ರಧಾನ–ಹಸಿವೆಗೆ ಎಂದೂ ಅರ್ಥ ಆಗುತ್ತದೆ. ಹಸಿವಾಯಿತೆಂದು ಆಹಾರ ತುರುಕುವುದಲ್ಲ. ಮನಸ್ತೃಪ್ತಿ ಸೇವಿಸಬೇಕು. ಊಟ ಮಾಡುವ ನಿಯಮ, ಆಹಾರ ಅಗಿಯುವಿಕೆ, ತೀರ್ಥಪ್ರಾಶನ, ಮಧ್ಯೆ ಮಧ್ಯೆ ನೀರು ಕುಡಿದು ಜೀರ್ಣರಸ ದುರ್ಬಲಗೊಳಿಸದಿರುವಿಕೆ, ಇವೆಲ್ಲದರ ಜತೆ ಊಟ ಮಾಡುವಾಗ ಮಾತಾಡುತ್ತಲಿರದೆ ಆಚರಿಸುವ ಮೌನ, ಆಹಾರವನ್ನು ಜೀರ್ಣಾಂಗಗಳ ಮೂಲಕ ಸರಿಯಾಗಿ ತಲುಪಿಸಲು, ಅನುಕೂಲ ಆಗುತ್ತದೆ. ಜೀರ್ಣಕ್ರಿಯೆಯೂ ಸರಾಗವಾಗಿ ಜರುಗುತ್ತದೆ. ಹರಿದಾಸರು ಆರೋಗ್ಯ ಕುರಿತ ಪಾಠವನ್ನು ಧರ್ಮದೊಂದಿಗೆ ಬೆರಸಿ ಹೇಳಿದಾರೆ, ಎಂದೆನ್ನಿಸುವುದಿಲ್ಲವೆ? ಇವೆಲ್ಲ ಸದಾಚಾರವೆಂದೆನಿಸಿಕೊಳ್ಳುವುದರಲ್ಲಿ ಯಾವ ವರ್ಗೀಕರಣ, ಜಾತಿ ಇತ್ಯಾದಿ ಭೇದವೆಣಿಸುವುದು ಹಿತವೆನಿಸುವುದಿಲ್ಲವೆನಿಸುತ್ತದೆ. "ಏಕಾದಶಿ ವ್ರತವ ಸಾಧಿಸಿ ವಿಶಾದಶಿವ್ರತವ, ವಿಕಭಕುತಿಯಿಂದ ಮಾಡಿರೋ ಪಾಡಿರೋ ಲೋಕದೊಳಗೆ ಇದೆ. ಬೀರುತ ಸಾರುತ ಶ್ರೀಕಾಂತನ ನೆನಸಿ......" ಎಂದು ಏಕಾದಶಿ ವ್ರತ ಕುರಿತ ವಿಜಯವಿಠಲರು ಹಾಡಿದ್ದಾರೆ.

ಏಕಾದಶಿಯ ಆಚರಣೆಯಷ್ಟೆ ಮಹತ್ವ ನೀಡಿರುವ ವ್ರತ, ಶ್ರೀಹರಿಪಾದ ಸೇವೆ, ಪರಿಪಥ ದೊರಕಿಸುವ ಗುರುಭಕುತಿ, ಇದರ ಜತೆ ನಾವು ವಿಚಾರ ಮಾಡುವಂಥದು ನಿಜವಾದ ಭಕುತಿ–ಹಾಗೂ ಮಡಿಯ ಹೆಸರಲ್ಲಿ ನೀರು ಪ್ರೋಕ್ಷಣೆ ಮಾಡಿಕೊಂಡು ಹಾರುವ "ಹಾರುವರ ಮಡಿಭಕ್ತಿ" ಇದನ್ನು ಕನಕದಾಸರೂ ತಮ್ಮ ಕೃತಿಗಳಲ್ಲಿ ಕಟುವಾಗಿಯೆ ವಿಚಾರ ಮಾಡಿದ್ದಾರೆ. ಪುರಂದರರು, ವಾದಿರಾಜರು, ವಿಜಯದಾಸರು, "ಮಡಿ ಸುಳಾದಿ"ಯನ್ನೆ ಬರೆದು ನಿಡಿದಾಗಿ ವಿವರಿಸಿರುವ ಗೋಪಾಲದಾಸರು, ಜಗನ್ನಾಥದಾಸರು ಹೀಗೆ ಹರಿದಾಸರೆಲ್ಲ ಸಮಾಜವನ್ನಾವರಿಸಿದ ಈ ಮಡಿಯ ಮುಸುಕಿನ ಅಜ್ಞಾನದ ದಪ್ಪ ಪೊರೆಯನ್ನು ಕಳಚಿ, ಶುಚಿಗೊಳಿಸಿ, ನಿಜವಾದ 'ಕಾಯಾ ವಾಚಾ ಮನಸಾ' ಮಡಿ ಸ್ಥಾಪಿಸಲು ಬಹುವಾಗಿ ಶ್ರಮಿಸಿರುವುದು ಅವರ ಅನೇಕ ಕೃತಿಗಳ ಮೂಲಕ ತಿಳಿಯಬರುತ್ತದೆ. ಇವೆಲ್ಲದರ ವಿಶದವಾದ ಸಮೀಕ್ಷೆ ನಾವು ಮಾಡಲಾಗದಿದ್ದರೂ

ಅಲ್ಲಲ್ಲಿ ಉದಹರಿಸಿದ್ದೇವೆ. ಹಾಗೂ ಮಡಿಯಂತೆಯೆ ಅದಕ್ಕೆ ಪೂರಕ, ಸ್ವಾಸ್ಥ್ಯಕಾರಕ ಆದ ಕೆಲವು ನಿಯಮಗಳನ್ನು ದಾಸರು ಮನಸಾರೆ ತಿಳಿಸಿ ಕೊಟ್ಟಿದಾರೆ. ಇದನ್ನು ಯಾರು ಬೇಕಾದರೂ ಆಚರಿಸಬಹುದು. ಮುಂಜಾವಿಗೇ ಏಳುವಿಕೆ, ಎದ್ದ ನಂತರದ ದಿನಚರಿ, ಅಲ್ಲಿ ಸಾರ್ವತ್ರಿಕ ನೈರ್ಮಲ್ಯ ಎಲ್ಲವನ್ನೂ ದಾಸರ ಹದ್ದಿನ ದೃಷ್ಟಿ ಸೂಕ್ಷ್ಮವಾಗಿ, ಎಳೆಯೆಳೆಯಾಗಿ ವಿಚಾರ ಮಾಡಿದೆ.

ಕನಕದಾಸರ ಕಾಲದ ಸಾಮಾಜಿಕ ಹಿನ್ನೆಲೆ, ಜಾತಿ ಪದ್ಧತಿಯ ಪಿಡುಗಿನ ಪ್ರಭಾವ, ಬಸವ ಯುಗದ ಸಾಮಾಜಿಕ ಹಿನ್ನೆಲೆಗಿಂತ ಹೆಚ್ಚೇನೂ ಭಿನ್ನವಲ್ಲ. ಅಂದಿದ್ದ ಸಮಾಜದ ಜಾತಿ ಪದ್ಧತಿ ಕನಕದಾಸರ ಕಾಲದಲ್ಲಿ ಇನ್ನೂ ಜಟಿಲಗೊಂಡಿತಷ್ಟೆ. ಅದಕ್ಕೆ ಪ್ರತ್ಯಕ್ಷ-ಪರೋಕ್ಷ ಕಾರಣ, ವಿಜಯನಗರದರಸರು ಬ್ರಾಹ್ಮಣರಿಗೆ ನೀಡುತ್ತಿದ್ದ ವಿಶೇಷ ಪುರಸ್ಕಾರ, ಗೌರವ ಇದನ್ನು ಜೀವನಾನುಕೂಲ ಪ್ರತಿನಿತ್ಯ ನಡೆಯುತ್ತಿದ್ದ ಅನ್ನಸತ್ರ, ಅಲ್ಲಿ ನುಗ್ಗುತ್ತಿದ್ದ "ವಿಘ್ನರಾಜ ಬಳಗ"ದಂತಿದ್ದ ಡೊಳ್ಳು ಹೊಟ್ಟೆಯ ಬ್ರಾಹ್ಮಣರ ತಂಡವನ್ನು ಕುರಿತು ಕನಕದಾಸರು ತಮ್ಮ ವರ್ಣಕ ಕಾವ್ಯವಾದ "ಮೋಹನತರಂಗಿಣಿ"ಯಲ್ಲಿ ಚೆನ್ನಾಗಿಯೆ ವಿವರಿಸಿದ್ದಾರೆ. ಬ್ರಾಹ್ಮಣರಿಗೇ ವಿದ್ಯಾಭ್ಯಾಸ, ಉನ್ನತಅಧ್ಯಯನ. ಕ್ಷತ್ರಿಯರಿಗೂ ವಿದ್ಯೆ, ಕ್ಷತ್ರಿಯೋಚಿತ ಶಿಕ್ಷಣ. ಈ ಜಾತಿ ಭೇದದಿಂದಾಗಿ ಸಮಾಜದಲ್ಲಿ ಮೇಲು ಕೀಳು, ಅಸ್ಪೃಶ್ಯ-ಅಂತ್ಯಜರು. ಇತ್ಯಾದಿ ಭೇದ ಭಾವನೆ ಬಲವಾಗಿ ಬೇರೂರಿತ್ತು. ಕೆಳವರ್ಗದವರ, ಅಸ್ಪೃಶ್ಯರ ಸ್ಥಿತಿಯಂತೂ ಶೋಚನೀಯವೆ ಆಗಿತ್ತು. ಸಾಮಾಜಿಕ ಬದುಕಿನಲ್ಲಿ ಅತ್ಯಂತ ಕೀಳುಜಾತಿಯಲ್ಲಿ ಹುಟ್ಟಿದ್ದಕ್ಕಾಗಿ ಈ ಜನ, ಮೇಲುವರ್ಗದವರ, ಶ್ರೀಮಂತರ ದಮನ, ದೌರ್ಜನ್ಯ, ದಬ್ಬಾಳಿಕೆಗೆ ಈಡಾಗಿ ನಿರಂತರ ಶೋಷಣೆಗೆ ಗುರಿಯಾಗಿದ್ದರು. ಚಾತುರ್ವರ್ಣ್ಯಪದ್ಧತಿ ಪ್ರಧಾನವಾಗಿ ಇದ್ದರೂ ಅಲ್ಲಿ ಒಡೆದು ಚೂರು ಚೂರಾಗಿ, ಬೆಳೆದ ಜಾತಿ-ಉಪಜಾತಿ ಸಮಾಜವನ್ನು ಛಿದ್ರಗೊಳಿಸುವುದರಲ್ಲಿ ತೊಡಗಿತ್ತು. ವೇದಾಧ್ಯಯನ, ಪೌರೋಹಿತ್ಯ, ಧರ್ಮಶಾಸ್ತ್ರ, ಸಾಹಿತ್ಯ ಕಾವ್ಯ ಎಲ್ಲವೂ ಬ್ರಾಹ್ಮಣರಿಗೆ ಮೀಸಲು. ಬಸವಣ್ಣನವರು ಹಾಗೂ ಅವರ ಅನುಯಾಯಿಗಳು ಅನೇಕರು ಈ ದಿಶೆಯಲ್ಲಿ ನಡೆಸಿದ ಕ್ರಾಂತಿ, ಸ್ವಲ್ಪಮಟ್ಟಿಗೆ ಕೆಳವರ್ಗದ ಶೋಷಣೆ ಕಡಿಮೆ ಮಾಡಿತೆಂದೆನಿಸಿದರೂ ಮತ್ತೆ ಹರಿದಾಸರ ಕಾಲಕ್ಕಾಗಲೇ (ಸು : ೧೪–೧೬ ಶತಕ) ಮೊದಲಿಗೆ ಬೇರೂರಿದ್ದ ಹಳೆಯ ಸಂಪ್ರದಾಯಗಳೆ ಮತ್ತೆ ಬೆಳೆದು ಮುಂದರಿದವು. ಈ ದಿಸೆಯಲ್ಲಿ ಕನಕದಾಸರ, ಶೂದ್ರವರ್ಗದ ಅಂತರಂಗದ ಅಭಿವ್ಯಕ್ತಿ ಸಹಜವಾಗಿಯೆ ಮಿಡಿದಿದೆ. ಹರಿದಾಸರಲ್ಲಿ ಕವಿಗಳಾದ ಕನಕದಾಸರು, ಮೊದಲಿಂದ ಪರಂಪರಾನುಗತವಾಗಿ ಮೇಲಿದ್ದವರು ಏರುವುದಕ್ಕಿಂತ, ಸಾಧನೆಯ ಹಂತ ಏರಿದ್ದು. ಕೇವಲ ಹುಟ್ಟು ಜಾತಿಯಿಂದಲೇ ಉತ್ತಮ ಅಧಮ ನಿಷ್ಕರ್ಷೆ ಮಾಡುವುದು ಸರಿಯಲ್ಲವೆನ್ನಲು ಕನಕಪ್ಪನೇ ನಿದರ್ಶನ. ವ್ಯಕ್ತಿಯ ಸಾಧನೆ, ನಡೆನುಡಿ, ಮಾನವೀಯ ಗುಣ, ವರ್ತನೆ, ಇವೆಲ್ಲ ಗಮನಿಸಬೇಕು. ಉತ್ತಮಾಧಮ ನಿರ್ಧಾರದಲ್ಲಿ ಮೇಲುವರ್ಗದಲ್ಲಿ ಹುಟ್ಟಿದ

ಮಾತ್ರಕ್ಕೆ ಒಬ್ಬ ವ್ಯಕ್ತಿ ಶ್ರೇಷ್ಠನಾಗಲಾರ ; ಹಾಗೇ ಆಕಸ್ಮಾತ್ ಕೀಳುವರ್ಗದಲ್ಲಿ ಹುಟ್ಟಿದಾತ ಜಾತಿಯಿಂದಲಿ ಕೀಳಾಗಲಾರ-

"ಯಾತರವನೆಂದುಸುರಲಿ ಜಗ
ನ್ನಾಥಮಾಡಿದ ಒಂದು ನರೂಪವಯ್ಯ"

ಎಂಬ ಕನಕದಾಸರ ಕೃತಿ ಕುಲ ಕುಲವೆಂದು ಹೀಗಳೆ ಕರ್ಮಠರನ್ನು ಕುರಿತು ಪ್ರಶ್ನಿಸಿದ್ದು : "ಕುಲ ಕುಲ ಕುಲವೆಂದು ಹೊಡೆದಾಡದಿರಿ । ನಿಮ್ಮ ಕುಲದ ನೆಲೆಯನು ನೇನಾದರು ಬಲ್ಲಿರಾ ।" ಎಂದು ಪ್ರಶ್ನಿಸಿದ ಕನಕ, "ಕುಲವ್ಯಾವುದು ಸತ್ಯಸಂಖಿವ್ರುಳ್ಳ ಜನರಿಗೆ...ಆತನೊಲಿದ ಮೇಲಿನ್ಯಾತರ ಕುಲವಯ್ಯ" ಎಂದು ಹೇಳುವದರ ಮರ್ಮ ಸತ್ಕುಲ ಸಂಜಾತರೆಂದು ಹೆಮ್ಮೆಪಡುವ ಅಜ್ಞಾನಿಗಳಿಗೆ ಅರ್ಥ ಆಗಿರಲಿಕ್ಕಿಲ್ಲ. ಜ್ಞಾನಿಯಾದವರಿಗೆ ಸತ್ಯ, ಮಾನವೀಯತೆಯ ಕುಲ ಪರಮಾತ್ಮ ಬಾರೋ ಎಂದು ಕರೆವಾಗ ಬೇರೆಯವನಾರೂ ಯಾವ ಕುಲ ಎಂದು ಪ್ರಶ್ನಿಸಿದ್ದು ಕೆಲಸಕ್ಕೆ ಬಾರದವಾತು. ಪರಿಪಕ್ವ ವ್ಯಕ್ತಿತೆ, ಮಾನಸಿಕ ಪ್ರಬುದ್ಧತೆ-ಭಕ್ತಿಯ ಆಳವು ಇವುಗಳಿಗೆ ಮಹಾನ್ಯತೆಯು ವಿನಾ ಆಕಸ್ಮಿಕ ಹುಟ್ಟಿನ ಪರಿಪಕ್ವತೆಯು ಅಜ್ಞಾನದ ಮಾತಿಗಲ್ಲ :

ತೀರ್ಥವನು ಹಿಡಿದವರೆಲ್ಲ ತಿರುನಾಮ ಧಾರಿಗಳೆ ।
ಜನ್ಮಸಾರ್ಥಕವಿಲ್ಲದವರೆಲ್ಲ ಭಾಗವತರೆ॥

ಎಂದು ಪ್ರಶ್ನಿಸುವ ಕನಕಣ್ಣ, ಹೇಳುವ ಮಾತುಗಳು ನೋಡಿ :

ಮೂಗ್ಹಿಡಿದು ನೀರೊಳಗೆ ಮುಳುಗಿ ಜಪತಪವ ಮಾಡಿ
ವೇದಶಾಸ್ತ್ರ ಪುರಾಣಗಳನೋದಿ ತಿಳಿಯ ।
ಬಾಗಿ ಪರಸ್ತ್ರೀಯರಿಗೆ ಭ್ರಮಿಸಿ ಕಣ್ಣಿಡುವಂಥ ।
ನೀತಿ ತಪ್ಪಿದವರೆಲ್ಲ ದೇವ ಬ್ರಾಹ್ಮಣರೆ ಕೃಷ್ಣ ॥1॥

ಪಟ್ಟೆನಾಮವನಿಟ್ಟು ಪಾತ್ರೆ ಕೈಯಲಿ ಹಿಡಿದು ।
ಗುಟ್ಟನಲಿ ಜಪಿಸುವ ಗುರುತರಿಯದೆ ।
ಕೆಟ್ಟಕೂಗನೆ ಕೂಗಿ ಹೊಟ್ಟೆಯನು ಹೊರೆವಂಥ
ಮೊಟ್ಟೆ ಗುಡುಮಗಳೆಲ್ಲ ಪರಮ ವೈಷ್ಣವರೇ ॥2॥

(ಮೂಗು ಹಿಡಿಯುತ ನೀರೊಳಗೆ ಮುಳುಗಿ ಜಪಮಾಡಿ
ಭಾಗವತಶಾಸ್ತ್ರಾದಿಗಳನೆ ಓದಿ - ಎಂಬುದು ಮೊದಲ ನುಡಿಯ ಪಾಠಾಂತರ)

ಅಲ್ಲಾ-ಖುದಾ ಎಂಬ ಅರ್ಥವನು ಅರಿಯದೆ ।
ಮುಲ್ಲಾಶಾಸ್ತ್ರದ ನೆಲೆಯ ಮುನ್ನರಿಯದೆ ॥

ಕಳ್ಳಕೂಗನೆ ಕೂಗಿ ಬೊಗಳಿ ಬಾಯ್ದೆರೆವಂಥ ।
ಕಳ್ಳರಿಗೆ ತಾ ವೀರಸ್ವರ್ಗ ದೊರಕುವುದೆ ॥3॥

ಲಿಂಗಾಂಗದೊಳಗಿರುವ ಅನುಭವವ ತಿಳಿಯದೆ ।
ಅಂಗಲಿಂಗದ ನೆಲೆಯು ಗುರುತರಿಯದೆ ॥
ಜಂಗಮಸ್ಥಾವರದ ಹೊಲಬನರಿಯದ ಇಂಥ ।
ಭಲಸಿ ಮುಕ್ಕುಗಳೆಲ್ಲ ಲಿಂಗವಂತರಹುದೆ ॥4॥

ವೇಷಭಾಷೆಯ ಕಲಿತು ಗೋಸಾವಿಯ ಕಡೆಗಿಟ್ಟು ।
ಆಸೆಯನು ತೊರೆಯದೆ ತಪವ ಮಾಡಿ ॥
ವಾಸನೆಯ ಗುರುತಿನಾ ಹೊಲಬನರಿಯದ ಇಂಥ ।
ವೇಷಧಾರಿಗಳು ಸಂನ್ಯಾಸಿಗಳು ಅಹುದೆ ॥5॥

ಆರುಚಕ್ರದ ನೆಲೆಯು ಅಷ್ಟಾಂಗಯೋಗದೊಳು ।
ಮೂರು ಮೂರ್ತಿಯು ಮೂರು ಕಡೆಗೆ ನಿಲಿಸಿ ॥
ಕಾರುಣ್ಯನಿಧಿ ಕಾಗಿನೆಲೆಯಾದಿಕೇಶವನ ।
ಸೇರಿ ಭಜಿಸಿದವರಿಗೆ ಯಮನ ಕೊಲೆಯುಂಟೆ ॥6॥

ಇಲ್ಲಿ ದೇವಬ್ರಾಹ್ಮರನ್ನೂ ಬಿಟ್ಟಿಲ್ಲ, ಲಿಂಗವಂತರನ್ನು ಬಿಟ್ಟಿಲ್ಲ, ಕೇವಲ ಜಾತಿ ಲಾಂಛನ, ವಂತ ಪ್ರದರ್ಶನದ ಡಂಭಾಚಾರವೆ ವಿನಾ ಅಂತರಂಗದ ಅರಿವಿನ ಬೆಳಕನ್ನು ಅರಿತ ಗುರುತಲ್ಲ. ಪಂಚಮರೆಂದು ಸಮಾಜ ಹೆಸರಿಸಿದ ಅಂತ್ಯಜರನ್ನು ಕಂಡು, ಪಂಚೆಯ ತುದಿ ಹೊಟ್ಟೆಗೆ ಸಿಕ್ಕಿಸಿ ಪಕ್ಕಕ್ಕೆ ನೆಗೆದು, ಹಾದಿಬಿಡಿ, ಹಾದಿಬಿಡಿ, ಎಂದು "ಮಡಿಮಡಿ" ಯೆಂದು ಹೆಜ್ಜೆ ಹೆಜ್ಜೆಗೂ ಹಾರುವ, ಮಡಿ ನೀರು ಮಡಿನೀರು ಎಂದು ನೀರನ್ನು ಚಿಮುಕಿಸಿಕೊಂಬವರನ್ನು ಕಂಡು ಕನಕದಾಸರು ಹಾಸ್ಯ ಮಾಡುತ ಗಂಭೀರವಾಗಿ ನುಡಿದಿದ್ದಾರೆ ಬದುಕಿನ ಕಟು ಸತ್ಯವನ್ನು ಕಾಗಿನೆಲೆಯಾದಿಕೇಶವ ರಕ್ಷಿಸುನಮ್ಮನನವರತವೆಂದು ಬೇಡಿ "ತೊಲಗುವರು ಕಡೆಕಡೆಗೆತಾ ಹೊಲೆ । ಹೊಲೆಯನಂತ ಕಳೆವಳಿಸಿ ಮೂತ್ರದ । ಬಿಲದೊಳಗೆ ಬಂದಿಹುದಕಾಣದೆ ಬರಿದೆ ಮುನನಗೊಂದು ॥ ಜಲದೊಳಗೆ ಮುಳುಗಿದರೆ ತೊಲಗದು ಹೊಲೆಗೆಲಸವೀ ದೇಹದೊಳು" ಎಂದು ನುಡಿದಿದಾರೆ (ಇದು ಈ ಹಿಂದೆ ಹೇಳಿದ ಕಬೀರನ ಮಾತನ್ನು ಪುಷ್ಟೀಕರಿಸುತ್ತದೆ) ಹೊಲೆ ಹೊಲೆ ಯಾವುದು ಹೊಲೆ ? ಹುಟ್ಟಿನ ಹೊಲೆತನಕ್ಕಿಂತ ಉತ್ತಮ ಜನ್ಮಜಾತರೆಂದು ಹೇಳಿಕೊಂಬುವರು ಮಾಡುವ ಹೊಲೆಗೆಲಸ ಆದು ಹೊಲೆತನಕ್ಕೂ ಹೇಯವಾದದ್ದು ಅಲ್ಲವೆ ? ಇದು ಕನಕದಾಸರ ಮಾನವೀಯತೆಯ ನುಡಿಮುಡಿತ. ಎಂಜಲೆಂಜಲು ಎಂಬರಾನುಡಿ ಎಂಜಲಲ್ಲವೆ ? ಎಂದು ಹೇಳುತ್ತ ವಿಪ್ರರು ಕುಡಿದ ಹಾಲು ಕರುವಿನ ಎಂಜಲೆನಿಸದೆ, ಎಂದೆನ್ನುತ ಸೂಕ್ಷ್ಮ ರೀತಿಯಲ್ಲಿ ಮೇಲುವರ್ಗದ ಕರ್ಮವನ್ನು ಲೇವಡಿ ಮಾಡುವ ಅವರ ಶೈಲಿ ಅನನ್ಯ, ಅನನುಕರಣೀಯ. 'ಎಲ್ಲಾರು ಮಾಡುವುದು ಹೊಟ್ಟೆಗಾಗಿ । ಗೇಣುಬಟ್ಟೆಗಾಗಿ'

ಪಾಡೆಂತೂ ವರ್ಗಗಳವರತ್ತ ಕಣ್ಣಿಟ್ಟು ಹಾಡಿದೆ. ಹರಿದಾಸರೆಲ್ಲರೂ ಈ ಬಗ್ಗೆ ಸಾರಿ ಹೇಳಿದ್ದಾರೆ. ಪುರಂದರದಾಸರಿಂದ ಹಿಡಿದು ಕ್ರಿ. ಶ. ಉತ್ತರಾರ್ಧದ ಜಗನ್ನಾಥರಾಯ ರವರೆವಿಗೆ

ಹೊಲೆಯ ಹೊರಗಿಹನೆ ಊರೊಳಗಿಲ್ಲವೆ
ಸಲೆ ಶಾಸ್ತ್ರವನು ತಿಳಿದು ಬಲ್ಲವರು ನೋಡಿ ॥ಪ॥

ಭಾಳದಲಿ ಭಸಿತ ಭಂಡಾರವಿಡದವ ಹೊಲೆಯ ।
ಕೇಳಿ ಸಲೆಶಾಸ್ತ್ರವನು ತಿಳಿಯದವ ಹೊಲೆಯ ॥
ಆಳಾಗಿ ಅರಸಂಗೆ ಕೈಮುಗಿಯದವ ಹೊಲೆಯ ।
ಸೂಳೆಯರ ಕೂಡುವಾತನೇ ಶುದ್ಧ ಹೊಲೆಯ ॥1॥

ಆಶೆಯನು ತೋರಿ ಭಾಷೆಗೆ ತಪ್ಪುವವ ಹೊಲೆಯ ।
ಲೇಸು ಉಪಕಾರಗಳನರಿಯದವ ಹೊಲೆಯ ॥
ಮೋಸದಲಿ ಪ್ರಾಣಕ್ಕೆ ಮುನಿಯುವವನೇ ಹೊಲೆಯ ।
ಹುಸಿಮಾತನಾಡುವವನೇ ಸಹಜ ಹೊಲೆಯ ॥2॥

ಕೊಂಡ ಋಣವನು ತಿರುಗಿ ಕೊಡಲರಿಯದವ ಹೊಲೆಯ ।
ಭಂಡಮಾತುಗಳಾಡುವವನೆ ಹೊಲೆಯ ॥
ಗಂಡ-ಹೆಂಡಿರ ನಡುವೆ ಭೇದಗೈವವ ಹೊಲೆಯ ।
ಹೆಂಡರಿಟ್ಟಿಗೆ ನಡೆವ ಹೇಡಿಹೊಲೆಯ ॥3॥

ಪರಧನಕೆ ಪರಸತಿಗೆ ಅಳುಪಿದವನೇ ಹೊಲೆಯ ।
ಗುರು-ಹಿರಿಯರನು ಕಂಡು ಎರಗದಿದ್ದವ ಹೊಲೆಯ ।
ಅರಿತು ಆಚಾರವನು ಮಾಡದಿದ್ದವ ಹೊಲೆಯ ।
ಪುರಂದರವಿಠಲನನು ನೆನೆಯದವ ಹೊಲೆಯ ॥4॥

ಇಲ್ಲಿ ಕನಕದಾಸರಷ್ಟು ಕಟುವಾದ ನಿಂದನೆ ಇಲ್ಲ! ಪುರಂದರದಾಸರು ಬ್ರಾಹ್ಮಣಿಕೆಯನ್ನು ಪ್ರತಿಪಾದಿಸುವಂತೆ ಕಾಣುತ್ತದೆ. ಭಾಳದಲಿ ಭಸಿತ ಭಂಡಾರವಿಡದವ ಹೊಲೆಯನೆಂದರನ್ನು ವಲ್ಲಿ; ಆದರೆ ಅದು ಹಾಗಲ್ಲ. ಪುರಂದರದಾಸರಂಥ ಪರಮಾತ್ಮ ಭಕ್ತರಿಗೆ ಹರಿದಾಸರಿಗೆ ಜಾತಿ ಕುಲವಾವುದೂ ಹಿಗ್ಗು-ಕುಗ್ಗು ತರುವುದಿಲ್ಲ ; ಅದನ್ನವರು ಮನಸ್ಸಿಗೂ ತಾರರು. ಪುರಂದರವರ್ಕರ ಪೂಜಾತತ್ವ ಇಲ್ಲಿ ಗಮನಿಸಿ ;

ಹೊಲೆಯ ಬಾರಾನೆಂದು ಒಳಗೆ ದೇವರಮಾಡಿ ।
ಗಣಗಣ ಗಂಟೆಯಬಾರಿಸುವುದೇತಕಯ್ಯ ।

ತನುವಿನ ಕೋಪ ಹೊಲೆಯಲ್ಲವೆ ।
ಹೊರಗಿದ್ದ ಹೊಲೆಯನ ಒಳಗೆ ಬಚ್ಚಿಟ್ಟುಕೊಂಡು ।
ಇದಕೇನು ಮದ್ದು ಶ್ರೀಪುರಂದರವಿಠಲ ॥

"ಹಲವು ಓದಿದರೇನು ಹಲವು ಕೇಳಿದರೇನು । ಜಲದೊಳಗೆ ಮುಳುಗಿ ಕಳಿಶಿದ್ದ ರೇನು । ಚೆಲುವ ದೇವನೊಳು ಎರಕವಿಲ್ಲದನಕ......" ಎಂದವರೂ ಪುರಂದರರೆ.

ಹರಿದಾಸರು ವರ್ಣಾಶ್ರಮ ವ್ಯವಸ್ಥೆಗೆ ಗೌರವ ತೋರಿದರೂ ಇಲ್ಲಿನ ಕೆಲವು ಕುರುಡು ನಂಬಿಕೆ, ವೇದದ ಹೆಸರಿನಲ್ಲಿ ಸುಳ್ಳು ಹೇಳುವಿಕೆ, ಹುಟ್ಟಿನಿಂದ ನಿರ್ಧರಿಸುವ ಜಾತಿಯನ್ನು ಬಹಿರಂಗವಾಗಿ ಹೀಗಳೆದರು. ಭಕ್ತಿಮಾರ್ಗವೊಂದೆ ಎಲ್ಲರಿಗೂ ಸಮಾನ ಈ ವಿಚಾರದಲ್ಲಿ ಕನಕನಿಗಾಗುತ್ತಿದ್ದ ಅನ್ಯಾಯವನ್ನು ವ್ಯಾಸರಾಯರು, ಪುರಂದರ–ವಾದಿರಾಜತೀರ್ಥರೂ ಪ್ರತಿಭಟಿಸಿದರು. ಗೀತೆ ನಾರದ ಭಕ್ತಿಸೂತ್ರಗಳಲ್ಲಿ ಹೇಳಿಲ್ಲವೆ, ನಿಜವಾದ ಭಕ್ತನಿಗೆ ಯಾವುದೆ ಜಾತಿಯಿಲ್ಲೆಂದು.

"ಕುಲದ ಮೇಲೆ ಹೋಗ ಬೇಡ ಮನುಜ । ಕುಲವಿಲ್ಲ ಜ್ಞಾನಿಗಳಿಗೆ ।
ಆವಕುಲವಾದರೇನು ಆವನಾದರೇನು ಆತ್ಮ ಭಾವವರಿತಮೇಲೆ"

ಎಂದು ನುಡಿಯುವ ಪುರಂದರರ "ಕನಕದಾಸನ ಮೇಲೆ ವ್ಯಾಸಮುನಿ ದಯಮಾಡಲು ಮಂಠದವರೆಲ್ಲ ದೂರಿಕೊಂಬರು" ಎಂಬ ಕೃತಿ ಸ್ವಲ್ಪಮಟ್ಟಿಗೆ ಆಗ ನಡೆಯುತ್ತಿದ್ದ ಅನ್ಯಾಯ, ಉಪಟಳವನ್ನು ತಿಳಿಸಲಿತ್ತುತ್ತದೆ. ಅಂಥ ಅನೇಕ ರಚನೆ ಕಾಲಗರ್ಭ ಸೇರಿದ್ದಾತು ಕನಕನ ನೋವಿನ ಕೂಗನ್ನು ಅಭಿವ್ಯಕ್ತಿಸುವ ಅವನ ಕೃತಿಗಳೂ ಅದೇ ಕೂಪ ಕಂಡಿರಬೇಕೆಂದೂ ಅನ್ನಿಸುತ್ತದೆ. ವಿಜಯದಾಸರಂತೂ "ಹೊಲೆಯ ಸುಳಾದಿ" ಯೆಂಬ ದೀರ್ಘ ಸುಳಾದಿಯನ್ನೆ ಬರೆದು ಸಮಾಜದ ಬೂಟಾಟಿಕೆಯವರನ್ನು ವಿಡಂಬನೆ ಮಾಡಿದ್ದಾರೆ.

## ಸ್ತ್ರೀಯರ ಬಗ್ಗೆ ಹರಿದಾಸರ ದೃಷ್ಟಿ

ಇದಿಷ್ಟು ಜಾತಿಪದ್ಧತಿಯ ಬಗ್ಗೆ ಹರಿದಾಸರು ಮಾಡಿರುವ ವಿವೇಚನೆಯ ಸಂಕ್ಷಿಪ್ತ ಅವಲೋಕನವಾದರೆ ಇನ್ನು ಸ್ತ್ರೀಯರ ಬಗ್ಗೆ ಹರಿದಾಸರಿಗೆ ಇದ್ದ ದೃಷ್ಟಿಕೋನ ಅವರ ಕೃತಿಗಳ ಮೂಲಕ ಅವಲೋಕಿಸಬಹುದಾಗಿದೆ. ವಚನಕಾರರಂತೆ ಹರಿದಾಸರು ಹೆಣ್ಣಿಗೆ ಹಾಗೂ ಅವರ ಆಧ್ಯಾತ್ಮ ಸಾಧನೆಯು ಪ್ರಗತಿಗೆ ಪ್ರಾಮುಖ್ಯ ನೀಡಲಿಲ್ಲ. ಹೆಣ್ಣಿಗೆ ಸ್ವಾತಂತ್ರ್ಯವಿರಲಿಲ್ಲ. ಹರಿದಾಸಪಂಥ-ಸ್ತ್ರೀಯರಿಗೂ ತೆರೆದಿತ್ತು. ಆದರೆ ಅಲ್ಲಿ ಬೆಳಗಿದ ಸ್ತ್ರೀಯರು ಎದ್ದು ಕಾಣುವಂಥವರು, ಒಬ್ಬರು, ಇಬ್ಬರು. ಪುರಂದರದಾಸರ ಹೆಂಡತಿ ಸರಸ್ವತಿ ಹಾಗೂ ಮಗಳಾದ ರುಕ್ಮಿಣಿ ದಾಸರಪಥ ಆದರ್ಶವನ್ನು ಅನುಸರಿಸಿದರೆಂದು, ಕೀರ್ತನಗಳನ್ನು ಹಾಡಿದರೆಂದೂ ತಿಳಿಯಬರುತ್ತದೆ. ನವಕೋಟಿ ನಾರಾಯಣನೆನಿಸಿ

ಲೋಭಿಯಾಗಿದ್ದ ಶೀನಪ್ಪ ನಾಯಕನನ್ನು ಪುರಂದರದಾಸರಾಗಿ ಮಾಡಿದವಳೆ ಅವರ ಪತ್ನಿ ಸರಸ್ವತಿ ಹಾಗೂ ಆಕೆಯ ಸಾತ್ವಿಕ ಗುಣಗಳು. ಇದನ್ನು ದಾಸರೆ ಹಾಡಿದ್ದಾರೆ:

"ಆದದ್ದೆಲ್ಲ ಒಳಿತೆ ಆಯಿತು ನಮ್ಮ ಶ್ರೀಧರ ಸೇವೆಗೆ ! ಸಾಧನ ಸಂಪತ್ತಾಯಿತು ..... ಹೆಂಡತಿ ಸಂತತಿ ಸಾವಿರವಾಗಲಿ ದಂಡಿಗೆ ಬೆತ್ತ ಹಿಡಿಸಿದಳಯ್ಯ..."

೧೮ನೇ ಶತಮಾನದಲ್ಲಿದ್ದ ಹೆಳವನಕಟ್ಟೆ ಗಿರಿಯಮ್ಮ ಹರಿದಾಸ ಪರಂಪರೆಯಲ್ಲಿ ಬಂದು ಅನೇಕ ಹಾಡುಗಳನ್ನು ರಚಿಸಿ ಹಾಡಿದಾಳೆ. ಗಿರಿಯಮ್ಮನಿಗೆ ಗೋಪಾಲದಾಸರು ರಂಗೋಲಿಯಲ್ಲಿ ಬಾಲಗೋಪಾಲನ ಚಿತ್ರ ಬಿಡಿಸಿ ಕೊಟ್ಟು ಅನುಗ್ರಹಿಸಿದರು. ಇದರಿಂದ ಹರಿದಾಸರಲ್ಲಿ ಸ್ತ್ರೀಯರ ಬಗ್ಗೆ ಅಂಥ ಪ್ರತಿಬಂಧಕ ದೃಷ್ಟಿಯಿರಲಿಲ್ಲವೆಂದೆನ್ನಬಹುದು. ಇಷ್ಟೆಲ್ಲ ಆದರೂ, ಅವರು ಹೆಣ್ಣು ಸಮಾಜದಲ್ಲಿ ಪ್ರಮುಖ ಸ್ಥಾನ ಪಡೆಯಲು ಅವಳಿಗೆ ಅವಕಾಶದೊರಕಿಸಿ ಕೊಡುವ ದಿಸೆಯಲ್ಲಿ ಶ್ರಮಿಸಲಿಲ್ಲ ; ಹೆಣ್ಣು ತಾಯಿ, ಕುಲಸತಿ ಎಂದಷ್ಟೆ ಪರಿಗಣಿಸಿ ಗೌರವಿಸಿದರು. ಹಾಗೆಯೇ ಹೆಣ್ಣು ಹೊನ್ನು ಮಣ್ಣು ಇವೆಲ್ಲ ಅಸ್ಥಿರ, ಭಂಗುರವೆಂದೂ ಸಾರಿದರು. ವೇದ, ಮನುಸ್ಮೃತಿಯಲ್ಲಿ ತಿಳಿಸಿರುವಂತೆ "ನಸ್ತ್ರೀ ಸ್ವಾತಂತ್ರ್ಯಮರ್ಹತಿ" ಎಂಬ ನುಡಿಯ ಪ್ರಕಾರ ಹೆಣ್ಣಿನ ತೀಕ್ಷ್ಣಮತಿ, ನ್ಯಾಯ ತೀರ್ಮಾನ ದೃಷ್ಟಿಯನ್ನು ನಂಬಲಿಲ್ಲ. ಮುಕುತಿಯ ಮಾರ್ಗಕ್ಕೆ ಹೆಣ್ಣು ಅಡ್ಡಿಯೆಂದೂ ಹಾಡಿದಾರೆ. ಇದರಿಂದ ಹೆಣ್ಣನ್ನು ಕಂಡರೆ ದ್ವೇಷವಿತ್ತೆ ಎಂದೂ ಅನ್ನಿಸದಿರದು. ಅವಳು ಪವಿತ್ರಳಾಗಿರಬೇಕು, ಒಳ್ಳೆಯ ಬಾಳೆಹಣ್ಣಿನಂತೆ ಅವಳ ಗುಣಸ್ವಭಾವ ಸಿಹಿ ಯಾಗಿರಬೇಕು. ಅವಳು ಪರಪುರುಷನನ್ನು ಮನದಲ್ಲೂ ನೆನೆಯದೆ ಪತಿಗೆ ತನ್ನನ್ನು ಸಮರ್ಪಿಸಿಕೊಳ್ಳಬೇಕು. ಅಲೆಯುವ ಹೆಂಗಸನ್ನು ನಂಬಬೇಡೆನ್ನುತ್ತಾರೆ ಹರಿದಾಸರು. "ಗುರುಹಿರಿಯರಲಿ ನಮ್ರತೆ, ಭಯಗೌರವದಿಂದಿರಬೇಕು". ಹರಿದಾಸರು ಘೋಷಿಸಿರು ವುದೆ ಹೀಗೆ : ಹೆಣ್ಣು ಪಾರ್ವತಿದೇವಿ, ಅರುಂಧತಿ, ಲಕ್ಷ್ಮೀದೇವಿಯರಂತೆ ಕರುಣೆಯ ನೆಲೆಯಾಗಿ ಸಾಗರದಂತೆ ಪವಿತ್ರ ಜೀವನ ನಡೆಸಬೇಕು. ಇದು ಹರಿದಾಸರ ಹೆಣ್ಣಿನ ಬಗೆಗಿನ ನೋಟ, ವ್ಯಾಖ್ಯೆ. ಹಾಗೆಂದ ಮಾತ್ರಕ್ಕೆ ಅವರು ಗಂಡನ್ನೂ ಬಿಟ್ಟಿಲ್ಲ. ಪರಸತಿ ಗಳಿಂಪ್ಪರವನನ್ನು ಖೋಡಿಮಾನವನೆಂದು ಬೈದಿದ್ದಾರೆ. ಗಂಡು-ಹೆಣ್ಣು ಇಬ್ಬರೂ ಪರಸ್ಪರ ಹುಖಂಫದಲ್ಲಿರಬೇಕೆಂಬುದೆ ಹರಿದಾಸರ ಅಭಿಪ್ರಾಯ. ಹರಿದಾಸರು ಹಾಗೂ ಶರಣರಿಬ್ಬರೂ ವ್ಯಕ್ತಿ ಸಮಾಜದ ನಡತೆ, ವರ್ತನೆಗಳಿಗೆ ಸದಾಚಾರಕ್ಕೆ ತುಂಬ ಮಹತ್ವ ನೀಡಿದಾರೆ. 'ಮನಶುದ್ಧಿಯಿಲ್ಲದವನಿಗೆ ಮಂತ್ರದ ಫಲವೇನು ! ತನು ಶುದ್ಧಿಯಿಲ್ಲದವಗೆ ತೀರ್ಥದ ಫಲವೇನು ? ಹೊರಗೆ ಮಿಂದು ಒಳಗೆ ಮಿಹಾಯಿದವನ ಕಂಡು ಬೆರಗಾಗಿ ನಗು ತ್ತಿದ್ದ ಪುರಂದರವಿಠಲ..." ಸದಾಚಾರ, ಶೀಲವಂತಿಕೆ, ಇವುಗಳಿಗೆ ಯಾವಾಗಲೂ ಗೌರವ. "ಆಚಾರವಿಲ್ಲದ ನಾಲಗೆ, ನಿನ್ನ ನೀಚಬುದ್ಧಿಯ ಬಿಡುನಾಲಗೆ" ಎನ್ನುವ ಪುರಂದರರು ಹರಿಯನ್ನು ನೆನಸುವುದೆ ಸದಾಚಾರವೆಂದೂ ತಿಳಿಸುತ್ತಾರೆ. ಇನ್ನೊಬ್ಬರ ಉನ್ನತಿ-ಯೋಗಕ್ಷೇಮ ಗಮನಿಸುವುದೂ ಸದಾಚಾರವೆನ್ನಿಸುತ್ತದೆ. ವಚನಕಾರರು

ಪೇಳುವ "ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ" ಎಂಬಂತೆಯೆ ಹರಿದಾಸರೂ ರಾವಣ, ನಹುಷ, ಕೀಚಕರ ಉದಾಹರಣೆ ನೀಡಿ ಪರಸತಿಗೆ ಕಣ್ಣು ಹಾಯಿಸಿ ಕೆಡ ಬೇಡಿರೆಂದು ಎಚ್ಚರಿಸುತ್ತಾರೆ.

ಮನುಷ್ಯ ಆಚಾರವಂತನಾಗಿರಬೇಕಾದರೆ, ಗೌರವಾನ್ವಿತ ಬಾಳ್ವೆ ನಡೆಸಬೇಕು. "ಮಾನಭಂಗವ ಮಾಡಿ ಮತ್ತೇನುಪಚಾರಗಳ" ನೆಂಬಂತೆ, ಎದುರು ಹೀಗಳೆದು ಅನಂತರ ಉಪಚರಿಸಿದರೇನು ಪ್ರಯೋಜನ. ಇದನ್ನೆ ವಚನಕಾರರು 'ಇದಿರ ಹಳಿಯಲು ಬೇಡ' ಎಂದದ್ದು. ಹರಿದಾಸ-ಶರಣರಿಬ್ಬರೂ ಒಂದೇ. ಅಂತರಂಗಶುದ್ಧಿ-ಬಹಿರಂಗ ಶುದ್ಧಿಗೆ ಮನಗೊಟ್ಟು ನಡೆದವರು. ಕೆಟ್ಟಸ್ವಭಾವದ ಜನರನ್ನ ಜಾಲಿಯ ಮರಕ್ಕೆ ಹೋಲಿಸುವ ದಾಸರು "ಜಾಲಿಯ ಮರದಂತೆ ಜನರು ನೆರಳು ನೀಡರು, ಹಣ್ಣು, ಹೂ ಕೊಡವ ಮುಳ್ಳು ಮೆರೆದಂಥವರು ಅವರು ಎನ್ನುತ್ತಾರೆ. ಆಚಾರವೆಂದರೆ ಶುದ್ಧಿ, ಹಾಗೂ ತಾಳ್ಮೆ, ತಪಸ್ಸು-ಆಹಾರಶುದ್ಧಿ. ಶಮದಮ, ಅನಂತರ ಯೋಗ ಹೀಗೆ ಒಂದು ಕಸ್ಸು ಔನ್ನತ್ಯಕ್ಕೇರಿಸಿಕೊಂಬ ಹಾದಿ. ಆದನ್ನೆ ಶರಣರು "ದಯೆಯಿಲ್ಲದ ಧರ್ಮ ಯಾವುದಯ್ಯ" ಅಂದದ್ದು. ದಯೆಗೆ, ಮಾನವೀಯತೆಯ ಅಂತಃಕರಣಕ್ಕೆ ಹರಿದಾಸರು ತುಂಬ ಮಹತ್ವ ನೀಡಿದ್ದಾರೆ. "ಧರ್ಮವೇ ಜಯವೆಂಬ ದಿವ್ಯಮಂತ್ರ" ಕೀರ್ತನೆಯಲ್ಲಿ ಸಾಧಕನು ತನ್ನ ಬದುಕಿನಲ್ಲಿ ಬರುವ ಕಷ್ಟಪರಂಪರೆಗಳನ್ನು ತಾಳ್ಮೆಯಿಂದ ಸಹಿಸಿ ಕೊಳ್ಳಬೇಕೆಂದು ತಿಳಿಸುವ ದಾಸರು, "ತಾಳುವಿಕೆಗಿಂತ ತಪವು ಇಲ್ಲ" ಎನ್ನುತ್ತಾರೆ ವಾದಿರಾಜರು. ಪ್ರಪಂಚದ ಎಲ್ಲ ಧರ್ಮ ಹೇಳುವುದೂ ಇದನ್ನೆ. ಸಹನೆ, ಸಹಿಷ್ಣುತೆ. ಉತ್ತಮ ಆಲೋಚನೆ, ಕ್ರಿಸ್ತನೇ ತನ್ನನ್ನು ಶಿಲುಬೆಗೇರಿಸುವಾಗ "ದೇವರೆ, ಅವರನ್ನು ಕ್ಷಮಿಸು, ತಾವೇನು ಮಾಡುತ್ತಿದ್ದೇವೆಂದು ಅರಿಯದವರು" ಎನ್ನಲಿಲ್ಲವೆ ?

ಪುರಂದರದಾಸರು ನುಡಿವ ಬಗೆಯೇ ಬೇರೆ :

"ಹರಿಯ ನೆನೆಯದ ನರಜನ್ಮವೇಕೆ"

ಹರಿಯ ಕೊಂಡಾಡದ ನಾಲಗೆಯೇಕೆ-ಎಂಬ ಕೃತಿಯ ಈ ಸಾಲುಗಳು।

ಸತ್ಯ-ಶೌಚವಿಲ್ಲದ ಆಚಾರವೇಕೆ।
ಚಿತ್ತಶುದ್ಧಿಯಿಲ್ಲದ ಜ್ಞಾನವಿನ್ನೇಕೆ ॥
ಭಕ್ತಿ-ಭಾವವಿಲ್ಲದ ದೇವಪೂಜೆ ಏಕೆ।
ಉತ್ತಮರಿಲ್ಲದ ಸಭೆಯು ಇನ್ನೇಕೆ ॥

ಕ್ರೋಧವ ಬಿಡದಿಹ ಸಂನ್ಯಾಸವೇಕೆ।
ಆದರವಿಲ್ಲದ ಅನ್ನಛತ್ರವೇಕೆ ॥
ವೇದ-ಶಾಸ್ತ್ರವಿಲ್ಲದ ವಿಪ್ರತನವೇಕೆ।
ಕಾದಲಂಜುವನಿಗೆ ಕ್ಷಾತ್ರ ತಾನೇಕೆ ॥

ಆಚಾರದಲ್ಲಿ ಒಂದಾದ ಮಡಿಯ ಬಗ್ಗೆ ವಿಜಯದಾಸರು ನುಡಿವುದಿದು :

"ಮಡಿ ಮಾಡಿಕೊಂಬ ಬಗೆ ತಿಳಿಯಬೇಕೊ ಮನುಜ
ಮಡುವಿನೊಳಗಿನ ಉದಕ ಜಡವಲ್ಲವೆ
ಮಡಿಎಂದೆನಿಸಿಕೊಂಬ ವಸ್ತ್ರ ತಾನೆ ಜಡವು
ಮಡಿ ಎಂತಾಯಿತು ಪೇಳೊ ಸದಾಚಾರನೆ ಎಂಬಂತೆಯೆ.

ಮಡಿ ಮಡಿ ಎಂದು ಮಂಮ್ಮಾರು ಹಾರುತಿ । ಮಡಿಯೆಲ್ಲಿ ಬಂದಿತೊ ಬಿಕನಾಸಿ ।
ಮಡಿಯು ನೀನೆ, ಮೈಲಿಗೆಯು ನೀನೆ । ಸಂಡಲಿ ನಿನ್ನ ಮಡಿ ಬಿಕನಾಸಿ......
ಚರ್ಮವ ತೊಳೆದರೆ ಕರ್ಮವು ಹೋಹುದೆ । ಮರ್ಮವ ತಿಳಿಯದೆ ಬಿಕನಾಸಿ
ಬೊಮ್ಮನಯ್ಯ ಪುರಂದರವಿಠಲನ ಪಾಡಿ । ನಿರ್ಮಲದಿ ಬಾಳಲೊ ಬಿಕನಾಸಿ ॥
ಸ್ನಾನ ಮಾಡಿದರಿನ್ನೇನು ಫಲವೊ । ಮೌನ ಮಾಡಿದರಿನ್ನೇನು ಫಲವೊ ।
ದಾನ ಮಾಡಿದರಿನ್ನೇನು ಫಲವೊ । ಸ್ನಾನ ಮೌನ ದಾನ ನಾನಾ ಕರ್ಮವೆಲ್ಲ ।
ಭಾನು ಉದಯದಲಿ ನೀನೆಷ್ಟು ಭಕುತಿಲಿ । ಶ್ರೀ ನಾರಾಯಣನೆಂಬೊ ನಾಮ ।
ಆನಂದವಾಗಿ ಒಮ್ಮೆ ಕೊನೆ ನಾಲಗೆಯಿಂದ । ನೀನನೆಯೊ ನೆನೆಯೊ ಮನವೆ ॥

ಪುರಂದರದಾಸರು ಬೂಟಾಟಿಕೆ ಜನರನ್ನು ಅವರ ಡಂಭತನ ಕುರಿತು ಹಂಗಿಸುವ ಬಗೆ ಗಮನಾರ್ಹ ಆದದ್ದು.

ಗೂಟನಾಮವ ಹೊಡೆದು ಗಂಡುಂತುಂಬಿಗೆ ಹಿಡಿದು ।
ಗೋಟಂಚಿನ ಧೋತರ ಮಡಿಯನುಟ್ಟು ॥
ದಾಟಂಗಾಲಿಡುತ ನಾ ಧರೆಯೊಳಗೆ ಬರಲೆನ್ನ ।
ಬೂಟಕತನ ನೋಡಿ ಭ್ರಮಿಸದಿರಿ ಜನರೆ ॥1॥

ಮನಸ್ಸಿನ ಶುದ್ಧಿ ಕುರಿತು ವಿಚಾರ ಮಾಡುವ ಹರಿದಾಸರು ನುಡಿವ ಮಾರ್ಮಿಕ ಮಾತುಗಳಿವು :

ಮಲವು ತೊಳೆಯ ಬಲ್ಲುದೆ । ಮನವ ತೊಳೆಯದನಕ ॥ಪ॥
ಹಲವು ನೀರಿನೊಳಗೆ ಪೊಕ್ಕು । ಹಲುಬಿದರಿನ್ನೇನು ಫಲ ॥ಅ.ಪ.॥
ತನುವ ನೀರೊಳಗದ್ದಿ ಫಲವೇನು ।
ಮನದಲ್ಲಿ ದೃಢಭಕುತಿ ಇಲ್ಲದ ಮನುಜರು ॥

ಅಂತೆಯೇ ಬೇರೆಬೇರೆ ಮತ ತಂತಮ್ಮ ಆಚಾರಕ್ಕೆ ಮನ್ನಣೆ ಇತ್ತಿರುವ ಹಾಗೆ ಹರಿದಾಸರೂ ನೀಡಿದಾರೆ : ಹರಿದಾಸನಾದವನಿಗೆ, ವೈಷ್ಣವನಿಗೆ, ಮಧ್ವನಿಷ್ಠನಿಗೆ ಅನುಸರಿಸಬೇಕಾದ ಆಚಾರಗಳ ಬಗ್ಗೆ ವಿಜಯದಾಸರು ಅನೇಕ ಸುಳಾದಿಗಳನ್ನು ರಚಿಸಿದ್ದಾರೆ. ಗೋಪಾಲದಾಸರು ವಿಜಯದಾಸರ ಪಥದಲ್ಲಿ ಮುಂದರಿದು ಆಚಾರಕ್ಕೆ, ಹರಿದಾಸ ಭಾವಕ್ಕೆ, ಮಾಧ್ವ ಸಂಪ್ರದಾಯಗಳಿಗೆ ತುಂಬ ಮಹತ್ವವಿತ್ತಿದ್ದಾರೆ.

ಹರಿಯಂ ನೆನೆಯೆ ನಾಲಗೆ ಪಾವನ. ಸಿರಿವಂದ್ಯೆಯಂ ಭಂಜಿಕೆ ಪಾವನ ।
ಉರದಿ ನಾಭಿಗೆ ನಾಮವನಿಡೆ ಪಾವನವೊ ॥
ಕೊರಳೊಳಂ ಶ್ರೀತುಲಸೀಮಣಿ ನಳಿನಾಕ್ಷವ್ಗಳಿರೆ ಪಾವನ ।
ಪರಮಂ ವೈಷ್ಣವರಿಗೆರಗಿದ ಶಿರಪಾವನವೊ ॥1॥

ಹರೇ ಗೋವಿಂದಾ ಎಂದೇಳು ಹತ್ತವತಾರವ ಪೇಳು ।
ಮೂಡಲದೆಸೆಗೆ ನಡೆ ।
ಗೋವಿಪ್ರ ತಂಳಸಿಗೆ ಎರಗಿ ಬಂದು ।
ನೈಋತ್ಯದಲ್ಲಿ ತೃಣವನಿಟ್ಟು ।
ಮಲ-ಮೂತ್ರಗಳ ಬಿಟ್ಟು ।
ಗಂರುಪರಂಪರೆಯೆಂದು ಪುರಂದರವಿಠಲನೆನ್ನು ॥

ಇಲ್ಲಿ ಯಾವ ಆಧುನಿಕ ಔಷಧ ಕ್ರಿಮಿನಾಶಕಕ್ಕಿಂತ, ಕಶ್ಮಲ ವಿಸರ್ಜಿಸುವಲ್ಲಿ ಹೇಗೆ ಅನುಸರಿಸಿದರೆ ಪರಿಸರ ಶುದ್ಧ ಆಗಿರುವುದೆಂಬುದನ್ನು ದಾಸರು ತಿಳಿಯ ಪಡಿಸುತ್ತಾರೆ,

ಹತ್ತ್ಯೆದು ಗಳಿಗೆಯು ಮೇಲೆ ಮತ್ತೈದು ಬರಲಿದ್ದು ।

(ರಾತ್ರಿಯಾದಾಗ-೨೦ ಘಳಿಗೆ)

ಚಿತ್ತಜನೈಯ್ಯನ ಚಿತ್ತದಿ ಧೇನಿಸಿ ।
ಅತ್ತಲುದಯಕ್ಕೆ ಗಳಿಗೆ ಎರಡರಲ್ಲಿ ಎದ್ದು ।
ನಿತ್ಯ ಸ್ನಾನವ ಮಾಡಿ ಆದಿತ್ಯಗರ್ಘ್ಯವನೀಯೆ ।
ಉತ್ತಮ ಜನಕೆಲ್ಲ ಮೆಚ್ಚಿದ ಪಾಪಗಳನ್ನು ।
ಉತ್ತರಿಸುವನೆಂದ ಪುರಂದರವಿಠಲ ॥

ಸ್ನಾನವಿಧಿ :

ಎರಡಂಗಳಿಗೆ ಬೆಳಗು ಇರಲಂ ಗೃಹಸ್ಥಗೆ ಸ್ನಾನ ।
ಕರವ ಮುಗಿದು ಮಾಡು ಸಂಕಲ್ಪವೇದ ।
ಪರಮಪುಣ್ಯ ಬ್ರಾಹ್ಮಣಧರ್ಮವೆಂದು ।
ಪುರಂದರವಿಠಲನು ಮೆಚ್ಚಿ ಪಾಲಿಸುವ ॥

ನೀಲವಸ್ತ್ರವಾಗದು ನಾರಿಯರ ಶಾಲಿಯಹಾಗದು ।
ಕಾಲ ಮೂರು ಕರ್ಮದಲ್ಲಿ ಕಾಲವಸ್ತ್ರವಾಗದು ।
ಆರ್ದ್ರವಸ್ತ್ರವಾಗದು ಆಜ್ಞೆ ಶ್ರೀಪುರಂದರವಿಟ್ಠಲನ ॥

ಆಂದವಿಲ್ಲದ ಅಶಕ್ತನಿಗೆ ಒಂದೇ ಅರಿವೆಯಿಂದ
ಮೈದೊಳೆದು ಮಡಿಯುಂಟ್ಟು ನಾಮಗಳಿಟ್ಟು ।
ನಿಂದೆ ಹಿಂಗಲೆಂದು ಮಾಡಿದ ಮನುಜಂಗೆ...

ಸಂಧ್ಯಾವಂದನ ಕಾಲ :

ನಕ್ಷತ್ರಗಳ ಕಂಡ ನರನಿಗೆ ಉತ್ತಮಸಂಧ್ಯೆ ।
ನಕ್ಷತ್ರ ಒಂದೆರಡು ಕಂಡ ನರನಿಗೆ ಮಧ್ಯಮಸಂಧ್ಯೆ ।
ನಕ್ಷತ್ರ ಒಂದನೂ ಕಾಣದ ನರನಿಗೆ ಅಧಮಸಂಧ್ಯೆ ।
ನಕ್ಷತ್ರ ಬಿಟ್ಟ ನರನನು ನಾರಾಯಣ ।
ಪುರಂದರವಿಠಲ ಬಿಡುವ ॥
ಕಂಡ ಸೂರ್ಯಗೆ ಸಂಧ್ಯೆ ಕಾಣದ ಸೂರ್ಯಗೆ ಸಂಧ್ಯೆ ಭೂ-।
ಮಂಡಲದಿ ಮಾಡದಿರಲು ಮಹಾ-।
ತ್ರ್ಯಂಡ ನೂರು ಹತ್ಯಾ ಮಾಡಿದ ಪಾಪ-ಶ್ರುತಿಸಾರುತಿದೆ ।
ಪುಂಡಗಾರ ನರಗೆ ।
ನರಕ ತಪ್ಪದು ಎಂದು । ಅಂಡಜಪತಿ ಪುರಂದರವಿಠಲ ಪೇಳ್ದ ॥

ಆಚಮನ :

೧. ಆಕಳ ಕಿವಿಗೆ ಎದೆ ಅಂಗೈ ಹಳ್ಳವಾಗಿರಬೇಕು ।
ಉದ್ದು ಮುಣುಗುವಂತೆ ಇರಬೇಕು ।
ನೀರು ಸಾಕಾಗದೆ ಹೆಚ್ಚು ಕಡಮೆ ಸಾಕೆಂಬಷ್ಟು ಕುಡಿದರೆ ।
ಸಾಕಾರ ಪುರಂದರವಿಠಲ ಮದ್ಯಸಮ ಮಾಡುವ ॥

೨. ಹಲವು ಕರ್ಮಗಳಿಗೆ ಹವಣು ಎರಡಾಚಮನ ।
ಮಲ-ಮೂತ್ರ ವಿಸರ್ಜನಕ್ಕೆ ಮಾಡು ಮೂರು ।
ನಲಿದು ಉಂಡಮೇಲೆ ನಾಲ್ಕು ।
ಲಲನೆಯ ಸಂಗಕ್ಕೆ ಹನ್ನೆರಡು ।
ಅಲ್ಲೆಂದೂ ಅವನು ಪುರಂದರವಿಠಲ ಆಚಮನವನು ಮಾಡೆ ॥

೩. ಆಪೋಶನ ಅಭ್ಯಂಜನ ಆಚಮನ ಮಾಡಲು ।
ತನ್ನೆಡಗೈಯಿಂದ ತಾನೆ ವರ್ತಿಸಲು ।
ಆ ಪುರುಷಂಗೆ ಆದ ಪುತ್ರರು ಮಡಿವರು ।
ಅಪತ್ತು ತಂದಂಬಿಡುವ ಪುರಂದರವಿಠಲ ॥

ಜಪ ವಿಧಾನ ॥

೧. ಬಿಡು ಮೌನಂಜಾ ಈ ಜಪವು ಸಿದ್ಧಿಗೆ ಬಾರದು ।
ತೊಡೆಯು ಕೆಳಗೆ ಕೈ ಹಿಂದೆ ಮುಂದೆ ಕೈಚಾಚಿ ।

ಬಿಡುತ ಮಂತ್ರಾರ್ಥ ನೋಡದಲೆ ।
ಅಡಿಗಡಿಗೆ ಜಪವ ಮಾಡೆ । ದೈತ್ಯರಿಗೆ ಆಹುದಯ್ಯಾ ।
ಒಡೆಯ ಪುರಂದರವಿಠಲನನೊಲಿಸಬೇಕಾದರೆ ।
ಹಿಡಿಯೊ ಈ ಪರಿ ಹೇಳಿದ ವಚನತತ್ತ್ವಗಳ ॥

೨. ಅನಾಮಿಕಾ ಮಧ್ಯದ ಎರಡನೆಯ ಗೆರೆ ಆದಿ ।
ಇನಿತು ಮಧ್ಯಾಂಗುಲಿ ಕೊನೆಗೆರೆ ಕೂಡಿಸಿ ।
ಮನುಮೂರ್ತಿ ಪರಿಮಾಣ ಅಂಗುಷ್ಠದಿಂದಲಿ ।
ಎಣಿಸು ತರ್ಜನಿ ಮೂಲ ಪರಿಯಂತರ ।
ಘನ ಹತ್ತು ಗೆರೆ ಜಪ ಪುರಂದರವಿಠಲಗೆ ।
ಮನದಿ ಅರ್ಪಿಸುತ ಗಾಯತ್ರಿಜಪವ ॥

೩. ಮಧ್ಯಾಂಗುಲಿಯ ಮೇಲೆ ಮಣಿಸರವಿಟ್ಟು ।
ಬದ್ಧ ಅಂಗುಟವಣಿಸಬೇಕು ।
ತಿದ್ದಿ ಅಂಗುಲಿ ಪಂಚ ಬೊಗ್ಗಿಸಿ ಇರಬೇಕು ।
ಭದ್ರವಾಗಿ ನಿಲಿಸಿ ನೀರು ಸೋರದೆ ಗಾಯತ್ರಿಯು
ಬುದ್ಧಿಪೂರ್ವಕದಿಂದ ಗೈಯುತಲಿರಬೇಕು ।
ಮುದ್ದು ಮೂರುತಿ ನಮ್ಮ
ಪುರಂದರವಿಠಲನ್ನ । ಎದ್ದದ್ದು ನೋಡುವ ಬಗೆ ಕಾಣಲುಬೇಕು ॥

ಎಡದ ಕೈಯಿಂದ ನೀರ ಎತ್ತಿ ಬಲದ ಕೈಯಲ್ಲಿಟ್ಟು ।
ಕುಡಿದರೆ ಆಗದಾಪೋಶನಕೆ ಮಂತ್ರದು ಮದ್ಯ ।
ಎಡೆಯನ್ನ ಗೋಮಾಂಸವೆಂದು ಶ್ರುತಿಸಾರುತಿದೆ ।
ಪೊಡವಿಯಲ್ಲಿ ಪುರಂದರವಿಠಲನಾಜ್ಞೆ

ಆಚಾರದ ವಿಧಿಗಳನೇಕವನ್ನು ದಾಸರು ಸಾರಿದ್ದಾರೆ. ಕುಂದದ ದೀಪ ನಂದಿಸಬಾರದು. ಅದು ಮಾಡಿದವನಿಗೆ ಕುಲನಾಶನವಂತೆ, ಪುರಂದರವಿಠಲನ ನಿರೂಪಣೆಯಿದು. ಮನೆಯಲ್ಲಿ ವಿಪ್ರ ಪಾದೋದಕದ ಹೆಸರಿಲ್ಲದಿದ್ದರೆ, ಮನೆಯಲ್ಲಿ ವೇದ ಪಾರಾಯಣ ಧ್ಯಾನ ಕೇಳದಿದ್ದರೆ, ಮನೆಯಲ್ಲಿ ಸ್ವಾಹಾಕಾರಸ್ವಧಾಕಾರ ಮಾಡುವುದಿಲ್ಲದಿದ್ದರೆ, ಆ ಮನೆ ಶ್ಮಶಾನಕೆ ಸಮ ಎಂದು ಬ್ರಾಹ್ಮಣನ ಅಗತ್ಯ ಕರ್ಮಗಳಾದ ವೇದಕರಣದ ಬಗ್ಗೆ ತಿಳಿಸುತ್ತಾರೆ. ಬ್ರಾಹ್ಮೀ ಮುಹೂರ್ತಕ್ಕೆ ಏಳಬೇಕು. ಇದು ಬ್ರಾಹ್ಮಣ-ಸದಾಚಾರಗಳಲ್ಲಿ ಒಂದು ಬೆಳಗಿನ ಝಾವ ಏಳುವುದು. ಶ್ರೀವಾದಿರಾಜರಂತೂ, ಭಕ್ತಿಭಾವನೆಯಿಂದ "ಬೆಳಗ ಝಾವದಿ ಬಾರೊ ಹರಿಯ ಚರಣ । ತೊಳೆದು ಜಲದಿ ತೀರ್ಥಪಾನ ಮಾಡುವೆನೊ" ಎಂದು ಹಂಬಲಿಸಿ ಕರೆಯುತ್ತಾರೆ. ಪುರಂದರದಾಸರು ಸಾರುವ ಪರಿ ಗಮನಿಸಿ:

ತಾಸು ಬಾರಿಸುತಿದೆ ಕೇಳಿಹರಿದಾಸರೆಲ್ಲ ! ತಾಸು ಬಾರಿಸುತಿದೆ ಕೇಳಿ ॥ಪ॥
ಹಾಸುವಂಚ ಸುಪ್ಪತ್ತಿಗೆಯಲಿ-ಹಗಲು-ಇರುಳು
ಹೇಸರಗತ್ತೆಯಂತೆ ಹೊರಳಿ-ಸ್ತ್ರೀಯಗೂಡ
ಬೇಸರದೆ ನಿತ್ಯವು ಉರುಳಿ !
ಈ ಪರಿ ಕಾಲವ ಕಳೆದೆಯೊ ಕಾಲ ಸ- !
ವಿಾಪವಾಯಿತಾಯಿತು ಎಂದೀಗಲಿ......

ಆಚಾರದಲ್ಲಿ ಬೂಟಿಕೆ, ಡಾಂಭಿಕತೆ ಬಗ್ಗೆ ಹಿಂದೆಯೆ ತಿಳಿಸಿದೆ. ಪುರಂದರದಾಸರ ಒಂದು ವಿವಕ್ಷೆಯೊಂದಿಗೆ ಈ ವಿವೇಚನೆಯನ್ನು ಸಧ್ಯಕ್ಕೆ ಮುಗಿಸಬಹುದೆನ್ನಿಸುತ್ತದೆ :

ಎಲ್ಲಾರು ಬಲ್ಲೆನೆಂಬುವರಲ್ಲ, ಅವಗುಣ ಬಿಡಲಿಲ್ಲ ॥ಪ॥
ಸೊಲ್ಲಿಗೆ ಶರಣರ ಕಥೆಗಳ ಪೇಳುತ
ಅಲ್ಲದ ನುಡಿಯನು ನುಡಿಯುವಿರಲ್ಲ
ಕಾವಿಯನುಟ್ಟು ತಿರುಗುವಿರಲ್ಲ ಕಾಮವ ಬಿಡಲಿಲ್ಲ ।
ನೇಮ ನಿಷ್ಠೆಗಳ ಮಾಡುವಿರಲ್ಲ ತಾಮಸ ಬಿಡಲಿಲ್ಲ ।
ತಾವೊಂದರಿಯದೆ ಆಗಮ ತಿಳಿಯದೆ ।
ಶ್ವಾನನ ಕುಳಿಯಲಿ ಬೀಳುವಿರಲ್ಲ ॥1॥

ಗುರುಗಳ ಸೇವೆ ಮಾಡಿದಿರಲ್ಲ ಗುರುತಾಗಲಿಲ್ಲ ।
ಪರಿಪರಿ ದೇಶವ ತಿರುಗಿದಿರಲ್ಲ ಪೊರೆಯುವರಿಲ್ಲ ॥
ಅರಿವೊಂದರಿಯದೆ ಆಗಮ ತಿಳಿಯದೆ ।
ನರಕ ಕೂಪದಲಿ ಬೀಳುವಿರಲ್ಲ ॥2॥

ಬ್ರಹ್ಮಜ್ಞಾನಿಗಳು ಎನಿಸುವಿರಲ್ಲ ಹಮ್ಮು ಬಿಡಲಿಲ್ಲ ।
ಸುಮ್ಮನೆ ಯಾಗವ ಮಾಡುವಿರಲ್ಲ ಸಂಶಯ ಬಿಡಲಿಲ್ಲ ॥
ಗಮ್ಮನೆ ಪುರಂದರವಿಠಲನ ಪಾದಕೆ । ಹಮ್ಮು ಬಿಟ್ಟು ನೀವೆರಗಲೆ ಇಲ್ಲ ॥3॥

ಇಲ್ಲಿ ಕೊನೆಯ ಸಾಲು ಸರ್ವಥಾ ಗಮನಾರ್ಹ. ಹೆಮ್ಮೆ ಹಮ್ಮನ್ನೂ ಒಳಗೊಂಡಿದೆ. "ಅಹಂದೂರ ತಸ್ಮೈ ಪದಾಂಭೋಜ ಯುಗ್ಮೇ ಪ್ರಣಾಮೋಗಜ್ಞಯಾ ಸೇವಾಂ ಕರೋಮಿ" ಎಂಬ ವಿನಯವೆ ಭಕ್ತನಿಗೆ ಬೇಕಾದ್ದು. ಅದೇ ಅವನ ಸದಾಚಾರ ದೈವ ಸಾಕ್ಷಾತ್ಕಾರ ಪಥ. ಮೇಲ್ಕಂಡ ಕೃತಿಯಲ್ಲಿ ಪುರಂದರರು ಪಂಡಿತರನ್ನು "ಪಿಂಡಾಂಡ ದೊಳಗಿನ ಗಂಡನ ಕಾಣದೆಯೆ ಮುಂಡೆಯರಾದರು ಪಂಡಿತರೆಲ್ಲ" ಎನ್ನುವಲ್ಲಿ ವಚನ ಕಾರರ ಪ್ರಭಾವವೂ ಗುರುತಿಸಬಹುದಾಗಿದೆ.

ಆಚಾರದಲ್ಲಿ ನಿಜವಾದ ವೈರಾಗ್ಯಕ್ಕೇ ಪ್ರಾಮುಖ್ಯ. ಅದನ್ನುಳಿದು 'ಉದರ ವೈರಾಗ್ಯವಿದು, ನಮ್ಮ ಪದುಮನಾಭನಲಿ ಲೇಶಭಕುತಿಯಿಲ್ಲ' ವಾದರೆ, ಅದರಿಂದ ಏನೂ ಪ್ರಯೋಜನವಿಲ್ಲವೆಂಬುದೆ ದಾಸರ ಘೋಷಣೆ. ಹರಿದಾಸರೆಯುಳ್ಳ, ವೈರಾಗ್ಯ ನಟಿಸುವವನನ್ನ ಕಂಡಿತು ವಿಜಯರಾಯರೂ, "ಹಣವೆ ನಿನ್ನಯ ಗುಣವ ನಾನೆಂತು ಬಣ್ಣಿಸ"ಲೆಂದು ಹಾಡುತ್ತಾರೆ. ಮಂತಥವರ್ಗಗಳ ಹೆಸರಲ್ಲಿ ಆಚಾರದ ನೆವ ಹೂಡಿ ಠಕ್ಕು ಠೌಳಿಯಾಡುವ ಪಂಡಿತರನ್ನು ಕಂಡೇ ಪುರಂದರದಾಸರು "ನಗೆಯು ಬರುತಿದೆ ಎನಗೆ"ದಿದ್ದು. ಶ್ರೀಹರಿಯನ್ನು ಭಕ್ತಿಯಿಂತವಾಗಿ ನೆನೆದು ಧ್ಯಾನಿಸುವ ಪ್ರತಿಸೊಲ್ಲೂ ಅವನಿಗೆ ಅರ್ಪಿತವಾಗುತ್ತದೆ ಹಾಗೂ ನಮ್ಮ ಬದುಕು ಸಾರ್ಥಕ ಆಗುತ್ತದೆ. ಇದೇ ಆತ್ಮೋನ್ನತಿಗೆ ಸಾಧಕವಾಗುತ್ತದೆ ಎನ್ನುತ್ತಾರೆ ಜಗನ್ನಾಥದಾಸರು, ತಮ್ಮ ಕೃತಿಯೊಂದರಲ್ಲಿ.

ಆಚಾರದ ಒಂದು ಅಂಗ, ಅತಿಥಿಸತ್ಕಾರ ಸಹ, ಇದು ಭಾರತೀಯ ಪರಂಪರೆಯಲ್ಲಿ ಬೆಳೆದು ಬಂದ ಸಂಸ್ಕೃತಿ. ಇದನ್ನು ಹರಿದಾಸರು ತಮ್ಮದೆ ಆದ ನೇರ ಧಾಟಿಯಲ್ಲಿ ತಿಳಿಸುತ್ತ, ಅತಿಥಿ ಸತ್ಕಾರದಿಂದ, ಅಶನವೀವುದರಿಂದ ಪುರಂದರ ವಿಠಲನ ಪೂಜೆ ಗೈದಂತೆಂದು ಹಾಡುತ್ತಾರೆ.

೧. ಅನ್ನಪಾನಾದಿಗಳೀಯೊ ಅಭ್ಯಾಗತ ಬ್ರಾಹ್ಮಣರಿಗೆ ।
ಅನ್ನಪಾನಾದಿಗಳೀಯೊ ಆ ಚಂಡಾಲಸಪ್ಚರಿಗೆ ।
ಅನ್ನಪಾನಾದಿಗಳೀಯೊ ಅಂಧ-ದೀನ-ಕೃಪಣರಿಗೆ ।
ಹಸಿವೆಗೆ ಹಾಗವನ್ನರ್ಪಿಸೊ ಪುರಂದರವಿಠಲಗೆ ॥

೨. ಚೋರನಾದರೂ ಚಂಡಾಲನಾದರೂ । ಬ್ರಹ್ಮಘ್ನ-ಪಿತೃಘಾತಕನಾದರೂ ।
ಆವನಾದರೂ ಮಧ್ಯಾಹ್ನಕಾಲಕೆ । ಅತಿಥಿಯಾಗಿ ಮನೆಗೆ ಬಂದರೆ ।
ತಂತಿಸಿ ಅನ್ನವನಿಟ್ಟು ಸ್ವಾಮಿ । ಪುರಂದರವಿಠಲಗರ್ಪಿಸಬೇಕು ॥

೩. ಅತಿಥಿಯಾಗಿ ಮಧ್ಯಾಹ್ನಕಾಲದಿ ಅವ ಬಂದು ಉಂಡರೆ ।
ಸ್ವರ್ಗವೀವ ಪುರಂದರವಿಠಲ । ವೈಕುಂಠವನೀವ ॥

ಇಷ್ಟೆಲ್ಲ ಆಚಾರದ-ವಿಧಿಗಳ ಬಗ್ಗೆ ನುಡಿವ ದಾಸರು ಮನುಷ್ಯನ ದಿನ ನಿತ್ಯ ಕ್ರಿಯೆ-ಅವುಗಳ ಆಚರಣೆ ಕೂಡ ಗಮನಿಸದಿಲ್ಲ ಹಾಗೂ ಅದಕ್ಕೆ ಆಚಾರದ ಲೇಪದೊಂದಿಗೆ ಆರೋಗ್ಯದ ಸೂಚನೆ ನೀಡದೆಯೂ ಇಲ್ಲ.

ಮಲ-ಮೂತ್ರ ಮಾಡುವಾಗ ಕರದಲ್ಲಿ ಜಲವಿರೆ ।
ಮಲಕೆ ಸಮಾನ ಅದು ಶುದ್ಧವಲ್ಲ ।
ವಿಲಸಿತ ಕರ್ಮವಾಚರಿಸಿ ಹರಿಯ ನೆನೆಯೆ ।
ಒಲಿವ ಪುರಂದರವಿಠಲ ॥

ನುಡಿವೆ ಲಿಂಗಶೌಚಕೊಮ್ಮೆ ಗುದಕ್ಕೆ ಮೂರು ।
ನೆಲ್ಲಿಕಾಯಿಯಷ್ಟು ಮಣ್ಣ ಹಚ್ಚಿ ।
ನೀರೊಳು ತೊಳೆದು ಬಲದ ಕೈಗೆ ಐದು ಮಣ್ಣು ।
ಎಡದ ಕೈಗೆ ಏಳು ಮಣ್ಣು । ಜೋಡುಪಾದಕ್ಕೆ ಐದೈದು ಮಣ್ಣು ।
ಐದು ಕಡೆಯಲಿಟ್ಟು ಪುರಂದರವಿಠಲ ಎನ್ನು ॥

ಹಲ್ಲು ಬೆಳಗುವಲ್ಲಿ ಜಂಬು ಪ್ಲಕ್ಷಪತ್ರೆ
ನೆಲ್ಲನಿಲ್ಲು ಮಹಾಲಯ ಪುಣ್ಯದಿವಸದಿ
ಒಲ್ಲಿದ ಏಕಾದಶಿ ಪರ್ವದಿ ಅಮಾವಾಸ್ಯೆಯಲಿ ರವಿ-ಶಶಿಗ್ರಹಣದಲಿ ।
ಸಲ್ಲದಯ್ಯ ದಂತಕಾಷ್ಠ ಮಲಿನಗಳಿಗೆ ।
ಗಲ್ಲಿಸಿ ನೀರುಮುಕ್ಕಳಿಸೆ ಹನ್ನೆರಡು ।
ಬಲ್ಲ ಬುಧರಿಗೆ ಪುರಂದರವಿಠಲ ಒಲಿವ । ಇದನಾಚರಿಸೆ ॥

(ಪ್ಲಕ್ಷ ಪತ್ರೆ-ಬನ್ನಿ ಎಲೆ)

ಹೀಗೆ ಹರಿದಾಸರು ಆಚಾರಗಳನ್ನು ವಿಧಿಸಿ, ಅವುಗಳ ಅನುಷ್ಠಾನದಿಂದ ಆಗುವ ಆರೋಗ್ಯಕರ ಪರಿಣಾಮಗಳನ್ನು ತಿಳಿಸಿ, ಇಹ-ಪರಗಳೆರಡಕ್ಕೂ ಹಾದಿಯಾದ ಮಾರ್ಗ ತೋರಿದ್ದಾರೆ. ಅವರು ತಿಳಿಸುವ ಕೆಲವು ಶುದ್ಧೀಕರಣಕ್ರಿಯೆಗಳಂತೂ ನಮಗೆ ಎಂದೂ ಮಾರ್ಗದರ್ಶಕ ಆಗುತ್ತವೆ. ಆಚಾರವೆಂದರೆ ಜನರ ನಡೆನುಡಿ, ಪ್ರತಿದಿನದ ದಿನಚರ್ಯೆ, ಎಲ್ಲ ಒಳಗೊಂಡಂತೆ ಪರಿಗ್ರಹಿಸಿ ಇಲ್ಲಿ ವಿವೇಚಿಸಲಾಗಿದೆ. ಹರಿದಾಸರ ಈ ಆಚಾರದನುಸರಣೆ ಮಧ್ವಮತದ ಅವಲಂಬಿಗಳಿಗೆ ಮಾತ್ರವಲ್ಲದೆ ಎಲ್ಲರಿಗೂ ಅನುಸರಣೀಯ ಎನ್ನಿಸುತ್ತವೆ.

ಆಚಾರದೊಂದಿಗೇ ಬರತಕ್ಕದ್ದು ಒಲವಿರುವ ದೈವದುಪಾಸನೆ. ಹರಿದಾಸರ ಆರಾಧ್ಯದೈವ ವಿಷ್ಣು-ಲಕ್ಷ್ಮೀನಾರಾಯಣ. ಅವನು ವಿಠಲನಾಗಬಹುದು, ತಿರುಪತಿಯ ಶ್ರೀನಿವಾಸನಾದಾನು, ಉಡುಪಿಯ-ಮನ್ನಾರಿನ ಕೃಷ್ಣನಾಗಬಹುದು. ಹಾಗೆಂದು ಅವರು ಶಿವನನ್ನು ಸ್ತುತಿಸುವುದೂ ಇಲ್ಲವೆಂದಲ್ಲ.

ಹರಿದಾಸರು ನಿರ್ಗುಣೋಪಾಸಕರಲ್ಲ. ಅವರಿಗೆ ದೈವ ಸಾಕಾರ ಸ್ವರೂಪಿ ; ವ್ಯಾಸರಾಯರ ಮಾನಸಪೂಜಾ ವಿಧಾನದಲ್ಲಿ ಕನಕದಾಸರು ಆದೆಷ್ಟರ ಮಟ್ಟಿಗೆ ತಾವೂ ಮಾನಸ ಪೂಜಾ ನಿರತರಾಗಿದ್ದರೆನ್ನಲು ನಿದರ್ಶನವೆ ಇದೆ. ಮಾನಸಪೂಜೆ, ಹರಿಯಪೂಜೆಗಳಲ್ಲೊಂದು ಶ್ರೇಷ್ಠ ವಿಧಾನ. ಇದಕ್ಕೆ ಮನಸ್ಸಿನ ಪರಿಪಕ್ವತೆಯೂ ಅತ್ಯಗತ್ಯ. ಮನಸ್ಸಿನಲ್ಲಿ ಶ್ರೀಹರಿಯನ್ನು ಆಗಮೋಕ್ತ ವಿಧಾನದಲ್ಲಿ ಪೂಜಿಸುವಿಕೆ ಹರಿದಾಸರಂಥ ಸಗುಣೋಪಾಸಕರೆಂಬುದನ್ನು ತಿಳಿಸಲಾಗಿದೆ. ಸಾಕಾರ ಸ್ವರೂಪಿಯಾದ ವಿಷ್ಣುವಿನ ವಿವಿಧ ಅವತಾರ

ಸ್ವರೂಪಗಳನ್ನು ಹರಿದಾಸರು ಹಾಡಿಕೊಂಡಾಡಿದಾರೆ. ದಶಾವತಾರ ವೈವಿಧ್ಯ ವಾದಿ ಾಜರಲ್ಲಿ ಕಂಡು ಬಂದಂತೆ, ಕೃಷ್ಣ ಲೀಲಾ ವಿನೋದದ ಬಗೆ ಬಗೆಯ ಕೃತಿಗಳು ಪುರಂದರದಾಸರಲ್ಲಿ ಕಾಣುತ್ತೇವೆ. ಕನಕದಾಸರ ಒಲವು ಹರಿಯ ಕಡೆಗೇ ಎಂಬುದು ಸ್ಪಷ್ಟ. ಪುರಂದರದಾಸರ ಸಂಕಾದಿಯೊಂದು ನಿರಾಕಾರವಾದಿಗಳನ್ನು ಖಂಡಿಸುವ ಾಲು ಗಮನಿಸಿ :

ಲೋಕದ ಮಾನವರೆಲ್ಲ ನಿರಾಕಾರನೆಂದೆನಲು ನಮ ।
ಗೇಕೋವಾದ ವಿವಾದ ಬರಿದೆ ಕಾಕರ ಕಣದೊಳಗೆ ॥

ಸಾಕಾರನನರಿಯದ ಮೂಢಾಕಾರರ ಕೂಡೆ ನಮ ।
ಗೇಕೋವಾದ ನಮಗಿದೇಕೋವಾದ ।
ಏಕೋವಿಷ್ಣುವೆಂಬ ಪುರಂದರವಿಠಲ ನೀನಿರಲು ।
ನಮಗಿನ್ನೇಕೋ ವಾದ............

ದರಂತೆಯೇ ಹರಿದಾಸರು ಏಕದೇವನೋಪಾಸನೆಯನ್ನು ಸಮರ್ಥಿಸಿ. ಬಹು ದೇವೋಪಾ ನೆಯನ್ನು ಖಂಡಿಸುತ್ತಾರೆ. ಕನಕದಾಸರಂತೂ ತಮ್ಮ ಕಾಲದ ಸಮಾಜದಲ್ಲಿ ಪ್ರಚಲಿತ ಾಗಿದ್ದ ತಾಂತ್ರಿಕ ಪೂಜಾ ವಿಧಾನ, ವಾಮಾಚಾರ, ಯಕ್ಷಿಣಿಯರ ಪೂಜೆ, ಸಿಡಿಗೋಲು, ಕುರಿಕೋಣ ನೈವೇದ್ಯ ಧೂಪದೀಪಗಳಿಂದ ! ಪರಮಭಕ್ತಿಯ ಮಾಡಿ ಪೂಜಿಸು''- ರನ್ನು ನೇರವಾಗಿ ಖಂಡಿಸಿದಾರೆ.

''ಕಂಟ್ಟಿ ಕೊಳ್ಳದಿರಿ ಜಟ್ಟಿಗಂಡಿನಲಿ ।
ಚಿಟ್ಟಿಕೊಳ್ಳದಿರಿ ಬೆನ್ನಲಿಸಿಡಿಯನು ॥
ಕಟ್ಟಿ ತೂಗಿಸಿಕೊಳ್ಳದಿರಿ ಕರಟಕದಂತೆ ।
ಗಂಟ್ಟಿನಲ್ಲಿ ಗೋಪಾಲನ ಸ್ಮರಿಸೊ''

ಂಬಲ್ಲಿ ದ್ವಿತೀಯಾಕ್ಷರ ಪ್ರಾಸದಿಂದೊಡಗೂಡಿದ ಸಾಲು ತನ್ನ ಸಂದೇಶ ಸಾರುವಲ್ಲಿ ಫಲ್ಯ ಪಡೆಯುತ್ತದೆ. ಹರಿಪಾರಮ್ಯವೊಂದೆ ಲೋಕಕ್ಕೆ ಹಾದಿ ಎಂದು ಸಾರುವ ರಿದಾಸರ ಏಕಮೇವ ಧ್ಯೇಯ ಹರಿ ಸರ್ವೋತ್ತಮತೆ ಪ್ರಸಾರ ಪ್ರತಿಪಾದನ. ುರಂದರರ ಒಂದು ಉಗಾಭೋಗ ಏಕದೇವತಾವಾದದ ಬಗ್ಗೆ ಪಡಿನುಡಿದಿದೆ :

ನೀರಡಿಸಿ ಜಾಹ್ನವಿಯ ತೀರದಲಿ ಬಂದು ।
ಬಾವಿಯ ನೀರ ಕಡಿಯುವ ಮಾನವರಂತೆ ।
ಹರಿಯ ಸಿರಿಚರಣವಿರಲು ।
ಬರಡು ದೈವಗಳನ್ನೇಕೆ ಭಜಿಸುವೆ ಮನವೆ ।

ಸಿರಿರಮಣ ಬೇಲೂರು ಚೆನ್ನಿಗರಾಯ ।
ಪುರಂದರವಿಠಲನಿರಲು ।
ಬರಡುದೈವಗಳನ್ನೇಕೆ ಭಜಿಸುವೆ ॥

–ಇಲ್ಲಿ ವೀರವೈಷ್ಣವ ನಿಷ್ಠೆಯಿದೆ.

ಹರಿದಾಸರು ಚಿತ್ರಿಸಿರುವ ತತ್ಕಾಲೀನ ಸಮಾಜ, ಅವರ ಕೃತಿಗಳಲ್ಲಿ ಬರುವ ಮಠೀಯ ಆಚಾರ-ಸಂಪ್ರದಾಯ-ವಿಚಾರಗಳನ್ನು ಸವಿಸ್ತಾರವಾಗಿ ಪರಿಶೀಲಿಸಲಾಗಿದೆ. ಇಲ್ಲಿ ಸಹಜವಾಗಿಯೆ ಮಠ, ದೇವಾಲಯಗಳ ಪಾತ್ರ ಹೆಚ್ಚು. ಏಕೆಂದರೆ ಇವೆರಡೂ ಕರ್ಣಾಟಕದ ಸಂಸ್ಕೃತಿಯ ಕೇಂದ್ರ ಬಿಂದು-ಹಾಗೂ ಸಾಮಾಜಿಕ ವ್ಯವಸ್ಥೆಯನ್ನು ನೋಡಿಕೊಳ್ಳುವ ಸಾಂಸ್ಕೃತಿಕ ಸಂಸ್ಥೆಗಳೂ ಹೌದು. ಹರಿಭಕ್ತರಾದ ಹರಿದಾಸರ ಆಂದೋಲನದಲ್ಲಿ ಮಠ, ದೇವಾಲಯಗಳ ಪಾತ್ರ ಮಹತ್ವದ್ದೆ. ದೇವಾಲಯಗಳನ್ನು-ಹಾಗೂ ಭಗವಂತನ ವಿವಿಧ ಸ್ವರೂಪ ವಿವಿಧೆಡೆಗಳ ತೀರ್ಥಕ್ಷೇತ್ರಗಳಲ್ಲಿ ವ್ಯಕ್ತಗೊಂಡಿರುವುದನ್ನು ಚಿತ್ರಿಸಿದಾರೆ-ಬಣ್ಣಿಸಿದ್ದಾರೆ. ಅದನ್ನು ತಮ್ಮ ಕರ್ತವ್ಯವಾಗಿಯೂ ಅವರು ಭಾವಿಸಿದ್ದರು.

ಇಷ್ಟೆಲ್ಲ ಅವಲೋಕಿಸಿರುವ ನಮಗೆ ಹರಿದಾಸರ ಸಾಮಾಜಿಕ ಪ್ರಜ್ಞೆಯ ಬಗ್ಗೆ ಕೆಲವು ಅನಿಸಿಕೆ ಮೂಡುತ್ತವೆ. ಏಕೆಂದರೆ, ಸಾಹಿತ್ಯಿಕವಾಗಿ ಗಮನಿಸುವುದರಲ್ಲಿ ಮಾರ್ಗ ಕಾವ್ಯ ಹಿಂದೆಸರಿದು, ಶರಣರ ವಚನ ಚಳುವಳಿಯಿಂದಾಗಿ ಸಾಮಾನ್ಯರಿಗೆ ಮಾನ್ಯ ಆಗುವ ಸರಳಗನ್ನಡ ಸಾಹಿತ್ಯ, ಜನಪದ ಭಾಷೆಯಲ್ಲಿ ಅಭಿವ್ಯಕ್ತಗೊಂಡು ಪ್ರಕಟಗೊಂಡುದನ್ನು ಗಮನಿಸುತ್ತೇವೆ. ಹರಿದಾಸರು ಅದೇ ಸರಳಗನ್ನಡ ನಡಿಗಟ್ಟಿನಲ್ಲಿ ಅಣಿಮುತ್ತಂಥ ತಮ್ಮ ಕೃತಿ ರಚನೆಗಳನ್ನು ಮಾಡಿದ್ದು, ಇದು ಸಾಮಾನ್ಯನಿಗೆ ಸುಲಭವಾಗಿ ತಲುಪಲೆಂದೆ, ಅವನ ಮನ-ಹೃದಯದ ಬಾಗಿಲು ತಟ್ಟಲು ಸಂಗೀತ ಗುಣವುಳ್ಳ ಕೀರ್ತನೆಗಳಲ್ಲಿ ಹಾಡಿದ್ದು.

ಸಾಮಾಜಿಕ ಪ್ರಜ್ಞೆ ಎಂದಾಗ, ಸಾಹಿತಿ-ಕವಿ-(ಹರಿದಾಸರು) ತನ್ನ ಸಮಾಜಕ್ಕೆ ಹೊರತಾಗಿ ಬದುಕಿಲ್ಲ ಎಂಬುದು ಸಾಮಾನ್ಯವಾಗಿ ತಿಳಿದು ಬರುವ ಅಂಶ. "ಒಂದು ಸಾಹಿತ್ಯ ಕೃತಿ ತನ್ನ ರಂಜಕತೆಯ ಮೂಲಕ ಓದುಗರ ಮನಸ್ಸಿನಲ್ಲಿ ಅವರಿಗೆ ಗೊತ್ತಿಲ್ಲದಂತೆಯೇ ಅವರ ಮೌಲ್ಯಗಳನ್ನು ರೂಪಿಸುತ್ತದೆ. ಆ ದೃಷ್ಟಿಯಿಂದ ಮಾತ್ರ ಅದು ಉಪದೇಶಾತ್ಮಕ" ಎಂಬ ಮಾತು ಹರಿದಾಸರ ಕೃತಿಗಳಿಗೆ ಅನ್ವಯಿಸುವಂಥದು.

ಹರಿದಾಸರ ಕೃತಿಗಳಲ್ಲಿ ವಚನದ ರೀತಿಯ ದಟ್ಟ ಕ್ರಾಂತಿಯಸಂಭವ ಬರುವುದಿಲ್ಲ. ಸಮಾಜಕ್ಕೆ ಅವರು ಸಂಧಾರಕರಾಗಿ, ಬೋಧಕರಾಗಿ ಶ್ರಮಿಸಿದರೆ ವಿನಾ, ಎಲ್ಲರ ಸಂಘಟನೆಗಾಗಿ ಕ್ರಾಂತಿ ಮಾಡಲಿಲ್ಲವೆನ್ನುವುದು ಸುವಿದಿತ. ಆದರೆ, ಕನಕದಾಸರು ಸ್ವಲ್ಪ ಮಟ್ಟಿಗೆ ಇದಕ್ಕೆ ಅಪವಾದ. ಅಂತೆಯೇ ಅವರ ಕೃತಿಗಳಲ್ಲಿ ನನ್ನಿ, ಚಾಗ, ಔದಾರ್ಯ, ಅಭಿಮಾನದ ಜತೆ ಭಕ್ತಿ ವೈರಾಗ್ಯ ಕೂಡ ಕಾಣಬಹುದಾಗಿದೆ. ಪಂಪ ಕಾಲದ ಬಗ್ಗೆ ನುಡಿದ ಭಾಷ್ಯವೇ ಕನಕದಾಸರಲ್ಲೂ ಪ್ರತಿಬಿಂಬಿಸಿದೆ.

ವಚನ ಕಾಲದಿಂದ ಕನ್ನಡ ಸಾಹಿತ್ಯ ಸಾಹಿತ್ಯಕ್ಕಾಗಿ ಮಾತ್ರ ಅಲ್ಲ, ಬದುಕಿಗಾಗಿ ಎನ್ನುವಂತಾಯಿತು. ಸಾಹಿತ್ಯ ತನ್ನ ಸಾಹಿತ್ಯೇತರ ಉದ್ದೇಶಕ್ಕೆ ಕನ್ನಡದಲ್ಲಿ ತೊಡಗಿಸಿಕೊಂಡ ಪ್ರಥಮ ಸಂದರ್ಭ ವಚನಕಾರರ ಕಾಲದಲ್ಲಿ. ನುಡಿದರೆ ಮುತ್ತಿನ ಹಾರದಂತಿರಬೇಕು, ಮಾಣಿಕದ ದೀಪ್ತಿಯಂತೆ, ಸ್ಫಟಿಕದ ಶಲಾಕೆಯಂತೆ ಕೋರೈಸಬೇಕು, ನುಡಿದರೆ ಲಿಂಗಮೆಚ್ಚಿ ಅಹುದು, ಅಹುದೆನ್ನಬೇಕೆಂಬುದು ವಚನಕಾರರ ವೈಚಾರಿಕ ಧೋರಣೆಯಾದದ್ದು ಒಳ್ಳೆಯದೆ. ಬಸವಣ್ಣ ಜನತೆಯ ಒಕ್ಕೂಡಿಸುವಿಕೆಯಲ್ಲಿ ಕೈಗೊಂಡ ಕ್ರಾಂತಿ, ಸಾಹಿತ್ಯದಲ್ಲಿಯೂ ಪ್ರತಿಫಲಿಸಿತು. ಸಾಮಾನ್ಯನಿಂದ ಸಾಹಿತ್ಯ ಸಾಮಾನ್ಯನಿಗಾಗಿ ಸೃಜನಗೊಂಡ ಸಂಧಿಕಾಲವಿದು. ಇದು ಮುಂದರಿದು ಜನಾಭಿಮುಖ ಆಗಿ ಸಮಾಜ ಪ್ರಜ್ಞೆ ತನ್ನಲ್ಲಿ ಒಡಮೂಡಿಸ ತಿಳಿಸಿದ್ದು ಕೀರ್ತನಸಾಹಿತ್ಯ ಅಥವಾ ಹರಿದಾಸ ಸಾಹಿತ್ಯ. ವೈಯಕ್ತಿಕಪ್ರತಿಷ್ಠೆ ಇಲ್ಲಿಲ್ಲ. ಸಮಷ್ಟಿಯಲ್ಲಿ ಬೆರೆಯಬೇಕೆಂಬ ಗುಣ. ಇದೇ ವಚನ-ದಾಸಸಾಹಿತ್ಯಗಳ ಸಮಾನ ಮನೋಧರ್ಮ. ತಾವು ಕಂಡ ಹಾಗೆ, ತಾವು ಕಾಣಲು ಸಾಧ್ಯ ಆದಂತೆ ಸಮಾಜದ ತತ್ಕಾಲೀನ ಗುಣದೋಷಗಳನ್ನು ತಂತಮ್ಮ ಕೃತಿಗಳ ಮೂಲಕ ಪರಾಮರ್ಶಿಸಿ, ತಮ್ಮ ಕಾಲದ ಸಮಾಜಕ್ಕೆ ಸೇವಾ ಋಣ ಸಲ್ಲಿಸಲು ಶ್ರಮಿಸಿದವು. ಇಲ್ಲಿ ಒಂದು ಅಂಶ. ವಚನಕಾರರಿಗೂ, ಹರಿದಾಸರಿಗೂ ಒಂದೊಂದು ಧರ್ಮಕ್ಕೆ ತಮ್ಮನ್ನು ಅರ್ಪಿಸಿಕೊಂಡಂತಾಗಿತ್ತು. ಹೀಗಾಗಿ ಅವರು (ತಮ್ಮ ಕಾಲದ) ಸಮಾಜದಲ್ಲಿನ ಏಳುಬೀಳುಗಳನ್ನು ತುಡಿತಗಳನ್ನು ತಮ್ಮ ಕೃತಿಗಳಲ್ಲಿ ಚಿತ್ರಿಸುತ್ತಾರೆ.

ಹರಿದಾಸರು ಕಂಡ ಸಮಾಜ, ಪುರುಷಪ್ರಧಾನ. ಅಲ್ಲಿ ಹೆಣ್ಣು ಪ್ರತಿಪಕ್ಷ, ಮಾಯೆ, ಗಂಡಿನ ಸಾಧನೆಗೆ ಹೆಣ್ಣು ಅಡ್ಡಿ. ಇದೇ ಕೀರ್ತನಗಳಲ್ಲಿ ಬಂದಿರುವುದು. ಹೆಣ್ಣಿಗೆ ಸ್ವಾತಂತ್ರ್ಯ ಕೊಡಕೂಡದು. ಕೊಟ್ಟರೆ ಅವನು ಮೂರ್ಖನೆನ್ನುತ್ತಾರೆ ಹರಿದಾಸರು. ವಚನಕಾರರ ಸಮಾಜದಲ್ಲಿ ಹೆಣ್ಣಿಗೆ ಪುರುಷನಷ್ಟೆ ಹಕ್ಕಿತ್ತೆನ್ನಲು ಅನೇಕ ಶರಣೆಯರೆ ಸಾಕ್ಷಿ.

ಹರಿದಾಸರ ಸಮಾಜ ಪ್ರಜ್ಞೆಯಲ್ಲಿ ಸಾಹಸ ಪ್ರವೃತ್ತಿ ಇರಲಿಲ್ಲವೆಂಬುದೇನೊ ನಿಜ, ಹೇಗೊ ಸ್ವಲ್ಪ ತಿದ್ದುಪಡಿ ಮಾಡಿ, ಹಾಗೂ ಹೀಗೂ ಸುಧಾರಣೆ ನಡೆಸುವುದು, ಹಿಂದಿನ ಚೌಕಟ್ಟುಗಳನ್ನೆ ಉಳಿಸಲು ಹೆಣಗುತ್ತಾರೆ ಜಾತಿ ಪದ್ಧತಿಯನ್ನು ತೊಡೆಯುಲಿಲ್ಲ. ಜಾತಿ ಏನೇ ಇರಲಿ, ಹರಿಭಕ್ತಿಯ ಭೂಮಿಕೆ ಸಾಮಾನ್ಯ ತಾನೆ, ಆದರ ಆಧಾರದ ಮೇಲೆ ನಾವೆಲ್ಲ ಒಂದಾಗುವದೆಂಬುದು ಹರಿದಾಸರ ಅನಿಸಿಕೆ.

ನಮ್ಮ ಸಮಾಜವೂ ಹಾಗೆಯೆ. ಬಸವಣ್ಣರೆಷ್ಟು ಬೇಕೊ, ದಾಸರಿನ್ನೆಷ್ಟು ಆಗಬೇಕೊ ಇವರು ಮಾತ್ರ ಬದಲಾಯಿಸದ ಪದ್ಧತಿಗಳನ್ನೆ ಇನ್ನೂ ಹೆಚ್ಚು ಹೆಚ್ಚು ಅವಲಂಬಿಸುತ್ತಿದಾರೆ. ಕೆಲವರು ಪಟ್ಟಭದ್ರ ಹಿತಾಸಕ್ತರು ಕ್ರಾಂತಿಯನ್ನು ನುಂಗುವ ರಕ್ಕಸತನವನ್ನು ಪಡೆದಿದಾರೆ. ಪುರಂದರದಾಸರ ಅಹಿಂಸೆಯಂತ ನೀತಿ ಮಾರ್ಗಕ್ಕೆ ಒಪ್ಪಿದ ಹಾಗೆ ಸಮಾಜ ಸೋಗು ಹಾಕಿತು. ಕನಕನ ಮಾತಿಗೆ ಭಲೆ ಎಂದಿತು. ವಾದಿರಾಜರು ತಮ್ಮ ಕಾಲದಲ್ಲಿ ಸಾಧ್ಯ ಆದ ಸಾಮಾಜಿಕ ಕ್ರಾಂತಿಯುಂಟು ಮಾಡಿದರು,

ಅನೇಕ ಇತರ ಪಂಗಡದವರನ್ನು ತಮ್ಮ ಮಠಾಧ್ವ ಚೌಕಟ್ಟುಗಳಲ್ಲವಡಿಸಿ, ಅವರಿಗೆ ಧರ್ಮ ದೀಕ್ಷೆ ನೀಡಿ. ಆದರೆ ಈ ಸಮಾಜ ಮತ್ತೆ ತನ್ನಷ್ಟಕ್ಕೆ ತಾನಾಯಿತು, ಸ್ವಾರ್ಥ, ಕ್ಷುಲ್ಲಕ ಸ್ವಭಾವ ಈ ಸಮಾಜದಲ್ಲಿ ಇನ್ನೂ ಹೆಚ್ಚಿತು. ಯಾವ ಸಂಧಾರಣೆಯೂ ಹೊಳೆಯಲ್ಲಿ ಹಿಂಡಿದ ಹುಣಸೆಹಣ್ಣಾಯಿತು, ಬಯಲಲ್ಲಿ ಉರಿಸಿದ ಆಗರಬತ್ತಿಯಾಯಿತು.

ಬಸವ-ಪುರಂದರದಾಸರು ತುಂಬ ದೊಡ್ಡವರು. ಬಸವಣ್ಣ ತಾನಿದ್ದ ಬ್ರಾಹ್ಮಣ ಜಾತಿಯನ್ನು ಬಿಟ್ಟು ಹೊರಬಂದು ಆ ಜಾತಿಯನ್ನೆ ಖಂಡಿಸಿದ. ಪುರಂದರದಾಸರು ತಮ್ಮ ಸಿರಿಭಾಗ್ಯವನ್ನು ಕಂಬಳಿ ಧೂಳಿನಂತೆ ಝಾಡಿಸಿ, ಸಂಗ್ರಹ, ಐಶ್ವರ್ಯದ ಅಪಾಯ ಕುರಿತು ಘೋಷಿಸಿದರು.

ಆದರೆ ಇಲ್ಲಿ ಒಂದು ವಿಚಾರ ತಿಳಿಸಬಹುದು. ಸಾಮಾಜಿಕ ಪ್ರಜ್ಞೆಯೊಂದೇ ಒಂದು ಕೃತಿಯ (ಅಥವಾ ಹರಿದಾಸರ ಕೃತಿಗಳ-ಎಂದು ಈಗ್ಗೆ) ಸಾಹಿತ್ಯಮೌಲ್ಯವನ್ನು ಅಳೆಯುವ ಮಾನದಂಡವಲ್ಲ. ವ್ಯಕ್ತಿನಿಷ್ಠವಾದ ಭಕ್ತಿ ಸಾಹಿತ್ಯದಲ್ಲಿಯಾಗಲೀ, ಸೌಂದರ್ಯ ನಿಷ್ಠ ಭಾವಗೀತೆಗಳಲ್ಲಾಗಲೀ, ಸಾಮಾಜಿಕಪ್ರಜ್ಞೆಯನ್ನು ಕಾಣಲಾಗುವುದಿಲ್ಲ ಎಂಬ ಕಾರಣದಿಂದ ಅವು ಸಾಹಿತ್ಯವೆ ಅಲ್ಲ ಎನ್ನಲಾಗುವುದಿಲ್ಲ. ಹರಿದಾಸರ ಪ್ರಧಾನತಃ ನೀತಿ-ಭಕ್ತಿ ಬೋಧಕ ಸಾಹಿತ್ಯ ಸಾಹಿತ್ಯ ಮೌಲ್ಯಗಳನ್ನು ಹೊಂದಿದೆ. "ಜನವಾಣಿಯು ಬೇರು ಕವಿವಾಣಿಯ ಹೂ" ಎಂಬುದು ಹೊಸಗನ್ನಡದ ಕಣ್ಣರೆಂದೆನಿಸಿಕೊಂಡ ಆಚಾರ್ಯ ಬಿ. ಎಂ. ಶ್ರೀ. ಅವರ ಮಾತು. ಜನಪದ ಸಮುದಾಯದ ದೃಷ್ಟಿ-ಸೃಷ್ಟಿಯು ಬದುಕನ್ನು ಪ್ರತಿಬಿಂಬಿಸುವ ಸಾಹಿತ್ಯ ತನ್ನ ಕಾಲದ ಪ್ರತಿನಿಧಿಯಾಗಿ ಉಳಿಯಬಲ್ಲದು. ಇದಕ್ಕೆ ಹರಿದಾಸರ ಕೃತಿಗಳೆ ನಿದರ್ಶನ. ಅವರು ಜನತೆಯಲ್ಲರಳಿ ಬಂದ ಕವಿಗಳು. ಪ್ರಾಸಾದಿತ ಭಕ್ತ ಕವಿಗಳೆಂದು ಹೇಳಿ ಹರಿದಾಸರ ಕಾಲದ ಸಮಾಜ ಚಿತ್ರಣ ಕುರಿತಾದ ವಿವಕ್ಷೆ ಮಂಗಿಸಬಹುದೆಂದೆನ್ನಿಸುತ್ತದೆ.

ಹರಿದಾಸರದ್ದೆ ಒಂದು ವಿಶಿಷ್ಟ ಸಾಧನಮಾರ್ಗ. ಸಂಸ್ಕೃತ ಗ್ರಂಥಗಳಲ್ಲಿ ಹುದುಗಿದ್ದ ಅತ್ಯಂತ ಜಟಿಲವಾಗಿದ್ದ ಅನೇಕ ವೇದಾಂತ ವಿಷಯಗಳನ್ನು ತಿಳಿಗನ್ನಡದಲ್ಲಿ ಬಳಕೆಯ ಭಾಷೆಯಲ್ಲಿ ಹೃದಯಸ್ಪರ್ಶಿಯಾಗಿ ವಿವಿಧ ಗೀತ ಪ್ರಕಾರಗಳಲ್ಲಿ ಪಾಮರರಿಗೂ ಪ್ರಿಯ ಆಗುವಂತೆ ಹಾಡಿದ ಹರಿದಾಸಕೈಂಕರ್ಯ ಸಾಮಾನ್ಯವಾದದ್ದಲ್ಲ. ಹರಿದಾಸರ ಕೀರ್ತನೆ–ಪದ–ಅನ್ಯಮತೀಯರಿಗೂ ಪ್ರಿಯ ಎನಿಸಿದೆ. ಹರಿದಾಸರ ಆಂದೋಲನ-ಸೌಮ್ಯ ರೀತಿಯದು ಗಾಂಧೀಜಿಯವರ "ಸತ್ಯಾಗ್ರಹ"ದಂತೆ ಸತ್ಯನಿಷ್ಠ, ಅಲ್ಲದೆ ಅನೇಕ ವೇಳೆ ಆಗ್ರಹವೂ ಅನುಗ್ರಹ ಆಗಿ ಪರಿಣಮಿಸುವಂಥದು. ಪೂರ್ವಪರಂಪರೆಯನ್ನು ಪುರಸ್ಕರಿಸಿ, ಪರಿವರ್ತನಶೀಲ ಆದ ಮಾರ್ಗ.

ಹರಿದಾಸರಿಗೆ ಹೊಸಮತ, ಧರ್ಮದ ಸೃಷ್ಟಿಅಗತ್ಯವಿರಲಿಲ್ಲ, ಅವರದು ದ್ವೈತ ತತ್ವಕ್ಕೆ ಬದ್ಧ (commit) ಆದ ಒಂದು ಉಪಾಂಗವಷ್ಟೆ.

### ಹರಿದಾಸರ ಯೌಗಿಕ ಪ್ರತಿಪಾದನೆ

ಯೋಗ ಒಂದು ಜೀವನ ವಿಧಾನ ಹಾಗೂ ದೈಹಿಕ-ಮಾನಸಿಕ ಸ್ವಾಸ್ಥ್ಯ ಕಾಪಾಡಿಕೊಳ್ಳಲು ಅತ್ಯುತ್ತಮ ಸಾಧನ. ಧರ್ಮದ ನೆಲೆಯಾದ ಭಾರತದಲ್ಲಿ ಯೋಗ ಸಾಧನೆಯನ್ನು ಪರಮಾರ್ಥ ಪದದ ಒಂದು ಸೋಪಾನವಾಗಿ ಮಾಡಿಕೊಂಡಿದ್ದಾರೆ. ಭಕ್ತಿಯೂ ಒಂದು ಯೋಗ, ಕರ್ಮಯೋಗ, ಹೀಗೆ ಅನೇಕ ಪ್ರಕಾರಗಳು ಯೋಗ ಸಾಧನೆಯಲ್ಲಿ ಅಳವಟ್ಟಿವೆ. ಹರಿದಾಸರು, ತಮ್ಮ ಸಿದ್ಧಾಂತ-ಯೋಗ ಎರಡನ್ನೂ ಸಮನ್ವಯಗೊಳಿಸಿಕೊಂಡಿರುವ ಬಿಂಬೋಪಾಸನೆ, ಯೌಗಿಕ ಸಾಧನೆಯ ಒಂದು ಹಂತ. ಅದರ ಮೂಲಕ, 'ಸಹಸ್ರಾಕ್ಷಃ ಸಹಸ್ರಪಾತ್' ಎಂದೆಲ್ಲ ವಂದ್ಯನಾಗಿರುವ ಆ ಪರಮಪುರುಷನ ದಿವ್ಯ ದರುಶನ ಸಾಧ್ಯವೆಂದು ಅನೇಕ ಕೃತಿಗಳಲ್ಲಿ ಹಾಡಿದ್ದಾರೆ. ವಿಜಯದಾಸರು ಹಾಗೂ ಗೋಪಾಲದಾಸರಂತೂ ಬಿಂಬೋಪಾಸನೆಗೆ ಹೆಚ್ಚು ಪ್ರಾಮುಖ್ಯವನ್ನು ನೀಡಿರುವುದು ಅವರ ಸುಳಾದಿಗಳ ಮೂಲಕ ಗಮನಿಸಬಹುದು. ಹಾಗೆ ನೋಡಿದಾಗ, ಮಾನಸ ಪೂಜಾವಿಧಾನ ಯೋಗದ ಮಾಧ್ಯಮವನ್ನು ಬಳಸಿಕೊಂಬ ಒಂದು ಭಕ್ತಿ ಸಾಧನೆಯೆ. ಅನುಭಾವ ಪಂಥ-ಭಕ್ತಿಪಂಥಗಳಲ್ಲಿ ತಿಳಿಸುವಂತೆ, ತನ್ನ ಸರ್ವಸಮರ್ಪಣೆ ಮಾಡಿಕೊಳ್ಳುವ ಭಕ್ತಿಸಾಧಕ, ಭಕ್ತಿಯ (ಶರಣಾಗುವುದರ ಮೂಲಕ) ಮೂಲಕ ಹಲವಾರು ಹಂತಗಳನ್ನು ಏರಿ ಕೊನೆಯ ಹಂತವಾದ ಆತ್ಮ ನಿವೇದನೆಯ ಪರಿಪಕ್ವತೆಯನ್ನು ತಲುಪುವುದರ ಮೂಲಕ ಆತನಿಗೆ ಪರಮಾತ್ಮನ ಸಾಕ್ಷಾತ್ಕಾರವುಂಟಾಗುತ್ತದೆ. ಆತ ಅನುಭಾವಿಯಾಗುತ್ತಾನೆ. ಇದೇ ಭಕ್ತನ ಜೀವಿತದ ಚರಮ ಲಕ್ಷ್ಯ. ಈ ಅನುಭವ ಎಷ್ಟು ಮನಸ್ಸಿಗೆ ಅಪೂರ್ವ ಸುಖ ನೀಡುವುದೋ ಅಷ್ಟೇ ಸಾಧಿಸಲು ಕಷ್ಟ.

ಅನುಭಾವಕ್ಕೆ ವಿವಿಧ ಮತಗಳ ಪರಿಭಾಷೆಯಲ್ಲಿ ವಿವಿಧ ಹೆಸರಿವೆ. ಶಿವಶರಣರು (ವಚನಕಾರರು) ಅನುಭಾವವೆಂದು ಕರೆದಂತೆ ಹರಿದಾಸರು ಅಪರೋಕ್ಷ ಜ್ಞಾನವೆಂದು ಹೇಳುವುದಿದೆ. (ಭೌತಿಕ-ಚಕ್ಷುಸ್ಸಿಗೆ ಕಾಣದ್ದನ್ನು ಸಾಕ್ಷಾತ್ಕಾರಿಸಿಕೊಂಡ ವಿಶೇಷ ಜ್ಞಾನ). ಅಪರೋಕ್ಷಜ್ಞಾನಕ್ಕೆ ಮುಂದೆ ಉಂಟಾಗುವ ಯೌಗಿಕ ಸ್ಥಿತಿ, ಭಗವಂತನ ಪ್ರತಿಮಾ ಚಿಂತನೆ-'ಸಂಪ್ರಜ್ಞಾತ್ ಸಮಾಧಿ' (ಅಪರೋಕ್ಷಜ್ಞಾನ ಪಡೆದ ನಂತರ ಉಂಟಾಗುವುದೆ "ಅಸಂಪ್ರಜ್ಞಾತ ಸಮಾಧಿ" ಎಂದರೆ ಮಧ್ವ ಸಿದ್ಧಾಂತ ರೀತ್ಯಾ ಬಿಂಬದರ್ಶನ. (ಪರಮಾತ್ಮನೆ ಬಿಂಬ, ಉಳಿದವರೆಲ್ಲ ಪ್ರತಿಬಿಂಬರು). ಬಾಹ್ಯ ಜಗತ್ತಿಗೆ ಆತ ಇಲ್ಲ, ಅಗೋಚರವೆಂದೆನಿಸಿದರೂ, ತನ್ನನ್ನು ಕುರಿತು ಚಿಂತಿಸುವವರ ಆರ್ತನಾದ ಅವನನ್ನು ಎಚ್ಚರಗೊಳಿಸಬಲ್ಲುದು. (ಮಂತ್ರಾಲಯದ ಶ್ರೀರಾಘವೇಂದ್ರತೀರ್ಥರು, ಸಶರೀರ ಬೃಂದಾವನಸ್ಥರಾಗುವ ಸಮಯದಲ್ಲಿ ಅಸಂಪ್ರಜ್ಞಾತ ಸಮಾಧಿ ಸ್ಥಿತಿಯಡರಿದರೆಂದು ದೊಡ್ಡವರು ಹಾಗೂ ಹಿರಿಯ ಭಕ್ತರು ಅಭಿಪ್ರಾಯ ಪಡುತ್ತಾರೆ. ಆದರಿಂದಲೆ ಈಗಲೂ ಭಕ್ತರ ಆರ್ತಧ್ವನಿ ಶ್ರೀರಾಯರನ್ನು ಎಚ್ಚರಿಸಬಲ್ಲುದೆಂಬ ಪ್ರತೀತಿ ಇದೆ.) ಅಪರೋಕ್ಷ ಜ್ಞಾನಾನುಭವದ ಮೂಲಕ ಆಗುವ ಭಗವಂತನ ದಿವ್ಯಸಾಕ್ಷಾತ್ಕಾರ, ಭಗವದನುಭವ ವಿಶೇಷವೆ ಪರಮ ಆನಂದ. (ಶ್ರೀವೈಷ್ಣವರು 'ವಿಷ್ಣೋಃ ಪದಂ ಶಾಶ್ವತಂ' ಎನ್ನುತ್ತಾರೆ

ವಿಷ್ಣುವಿನ ಪರಮಪಾನ ಸಾಯುಜ್ಯ). ಆದರೆ ಅಪರೋಕ್ಷಜ್ಞಾನದ ಸಿದ್ಧಿಗೆ ಭಕ್ತ-ಸಾಧಕನ ಪ್ರಯತ್ನ, ಭಕ್ತಿ-ಜ್ಞಾನ (ಮಾಹಾತ್ಮ್ಯಜ್ಞಾನ), ವೈರಾಗ್ಯ, ಭಗವಚ್ಚಿಂತನೆ ಯೊಂದೇಬೇಕು. ಜತೆಗೆ ದೈವಕೃಪೆಯು ಸೈಪೂ ಆಗತ್ಯ. ಇದಕ್ಕೆ ಯೋಗ ಸಹಕಾರಿ, ಪೋಷಕ, ಹಾಗೂ ಆರೋಗ್ಯ ಸಾಧಕ.

ಬಿಂಬೋಪಾಸನೆ-ಯೌಗಿಕ ಸಾಧನೆಯೆಂದು ತಿಳಿಸಿದೇವೆ. ಆದರ ವಿವರವನ್ನು ಅನೇಕ ಹರಿದಾಸರು ನೀಡಿವರಾದರೂ ನಮಗೆ ಒಬ್ಬಿಬ್ಬರ ವಿವರ ಗಮನಾರ್ಹ, ಅದೇ ಚಿತ್ರಣ ನೀಡುವ ಪರಿಕರವೂ ಆಗಬಲ್ಲುದು. ವಿಜಯದಾಸರು ನೀಡುವ ಒಂದು ತುಣು ಕನ್ನು ಗಮನಿಸಬಹುದು :

ಪ್ರಣವಪೂರ್ವಕದಿಂದ ಆಸನವಿಟ್ಟು ಮೂರರೊಳೊಂ ।
ದನೆ ತಿಳಿದು ವಾಯುಧಾರಣೆ ಮಾಡು ವಿವೇಕನಾಗಿ ।
ಬಿನಗು ಇಂದ್ರಿಯಗಳು ಮನದಲ್ಲಿ ಹೂತಿ ಕೂಡಿಟ್ಟು ।
ಅನುನಯದಿಂದ ಸಾಧನಕೆ ಮಾರ್ಗವ ಬಯಸೊ ।
ಘನಿಭೂತವಾದ ಭಕುತಿಯನು ಸಂಪಾದಿಸಿ ನಿತ್ಯ ।
ತನುವ ನಿರ್ಮಲನಾಗಿ ಜನರಹಿತ ಸ್ಥಳದಲ್ಲಿ ।
ಅನುದಿನ ದೃಷ್ಟಿಯೋಜನೆಗಳ ತೊರೆದು ।
ಚಿನುಮಯನಾಗಿಪ್ಪ ವಿಜಯವಿಠ್ಠಲನ್ನ ।
ಮನದನೆಯು ನಿರೀಕ್ಷಿಸುವಾಲೋಚನೆಯು ಮಾಡು ಬಿಡದೆ ॥

ಇದರಂತೆಯೆ ಶ್ರೀವ್ಯಾಸರಾಯರ "ಎನ್ನ ಬಿಂಬ ಮೂರುತಿಯ ಪೂಜಿಪೆನು ನಾನು" ಕೃತಿಯೂ ಮನನೀಯ. ಗೋಪಾಲದಾಸರ ಒಂದು ಕೃತಿ ಬಿಂಬೋಪಾಸನೆಯ ಯೌಗಿಕ ಸಾಧನೆಯನ್ನು ವಿವರಿಸುತ್ತದೆ :

ಧ್ಯಾನವನೆ ಮಾಡು ಬಿಂಬಮೂರುತಿಯ ॥ಪ॥
ಆನಂದದಲಿ ಕುಳಿತು ಅಂತರಂಗದಲಿ ॥ಅ.ಪ॥

ಸದಾಚಾರನಾಗಿ ದ್ವಾದಶಗುಣಂಗಳಿಗೆರಗಿ
ಮುದದಿಂದ ಮೂಲಮಂತ್ರವನು ಜಪಿಸಿ
ಸದಮಲ ಭಕುತಿಯಲಿ ದೇಹಸ್ಥನ ತಿಳಿದು
ಪದುಮಾಸನವ ಹಾಕಿ ಪರಮ ವಿಶ್ವಾಸದಲಿ ॥1॥

ಅಂಗವನು ಚಲಿಸದೆ ಚೆಂದಾಗಿ ದೃಢದಿಂದ ।
ಕಂಗಳನುಮುಚ್ಚಿ ಇಂದ್ರಿಯಂಗಳ ಜರಿದು ।

ಮಂಗಳ ಶೋಭಿತನ ಅಖಂಡ ಧ್ಯಾನವನು ಅಂತೆ ।
ರಂಗದಿನಿಲಿಸಿ ಎಲ್ಲವನು ಕಾಣೊ ॥2॥

ಭಗವದ್ರೂಪಗಳೆಲ್ಲ ಒಂದು ಸಾರಿ ಸ್ಮರಿಸಿ
ಮಂಗುಳಿ ಪರಮ ಗುರುವಿನ ಮೂರ್ತಿಯನು
ತೆಗೆದು ಆವಾಹನೆ ಮಾಡಿ ಅಲ್ಲಿಂದಲೆ
ಸ್ವಗುರು ಬಿಂಬ ಮೂರುತಿಯಲಿ ಐಕ್ಯವನೆ ಮಾಡೊ ॥3॥

ತಿರುಗಿ ಮೆಲ್ಲಗೆ ಮೂರು ರಂಧ್ರದಿಂದಲಿ ಎನ್ನ
ವರಮೂರ್ತಿಯಲಿ ಚಿಂತನೆಯ ಮಾಡೊ
ಭರದಿಂದ ಎಲ್ಲವನೆ ತಂದು ಹೃದಯದಲ್ಲಿ
ಸ್ಥಿರವಾಗಿ ಇಪ್ಪ ಮೂರುತಿಯೊಡನೆ ಕೂಡಿಕೊ... ॥4॥

ಆತನೆ ಬಿಂಬಮೂರುತಿಯೆಂದು ತಿಳಿದುಕೊ
ಆ ತರುವಾಯ ನಾಡಿಗಳಗ್ರಹಿಸಿ
ಆತ್ಮೈಜಸನ ತಂದು ವಿಶ್ವಮೂರುತಿಯಲ್ಲಿ
ಪ್ರೀತಿಯುಳ್ಳವನಾಗಿ ಪತಿಕರಿಸು ಮರುಳೆ ॥5॥

ಜ್ಞಾನಪ್ರಕಾಶದಲಿ ನಿನ್ನ ಹೃದಯ
ಸ್ಥಾನ ಚೆನ್ನಾಗಿ ಅಷ್ಟದಳಕಮಲ ಮಧ್ಯ
ಶ್ರೀನಿವಾಸನಮೂರ್ತಿ ನಿಲ್ಲಿಸಿ ಬಾಹ್ಯದಲಿ
ಏನೇನು ಪೂಜೆಗಳ ಅದನೆ ತಿಳಿದು ಮಾಡೊ ॥6॥

......ಅಪರೋಕ್ಷಿತನಾಗಿ ನಿನ್ನ ಯೋಗ್ಯತಿದ್ದಷ್ಟ
ಗೋಪಾಲವಿಠಲನೊಲಿವನಾಗ

ಮಮಕಾರ ತೊಡೆದು, ಅಣುರೇಣು (ತೃಣಕಾಷ್ಠ) ಚೇತನಕೆ ಫಣಿಶಾಯಿಯಲ್ಲದೆ ಬೇರೊಬ್ಬ ನಿಯಾಮಕನಿಲ್ಲೆಂದು ಭಾವಿಸಿ, ಒಂದೇ ಭಕುತಿಯಿಂದ ಸಮಾಧಿಗೊಳಗಾಗಿ ದಿವ್ಯ ದೃಷ್ಟಿಯಲ್ಲಿ ಸಾಕ್ಷಾತ್ಕರಿಸಿಕೊಂಬ ಸಾಧನೆಯ ಪಥ ಗೋಪಾಲದಾಸರು ತಿಳಿಸಿ ಕೊಟ್ಟಿದಾರೆ.

ಹರಿದಾಸರು ಯೋಗಸಾಧನೆ ತಿಳಿಸಿದ್ದರೆ ಅದು ಗೊಡ್ಡುತನಕ್ಕೆ, ಮೂಗು ಹಿಡಿದು ಮಟಮಟ ಕೂಡುವುದಕ್ಕೆಂದಲ್ಲ; ಅಲ್ಲಿ ಅವರು ಹೇಳುವುದು ಯೋಗವಿಜ್ಞಾನವನ್ನು, ಮನದ ಭಾವಶುದ್ಧಿ, ಶರೀರಶುದ್ಧಿ ಚಿತ್ತಕ್ಕೆ ನಿಲುಕುವ ದಿವದಾನಂದದ ಅನುಭವ ವಿಶೇಷ ಸಾಕ್ಷಾತ್ಕಾರಿಸಿಕೊಂಬ ಈಶಪಥವನ್ನ, ಹರಿಪಥವನ್ನೆ ಅವರು ತಿಳಿಸಿರುವುದೆಂಬುದು ಸ್ಪಷ್ಟವಾಗುತ್ತದೆಯಾದರೂ, ಎಲ್ಲ ಜಾತಿಗಳ-ಧರ್ಮಗಳವರನ್ನೂ ಒಂದೇ ರೀತಿ ಕಾಣುತ್ತಿದ್ದುದು ಅವರವರ ಮನಸ್ಸಿನ ವಿಶಾಲತೆ ಹಾಗೂ ಸಾಮ್ರಾಜ

ಭದ್ರತೆ ಕಾಪಾಡುವ ರಾಜಕೀಯ ಚಾಣಾಕ್ಷತೆ ಕೂಡ. ಬುಕ್ಕರಾಯನ ಶ್ರವಣಬೆಳಗೊ ಶಾಸನ, ಜೈನರಿಗೂ-ಶ್ರೀವೈಷ್ಣವರಿಗೂ ಉಂಟಾದ ಯಾದವೀ ಕಲಹವನ್ನು ಆತ ಹರಿಸಿದ ಸಮನ್ವಯ ನೀತಿ, ಒಂದು ಪುಟ್ಟ ಘಟನೆ. ಅಂಥದೆಷ್ಟು ನಡೆದಿದೆಯೋ ಹರಿದಾಸರ ಕಾಲ, ಇಂಥ ಸಂಧಿಸಮಯ.

ಹರಿದಾಸರು ನೀಡುವ ಸಾಮಾಜಿಕ ಚಿತ್ರಣ ಸಮಾಜದೆಡೆಗೆ ಅವರು ತೋರ ಮನೋಭಾವ ಅನೇಕ ಬಗೆ :

1. ಜಾತಿಪದ್ಧತಿಯ ಬಗ್ಗೆ ಅವರ ಸೌಮ್ಯ ನಿರಾಕರಣೆ.
2. ಮಂಡೆವಂತಿಕೆ-ಬೂಟಾಟಿಕೆ-ಡಾಂಭಿಕತೆಯ ಬಗ್ಗೆ ಎಲ್ಲ ಹರಿದಾಸರೂ ಟೀಕಿಸಿದ್ದಾ
3. ಕನಕದಾಸರ ರಾಮಧಾನ್ಯ ಚರಿತ್ರೆ, ಅಂದಿನ ಸಮಾಜದ ಮೇಲುವರ್ಗ-ಕೀ ವರ್ಗದ ಸಂಘರ್ಷವನ್ನು ಪ್ರತಿಮಾ ವಿಧಾನದಲ್ಲಿ ಚಿತ್ರಿಸುತ್ತಾರಾದ್ದರಿಂದ ಅ ಪ್ರಸ್ತಾಪ.
4. ಭಕ್ತಿ-ದ್ವೈತದ ಅಸ್ತಿತ್ವವಾದ-ಸಾಕಾರ ರೂಪ ಉಪಾಸನೆ ಅದ್ವೈತ ಖಂಡನೆ.
5. ಆಚಾರ-ವಿಚಾರದ ಬಗ್ಗೆ ಹರಿದಾಸರು ನೀಡುವ ಚಿತ್ರಣ ಇಲ್ಲಿ ಮತ್ತೀಯ ನಿ ಪ್ರಧಾನ. "ಸಮಾಧಾನ ಸರ್ವೋಮಂತ್ರಃ" ಎಂಬ ಧೋರಣೆ.

ಹರಿದಾಸ ಸಾಹಿತ್ಯ ಆರಂಭಗೊಂಡು ಬೆಳೆದ ವಸಂತಕಾಲ, ವಿಜಯನಗರದ ಕಾ ವಿಜಯನಗರದ ಅಸ್ತಮಾನದೊಂದಿಗೆ, ಪುರಂದರದಾಸರು ಪರಮಗತಿಯನ್ನೈದುವ ರೊಂದಿಗೆ (೧೫೬೫) ಹರಿದಾಸಸಾಹಿತ್ಯದ ಮೊದಲ ಘಟ್ಟವೂ ಕೊನೆಗೊಂಡಿತು.

### ಕೀರ್ತನ ರಚನೆ : ಸಂಕೀರ್ತನ ಕಲೆ

ಹರಿದಾಸವೃತ್ತಿ ಸುಮ್ಮನೆಯಲ್ಲ, ಹಗುರವಾಗಿ ಪರಿಗಣಿಸುವಂಥದಲ್ಲ. ಆ ಬದುಕಾಗಿಯೆ ಸ್ವೀಕರಿಸಿದಂಥದು ಎಂಬುದನ್ನು ಹರಿದಾಸ ಮರೆವಂತಿಲ್ಲ. ಹರಿದ ವೃತ್ತಿಯ ಒಂದು ಅಂಗವೆ ಆದ ಕೀರ್ತನಕಲೆ, ನಾಮಸಂಕೀರ್ತನ ಕಲೆಯೂ ಒಂ ವಿಶೇಷ ಸಂಕೀರ್ಣ ಕಲೆ. ಹರಿದಾಸರ ಸಂಪ್ರದಾಯಕ್ಕೇ ಅಂಟಿ ಬಂದ ಕಲೆ. ವ್ಯಕ್ತಿಯಲ್ಲಿ ಮಾತ್ರ ವಿಶೇಷ ಸಾಮರ್ಥ್ಯವಿರಬೇಕಾಗುತ್ತದೆ. ಅವರ ವಾಕ್‌ಶು ಸ್ಪಷ್ಟವಾದ ಉಚ್ಚಾರಣೆ, ಅಸ್ಖಲಿತ ಕಂಠಶ್ರೀ, ತಕ್ಕ ಮಟ್ಟಿಗೆ ಸಂಗೀತ ಸ್ವರ ತಿಳಿ ಕಂಠ ಮಾಧುರ್ಯ ಇರಬೇಕಾಗುತ್ತದೆ. ಭಗವನ್ನಾಮಸಂಕೀರ್ತನೆಯಲ್ಲಿ ಅವಿರತ ಆದ ಶ್ರ ಭಕ್ತಿ-ಆದಮ್ಯ ಉತ್ಸಾಹ ಇದ್ದಂತೆಯೆ ಸಮರ್ಪಣಭಾವ, ತನ್ನನ್ನೆ ತಾನು ತೊಡ ಕೊಂಬ (involvement) ತಾದಾತ್ಮ್ಯಭಾವವೇಕಾಗುತ್ತದೆ. ಕೀರ್ತನಗೋಷ್ಠಿ ಶ್ರೀಪಾ ರಾಜರ ಕಾಲದಿಂದ ದೇವರ ಪೂಜಾಸಮಯದಲ್ಲಿ ತಾಳ, ಚಿಟಿಕೆ ಹಿಡಿದು, ಕಾಲಿಗೆ ಗ ಕಟ್ಟಿ, ತಂಬೂರಿ ಶ್ರುತಿ ಮೀಟಿ, ಸಂಗೀತ-ಕನ್ನಡ ಕೀರ್ತನೆ ಹಾಡುವ "ಸೇವಾ ಕೈಂಕ ರ್ಯ"ವಾಗಿ ಆರಂಭಗೊಂಡಿತಷ್ಟೆ. ಇದೇ ಅನಂತರ ಬೆಳೆಯಿತು. ಹರಿದಾಸ ಪರಂಪ

ಬೆಳೆಯಿಂತ್ತು ಮೆಂನ್ನಡೆದಂತೆ, ಕೃತಿ ರಚನೆಗಳು ಬಂದಂತೆ, ನಾಮಸಂಕೀರ್ತನ ಕಲೆಯೂ ಬೆಳೆಯಿತು. ಹತ್ತೊಂಭತ್ತರ ಅಂಚಿನವರೆಗೂ ಜಗನ್ನಾಥ ದಾಸರು ಅವರ ಶಿಷ್ಯ ಪ್ರಶಿಷ್ಯರವರೆವಿಗೂ (ಮೊನ್ನೆ ಮೊನ್ನೆ ತೀರಿಕೊಂಡ ಪರಮಪ್ರಿಯ ಸುಬ್ಬರಾಯದಾಸ ರೆಂಬುವರ ಶಿಷ್ಯರಾಗಿದ್ದ ಗುರುಗೋವಿಂದ ವಿಠಲಾಂಕಿತ ಗೋವಿಂದರಾಯರು, ಮೈಸೂರೂ, ಹರಿದಾಸ ಸಂಪ್ರದಾಯವನ್ನು ಅತ್ಯಂತ ಶ್ರದ್ಧೆಯಿಂದ ಮುಂದುವರಿಸಿ ಕೊಂಡು ಬಂದಿದ್ದರು.) ದ್ರುತಗತಿಯಲ್ಲಿ ನಡೆದು ಬಂದ ಹರಿದಾಸರ ಸಂಪ್ರದಾಯ ಕಾಲಾನುಗುಣವಾಗಿ ಎಂಬಂತೆ ಖಿಲ ಆಗತೊಡಗಿತು. ಸಾಮಾಜಿಕ ಬದಲಾವಣೆ, ಬದುಕಿನ ಮೌಲ್ಯಗಳು-ಜನಜೀವನ-ಜನಮನದ ಪ್ರವೃತ್ತಿಯೂ ಕಾರಣ ಆಗಿದ್ದಾತು. "ಪುನರುಜ್ಜೀವನ" (renaissance) ಯುಗ ಹೊಸ ಹೊಸತನ್ನು ಭಾರತೀಯ ಬದುಕಲ್ಲಿ ತುಂಬಲೆತ್ನಿಸಿದುದು ಕಾರಣವೆ.

ಹರಿದಾಸರ ಸೇವೆ ನವೀನ ಕಾಲಕ್ಕೆ ಆಧುನಿಕ ನಾಗರಿಕತೆಯ ಈ ಬೆಡಗಿನ ದಿನ ಗಳಲ್ಲಿ ನಮ್ಮ ಸಮಾಜಕ್ಕೆ ಬೇಕಾಗಿಲ್ಲವೆ ? ಎಂಬ ಪ್ರಶ್ನೆ ಸಹಜವಾಗಿಯೆ ಉದ್ಭವಿಸು ತ್ತದೆ. ಹರಿದಾಸರು ಭಕ್ತಿ ಪಂಥದವರು. ಭಗವದ್ಭಕ್ತಿ, ಸಂಪ್ರದಾಯದ ಚೌಕಟ್ಟಿ ನಲ್ಲಿದ್ದ ಅವರ ಸಾಹಿತ್ಯವು ಆ ಚೌಕಟ್ಟಿಗೊಳಪಟ್ಟು ರಚಿತ ಆಗಬೇಕಾಗಿದ್ದ ಪ್ರಯುಕ್ತ ಕೊನೆ ಕೊನೆಗೆ ಬಂದ ಹರಿದಾಸರ ಸಾಹಿತ್ಯ ಕೃತಿಗಳಲ್ಲಿ ಹೆಚ್ಚಿನ ನವ ನವೋನ್ಮೇಷ ಗೊಳಿಸುವ ನಿತ್ಯಪ್ರತಿಭೆ ವರ್ಣನೆಗಳಲ್ಲಿ ಜೀವಂತಿಕೆ-ಸ್ವಂತಿಕೆ, ಹೊಸತೇನೂ ಕಾಣದೆ ಬರೀ ಚರ್ವಿತ ಚರ್ವಣವೆನ್ನಿಸುವಂತಾಯಿತು. ಇದಲ್ಲದೆ, ನಾಗರಿಕತೆ ಬೆಳೆದಂತ ಜನತೆ ಯಲ್ಲಿ ವೈಜ್ಞಾನಿಕ ಪ್ರವೃತ್ತಿ ಹೆಚ್ಚಿದೆ. ತಾನು, ತನ್ನದು, ತನ್ನ ಭವಿಷ್ಯ ತಾನೆ ರೂಪಿಸಿಕೊಳ್ಳಬೇಕೆ ವಿನಾ ಯಾವುದೂ ಬೇರೆಯದೇನು ಮಾಡಿಯಾತು ಎಂಬ ಭಾವನೆ ಬಲಗೊಂಡಿದೆ. ಸಮತಾವಾದ, ಲೋಕಾಸಕ್ತವಾದ (materialism)ಇಹದ ಬದುಕಿಗೇ ಹೆಚ್ಚು ಬೆಲೆ, ಮೌಲ್ಯ, ಅಂಟಿಕೊಳ್ಳುವಿಕೆಯನ್ನೂ ಕಲ್ಪಿಸಿಕೊಟ್ಟಲೀ ಕೊಡುತ್ತವೆ. ಹರಿದಾಸರೂ ಈಸಬೇಕು, ಇದ್ದು ಜೈಸಬೇಕೆಂದವರೆ. ಆದರೆ, ಆಗಿನ ಅವರ ''ಬೋಧೆ, ಸಂಪ್ರದಾಯ, ಭಕ್ತಿಯ ಪಾತಳಿಯ ಮೇಲೆ ರಚಿತಗೊಂಡಿದೆ. ಭಕ್ತಿಯಲ್ಲಿ ಮುಡು ಗಟ್ಟಿದೆ. ಇಲ್ಲಿ ಮಾನುಷಶಕ್ತಿವಾದ (humanism) ಅಥವಾ ಪೌರುಷೇಯವಾದಕ್ಕೆ ಹೆಚ್ಚು ಪ್ರಾಶಸ್ತ್ಯ ಪ್ರಾಮುಖ್ಯ ಇಲ್ಲ. ಕಲೋಪಾಸಕ-ಕಲಾವಿದ-ಸಾಹಿತಿ ಯಾರೆ ಆಗಲಿ ಸಮಕಾಲೀನ ಸಮಾಜದಿಂದ ಬೇರೆಯಾಗಿರಲಾರ. ಇಲ್ಲಿ ಹರಿದಾಸ ಸಂಪ್ರದಾಯ, ವೃತ್ತಿಯಾಗಿ ಮುಂದುವರಿದಿದ್ದರಿಂದ, ಇದು ಎಲ್ಲ ಕಲಾಕಾರರಿಗೂ ಅನ್ವಯಿಸತಕ್ಕದ್ದೆ ಆಗಿದೆ. ಇದರಿಂದ ಮನುಷ್ಯನ ಬದುಕು, ಇರವು, ಈ ಜಗತ್ತಿಗೆ ಈ ಸಮಾಜಕ್ಕೆ ಇಲ್ಲಿಗೆ ಸೀಮಿತ ಆದದ್ದು ಎನ್ನಿಸುತ್ತದೆ. ಮನುಷ್ಯನ ಎಲ್ಲ ಕಸರತ್ತಿಗೂ, ಬದುಕಿನ ಏರುಪೇರು ಉತ್ಕರ್ಷ ಅಪಕರ್ಷಗಳಿಗೂ ಈ ಜಗತ್ತೆ ಮಟ್ಟಿ (ಗರಡಿ ಶಾಲೆ) ಮರ್ತ್ಯ ಲೋಕ ಕರ್ತಾರನ ಕಮ್ಮಟ ಆದರೂ ಕಾಯಕತತ್ವಕ್ಕೆ ಪ್ರಾಶಸ್ತ್ಯವಿರುವಂತೆಯೆ ಆದಕ್ಕಂಟಿಕೊಂಡ ಅವಿಭಾಜ್ಯ ಬದುಕಿಗೂ ಅಷ್ಟೆ ಪ್ರಾಮುಖ್ಯ. ಹರಿದಾಸ ಸಂಪ್ರದಾಯ

ಒಂದು ಶಾಸ್ತ್ರೀಯ, ವಂಶೀಯ ಸಾಂಪ್ರದಾಯಿಕ ಚೌಕಟ್ಟನ್ನು ಅವಲಂಬಿಸಿ, ಬೆಳೆದು ಅದೇ ನಿಟ್ಟಿನಲ್ಲಿ ಸಾಹಿತ್ಯ ಸೃಷ್ಟಿಯೂ ರಚಿತ ಆದದ್ದರ ಪ್ರಯುಕ್ತ, ಅದಕ್ಕೆ ಪರಿಮಿತಿ ಯುಂಟಾಯಿತು, ಬದ್ಧವಾಯಿತು (committed). ಬ್ರಾಹ್ಮಣವರ್ಗದಲ್ಲಿ ವಿಶೇಷ ವಾಗಿ ಬೆಳೆದದ್ದೂ ಹೌದು. ಬರವಣಿಗೆ ಒಂದು ಸಾಮಾಜಿಕ ಕ್ರಿಯೆ ಎಂದಾಗ ಅದು ಸಮಾಜದ ಎಲ್ಲ ಸ್ತರದವರನ್ನೂ ಸ್ಪಂದಿಸಬೇಕೆಂದಾಗ, ವರ್ಣಾಶ್ರಮ ವ್ಯವಸ್ಥೆ ಪ್ರಮುಖ ವಾಗಿದ್ದ ಕಾಲದಿಂದ ಬಂದ ಹರಿದಾಸ ಸಾಹಿತ್ಯ ವರ್ಣಾಶ್ರಮ ವ್ಯವಸ್ಥೆಯನ್ನೆ ಮುಂದು ರಿಸಿದ್ದರಿಂದ ಮತ್ತು ಮುಕ್ತ ಸಾಹಿತ್ಯ ಆಗಲು ಸಂಪೂರ್ಣ ಸಾಧ್ಯತೆ ಕಡಮೆಯಿ. ಎಲ್ಲ ಹರಿದಾಸರಲ್ಲಿಯೂ ಸಾಮಾಜಿಕ-ಸಾಂಸ್ಕೃತಿಕ ಮೌಲ್ಯಗಳೇ ಎನ್ನಿಸಿಕೊಂಡ ಆಚಾರ-ಮಡಿ, ಜಾತಿ-ಕುಲ ಎಲ್ಲದರ ಬಗ್ಗೆ ಪ್ರಾಸಂಗಿಕ ಪ್ರಸ್ತಾಪ ಬಂದಿದ್ದರೂ ಕ್ರಾಂತಿಕಾರಕ ಬದಲಾವಣೆಯೇನಾದರೂ ಆಗಲಾಯಿತೆ ? ಎಂಬ ಪ್ರಶ್ನೆ ಸಹಜವಾಗಿಯೇ ಉದ್ಭವಿಸಿ ದಾಗ, ಅದಕ್ಕೆ ಉತ್ತರಿಸುವುದು ಕಷ್ಟವಾಗುತ್ತದೆ. ಹರಿದಾಸ ಸಾಹಿತ್ಯ, ಸಂಪ್ರದಾಯ ನಿಷ್ಠೆ, ಸಾಹಿತ್ಯ ಭಕ್ತಿಯ ಆಂದೋಲನ ನಡೆಸಿದ ಸಂಪ್ರದಾಯ ಸಾಹಿತ್ಯವೆನ್ನಬಹುದು. ಕಾರಂತರ ಒಂದು ಮಾತಿನಂತೆ, "ಸಾಹಿತ್ಯ ಮತ್ತು ಬದುಕು ಹತ್ತಿರ ಹತ್ತಿರ : ಅವು ಅವಳಿ ಜವಳಿ : ಒಂದರ ಉಸುರು ಇನ್ನೊಂದರ ಉಸಿರು ; ಒಂದರ ಜೀವ ಇನ್ನೊಂದರ ಜೀವ, ಬದುಕು ಪ್ರೇರಿಸದ ಸಾಹಿತ್ಯ ಬೊಬ್ಬಾಟ." ಈ ದಿಸೆಯಲ್ಲಿ ಹರಿದಾಸ ಸಾಹಿತ್ಯ ದಲ್ಲಿ ಸಾಂಪ್ರದಾಯಿಕ ಪ್ರೇರಣೆಯೇ ಹೆಚ್ಚು ಇರುವುದರಿಂದ, ಬದುಕಿಗೆ ಅದು ಹೆಚ್ಚಾಗಿ ಸ್ಪಂದಿಸದಿದ್ದರೂ, ನೀತಿ-ಧರ್ಮ-ಭಕ್ತಿ-ಜ್ಞಾನ-ವೈರಾಗ್ಯಗಳ ಮೌಲ್ಯಗಳನ್ನು ಪ್ರಸರಿಸು ವಲ್ಲಿ ಪ್ರಮುಖ ಪಾತ್ರ ವಹಿಸಿಕೊಳ್ಳಬಹುದಷ್ಟೆ. ಶಾಶ್ವತ ಮೌಲ್ಯಗಳಾದ ನೀತಿ ಧರ್ಮ, ಅದಕ್ಕಂಟಿಕೊಂಡ ಜ್ಞಾನ-ಭಕ್ತಿ-ವೈರಾಗ್ಯ ಯಾರಿಗೆ ಬೇಡ ? ಆದರಿಂದಲೇ ತಾನೆ ಇಹದ ಬದುಕು, ಸಮಾಜದ ಬದುಕು ಆರೋಗ್ಯಕರವಾಗುವುದು ? ಹರಿದಾಸ ಸಂಪ್ರದಾಯ ಈ ದಿಸೆಯಲ್ಲಿ ವಿಶಾಲ ಅರ್ಥದಲ್ಲಿ ಬೆಳೆಯಲಾಗಲಿಲ್ಲ. ಇದು ಭಕ್ತಿ ಸಾಹಿತ್ಯವೆ ಆಗಿ ಉಳಿದಿದೆ. ಸಂಸಾರ ಕುರಿತ ನಿರಾಸೆ, ಶೂನ್ಯತೆ ಹರಿದಾಸರು ಬೋಧಿಸ ಲಿಲ್ಲ. ಆದರೆ, ದೇವರನ್ನು ಕುರಿತು ಅವನಿಚ್ಛೆಯೆ ಎಲ್ಲ. ನಾಹಂಕರ್ತಾ ಹರಿಕರ್ತಾ ಎಂದದ್ದು ಹೌದು. ಇದನ್ನು ಇಂದಿನ ಜನತೆ ಒಪ್ಪುತ್ತದೆಯೆ ? ಒಪ್ಪಬೇಕಾಗುತ್ತದೆ. ಎಲ್ಲಿ ಒಂದು ಅಪ್ರಮೇಯ ಶಕ್ತಿಗೆ ಅದರ ಅಸ್ತಿತ್ವಕ್ಕೆ ಮನ್ನಣೆ ಪ್ರಾಮುಖ್ಯತೆ, ಕೊಡುತ್ತೇವೆಯೊ ಅಲ್ಲಿ ಇಹದ ಬದುಕಿನಲ್ಲಿ ಒಂದು ಸಾಮಾಜಿಕ ಭಯ ಹುಟ್ಟುವುದೇನೋ ಎನ್ನಿಸುತ್ತದೆ. ಹಿರಣ್ಯಾಕ್ಷ ಹಿರಣ್ಯಕಶಿಪುತನ ಸಲ್ಲದು. ತಾನು ಬದುಕಿ, ಇತರರನ್ನೂ ಬದುಕಬಿಡುವುದು, ದೈವಪ್ರೇಮ, ಮಾನಂಪ್ರೇಮ, ಇದು ಹರಿದಾಸ ಸಂಪ್ರದಾಯ ತೋರಿಗೊಟ್ಟ ಹಾದಿ. ಇದರಿಂದ ಅಂದಿನ, ಆ ಕಾಲದ ಸಾಂಪ್ರದಾಯಿಕ, ವಂಶೀಯ ಚೌಕಟ್ಟಲ್ಲದೆ, ಒಂದು ಹೊಸ ಮೌಲ್ಯವಿತ್ತು, ಅವರ ಸಂಪ್ರದಾಯ, ಕೃತಿಗಳನ್ನು ನಾವು ಅನುಸರಿಸಬೇಕಾಗಿದೆ. ಮಧ್ವಮತ ಪ್ರಸಾರ ಹರಿದಾಸ ಸಂಪ್ರದಾಯದ ಪ್ರಮುಖ ಧ್ಯೇಯಗಳಲ್ಲೊಂದು. ಅದು ಮಾಧ್ವ ಸಮಾಜದವರಿಗೆ ಹೆಚ್ಚು ಹೆಚ್ಚು ಪ್ರಿಯವೆನಿಸಿ

ದರೂ ಹರಿದಾಸರ ಕೃತಿಗಳ ಸಾಮಾಜಿಕ ಮೌಲ್ಯ, ಸಾರಸ್ವತ ಸಂಪದ, ಎಲ್ಲರಿಗೂ ಬೇಕಾದದ್ದೆ ಎಂದೆನ್ನಿಸುತ್ತದೆ. ಸಮಾಜದಲ್ಲಿ ಶಾಂತಿನೆಲಸಲು, ಆಸ್ವಸ್ಥ ಮನ ಸ್ವಾಸ್ಥ್ಯ ಪಡೆಯಲು ಹರಿದಾಸ ಸಂಪ್ರದಾಯದ ಸಾಹಿತ್ಯ ಆಧಾರ ಆಗಬಲ್ಲುದು.

## ಹರಿಕಥೆಯ ಸಂಪ್ರದಾಯ

ಹರಿದಾಸ ಸಂಪ್ರದಾಯದ ಅಂದಿನ, ಇಂದಿಗೂ ಹೊಸ ತಿರುವು ಪಡೆದು ಬೆಳೆದು ಬಂದಿರುವುದೆಂದರೆ ಹರಿಕಥೆ ಹಾಗೂ ಕೀರ್ತನ ಕಲೆ. ಕೀರ್ತನ ಕಲೆ, ನಾಮ ಸಂಕೀರ್ತನೆ, ಭಾಗವತ ಕಥಾ ಗೋಷ್ಠಿಯೇ ಹರಿಕಥೆಯಾಗಿ ಬೆಳೆದು ಬಂದಿತು. ಶ್ರೀಪಾದರಾಜರ ಅನೇಕ ಕೃತಿಗಳಲ್ಲಿ ಕೀರ್ತನದ ಬಗ್ಗೆ ಅಲ್ಲಲ್ಲಿ ಉಲ್ಲೇಖ ಬಂದಿರುವುದನ್ನು ಗಮನಿಸ ಬಹುದು. ಹರಿದಾಸ ಸಂಪ್ರದಾಯದ ಒಂದಂಗವಾಗಿ ಹುಟ್ಟಿಕೊಂಡ ಕೀರ್ತನ ಕಲೆಗೆ ಆದ್ಯ ಪ್ರವರ್ತಕರು ಶ್ರೀಪಾದರಾಜರೆ. ಅವರೇ ಸ್ವತಃ ಕಾಲಿಗೆ ಗೆಜ್ಜೆ ಕಟ್ಟಿ, ನರ್ತಿಸಿ. ಭಗವನ್ನಾಮ ಸಂಕೀರ್ತನೆ ಮಾಡುತ್ತಿದ್ದರಂತೆ. ''ಹರಿಕಥೆ'' ''ಹರಿಕಥಾ ಪ್ರಸಂಗ''ಎಂಬ ಪದಗಳು ಕೇಳಿ ಬರುವುದು ೧೫ನೇ ಶ. ದಿಂದೀಚೆಗೆ ಪುರಂದರದಾಸರಿಂದೀಚೆಗೆ ಎಂಬುದು ನಿರ್ವಿವಾದ. ಏಕೆಂದರೆ ಇದಕ್ಕೂ ಮೊದಲು ಬಂದ ಶ್ರೀಪಾದರಾಜರ ಕೃತಿಗಳಲ್ಲಿ ಕೀರ್ತನೆ, ವಿಷ್ಣುಕಥೆ,ಹರಿದಾಸ ಸಂಗ, ಹರಿಸ್ಮರಣೆ, ಗಾನದಲ್ಲಿ ಕೇಶವನೆಯನಲು ಎಂಬ ಮಾತು, ಬಂದಿ ವೆಯೆ ವಿನಾ ಹರಿಕಥೆಯ ಪ್ರಸ್ತಾಪ ಬಂದಿಲ್ಲ. ಆದಕ್ಕೆ ಕಾರಣ ಆಗ ಭಾಗವತ ಗೋಷ್ಠಿ, ನಾಮಸಂಕೀರ್ತನಗೋಷ್ಠಿಯೆಂದೇ ಇದ್ದುದು ಇದೇ ಕಾಲಕ್ರಮೇಣ ಹರಿಕಥೆ, ಹರಿಕಥಾ ಪ್ರಸಂಗ, ಎಂದು ಮಾರ್ಪಾಟು ಹೊಂದಿ ಪ್ರಚಲಿತ ಆಗಿರಬಹುದು. ಈ ಬಗ್ಗೆ ವ್ಯಾಸರಾಯರಲ್ಲಿ ಶಿಷ್ಯರಾದ ಪುರಂದರದಾಸರನ್ನು ಕಂಡಿತು ''ಗೀತ ನರ್ತನದಿಂದ ಕೃಷ್ಣನ ಪೂಜಿಸುವ'' ಎಂಬಂತಾಗಿಯೂ.

೧. ''ಛೀ ಛೀ ಮನವೆ ನಾಚದ ತನುವೆ ಸವಿನುಡಿ ಕೇಳದೆ ಅಚ್ಯುತ ಕಥೆ ಕೇಳೊ''... (ಹರಿಕಥೆ)

೨. ಶ್ರೋತ್ರೇಂದ್ರಿಯಗಳಿಂದ ಸತತ ದುರ್ವಾರ್ತೆಗಳ ಕೇಳಿ ಕಟ್ಟಿ ।
ಕರ್ತೃ ಎನಗೆ ನಿನ್ನಯಾ ಕಥೆಗಳನು ಅರ್ಥಿಯೆಂದರೆದು ಕಾಯೋ

೩. ನಿದ್ರೆ ಬಂದಿತಿದಿಕೊ ಅನಿರುದ್ಧನ ಸೇವೆಗೆ ವಿಘ್ನವ ಮಾಡುತ್ತ ।
ಹರಿಕಥಾ ಶ್ರವಣವ ಮಾಡಬೇಕೆನ್ನುತಲೀ ಪರಮಭಕುತಿಯಿಂದ ಕುಳ್ಳಿರಲು ।
ಕಿರಿಗಣ್ಣನೋಟದಿ ಸ್ಮರಣೆ ತಪ್ಪಿಸುತಾ । ಗುರುಗುರುಗುಟ್ಟುತ ಕೊರಳ ತೂಗಿಸುತ ।

೪. ಸಂತತ ಸಿರಿಕೃಷ್ಣ ಚರಿತೆ ಕೇಳದವನೆ

೫. ಏನು ಸುಖವೊ ಎಂಥ ಸುಖವೊ

೬. ಸೇರಿದೇನಂ ಸೇರಿದೆನಂ ಜಗದೀಶನ !
ನೇತ್ರಗಳು ಕೃಷ್ಣನ ಮೂರ್ತಿ ನೋಡಂತಲಿವೆ !
ಶ್ರೋತೃಗಳು ಹರಿಕಥೆಯ ಕೇಳಂತಲಿವೆ ॥

೭. ಹರಿಚರಿತೆ ಶ್ರವಣ ದುರಿತ ಕುಚ್ಚಾಟನಂ (ಸಂಳಾದಿ)

೮. ರಾಜ್ಯದೊಳಗೆ ಶ್ರೀ ವಿಷ್ಣು ದಿವ್ಯನಾಮ ಕೀರ್ತಿಸುತಿಪ್ಪದೊಂದು ಪಥ (ಉ ಭೋಗ)-ಎಂದೆಲ್ಲ ಬಂದಿವೆ.

ಇಲ್ಲೆಲ್ಲ ಹರಿಕಥೆಯನ್ನು ಕುರಿತು ಅನೇಕ ಬಾರಿ ಪ್ರಸ್ತಾಪವಿರುವುದು ಆ ಕಾಲಕ್ಕೆ ಹರಿಕಥಾ ಮಾಧ್ಯಮ ಹೇಗೆ ಎಲ್ಲರನ್ನು ಆಕರ್ಷಿಸುತ್ತಿತ್ತು ಎಂಬುದು ತಿಳಿಯ ತ್ತದೆ. ತೂಕಡಿಸುವಾತನನ್ನು ಛೇಡಿಸುವ ವ್ಯಾಸರಾಯರಿಂ, ಪಂಜಿ-ಪಗಡೆ-ಹರಟ ಆಲ್ಲಿ ಬಾರದ ನಿಪ್ಪೆ ಪುಸ್ತಕ ಹರಿಕಥೆಗಳಲ್ಲಿ ಮಾತ್ರ "ಗುರಂಗುರುಗುಂಟ್ಟಿತ ಕೊರ ತೂಗಿಸುತ" ಬರುವುದೆಂಬ ಸಹಜ ಚಿತ್ರಣ ನೀಡಂತ್ತಾರೆ.

ಹರಿಕಥೆಯ ಕೀರ್ತನ ಕಲೆ ಪುರಾಣ ಕೇಳುವುದಕ್ಕಿಂತ ಒಂದು ಕೈಮಿಗಿಲು ಪ್ರಿಯ ಆಗಿರುವ ಹವ್ಯಾಸೀ ಕಲೆ. ಹರಿಕಥೆ, ಶಿವಕಥೆ, ಜಿನಕಥೆ ಹೀಗೆ ಅನೇಕ ರೀ ಪ್ರಸಿದ್ಧ ಕಥಾ ಕಾಲಕ್ಷೇಪ ಎಂದೂ ಹೇಳುವುದುಂಟು. ವಿಷಯ (ವಿಚಾರ-ಪ್ರಸಂಗ) ಕ ಯಾದರೆ, ಪೇಳುವಾತರನ್ನು ಹರಿಕಥಾದಾಸರೆಂದೂ, ಭಾಗವತರೆಂದೂ, ಕೇಳುಗರನ ಶ್ರೋತೃಗಳು, ಭಗವದ್ಭಕ್ತರೆಂದೂ ಕರೆಯಂತ್ತಾರೆ. ಇಲ್ಲಿ ಹರಿಕಥೆಯೊಂದಿಗೆ ಭಗವನ್ನಾಮ ಸಂಕೀರ್ತನೆಯೇ ಪ್ರಧಾನ ಆದದ್ದರಿಂದ ದಾಸರೆಂದು ಕರೆವಂತೆಯೇ ಕೀರ್ತನಕಾರರೆಂದ ಕರೆವ ವಾಡಿಕೆ ಇದೆ. "ಶ್ರವಣಂ ಕೀರ್ತನ ವಿಷ್ಣೋಃ ಸ್ಮರಣಂ ಪಾದಸೇವನಂ" ಎಂದ ಬರುವ ನವವಿಧ ಭಕುತಿಗಳಲ್ಲಿ ಕೀರ್ತನವೂ ಒಂದು ವಿಧದ ಭಕ್ತಿ. ಈ ಮೂಲ ದೇವರ ಸೇವೆ ಗೈಯುವ ಪರಿಪಾಠ, ಹಿಂದಿನಿಂದಲೂ ಬೆಳೆದು ಬಂದಿದೆಯೆಂತೂ ಹೌದ

ಹರಿಕಥೆ-ಕೀರ್ತನ ಕಲೆ ಎಷ್ಟು ಪ್ರಾಚೀನ ? ಎಂದಾಗ ಕೆಲವರು ವಿಶೋ ಸಂತರ ನಾಡಾದ ಮಹಾರಾಷ್ಟ್ರವೆ ಆ ಕಲೆಗೆ ಜನ್ಮಸ್ಥಾನ, ಎಂದೆಲ್ಲ ವಾದಿಸುವುದುಂಟು ಇದನ್ನು ತೆಲುಗು ತಮಿಳು ವಿದ್ವಾಂಸರು ಒಪ್ಪಿರುವುದೂ ದುರ್ದೈವವೆ. ಇದ ಜತೆಗೆ ಕೆಲವರು ಕನ್ನಡ ವಿದ್ವಾಂಸರೂ ಈ ಮಾತಿಗೆ ಇಂಬುಗೊಡುವುದು ಸರಿಯೆನಿಸದು ಈ ಬಗ್ಗೆ ಅಮೂಲ್ಯ ಸಂಶೋಧನ ಲೇಖನವನ್ನು ಬರೆದಿರುವ ಡಾ॥ ಎಂ. ಚಿದಾನಂ ಮೂರ್ತಿಯವರ ಪ್ರಕಾರ ಕರ್ಣಾಟಕವೇ ಹರಿಕಥೆಯ ಜನ್ಮಸ್ಥಾನ. "ಕರ್ಣಾಟಕದಲ್ಲಿ ೧೫ನೇ ಶತಮಾನದ ಹರಿದಾಸ ಚಳುವಳಿಯಲ್ಲಿ ಹರಿಕಥೆಯು ಹುಟ್ಟಿತೆಂಬುದು ನಿರ್ವಿ ವಾದ" ಎಂದು ಸ್ಪಷ್ಟವಾಗಿ ಹೇಳುವ ಚಿದಾನಂದಮೂರ್ತಿಯವರು ವ್ಯಾಸರಾಯ ಹಾಗೂ ಪುರಂದರದಾಸರ, ಕೃತಿಗಳಲ್ಲಿ ಬಂದಿರುವ ಹರಿದಾಸ, ಹರಿಕಥೆ, ಹರಿಕಥಾ ಪ್ರಸಂಗವನ್ನು ಉದಾಹರಿಸಿದ್ದಾರೆ.ಹರಿದಾಸ ಆಂದೋಲನ-ಹರಿಕಥೆಯ ಬಗ್ಗೆ ಈ ಪ್ರಬಂಧ ಸಾಧಾರ ವಿವರ ನೀಡುತ್ತದೆ. ೧೫ನೇ ಶತಮಾನದ ಮಹಾರಾಷ್ಟ್ರದ ಸಂತ ನಾಮ

ದೇವರ ಕೀರ್ತನೆ, ಅಭಂಗ ಕೃತಿಗಳಲ್ಲಿ ಕೀರ್ತನೆ–ಗೋಷ್ಠಿಯ ಪ್ರಸ್ತಾಪವಿದ್ದರೂ, "ಕೀರ್ತನೆ" ಎಂಬ ಪದ ಹರಿಕಥೆಯನ್ನು ಉದ್ದೇಶಿಸುವುದೆಂದು ಹೇಳುವುದಕ್ಕಾಗು ವುದಿಲ್ಲ. ಶಿವಮೊಗ್ಗ ಜಿಲ್ಲೆಯ ಬಳ್ಳಿಗಾವೆಯ ಒಂದು ಶಾಸನದಲ್ಲಿ "ಶಿವಧರ್ಮ ಕಥಾ ಕಥನ ಪ್ರಸಂಗ"ವೆಂಬ ಮಾತು ಇದ್ದರೂ ಇಲ್ಲಿ ಹರಿಕಥೆಯ ಉಗಮವಿದ್ದಿತೆಂದು ಹೇಳ ಲಾಗುವುದಿಲ್ಲ. ಭಕ್ತಿಯ ಉನ್ಮಾದದಿಂದ ದೇವರ ಹೆಸರನ್ನು ಪದೇ ಪದೇ ಉಚ್ಚರಿಸಂತ್ತ ಕುಣಿವುದು ಸಹಜ. ಭಕ್ತಿಯ ಉದ್ರೇಕಾವಸ್ಥೆ ಅದು. ಬಸವಣ್ಣನವರ ವಚನಗಳಲ್ಲಿ ಅವರು ಶಿವನ ಹೆಸರನ್ನು ಹೇಳುತ್ತ ಕುಣಿಯುತ್ತಿದ್ದ ಪ್ರಸಂಗ ಬರುತ್ತದೆ. ಹರಿಹರನ ಶತಕಗಳು, ರಗಳೆಗಳಲ್ಲಂತೂ ಭಕ್ತಿ–ಆವೇಗವೇ ಹೊನಲಾಗಿ ಹರಿದಿದೆ. ಹರಿಕಥೆ–ಕೇವಲ ದೇವರನಾಮ ಸ್ಮರಣೆ, ಭಕ್ತಿಯ ಕುಣಿತಗಳನ್ನು ಮಾತ್ರ ಹೇಳುವುದಿಲ್ಲ. ಅದೇ ವಿಶಿಷ್ಟ ಕಲೆ ; ಒಂದು ಸಾಮೂಹಿಕ ಕಲಾ ಮಾಧ್ಯಮ. ಹರಿಕಥೆಯ ಚೌಕಟ್ಟು, ಅದರರ್ಥ, ಅದಕ್ಕೆ (significance) ಔಚಿತ್ಯ, ಎಲ್ಲ ಬರುವುದು ಶ್ರೀಪಾದರಾಜ ರಿಂದಾರಂಭ ಆದ ಹರಿದಾಸ ಭಕ್ತಿಯ ಆಂದೋಲನದಲ್ಲಿ. ಅಲ್ಲಿಂದೀಚೆ ಹರಿದಾಸ, ಹರಿಕಥೆ, ವಿಷ್ಣುಕಥೆ, ಅಚ್ಯುತಕಥೆ ಕೇಳಿಬರುತ್ತ ವ್ಯಾಸರಾಯರು, ಪುರಂದರದಾಸರಲ್ಲಿ ಸ್ಪಷ್ಟವಾಗಿಯೇ ಉದ್ಧೃತವಾಗಿದೆ. ಪುರಂದರದಾಸರು 'ಎಲ್ಲಿ ಹರಿಕಥಾ ಪ್ರಸಂಗವೋ ಅಲ್ಲಿ ಗಂಗೆ ಯಮುನೆ ಗೋದಾವರಿ ಸಿಂಧೂ'' ಎಂಬ ಉಗಾಭೋಗ,

''ಹರಿಯ ಒಂಭತ್ತು ಭಕ್ತಿಯ ಬಲ್ಲಿರೀ'' (ಕೀರ್ತನಕಲೆ)

''ಹರಿಕಥಾಮೃತಸೇವೆ ಹರಿದಾಸರಲ್ಲದಲೇ । ವರುಳ ಮೂಢರು ಬಲ್ಲರೆ'',

''ಹರಿಕಥಾ ಶ್ರವಣಮಾಡೋ, ಪಾಡೋ–ಹರಿಕಥಾಶ್ರವಣ ಮಾಡೊ

ಪಥ ವೈಕುಂಠಕಿದು ನೋಡೋ......'' ಎಂಬ ಕೀರ್ತನೆ ಇವುಗಳೆಲ್ಲ ಅಂದು ಪ್ರಚಲಿತ ಮಾಧ್ಯಮ ಆಗಿದ್ದ ಹರಿಕಥೆಯನ್ನು ಸ್ಪಷ್ಟಪಡಿಸುತ್ತವೆ. ಇದರಿಂದ, ಡಾ. ಚಿದಾನಂದಮೂರ್ತಿಗಳ ಸಂಶೋಧಿತ ಮಾತಿನಂತೆ, ಹರಿಕಥೆಯ ಉಗಮಸ್ಥಾನ ಕರ್ನಾಟಕವೆಂದೆ ನಾವು ನಿರ್ಧರಿಸಬಹುದೆ ವಿನಾ ಮಹಾರಾಷ್ಟ್ರವಲ್ಲ. ಕೀರ್ತನ ಕಲೆಯ ಬಗ್ಗೆ ಎರಡು ಮಾತನ್ನೀಗ ತಿಳಿಸಬಹುದು.

### ಕೀರ್ತನ ಕಲೆಯ ಸ್ವರೂಪ

ಕೀರ್ತನ ಕಲೆ ಹಿಂದೆಯೇ ಹೇಳಿದಂತೆ ಗಾಯನಕಲೆ, . ಕಥನಕಲೆ ಎರಡೂ ಮೇಳ ವಿಸಿದ್ದು, ಮೆಂಪ್ಪುರಿಗೊಂಡದ್ದು ಒಂದು ಸಂಕೀರ್ಣ ಕಲಾ ಮಾಧ್ಯಮ. ಇತಿಹಾಸದ ಪ್ರಸಿದ್ಧ ಸಂಗತಿಗಳನ್ನೋ ಪುರಾಣ–ಕಾವ್ಯಗಳ ಸ್ವಾರಸ್ಯಕರ ಭಾಗಗಳನ್ನೋ (ಉದಾ : ಕುಮಾರವ್ಯಾಸನ ಭಾರತ, ಪದ್ಮಾವತೀ ಪರಿಣಯ, ಶ್ರೀವೆಂಕಟೇಶ ಕಲ್ಯಾಣ, ತೊರವೆ ರಾಮಾಯಣ, ಹೀಗೆ) ಓದುವುದು, ವ್ಯಾಖ್ಯಾನ ಮಾಡುವುದು ತುಂಬ ಹಿಂದಿನಿಂದಲೂ ನಮ್ಮಲ್ಲಿ ನಡೆದು ಬಂದಿದೆ. ಹಿಂದೆ ಹಳ್ಳಿಗಳಲ್ಲಿ ಜೈಮಿನಿಯನ್ನು ಓದಿಸಿ‌ಬರೆ, ಮಳೆ

ಯಾಗುವುದೆಂಬ ನಂಬಿಕೆಯಿತ್ತು. ಆದಿಕವಿ ವಾಲ್ಮೀಕಿಯ ಶ್ರೀಮದ್ರಾಮಾಯಣವ
ಸೊಗಸಾಗಿ ಹಾಡಿದ, ಕಥಾ ಪ್ರಸಾರ ಮಾಡಿದ ಲವಕುಶರೆ ಮೊದಲ ಗಮಕಿಗ
ವ್ಯಾಖ್ಯಾನಕಾರರೆನ್ನಬಹುದು. ಅನೇಕ ಪುರಾಣ ಕಥೆಗಳನ್ನು ಹೇಳುವ ಸ
ಪೌರಾಣಿಕರು, ಶೌನಕರು, ವೈಶಂಪಾಯನ, ಪ್ರಸಿದ್ಧರೆ–ಹೀಗೆಯೆ ಇತಿಹಾಸದ ಪ್ರಸಿ
ರಾಜರಚರಿತ್ರೆ, ವೀರ್ಯವತ್ತಾದ ಪ್ರಸಂಗ, ವೀರಗಾಥೆಗಳನ್ನು ಜನತೆಯ ಅಪೇಕ್ಷೆಯಂ
ಹಾಡು ಕಟ್ಟಿ ಹಾಡುತ್ತಿದ್ದುದೂ ಬೆಳೆದು ಬಂದ ಕಲೆಯೆ ಆಗಿದೆ. ಹೀಗೆ ಪುರಾಣ ಪು
ಕತೆ, ರಾಮಾಯಣ, ಭಾರತ, ಭಾಗವತ, ಇತಿಹಾಸದ ಸಂಗತಿ ಎಲ್ಲವನ್ನೂ ಹಾಡು
ವ್ಯಾಖ್ಯಾನಿಸುವ ಜನಸಾಮಾನ್ಯರಿಗೂ ಅರ್ಥೈಸುವ ವ್ಯಾಖ್ಯಾನಕಾರರು ಹಿಂದಿನಿ
ಇದ್ದಿರಬೇಕು. ಅವರೇ ಸಂಸ್ಕೃತಿಯ ಪ್ರಸಾರಕರೆಂದರೂ ಸರಿಯೆ. ಗ್ರಾಮ, ಪಟ್ಟ
ದೇವಾಲಯ, ಮಂಟಪ, ಅಶ್ವತ್ಥ, ಅರಳಿಕಟ್ಟೆ ಇಲ್ಲೆಲ್ಲ ಈ ವ್ಯಾಖ್ಯಾನ–ಹಾಡ
ಕೀರ್ತನಕಾವ್ಯ, ಕಾವ್ಯಾನುವಾದ, ರಸ ನಿರೂಪಣೆ ನಡೆವುದಿತ್ತು. ಅದನ್ನು ಕೇಳ
ಜನತೆ, ಕತೆ, ಲೋಕಾನುಭವ ಸೂಕ್ತಿಗಳಿಂದ, ಮನರಂಜನೆ ಪಡೆಯುತ್ತಿದ್ದುದಲ್ಲದೆ,
ತಾತ್ವಿಕ ವಿಚಾರ, ಪುರಾಣ ಪ್ರಜ್ಞೆ, ಭಾಗವತ ಪ್ರಜ್ಞೆ, ಲೋಕಾನುಭವಕ್ಕೂ ನೆರವಾ
ತ್ತಿತ್ತು. ಹಾಗೂ ಜ್ಞಾನ ಅರ್ಜಿಸುವ ಸುಲಭೋಪಾಯ ಇದಾಗಿತ್ತು. ಹಿಂ
ಮುದ್ರಣದ ಅನುಕೂಲತೆ ಇಲ್ಲದ್ದರಿಂದ ಪರಂಪರಾನುಗತ ಬಾಯಿಂದ ಬಾಯಿ
ಬಂದದ್ದು ಈ ಕೀರ್ತನ ಕಲೆ. ಮುದ್ರಣ ಕಲೆ ಪ್ರಚಲಿತ ಆದ ಮೇಲೂ ಹರಿಕಥ
ಶ್ರವಣ, ಪುರಾಣ ಕೇಳುವುದು, ಕಥಾಕಾಲಕ್ಷೇಪ ನಡೆಯಿಸುವುದು ಇನ್ನೂ ಜರುಗುತ್ತಿ
ಅದು ಸಾಮೂಹಿಕವಾಗಿ ಸಮಾಜವನ್ನು ಮುಟ್ಟುವ ಕಲಾ ಮಾಧ್ಯಮ ಆಗುತ್ತಿ
ತಾನೇ ಓದುವುದಕ್ಕಿಂತ ಕೇಳಿದರೆ ಇನ್ನೂ ಮನದಟ್ಟಾಗುವುದು ಸುಲಭ. ಹಾಗೆ
ಮನಶ್ಶುದ್ಧಿ, ತನುಶುದ್ಧಿಗೆ ಹಾದಿ. ಜನತೆಯ ಮನೋಧರ್ಮ, ಚಾರಿತ್ರ್ಯವನ
ತಿದ್ದಲು ನೆರವಾಯಿತು. ಇದಲ್ಲದೆ, ಜನಸಾಮಾನ್ಯರಿಗೆ ಕಾಲೀನ ಪರಿಸ್ಥಿತಿಯ ಬಗ್ಗೆ
ಬೆಳಕು ಚೆಲ್ಲುವ ಹಾಗೂ ಇತಿಹಾಸದ ಬಗ್ಗೆ ತಿಳಿಸಿ ಅರಸರ ಪರವೊ ವಿರುದ್ಧವೊ
ಜಾಗೃತಿಗೊಳಿಸಬೈಸುವ ಸಂಪರ್ಕ ಸಾಧನವೂ ಆಯಿತು. ವಚನಕಾರರಲ್ಲಿ ಶಿವಾನುಭ
ಗೋಷ್ಠಿ–ಶಿವಕೂಟದಲ್ಲಿ ನಡೆಸುತ್ತಿದ್ದ ವಚನಗೋಷ್ಠಿ, ಅದರ ನಂತರ ಬಂದ ಹರಿದಾ
ರಲ್ಲಿ ಬೇರೆ ಸ್ವರೂಪ ತಾಳಿತು. ಇದಕ್ಕೆ ಕಾರಣ, ಮೊದಲಲ್ಲಿ ತಿಳಿಸಿದಂತೆ, ಶ್ರೀಪಾ
ರಾಜರಿಗೆ ತಮಿಳುನಾಡಿನಲ್ಲಿದ್ದ ಶ್ರೀವೈಷ್ಣವ ಸಂತ ಮಹನೀಯರಾದ ಆಳ್ವಾರ್‌ರ
ದಿವ್ಯಪ್ರಬಂಧ ಪಾರಾಯಣ, ಪ್ರತಿದಿನ ಪೂಜಾ ಕಾಲದಲ್ಲಿ ಮಂತ್ರಪುಷ್ಪ (ವೇದೋಕ್ತ
ದೊಂದಿಗೆ ತಿರುಪ್ಪಲ್ಲಾಂಡು (ಪರಾಕ್) ತಿರುಪ್ಪಾವೈ, ಶ್ಲೋಕಗಳು ಇವೆಲ್ಲ ಸಾಕಷ್ಟು
ಪ್ರಭಾವ ಬೀರಿ, ಸಂಸ್ಕೃತಭೂಯಿಷ್ಠವಾದ ಜನಸಾಮಾನ್ಯರಿಗರ್ಥ ಆಗದ ಸಂಪ್ರದಾಯ
ಮತ ಧರ್ಮ ಗ್ರಂಥಸಾರವನ್ನು ಸ್ಥಳೀಯ ಭಾಷೆಯಾದ ತಿಳಿಗನ್ನಡದಲ್ಲಿ ತಿಳಿಸುವುದ
ಮೂಲಕ ಹರಿದಾಸಗೋಷ್ಠಿ ಬಳಕೆಗೆ ಬಂದದ್ದು. ಸದಾ ಹರಿನಿಷ್ಠೆ, ಹರಿಸ್ಮರಣೆ
ಹರಿಕೀರ್ತನೆ–ಇದು ಶ್ರೀಪಾದರಾಜರು ಬಿತ್ತಿದ ಶ್ರೀಕಾರ. ವೇದದ ಪ್ರಣವದೊಂದಿ

ದಾಸರ ಶ್ರೀಕಾರ ಸೇರಿ ಮುಂದಿನ ನಾರಾಯಣಸ್ಮರಣೆಯು, ಪಾರಮ್ಯದ, ಪಥಕ್ಕೆ ಜನಮನವನ್ನು ತಿರುಗಿಸುವಲ್ಲಿ ಮಾಡಿದ ಸಫಲ ಪ್ರಯತ್ನ ಶ್ರೀಪಾದರಾಜರಿಂದರೆ ಉತ್ಪ್ರೇಕ್ಷೆಯಲ್ಲ. ಅವರ ಪ್ರಿಯಶಿಷ್ಯರಾದ ವ್ಯಾಸರಾಯರ ವೇಳೆಗೆ ರಾಜಕೀಯ ಪರಿಸ್ಥಿತಿ, ಆಳುವವರ ಧರ್ಮಶ್ರದ್ಧೆ, ಮಧ್ವಮತ ಪ್ರಸಾರಕ್ಕೆ-ಹರಿದಾಸ ಸಂಘಟನೆಗೆ, ವಿಷ್ಣುಭಕ್ತಿ ಬಿತ್ತರಿಸುವಿಕೆಗೆ, ಅನುಕೂಲವಾಯಿತು. ವ್ಯಾಸರಾಯರು ಶ್ರೀಪಾದ ರಾಜರ ಸಮರ್ಥ ನೇತೃತ್ವದಲ್ಲಿ ಬೆಳೆದು ಪ್ರಗತಿಶೀಲ ಮನೋಭಾವನೆ ಬೆಳೆಸಿಕೊಂಡರೆ, ಅವರ ಶಿಷ್ಯರಾದ ವಾದಿರಾಜರು ಇನ್ನೂ ಮುಂದೆ ಸಾಗಿ ಸಮಾಜ ಸುಧಾರಣಾ ಪ್ರಯತ್ನ ಗಳನ್ನೂ ಮಾಡಿದರು. ಇದು ಹರಿದಾಸ ಸಂಪ್ರದಾಯದ ನಿಷ್ಠೆಯನ್ನೊಂದೆಡೆ ಬೆಳೆ ಸಿದರೆ, ಮಧ್ವಮತ ಪ್ರಸಾರ, ಸಮಾಜ ಸುಧಾರಣೆಯ ಕಾರ್ಯಕ್ರಮಗಳನ್ನು ಇನ್ನೊಂದೆಡೆ ಬಳಸುವಲ್ಲಿಳಿಸಿದವರಲ್ಲಿ ಪುರಂದರದಾಸರು, ಅಷ್ಟೇ, ವಿಶಿಷ್ಟರೆನ್ನಿಸುವ ಕನಕದಾಸರು ಪ್ರಮುಖರು. ಹೀಗೆ ಕೀರ್ತನ ಕಲೆ "ಧ್ಯಾಯನ್ ಕಲಿಯುಗೇ" ಎಂಬಂತೆ ಕಲಿಯುಗ ದಲ್ಲಿ ನಾಮ ಸಂಕೀರ್ತನೆ-ಹರಿಕಥಾಕಾಲಕ್ಷೇಪ-ಹಟ್ಟಿ ಬೆಳೆದದ್ದು ಸುಮಾರು ೧೫ನೇ ಶತಮಾನದಿಂದ.

ಭಗವನ್ನಾಮ ಸಂಕೀರ್ತನೆ, ನೀತಿಯಂತ ಬದುಕು ಇವೇ ಆದರ್ಶಗಳಿಗೆ ಪ್ರಾಮುಖ್ಯ, ಪ್ರಾಶಸ್ತ್ಯ ನೀಡಿದರು. ಈ ಭಕ್ತಿಪಂಥಗಳ ಆಂದೋಲನ ಫಲವೆ ಇಂದೂ ಪ್ರಚಲಿತವಿರುವ ಹರಿಕಥೆ-ಕೀರ್ತನ ಪದ್ಧತಿಗೆ ಹಿನ್ನೆಲೆ. ಇಲ್ಲಿ ಜಾತಿ, ಪ್ರಾಂತ್ಯ, ಭಾಷೆ ಯಾವ ಭೇದವಿರದೆ ಭಗವಂತನಲ್ಲಿ ಮಾಡುವ ಭಕ್ತಿಯೊಂದೆ, ಪ್ರಧಾನ. ಈ ಕಥಾ ಶ್ರವಣ-ಕಾಲಕ್ಷೇಪ ಪದ್ಧತಿಯಲ್ಲಿ ಕಾಲ ಕಳೆದಂತೆ ನವೀನತೆ, ನಿರೂಪಣೆಯಲ್ಲಿ ಹೊಸ ತನ ಬೆಳೆದು ಬಂದುವು.

ಹದಿನೈದನೆ ಶತಮಾನದ ವೇಳೆಗಾಗಲೆ ದಕ್ಷಿಣ ದೇಶದ ಕೀರ್ತನ ಕಲೆಗೆ ಪ್ರಮುಖ ಕೇಂದ್ರ, ಪಂಢರಾಪುರವಾಯಿತೆಂಬುದು ಆಗಿನ ಭಕ್ತಿಸಾಹಿತ್ಯವನ್ನು ಅವಲೋಕಿಸುವಲ್ಲಿ ತಿಳಿದು ಬರುತ್ತದೆ. ವಿಠ್ಠಲೋಪಾಸನೆ, ವಿಠಲನಾಮಸ್ಮರಣೆ, ನಾಮದೇವ-ತುಕಾ-ಜ್ಞಾನ ದೇವ-ಏಕನಾಥರಲ್ಲದೆ ಹರಿದಾಸರೂ ನಡೆಸಿದರು. ಹರಿದಾಸರಲ್ಲಿ ಆಗ್ಗೆ ಹರಿಕಥೆ ಇತ್ತೆಂಬುದಕ್ಕೆ ಆನೇಕ ಉಲ್ಲೇಖಗಳಿವೆ. ಆದರೆ, ಅದರ ಸ್ವರೂಪ ಖಚಿತವಾಗಿ ತಿಳಿಯದು. ಹರಿಕಥೆ ಏಕಾಗ್ರಚಿತ್ತದಿ ಕೇಳಬೇಕು ನೀತಿ ವಾಕ್ಯ ಅಲ್ಲದೆ, ಕುಳಿತು ಕೇಳು ವಾಗ್ಗೆ (ಈಗಲೂ ದೇವಸ್ಥಾನ-ಮಠಗಳಲ್ಲಿ ಸಾಮಾನ್ಯವಾಗಿ ನಡೆಯುವಂತೆ) ಆ ಭಕ್ತರ ಪಾದರಕ್ಷೆಗಳನ್ನು ಕದ್ದೊಯ್ಯುತ್ತಿದ್ದ ಸಹಜ ಚಿತ್ರಣವನ್ನು ಪುರಂದರದಾಸರು ಕೊಟ್ಟಿ- ದ್ದಾರೆ. (೭೭. ಪಾಪೋಸು ಪೋದವಲ್ಲ....ಪರಮ ಭಾಗವತರು ಹರಿಕಥೆ ಕೇಳಲು : ಪರಮ ಭಕುತಿಯಿಂದ ಕೇಳುತಿರೆ : ಪರಮ ಪಾಪಿಗಳ ಪಾಲಾಗಿ ಹೋದೇವು : ಪರಮ ಪುರುಷನ ಮನಸ್ಸಿಗೆ ಬಂದೀಗ......) ಇದಲ್ಲದೆ, ಹರಿಕಥೆ, ಹರಿಯ ಕಥನದ ಪದ್ಧತಿ ಯನ್ನು ಅನಂತರದಲ್ಲಿ ಶಿವನ ಕಥೆಗಳನ್ನು ನಿರೂಪಿಸಲು ವೀರಶೈವರು ಬಳಸಿಕೊಂಡ ರೆಂಬುದು ವೇದ್ಯವಾಗುತ್ತದೆ. ಒಟ್ಟಾರೆ ದಕ್ಷಿಣ ಭಾರತದಲ್ಲೆಲ್ಲ ಕಥೆಯ ಪದ್ಧತಿ ರೂಢಿಗೆ

ಬಂದಿತೆನ್ನಬಹುದಾಗಿದೆ. ಮಹಾರಾಷ್ಟ್ರದಲ್ಲಿ ಧರ್ಮ ಪ್ರಚಾರ ಕಾರ್ಯವನ್ನು ಮಾಡು ಸುವ ಕಾರ್ಯ ಸಮರ್ಥ ರಾಮದಾಸಸ್ವಾಮಿಗಳು (ಛತ್ರಪತಿ ಶಿವಾಜಿಯ ಗುರುಗಳಾಗಿದ್ದ ವರು) ತಮ್ಮ ಅನೇಕ ಶಿಷ್ಯರ ಮೂಲಕ ಕೈಗೊಂಡದ್ದು ಎಲ್ಲರೂ ತಿಳಿದ ವಿಚಾರವೆ. ಹಾಗೂ ಈ ಶಿಷ್ಯರು ಹೋದೆಡೆಗಳಲ್ಲೆಲ್ಲ, ಭಗವನ್ನಾಮಸಂಕೀರ್ತನೆಯ ಜತೆ, ಕಥಾ ಪ್ರವಚನ, ಧರ್ಮಗ್ರಂಥಗಳ ಪರಿಚಯ (ಆಗ್ಗೆ ಪ್ರಸಿದ್ಧ ಆಗಿದ್ದ ಜ್ಞಾನೇಶ್ವರೀ, ರಾಮ ದಾಸರ ಶ್ರೀರಾಮಭಕ್ತಿ, ಹನುಮಂತನ ಪರಾಕ್ರಮ, ಆದರ್ಶ) ಮಾಡಿ ಕೊಟ್ಟಲ್ಲದೆ ಜನರಿಗೆ ಧರ್ಮಕಾರ್ಯ ಪ್ರಚೋದನೆಯನ್ನು ಉಂಟು ಮಾಡಿದರು. ಈ ಪರಂಪರೆಗೇ ಸೇರಿದ ಸಂತ ತುಕಾರಾಮ ಪಂಢರಿಗೆಯ ಪಾಂಡುರಂಗ ದೇವಾಲಯದಲ್ಲಿ ನಡೆಸುತ್ತಿದ್ದ ನಾಮ ಸಂಕೀರ್ತನ ಗೋಷ್ಠಿಗೆ ಜನ ಕಿಕ್ಕಿರಿಯುತ್ತಿದ್ದಲ್ಲದೆ, ಶಿವಾಜಿ ಮಹಾರಾಜನೆ ವೇಷಾಂತರದಲ್ಲಿ ಬಂದು ಕೇಳುತ್ತಿದ್ದನೆಂದೂ ಪ್ರತೀತಿ. ಆದರೆ, ರಾಮದಾಸ ಹಾಗೂ ತುಕಾರಾಮ ಕೀರ್ತನೆಗಳೆ ಈಗಿನ ಹರಿಕಥೆ ಉಗಮಕ್ಕೆ ಕಾರಣವಾದುದೆಂಬ (ಮಹಾ ರಾಷ್ಟ್ರದವರು ಹೇಳಿಕೊಳ್ಳುವ) ಮಾತು ಮಾತ್ರ ಒಪ್ಪುವಂಥದಲ್ಲ. ಏಕೆಂದರೆ ಕನ್ನಡ ನಾಡಿನಲ್ಲಿ ಬೆಳೆದು ಬಂದ ಭಕ್ತಿಪಂಥದ ಉಗಮ, ಬೆಳವಣಿಗೆ, ವಚನಕಾರರ ಶಿವಭಕ್ತಿ, ಕಾವ್ಯ ಸಂಪದ, ಹರಿದಾಸ ಪಂಥದ ಉಗಮ-ವ್ಯಾಪ್ತಿಯನ್ನೆಲ್ಲ ಗಮನಿಸಿದರೆ ಹರಿಕಥೆ ಯಲ್ಲಿ ಕನ್ನಡಿಗರದ್ದೆ ಒಂದು ವಿಶೇಷತೆಯೆಂದೆನ್ನಿಸುತ್ತದೆ. ಭಾಗವತರ-ದಾಸರ ವೇಷ ಭೂಷಣಗಳು, ಕಥಾ ವಸ್ತು ನಿರೂಪಣೆ ಬೆಳಸುವ ರೀತಿ, ಸಂಗೀತ-ನೃತ್ಯಗಳ ಬಳಕೆ (ಈಗ ವಾದ್ಯಗಳೂ ಆಧುನಿಕ ಕಾಲಕ್ಕೆ ಸರಿಯಾಗಿವೆ) ಉಪಾಖ್ಯಾನ-ಇವೆಲ್ಲದರಲ್ಲಿ ತಮಿಳು ನಾಡು, ತೆಲಗುದೇಶ, ಮಹಾರಾಷ್ಟ್ರ-ಕರ್ಣಾಟಕಗಳ ಪದ್ಧತಿಯಲ್ಲಿ ಸ್ವಲ್ಪ ಸಾಮ್ಯ ಕಂಡರೂ ವಿವರಣೆಗಳಲ್ಲಿ ತುಂಬ ಭಿನ್ನತೆ ಕಂಡು ಬರುತ್ತದೆ. ಒಟ್ಟಾರೆ ಎಲ್ಲ ಭಾಷೆ ಯಲ್ಲೂ ಈ ಕಲೆ ಒಟ್ಟಾಗಿ ಬೆಳೆಯಿತೆನ್ನಬಹುದೆ ವಿನಾ ಒಂದು, ಇನ್ನೊಂದರ ಹುಟ್ಟಿಗೆ ಕಾರಣವೆನ್ನಲಾಗದು.

ಕರ್ಣಾಟಕದ ಹರಿಕಥೆಯ ದಾಸರಲ್ಲಿ ಅವರವರ ವೈಯಕ್ತಿಕ ವಾಕ್ಪ್ರಯ ತಪಸ್ಸಿಯ ಆಳವಿಗೆ ತಕ್ಕಂತೆ, ಅಭಿರುಚಿ-ಸಾಮರ್ಥ್ಯಕ್ಕೆ ತಕ್ಕಂತೆ, ನಾಮಸಂಕೀರ್ತನೆ, ಕಥಾಪ್ರವಚನ, ಅನುವಾದ, ಸಂಸ್ಕೃತ ಶ್ಲೋಕಗಳ ಉದ್ಧರಣ, ವ್ಯಾಖ್ಯಾನ, ನರ್ತನ ನಡು ನಡುವೆ ಉಪಾಖ್ಯಾನಗಳು-ಗಾನ, ನರ್ತನಗಾನನ, ಎಲ್ಲ ಬೆರೆತು ಕೀರ್ತನ ಕಲೆ ತಾನಾಗಿಯೆ ಆರಳಿ ವಿಕಸನಗೊಳ್ಳುತ್ತದೆ. ಡಾ॥ ಎಂ. ಸಿ. ಎಂ. ರವರ ಅಭಿಮಂತದಂತೆ ಹರಿಕಥೆಯ ನಂತರ, ವೀರಶೈವ ಸಂಪ್ರದಾಯಸ್ಥರು-ಶಿವಕಥೆಯನ್ನೂ, ಜೈನಧರ್ಮೀ ಯರು ಜಿನಕಥೆಯನ್ನು ಪ್ರಚಲಿತಗೊಳಿಸಿದ್ದಾರೆ. ಒಂದು ಪ್ರಸಿದ್ಧ ಶಾಸನ ಶ್ಲೋಕ ದಂತ ("ಯಂಶೈವಾ ಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ" ಎಂಬ ಶ್ಲೋಕ) ಎಲ್ಲ ಬಗೆಯ ಮತಾನುಯಾಯಿಗಳಿರುವುದು, ಕೀರ್ತನೆಗಳನ್ನು ಕೇಳಲು ಎಲ್ಲರೂ ಸೇರುವುದು, ಹಿಂದಿನಿಂದ ನಡೆದುಕೊಂಡು ಬಂದಿರುವ ಕನ್ನಡಿಗರ ಧರ್ಮ ಸಹಿಷ್ಣುತೆಗೆ ನಿದರ್ಶನವಾಗಿದೆ.

ಹರಿಕಥೆಯಲ್ಲಿ ಕಥೆಯ ನಿರೂಪಣೆಗೇ ಪ್ರಾಧಾನ್ಯ. ಅದನ್ನು ಮನವರಿಕೆ ಮಾಡಲೆಂದು ಕೀರ್ತನಕಾರರು ಹಾಗೂ ಕಥೆಯಲ್ಲಿ ತೊಡಗುವವರು (ವ್ಯಾಖ್ಯಾನಕಾರರು-ಭಾಗವತರು) ಸುಶ್ರಾವ್ಯವಾದ ಸಂಗೀತ, ದಾಸರ ಪದಗಳು, ಬೆಡಗಿನ ವಚನ, ನೃತ್ಯ, ಅಭಿನಯ, ಧ್ವನಿಯಲ್ಲಿ ಏರಿಳಿತ, ರಸಕ್ಕೆ ತಕ್ಕ ಧ್ವನಿ, ಉಪಾಖ್ಯಾನ, ಶಾಸ್ತ್ರ ಶ್ಲೋಕವನ್ನು ರಾಗ ಮಾಲಿಕೆಯಲ್ಲಿ ಹೇಳಿ ಗಂಭೀರ ವಾತಾವರಣ ಸೃಜಿಸಿ ಪ್ರೇಕ್ಷಕರನ್ನು ಮಂತ್ರಮುಗ್ಧರಾಗಿಸಿ, ಆಗಾಗ್ಗೆ ಭಜನೆಯ ಹಾಡು ತಾವೂ ಹೇಳಿ, ಶ್ರೋತೃಗಳ ಬಾಯಿಯಲ್ಲೂ ಹೇಳಿಸುವುದು ಹೀಗೆಲ್ಲ ತಮ್ಮ ತಮ್ಮ ವೈಯಕ್ತಿಕ ಶಕ್ತಿ-ಭಾಷಾ ಪ್ರಭುತ್ವಕ್ಕೆ ತಕ್ಕಂತೆ ಸಾಂದರ್ಭಿಕವಾಗಿ ಬಳಸುತ್ತಾರೆ. ಇದರಿಂದಾಗಿ ಹರಿಕಥೆ, ಕೀರ್ತನ ಕಲೆ ಒಂದು ಸಮ್ಮಿಶ್ರ ರೂಪಗೊಂಡು ವಿಕಾಸ ಪಡೆದಿದೆ. ದಕ್ಷಿಣ ಭಾರತದ ಆಕಾಶವಾಣಿ ಕೇಂದ್ರಗಳಲ್ಲಿ ರೇಡಿಯೊ ಮೂಲಕ ಬಿತ್ತರಿಸಲು ಈ ಕಲೆಗೆ ಅವಕಾಶವನ್ನು ನೀಡುತ್ತಿದಾರೆ. ಇದೂ ಒಂದು ಸಾಂಸ್ಕೃತಿಕ ಚಟುವಟಿಕೆಯೆ ಆಗಿದೆಯೇ ಹೊರತು ತಪ್ಪಿಲ್ಲ.

ಹರಿಕಥೆ, ಕೀರ್ತನಕಾರರಿಗೆ ದೊರೆವುವು ಅನೇಕ ಕಥಾವಸ್ತುಗಳು. ರಾಮಾಯಣ, ಮಹಾಭಾರತ, ಭಾಗವತ, ಬೇರೆ ಬೇರೆ ಭಾಷೆಗಳಲ್ಲಿ ರಚಿತಗೊಂಡ ಭಕ್ತಿ ಸಾಹಿತ್ಯ, ಕಬೀರ ಮೀರಾ-ಆಳ್ವಾರ್, ಪೋತನ-ಕಂಬರ್-ತಿರುಕ್ಕುರಳ್-ಮಣಿಕ್ಕ ವಾಚಕರ್ ಹೀಗೆ ಅನೇಕ ಮಹನೀಯರ ಕೃತಿಗಳಲ್ಲಿ, ವಿಶೋಬನ ಭಕ್ತ ಸಂತ ಮಹನೀಯರ ಕೀರ್ತನಾವಳಿ, ಇವೆಲ್ಲ ಸಾಕಷ್ಟು ವಿಚಾರ ಗಾಯನ ಸಂಪತ್ತಿಗೆ ಕಣಜಗಳಾಗಿವೆ. ಇದನ್ನೆಲ್ಲ ತಲಸ್ಪರ್ಶಿಯಾದ ಅಧ್ಯಯನ ನಡೆಸಿ, ಅರ್ಥೈಸಿಕೊಂಡು, ಕಥೆಗಳಾಗಿ ವಿಂಗಡಿಸಿಕೊಂಡು, ಟಿಪ್ಪಣಿ ತಯಾರಿಸಿ, ಕಥಾ ಪ್ರವಚನ ನಿರ್ದಿಷ್ಟ ಸಮಯ ಪಾಲಿಸುವ ದೃಷ್ಟಿಯಿಂದ ತಯಾರಿ ಮಾಡಿಕೊಂಡು ಮಂಗಿಸಿ ("ಪವಮಾನ") ಮಂಗಳ ಹಾಡುವ ಪದ್ಧತಿ ಈಗಲೂ ಇದೆ. ಅಥವಾ ಮುಂದುವರಿಸುವುದೂ ಉಂಟು (continuation) ಅಥವಾ ಯಾವುದೊ ಒಂದು ಉಪಕಥೆಯನ್ನೊ, ಕಥಾಭಾಗವನ್ನೊ ತೆಗೆದುಕೊಂಡು ಹರಿಕಥೆ ಮಾಡುವುದೂ ಉಂಟು. ಇವರ ಜತೆ ಸಾಧುಸಂತರ ಜೀವನಚರಿತ್ರೆ-ಕಬೀರ, ಮುಂಕ್ರಾಬಾಯಿ, ಜ್ಞಾನದೇವ, ಸಂತ ತುಕರಾಮ, ಸಮರ್ಥ ರಾಮದಾಸ, ತ್ಯಾಗರಾಜ, ರಾಮಾಂಜನೇಯರ ಯುದ್ಧ, ವಿವೇಕಾನಂದ, ಪರಮಹಂಸ ರಾಮಕೃಷ್ಣ, ಸಾಯಿಬಾಬ, ಪುರಂದರದಾಸರು, ಕನಕದಾಸರು, ರಮಣ ಮಹರ್ಷಿ-ಹೀಗೆ ಅನೇಕ ಮಹಿಮಾಪೂರ್ಣರ ಜೀವನ ಕುರಿತಾದ ಕಥಾಕಾಲಕ್ಷೇಪ ನಡೆಸುವುದೂ ಇತ್ತೀಚೆಗೆ ಬೆಳೆದು ಬಂದಿದೆ. ಇದರಲ್ಲಿ ಭದ್ರಗಿರಿ ಕೇಶವದಾಸರು ಕೆಲವಾರು ಪ್ರಯೋಗ ನಡೆಸಿದಾರೆ. ಇವರಿಗೆ ಇಂಗ್ಲೀಷ್ ಭಾಷೆಯಲ್ಲಿ ಪಾಂಡಿತ್ಯ ಇರುವುದು ಇನ್ನೂ ವಿಶೇಷ. ಇಂಗ್ಲಿಷ್‌ನಲ್ಲಿಯೆ ಕಥೆ ಮಾಡುವ ಕ್ರಮ ರೂಢಿಸಿದಾರೆ, ಜರ್ಮನ್ ಭಾಷೆ ಕಲಿತು ದೇಶವಿದೇಶಗಳಲ್ಲಿ ತಮ್ಮ ವಾದ್ಯಗೋಷ್ಠಿ ಸಮೇತ ಕಥಾ ಪ್ರವಚನ ನಡೆಸಿ ಪ್ರಸಿದ್ಧರಾಗಿದ್ದಾರೆ.

ಹರಿಕಥೆ, ಕೀರ್ತನಕಲೆಯನ್ನು ಸಮರ್ಥ ಸಂಪರ್ಕ ಮಾಧ್ಯಮವಾಗಿ ಮಾಡಿಕೊಳ್ಳುವುದು ಇಂದಿನ ಪ್ರಜಾಪ್ರಭುತ್ವದಲ್ಲಿ ಒಳ್ಳೆಯದೇ. ಜನತೆಯ ಶಿಕ್ಷಣ, ಪ್ರಚಾರ, ಧರ್ಮ

ಶ್ರದ್ಧೆ, ಆಂದೋಲನ ಜಾಗೃತಿ, ಇವೆಲ್ಲ ನಡೆಸಬಹುದಾದ ಸಾಧನ ಹರಿಕಥೆ ಹಾಗೂ ಕೀರ್ತನ ಕಲೆ. ಕ್ರೈಸ್ತ ಪಾದ್ರಿಗಳು, ಕ್ರೈಸ್ತ ಧರ್ಮ ಪ್ರಚಾರಕರು "ಯೇಸುವಿನ ಕೀರ್ತನೆ", "ಯೇಸುವಿನ ಧರ್ಮ ಸಂದೇಶ" ಹೀಗೆಲ್ಲ ಚರ್ಚುಗಳಲ್ಲಿಯೂ, ಹಾಗೂ ಹಿಂದುಳಿದ ಗ್ರಾಮಗಳ ಜನತೆ ಸೆಳೆಯಲೂ ಕ್ರೈಸ್ತ ಕೀರ್ತನೆ ಮಾಡುತ್ತಿರುವುದು ಸುವಿದಿತ.

ಮೂಲತಃ ಭಕ್ತಿಪಂಥದ ಒಂದು ಶಾಖೆ-ಪ್ರಸಾರ ಸಾಧನ ಹಾಗೂ ಹರಿದಾಸ ಸಂಪ್ರದಾಯದ ಒಂದು ಅವಿಭಾಜ್ಯ ಮತ್ತು ವಿಶಿಷ್ಟ ಅಂಗವಾದ ಹರಿಕಥೆ-ಕೀರ್ತನ ಪದ್ಧತಿಯನ್ನು ಇಂದಿನ ಆಧುನಿಕ ಕಾಲದಲ್ಲಿ ಅನೇಕ ಉದ್ದೇಶ ಸಾಧನೆಗಾಗಿ ಬಳಸುತ್ತಿದ್ದಾರೆ. ಜನಸಂಖ್ಯೆ ಮಿತಿ, ಅಕ್ಷರ ಕಲಿಕೆ ಪ್ರಚಾರ, ಸಾರ್ವಜನಿಕ ಆರೋಗ್ಯ, ಪಾನ ನಿರೋಧ, ರಾಜಕೀಯ ಪ್ರಚಾರ, ವಿಜ್ಞಾನ-ವಿಜ್ಞಾನಿ ಕಥೆಗಳೂ ಇತ್ಯಾದಿ ಲೌಕಿಕ ಕಾರ್ಯಗಳಿಗಾಗಿಯೂ ಬಳಸುತ್ತಿರುವುದು ಈ ಕಲೆಗೆ ಸಂಪ್ರದಾಯದ ಚೌಕಟ್ಟನ್ನು ತೆಗೆದಂತೆನ್ನಿಸುತ್ತದೆ. ಮಧ್ವಮತ ಪ್ರಸಾರ-ಹರಿಭಕ್ತಿ ಪಾರಮ್ಯ-ಪ್ರತಿಪಾದನೆಗಾಗಿ ಹುಟ್ಟಿಕೊಂಡ ಹರಿಕಥೆಯ ವಂಟ್ಟು ಇದರಿಂದ ಇಳಿಯಿತೇನೋ ಎಂದು ಧರ್ಮದ ನಿಟ್ಟಿನಲ್ಲಿ, ಅನ್ನಿಸಿದರೂ ಈ ಕಲೆ ಬೆಳೆದಿರುವ ವ್ಯಾಪ್ತಿ, ವಿಸ್ತಾರವಾದದು, ಕನ್ನಡ ನುಡಿಗೊಂದು ಹೆಮ್ಮೆ, ಸಾಂಸ್ಕೃತಿಕ ವೈಶಿಷ್ಟ್ಯವೆನ್ನಬಹುದು.

ಕೀರ್ತನಕಲೆ ಅನೇಕ ಕಲೆಗಳ ಮುಪ್ಪುರಿಗೊಂಡು ಮೇಳವಿಸಿರುವ ಸಂಕೀರ್ಣಕಲೆ. ಇದರಲ್ಲಿ ಪರಿಣತಿ ಸುಲಭವಲ್ಲ. ಕೆಲವರಿಗೆ ಜನ್ಮತಃ ಈ ಕಲೆಯಲ್ಲಿ ಸಾಮರ್ಥ್ಯ ಇದ್ದಿತು ಹಾಗೂ ಆನುವಂಶಿಕವಾಗಿ ಬರಬಹುದು; ಉತ್ತಮ ಗುರುಗಳ ಉಪದೇಶ, ಶಾಸ್ತ್ರ ಅಧ್ಯಯನದ ಮೂಲಕ ಕಲಿತು ಬರಬಹುದು. ಆದರೆ ಈ ಕಲೆಯ ಎಲ್ಲ ರೀತಿಯ ನೈಪುಣ್ಯ ಸತತ ಸಾಧನೆಯಿಂದ ಮಾತ್ರವೇ ಸಾಧ್ಯ. ಕಲಿತಷ್ಟೂ ಇನ್ನೂ ಇರುತ್ತದೆ.

ಹರಿಕಥೆಯ ಮುಖ್ಯ ಭಾಗ ಕಥಾ ಪ್ರತಿಪಾದನೆ. ಇಲ್ಲಿ ಕಥೆಯನ್ನು ನಡೆಸುವಾತನ ವಾಗ್ಮಿತೆ, ಸಾಹಿತ್ಯ ಕೃಷಿ, ಸಾಹಿತ್ಯ ಅಧ್ಯಯನ, ಭಾಷೆಯ ಮೇಲಣ ಪ್ರಭುತ್ವ, ಪ್ರೌಢಿಮೆ ಎಲ್ಲವನ್ನೂ ಅವಲಂಬಿಸುತ್ತದೆ. ಬರೀ ಓದಿದ್ದರಾಯಿತೆ ? ಅಭಿವ್ಯಕ್ತಿ ಸಾಮರ್ಥ್ಯವೂ ಅಷ್ಟೇ ಅಗತ್ಯ. ಶಬ್ದ ಸಂಪತ್ತಿ ತುಂಬ ಅಗತ್ಯ. ಔಚಿತ್ಯವರಿತು ಸಂದರ್ಭಕ್ಕೆ ತಕ್ಕಂತೆ ಶಬ್ದ ಪ್ರಯೋಗ ನಡೆಸಿ, ತಕ್ಕ ಪರಿಣಾಮವುಂಟು ಮಾಡಬಲ್ಲರು. ಹರಿಕಥಾ ಸಾಹಿತ್ಯ ಬಹುಮಟ್ಟಿಗೆ ಅವರವರ ವೈಯಕ್ತಿಕ ರಚನೆ, ಟಿಪ್ಪಣಿಗಳ ನಡುನಡುವೆ, ಶಾಸ್ತ್ರ, ಪುರಾಣ, ಉಪನಿಷದ್ವಾಕ್ಯ, ಈ ದಿಸೆಯಲ್ಲಿ ಇತ್ತೀಚೆಗೆ ಆಗಿಹೋದ ಗೀತಾಭಾಷ್ಯ ಮುಂತಾದರಲ್ಲೂ ಕೃಷಿ ನಡೆಸಿರುವ ಹೊಸಕೆರೆ ಚಿದಂಬರಯ್ಯನವರು "ಕೀರ್ತನ ಕಂಠಾಭರಣ", ಬೇಲೂರು ಕೇಶವದಾಸರ ಬಹುಭಾಷಾ ಪ್ರೌಢಿಮೆ ಆನುವಂಶಿಕವಾಗಿ ಅವರ ತಂದೆಯಿಂದ ಪಡೆದು ಬಂದ ಕೀರ್ತನಕಲೆ ಸಾಹಿತ್ಯಾಧ್ಯಯನದ ಫ್ರತಿಫಲವಾಗಿರುವ ಕರ್ಣಾಟಕ ಭಕ್ತವಿಜಯ, ಭಕ್ತಿವಿಜಯ, ಇವೆಲ್ಲ ಕಥಾ ಸಾಹಿತ್ಯ ವಸ್ತುಗಳೆ ಆಗಿವೆ. ಭದ್ರಗಿರಿ ಅಚ್ಯುತದಾಸ-ಕೇಶವದಾಸರು ಈ ಬಗೆ ಸಾಹಿತ್ಯಕ್ಕೆ

ಮಿರಾ, ನಾಮದೇವ, ಜ್ಞಾನದೇವ, ಕಬೀರ, ಮೊಂತಾದ ಸಂತರ, ಅನೇಕ ಮಹಾ ಪುರುಷರ ಕಥೆ ಕುರಿತ ವಸ್ತುವೊದಗಿಸುತ್ತಿರುವುದು ಸಂತಸದ ಸಂಗತಿ.

ಹರಿಕಥೆಯ ಕಥನ ನಿರೂಪಣೆಯಲ್ಲಿ ವಾಗ್ಮಿತೆಗೆ ಪ್ರಧಾನತೆ. ಸ್ಪಷ್ಟ, ಖಚಿತ, ನಿರರ್ಗಳ, ನಿರಾಳ, ನಿರ್ದುಷ್ಟ, ಅಸ್ಖಲಿತ ಉಚ್ಚಾರಣೆ, ಶಬ್ದಕ್ಕೆ ಶಕ್ತಿ ನೀಡುತ್ತಾ, ಸಭಿಕರ ಮನಸೆಳೆವ, ಪರಿಣಾಮಬೀರಬೇಕಾದಲ್ಲಿ ಧ್ವನಿಯ ಏರಿಳಿತ, ಅಲ್ಲಲ್ಲಿ ವಿರಾಮ ಬೀಯುವಿಕೆ, ಆಲಾಪ, ಕಥೆಯ ಓಟ ಹೀಗೆಲ್ಲ ಜನಮನ ಸೆಳೆಯಲವಕಾಶವಿದೆ. ಕೀರ್ತನಕಾರರಿಗೆ ಉತ್ತಮ ನಟನ ಅಭಿನಯ, ವಾಕ್ಪಟುತ್ವ ಬೇಕು. ಪುರಂದರ-ವಿಜಯ ದಾಸಾರ್ಕರು ಹರಿದಾಸರ ಲಕ್ಷಣಗಳನ್ನೇ ಅನೇಕ ಕಡೆ ತಿಳಿಸಿದಾರೆ-ಶ್ರದ್ಧೆ, ಜ್ಞಾನಹೇತು; ಆಲಸಿಕೆ ಅಜ್ಞಾನಕ್ಕೆ ಕಾರಣ. ಪ್ರತಿಭೆ, ನವನವೋನ್ಮೇಷಶಾಲಿನಿಯಾಗಿ ವಾಗ್ಮಿತೆ ಯನ್ನು ಹೆಚ್ಚಿಸುತ್ತದೆ. ಸತತ ಸಾಧನೆಯೆ ಕೀರ್ತನ ಕಲೆಗೆ ಇರುವ ಏಕೈಕ ಮಾರ್ಗ. ಸಂಗೀತವೆ ಮುಖ್ಯವಲ್ಲ : ಅದೂ ಬೇಕಷ್ಟೆ, ಸಾಹಿತ್ಯ ಮುಖ್ಯ. ರಸಪ್ರತಿಪಾದನೆ ಆದರ (ಸಾಹಿತ್ಯದ) ಜೀವಾಳ. ಅಂತೆಯೆ ಸಂದರ್ಭೋಚಿತವಾಗಿ ಹರಿಕಥೆಯ ಕಥಾ ಭಾಗ ಶ್ರೋತೃಗಳ ಹೃದಯಸ್ಪರ್ಶಿಯಾಗಲು ಹಾಗೂ ಸರಿಯಾದ ವಾತಾವರಣವೇ ಸೃಷ್ಟಿಯಾಗಲು ಒಂದು ಕೀರ್ತನೆ, ದೇವರನಾಮ, ವಚನ, ಸಂಗಾದಿ, ಉಗಾಭೋಗ, ರಾಗಮಾಲಿಕೆ-ಹೀಗೆ ರಾಗ ರಂಜಿತ ರೀತಿಯಲ್ಲಿ ನಡೆಸುವುದು ಸೂಕ್ತ ಹಾಗೂ ಖ್ಯಾತಿಗೂ ಮಾರ್ಗ. ಕಥೆಗೆ ಸಂಗೀತ ಪೋಷಕವೆ ವಿನಾ ಪ್ರಧಾನ ಆಗಬಾರದು. ಅಭಿನಯ ಅಂದರೆ ಅಂಗವಿನ್ಯಾಸ, ಮುಖಭಂಗಿ, ಕಥೆಗೆ ವಿಶೇಷ ಮೆರುಗು ನೀಡಬಲ್ಲದು. ಕಥೆಯ ಭಾವ ಸವಿಯಲು ಶ್ರೋತೃಗಳು ತಲ್ಲೀನರಾಗದಂತೆ ಆದಕ್ಷನಗುಣವಾದ ಕೀರ್ತನಕಾರನ ಅಭಿನಯ, ನಿರೂಪಣೆಯನ್ನು ಇನ್ನೂ ಪರಿಣಾಮಕಾರಿಯಾಗಿಸುತ್ತದೆ. ಉದಾ: ಲಂಕಾದಹನ, ಹನುಮದ್ವಿಲಾಸ, ಮಾರ್ಕಂಡೇಯ ಕಥಾ ಪ್ರಸಂಗ, ಸಂಭಾಷಣೆ ಬಂದಾಗ, ಇಬ್ಬರು ಮೂವರ ಪಾತ್ರದಲ್ಲಿ ಹರಿಕಥಾಕಾರ ತನ್ನ ಧ್ವನಿಯನ್ನು ಬದ ಲಾಯಿಸುತ್ತ ಹರಿಕಥಾ ವೇದಿಕೆಯನ್ನೆ ರಂಗಸ್ಥಲವಾಗಿಸಿ, ನಾಟಕ ದೃಶ್ಯ ಸೃಜಿಸಿ, "ಅಂಗ್ಯೆ ರಂಗಭೂಮಿ" ಕಲೆಯನ್ನೂ ಯಶಸ್ವಿಯಾಗಿ ಬಳಸಬಲ್ಲ. ಕೀರ್ತನಕಾರರನೇಕರಿಗೆ ಈ ಕುಶಲತೆ ಬೆಳೆದು ಬಂದಿರುತ್ತದೆ.

ಈಚಿನವರೆವಿಗೂ ಕೀರ್ತನಕಲೆ, ಹರಿಕಥೆ-ಗುರುಶಿಷ್ಯ ಪರಂಪರೆಯಲ್ಲಿ ಉಳಿಯುತ್ತ ಬಂದವು. ಹಿಂದಿನ ಕಾಲದಲ್ಲಿ ಬೀದಿಯಲ್ಲಿ ಅವರ ಪಾಡಿಗವರು ಹಾಡುತ್ತ, ಕೊಟ್ಟರೆ ಸರಿ, ಬಿಟ್ಟರೂ ಸರಿ ಎಂದುಕೊಂಡು ಹಾಡುತ್ತ ಹೋಗುತ್ತಿದ್ದ ಹರಿದಾಸರನ್ನು ನಾವು ಕಂಡಿದೇವೆ.ಹಾಗೂ ಅವರು ತಮ್ಮ ಹಿರಿಯರಿಂದ ಪರಂಪರಾನುಗತ ಆಗಿ ಅನು ಸರಿಸಿದ ಸಂಪ್ರದಾಯವೇ ಕೀರ್ತನಕಲೆಯಾಗಿ ಬೆಳೆದು ಬಂದಿತು. ಹರಿದಾಸ ಸಂಪ್ರ ದಾಯ, ಅಂಕಿತ-ದೀಕ್ಷೆ ಇನ್ನೂ ಮುಂದುವರಿದಿದೆ. ಕೀರ್ತನಕಾರರೂ ಇದಾರೆ. ಹೆಚ್ಚು ಹೆಚ್ಚು ಜನ ಇದರಲ್ಲಿ ಪಾಲ್ಗೊಳ್ಳಲು ಮುಂಬರದಿರಲು ಪ್ರಮುಖ ಕಾರಣ- ಬದುಕಿನ ಹಾದಿ ಕಷ್ಟ ಆಗುವುದೆಂಬುದು, ಕೀರ್ತನಕಲೆ ಸುಧಾರಿಸಲು ಅನೇಕ ಪ್ರಯತ್ನ

ನಡೆದಿವೆ ನಡೆಯುತ್ತಿವೆ. ತಿರುಪತಿ, ಹೈದರಾಬಾದ್, ಬೆಂಗಳೂರು ಈ ಸ್ಥಳಗಳಲ್ಲಿ ಕೀರ್ತನಕಲೆಯ ಅಭ್ಯಾಸಕ್ಕಾಗಿ ತರಬೇತಿ ಶಾಲೆ ತೆರೆಯುವ, (ಸೆಮಿನಾರ್) ಗೋಷ್ಠಿ-ಸಮ್ಮೇಳನ ನಡೆಸುವ ಪ್ರಯತ್ನವೂ ನಡೆಯುತ್ತಿವೆ.

ಈಗಿನ ಸಮರ್ಥ ಸಾಮೂಹಿಕ ಸಂಪರ್ಕ ಮಾಧ್ಯಮವೆಂದರೆ ಚಲನಚಿತ್ರ, ಟಿ.ವಿ., ಸಿನಿಮಾ ಧಾಳಿ, ಜೀವಂತ ಕಲೆಯಾದ ನಾಟಕ-ರಂಗಭೂಮಿಗೇ ಕುತ್ತಾಗಿರುವಂತೆ, ಸಾಂಸ್ಕೃತಿಕ ಕಲೆಯಾದ ಕೀರ್ತನ ಕಲೆಗೂ ಕೊಡಲಿ ಪೆಟ್ಟು-ಆಗಿದೆ. ಹರಿಕಥೆ, ಈಗ ಗ್ರಾಮೀಣ ಕಲೆ, ಜಾನಪದಕಲೆಯಾಗಿದೆ. ಇದು ಒಂದು "ಅರೆ ಜಾನಪದ ಕಲೆ" ಎಂಬ ಚಿದಾನಂದಾಮೂರ್ತಿ ಅವರ ಅಭಿಮತ ಸರಿ, ಎನ್ನಿಸುತ್ತದೆ. ಹರಿಕಥೆಯ ಜಾನಪದ ಕಥನ, ವಾದ್ಯ, ಚಿಟಿಕೆ, ತಾಳ, ಮೃದಂಗ, ಮಂದ್ದಲೆ, ಎಲ್ಲ ಇದನ್ನು ಜಾನ ಪದಕ್ಕೆ ಹತ್ತಿರಾಗಿಸುತ್ತದೆ. ಚಲನಚಿತ್ರವನ್ನು ಬಿಟ್ಟರೆ, ಕೀರ್ತನ ಕಲೆಯಂಥ ಸಮರ್ಥ, ಸಜೀವ ಕಲೆ, ಪರಿಣಾಮಕಾರಿಯಾದದ್ದು ಬೇರೊಂದಿಲ್ಲವೆನ್ನಬಹುದು. ಇದಕ್ಕೆ ಕಾರಣ, ಗೋಷ್ಠಿ, ಸಮೂಹದ ಮೇಲೆ ಜನಮನದ ಮೇಲೆ ಬೀರುವ ಅಚ್ಚಳಿಯದ ಪರಿಣಾಮ, ಪ್ರಭಾವ. ಜನಜಾಗೃತಿಗೊಳಿಸಲು, ಆಂದೋಲನವೆಬ್ಬಿಸಲು ಈ ಕಲೆ ಪ್ರಭಾವಿಯಾಗ ಬಲ್ಲುದು. ಅಂತೆಯೇ ಸಮಾಜ ಸುಧಾರಣೆಯ ಕಾರ್ಯಕ್ರಮವೂ ಆಗಬಲ್ಲದು-ಸುವ್ಯವಸ್ಥಿತ ರೀತಿಯಲ್ಲಿ ಹಾಳತವಾಗಿ ಬಳಸಿದಲ್ಲಿ ಮಾತ್ರ.

ಡಾ॥ ಎಂ. ಚಿದಾನಂದಮೂರ್ತಿಯವರು ಹೇಳುವಂತೆ, "ಹರಿಕಥೆಯು ಬೇರು ಗಳು ಜನಪದದಲ್ಲಿ, ಅದರ ಕಾಂಡ ಕೊಂಬೆ ಹೂವು, ಹಣ್ಣುಗಳು ಹರಿದಾಸ ಚಳವಳಿ ಯಲ್ಲಿ ಇವೆ." ಅಂದರೆ ಹರಿದಾಸ ಸಂಪ್ರದಾಯಂದಿಂದ ಈ ಚಳವಳಿ ಆಂದೋಲನ.

ಹರಿದಾಸ ಸಂಪ್ರದಾಯ ಬೆಳೆಸಲು ವಿಜಯದಾಸರು, ಗೋಪಾಲದಾಸರು, ಮೋಹನದಾಸರು, ಜಗನ್ನಾಥದಾಸರು ತುಂಬ ಶ್ರಮಿಸಿದರು. ಜಗನ್ನಾಥದಾಸರಂತೂ ಹರಿಭಕ್ತಿ ಪ್ರಸಾರಕ್ಕಾಗಿ ತಮ್ಮ ಬದುಕನ್ನೆ ತೇದರು. ನೂರಾರು ಜನರಿಗೆ ಅಂಕಿತವಿತ್ತು, ದಾಸ ದೀಕ್ಷೆ ದಯಪಾಲಿಸಿದರು. ಜಗನ್ನಾಥದಾಸರ ಶಿಷ್ಯ ಪ್ರಶಿಷ್ಯರಾದ ಮೊದಲಕಲ್ಲು ಶೇಷದಾಸರು, ಐ ಜಿ ಸ್ವಾಮಿಗಳು, ಶ್ರೀದವಿಠಲ, ಶ್ರೀಶ ವಿಠಲ, ಪ್ರಾಣೇಶ ವಿಠಲ, ಹೀಗೆ ಅನೇಕ ಹರಿದಾಸರು ಪರಂಪರಾನುಗತ ರೀತಿಯಲ್ಲಿ ಸಂಪ್ರದಾಯ ಮುಂದುವರಿಸಿ ದರು. ಅಂಥ ಪೀಳಿಗೆಯವರು ಇತ್ತೀಚಿನ, ಪರವಾಸ್ತುಯ ಸುಬ್ಬರಾಯದಾಸರು, ಮೋಹನದಾಸರ ಪರಂಪರೆಯಲ್ಲಿ ಬಂದಅನೇಕ ಹರಿದಾಸರು ಸುರಪುರದ ಆನಂದದಾಸರು ಬೇಲೂರು ಕೇಶವದಾಸರು, ಅವರ ತಂದೆ, ಹಂಡೆ ಶ್ರೀಪಾದದಾಸರು, ವೇಣುಗೋಪಾಲ ದಾಸರು, ಗಮಕಿ ರಾಮಕೃಷ್ಣ ಶಾಸ್ತ್ರಿಗಳು, ಭಾಗವತ ಉಪಾಖ್ಯಾನ ಪ್ರವೀಣರಾದ ಜಯತೀರ್ಥಚಾರ್ಯರು, ಈಗಲೂ ಇರುವ ಹರಿದಾಸರತ್ನಂ ಗೋಪಾಲದಾಸರು, ಗೋಪೀನಾಥದಾಸರು, ಜಯಸಿಂಹದಾಸರು, ಭದ್ರಗಿರಿ ಸಹೋದರರು, ವಿಮಲಾನಂದ ದಾಸರು, ನಿರ್ಮಲಾನಂದದಾಸರು, ಪ್ರಸಿದ್ಧರಾದ ಅರುಣ್‌ಕುಮಾರ್,(ಈಗ ದಿವಂಗತರು) ಸೋಸಲೆ ನಾರಾಯಣದಾಸ್, ಪಂಢರಿಬಾಯಿ. ರಾಜಮ್ಮ, ಅನಂತಲಕ್ಷ್ಮಿ, ಬಾಲಭಾರತಿ

ಯದುಗಿರಿ ಕುಮಾರಿ, ಕುಮಾರಿ ಗಾಯತ್ರಿ, ಹೇಗೋ ಹಾಗೆಯೇ ದಿವಂಗತ ಶಿವಮೂರ್ತಿ ಶಾಸ್ತ್ರಿಗಳು, ಹುಮರಾಮಾರಾಧ್ಯರಂ ಶಿವಕಥೆಯಲ್ಲಿ ಪ್ರಸಿದ್ಧರ್ಲ್ಲಿ. ಬೊಮ್ಮಯ್ಯ, ಪ್ರೊಮ್ಮಣ್ಣಯ್ಯ, ಬೆಳಗಲಿ ಶಾಂತರಾಜಯ್ಯ ಜಿನಕಥೆಯಲ್ಲಿ ಹೆಸರಾಂತ ಕೀರ್ತನಕಾರರು. ಹೀಗೆ ಹರಿದಾಸ ಸಂಪ್ರದಾಯಂ, ಶ್ರೀಪಾದರಾಜರಿಂದ ಭಾಗವತಗೋಷ್ಠಿ, ಭಜನಗೋಷ್ಠಿ, ಕೀರ್ತನಗೋಷ್ಠಿ, ನಾಮಸಂಕೀರ್ತನ ಆಗಿ ಅಂಕುರಿಸಿದ್ದು ಕ್ರಮೇಣ ವ್ಯಾಸರಾಯರಿಂದ ಸಂಘಟಿತ ಆದ ದಾಸವರೇಣ್ಯ ಸಮರ್ಥ ನೇತೃತ್ವದಲ್ಲಿ ಪುರಂದರದಾಸರಂಥ ಪೂತಾತ್ಮರ ಸೇವೆಯ ಮೂಲಕ, ಕನಕದಾಸರು ವಾದಿರಾಜರಂಥವಾಗ್ಮಿಗಳ ಮೂಲಕ, ಮಂತ್ರಾಲಯದ ಶ್ರೀರಾಘವೇಂದ್ರರ ಬೃಂದಾವನಸ್ಫೂರ್ತಿಯಿಂದ, ವಿಜಯದಾಸಾರ್ಯರಿಂದ ಸಂಪ್ರದಾಯ ನಿಷ್ಠೆ ಸಾಹಿತ್ಯವಾಗಿ ಬೆಳೆದು, ಜಗನ್ನಾಥದಾಸರ ಶ್ರೀಮದ್ಹರಿಕಥಾಸಾರದಲ್ಲಿ ಪರಾಕಾಷ್ಠೆ ತಲಂಪಿತು. ''ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ। ಕುಳಿತರೆ ನಿಲುವ ನಿಂತರೆ ನಲಿವ। ನಲಿದರೆ ಒಲಿವ ಸುಲಭನೋ ಹರಿ'' ತನ್ನನ್ನು ನೆಚ್ಚಿದವರನರಘಳಿಗೆ ಕೈಬಿಡನೂ ಎಂಬ ಮಾತು ಭಕ್ತಿಯ ಸುಲಭ ಮಾರ್ಗವನ್ನೇ ಜನತೆಗೆ ತೋರಿಕೊಟ್ಟಿತು. ತಿಳಿಗನ್ನಡ ದೇಸಿ ವಿಜೃಂಭಿಸಿ ಜನಸಾಮಾನ್ಯರ ಮನಮುಟ್ಟಿತು. ಹರಿದಾಸ ಸಂಪ್ರದಾಯ ಗೈದ ಕೆಲಸ ಇದು. ಇದು ಸಾಮೂಹಿಕ ಕಾರ್ಯ-ಸಂಘಟಿತ ರೀತಿ ಪರಂಪರಾನುಗತ ಆಗಿ ಬೆಳೆದು ಬಂದ ಆಂದೋಲನ. ನಾವು ಮುಂದೆ ಅದನ್ನು ಗಮನಿಸಬಹುದಾಗಿದೆ.

## ಅಡಿಟಿಪ್ಪಣಿಗಳು

1 ಶ್ರೀ ಮುಕುಂದಮಾಲಾ ಸ್ತೋತ್ರ-ಶ್ರೀಕುಲಶೇಖರ ಆಳ್ವಾರ್

2 ಅದೇ.

3 ಇಲ್ಲಿ "ಭಗ" ಎಂಬ ಪದ ಮೊದಲು ಕಂಡುಬರುವುದು ಋಗ್ವೇದದಲ್ಲಿ "ಭಗ" ಎಂಬುದರ ಅರ್ಥ ಜ್ಞಾನ, ಆನಂದ ಐಶ್ವರ್ಯ, ಧೈರ್ಯ, ಸ್ಥೈರ್ಯ, ಔದಾರ್ಯ, ಇವೇ "ತಂ ತ್ವಾ ಭಗ ಪ್ರವಿಶಾನಿ. ಸಮಾಭಗ ಪ್ರವಿಶಾ" ತೈತ್ತಿರಿಯೋಪನಿಷತ್ತಿನ ಒಂದು ತುಣುಕು. ಇಲ್ಲಿ ಪರಬ್ರಹ್ಮನನ್ನು 'ಭಗ' ವೆಂದೇ ಸಂಬೋಧಿಸಲಾಗಿದೆ. ಇದನ್ನು ಎತ್ತಿ ತೋರಿಸಿದವರು ಮಧ್ವಾಚಾರ್ಯರೇ ಹಾಗೂ ಭಗ ಭಗವಾನ್ 'ಎಂಬ ಪದಗಳ ಅರ್ಥ ವಿವರ ಮಾಡಿದವರು ಅವರೇ'

* Encyclopaedia of Religion & Ethics, volume 4, 3rd edition 1954 page 374, Ed: James Hastings.

4 Custom is ........any norm of voluntary action that has been developed in a national or tribal community.

5 Custom is closely connected both with habits and with usage.

6 "......Custom is concerned with the constant needs of society, and is, subject to change only with the change in conditions of life theories of living (WANDT).

7 Custom (Hindu) : Established usage. Encyclopaedia of Philosophy:- Ed:-Paul Edwards, Vol. II Page 278, 279(1967). Macmillan company & Free Press, NY. Custom may be tentatively defined as a norm of action (rule of conduct, precept) generally accepted and practiced by a group of people who regard it as sanctioned by the general tradition of the group.
Customs belong to the explicit part of a group's culture, its ideology, and represent ideals of conduct that are expressly acknowledged and thought and that connot be transgresed. Customs are relative to a community; for customs tradition is their warrant.

8 ಶ್ರೀ ಪುರಂದರದಾಸರ ಕೃತಿಗಳು: ಸುಬೋಧರಾಮರಾವ್ : 3ನೇ ಮುದ್ರಣ 1964, ಪುಟ 196.

9 ಪೂಜಾ ತತ್ವ, ಪು. 187
ಶ್ರೀ ಹಂಸಂ ಪರಮಾತ್ಮಾನಂ ವಿರಿಂಚಂ ಸನಕಾದಿಕಾನ್
ದುರ್ವಾಸಸೋ ಜ್ಞಾನ ನಿಧೀನ್ವಿಂದ್ರವಾಹನ ತೀರ್ಥಕಾನ್ ॥1॥

ಕೈವಲ್ಯ ತೀರ್ಥಾನ್ ಜ್ಞಾನೇಶಾನ್ ಪರತೀರ್ಥಾನ್ ನಮಾಮ್ಯಹಮ್
ಸತ್ಯಪ್ರಜ್ಞಾನ್ ಪ್ರಾಜ್ಞತೀರ್ಥಾನ್ ಅನ್ಯಾನ್ ತದ್ವಂಶ ಜಾನಪಿ ॥2॥

ಪೂರ್ಣೈವ ಕೃಷ್ಣ ಸಿದ್ಧಾನ್ನ ಭುಕ್ತ್ಯಾ ಶೋಧಿತ ಮಾನಸಂ
ಅಚ್ಯುತಪ್ರೇಕ್ಷ ತೀರ್ಥಂಚ, ಮಧ್ವಾರ್ಯಾಣಾಂ ಗುರುಂಭಜೇ ॥3॥

ಲಸತು ಶ್ರೀಮದಾನಂದ ತೀರ್ಥೇಂದು ನೇರ್ಹೃದಂಬರೇ
ಯದ್ವಚಶ್ಚಂದ್ರಿಕಾ ಸ್ವಾಂತ ಸಂತಾಪಂ ವಿನಿಕೃಂತತಿ ॥4॥

(**Ref.** E.P. Ind VI p. 263 ನರಹರಿತೀರ್ಥರ ಕೂರ್ಮ ಶಾಸನಾ ಪ್ರಕಾರ ಮಾಧ್ವಾಚಾರ್ಯರ ಕಾಲ ತಿಳಿದು ಬರುವ ಅಂಶ)
ಈ ಬಗ್ಗೆ ದ್ವೈತಪಂಥದ ಜ್ಞಾನ ನಿಧಿತೀರ್ಥರು ರಾಷ್ಟ್ರಕೂಟ ಇಮ್ಮಡಿ ಗೋವಿಂದ ಹಾಗೂ ಅವನ ಮಗ ನೃಪತುಂಗ, ಇವರ ಸಮಕಾಲೀನರಾಗುತ್ತಾರೆಂಬ ಬಗ್ಗೆ ಶ್ರೀ ಸೀತಾರಾಮ ಜಾಗೀರದಾರ್ ಅವರ ಲೇಖನ ಗಮನೀಯ : ದಾಸಸಾಹಿತ್ಯ ದಾಸಸಾಹಿತ್ಯ ದರ್ಶನ 1984 : ಸಂ: ಎಚ್ಕೆಸ್ಕೆ : ಮಂಗಳಭಾರತೀ ಪ್ರಕಾಶನ, ಮೈಸೂರು (ಕರ್ನಾಟಕದಲ್ಲಿ ಹರಿದಾಸ ಪಂಥ : ಸೀತಾರಾಂ ಜಾಗೀರ್‌ದಾರ್ ಪುಟ 5)

10 ಶ್ರೀ ಹರಿದಾಸ ಸಾಹಿತ್ಯ ಉಗಮ, ಸಂ ಹನುಮಂತರಾವ್ ಗೋರಬಾಳ : ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ, ಲಿಂಗಸೂಗೂರು, ಪುಟ 7 : (1951)

11 ಅವರಲ್ಲಿ ಬಂದಿರುವ ರಚನೆಯ ಗತಿ, ಮಟ್ಟು ಪಕ್ವತೆ, ಗಮನಿಸಿದರೆ ಹರಿದಾಸ ಸಾಹಿತ್ಯ ರಚನೆ ಆ ವೇಳೆಗೆ ಆಗಲೆ ಒಂದು ಸ್ಥಿರ ತಲುಪಿರುವ ಸೂಚನೆ ಕಾಣ ಬರುತ್ತವೆ. ಆದರೂ ಇನ್ನೂ ಇದು ಊಹೆಯೇ.

12 ಉಗಾಭೋಗ : ಶ್ರೀ ಪಾದರಾಜರ ಕೃತಿಗಳು, ಪಂಡಿತ ಆವೃತ್ತಿ 1973, ಮೈಸೂರು ವಿ ವಿ ನಿಲಯ, ಪುಟ 74, ಕೀ 25.

13 ಉಗಾಭೋಗ : ಶ್ರೀಪಾದರಾಜರ ಕೃತಿಗಳು, ಪಂಡಿತ ಆವೃತ್ತಿ 1973, ಮೈಸೂರು ವಿ ವಿ ನಿಲಯ, ಪುಟ 74, ಕೀ 25.

# ಹರಿದಾಸ ಸಾಹಿತ್ಯ–ವೈಷ್ಣವ ಧರ್ಮ–ಭಕ್ತಿವೈವಿಧ್ಯ

ಭಾರತದ ಧಾರ್ಮಿಕ ಇತಿಹಾಸವನ್ನು ಗಮನಿಸಿದಾಗ ಒಂದು ಅಂಶ ತಿಳಿಯು ಬರುತ್ತದೆ. ವೈದಿಕ ಧರ್ಮದಿಂದ ಹೊರಹೊಮ್ಮಿದ ತತ್ತ್ವ-ಸಂಸ್ಕೃತಿ ಪ್ರಸರಿಸುತ್ತ ಅದರ ತಿರುಳು ಕ್ರಮೇಣ ಕೊರೆಯಾಗಿ ಅದಕ್ಕೆ ವಿರೋಧಿ ಧರ್ಮಗಳು ಬಲವಾಗಿ ಮೇಲೆ ಗೊತ್ತುವುದು, ಮತ್ತೆ ವೈದಿಕ ಧರ್ಮದ ಪುನರುತ್ಥಾನಕ್ಕೆ ಪ್ರಚೋದಕ ಶಕ್ತಿಯೊಂದು ಉದ್ಭವಿಸಿ, ಜನತೆಯಲ್ಲಿ ವೇದೋಪನಿಷತ್ತು-ಧರ್ಮದ ಬಗ್ಗೆ ಶ್ರದ್ಧಾಭಾವನೆ ಕೊನರಿಸಿ, ಬೆಳೆಸುವುದು. ಗೀತೆಯು 'ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ। ಅಭ್ಯುತ್ಥಾನಮಧರ್ಮಸ್ಯ......' ಎಂಬ ವಾಕ್ಯ ನೆನಪಾಗುತ್ತದೆ. ನಾಸ್ತಿಕ ಮತಗಳೆ ಆಗಲಿ, ಚಾರ್ವಾಕರೆ ಆಗಲಿ, ಬೌದ್ಧ-ಜೈನ ಮತಗಳಾಗಲಿ ತಮ್ಮ ಧ್ಯೇಯವನ್ನು ಸಮಗ್ರ ರೀತಿಯಲ್ಲಿ ಸಾಧಿಸಲಾಗಲಿಲ್ಲ ಎನ್ನಬಹುದು. ಆಸ್ತಿಕ್ಯದ ನೆಲೆ, ಆಧ್ಯಾತ್ಮದ ನೆಲೆ ಅಲ್ಲಿ ಇರಲಿಲ್ಲ. ಹಾಗೂ ಬೌದ್ಧರಲ್ಲಿ ಅನಂತರ ತಲೆದೋರಿದ ವಿಷಯಲೋಲುಪತೆ ಸಮಾಜದ ಶಾಶ್ವತ ಮೌಲ್ಯವಾದ ನೀತಿಗೆ ಧಕ್ಕೆಯೊಡ್ಡಿತು. ಅದು ಮೊದಲು ಬೋಧಿಸಿದ ವಿರಕ್ತಿ, ಶೂನ್ಯವಾದ, ನಿರಾಸೆ ಹುಟ್ಟಿಸಿತಷ್ಟೆ. ಜೈನ ಧರ್ಮದಲ್ಲಿ ಜನ್ಮ ಜನ್ಮದ ಕೋಟಲೆ, ಜಟಿಲತೆ–ಜನತೆಗೆ ಇದು ಹಿತವೆನಿಸದಾಯಿತು. ಆಗ್ಗೆ ಬಂದವರು ಆದಿಶಂಕರರು–ಅವರು ಸ್ಥಾಪಿಸಿದ್ದು ಅದ್ವೈತ. ಅದ್ವೈತದಿಂದ ಜ್ಞಾನ ಪ್ರಪಂಚದಲ್ಲಿ ಒಂದು ರೀತಿಯ ಆಂದೋಲನ ಆಯಿತಷ್ಟೆ. ವಿನಾ ಬೌದ್ಧರಿಗೂ-ಅದ್ವೈತಗಳ ತತ್ತ್ವಗಳಿಗೂ ವ್ಯತ್ಯಾಸ ಸಾಮಾನ್ಯ ಜನತೆ ಅರಿಯದಾದರು. ಅವರಿಗೆ ಯಾವ ವ್ಯತ್ಯಾಸವೂ ತೋರಲಿಲ್ಲ. (ಆದಿ ಶಂಕರರು ವೈದಿಕ ಧರ್ಮ ಪುನರ್ ಜಾಗೃತಿಗೊಳಿಸಿದ್ದು ಅದ್ವಿತೀಯ ಕಾರ್ಯವೇ ಆದರೂ ಅವರ ಜ್ಞಾನ ಪ್ರಧಾನ ತತ್ತ್ವ ಸಾಮಾನ್ಯರಿಗೆ ನಿಲುಕಲು ಕಷ್ಟವಾಗಿ ಅದೆಷ್ಟರ ಮಟ್ಟಿಗೆ ಹೋಯಿತೆಂದರೆ ಕೆಲವರು ಶಂಕರರನ್ನ "ಪ್ರಚ್ಛನ್ನ ಬೌದ್ಧ" ರೆಂಬ ಮಟ್ಟಿಗ ಹೋಗುವಷ್ಟು) ಅದ್ವೈತದ ಜಟಿಲತೆ, ಜ್ಞಾನ ಪ್ರಧಾನತೆಯಿಂದ ಭಕ್ತಿ-ಪ್ರಪತ್ತಿ (ಪರಮಾತ್ಮನಲ್ಲಿ ಶರಣಾಗತಿಭಾವ) ಮಾರ್ಗಕ್ಕೆ ಜನತೆ ಕೊಂಡೊಯ್ಯಲೆತ್ನಿಸಿದವರು, ತಮಿಳು ನಾಡಿನ ಆಳ್ವಾರರು ಹಾಗೂ, ಅನಂತರ ಕಾರಣಾಂತರಗಳಿಂದ ಕರ್ನಾಟಕದಲ್ಲಿ ಬಂದು ನೆಲಸಿ ಹೊಯ್ಸಳ ರಾಜಗುರು ಆದ ಶ್ರೀ ರಾಮಾನುಜರು ; ಅವರು ಪರಿಷ್ಕರಿಸಿದ 'ವಿಶಿಷ್ಟಾದ್ವೈತ'ದ ಶ್ರೀವೈಷ್ಣವ ಧರ್ಮ, ಭಕ್ತಿಯ ಮಹಿಮೆ, ಔನ್ನತ್ಯ ಸಾರಿದ್ದು ಜನತೆಗೆ ತೃಪ್ತಿ ತಂದಿತು. ಆದರೆ, ರಾಮಾನುಜ ತತ್ತ್ವದಿಂದ ಅದ್ವೈತವೇನೂ ಹೋದಂತಾಗಲಿಲ್ಲ. ಅದ್ವೈತದೊಂದಿಗೆ ಸಂಧಾನ ಮಾಡಿಕೊಂಬಂತಿತ್ತು. ಜ್ಞಾನಿಗಳು-ಜನಸಾಮಾನ್ಯರು-ಇವರಿಬ್ಬರ ಆಶೋತ್ತರ, ಮನಸ್ಸಿಗೆ ಹಿಡಿಸುವ ಸಮನ್ವಯತೆಯು

ಅಭಾವ ಕಂಡು ಬಂದಿತಷ್ಟೆ. ಕರ್ಮ-ಜ್ಞಾನ-ಭಕ್ತಿಗಳ ಸಂಗಮ ಹಾಗೂ ದೇವರ ವೇಂವಾದ್ವಿತೀಯತ್ವ, ಸರ್ವೋತ್ಕೃಷ್ಟತೆ, ಸಾಧಿತವಾಯಿತೆಂದು ತಿಳಿಯದಾಯಿ ಭಕ್ತಿ ಪರವಶತೆ ಎಂಥವರಿಗೂ ಮನಸ್ಸಿಗೆ ಹಿತ ಎನಿಸಿದರೂ ಆ ಭಕ್ತಿ ಸರಿಯಾದ ಚೌ ನಲ್ಲಿ ಅಳವಡಲಿಲ್ಲ.[1] ಈ ಕೊರತೆಯನ್ನು ನಿವಾರಿಸಿದವರು ಮಧ್ವಾಚಾರ್ಯರು. ವಿಶಿ ಷ್ಟೈತ ತತ್ವದಲ್ಲಿದ್ದ ಕೊರತೆ ನೀಗಿ ಅಗ್ಗೆ ಬೇಕಾಗಿದ್ದ 'ಸ್ವತಂತ್ರ-ಅದ್ವಿತೀಯ' ಚಿ ವನ್ನು ನೀಡಿದವರು ಮಧ್ವಾಚಾರ್ಯರು. "ಜೀವಾತ್ಮರು-ವಸ್ತುಗಳು ದೇವರ ಸ ರೂಪಗಳಾದರೂ, ಅವರು ತಮ್ಮದೆ ಆದ ವೈಯಕ್ತಿಕ ಇರವನ್ನು ಅನುಭವಿಸುತ ಮತ್ತೆ ಎಲ್ಲವೂ ಬ್ರಹ್ಮನ್‌ನಲ್ಲಿ ಸೇರಲಾಗುವುದಿಲ್ಲ"[2] ಇಲ್ಲಿ ತಾರತಮ್ಯ-ಭೇದ ತ ಉಗಮ !

ಆರ್ಯಧರ್ಮದ ಬುನಾದಿಯ ಮೇಲೆ ವೇದಾದಿ ಎಲ್ಲ ಪೌರುಷೇಯ ಶ ಪ್ರಮಾಣದ ಆಧಾರದಿಂದ, ಜ್ಞಾನ, ಭಕ್ತಿ, ಕರ್ಮಗಳ ಸಮನ್ವಯ ಮಾಡಿ ತ ಸಂವ, ಒಂದು ತತ್ವದ ನೆಲೆ, ಪಥದ ಆಗತ್ಯವಿತ್ತು. ಜಗತ್ತು ಮಿಥ್ಯವೆಂಬ ಮಾ ನಿರಾಸೆಯಿಂದ ಜನತೆಯನ್ನೆಚ್ಚರಿಸಬೇಕಿತ್ತು. ಇದನ್ನು ಮಧ್ವಾಚಾರ್ಯರು ತ ದ್ವೈತ ತತ್ವ, ಸುಸ್ಥಾಪನೆ ಅದ್ಭುತ ತಾರ್ಕಿಕ ಪ್ರತಿಪಾದನೆಗಳ ಮೂಲಕ ಸಾಧಿಸಿದ ಹರಿಸರ್ವೋತ್ತಮತ್ವ, ಹರಿಭಕ್ತಿ ಪಾರಮ್ಯ, ಹರಿಯೇ ಪರದೈವ, ಸರ್ವತಂತ್ರ ಸ್ವತಂ ಅನಂತಕಲ್ಯಾಣಗುಣಗಣಪರಿಪೂರ್ಣ, ನಿರ್ದೋಷಿ ಎಂದೆಲ್ಲ ಸಾಧಿಸಿದ ಯಶಸ್ಸು ಆನ ತೀರ್ಥರದು. ಇದಕ್ಕೆ ಮೊದಲಿನ ವೈಷ್ಣವ ಧರ್ಮ-ಅದರ ನೆಲೆ ಬೆಲೆ ಅರಿ ಬೇಕಾಗುತ್ತದೆ.

ವೈಷ್ಣವ ಧರ್ಮ-ಸಿದ್ಧಾಂತದ ಪ್ರಕಾರ ವಿಷ್ಣುವೇ ಸರ್ವೋತ್ತಮ. ಅವ ಸರ್ವಶ್ರೇಷ್ಠ, ಪೂಜಾರ್ಹದೈವ. ವಿಷ್ಣು ಎಂಬ ಶಬ್ದದ ಮೂಲ ಧಾತು "ವಿಷ ಎಂದರೆ ಸರ್ವ ವ್ಯಾಪಕತ್ವದ ಲಕ್ಷಣ ಸೂಚಿಸುತ್ತದೆ. ವಿಷ್ಣುಭಕ್ತಿ, ವಿಷ್ಣುವಿನ ಅವತ ದಲ್ಲಿರಿಸಿದ ಭಕ್ತಿಯೇ, ಬದುಕಿಗೆ ಮುಕ್ತಿ, ಹಾಗೂ ಆಧ್ಯಾತ್ಮ ಸಫಲತೆಯೊದಗಿಸು ದೆಂಬುದು ವೈಷ್ಣವ ಧರ್ಮದ ದೃಢ ನಿಲುವಾಗಿದೆ.

ವೈಷ್ಣವ ಧರ್ಮದ ಪ್ರಾಚೀನತೆಯನ್ನು ಭಾರತದ ಪವಿತ್ರ ಧರ್ಮ ಗ್ರಂಥ ಮೂಲಕ ತಿಳಿಯಬಹುದು. ಋಗ್ವೇದದಲ್ಲಿ ವಿಷ್ಣುವೂ ಒಬ್ಬ ದೇವತೆಯಾಗಿ ವಂ ನಾಗಿದ್ದಾನೆ. ಆದರೆ ಸರ್ವೋತ್ಕೃಷ್ಟ ದೇವತೆಯಾಗಿಯಲ್ಲ. ಋಗ್ವೇದದಲ್ಲಿ ಅ ಇಂದ್ರ, ವರುಣ, ರುದ್ರ ಇತ್ಯಾದಿ ದೇವತೆಗಳಿಗೆ ಪ್ರಧಾನತೆಯಿದ್ದರೂ ಅದೆಲ್ಲ ಒ ಆತ್ಮೋನ್ನತ ದೈವಕ್ಕೇ ಸಲ್ಲುವಂತಹ ಗೌರವ. ಇಂದ್ರನಿಗೇ ವೈದಿಕ ಸ್ತೋತ್ರಗಳ ಪ್ರಾಧಾನ್ಯ, ವಿಷ್ಣು ಇಂದ್ರನ ಮಿತ್ರನೆಂದು ಪರಿಗಣಿತನಾಗಿದ್ದಾನೆ.

"ಋಗ್ವೇದ" ಅವತರಿಸಿದ ಕಾಲದಲ್ಲೆ ವಿಷ್ಣು-ಇಂದ್ರರ ಹಾಗೂ ಇತರ ದೇವತೆ ಜತೆ ವಿಷ್ಣುವಿನ ಸಮನ್ವಯ ನಡೆದು ಹೋದಂತೆ ತೋರಿಬರುತ್ತದೆ.

ಇಂದ್ರಮಿತ್ರಂ ವರುಣಮಗ್ನಿಮಾಹು ರಥೋ ದಿವ್ಯಃ ಸಸುಪರ್ಣೋ ಗರುತ್ಮಾನ್ ।
ಏಕಂ ಸದ್ವಿಪ್ರಾಬಹುಧಾ ವದನ್ತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ ॥

(ಋಗ್ವೇದ ೧-೧೬೪-೪೬)

ದ್ವೇ ವಿದ್ಯೇ ವೇದಿತವ್ಯೇ ಪರಾಚೈವಾ ಪರಾಚ,
ವೇದೈಶ್ಚ ಸರ್ವೈರಹ ಮೇವ ವೇದ್ಯಃ ॥ (ಭಗವದ್ಗಿತಾ ಅಧ್ಯಾಯ ೯)
ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋರ್ಮಹಾ ತಾತ್ಪರ್ಯಂ ಪರಮಂ ಭಾರತಸ್ಯ,
ಆಲೋಢ್ಯ ಸರ್ವಶಾಸ್ತ್ರಾಣಿ ವಿಚಾರಾಂ ಶ್ಚ ಪುನಃ ಪುನಃ
ಇದಮೇಕಂ ಸುನಿಷ್ಪನ್ನಂ ಧ್ಯೇಯೋ ನಾರಾಯಣಃ ಸದಾ

-ಎಂಬ ಎಲ್ಲ ಉಪನಿಷತ್-ಆಗಮ ಮಂತ್ರಗಳೂ ಸಾರುವುದು ವಿಷ್ಣುವೇ ಪರಮದೈವ, ಆವನಿಗೆ ವೇದಾದಿ ಆಗಮಗಳೆಲ್ಲ ನುತಿಸುವುದೆಂದು

(ಯಂ ಬ್ರಹ್ಮಾ ವರುಣೇಂದ್ರರುದ್ರಮರುತಃ ಸ್ತುನ್ವಂತಿ ದಿವ್ಯೈಃ ಸ್ತವೈ-
ರ್ವೇದೈಃ ಸಾಂಗಪದಕ್ರಮೋಪನಿಷದೈರ್ಗಾಯಂತಿ ಯಂ ಸಾಮಗಾಃ
ಧ್ಯಾನಾವಸ್ಥಿತತದ್ಗತೇನ ಮನಸಾ ಪಶ್ಯಂತಿ ಯಂ ಯೋಗಿನೋ
ಯಸ್ಯಾಂತಂ ನ ವಿದುಃ ಸುರಾಸುರಗಣಾಃ ದೇವಾಯ ತಸ್ಮೈನಮಃ)

—ಗೀತೆ ಧ್ಯಾನ ಶ್ಲೋಕ

ವಿಷ್ಣುವಿಗೆ ಲೋಕದಾಧಿಪತ್ಯವೂ ಉಂಟೆನ್ನುತ್ತದೆ ಋಗ್ವೇದ ( VI-69-ಎಚ್.ಡಿ. ವೇಲಂಕರ್, VII-49)

ವಿಷ್ಣುವಿನ ವೈಶಿಷ್ಟ್ಯಪೂರ್ಣ ಉಲ್ಲೇಖಗಳು ಬ್ರಾಹ್ಮಣಗಳಲ್ಲಿ, ಪಾಣಿನಿ ಮುಂತಾದವರ ಸೂತ್ರಗಳಲ್ಲಿ ಅನಂತರದ ಪುರಾಣಗಳಲ್ಲಿ ಬರುತ್ತದೆ. ಆದರಿಂದ ವಿಷ್ಣುವಿಗಿತ್ತಿರುವ ಪ್ರಾಶಸ್ತ್ಯ, ಪ್ರಾಮುಖ್ಯ ತಿಳಿಯುತ್ತದೆ. ಇದಕ್ಕೆ ನಿದರ್ಶನ ವಿಷ್ಣು ಮೊದಲು ವಾಮನನಾಗಿ, ತ್ರಿವಿಕ್ರಮನಾದದ್ದು ; ಇದರಿಂದಾಗಿ ಈತ ಸರ್ವೋತ್ತಮನೆಂಬ ವರ್ಣನೆ ಪಡೆಯುತ್ತಾನೆ. ಎರಡು ಪಾದದಿಂದ ಇಡೀ ಬ್ರಹ್ಮಾಂಡ ಆಳೆಯುವ ಈತ ಮೂರನೆಯ ಪಾದವಿರಿಸಿದುದು ಬಲಿಯ ತಲೆಯ ಮೇಲೆಂದು ಭಾಗವತ ಉಲ್ಲೇಖಿಸುತ್ತದೆ. ವಿಷ್ಣು ಧರ್ಮಾಧಾರಸ್ವರೂಪ; ಆತ ಅನಾದಿ, ಮಹತ್ತಮ, ನೀತಿನಿಯಾಮಕ, ಸರ್ವ ವ್ಯಾಪಿಗುಣವುಳ್ಳವ. ಉಪೇಂದ್ರ ಎಂದು ವಿಷ್ಣುವಿಗೆ ಹೆಸರು ಬರಲು ಕಾರಣ, ಇಂದ್ರನೊಂದಿಗೆ ಇದ್ದ ಈತನ ನಿಕಟ ಸಂಪರ್ಕ. ವಿಷ್ಣುವು ವಾಮನನಾಗಿ ಬಂದ ಕಥೆ "ಶತ ಪಥ ಬ್ರಾಹ್ಮಣ"ದಲ್ಲಿ ಬೇರೆ ರೀತಿ ವರ್ಣಿತವಾಗಿದೆ. ಸುರಾಸುರರು ಯಾಗವೊಂದನ್ನು ಮಾಡಲು ತಕ್ಕ ಸ್ಥಳ ಸಂಧಾನ ನಡೆಸಿದ್ದರು. ಅಸುರರು ಒಲ್ಲದ ಮನಸ್ಸಿನಿಂದಲೇ, ಒಬ್ಬ ವಾಮನಮೂರ್ತಿ ಎಷ್ಟು ಆಕ್ರಮಿಸುವನೋ ಅಷ್ಟು ಭೂಮಿಯನ್ನು ದೇವತೆಗಳು ತೆಗೆದುಕೊಳ್ಳಬಹುದೆಂದು ಒಪ್ಪಿದರು. ವಿಷ್ಣುವೇ ವಾಮನನಾಗಿ ಮಲಗಬೇಕೆಂದು

ದೇವತೆಗಳು ಪ್ರಾರ್ಥಿಸಿದರು. ಹಾಗೆ ಮಲಗಿದ ಕಳ್ಳ ವಾಮನ ತ್ರಿವಿಕ್ರಮನಂತೆ ಭೂಮಿಯನ್ನೆಲ್ಲ ವ್ಯಾಪಿಸಿದ. ಇದರಿಂದ ದೇವತೆಗಳು ಸಮಸ್ತ ಭೂಲೋಕವನ್ನೇ ತಮ್ಮ ಯಾಗಕ್ಕೆ ಭೂಮಿಯಾಗಿ ಹೊಂದಿದರಂ. ವಿಷ್ಣುವಿನ ಈ ಅವತಾರ ವೇದ ವಾಙ್ಮಯದಲ್ಲಿ ಅನಂತರದ ಭಕ್ತಿ ಸಾಹಿತ್ಯದಲ್ಲಿ ಮತ್ತೆ ಮತ್ತೆ ಪ್ರಸ್ತಾಪಕ್ಕೆ ಬರುತ್ತದೆ. ವಾಮನನೆಂಬ ಹೆಜ್ಜೆಯನ್ನು "ಪರಮಂ ಪದಂ" ಎಂದು ಋಷಿಗಳು ಕರೆಯುತ್ತಾರೆ. ಅದೊಂದು ಗೂಢಾರ್ಥ ಪಡೆದಿದೆ. ಅಲ್ಲಿ ಆ ಸ್ಥಳದಲ್ಲಿ 'ಮಧುಕೂಪ'ವಿದೆ. ಅಲ್ಲಿ ದೇವತೆಗಳು ಆನಂದದಿಂದಿರುತ್ತಾರೆ. ವಿಷ್ಣುವಿನ ಮೂರನೆ ಪಾದದ ಕಲ್ಪನೆ, ಉಪನಿಷತ್ ಯುಗದಲ್ಲಿ ತುಂಬ ಪ್ರಚಲಿತವಾಯಿತು. ಕಠೋಪನಿಷತ್ತಿನಲ್ಲಿ ಬರುವ ಉಲ್ಲೇಖದಂತೆ, "ತದ್ವಿಷ್ಣೋ ಪರಮಂ ಪದಂ ಪ್ರಜಾಪತಯೇ ಸೂರಯಃ......" ಎಂದರೆ ಆತ್ಮನ್ನತ ಸಾಕ್ಷಾತ್ಕಾರ ಪಡೆಯುವುದೆಂದ ಅರ್ಥ. ಇದೇ 'ವಿಷ್ಣುಪಾದ' ಬರ್‍ರು ಬರುತ್ತ ವೈಯಕ್ತಿಕ ಆಧ್ಯಾತ್ಮಿಕ ಸಾಧನೆಯ ಹಾದಿಯಲ್ಲಿ ಸ್ವರ್ಗದ ಸಂಕೇತವಾಗಿ ಪರಿಣಮಿಸಿತು. ಈಗಲೂ 'ವಿಷ್ಣುಪಾದ' ಉತ್ತರದ ಗಯೆಯ ಪವಿತ್ರ ತೀರ್ಥಕ್ಷೇತ್ರ. 'ವಿಷ್ಣುಪಾದ' ವನ್ನು ಶ್ರೀವೈಷ್ಣವರು "ತಿರುವಡಿ" ಎನ್ನುತ್ತಾರೆ. ಪೂಜಾ ಚಿಹ್ನವೂ ಹೌದು. ಹಾಗೂ, ದೇವಾಲಯ, ಬೆಟ್ಟದ ತುದಿಯಲ್ಲಿ ಪಾದ ಕೆತ್ತುವಿಕೆ ಪದ್ಧತಿಗೆ ಬಂದಿತು. ಇದನ್ನು ಬೌದ್ಧರೂ ಅನುಸರಿಸಿದಂತೆ ತೋರುತ್ತದೆ. ಧರ್ಮಚಕ್ರದೊಂದಿಗೆ ಬುದ್ಧಪಾದವನ್ನು ಪರಮ ಪವಿತ್ರವೆಂದವರು ಪರಿಭಾವಿಸಿದರು. ಈ ಸಿದ್ಧಾಂತದಂತೆ, ಕರ್ತವ್ಯದ ಆಚರಣೆ ಕೇವಲವಾಗಿ ಅವಿದ್ಯೆಯ ಅಜ್ಞಾನದ ಅಂತಸ್ಸಿನಲ್ಲಿ ಮೊದಬೇಕಾಗುವ, ಅಲಕ್ಷ್ಯ ಮಾಡುವ ವಿಷಯವಲ್ಲ. ಸತ್ಯವಾದ ಈ ಜಗತ್ತಿನಲ್ಲಿ ಎಲ್ಲ ಮುಮುಕ್ಷುಗಳೂ ಅನುಸರಿಸಲೇಬೇಕಾದ, ಅಗತ್ಯ ಸಾಧನವಾಗಿದೆ. ಸಮಾಜ ಹಿತ, ಜನಹಿತ ಕೂಡ ಮುಕ್ತಿಗೆ ಸಾಧನವೆಂಬುದು ತತ್ತ್ವವಾದದಲ್ಲಿ ಪರಿಗಣಿತವಾದ ಅಂಶವಾಗಿದೆ. ವೇದಾಂತ ತತ್ತ್ವದಲ್ಲಿ ಸಮಾಜ ಸೇವೆಗೆ ಮಹತ್ವವನ್ನು ಮಧ್ವಾಚಾರ್ಯರು ನೀಡಿರುವಂತೆ ಇತರರು ಕೊಟ್ಟಿಲ್ಲ. ಹೀಗೆ ಬೌದ್ಧ ಧರ್ಮದ ನಂತರ ಪ್ರಚಲಿತ ಆದ ಮಾಯಾವಾದ, ಅನಂತರದ ಬ್ರಹ್ಮೈಕ್ಯವಾದ ಪ್ರಭಾವದಿಂದಾಗಿ ವೇದ-ಪುರಾಣ-ಆಗಮಗಳಲ್ಲಿ ಬಣ್ಣಿಸಿರುವ ಭಕ್ತಿ ಕರ್ಮಯೋಗಗಳಿಗೆ ಕವಿದಿದ್ದ ನಿರ್ಜೀವತೆಯ ಮಬ್ಬಿಗೆ ಪ್ರಾಣ ಸಂಜೀವಿನಿಯ ಭಾಸ್ಕರರಾಗಿ ಬಂದವರು ಮಧ್ವಾಚಾರ್ಯರು ಮತ್ತು ಅವರ ತತ್ವವಾದ ಸಿದ್ಧಾಂತ. ಜೀವರ ಭಿನ್ನತೆ-ಜಗತ್ತಿನ ಸತ್ಯತೆಯನ್ನು ಸ್ವೀಕರಿಸಿದ್ದರಿಂದಾಗಿ ಸೃಷ್ಟಿಯ ಧ್ಯೇಯ-ಆದರ ಸಾರ್ಥಕತೆಯನ್ನೂ, ಸಾಧನಗಳಿಗೆ ಬೇಕಾದ ಹಿನ್ನೆಲೆಯನ್ನೂ ನಾವು ಅರ್ಥಮಾಡಿಕೊಳ್ಳುವಂತಾಗಿದೆ.

ಪರಮಾತ್ಮ ಜಗತ್ತಿಗೆ ಕರ್ತ, ಪ್ರಕೃತಿ ಉಪಾದಾನವೂ ಕೂಡ, ಅಂದರೆ ಈ ಸೃಷ್ಟಿ ಪ್ರಕ್ರಿಯೆಯಲ್ಲಿ ಯಾವ ಅವ್ಯವಸ್ಥಾನಿಕತೆಯೂ ಅಸಂಬದ್ಧತೆಯೂ ತೋರಿಬರುವುದಿಲ್ಲ. ಈಗಂತೂ ಅತ್ಮನಿಗೂ ತೂಕವಿದೆ ಎಂಬುವ ತನಕ ನಾಸ್ತಿಕರಾದ ಸೋವಿಯತ್ ವಿಜ್ಞಾನಿಗಳು ಸಂಶೋಧನೆ ನಡೆಸಿದಾರೆಂದಾಗ, ಈ ಭೌತ ಜಗತ್ತಿನ ಅಣುರೇಣುವಿನಲ್ಲಿ

ಅವ್ಯಾಹತವಾಗಿ ಒಂದು ಅಖಂಡ ಶಕ್ತಿಯು ಹೊರಹೊಮ್ಮುತ್ತಿದ್ದು ಅದು ದಿವ್ಯ ಚೈತನ್ಯ ವಸ್ತುವೇ ಆಗಿರಬೇಕೆಂದು ವಿಜ್ಞಾನಿಗಳು ಅಭಿಪ್ರಾಯಪಟ್ಟಿದ್ದಾರೆ. ಜಗತ್ತಿನ ಎಲ್ಲ ಚರಾಚರ ಕ್ರಿಯೆ ಪ್ರತಿಕ್ರಿಯೆ, ಪ್ರಕೃತಿಯ ಅಂತಸ್ಥ ಹಾಗೂ ಹೊರಗಣ ಬದಲಾವಣೆ-ವ್ಯತ್ಯಾಸಗಳಿಗೆ ಪರಮಾತ್ಮನ ದಿವಚೇತನವೆ ಕಾರಣವಾದರೂ ಆ ವ್ಯತ್ಯಾಸದ ಹೊಣೆ ಅವನ ಮೇಲಲ್ಲ. ಅಂದರೆ ಆತ ಯಾವುದೆ ನಿಮಿತ್ತ ಕಾರಣಗಳಿಗೆ ಒಳಪಡುವವನಲ್ಲ, ಅದಕ್ಕೆ ಅತೀತ ಆಗಿರುವವನು. ಜೀವ-ಪರಮಾತ್ಮರ ಸಂಬಂಧ ಪ್ರತಿಬಿಂಬ-ಬಿಂಬರದ್ದು. ಪರಮಾತ್ಮನ ಅಗತ್ಯ, ಸ್ಥಾನ, ಎಷ್ಟರ ಮಟ್ಟಿಗೆ? ಎನ್ನಿಸಿದರೆ ಅಗ, ಅನಿಸುವುದಿಷ್ಟು ; ಜೀವ ಸ್ವರೂಪದಲ್ಲಿ ಜೀವಾತ್ಮರ ಸ್ವಭಾವ, ಶಕ್ತಿಗಳು ಅಡಕವಾಗಿದ್ದರೂ ಅವುಗಳ ತಳಹದಿಯಿಂದ ಪ್ರಕೃತಿಯೂ ನಡೆಯಬೇಕಾದರೆ ಪರಮಾತ್ಮನ ಶಕ್ತಿಯ ಅನುಪ್ರವೇಶ ಹಾಗೂ ಪ್ರಚೋದನೆ ಅಗತ್ಯ. ಪರಮಾತ್ಮನಿಲ್ಲದಿದ್ದರೆ ಎಲ್ಲವೂ ನಿಶ್ಚೇಷ್ಟ ಆಗುತ್ತವೆ. ಆದರಿಂದ ದೇವರು ಇರದ ಸೃಷ್ಟಿಯಿರದು, ಜಗದ್ವ್ಯಾಪಾರಕ್ಕೆ ಅವನ ಅಗತ್ಯವುಂಟೆಂಬುದೇ ಶ್ರೀ ಮಧ್ವಾಚಾರ್ಯರ ಪ್ರತಿಪಾದನೆ. ಹೀಗೆ ತರ್ಕಬದ್ಧ ಆದ ವೈಜ್ಞಾನಿಕ ಸಂಗತಿಗಳಿಂದಲೇ ಮಧ್ವಾಚಾರ್ಯರ ಮತವನ್ನು ಹೆಣೆಯಲಾಗಿದೆ. ಎಲ್ಲೂ ಜಾಳಾಗಿಲ್ಲ. ಇನ್ನೊಂದು ವಿಚಾರವೆಂದರೆ, ಎಲ್ಲಿಯೂ ಆಚಾರ್ಯರು ಕಲ್ಪನೆಯ ಅಂಶ ಬಳಸದೆ, ವೇದಾಗಮ ಪ್ರಾಮಾಣ್ಯವನ್ನೆ ನೀಡಿದ್ದಾರೆ. ಪ್ರತಿಯೊಂದು ಹೆಜ್ಜೆ ಹೆಜ್ಜೆಗೂ ತಮ್ಮ ತತ್ವವಾದ ಮಂಡನೆಯಲ್ಲಿ ಅವರು ವೇದ-ಸ್ಮೃತಿಗ್ರಂಥಗಳ ಆಧಾರ ವೀಯುವುದರಿಂದ ಹಾಗೂ ಅವರ ಅದ್ಭುತ ತರ್ಕಜ್ಞಾನದಿಂದ ಅವರ ಸಿದ್ಧಾಂತದಲ್ಲಿ ಕಲ್ಪನೆಯ ಅಂಶಕ್ಕೆ ಸೇರ್ಪಡೆ ಆಗಲವಕಾಶವಿಲ್ಲವೆಂಬುದು ಸ್ಪಷ್ಟವೆಂದು ತಿಳಿದ ವಿದ್ವಾಂಸರೇ ಅಭಿಪ್ರಾಯ ಪಟ್ಟಿದಾರೆ.

ದ್ವೈತತತ್ವಕ್ಕೆ ಅವರೇ 'ತತ್ವವಾದ'ವೆಂದು ಕರೆದಿರುವುದು ಒಂದು ಪ್ರಸಿದ್ಧ ಶ್ಲೋಕದಲ್ಲಿ :

> ಯೋವಿಪ್ರಲಂಭ ವಿಪರೀತ ಮತಿ ಪ್ರಭೂತಾನ್ ।
> ವಾದಾನ್ ನಿರಸ್ಯ ಕೃತವಾನ್ ಭುವಿ ತತ್ವವಾದಮ್ ॥

ಇದನ್ನೇ ಅನಂತರ ಬಂದ 'ಟೀಕಾಚಾರ್ಯ'ರೆನ್ನಿಸಿಕೊಂಡ ಶ್ರೀಜಯತೀರ್ಥರು, ವಾದಿರಾಜಸ್ವಾಮಿಗಳು ಸ್ಪಷ್ಟೀಕರಿಸಿರುವುದು ಅವರವರ ಪ್ರಕ್ರಿಯೆಗಳ ಮೂಲಕ ವ್ಯಕ್ತಪಡಿಸುತ್ತದೆ ಹರಿದಾಸರು ಪ್ರಧಾನತಃ ಮಧ್ವಮತಾನುಯಾಯಿಗಳು "ದ್ವೈತ ತತ್ವ"ವನ್ನೇ ಪ್ರಸಾರ ಮಾಡಿದವರು. 'ಮೋದತೀರ್ಥ'ಮತವಿಡಿದು ಸುಖಿಯರಾಗೋ ಮನುಜ' ಎಂದು ಹಾಡಿದವರು (ಮಧ್ವಾಚಾರ್ಯರಿಗೆ ಇನ್ನೊಂದು ಹೆಸರು ಆನಂದತೀರ್ಥರೆಂದು ಇದನ್ನೇ ಹರಿದಾಸರು ಸುಖತೀರ್ಥ, ಮೋದತೀರ್ಥ, ಎಂದೆಲ್ಲ ತಮ್ಮ ಕೃತಿಗಳಲ್ಲಿ ಬಳಸಿದ್ದಾರೆ) ಅಂದಾಗ ಹರಿದಾಸರಲ್ಲಿ ವೈಷ್ಣವ ಧರ್ಮ ನಾವು ಸಮೀಕ್ಷಿಸುವಲ್ಲಿ ಲಕ್ಷ್ಯವೀಯುವುದು ಮಧ್ವಮತ ಪ್ರಶಂಸೆ-ಪರಮತ ಖಂಡನೆ, ಹರಿದಾಸರಾಗಿರುವಿಕೆ, ಹರಿಸರ್ವೋತ್ತಮತ್ವ ಪ್ರತಿಪಾದನೆ, ಹರಿಭಕ್ತಿ–ಪಾರಮ್ಯ ಪ್ರತಿಪಾದನೆ, ವಿಷ್ಣುವಿನ ದಶಾವತಾರ ಸ್ತುತಿ

ವೈವಿಧ್ಯ, ಮೊದಲಾದ ವಿಚಾರಗಳಿಗೆ ಅತ್ಯಂತ ವ್ಯಾಪಕ ಸಾಹಿತ್ಯವಿದ್ದುದರಿಂದ ಎಲ್ಲ ಅಂಶ ಗಮನಿಸುವಲ್ಲಿಯೂ ಕೆಲವು ದಾಸರ ಕೆಲವಾರು ಕೃತಿಯನ್ನು ಉದಾಹರಿಸಲಾಗಿದೆ.

ಶ್ರೀಮಧ್ವಾಚಾರ್ಯರ ಸಿದ್ಧಾಂತದ ಪ್ರಕಾರ, ಶ್ರೀಮನ್ನಾರಾಯಣನೇ ಸರ್ವೋತ್ತಮ, ಸರ್ವಶ್ರೇಷ್ಠ, ಅನಂತಕಲ್ಯಾಣಗುಣಗಣಪರಿಪೂರ್ಣ, ನಿರ್ದೋಷಿ, ಅಶೇಷ ಗಂಣಪೂರ್ಣನಾಗಿರುತ್ತಾನೆ. ಪ್ರಕೃತಿ-ಜೀವ-ಜಡಾತ್ಮಕವಾದ ಜಗತ್ತು ಶ್ರೀನಾರಾಯಣ ನಿಂದ ಸರ್ವಕಾಲದಲ್ಲಿಯೂ ಅತ್ಯಂತ ಭಿನ್ನವೂ ಸತ್ಯವೂ ಆಗಿದ್ದು ಅವನ ಅಧೀನವ ಆಗಿದೆ. ಅದರ ಸಕಲ ವ್ಯಾಪಾರ ನಡೆಯುವುದು ನಾರಾಯಣನಿಂದಲೇ. ಅದನ್ನೇ "ನಾಹಂಕರ್ತಾ ಹರಿಕರ್ತಾ" ಎನ್ನುವುದು. ಅವನೇ ಯಾವತ್ತೂ ಸರ್ವತಂತ್ರ ಸ್ವತಂತ್ರ. ಶ್ರೀಲಕ್ಷ್ಮೀದೇವಿಯ ನಾರಾಯಣನ ಮೊದಲ ದಾಸಿ, ಅಧೀನೆ. ಶ್ರೀಲಕ್ಷ್ಮೀ ದೇವಿಯರಿಂದ ಮೊದಲಗೊಂಡು ಉಳಿದೆಲ್ಲ ದೇವತೆಗಳಿಗೂ, ಜೀವರಿಗೂ ಭಿನ್ನ ಭಿನ್ನತೆ ವ್ಯಕ್ತಿತ್ವ-ಸ್ವರೂಪದಲ್ಲಿದ್ದು, ಅವರವರಲ್ಲಿ ತಾರತಮ್ಯವೂ ಇದೆ. ಆದರಿಂದಲೆ ಮಧ್ವಾ ಚಾರ್ಯರ ವಾದವನ್ನು 'ತಾರತಮ್ಯವಾದ'ವೆಂದೂ ಕರೆಯುವ ವಾಡಿಕೆ ಇದೆ. ವಂಕ್ತಿಯ ಸ್ಥಿತಿಯಲ್ಲೂ ಈ ಮೊದಲು ಹೇಳಿರುವ ಭಿನ್ನ ವ್ಯಕ್ತಿತ್ವ ಹೋಗುವುದಿಲ್ಲ.[8] ಇದು ಸ್ವಯಂ ಶ್ರೀಹರಿಯಿಂದಲೇ ನಿರ್ಧರಿತವಾದ ಸರ್ವಸಿದ್ಧಾಂತವೆಂಬುದು ಶ್ರೀಮಧ್ವಾ ಚಾರ್ಯರ ಉದ್ಘೋಷ.

ತತ್ವವಾದದ ಪ್ರಕಾರ ಪರಮಾತ್ಮನು "ಸದಾಗಮೈಕ ವಿಜ್ಞೇಯಂ ಸಮತೀತ ಕ್ಷರಾಕ್ಷರಂ" ಆಗಿದ್ದಾನೆ. ವೇದಗಳಿಂದ ಮಾತ್ರ ತಿಳಿಯತಕ್ಕವನೂ, ಕ್ಷರ-ಅಕ್ಷರರಿಗೂ (ನಾಶವಾಗುವ-ನಾಶವಾಗದ) ಅತೀತನಾಗಿದ್ದಾನೆ. ಶ್ರೀಹರಿಯು ಸದಾ ಲಕ್ಷ್ಮೀದೇವಿ ಯೊಡಗೂಡಿದ್ದು ಅವರಿಬ್ಬರಲ್ಲಿ ವಿಯೋಗವೆಂಬುದು ಇಲ್ಲ.[9] ಲಕ್ಷ್ಮೀದೇವಿ, ತಾನು ಪರಮಾತ್ಮನ ಪೃಥಮ ದಾಸಿಯೆಂದು "ಅಂಭ್ರಣಿ ಸೂಕ್ತ"ವೆಂಬ ಸೂಕ್ತವಂತ್ರಗಳಲ್ಲಿ ಹೇಳಿಕೊಂಡಿದ್ದಾಳೆ; ಹಾಗೂ ನಿತ್ಯಮಂಕ್ತಳೆನಿಸಿದಾಳೆ. ಲಕ್ಷ್ಮೀದೇವಿಯರನ್ನು ಅನುಸರಿ ಬ್ರಹ್ಮ, ವಾಯು, ಸರಸ್ವತಿ, ಭಾರತಿ, ಶೇಷ, ಗರುಡ, ರುದ್ರಾದಿಗಳು ಬರುತ್ತಾರೆ ಜೀವರಲ್ಲಿ ಸಾತ್ವಿಕ, ರಾಜಸ-ತಾಮಸರೆಂದು ತ್ರಿವಿಧ. ಆಯಾ ಜೀವರು ಶ್ರೀಹರಿ ಕೃಪಾ ವಿಶೇಷದಿಂದ ದೇಹವನ್ನು ಭೂಲೋಕದಲ್ಲಿ ಪಡೆದ ನಂತರ ತಮ್ಮ ಸ್ವರೂಪ ಯೋಗ್ಯತಾನುಸಾರಿಯಾಗಿ ಕರ್ಮಗಳನ್ನಾಚರಿಸಿ ನ್ಯಾಯವಾಗಿ ಪಡೆಯಬೇಕಾದ ಸ್ಥಾ ವನ್ನು ಪಡೆಯುತ್ತಾರೆ. ಮಧ್ವಾಚಾರ್ಯರ ಸಿದ್ಧಾಂತದ ಪ್ರಕಾರ, ಪರಮಾತ್ಮನು ಜೀವವರ್ಗದ ನಿಜ ಸ್ವರೂಪದ ಅಭಿವ್ಯಕ್ತಿಗಾಗಿಯೆ, ಹಾಗೂ ಒಳ್ಳೆಯ ಚೇತನದ ಆತ್ಮ ವಿಕಾಸಕ್ಕಾಗಿಯೇ ಜಗತ್ತನ್ನು ಸೃಷ್ಟಿಸಿರುವುದು. ಈ ಸೃಷ್ಟಿ ವ್ಯಾಪಾರ ಪರಮಾತ್ಮ ಕರುಣೆ ಹಾಗೂ ಅವನ ವಿಹಾರ್ ಕೂಡ ಆಗಿದೆ. ಇಲ್ಲಿ ಈ ಭೂಮಿಯಲ್ಲಿ ಜೀವಾತ್ಮನ ಸಾಧನ ನಡೆಸಿ ಆತ್ಮವಿಕಾಸ-ಆತ್ಮಸಾಕ್ಷಾತ್ಕಾರ ಪಡೆಯಲು ಅನುಕೂಲವಾಗಲೆಂ ಜೀವರಿಗೆ ತನ್ನ ಬಂಧ ವಿಮೋಚನೆಯಾಗಲೆಂಬ ಸದುದ್ದೇಶದಿಂದ ಭಗವಂತನು ಜಗತ ಸೃಷ್ಟಿ ಸೃಜನ ಕೈಗೊಂಡಿರುವುದು.

ಜೀವಾಪಿವತು ದುಃಖಿನಃ
ತೇಷಾಂದುಃಖ ಪ್ರಹಣಾಯ ಶ್ರುತಿರೇಷಾ ಪ್ರವರ್ತತೇ......

ಜೀವರ ವಿಮೋಚನೆಗಾಗಿಯೇ ಈ ಶ್ರುತಿ ಹೊರಟಿಂತಿದೆ.

ಶ್ರೀಹರಿಯೇ ಸಕಲ ಕರ್ಮಗಳನ್ನು ಜೀವರಿಂದ ಗೈಯಲು ಪ್ರೇರೇಪಿಸಿದರೂ ಆವನಿಗೆ ಮಾತ್ರ ಕರ್ಮ ಲೇಪವಿಲ್ಲ. ಅವನೇ ಸೃಷ್ಟಿಸಿದ ಈ ಸೃಷ್ಟಿಯು ಮಾಯೆ ಅಲ್ಲ, ಯಥಾರ್ಥವಾದದ್ದಾಗಿದೆ ; ಇದು ಸಾಧನ ಭೂಮಿ-ಸತ್ಯವಾದ ಜಗತ್ತು. ಇಲ್ಲಿ ಪರಮಾತ್ಮ ನಿಷ್ಠೆಯ ಬುನಾದಿಯಲ್ಲಿ ಧರ್ಮಾಧರ್ಮವರಿತು, ಕರ್ಮಾಚರಣೆ ಮಾಡಿ, ಸತ್ಯ, ದಯ,ತ್ಯಾಗ, ಅಹಿಂಸಾ ಮುಂತಾದ ಮಾನವೀಯ ಗುಣಗಳನ್ನು ಬೈಸಿಕೊಂಡು, ನಿಷ್ಕಾಮ ಕರ್ಮ ಗೈಯುತ್ತ, ಶ್ರೀಹರಿ ಸೇವೆಯ ದೃಷ್ಟಿಯಿಂದ ತನ್ನ ಕರ್ಮಾಚರಣೆ-ಸಮಾಜ ಹಿತ ಸೇವೆ ಮಾಡುತ್ತ, ಹಂತ ಹಂತವಾಗಿ ಮೇಲೇರಿ, ಅಂತಃಕರಣ ಶುದ್ಧಿ ಪಡೆದು, ಶ್ರವಣ, ಮನನ, ನಿಧಿಧ್ಯಾಸನಗಳಿಂದ ಪರಮಾತ್ಮನಲ್ಲಿ ನಿಷ್ಠೆಯನ್ನು ದೃಢತೆಯಿಂದ ಬೆಳಸಿ, ಬಿಂಬರೂಪಿಯಾದ ಪರಮಾತ್ಮನ ದಿವ್ಯ ಸಾಕ್ಷಾತ್ಕಾರ ಹೊಂದಿ, ಅವನ ಪರಮ ಅನುಗ್ರಹದಿಂದಲೆ ದಿವ್ಯಸ್ವರೂಪಾನಂದವನ್ನು ನಾವು (ಜೀವರು) ಪಡೆಯಬೇಕು. ಜಗತ್ತು ಸತ್ಯ ; ಅದರಿಂದ ಇಹದಿಂದ ವಿಮುಖನಾಗಿ ಇಲ್ಲಿಯ ಕರ್ತವ್ಯಭ್ರಷ್ಟನಾಗ ಬೇಕಾದ್ದಿಲ್ಲ. ಇದು ಮಧ್ವಾಚಾರ್ಯರ ಸಿದ್ಧಾಂತದಲ್ಲಿ ಕರ್ಮಯೋಗವನ್ನು ಸತ್ಯ-ಜ್ಞಾನ ಗಳ ಹಿನ್ನೆಲೆಯಲ್ಲಿ ಸ್ಥಾಪಿಸಿರುವುದರ ಮಹತ್ವವನ್ನು ತಿಳಿಯಪಡಿಸುತ್ತದೆ. ಭಗವಂತನ ವ್ಯಾಪ್ತಿಗೆ ಅಖಿಲ ಲೋಕವೂ ಒಳಪಟ್ಟಿದೆ ಎಂಬುದೇ ವೇದ ಕಲ್ಪನೆಯಾಗಿದ್ದು, ಈಶಾ ವಾಸ್ಯ ಉಪನಿಷತ್ತಿನ ಒಂದು ಶ್ಲೋಕ ಹೀಗೆನ್ನುತ್ತದೆ : "ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್"......ಇದು ಯಜುರ್ವೇದದ ಭಾಗವಾದ್ದರಿಂದ, ಇದನ್ನು 'ಸಂಹಿತೋಪನಿಷತ್' ಎಂದೂ ಕರೆದಿದ್ದಾರೆ. ಹೀಗೆ, ಹಾಗೂ ಉಪನಿಷತ್ತು-ಬ್ರಾಹ್ಮಣ-ಸೂತ್ರಗಳ ಪ್ರಕಾರ ವಿಶ್ವಾಂತರ್ಗತವಾದ ಒಂದು ಭಗವಂತನ ಚೇತನ ಸ್ವರೂಪದ ವಿಚಾರ, ನಾನಾ ಹೆಸರುಗಳಿಂದ ಅದನ್ನು ತಿಳಿಸುವಿಕೆ, ...ಆ ದಿವಚೇತನವೇ ಧರ್ಮ ನೀತಿಗಳನ್ನೂ ಉತ್ಥಾನಗೊಳಿಸುವ ಶಕ್ತಿ ಎಂಬುದು ವೇದ. ಅದರ ದ್ರಷ್ಟಾರರೂ ಬಲ್ಲವರಾಗಿದ್ದರು. ($\sqrt{}$ವಿದ್-to know, ವೇದ ಎಂದರೆ 'ತಿಳಿ' ಎಂದರ್ಥವೆಂದೂ, ತಿಳಿವಿನಾಗರವೆಂದೂ ವಿದ್ವಾಂಸರು ಕರೆದಿದ್ದಾರೆ.) ಶ್ರೀ ಮಧ್ವಾಚಾರ್ಯರ 'ಋಗ್ವೇದ ಭಾಷ್ಯ' ('ಋಗ್ಭಾಷ್ಯ' ಗ್ರಂಥ)ದಲ್ಲಿ ವೇದಗಳಿಗೆ ಮೂರು ರೀತಿಯ ಅರ್ಥವುಂಟೆಂದು ಹೇಳಲಾದಿದೆ. ಒಂದು ಭೌತಿಕ, ಇನ್ನೊಂದು ಮಾನಸಿಕ, ಮೂರನೆಯದು ಆಧ್ಯಾತ್ಮಿಕ ಅರ್ಥ. ಇದರೊಂದಿಗೆ ಇತ್ತೀಚಿನ ಸಂಶೋಧನೆಯ ವೈಜ್ಞಾನಿಕ ಪದ್ಧತಿಯನ್ನು ಮೈಗೂಡಿಸಿಕೊಂಡ ಭಾರತದ ಮೇಧಾವಿಗಳ ಧೀಮಂತಿಕೆ, ಮಹರ್ಷಿ ದಯಾನಂದ ಸರಸ್ವತಿ-ಅರವಿಂದ ಘೋಷರಂಥ ಅನುಭಾವಿ ಸಂತರು,ಹಾಗೂ ಅನೇಕ ಸಾಧು ಸನ್ಯಾಸಿ ಗಳು (ವಿವಿಧ ಧರ್ಮದವರು) ನೀಡಿರುವ ವೇದಾರ್ಥಗಳು, ವೇದಮಂತ್ರಗಳಿಗೆ ವಿವಿಧ

ಅರ್ಥಉಂಟೆಂದು ಸೃಷ್ಟಿಪಡಿಸುತ್ತಾರೆ. ಹಾಗೂ ವೇದ ರಹಸ್ಯದ ಬಗ್ಗೆ ಹೊಸ ಬೆಳಕನ್ನೆ ಬೀರಿವೆ (ಇತ್ತೀಚಿನ ಪುಸ್ತಕ ಧಾರವಾಡದ ಪ್ರೊ॥ ಕೆ. ಎಸ್. ನಾರಾಯಣ ಚಾರ್ಯ 'ವೇದ ಮಂತ್ರ ಪರಿಚಯ' ಸಂಪುಟಗಳು ಗಮನಾರ್ಹ). ವೇದ ಮಂತ್ರಗಳಲ್ಲಿ ನಾನಾ ದೇವತಾ ಸ್ತುತಿ, ಸ್ತೋತ್ರ, ಸಂಪದವಿದ್ದರೂ ಅವು ಬಹುದೇವತಾವಾದಿಗಳಲ್ಲ, ಏಕೋದೇವಪೂಜೆ, ಏಕೇಶ್ವರತ್ವವನ್ನೇ ಸಾರುವಂಥವು. ಅನಾದಿ, ಅಪ್ರಮೇಯ, ಸರ್ವಾಂತರ್ಯಾಮಿ, ಸರ್ವಶಕ್ತ ಒಬ್ಬನೇ. ವಿಶ್ವದೇವ (ವಿಶ್ವೇದೇವಾಃ), ವಿಶ್ವಕರ್ಮ, ಬ್ರಹ್ಮಣಸ್ಪತಿ (ಬ್ರಹ್ಮಣಸ್ಪತಿಃ ಬ್ರಹ್ಮಪುತಾ ಪುನಾತುಮಾಮ್), ಪ್ರಜಾಪತಿ (ಪುರುಷಸೂಕ್ತಾದಿ ಸೂಕ್ತಗಳಲ್ಲಿ) ಈಶ-ಇವನೇ ನಾನಾ ಹೆಸರುಗಳುಳ್ಳವನು ಒಬ್ಬನೇ. ಇಲ್ಲಿ ದ್ರಷ್ಟಾರರಾದ ಉಪನಿಷತ್‌ಕರ್ತರು ಕಂಡುಕೊಂಡ 'ಬ್ರಹ್ಮನ್' ಸ್ವರೂಪ ನಮಗೆ ಭಾಸವಾಗುತ್ತದೆ.

ವಿಷ್ಣು ಮಹತ್ವದ ವಿಚಾರವಾಗಿ, ಆರ್. ಜಿ. ಭಂಡಾರ್ಕರ್ ಅವರು ತಮ್ಮ ಲೇಖನದಲ್ಲಿ ನುಡಿದಿರುವಂತೆ:[7] "...ಈತನಿಗೆ ಋಗ್ವೇದದಲ್ಲಿ ಗೌರಸ್ಥಾನ ನೀಡಿದ್ದರೂ, ಬ್ರಾಹ್ಮಣಗಳ ಕಾಲದಲ್ಲಿ ವಿಷ್ಣುವಿಗೆ ಮಹತ್ವ ಬರತೊಡಗಿತು. ಮುಂದೆ ಮಹಾಕಾವ್ಯ, ಪುರಾಣಗಳ ಸಮಯದಲ್ಲಂತೂ ಈತನು ಪರಮಾತ್ಮ ಪಟ್ಟಕ್ಕೆ ಏರಿದ."

ಮಂತ್ರಗಳ ನಂತರ ಬ್ರಾಹ್ಮಣಗಳ ಕಾಲದಲ್ಲಿ ಯಜ್ಞಯಾಗಾದಿಗಳ ಪ್ರಧಾನತೆ ಬಂದಿತು. ದೇವತೆಗಳ ಪ್ರೀತಿಗಳಿಸಿ, ಮಳೆ ಬೆಳೆ ಪ್ರಾರ್ಥಿಸಲು ಒಲುಮೆಗಳಿಸಿ, ಇಲ್ಲಿಯ ಬದುಕು ಸುಖವಾಗಿರಿಸಲು, ಯಾಗಹವಾದಿಗಳನ್ನು ಮಾಡಿ, ಲೋಕಕಲ್ಯಾಣವೆಸಗೆಂದು ಪ್ರಾರ್ಥಿಸುವುದು ಪದ್ಧತಿಯಾಯಿತು. ವಿಷ್ಣುವೇ ಯಜ್ಞ ಸಂರಕ್ಷಕನೆಂದು ಗೌರವಕ್ಕೆ ಪಾತ್ರನಾದರೂ ವಿಷ್ಣು ಎಂದರೆ ಯಜ್ಞ, ಯಜ್ಞವೆಂದರೆ ವಿಷ್ಣುವೆ ಎಂದು ಆತನನ್ನು ಯಜ್ಞರಕ್ಷಕ, ಯಜ್ಞಪುರುಷ, ಯಜ್ಞೇಶ್ವರ, ಯಜ್ಞಕ್ರತು, ಯಜ್ಞವಾಹನ, ಯಜ್ಞ ಭೋಕ್ತೃ ಎಂದೆಲ್ಲ ಗೌರವದಿಂದ ಸಂಭೋಧಿಸುವುದು ರೂಢಿಗೆ ಬಂದಿತು. ಅವನಿಗೆ ಯಾಗದ ಹವಿರ್ಭಾಗ ನೀಡುವುದೂ ಪದ್ಧತಿಯಾಯಿತು. ದೇವತೆಗಳ ಅಭಿಮಂತವೆ ಇದಾಯಿತು : ಯಾರು ನಮ್ಮಲ್ಲಿ ಶ್ರಮ, ಉಗ್ರತಪಸ್ಸು, ಶ್ರದ್ಧೆ, ತ್ಯಾಗ, ಹವನಾದಿಗಳ ಮೂಲಕ ಯಜ್ಞ ರಹಸ್ಯವನ್ನು ಮೊತ್ತ ಮೊದಲಿಗೆ ತಿಳಿಯುವನೋ ಅವನೇ ನಮ್ಮಲ್ಲಿ ಶ್ರೇಷ್ಠ,...ವಿಷ್ಣುವು ಉದ್ದೇಶ ಈಡೇರಿಸಿದ್ದರಿಂದ ಆತನ ದೇವತೆಗಳಲ್ಲೆಲ್ಲ ಶ್ರೇಷ್ಠ, ಸರ್ವ ಶ್ರೇಷ್ಠ. ಈ ವಿಷ್ಣುವೇ ಯಜ್ಞಸ್ವರೂಪಿ, ಯಜ್ಞಸ್ವರೂಪನಾದವನೇ ಆದಿತ್ಯ..."

ಇಲ್ಲಿ ವಿಷ್ಣುವಿನಾರಾಧನೆ, ಸೂರ್ಯನ ಆರಾಧನೆಯೊಂದಿಗೆ ಬೆರೆತಿದೆ. ಸೂರ್ಯನು ವಿಷ್ಣುವಿನ ಪ್ರತ್ಯಕ್ಷ ಸಂಕೇತನಾಗುತ್ತಾನೆ (ಕೋಟಿಸೂರ್ಯಸಮಪ್ರಭಂ... ಸಹಸ್ರಾಕ್ಷಃ ಸಹಸ್ರಪಾತ್) ವಿಷ್ಣು ಸೂರ್ಯನಲ್ಲಿ ಅಂತರ್ನಿಹಿತ ನಿವಾಸಿಯಾಗಿರುತ್ತಾನೆ.

ವೈಷ್ಣವ ಧರ್ಮದ ಒಂದು ವಿಶೇಷ, ಯಜ್ಞವೆ ಪೂಜೆ. ಹಾಗೂ ದೇವತೆಗಳ ಸಂತುಷ್ಟಿಗಾಗಿ ಯಜ್ಞದಲ್ಲಿ ಪಶುಬಲಿ ನಿಷಿದ್ಧವೆಂಬುದು. ವೈಷ್ಣವ ಧರ್ಮವು ಪಶುಬಲಿ ನಿಷೇಧಿಸಿದ್ದು ಮಾತ್ರವಲ್ಲ ರಾಜಸಿಕ, ತಾಮಸಿಕ ಆರಾಧನೆಯ ಬದಲಾಗಿ ಸಾತ್ವಿಕ ಆರಾಧನಾ ಕ್ರಮ ಪುರಸ್ಕರಿಸುತ್ತದೆ.

ಏಕದೇವತಾ ಉಪಾಸನೆ ಪೂಜೆಯ ಅನಿವಾರ್ಯ ಅಂಗವೆಂದು ಕಟ್ಟುಕಟ್ಟಳೆ ವಿಧಿಸಿದೆ. ಇದರಿಂದ ವಿಷ್ಣುವೇ ದೇವ ದೇವೋತ್ತಮ, ವಿಷ್ಣುವೆ ಸರ್ವೋತ್ತಮನೆಂದು ಸಾರಲಾಯಿತು. (ಇದು ಬೇರೆ ತೆರನಾಗಿ ಭವಿಷ್ಯೋತ್ತರ ಪುರಾಣದಲ್ಲಿಯೂ ಬರುತ್ತದೆ. ದೇವತೆಗಳಲ್ಲಿ ಯಾರು ಶ್ರೇಷ್ಠರು ಎಂಬ ಜಿಜ್ಞಾಸೆ ಬಂದಾಗ ದೇವತೆಗಳು ಭೃಗು ಋಷಿಯನ್ನು ಪರೀಕ್ಷಿಸಲು ಕಳಿಸಿದಾಗ ವಿಷ್ಣುವೇ ಸರ್ವೋತ್ತಮನೆಂದಾತ ಸಾರಿದನೆಂದು ಬರುತ್ತದೆ.)

ವೈಷ್ಣವ ಧರ್ಮ ಬೆಳೆದಂತೆ, "ನಾರಾಯಣ" ಕಲ್ಪನೆಯನ್ನು ಆದ್ಯ ಮೈಯಾಂತಿತು. ನರನ ಹೃದಯಸ್ಥನೆ ನಾರಾಯಣ; ಗೀತೆಯಲ್ಲೂ ಇದು ಉಕ್ತ ಆಗಿದೆ. ಇಷ್ಟೇ ಅಲ್ಲ 'ವಾಸುದೇವಃ ಸರ್ವಮಿತಿ' ಎಂದದ್ದು, ಕೃಷ್ಣ ವಾಸುದೇವ, ನಾರಾಯಣ ಒಂದೇ ಎನ್ನಲಾಯಿತು. ಇದು ಅನೂಚಾನವಾಗಿ ಬೆಳೆದು ಬಂದ ಭಗವಂತನ ಕುರಿತ ಭಾಗವತ ಧರ್ಮದಲ್ಲಿ ಪರಿಣತಿ ಹೊಂದಿ, "ಓಂ ನಮೋ ವಾಸುದೇವಾಯ" ಎಂಬ ಮಂತ್ರವಾಯಿತು. ಧರ್ಮದ ಕೂಲಂಕಷ ವಿವರಣೆಯನ್ನು ಭೀಷ್ಮ ಧರ್ಮರಾಜನಿಗೆ ಬೋಧಿಸುತ್ತಾನೆ (ಮ. ಭಾ. : ಶಾಂತಿಪರ್ವ). 'ನಾರಾಯಣೀಯ' ಎಂಬ ವಿಭಾಗವೂ ಇದೆ. ಪುರುಷಸೂಕ್ತ ಮಂತ್ರದ ಕರ್ತೃ ನಾರಾಯಣನೆಂಬ ಋಷಿಯೆಂದು ಋಗ್ವೇದ ತಿಳಿಸುತ್ತದೆ (X-90) "ವಿಶ್ವಂ ನಾರಾಯಣಂ ದೇವಂ" ಎನ್ನುವ ಸೂಕ್ತಿ, ಬ್ರಹ್ಮಾಂಡವು ನಾರಾಯಣ ನಾಮಕ ಪುರುಷನ ವಿಶ್ವರೂಪಾದಿಂದಾಗಿದೆಯೆನ್ನುತ್ತದೆಂಬುದು ಸುವಿದಿತ. ನಾರಾಯಣ ಎಂದರೆ, ಬಲ್ಲವರು ಹೇಳುವಂತೆ ಮಾನವರ ಮತ್ತು ದೇವತೆಗಳ ವಿರಾಮ ತಾಣ. ಪಾಂಚರಾತ್ರಾಗಮ, ಪಂಚರಾತ್ರಸೂತ್ರದ ಯಾಗ ಕಲ್ಪನೆಯನ್ನು ನಾರಾಯಣನೇ ಮಾಡಿದ್ದು. ಸಮಸ್ತರ ಅಸ್ತಿತ್ವದಲ್ಲಿ ಅಂತರ್ಗತನಾದ ಪರಮಾತ್ಮನೀತ ಎಂಬ ಭಾವನೆ ಅನಂತರ ಬೆಳೆದು ಬಂದಿತು.

ಪಾಂಚರಾತ್ರವೇ ಒಂದು ವಿಪುಲ ವಾಙ್ಮಯ-ಅದೇ ಒಂದು ಆಗಮ. ತತ್ವ ಶಾಸ್ತ್ರ, ಮಂತ್ರಶಾಸ್ತ್ರ, ಯೋಗ, ದೇವಾಲಯ-ಮೂರ್ತಿ ನಿರ್ಮಿತಿ, ಶಿಲ್ಪ, ಎಲ್ಲ ವಿಚಾರಗಳನ್ನು ಒಳಗೊಂಡಿದೆ. ಪಂಚರಾತ್ರದ ಅವಿರ್ಭಾವ ಹೀಗೆ : ಪರಾ, ವ್ಯೂಹ, ವಿಭಾವ, ಅಂತರ್ಯಾಮಿನ್, ಅರ್ಚಾ ಎಂದು ಐದು ಮಡಿ (ಐದರಷ್ಟು).

ಪರಾ-ದೇವರ ಇಂದ್ರಿಯಾತೀತವಾದ ಪರಮೋಚ್ಚ ನೆಲೆ.

ವ್ಯೂಹ-ವಾಸುದೇವ (ಕೃಷ್ಣ), ಸಂಕರ್ಷಣ (ಬಲರಾಮ), ಪ್ರದ್ಯುಮ್ನ ಅನಿರುದ್ಧ. ಇವರನ್ನೆ ಅನುಕ್ರಮವಾಗಿ ದೇಹ, ಆತ್ಮ, ಮನಸ್ಸು ಮತ್ತು ಅಹಂಕಾರಗಳ ಸಂಕೇತ ಸ್ವರೂಪವೆನ್ನುತ್ತಾರೆ.

ವಾಸುದೇವ-ಷಡ್ಗುಣ ಪರಿಪೂರ್ಣ-ಭಗವಾನ್ ಎಂದೇ ಕರೆಸಿಕೊಂಡಾತ, ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜೋಗುಣ.

ವಾಸುದೇವನಿಗೆ ಅರ್ಧಾಂಗಿ-ಲಕ್ಷ್ಮೀದೇವಿ. 'ನಿತ್ಯಾನಪಾಯಿನಿ' "ತತ್‌ಕ್ಷಾಂತಿ ಸಂವರ್ಧಿನೀ" ಎಂದೆಲ್ಲ ಪ್ರಶಂಸಿತೆ, ಇದಲ್ಲದೆ ಭೂ-ನೀಳಾದೇವಿಯರೂ ಇದ್ದಾರೆ.

ವಿಭವ-ಭಗವಂತನ ಅವತಾರ ವೈಭವ. ಭಕ್ತರು, ದಾಸರು, ಸಾಧು ಸಂತ ಯೋಗಿಗಳು ಬಗೆ ಬಗೆಯಾಗಿ ವರ್ಣಿಸಿರುವ ರೂಪ ವಿಶೇಷಗಳು.

ಅಂತರ್ಯಾಮಿನ್-ಹೃದಯಾಂತರ್ಗತ

(ಮಧ್ವರಲ್ಲಿ ಸಂಕಲ್ಪ ಹೇಳುವುದೆ ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ... ಎಂದು)

ಅರ್ಚರೂಪ-ದೇವತಾರಾಧನ, ಪೂಜಾನಂತರ ಉಂಟಾಗುವ ದೇವಸಾನ್ನಿಧ್ಯ. ವಿಷ್ಣು ಸಾಲಿಗ್ರಾಮ-ಚಕ್ರಾಂಕಿತ ಆದದ್ದು-ಅತ್ಯುತ್ತಮ ಅರ್ಚರೂಪ-ಎಂದು ಮನ್ನಣೆ ಇದೆ. ಭಗವಂತನ ವಿವಿಧ ರೂಪಗುಣಗಳನ್ನು ಭಗವದ್ಗೀತೆ, ಉಪನಿಷತ್ತು ವರ್ಣಿಸುತ್ತವೆ.

ಇನ್ನು ನಮಗೆ ವೈಷ್ಣವ ಧರ್ಮದಲ್ಲಿ ಪ್ರಧಾನನಾಗಿ, ಬಹುಜನಪ್ರಿಯನಾಗಿ, ರಮ್ಯ ರಂಜಕ ದೇವತೆಯಾಗಿ, ಭಗವತ್ಸ್ವರೂಪನಾಗಿ, ಲೀಲಾವಿನೋದ ಸ್ವರೂಪಿಯಾದ ಶ್ರೀಕೃಷ್ಣ ಪ್ರಧಾನನಾಗುತ್ತಾನೆ. ಕೃಷ್ಣ ವಾಸುದೇವಸುತ, ನಂದಗೋಪ ಪ್ರಿಯ. ಭಾಗವತ ಧರ್ಮದ ಆರಾಧ್ಯದೈವ. (ಭಗವಂತನನ್ನು ಕುರಿತು ವಿವೇಚಿಸುವುದೇ ಭಾಗವತ ಧರ್ಮ.) ಛಾಂದೋಗ್ಯ-ಉಪನಿಷತ್ತಿನಲ್ಲಿ ಕೃಷ್ಣನ ಉಲ್ಲೇಖವಿದೆ. ಭಂಡಾರಕರ ಅವರ ಅಭಿಪ್ರಾಯದಂತೆ "...ಪೌರಾಣಿಕ ಕಾಲದಲ್ಲಿ ವಾಸುದೇವ ಧರ್ಮವು ಸಮರ ಪರಂಪರೆಯಾಯಿತು : ಮೂರು ಬಗೆಯ ಧಾರ್ಮಿಕ ವಿಚಾರಧಾರೆ ನಿಶ್ಚಿತವಾಗಿ ಒಟ್ಟು ಗೂಡಿದವು. ಅವು ಮೊದಲನೆ: ವೇದ ದೇವತೆಯಾದ ವಿಷ್ಣುವಿನಿಂದ ಹರಿದು ಬಂದದ್ದು; ಎರಡು, ವಿಶ್ವಾತ್ಮಕ-ತಾತ್ವಿಕ ದೇವತೆಯಾದ ನಾರಾಯಣನಿಂದ ಹರಿದು ಬಂದದ್ದು ; ಮೂರು, ಐತಿಹಾಸಿಕ ದೇವತೆಯಾದ ವಾಸುದೇವನಿಂದ ಬಂದದ್ದು. ಈ ಮೂರು ವಿಚಾರಧಾರೆಗಳ ಮಿಲನವೇ ಅನಂತರ ಬಂದ ವೈಷ್ಣವ ಧರ್ಮ. ಇನ್ನೂ ಒಂದು ವಿಚಾರಧಾರೆ ಬಂದಿತು : ಅದೆಂದರೆ, ವಾಸುದೇವ, ಕೃಷ್ಣ, ಗೋಪಾಲಕೃಷ್ಣ (ಗೋವರ ದೇವತೆ) ಅಭಿನ್ನರೆಂದು ಭಾವಿಸುವ ವಿಚಾರಧಾರೆ. "ಇದಕ್ಕೆ ಉಪನಿಷತ್ತುಗಳು ನೀಡಿರುವಂಥ ಚಿಂತನಶೀಲ ವಿಚಾರಧಾರೆಯೂ ಸೇರುತ್ತದೆ. ವೈಷ್ಣವ ವೈಚಾರಿಕರು ನಿರ್ಮಿಸಿದ ಈ ಸಿದ್ಧಾಂತ, ಉಪನಿಷತ್ತಿನ 'ಬ್ರಹ್ಮನ್' ಸ್ಥಾನಗಳಲ್ಲಿ ನಾರಾಯಣ ಅಥವಾ ವಾಸುದೇವ-ಹರಿಯನ್ನು ಕುಳ್ಳಿರಿಸಿದುದು ಕೇಶವಾದಿ ೨೪ ನಾಮಾವಳಿ, ವೈಷ್ಣವ ಆರಾಧನೆಯ ಒಂದಂಶವಾಯಿತು."

ತೈತ್ತರೀಯ ಆರಣ್ಯಕ ವಿಭಾಗದಲ್ಲಿ (X-119) ಬರುವಂತೆ,

> "ನಾರಾಯಣಾಯ ವಿದ್ಮಹೇ, ವಾಸುದೇವಾಯ ಧೀಮಹಿ ।
> ತನ್ನೋ ವಿಷ್ಣುಃ ಪ್ರಚೋದಯಾ ತ್"

ಕೃಷ್ಣ-ವಾಸುದೇವರ ಪ್ರಾಚೀನತೆ, ಪಾಣಿನಿ ಬಳಸಿರುವ "ವಾಸುದೇವಕ" ಸೂತ್ರದಲ್ಲೇ ಉಲ್ಲೇಖಗೊಂಡಿದೆ. (ಕ್ರಿ. ಶ. ೫ನೆ ಶ.) ಹೀಗೆ ವೈಷ್ಣವ ಧರ್ಮ, ವಿಷ್ಣು ಭಕ್ತಿಯ ಪ್ರಾಚೀನತೆ ಕ್ರಿ.ಪೂ. ೪ನೆ ಶತಮಾನದ ಮೆಗಾಸ್ತನೀಸ್ ಕೃಷ್ಣನಾರಾಧನೆಯನ್ನು

ಮಥುರಾ ದೇಶದವರು ಮಾಡುತ್ತಿದ್ದ ವಿವರ ನೀಡುತ್ತಾನೆ. ಕ್ರಿ. ಪೂ. ಎರಡನೆ ಶತಮಾನದ ಬೆಸ್ನಗರ್ ಎಂಬಲ್ಲಿ ದೊರಕಿದ್ದು ಅಲ್ಲಿಯೂ ಈ ಬಗ್ಗೆ ಆಧಾರವಿದೆ. ಅದರಲ್ಲಿ ಗ್ರೀಕ್ ರಾಯಭಾರಿಯಾದ ಹೆಲಿಯೋಡರಸ್ (Helidoras) ಎಂಬಾತ ತನ್ನನ್ನು 'ಭಾಗವತ' ಎಂದು ಕರೆದುಕೊಂಡಿದಾನೆ. ರಾಮಕೃಷ್ಣರ ಅವತಾರ, ಪೂಜೆ, ವೈಷ್ಣವ ಧರ್ಮದ ಅವಿಭಾಜ್ಯ ಅಂಗವಾಗಿ ಪರಿಣಮಿಸಿತು, ಈಗಲೂ ಇದೆ. ದಶಾವತಾರ ವಲ್ಲದೆ (ಪುರಾಣೋಕ್ತ) ಇತರ ಅವತಾರ ಸ್ವರೂಪ ಆದ ಕಪಿಲ, ದತ್ತಾತ್ರೇಯ, ಋಷಭ, ವ್ಯಾಸ ಇವರ ಆರಾಧನೆಯಿದ್ದರೂ-ರಾಮಕೃಷ್ಣ ನರಸಿಂಹ ವರಾಹರ ಅವತಾರಗಳು ತುಂಬ ಜನಪ್ರಿಯ ಆಗಿವೆ. ಇದನ್ನು ದಕ್ಷಿಣ ಭಾರತದ ದೇವಾಲಯ ಗಳಿಂದ ಮನಗಾಣಬಹುದಾಗಿದೆ. ಕ್ಷೀರಸಾಗರದಲ್ಲಿ ಶೇಷಶಾಯಿಯಾದ ಮಹಾವಿಷ್ಣು-ನಾರಾಯಣ, ಆತನ ಪಾದದ ಬಳಿ ಲಕ್ಷ್ಮೀದೇವಿ ವಿಷ್ಣುವಿನ ನಾಭಿಯಿಂದ ಉದ್ಭವಿಸಿದ ಕಮಲದಲ್ಲಿ ಬ್ರಹ್ಮದೇವ. ಈ ರೂಪವನ್ನು ಶ್ರೀರಂಗನಾಥನೆಂದು ಆರಾಧಿಸುವುದು ಸಂಪ್ರದಾಯ.

ವೈಷ್ಣವ ಧರ್ಮದ ಪವಿತ್ರ ಗ್ರಂಥ, ಶಾಸ್ತ್ರ-ರಾಮಾಯಣ, ಭಾರತದ ಶಾಂತಿ ಪರ್ವ-ವಿಷ್ಣು ಸಹಸ್ರನಾಮ, ನಾರಾಯಣೀಯ, ಭಾಗವತ, ಗೀತೆ, ವಿಷ್ಣು ಪುರಾಣ, ಇತ್ಯಾದಿಗಳು. ಆದೇ ಅವರಿಗೆ ಶ್ರುತಿಪ್ರಾಯವಾದವು. ಪಾಂಚರಾತ್ರ ಆಗಮಪದ್ಧತಿ ದೇವಾಲಯದ ಪೂಜಾ ಕ್ರಮಕ್ಕೂ, ನೈಮಿತ್ತಿಕ ಧರ್ಮಾನುಷ್ಠಾನಕ್ಕೂ ಪ್ರಮಾಣ ಆಯಿತು. ದೇವಾಲಯಗಳ ನಿರ್ಮಾಣ, ವೈಷ್ಣವ ಧರ್ಮದ ಬೆಳವಣಿಗೆಯ ಹಂತವೆನ್ನ ಬಹುದು. ಪೂಜಾ ವಿಧಾನಗಳು ವೈಭವೋಪೇತವಾಗಿ ರೂಪಗೊಂಡು, ಸಮಾಜವನ್ನು ಆಕರ್ಷಿಸುವಂತಾಯಿತು. ಇದರಿಂದ ದೇವಾಲಯ ಒಂದು ಸಾಂಸ್ಕೃತಿಕ ಕೇಂದ್ರ, ವಿದ್ಯೆಗೆ ಆಗರ, ಎಂದೆನಿಸಿತು. ಜನಸಾಮಾನ್ಯರು ಧಾರ್ಮಿಕ ಭಾವನೆಯಿಂದ ಪ್ರೇರೇಪಣೆ ಗೊಂಡು, ಅವರಲ್ಲಿ ಹುದುಗಿದ್ದ ಕಲೆ, ಸಂಸ್ಕೃತಿ ಇತ್ಯಾದಿ ವೈಯಕ್ತಿಕ ಅಭಿರುಚಿಗಳನ್ನೂ ಭಕ್ತಿಯನ್ನೂ ಅಭಿವ್ಯಕ್ತಗೊಳಿಸಲು ದೇವಾಲಯದಲ್ಲಿ ಅವಕಾಶ ಲಭಿಸಿದವು. ದೇವಾಲಯ ಗಳಲ್ಲಿ ನಡೆಯುತ್ತಿದ್ದ ಉತ್ಸವ ಕಾರ್ಯಕ್ರಮಗಳಲ್ಲಿ, ಮನದುಂಬಿ ಅಂತಃಕರಣ ಪೂರ್ವಕ ವಾಗಿ ಹೊರಟ ಸ್ವರಸಮ್ಮಿಲನದ ಸ್ತುತಿಪಾಠ, ಮಧುರ ಗಾನನಿನಾದ ಪವಿತ್ರ ಧರ್ಮ ಗ್ರಂಥ ಭಾಗಗಳ ಪಠನ, ವೇದಘೋಷ, ಮಂತ್ರೋಚ್ಚಾರಣೆ ಅಲ್ಲಿಯ ಸ್ವರಾತ್ಮಕ ಸಾಮರಸ್ಯವಾದ ಮಿಳಿತವಾಗಿ ಸೃಜಿಸುವ ಗಂಭೀರ ವಾತಾವರಣ, ಗೋಷ್ಠಿ, ಸಂಗೀತ, ನರ್ತನ, ಸಮಾವೇಶಗೊಂಡಿರುತ್ತಿದ್ದವು. ವೈಷ್ಣವ ಧರ್ಮದ ವಿಶೇಷತೆಯೆಂದರೆ, ಮೊದಲಿ ನಿಂದಲೂ ಯಾವಾಗಲೂ ಭಗವಂತನ ಅನಂತ ಮಹಿಮಾವೈಭವವನ್ನೂ, ಆತನ ಸೃಷ್ಟಿಯ ವೈವಿಧ್ಯ ವೈಪುಲ್ಯಗಳನ್ನೂ, ಆತನ ಕಲ್ಯಾಣ ಗುಣವಿಶೇಷಗಳನ್ನೂ ಕೊಂಡಾಡಿ ಕೊಂಡು ಬಂದಿರುವುದು. ಈ ಎಲ್ಲ ರೀತಿಯ ಭಾವನೆಗಳನ್ನೂ ಮಂತ್ರಗಳಲ್ಲಿ ಮಂತ್ರ, ನಾನಾ ಭಕ್ತಿಗೀತೆಗಳಲ್ಲಿ ಅಭಿವ್ಯಕ್ತಗೊಳಿಸಲಾಗಿದೆ. ಇದೇ ಸಂಸ್ಕೃತದ ಮಂತ್ರ-ಸ್ತೋತ್ರ ಸಾಹಿತ್ಯ ಹಾಗೂ ವಿವಿಧ ಪ್ರಾದೇಶಿಕ ಭಕ್ತಿ ಸಾಹಿತ್ಯ.

ಪಾಂಚರಾತ್ರದ ಆಗಮದಂತೆಯೆ ಇನ್ನೊಂದು ಶಾಖೆಯೆಂದರೆ ವೈಖಾನಸ ಸೂತ್ರ. ವೈಖಾನಸವೂ ವೈಷ್ಣವ ಆಗಮವೆ. ಇದರ ಪ್ರಕಾರ ನಾರಾಯಣನೆ ಪರಮ ಆರಾಧ್ಯ ದೈವ. ಭಕ್ತನು ನಾರಾಯಣ ಪರನಾಗಿ ಇರುತ್ತಾನೆ. ವೈಖಾನಸವನ್ನು ಪ್ರಚಲಿತ ಗೊಳಿಸಿದಾತ ವಿಖಾನಸನೆಂಬುವವನು. ಸ್ವಯಂ ವಿಷ್ಣುವೇ "ನನ್ನ ಅರ್ಚಾ" ವಿಗ್ರಹದ ಆರಾಧನ ಪದ್ಧತಿಯನ್ನು ಕ್ರಮಗೊಳಿಸೆಂದು" ಆಣೆಮಾಡಿ ಭೂಮಿಗೆ ಕಳಿಸಿ ಕೊಟ್ಟನಂತೆ. ವೈಖಾನಸ ಆಗಮ ಪಂಥೀಯರು ಹೆಚ್ಚು ಸಂಖ್ಯೆಯಲ್ಲಿಲ್ಲ. ಆದರೂ ದಕ್ಷಿಣ ಭಾರತದ ದೇವಾಲಯಗಳಲ್ಲಿ ಹೆಚ್ಚಾಗಿ ಅನುಸರಿಸುವುದು ವೈಖಾನಸ ಪದ್ಧತಿ ಯನ್ನೇ. ಪ್ರಸಿದ್ಧವಾದ ತಿರುಪತಿಯ ದೇವಾಲಯದಲ್ಲಿಯೂ ವೈಖಾನಸ ಆಗಮ ಪೂಜಾ ವಿಧಾನವನ್ನೇ ಅನುಸರಿಸುತ್ತಿದ್ದಾರೆ.

ವೈಖಾನಸರ ಪ್ರಕಾರ ಶ್ರೀ ಅಥವಾ ಲಕ್ಷ್ಮೀದೇವಿ ನಾರಾಯಣನ ಅವಿಭಾಜ್ಯೆ, ಪ್ರತ್ಯೇಕ ಪೂಜಿಸುವುದಿಲ್ಲ. ಮೂಲತಃ ಆಹ್ವಾನಿಸಲಾದ ದೇವತಾ ಸಾನ್ನಿಧ್ಯಕ್ಕೇ ಹೆಚ್ಚಿನ ಪ್ರಾಶಸ್ತ್ಯ. ಉಳಿದ ದೇವತೆಗಳ ಅಥವಾ ಸತ್ಪುರುಷರ ಪ್ರತ್ಯೇಕ ಪೂಜೆಗೆ ಆಯಾ ದೇವಾಲಯಗಳ ಆವರಣದಲ್ಲಿ ವೈಖಾನಸ ಪದ್ಧತಿ ಅವಕಾಶವೀಯದು. ಇಷ್ಟಾದರೂ ರಾಮಾನುಜರು ಬಂದ ನಂತರ ಅವರ ಪ್ರಭಾವದಿಂದಾಗಿ ವೈಖಾನಸರ ದೇವಾಲಯಗಳಲ್ಲಿ ಕೂಡ ಸಂತರ (ಆಳ್ವಾರರ) ಮೂರ್ತಿ ಪ್ರತಿಷ್ಠಾಪಿಸಿ ಅವರಿಗೂ ಪೂಜೆ ಸಲ್ಲಿಸುವ ಸಂಪ್ರ ದಾಯ ಬಳಕೆಗೆ ಬಂದಿತು. ಇದನ್ನು ತಿರುಪತಿಯಲ್ಲೂ ಕಾಣಬಹುದಾಗಿದೆ. ವೈಷ್ಣವ ಪಂಥಗಳಲ್ಲಿ ಪ್ರಚಲಿತವಿರುವ ದೇಹಕ್ಕೆ ಶಂಖ ಚಕ್ರ ಮುದ್ರಾಧಾರಣ ಪದ್ಧತಿಯನ್ನು ವೈಖಾನಸ ಆಗಮ ಮನ್ನಿಸುವುದಿಲ್ಲ. 'ವೈಷ್ಣವ ಧರ್ಮ'ದ ದೀಕ್ಷೆಯ ಸಂಕೇತವೇ ಶಂಖ ಚಕ್ರ ಮುದ್ರಾಂಕನ. ಇದೇ ರೀತಿ ವೈಖಾನಸರಲ್ಲಿ, ಪೂಜೆಯ ವೇಳೆಯಲ್ಲಿ ದ್ರಾವಿಡ ದಿವ್ಯ ಪ್ರಬಂಧ ಪಠನಕ್ಕೂ ಅನುವು ನೀಡದು.

ವೈಷ್ಣವ ಧರ್ಮದ ಶ್ರೀವೈಷ್ಣವ ಶಾಖೆಯ ಬಗ್ಗೆ ಮೇಲ್ಕಂಡಂತೆ ಪ್ರಸ್ತಾಪಿಸಲು ಕಾರಣ, ವಿಶಾಲದೃಷ್ಟಿಯಲ್ಲಿ ವೈಷ್ಣವ ಧರ್ಮಕ್ಕೆ ಅದು ಅಳವಡುವುದು. ಏಕೆಂದರೆ ಹರಿದಾಸರು ಪ್ರಧಾನತಃ ವೈಷ್ಣವರಾದರೂ ಅವರದು ಮಧ್ವಾಚಾರ್ಯರು ಸಂಸ್ಥಾಪಿಸಿದ ವೈಷ್ಣವ ಸಂಪ್ರದಾಯ-ಪದ್ಧತಿ. ವಿಷ್ಣುವಿನ ಕಲ್ಪನೆ ಹೀಗೆ. ತುಂಬ ಮಿಶ್ರ ಆದದ್ದು. ಭಾರತೀಯರ ವಿವಿಧ ಚಿಂತನಶೀಲಭಾವನೆ ಇದರಲ್ಲಿ ಅತ್ಯಂತ ಸಮಂಜಸವಾಗಿ ಸುಸಂಗತ ರೀತಿಯಲ್ಲಿ ಸಮ್ಮಿಳಿತಗೊಂಡಿರುವುದು ವಿಷ್ಣು ಭಕ್ತಿ ಪ್ರಿಯಂತೆ ಸೂಚಿಸುತ್ತದೆ. ಭಗವದ್ಗೀತೆಯಲ್ಲಿ ವೈಷ್ಣವ ಧರ್ಮದ ಸುಮಧುರ ಸಮನ್ವಯವಿದೆ ಹಾಗೂ ವೈಷ್ಣವ ರಿಗೆ ಇದೊಂದು ವಿಶೇಷ ಪ್ರಮಾಣ ಗ್ರಂಥ ಕೂಡ. ಗೀತೆಯಲ್ಲಿ ಭಗವಂತನ ಸರ್ವಾಂತ ರ್ಯಾಮಿತ್ವ, ಆತನ ಇಂದ್ರಿಯಾತೀತ ಮಹಿಮೆ, ಅಗಮ್ಯ ಸಾಮರ್ಥ್ಯ, ಹೇಳಲಾಗಿದೆ ಯಷ್ಟೆ ಅಲ್ಲ ನಿಸ್ವಾರ್ಥ, ಕರ್ಮಫಲತ್ಯಾಗದ ಶ್ರೇಷ್ಠ ಗುಣಗಳನ್ನು ಭಗವದ್ಗೀತೆ ಒತ್ತಿ ಹೇಳುತ್ತದೆ.

ದಕ್ಷಿಣ ಭಾರತದಲ್ಲಿ ವೈಷ್ಣವ ಧರ್ಮ ಪ್ರಚಲಿತಗೊಂಡುದು ಯಾವಾಗ ಎಂಬು ದಿನ್ನೂ ಖಚಿತವಾಗಿ ತಿಳಿದು ಬಂದಿಲ್ಲ. ಈ ಬಗ್ಗೆ ಸಂಶೋಧನೆ ನಡೆದಿದೆ. ಕರ್ನಾಟಕ ದಲ್ಲಿ ಪತ್ತೆಯಾಗಿರುವ ಅಶೋಕನ ಧರ್ಮಲಿಪಿಗಳ, ಭದ್ರಬಾಹು ಮಂುನೀಶ್ವರರು ಶ್ರವಣಬೆಳ್ಗೊಳಕ್ಕೆ ಬಂದ ಕಥೆಯಿಂದ ಒಂದು ವಿಚಾರ ಸ್ಪಷ್ಟ ಆಗುತ್ತದೆ. ಜೈನ-ಬೌದ್ಧ ಧರ್ಮ ದಕ್ಷಿಣ ಭಾರತ ಕರ್ಣಾಟಕಕ್ಕೆ ಕ್ರಿ. ಪೂ. ಕೆಲವು ಶತಕದ ಹಿಂದೆ ಬಂದ ವೆಂಬುದು. ಕನ್ನಡ ನಾಡಿನಲ್ಲಿ ಶಾತವಾಹನರು ಪ್ರಾಚೀನ ಕಾಲದ ಅರಸು ಮನೆತನ. ಅವರ ಬಗ್ಗೆ ಕೆಲವು ಶಿಲಾಲಿಪಿ ದೊರೆತಿವೆ. ಕ್ರಿ. ಪೂ. ೨ನೆ ಶತಮಾನದಲ್ಲಿ ಇಂದಿನ ಆಂಧ್ರ-ಕರ್ನಾಟಕದ ಕೆಲವು ಭಾಗಗಳನ್ನು ಅವರು ಆಳುತ್ತಿದ್ದುದಾಗಿ ತಿಳಿದು ಬರುತ್ತದೆ. ಅವರು ವೈದಿಕ ಧರ್ಮಾನುಯಾಯಿಗಳು. ಎರಡನೆ ಶಾತಕರ್ಣಿಯ ಕ್ರಿ. ಪೂ. ೧-೨ನೆ ಶತಮಾನದ 'ನಾನಾಘಾಟ' ಎಂಬಲ್ಲಿ ದೊರೆತ ಶಿಲಾಶಾಸನ, ಆ ಅರಸರು ಅಶ್ವಮೇಧ, ರಾಜಸೂಯ ಯಾಗ ಮಾಡಿದರೆಂದು ತಿಳಿಸುತ್ತದೆ. ಶಾಸನದ ಆರಂಭ ಪದ್ಯಗಳಲ್ಲಿ ಇಂದ್ರ, ಸಂಕರ್ಷಣ, ವಾಸುದೇವರ ಪ್ರಸ್ತಾಪವಿದೆ. ಶಾತವಾಹನನ ನಂತರ ಬಂದ ವರು ಬನವಾಸಿಯ ಕದಂಬರು. ಇವರು ಸಹ ವೈದಿಕ ಧರ್ಮದನುಯಾಯಿಗಳು, ವರ್ಣಾಶ್ರಮದಲ್ಲಿ ನಂಬಿಕೆ ಇದ್ದವರು (ತಾಳಗುಂದದ ಪ್ರಣವೇಶ್ವರ ದೇವಾಲಯದ ಬಳಿಯ ಸ್ತಂಭ ಶಾಸನ) ಕಾಕುತ್ಸ್ಥ ಎಂಬ ಹೆಸರು ಹರಿಭಕ್ತಿಯಲ್ಲಿ ಅವರಿಗಿದ್ದ ಶ್ರದ್ಧೆ ಯನ್ನೂ ತೋರ್ಪಡಿಸುತ್ತದೆ. ಕದಂಬರ ನಂತರ ತಲಕಾಡಿನ ಗಂಗರು, ಜೈನರು (ರನ್ನ ಬರೆದ 'ಸಾಹಸಭೀಮ ವಿಜಯ'ದಲ್ಲಿ ವೈಷ್ಣವ ಧರ್ಮಾನುಯಾಯಿ ಆದ ಭೀಮನ ಸಾಹಸ ಕುರಿತ ಪ್ರಸ್ತಾಪವಿರುವುದು) ಜೈನ ಧರ್ಮದ ಪರಿಪೋಷಕರು. ಇಷ್ಟಾದರೂ ಲೊಕ್ಕಿಗುಂಡಿ ಅಥವಾ ಲಕ್ಕುಂಡಿಯಲ್ಲಿ ದೊರೆತ ಒಂದು ಶಾಸನದ ಪ್ರಕಾರ, ಒಂದು ಸಾವಿರ ಮಹಾಜನರು ವೈಷ್ಣವ ಗೀತೆಗಳ ಅಧ್ಯಯನ ನಿರತರಾಗಿದ್ದರಂತೆ. ಅಂದರೆ ಭಗವದ್ಗೀತೆ ಪರಾಯಣ ಮಾಡುತ್ತಿರಬೇಕು. ("ವೈಷ್ಣವ ಗೀತಿಕಾಮನೋಹರರ್", ಎನ್ನೂಕ್ಕುಡೆ ಶಾಸನ.) ಕ್ರಿ. ಶ. ೬ನೆ ಶದ ಮಧ್ಯದಲ್ಲಿದ್ದ ಪಶ್ಚಿಮ ಚಾಲುಕ್ಯರು ವೈಷ್ಣವ ಧರ್ಮದ ಪೋಷಕರೇ. ಅವರು ನಿರ್ಮಿಸಿರುವ ಗುಹೆ, ಗೋಪುರ, ದೇವಾಲಯ ಶಿಲ್ಪ ಇದನ್ನು ಮನದಟ್ಟು ಮಾಡಿಕೊಡುತ್ತವೆ.[10] "ಪರಮ ಭಾಗವತ", "ಶ್ರೀಪೃಥ್ವೀ ವಲ್ಲಭ" ಮುಂತಾದ ಅವರ ಬಿರುದು, ಅವರಿಗೆ ವಿಷ್ಣು ಭಕ್ತಿಯಲ್ಲಿದ್ದ ಶ್ರದ್ಧೆ ತೋರು ವಂತಿದೆ. ವಿಷ್ಣುವರ್ಧನ ಎಂಬ ಹೆಸರು ಅವರಲ್ಲಿ ತುಂಬ ಬಳಕೆಯಲ್ಲಿತ್ತು. ಇವೆಲ್ಲ ಆಧಾರದಿಂದ ಶೈವ-ಹಾಗೂ ಇತರ ವೈದಿಕ ಪಂಥಗಳೊಂದಿಗೆಯೆ ಕರ್ನಾಟಕ-ದಕ್ಷಿಣ ಭಾರತದಲ್ಲಿ ವೈಷ್ಣವ ಧರ್ಮ ಕ್ರಿಸ್ತ ಕಾಲದ ಆದಿ ಶತಮಾನದಿಂದಲೆ ಪ್ರಚಲಿತವಿದ್ದಿ ತೆನ್ನಬಹುದು. ಅಲ್ಲಿಂದಾಚೆ ಜೈನ ಧರ್ಮ ಕರಗಿತು. ಶೈವ-ವೈಷ್ಣವ ಧರ್ಮಗಳೆರಡೂ ನೆಲೆ ನಿಂತವು. ಅನಂತರದ ಕೆಲವು ಸಮಯ ಮುಗಿಲು ಕವಿದ ವಿಷ್ಣು ಭಕ್ತಿ ಮತ್ತೆ ಬೆಳಗಿದ್ದು ರಾಮಾನುಜರ ನಂತರವೆ. ಅನಂತರ ಅದು ಪ್ರಜ್ವಲಿಸಿ, ಪ್ರಬಲಿಸಿದ್ದು

ಇತಿಹಾಸದ ಮಾತೇ ಆಗಿದೆ. ಆಚಾರ್ಯ ಮಧ್ವರ ಆಗಮನ, ವೈಷ್ಣವ ಧರ್ಮಕ್ಕೆ ಹೊಸ ಆಯಾಮವಿತ್ತಿತು.

ಮೇಲೆ ಸಮೀಕ್ಷಿಸಿರುವ ವೈಷ್ಣವ ಧರ್ಮ-ತತ್ತ್ವದ ಮಾತು ಮಾತ್ರ. ಇನ್ನು ಜನಸಾಮಾನ್ಯರ ಸ್ಥಿತಿ, ಪ್ರತಿಕ್ರಿಯೆ ಈ ವಿಚಾರದಲ್ಲಿ? ಅದು ಇನ್ನೊಂದು ರೀತಿ ಯದಾಗಿತ್ತು. ಉತ್ತರ ಭಾರತದಲ್ಲಿರದ ಭಕ್ತಿ ಬಂದದ್ದೆ ದಕ್ಷಿಣದೆಡೆ (ಆಗ್ಗೆ ಇರುವ ಹೇಳಿಕೆಯೊಂದನ್ನು ಹಿಂದೆಯೆ ಉಲ್ಲೇಖಿಸಲಾಗಿದೆ. ಭಕ್ತಿವಾಹಿನಿ ದ್ರಾವಿಡ ದೇಶದಲ್ಲಿ ಹುಟ್ಟಿ, ಕರ್ಣಾಟಕದಲ್ಲಿ ವೃದ್ಧಿಹೊಂದಿ, ಗುರ್ಜರ ದೇಶದಲ್ಲಿ ಶಿಲಗೊಂಡಿತೆಂಬುದು) ತತ್ತ್ವ-ತರ್ಕ, ಶಾಸ್ತ್ರ, ದರ್ಶನಗಳು ಸಾಮಾನ್ಯರಿಗೆ ನಿಲುಕದಂಥವು. ಜನಸಾಮಾನ್ಯರಿಗೆ ಇವು ಅರ್ಥ ಆಗುವ ಅನುಕೂಲ ಆದಾಗ ಮಾತ್ರ ತತ್ತ್ವಗಳ ವಿಮರ್ಶೆ ಪರೀಕ್ಷೆ ಆದೀತು. ವೇದಾದಿ ಮಂತ್ರಗಳ ಅರ್ಥವನ್ನು ವೈದಿಕ ದರ್ಶನಗಳಾದ ಬ್ರಹ್ಮಸೂತ್ರ-ಪ್ರಸ್ಥಾನ ಪ್ರಕಾಶಕ್ಕೆ ತಂದರೆ, ಭಾರತ-ಭಾಗವತಾದಿ ಪುರಾಣಗಳು ಶ್ರೀಸಾಮಾನ್ಯರಿಗೆ ವೇದ ಧರ್ಮಗಳ ಸಾರವನ್ನು ಲಲಿತ ನುಡಿಗಳಲ್ಲಿ ತಿಳಿಸಲಿಕ್ಕೆಂದೆ ರಚನೆಗೊಂಡವು. ವೈದಿಕ ಧರ್ಮ ವಿಷ್ಣು ಭಕ್ತಿ ಖಂಡಿಸಿ ನಾಸ್ತಿಕವಾದ ಹರಡಲೆತ್ನಿಸಿದ ಜೈನ-ಬೌದ್ಧ ಮಂತಗಳು ಸಂಸ್ಕೃತ ಬಿಟ್ಟು ಪ್ರಚಲಿತವಿದ್ದ ಪ್ರಾಕೃತ-ಪಾಳಿಭಾಷೆಗಳನ್ನು ಪ್ರಸಾರ ಮಾಧ್ಯಮವಾಗಿ ಬಳಸಿಕೊಂಡವು. ಅದುದರಿಂದ ಇವು ಜಾಗ್ರತೆಯಾಗಿ ಹರಡಿ ರಾಜಾಶ್ರಯ ಪಡೆದವು. ರಾಮಾಯಣ-ಭಾರತ ಬೇರೆ ಬೇರೆ ಪ್ರಾಕೃತ ಭಾಷೆಯಲ್ಲಿ ಬಂದವು (ಪಂಪ ಕವಿಯ ಭಾರತ) ಜೈನ ಬೌದ್ಧ ಮತಗಳು ಭಾರತದ ವಿವಿಧ ಪ್ರಾಂತೀಯ ಭಾಷೆಗಳಲ್ಲಿ ಸಹ ವಿಶೇಷ ಸಾಹಿತ್ಯ ರಚಿಸಿದವು. (ಕ್ರಿ.ಶ.೭-೮ರ ಶತಕಗಳಲ್ಲಿ ಜೈನರು-ವಿಜ್ಞಭಿಸುತ್ತಿದ್ದರು). ಉತ್ತರ-ದಕ್ಷಿಣ ಭಾರತದಲ್ಲಿ ಅನೇಕ ಕಡೆ ವಾಮಾಚಾರ ಜನರಲ್ಲಿ ದುಷ್ಪ್ರವೃತ್ತಿ ಬೆಳೆಸು ವಲ್ಲಿ ಪೋಷಕ ಆದವು. ಇದರೊಂದಿಗೆ ಸೇರಿದ್ದು ಮಹಮ್ಮದೀಯರ ಧಾಳಿ ಹಾಗೂ ಇಸ್ಲಾಂ ಮತ ಪ್ರಸಾರ, ಬಲಾತ್ಕಾರದ ಮತಾಂತರ. ಉತ್ತರ ಭಾರತದಿಂದ ದಕ್ಷಿಣದೆಡೆ ರಾಮಾಯಣಾದಿ ವೈದಿಕ ಗ್ರಂಥ, ವೈಷ್ಣವ ಧರ್ಮ ಸರಿಯಲು ಮಹಮ್ಮದೀಯರ ಧಾಳಿಯೇ ಕಾರಣ. ಕರ್ಣಾಟಕದಲ್ಲಿ ಜೈನ-ಶೈವ-ವೈಷ್ಣವ ಈ ಮೂರು ಪಂಥಗಳು ತಂತಮ್ಮ ಪ್ರಭಾವ ಬೀರಲು ಶ್ರಮಿಸಿದವು. ಇವುಗಳ ಉದ್ದೇಶ ಸಮಾಜ ಹಿತವೇ ಆದರೂ ವೈಷ್ಣವ-ಶೈವ ಧರ್ಮದ ಹಾಗೆ ಜೈನ ಧರ್ಮ ವೈದಿಕ ಧರ್ಮ ಅಲ್ಲ. ಅತ್ತ ಮಹಾರಾಷ್ಟ್ರದಲ್ಲಿ ವೈಷ್ಣವ ಸಂತರ ಪ್ರಭಾವದಿಂದ ವಿಷ್ಣು ಭಕ್ತಿ ಹರಡಿತ್ತು. ರಾಮಾನುಜರು ಕರ್ಣಾಟಕದಲ್ಲಿ ಬಂದು ನೆಲಸಿನರು. ವಿಶಿಷ್ಟಾದ್ವೈತದ ಪ್ರಮುಖ ಗ್ರಂಥಗಳು ತಮಿಳು ಭಾಷೆಯಲ್ಲಿದ್ದ ಪ್ರಯುಕ್ತ ಕರ್ಣಾಟಕದಲ್ಲಿ ಅವರ ವೈಷ್ಣವ ಧರ್ಮ ಪ್ರಸಾರ ಹೆಚ್ಚು ಆಗಲು ಸಾಧ್ಯವಾಗದಾಯಿತು. ಕರ್ನಾಟಕಕ್ಕೆ ಪದಾರ್ಪಣ ಮಾಡಿದ ಜೈನ ಧರ್ಮ ನೆಲೆ ತಪ್ಪಿ, ಅವನತಿ ಹಾದಿ ಹಿಡಿದಿತ್ತು. ೧೨ನೆ ಶತಕದಿಂದ ಶೈವ ಮತವು ಬಸವೇಶ್ವರರಂಥವರಿಂದ ಹೊಸ ರೂಪ ತಳೆದು ವೀರಶೈವ ಧರ್ಮವೆಂದೆನಿಸಿಕೊಂಡಿತು. ಇದು ಸಮಾಜದ ಎಲ್ಲ ವರ್ಗಗಳನ್ನು ಸೇರಿಸಿಕೊಳ್ಳಲು ಶ್ರಮಿಸಿದ್ದು ಮಾತ್ರ ನಿಜ.

ವೀರಶೈವ ಮತದ ಶಿವಪೂಜಾ ತತ್ವ, ಕಾಯಕ ತತ್ವ ಜನತೆಗೆ ಪ್ರಚಾರಿಗಳಂ ಸ್ವಲ್ಪ ಸಮಯಬೇಕಾಯಿತು. ಆದರೆ, ಇಲ್ಲಿ ವರ್ಣಾಶ್ರಮ ಧರ್ಮ ವೇದಾಗಮ ಪ್ರಾವಣ್ಯಾವನ್ನೂ ವೀರಶೈವ ಧರ್ಮ ಅಲಕ್ಷಿಸಿದ್ದು ಇದರ ಕಾರ್ಯಕ್ಷೇತ್ರ ಹೆಚ್ಚು ಹೆಚ್ಚು ವಿಸ್ತರ ಆಗಲಿಲ್ಲ. ಜನತೆಯಲ್ಲಿ ಮತ್ತೆ ಹೆಚ್ಚಾದ ವಾಮಾಚಾರ, ಕಾಪಾಲಿಕ ಧರ್ಮ, ಕ್ಷುದ್ರ ಮಂತಗಳಿಂದ ನೈತಿಕ ಮಟ್ಟ ಇಳಿಮೊಗ ಆಯಿತಷ್ಟೆ. ವೈಷ್ಣವ ಧರ್ಮ, ದ್ವೈತತತ್ವ ಈ ಕೊರತೆ ನೀಗಲು ಶ್ರಮಿಸಿತು. ಹರಿಪಾರಮ್ಯದ ಜೆತೆ, ಅದ್ವೈತ ಖಂಡನ, ವಿವಿಧ ಮತ ಖಂಡನ, ಹರಿಸರ್ವೋತ್ತಮತೆಯ ಸಾಧಾರ ಪ್ರತಿಪಾದನ, ವೇದಾಗಮ ಸ್ಥಾಪನೆ, ವೈಷ್ಣವ ಸಂತರು ಕೈಗೊಂಡ ಕಾರ್ಯಗಳು ಇವು ಒಂದೊಂದೂ ಮಹತ್ವದ, ಹೆಚ್ಚು ಶ್ರಮ ಸಾಧ್ಯ ಕಾರ್ಯಗಳೆ. ಜನತೆಯನ್ನು ವಿಷ್ಣು ಭಕ್ತಿಯ ಸಾತ್ವಿಕತೆಯೆಡೆ ತಿರುಗಿಸುವುದು, ಮನಃಪರಿವರ್ತನೆ ಮಾಡುವುದೇನೂ ಸುಲಭದ ಕಾಯಕವಾಗಿರಲಿಲ್ಲ. ಆದರೆ ಕರ್ನಾಟಕದ ವಿಷ್ಣುಭಕ್ತರು, ಹರಿದಾಸ ಸಂತ ಮಹಾನುಭಾವರು ಇದನ್ನು ಸಾಧಿಸಿದರು, ಇದಕ್ಕಾಗಿ ಶ್ರಮಿಸಿದರು.

ಹರಿದಾಸರು ತಮ್ಮ ಕೃತಿಗಳಲ್ಲಿ ವೈಷ್ಣವ ಧರ್ಮ ಅಭಿವ್ಯಕ್ತಗೊಳಿಸಲು, ಹರಿಸರ್ವೋತ್ತಮತ್ವ ಪ್ರತಿಪಾದಿಸಲು ಉಪಯೋಗಿಸಿದ ಭಾಷೆ ಜನಸಾಮಾನ್ಯರಿಗೆ ಅರ್ಥ ಆಗುವ ತಿಳಿಗನ್ನಡ. ಶೈಲಿಯು ಸರಳ, ಸಹಜವಾದ ಉಪಮೆ ರೂಪಕ, ಇದರ ಜತೆ ಮನಸ್ಸಿಗೆ ಆನಂದವೀಯುತ್ತ ಧರ್ಮ ತಿಳಿಯಿಸುವ ಸಂಗೀತದ ಮಾಧ್ಯಮ. ಕೃತಿಗಳನ್ನು ಮಧುರವಾಗಿ ಹಾಡಿದ್ದು ಮುಂಬೆಳಗಲ್ಲಿ, ಆಗ ಒಳ್ಳೆಯ ಆಲೋಚನೆ ಹಂದರ, ಸಂಜೆ ಹರಿಭಜನೆ ಸಂಕೀರ್ತನ ಸಹ ಮನಸ್ಸಿಗೆ ಹಿತವೆನಿಸುವಂತಾಯಿತು. ಹರಿದಾಸ ಸಾಹಿತ್ಯ ವ್ಯಾಪಕ ಸಾಹಿತ್ಯ ಆಗಲು ಇದೂ ಒಂದು ಕಾರಣ. ಮಧ್ವಾಚಾರ್ಯರು ತಮ್ಮ ತಪಸ್ಸು-ಜ್ಞಾನಗಳ ಬೆಳಕಿನಲ್ಲಿ ಕಂಡುಕೊಂಡು ಪ್ರತಿಪಾದಿಸಿದ ಹರಿಪಾರಮ್ಯ, ಮಹಾಪ್ರಮೇಯಗಳು, ಮೊದಲಿನಿಂದ ಜನತೆ ನಡೆಸಿಕೊಂಡು ಬಂದ ನೀತಿ, ಸದಾಚಾರಗಳನ್ನು ಹರಿದಾಸರು ತಮ್ಮದಾಗಿಸಿಕೊಂಡು ಪ್ರಚಾರ ಮಾಡುವ "ಧರ್ಮ ಗುರು" ಕಾಯಕ ಕೈಗೊಂಡರು. ವರ್ಣಾಶ್ರಮ ಧರ್ಮ ವ್ಯವಸ್ಥೆ ಮುಂದುವರಿದಿದ್ದಲ್ಲದೆ, ಮಧ್ವಮತ ನಿಷ್ಠೆ, ಶಾಸ್ತ್ರದೊಲವು-ಸಂಪ್ರದಾಯ ಹೆಚ್ಚಾಯಿತು. ಹರಿದಾಸ ಸಾಹಿತ್ಯದಲ್ಲಿ ಪ್ರಧಾನತೆ ಇರುವುದೇ ಭಗವಂತನ ದಶಾವತಾರ, ಇತ್ಯಾದಿ ಭಕ್ತಿಯ ಪಾತಳಿಯ ಮೇಲೆ ರಚಿಸಿರುವ ಸಾಹಿತ್ಯ. ಭಾರತ ಗ್ರಂಥ, ಹೇಗೆ ಪಂಚಮ ವೇದವೆಂದಂಗೀಕೃತವಾಗಿದೆಯೊ, ಹಾಗೂ ಸಂಸ್ಕೃತದಲ್ಲಿ ಬಂದಿರುವ ಮಧ್ವಾಚಾರ್ಯರ ಹಾಗೂ ಅವರ ಶಿಷ್ಯರನೇಕರ ತತ್ವಗ್ರಂಥಗಳು ಇರುವಂತೆ ಕನ್ನಡ ದಾಸ ಸಾಹಿತ್ಯ, ದ್ವೈತ ಸಿದ್ಧಾಂತದ ವ್ಯಾಖ್ಯಾನ ರೂಪವೆ ಆಗಿದೆ; ವೈಷ್ಣವ ಧರ್ಮದ ಒಂದು ಅವಿಭಾಜ್ಯ ಅಂಗವಾದ ಹಾಗೂ ಕೇಂದ್ರ ಬಿಂದು ಆದ ಹರಿಭಕ್ತಿಯೆ ದಾಸರಲ್ಲಿ ಪ್ರಧಾನ.

**ಹರಿದಾಸರು ವೈಷ್ಣವ ಧರ್ಮ ಕಂಡರಿಸಿರುವ ಪರಿ**

ಇಂಗ್ಲಿಷ್ ಭಾಷೆಯಲ್ಲಿ 'ರಿಲಿಜನ್' (Religion) ಎಂದು ಹೇಳುವುದಕ್ಕೆ ಕನ್ನಡದಲ್ಲಿ "ಮತ" ಎಂಬುದಲ್ಲದೆ "ಧರ್ಮ" ಎಂಬುದನ್ನು ಪರ್ಯಾಯವಾಗಿ ಹೇಳುವುದು ವಾಡಿಕೆ. ಹಾಗೆ ನೋಡಿದರೆ, ಧರ್ಮ Religion ಶಬ್ದಕ್ಕಿಂತ ಹೆಚ್ಚು ವ್ಯಾಪ್ತಿಯುಳ್ಳದ್ದು. ಧರ್ಮದ ವಿಷಯ ಪ್ರಸ್ತಾಪಕ್ಕೆ ಬಂದಾಗ ಅದರ ಅಂಶಗಳಾದ ನಂಬಿಕೆ, ಅನುಭವ, ಶ್ರದ್ಧೆ, ಭಕ್ತಿ, ಇವೆಲ್ಲ ವಿಚಾರಕ್ಕೆ ಬರುತ್ತದೆ. ನಂಬಿಕೆ (faith)ಯು ಒಂದು ಬಲ, ಒಂದು ನೆಮ್ಮುವ ಆಧಾರ. ನಮಗೆ–ಇಂದ್ರಿಯಗಳನ್ನು ಹಾಗೂ ಬುದ್ಧಿಗೆ ನಿಲುಕುವ ವಸ್ತು ಪದಾರ್ಥ ಹೊರತಾಗಿ–ಬೇರೆ ಏನೂ ಜಗತ್ತೊಂದಿದೆ ಎಂಬ ಆಲೋಚನೆಗೆ ನಿಶ್ಚಯ ಜ್ಞಾನವೆ ನಂಬಿಕೆ ಎನ್ನಬಹುದು. ಹಾಗೂ ಈ ಚರಾಚರ ವಸ್ತುಗಳ ಜಗತ್ತಿನಲ್ಲಿ ಕಣ್ಣಿಗೆ ಕಾಣದ, ಅಲೌಕಿಕತೆಗೆ ನಿಲುಕಬಹುದಾದ ಒಂದು ಶಕ್ತಿಯೊಂದರ ಇರವು, ಅದರ ಕೈವಾಡ ಗೋಚರಿಸುತ್ತದೆ. ಆ ಶಕ್ತಿಯನ್ನೇ ದೇವರೆನ್ನಬಹುದು. ಇಲ್ಲಿಯದು ಭಂಗುರ, ಭಗವಂತನೆ ಸ್ಥಿರವೆಂದು ಪುರಂದರದಾಸರು ತಮ್ಮ ಸುಳಾದಿಯಲ್ಲಿ ಹೇಳುತ್ತಾರೆ : "ಲೊಳಲೊಟ್ಟೆ, ಎಲ್ಲ ಲೊಳಲೊಟ್ಟೆ। ಆನೆ ಕುದುರೆ ಒಂಟೆ ಲೊಳಲೊಟ್ಟೆ। ಬಹು ಸೇನೆ ಭಂಡಾರವು ಲೊಳಲೊಟ್ಟೆ। ಮಾನಿನಿಯರ ಸಂಗ ಲೊಳಲೊಟ್ಟೆ, ದೊಡ್ಡ ಕ್ಷೋಣೀಶನೆಂಬುದು ಲೊಳಲೊಟ್ಟೆ॥" ಇಲ್ಲಿ ಮನುಷ್ಯ ಈ ವ್ಯಾಮೋಹಕ್ಕೆ ದೂರಾಗುವ, ನಿರ್ಲಿಪ್ತತೆ ತಂದುಕೊಂಬ ಸೂಚನೆಯನ್ನು ದಾಸರು ನೀಡಿದಾರೆ. ಭಗವಂತನೆ ಸರ್ವಶಕ್ತ. ಜೀವಚೇತನರೆಲ್ಲ ಅವನಿಗೆ ಅಧೀನರು. ಅವನೆ ಸ್ವತಂತ್ರ–ಜೀವರು ಪರತಂತ್ರರು. ಸರ್ವಜ್ಞ, ಸರ್ವಾಂತರ್ಯಾಮಿಯೆಂದೆನಿಸಿಕೊಂಬ ಭಗವಂತನ ದಯದಿಂದ ಜೀವ ಈ ಇಹಲೋಕದ ಕ್ಷಣಿಕ ಬದುಕನ್ನು ಮೀರಿ ಆಧ್ಯಾತ್ಮ ಪಥದಲ್ಲಿ ಮುನ್ನಡೆದು ಶಾಶ್ವತ ಸುಖ ಕಾಣುತ್ತಾನೆ. ಇದಕ್ಕೆ ಕೆಲವು ಕಟ್ಟುಪಾಡಿದೆ. ಮನುಷ್ಯ ಸತ್‌ಚಾರಿತ್ರ್ಯವುಳ್ಳವನಾಗಿದ್ದು, ಪರಮಾತ್ಮನನ್ನು ನಮ್ರತೆ, ಹಂಬಲ, ಭಕ್ತಿಗಳಿಂದ ಆರಾಧಿಸಬೇಕು, ಸ್ತುತಿಸಬೇಕು. ಈ ಸಾಧನೆಗೆ ಜ್ಞಾನವೊಂದೆ ಸಾಲದು, ಭಕ್ತಿ–ಅನುಭವ ಅಗತ್ಯ. ನಂಬಿಕೆ–ಶ್ರದ್ಧೆ–ಜೀವನಿಗೆ ಸತ್ಯದ ಬೆಳಕನ್ನು ತೋರುವುದರಲ್ಲಿ ಸಹಕಾರಿಯಾಗುತ್ತದೆ, ಅಂದರೆ ಬುದ್ಧಿ ಜೊತೆ–ಭಾವನೆ ಭಕ್ತಿ ಸಹ ಬೇಕು. ಇವೆಲ್ಲ ಸೇರಿದ್ದು "ಧರ್ಮ"ಎಂಬ ಪದದಿಂದ ಬೋಧೆಗೊಳ್ಳುವ ವಿಚಾರಗಳು. ಬುದ್ಧಿ ಅಲ್ಲದೆ, ಭಾವನೆ, ಮೈತ್ರಿ, ಭಕ್ತಿ, ಆನಂದ, ಎಲ್ಲವೂ ಅಗತ್ಯ. ಜಗನ್ನಾಥದಾಸರೊಂದೆಡೆ ಹೇಳುತ್ತಾರೆ : "ಫಲವಿದು ಬಾಳ್ದುದರೆ ಸಿರಿನಿಲಯನ ಗುಣಗಳ ತಿಳಿದು ಭಜಿಸುವುದು" "ಶ್ರದ್ಧಾವಾಲ್ಲಭತೇ ಜ್ಞಾನಂ", "ಈಶ್ವರಸ್ಸರ್ವ ಭೂತಾನಾಂ ಹೃದ್ದೇಶೋಽರ್ಜುನ ತಿಷ್ಠತಿ"–ಇತ್ಯಾದಿ ಗೀತಾ ವಾಕ್ಯ ಧರ್ಮದೆಡೆ ಕೈತೋರುತ್ತವೆನ್ನಬಹುದು. ನಂಬುಗೆ, ವಿಶ್ವಾಸ, ಮಾತ್ರ ಇಡೀ ವಿಶ್ವದ ಮತ ಧರ್ಮದಲ್ಲಿಯೆ ಬಹುಮುಖ್ಯ ಪಾತ್ರವಹಿಸುತ್ತದೆನ್ನಬೇಕು. ಇನ್ನು Religion ಎಂಬ ಪದಕ್ಕೆ "Leg" ಎಂಬ ಧಾತು ಮೂಲವೆಂದು ರೋಮನ್ ಪಂಡಿತನಾದ ಸಿಸೆರೋ ಎಂಬಾತ ಅಭಿಪ್ರಾಯ ಪಡುತ್ತಾನೆ.[11] Religion

ಇದರ ಅರ್ಥ, "ಸಂಗ್ರಹಿಸು", "ಪರಿಗಣಿಸು-ಗಣನೆಮಾಡು", "ದೈವೀ ಸಂಪರ್ಕದ ಲಕ್ಷಣದೆಡೆ ಲಕ್ಷಿಸು" ಎಂದೂ ಸಿಸೆರೋ ಹೇಳಿದ್ದಾನೆ. ಪ್ರಕೃತ-ಧರ್ಮ, ಮಾನವರಿಗೂ ದೇವತೆಗಳಿಗೂ-ದೇವರಿಗೂ ಇರುವ ದೈವಿಕ ನಂಟೆಂದು ಹೇಳಬಹುದು. ಸರ್ ವಿಲಿಯಂ ಜೇಮ್ಸ್ ಎಂಬಾತ ತನ್ನ ಲೇಖನದಲ್ಲಿ ತಿಳಿಸಿರುವಂತೆ, "ಧರ್ಮ ಎಂದರೆ, ವ್ಯಕ್ತಿಗಳು, ಅವರ ಏಕಾಂತದಲ್ಲಿನ ಅನುಭವಗಳು, ಭಾವನೆ, ಕ್ರಿಯೆ-ಎಲ್ಲ ಆಗುತ್ತದೆ."[19] ದೇವತಾ ಸಂಬಂಧವೆ ಧರ್ಮವೆಂಬುದು ಜೇಮ್ಸ್ ಅವರ ಅಭಿಮತ. ಭಾರತೀಯ ತತ್ವವೇತ್ತರು, ದಾರ್ಶನಿಕರ ಅಭಿಪ್ರಾಯವು ಈ ದಿಸೆಯಲ್ಲಿ ಗಮನಾರ್ಹ:

ವೈಶೇಷಿಕರು :

ಯತೋಽಭ್ಯುದಯ ನಿಶ್ರೇಯಸಸಿದ್ಧಿಃ ಸಧರ್ಮಃ

(ಯಾವುದರಿಂದ ಅಭ್ಯುದಯ, ಶ್ರೇಯಸ್ಸು ಸಿದ್ಧಿಸುವುದೋ ಅದೇ ಧರ್ಮ)

ಜೈಮಿನಿ :

ಚೋದನ ಲಕ್ಷಣೋಽರ್ಥೋ ಧರ್ಮಃ

(ಕಾರ್ಯ ಪ್ರಚೋದಕ ಲಕ್ಷಣವುಳ್ಳದ್ದು ಧರ್ಮ)

ವೈದಿಕ ಸಿದ್ಧಾಂತ :

ವೇದ ಪ್ರಣಿಹಿತೋ ಧರ್ಮಃ

(ವೇದೋಕ್ತವಾದದ್ದೇ ಧರ್ಮ)

ಮತ್ಸ್ಯ ಪುರಾಣದ ಪ್ರಕಾರ :

ಧರ್ಮೇತಿ ಧಾರಣೋ ಧಾತುಃ ಮಹತ್ವೇಚ್ಛಿ ಪಂಚ್ಯತೇ ।

ಆಧಾರಣೋ ಮಹತ್ವೇ ವಾ ಧರ್ಮಸ್ಸ ತು ನಿಮಚ್ಯತೇ ॥

ಯಾವುದು ಧಾರಣ ಮಾಡಬಲ್ಲುದೋ, ಧರಿಸಬಲ್ಲುದೋ ಅದನ್ನು ಧರ್ಮವೆನ್ನುತ್ತಾರೆ. ಮಹಾಭಾರತದಲ್ಲಿಯೂ :

"ಧಾರಣಾದ್ಧರ್ಮ ಇತ್ಯಾಹುಃ । ಧರ್ಮೋ ಧಾರಯತಿ ಪ್ರಜಾ ।" ಎಂದರೆ, ಧರಿಸುವುದೇ ಧರ್ಮ, ಧರ್ಮ ಪ್ರಜೆಗಳನ್ನು ಧಾರಣ ಮಾಡುತ್ತದೆಂಬುವ ಅರ್ಥವೇ ಉಕ್ತವಾಗಿದೆ. Religion ಎಂಬುದಕ್ಕೆ ಧರ್ಮಕ್ಕಿರುವ ಅರ್ಥವೆ ವಿಸ್ತಾರಗೊಳ್ಳುತ್ತದೆ. ಭಾರತೀಯ ಸಂಸ್ಕೃತಿಕಾರರ ಪ್ರಕಾರ ಧರ್ಮ, ಕಾಣದ ಅದೃಷ್ಟ ಜಗತ್ತಿಗೆ ಸಂಬಂಧಿಸಿದುದೆಂಬ ಅಭಿಪ್ರಾಯವಿದೆ. ಹಾಗೂ ಧರ್ಮವೆಂಬ ದೇವರೆಂದೇ ಅರ್ಥವೀಯಂತ್ತಾರೆ. (ಧಾರಕಾದ್ಧರ್ಮೋ ಹರಿಃ) ಅಂದರೆ ಧರ್ಮವೆಂಬ ಶಬ್ದಕ್ಕೆ ಅತ್ಯಂತ ವ್ಯಾಪಕ, ವಿಶಾಲ ಅರ್ಥವುಂಟೆಂಬುದನ್ನು ಮನಗಾಣಬಹುದಾಗಿದೆ. ನಶ್ವರವಾದ ಸಂಸಾರ ಬಂಧನದಿಂದ, ಇಹದ ಈತಿ ಬಾಧೆ-ನೋವುಗಳಿಂದ ಮನಃಶಾಂತಿಗೆ ವೇದೋಕ್ತ ಜ್ಞಾನ ತಿಳಿವಿನ ಹಾದಿ, ಅರಿವಿನ ಬೆಳಕು ತೋರುವುದಾದ್ದರಿಂದ ಧರ್ಮಕ್ಕೆ ವೇದೋಕ್ತವಾದದ್ದು, ಪ್ರಪಂಚ ಧರಿಸುವಂಥದು, ಧರ್ಮ ತನ್ನ ರಕ್ಷಿಸಿದರೆ ಅದು ರಕ್ಷಿಸಿದಾತನನ್ನು ರಕ್ಷಿಸುತ್ತದೆಂಬ ಅಭಿಪ್ರಾಯ ಸರಿಯೆಂದೆನ್ನಿಸುತ್ತದೆ. ಧರ್ಮವಿಯಂತ ಒದಂಕು

ವೈಯಕ್ತಿಕ ಹಾಗೂ ಸಾಮುದಾಯಿಕ ಆದ ಸಮಾಜಕ್ಕೆ ಒಳ್ಳಿತೆಂಬುದೇ ಹಿಂದಿನ ಚಿಂತನ ಶೀಲರ ಅಭಿಪ್ರಾಯ. ತರ್ಕಗಳಿಂದ, ಶಾಸ್ತ್ರದಾಮೋದನೆಯಿಂದ ಮಾತ್ರವೇ ಒಲಿಸಿ ಕೊಳ್ಳಲಾಗದ ಭಗವಂತನನ್ನು ಅನನ್ಯ ಶರಣರಾಗಿ, ದಾಸರಾಗಿ ಭಜಿಸಿ. ನಲಿದ ಕುಣಿದರೆ, ಆ ಭಕ್ತಿಗೆ ಅವನು ಭಕ್ತಪರಾಧೀನನಾಗಿ ಒಲಿದಾನು "ನಾಯಮಾತ್ಮಾ ಪ್ರವಚನೇನ ಲಭ್ಯಃ। ನಮೇಧಯಾ ನ ಬಹುನಾಶ್ರುತೇನ" ಆದರಿಂದ ಇದೆಲ್ಲಕ್ಕೂ ಮೂಲ ಧರ್ಮ. ಅಂಥ ವೈಷ್ಣವ ಧರ್ಮ, ವಿಷ್ಣು ಭಕ್ತಿಯನ್ನೇ ಹರಿದಾಸರು ಆಶ್ರಯಿಸಿ, ಬೋಧಿಸಿ, ಅನುಸರಿಸಿ ರೆಂದು ತಿಳಿಸಿದ್ದು. ಸರಿಯಾದ ಹರಿದಾಸನಿಗೆ ಅವನ ಧರ್ಮಯುತ-ಸಮಾಜಕ್ಕೆ ಉಪ ಕರಿಸುವ ಬದುಕಿನಿಂದ ಬರುವ ಪರಮ ಫಲವೆಂಥದು ?

ತಂಬೂರಿ ಮೀಟಿದವ ಭವಾಬ್ಧಿಯ ದಾಟಿದವ ।
ತಾಳವ ತಟ್ಟಿದವ ಸುರರೊಳು ಸೇರಿದವ ।
ಗೆಜ್ಜೆಯ ಕಟ್ಟಿದವ ಖಳರೆದೆ ಮೆಟ್ಟಿದವ ।
ಗಾಯನ ಮಾಡಿದವ ಹರಿಮೂರ್ತಿಯ ನೋಡಿದವ ।
ಪುರಂದರವಿಠಲನ ನೋಡಿದವ ವೈಕುಂಠಕೋಡಿದವ ॥

ವೈಷ್ಣವ ಧರ್ಮ-ಅದರ ಸಾರ, ಹಾಗೂ ಶ್ರೀ ಮಧ್ವಮತ ತತ್ವದ ಅಂಶಗಳನ್ನೊಳ ಗೊಂಡ ಒಂದು ಶ್ಲೋಕವನ್ನು ಹರಿದಾಸ ಕೂಟದ ಸಂಘಟಕರಾದ ಶ್ರೀ ವ್ಯಾಸರಾಯರು (ರಾಜಸಭೆಯೊಂದರಲ್ಲಿ ರಚಿಸಿದ್ದು ಎಂಬುದು ಇತಿಹಾಸದ ಮಾತು) ರಚಿಸಿದ್ದಾರೆ. ಅದನ್ನು 'ನವರತ್ನ ಮಾಲಿಕಾ' ಎಂದೂ ಕರೆಯುತ್ತಾರೆ. ವ್ಯಾಸರಾಯರು ಶ್ರೀಪಾದ ರಾಜರ ಶಿಷ್ಯರು; ತಮ್ಮ ಅದ್ಭುತ ತರ್ಕ ಪರಿಣತಿಯಿಂದ ನ್ಯಾಯಾಮೃತ, ತರ್ಕ ತಾಂಡವ, ಚಂದ್ರಿಕಾ ಗ್ರಂಥಗಳನ್ನು ರಚಿಸಿ (ಇವರು ಪ್ರಹ್ಲಾದನ ಅವತಾರ ಅಂಶರೆಂದೂ, ಅನಂತರ ಪುನಃ ೧೭ನೇ ಶ.ದಲ್ಲಿ ಇವರೇ ಮತ್ತೆ ಶ್ರೀ ರಾಘವೇಂದ್ರರಾಗಿ ಅವತರಿಸಿದ ರೆಂದೂ ಹರಿದಾಸರ ಅಭಿಮತವಿದೆ) ಮಾಧ್ವ ವಾಙ್ಮಯ ತಪಸ್ವಿಗಳಲ್ಲಿ ಅತ್ಯುನ್ನತ ಸ್ಥಾನ ಪಡೆದವರು. ಮಧ್ವಮತ ನಿಷ್ಠೆ, ಹರಿಪಾರಮ್ಯ ಪ್ರತಿಪಾದಿಸುವ ಈ ಶ್ಲೋಕ ಸರ್ವಪ್ರಿಯ. ಸರ್ವಾದರಣೀಯವೆನ್ನಿಸುತ್ತದೆ.

ಶ್ಲೋಕದ ಪಾಠವಿಂತಿದೆ :

ಶ್ರೀಮನ್ಮಧ್ವಮತೇ ಹರಿಃ। ಪರತರಃ। ಸತ್ಯಂ ಜಗತ್ತತ್ವತೋ
ಭಿನ್ನಾ ಜೀವಗಣಾಃ ಹರೇರನುಚರಾಃ ನೀಚೋಚ್ಚ ಭಾವಂಗತಾಃ
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕ ವೇದ್ಯೋ ಹರಿಃ।

ಈ ಶ್ಲೋಕದ ಪ್ರಕಾರ ಮಧ್ವಮತಸಾರ ಒಂಭತ್ತು ಅಂಶಗಳಲ್ಲಿ ಉಕ್ತವಾಗಿದೆ. ಶ್ರೀಹರಿಯೇ ಸರ್ವೋತ್ತಮ। ಜಗತ್ತು ಸತ್ಯ। ಭೇದ ನಿಜವಾದದ್ದು. ಜೀವರಲ್ಲಿ ಪರಸ್ಪರ ತಾರತಮ್ಯವಿದೆ। ಎಲ್ಲ ಜೀವರೂ ಶ್ರೀಹರಿಯ ಆಶ್ರಿತರು (ಅನುಚರಾಃ।) ಎಲ್ಲದರಲ್ಲಿಯೂ ತಾರತಮ್ಯವುಂಟು(ನೀಚೋಚ್ಚ ಭಾವಂಗತಾಃ।);ಮುಕ್ತಿ ಎಂದರೆ ನೈಜ ಸುಖಾನುಭವ–ಸ್ವರೂಪ ದೇಹದಲ್ಲಿರುವ ಸುಖದ ಅನುಭವವೇ ಮೋಕ್ಷ. ಮುಕ್ತಿಗೆ ಭಕ್ತಿಯೇ ಸಾಧನ (ಅಮಲಾ ಭಕ್ತಿಶ್ಚ ತತ್ಸಾಧನಮ್) (ತ್ರಿತಯಂ ಪ್ರಮಾಣಮ್) ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ–ಇವೇ ಮೂರು ಪ್ರಮಾಣಗಳು. ಶ್ರೀ ಹರಿಯನ್ನು ವೇದಗಳಿಂದ ಮಾತ್ರವೆ ತಿಳಿಯುವುದು ಸಾಧ್ಯ (ಆಮ್ನಾಯೈಕ ವೇದ್ಯೋ ಹರಿಃ.) ಈ ನಿಟ್ಟಿನಲ್ಲಿ ಹರಿದಾಸ ಪರಂಪರೆಯವರು ಹರಿದಾಸ್ಯ ಭಾವ, ಮಧ್ವಮತನಿಷ್ಠೆ, ಹರಿ ಸರ್ವೋತ್ತಮತ್ವ, ಹರಿಭಕ್ತಿ–ಇವುಗಳನ್ನು ಅಳವಡಿಸಿಕೊಂಡು ಪ್ರಸಾರ ಮಾಡುವ ಕಾರ್ಯ ಕೈಗೊಂಡರು. ಅದಕ್ಕಾಗಿ ಶ್ರಮಿಸಿದರು. ಹರಿದಾಸ ತನು, ಹರಿದಾಸ್ಯ ಭಾವ, ವೈಷ್ಣವ ಧರ್ಮದ ಒಂದು ವಿಚಾರಾರ್ಹ ಅಂಶ. ದಾಸಸಾಹಿತ್ಯದ ಆದ್ಯ ಪ್ರವರ್ತಕರಾದ ಶ್ರೀಪಾದರಾಜರು, "ತಪ್ಪು ಮಾಡಿರುವೆ, ಕ್ಷಮಿಸಿ ರಕ್ಷಿಸೆ"ಎಂದು ಕೇಳುವುದರ ಜತೆಗೆ ದಾಸ್ಯಭಾವ, ಸಂಸಾರ–ಇಹದ ಭಂಗುರತೆ, ಎಲ್ಲವನ್ನೂ ಪ್ರಸ್ತಾಪಿಸುತ್ತಾರೆ; ತಾನು ಸಂಸಾರಿಗಳಲ್ಲವಾದರೂ ಲೌಕಿಕ ಸಂಸಾರದಲ್ಲಿ ತೊಳಲುವವರನ್ನು ಕಂಡು ಅವರ ಪ್ರತಿನಿಧಿಯಾಗಿ ಪರಮಾತ್ಮನನ್ನು ಪ್ರಾರ್ಥಿಸಿದಂತಿದೆ. "ಹರಿ ನಿನ್ನ ನಾಮಾಶ್ರಯವಲ್ಲದೆ ಮತ್ತೊಂಟೆ......" ಎನ್ನುತ್ತ "ನೀಕರುಣಿಯೆಂದು ನಿನ್ನನಾ ಮರೆಹೊಕ್ಕೆ। ನೀಕರಿಸದೆ ಎನ್ನ ಶ್ರೀಕಾಂತ ಕಾಯಯ್ಯ". "ಬೆಂದ ಸಂಸಾರದಿ ಬಂದುನೊಂದು ಬಳಲಿದೆನಯ್ಯ ನಂದನಂದನಕಾಯೊ ರಂಗವಿಠಲ" ಎನ್ನುವ ಕಳಕಳಿಯೊಂದಿಗೆ, ಡಾಂಭಿಕತನದಿಂದ ಮನವಿರದ ಧ್ಯಾನ ಲವಲೇಶದಿಂದ ಬೂಟಾಟಿಕೆಯಿಂದ ಏನೂ ಫಲ ಬಾರದೆಂದೂ ತಿಳಿಸುತ್ತಾರೆ. ಅಜಾಮಿಳನಂಥವರಿಗೇ ಮುಕ್ತಿ ಕರುಣಿಸಿದ್ದೀಯೊ ನನ್ನನ್ನು ನಿನ್ನ ದಾಸನನ್ನಾಗಿ ಮಾಡಿಕೊಳ್ಳುವುದಿಲ್ಲವೆ ? 'ಹರಿದಾಸರ ಸಂಗವೆಂದು ದೊರಕೀತು' ಎಂದು ಹಂಬಲಿಸುತ್ತಾರೆ. "ನಾನೇನು ನಿನ್ನ ಭೋಗಭಾಗ್ಯ ಬೇಡಿ ಬಂದಿರುವೆನೇನೊ ನಿನ್ನ ದಾಸರ ದಾಸ್ಯ ಸಾಕು. ನಿನ್ನ ಕಥಾಮೃತ ಕೊಡು, ನಿನ್ನ ನಾಮೋಚ್ಚಾರಣೆ ನೀಡು" "ಕಡೆಗೆ ನಾಗಶಯನ ರಂಗವಿಠಲ ನಾನಿನ್ನ ಬಾಗಿಲ ಕಾಯುವ ಭಾಗ್ಯ ಸಾಕು......" "ಇಟ್ಟಾಂಗೆ ಇರುವೆನೊ ಹರಿಯೆ......ನಿನ್ನಯ ಭಕ್ತರ ಸಂಗವಿರಲಿ ದುಷ್ಟಸಂಗ ಬ್ಯಾಡ......" "ಸರಕು ಒಪ್ಪಿಸಿದ ಮ್ಯಾಲಿ ಸುಂಕವುಂಟೆ ದೇವಾ" ಎಂಬ ಪ್ರಾರ್ಥನೆ ಶ್ರೀಪಾದರಾಜರ ಹಂಬಲವನ್ನು ಪ್ರಕಟಿಸುತ್ತದೆ. 'ಧ್ಯಾನವು ಕೃತಯುಗದಿ' ಎಂದು ಕಲಿಯುಗದಲ್ಲಿ ಕೀರ್ತನ–ಗಾನದಲಿ ಕೇಶವಯೆಂದು ಹಾಡಲು ಪ್ರೋತ್ಸಾಹಿಸುವ, ಕರೆ ನೀಡುವ ಶ್ರೀಪಾದರಾಜರು, ಹರಿಯನ್ನು ಬೇಡುವುದೊಂದು "ಸರ್ವಾಯವವೂ ಹರಿಸೇವೆಯಲ್ಲಿರಲಿ, ಎಂಬುದು ಅವರು ಚೆನ್ನಾಗಿಬಲ್ಲರು", "ನಿನ್ನಧೀನ ಶರೀರಕರಣ ಚೇಷ್ಟೆಗಳೆಲ್ಲ" ರಂಗವಿಠಲನದೆ ಎಲ್ಲ ಸುಕೃತ ದುಷ್ಕೃತ ಫಲವಾಧೀನವೆಂಬುದನ್ನು

“ಪಾಲೊಳಗದ್ದು ನೀರೊಳಗದ್ದು” ಎಂದು ಕೋರುತ್ತ ಹರಿಮತವೇ ಸಮ್ಮತವಯ್ಯ ಎಂದು ಉದ್ಘೋಷಿಸುತ್ತಾರೆ. ಹರಿಸರ್ವೋತ್ತಮತೆಯನ್ನು ಹಾಗೂ ಜೀವನ ಒಲುಮೆಯಾಗಿ ಸಾರುವಲ್ಲಿಯಂತೂ ಶ್ರೀಪಾದರಾಜರದು ವೀರಾವೇಶ. “ಉರಿಯೊಳಗೆ ಬಿದ್ದು ಶರೀರವನ್ನು ಕಳೆಯಲೊ, ಪರುವತವನೇರುರುಳಲೊ ಕೃಷ್ಣಾ” ಎನ್ನುತ ಅವರು ‘ಹರಿ ಪರದೈವದೆಂದರಿತು ಭಜಿಸದೆ’ಇರುವವನಲ್ಲ ತಾನೆನ್ನುತ್ತಾರೆ. ಹರಿಸರ್ವೋತ್ತಮತ್ವ ಪ್ರತಿಪಾದಿಸುವಲ್ಲಿ ‘ಹರಿಹರ ವಿರಿಂಚರೊಳು ಪರದೈವವರಾರು’ ಪರಮ ಮುನಿಗಳು ವಿವಾದ ಮಾಡಲು ಭೃಗುಋಷಿಯನ್ನು ಪರೀಕ್ಷೆ ಮಾಡಲು ಕಳುಹಿಸಿದ ಪ್ರಸಂಗವನ್ನು ಒಂದು ಕಥನ ಕವನದಂತೆ ಬಣ್ಣಿಸಿದ್ದಾರೆ. ಹಾಗೂ ಮಂಗಳಾತ್ಮಕ ವಿಶ್ವ ಜನ್ಮಾದಿ ಕಾರಣನಾದ ರಂಗವಿಠಲರೇಯನ ನೆಲೆನಂಬಿರೆನ್ನುತ್ತಾರೆ. ‘ಎಂದೆದು ಸಿರಿ ಅರಸನೆಂದು ಶ್ರುತಿ ಸಾರುತಿದೆ’ಯೆಂದುದ್ಧರಿಸುವ ಶ್ರೀಪಾದರಾಜರು, “ಹರಿಯಾತ್ರೆ ಮಾಡಲಿಲ್ಲ ಹರಿಮೂರ್ತಿ ನೋಡಲಿಲ್ಲ ಹರಿದಾಸ ಸಂಗವಿಲ್ಲ ಕೃಷ್ಣ ಹರಿಸ್ಮರಣೆ ಮಾಡಲಿಲ್ಲ ಸುರ ನದಿಯ ಮೀಯಲಿಲ್ಲ......” ಎನ್ನುತ್ತ ತಮ್ಮ ಗುರುಗಳಾದ “ತೀರ್ಥಪಾದರ (ಆನಂದತೀರ್ಥರ)ಭಜಿಸಿ ಕೃತಾರ್ಥನಾಗದವನ ಜನ್ಮ ವ್ಯರ್ಥ” “ಮಾಯ ಮತವೊಳ್ಳಿತಲ್ಲ ನಿನಗೆ”ಂದು ಮಾಯಾವಾದಿಗಳನ್ನೂ ಖಂಡಿಸುವುದು ಹಾಗೂ ತಾರತಮ್ಯ ಭೇದ ವುಂಟೆಂದು ಘೋಷಿಸುತ್ತಾರೆ.

ಮಾಯಮತವೊಳ್ಳಿತಲ್ಲ ನಿನಗೆ
ನಾಯ ಜನ್ಮವು ಬಾರದೆ ಬಿಡದಲ್ಲ॥

ಜಗಕೆ ಕಾರಣದೇವ ತಾನಿರಲು
ಬೊಗಳಿಕೊಂಬೆ ಭೇದವಿಲ್ಲೆಂದು
ತೆಗೆವನು ಯಮ ಬೆನ್ನು ಚರ್ಮ ಇದು
ನಗೆಯಲ್ಲ ಕೇಳೋ ತಿಳಿಯೊ ದುಷ್ಕರ್ಮ॥

ಅಕ್ಕ ತಂಗಿಯರಿರಲು ನೀನು
ರೊಕ್ಕವಿಕ್ಕಿ ಮದುವೆ ಆಗುದ್ಯಾಕೊ
ಚಿಕ್ಕತಂಗಿ ತಾಯಿ ಮೊದಲು ನಿನ್ನ
ಲೆಕ್ಕದಲಿ ನೋಡಲು ಒಂದಲ್ಲವೇನೊ॥......

ಶಂಕರ ಮತಕೆನೀ ಹೊಂದಿ
ಪಂಕದಲ್ಲಿ ಬೀಳಬೇಕಲ್ಲೊ
ಸಂಕಟಗೊಳಗಾದಿಯಲ್ಲ ನಿನ್ನ
ಬಿಂಕವಮುರಿಯುವ ಯಮನವರಲ್ಲಿ॥

ಇನ್ನಾದರು ಭೇದಮತವನು ನೀನು
ಚೆನ್ನಾಗಿ ತಿಳಿಯೋ ರಂಗವಿಠಲನು
ತನ್ನ ದಾಸ್ಯವನು ಕೊಟ್ಟು
ಉನ್ನಂತ ಪದವೀವನು ನಿನಗೆ ॥

ಇಲ್ಲಿ ಆಚಾರ್ಯರ ತತ್ತ್ವವಾದ ಸಮರ್ಥನೆ, ಹರಿಪಾರಮ್ಯ ಪ್ರತಿಪಾದನೆ, ಶಂಕರರ ಅದ್ವೈತ ಖಂಡನೆಯೂ ಬಂದಿವೆ.

ಆನಂದತೀರ್ಥರ ಮತವೊಂದಿ ಭಜಿಸದವನ ಜನ್ಮ ವ್ಯರ್ಥವೆನ್ನುವ ಶ್ರೀಪಾದ ರಾಜರು ಹರಿವಾಸರ (ಏಕಾದಶಿ)ದಂದು "ಭಾಗವತರ ಮೇಳದಿಂದ ಜಾಗರಣೆ ಮಾಡ ದವನ ಜನ್ಮ" ವ್ಯರ್ಥವೆನ್ನುತ್ತಾರೆ, ಡಂಭಕತನದ ವೈಷ್ಣವವನ್ನು ಟೀಕಿಸುವುದಂತೂ ಸರಳ, ಅಷ್ಟೇ ನೇರ !

ಸುಮ್ಮನೆ ವೈಷ್ಣವ ನೆಂಬರಿ ಪರ ಬೊಮ್ಮ ಸುಜ್ಞಾನವರಿಯದ ಮನುಜನ ॥ಪ॥

ಮುಖವ ತೊಳೆದು ನಾಮವನಿಟ್ಟೆನಲ್ಲದೆ
ಸುಖತೀರ್ಥ ಶಾಸ್ತ್ರವನೋದಿದೆನೆ ॥ (ಮಧ್ವಾಚಾರ್ಯರ ತತ್ತ್ವವಾದ)
ಸುಖಕೆ ಶೃಂಗಾರಕೆ ಮಾಲೆ ಹಾಕಿದೆನಲ್ಲದೆ
ಭಕುತಿರಸದಲ್ಲಿ ಮುಳುಗಿದೆನೇನಯ್ಯ......
....................................
ನರೋತ್ತಮರಿಗಧಿಕ ಗಂಧರ್ವರಿಗಧಿಕ
ಸುರೇಂದ್ರಗಧಿಕ ಹರಗಧಿಕ
ವಿರಿಂಚಿಗಧಿಕ ಸಿರಿಗಧಿಕ
ಹರಿಸರ್ವೋತ್ತಮನೆಂದು ತಿಳಿದೆನೇನಯ್ಯ......
ಜಗತ್ತು ಸತ್ಯವೆಂದು ಪಂಚಭೇದವ ತಿಳಿದು
ಮಿಗೆರಾಗದ್ವೇಷಗಳನು ವರ್ಜಿಸಿ
ಭಗವಂತನಲೀಲೆ ಶ್ರವಣ ಕಥೆಗಳಿಂದ
ನಿಗಮಗೋಚರನೆಂದು ತಿಳಿದೆನೇನಯ್ಯ......

ಇಲ್ಲಿ ಮಧ್ವಾಚಾರ್ಯರ ತತ್ತ್ವ, ಹರಿಪಾರಮ್ಯ ಸಹ ಪ್ರತಿಪಾದಿತವಾಗಿದೆ. ಶ್ರೀಹರಿಯ ದಶಾವತಾರ, ನಾರಾಯಣಾಸ್ತ್ರ ಪ್ರಸಂಗ, ಹಾಗೂ ಮೋಹಿನಿ ರೂಪಕ್ಕೆ ಮರುಳಾದ ಹರ ಮರುಳುಗೊಂಡ ಪ್ರಸಂಗ ಉದಹರಿಸುತ್ತ ಹರಿಪಾರಮ್ಯ ಪ್ರತಿಪಾದಿಸಿದುದರ ರೀತಿ, ಮಧ್ವಾಚಾರ್ಯರಿಗೆ ತಕ್ಕುದಾದದ್ದೆ 'ಕೀರ್ತಿಸಿ ಜನರೆಲ್ಲ ಹರಿಯಗುಣ, ಕೃತಾರ್ಥರಾಗಿರೆಂದು

ಜನತೆಗೆ ಸಂದೇಶ ನೀಡುತ್ತ, ವಾಲ್ಮೀಕಿ, ಅಹಲ್ಯೆ, ಶಬರಿ, ರಾವಣ ವಧೆ ಎಲ್ಲರನ್ನು ನಿದರ್ಶನ ನೀಡುತ್ತಾರೆ.

ಶ್ರೀಪಾದರಾಜರ ಕಳಕಳಿಯ ಪ್ರಾರ್ಥನೆಯಿದು :

ಅನಂತ ಕಾಲದಲ್ಲಿ ಯಾವ ಪುಣ್ಯದಲ್ಲಿ
ಎನ್ನಮನನಿನ್ನಲ್ಲಿ ಯಾಗಸೊ
ಎನ್ನುಮನವನು ನಿನ್ನ ಚರಣದೊಳೊಮ್ಮೆ
ಇಟ್ಟುಸಲಹೊ ರಂಗ ವಿಠಲ...

ಶ್ರೀಪಾದರಾಜರ ಪ್ರಿಯ ಶಿಷ್ಯರಾಗಿದ್ದು, ಹರಿದಾಸಕೂಟ–ವೈಷ್ಣವ ಧರ್ಮಗಳ ಸಂಘಟನೆ, ಅಭಿವೃದ್ಧಿಗೆ ಪ್ರಮುಖ ಕಾರಣರಾದವರು ಶ್ರೀವ್ಯಾಸರಾಯರು. ವ್ಯಾಸ ರಾಯರ ಕೊಡುಗೆ ಮಾಧ್ವ ವಾಙ್ಮಯಕ್ಕೇ ಅಭೂತಪೂರ್ವವೆಂದು ಹಿಂದೆಯೆ ತಿಳಿಸಿದೆ. ಅವರ ಕೀರ್ತನೆಗಳಲ್ಲಿ ಹೊರಹೊಮ್ಮುವ ವೈಷ್ಣವ ಧರ್ಮ, ವಿಷ್ಣುಭಕ್ತಿಯ ಹರಿಸರ್ವೋತ್ತ ಮತ್ವ ಪ್ರತಿಪಾದನೆ, ಹರಿಭಕ್ತಿ–ಗುರುಭಕ್ತಿ ಭಾವಗೀತಾತ್ಮಕವಾದದ್ದು ಹಾಗೂ ಅಷ್ಟೇ ದೃಢತೆಯುಳ್ಳದ್ದು. "ನ ಮಾಧವ ಸಮೋಮಂತಃ" ಎಂಬ ನಿಷ್ಠೆ ಅವರದ್ದು ಎಂಬುದನ್ನು ಅವರ ಕೃತಿಗಳ ಮೂಲಕ ಕಂಡರಿಸಿರುವ ರೀತಿ ಹೇಳಿದ ನಂತರವೆ ನಾವು ಪುರಂದರ ದಾಸಾರ್ಯರಲ್ಲಿ ಕಾಣಬರುವ ವೈಷ್ಣವ ಧರ್ಮದ ಎಳೆಗಳನ್ನು ಗುರುತಿಸಬೇಕಾಗುತ್ತದೆ.

ಹರಿಭಕ್ತಿಯಷ್ಟೇ ಪ್ರಾಮುಖ್ಯ ಗುರುಭಕ್ತಿಗೂ ನೀಡಿದವರು ವ್ಯಾಸರಾಯರು. ಇವರ ಹೆಜ್ಜೆ ಗುರುತೇ ಮುಂದಣ ಹರಿದಾಸ ಪೀಳಿಗೆಯವರಿಗೂ ಜಾಡಾಯಿತು, ಅಷ್ಟೇ ಅಲ್ಲ, ಶಿಷ್ಯ ಶ್ರೇಷ್ಠರಾದ ಪುರಂದರದಾಸರನ್ನು ಪ್ರಶಂಸಿಸುವುದೂ ವ್ಯಾಸರಾಯರಿಗೆ ತುಂಬ ಪ್ರಿಯ.

ದ್ವೈತ ವಾಙ್ಮಯದಲ್ಲಿ "ಟೀಕಾಚಾರ್ಯ"ರೆಂದೆ ಪ್ರಸಿದ್ಧರಾದ ಜಯತೀರ್ಥರನ್ನು ಕುರಿತು

ವೇದಶಾಸ್ತ್ರಗಳೆಂಬೋ ಶೃಂಗಗಳಿಂದ ಸು
ಧಾದಿಗ್ರಂಥಗಳೆಂಬೊ ಸ್ತನದಿಂದೊಪ್ಪುತ ತತ್ತ್ವ
ಬೋಧನೆಯೆಂಬ ದುಗ್ಧಶಿಷ್ಯ ವತ್ಸಂಗಳಿಗೆ
ಆದರದಲಿ ಕೊಟ್ಟ ಸುರಧೇನು...ಎಂದು ಶಂಸನೀಯ ಆದ ನುಡಿ ನುಡಿಯು ತ್ತಾರೆ. ಅದೇ ರೀತಿ ಆನಂದತೀರ್ಥರ ಸ್ಮರಣೆ ಅವತಾರತ್ರಯದಲ್ಲಿ ಮೂರನೆಯ ಅವತಾರವಾಗಿ ಬಂದು "ಇಪ್ಪತ್ತೊಂದು ಕುಮಂತಗಳನ್ನು ಒಪ್ಪದಿಂದ ಗೆಲಿದು ಭಕ್ತ॥ ಕಲ್ಪವೃಕ್ಷನೆನಿಸಿ ಮೆರೆದ ನಾತ, ಅದ್ವೈತ ಶಾಸ್ತ್ರದ ಸಿದ್ಧನಡುಗಿಸಿದ ಆರ್ಯ"

'ಸಾಂಗದಲಿ ಮಧ್ವಮತದಂಗವನು ವಿರ್ಚಿಡಿಸಿ
ಕಂಗೆಟ್ಟ ಕುಮತ ದುಸ್ಸಂಗಗಳನಳಿದು ।" ಎಂದು ಸ್ಮರಿಸುವುದಲ್ಲದೆ

"ಡಂಗುರವ ಸಾರಿರೊ ನಮ್ಮ ಭಾರತಿರಮಣ ವಾಯುವೆ ಜಗದ್ಗುರುವೆಂದು" ಎಂದೂ "ವೇದಾಂತ ಡಿಂಡಿಮ ಮೊಳಗಿಸುವ ವ್ಯಾಸರಾಯರು "ಉಳುಹಿ ವೈಷ್ಣವ ಮತವವನಿಯೊಳಗೆ" ಎಂಬ ಹೆಗ್ಗಳಿಕೆಯನ್ನು ಶ್ರೀ ಮಧ್ವಾಚಾರ್ಯರಿಗೆ ಸೇರಿಸುತ್ತಾರೆ. ವ್ಯಾಸರಾಯರ ಮಧ್ವಮತ ನಿಷ್ಠೆಯಂತೂ ಏಕಮೇವಾದ್ವಿತೀಯ. ಅನೇಕ ಕೃತಿ ರಚನೆ, ಮಧ್ವಾಚಾರ್ಯರ ಒಂದೊಂದು ಗ್ರಂಥ, ಭಾಷ್ಯ, ಧರ್ಮ ಸಂಘಟನೆ ಎಲ್ಲ ಪ್ರಶಂಸಿಸುವುದೆ "ಏನೆಂಬೆ ನಿಮ್ಮ ಕರುಣವ ದೇವಾರ್ಯ" ಅದಕ್ಕೆಂದೆ ಮೀಸಲಾದ ಕೃತಿ

ಆರೊಂದು ವೈರಿಗಳ ತರಿದು ವೈಷ್ಣವರಿಗೆ ।
ಆರೆರಡು ಊರ್ಧ್ವ ಪುಂಡ್ರಗಳ ಧರಿಸಿ ॥
ಆರುಮೂರರ ಮೇಲೆ ಮೂರಧಿಕ ಕುಮತಗಳ ।
ಬೇರೊರಸಿ ಕಿತ್ತೊಮ್ಮೆ ಬಿಸುಟಂಥ ಧೀರ ॥
"......ಪಾರಮಾರ್ಥಿಕ ಪಂಚಭೇದವ ಸ್ಥಾಪಿಸಿದೆ......

ಎಂದು ತಮ್ಮದೆ ಆದ ನೂತನ ಧಾಟಿಯಲ್ಲಿ ತಿಳಿಸುತ್ತಾರೆ.

"ಪತಿತರೊಳು ಎನ್ನಂಥ ಪತಿತರೊಬ್ಬರ ಕಾಣೆ । ಗತಿಯು ನೀನಲ್ಲದೆ ಅನ್ಯರಿಲ್ಲ "ಎಂಬಷ್ಟು ನಮ್ರತೆ, ಎನ್ನ ಮನಕಂಡ ಕಡೆಗೆ ಎರಗುತಿದೆ । ನಿನ್ನಲಿ ನಿಲಿಸಿ ಕಾಯೊ" ಎಂಬುದರಲ್ಲಿ ಜನತೆಯ ದುರ್ಬಲಮನ ಪ್ರತಿಬಿಂಬಿಸಿರುವ ಪರಿ, ಅಷ್ಟೇ ಅಲ್ಲ, ಧರ್ಮ ಪ್ರವಚನಗಳಲ್ಲಿ ತೂಕಡಿಸುವವರನ್ನೂ ವ್ಯಾಸರಾಯರು ಛೇಡಿಸುವುದು ಬಿಟ್ಟಿಲ್ಲ: "ನಿದ್ರೆ ಬಂದಿದೆಕೋ ಅನಿ । ರುದ್ಧನ ಸೇವೆಗೆ ವಿಘ್ನವ ಮಾಡುತ್ತ"

ಅಸ್ತಮಾನದಿಂದ ಉದಯ ವಾಗೋತನಕ ।
ಸ್ವಸ್ಥದಿ ಪಗಡೆ ಪಂಟಿಯನಾಡುತ ॥

ವಿಸ್ತಾರದಿ ವೇಷನೋಡಿ ನಿದ್ರೆಯಿಲ್ಲ
ಪುಸ್ತಕ ಹಿಡಿಯಲು ಪುಸ್ತಕಮಣಿಸುತ......

ಹರಿಕಥಾ ಶ್ರವಣವ ಮಾಡಬೇಕೆನ್ನುತಲಿ ।
ಪರಮ ಭಕುತಿಯಿಂದ ಕುಳ್ಳಿರಲು ॥
ಕಿರುಗಣ್ಣ ನೋಟದಿ ಸ್ಮರಣೆ ತಪ್ಪಿಸುತ ।
ಗುರು ಗುರು ಗುಟ್ಟುತ ಕೊರಳ ತೂಗಿಸುತ ॥

ಎಂಬ ಗೊರಕೆ ಹಿಡಿಯುವವನನ್ನೂ ಪತ್ತೆ ಹಚ್ಚುತ್ತಾರೆ. ಈಗಲೂ ಇದು ಅಪರೂಪವಲ್ಲ.

ವೈಷ್ಣವ ಧರ್ಮದ ಮುಖ್ಯ ಅಂಗವೆ ಹರಿಕಥಾಮೃತ, ಹರಿಭಕ್ತಿಯಾಚರಣೆ. ಭಾಗವತ ಸಪ್ತಾಹ, ಪ್ರಸ್ತಾಪಿಸುತ್ತ ವ್ಯಾಸರಾಯರು "ಅಂತರಂಗದಲಿ ಹರಿಯ ಕಾಣದವನೆ ಹುಟ್ಟುಕುರುಡನೋ। ಸಂತರ ಸಿರಿಕೃಷ್ಣ ಚರಿತೆ ಕೇಳದವನೆ। ಜಡಮತಿ ಕಿವುಡನೊ' ಎಂದು ಸಾರುತ್ತಾರೆ. ಕೀರ್ತನೆ ವಿಸ್ತಾರವಾಗಿದ್ದು ಹರಿಭಕ್ತಿ–ಡಂಭತನವೆರಡರ ಸಜೀವ ಚಿತ್ರಣವನ್ನು ನೀಡುತ್ತದೆ. "ಬಲ್ಲವಗಿಲ್ಲಿದೆ ವೈಕುಂಠ"ವೆಂದು ಇಹಲೋಕದ ಪ್ರಾಮುಖ್ಯ ತಿಳಿಸುವ ವ್ಯಾಸರಾಯರು

ಹರಿ ಚರಾಚರಾ ಸರ್ವ ಜಗದ್ಭರಿತ।
ಮುರಹರನಿದ್ದುದೆ ವೈಕುಂಠ॥
ನರಹರಿಯುಳಿ ನವವಿಧ ಭಕುತಿಗೆ
ಸರಿಸಮವೆಂದಗಿಲ್ಲವೆಂದು

ತಿಳಿಸುತ್ತ, ನವವಿಧ ಭಕ್ತಿಯನ್ನು ತಿಳಿಸುತ್ತಾರೆ.

ಹರಿಸರ್ವೋತ್ತಮನೆಂದು ಪ್ರತಿಪಾದಿಸುವಲ್ಲಿ "ಉಕ್ಕುವ ತುಪ್ಪಕ್ಕೆ ಕೈಯಿಕ್ಕಲೂ" ಹಿಂಜರಿಯುವವರಲ್ಲ. "ತಾನೆ ಪರಬ್ರಹ್ಮನೆಂಬ ಮನುಷ್ಯಾಧಮನು ತಾನು "ಜ್ಞಾನಹೀನನಾಗಿ ಲೋಕದಾಸನವನೆಂದು ಎನ್ನುತ "ಅಹಂ ಬ್ರಹ್ಮಾಸ್ಮಿ" ಎಂಬ ಅದ್ವೈತ ತತ್ತ್ವವನ್ನೂ ಖಂಡಿಸುತ್ತಾರೆ. ದ್ವೈತ ವಾಙ್ಮಯದಲ್ಲಿ ವ್ಯಾಸರಾಯರ ಸ್ಥಾನ ತುಂಬ ಹಿರಿದು; ಪ್ರತಿವಾದಿ ಖಂಡನ, ಮಧ್ವಮತ ಮಂಡನ ಮಾಡಿದವರು.

ಹರಿಭಕ್ತ–ಹರಿದಾಸರೆಂದರೂ ವ್ಯಾಸರಾಯರಿಗೆ ಅಷ್ಟೇ ಅಭಿಮಾನ. ಅವರೇ ವೈಷ್ಣವ ಧರ್ಮದ ಕೌಪಿನ ಕಟ್ಟಾಳುಗಳು, ಎಂದವರ ಅಭಿಮತ. "ಹರಿದಾಸರ ಸಂಗಕೆ ಸರಿಯುಂಟೆ। ಗುರುಕರುಣಕೆ ಇನ್ನು ಕಡೆಯುಂಟೆ ದೇವ॥" ಎನ್ನುವ ವ್ಯಾಸರಾಯರು, ಹರಿದಾಸರ ಸಂಗವನು ದೇವಗಂಗೆ, ಶ್ರೀವರನಕರುಣಾರಸ, ಚಂದ್ರಬಿಂಬ, ಕುರುಡಗೆ ದಿವ್ಯಾಂಜನವಿದ್ದಂತೆ, ಎಂದೆಲ್ಲ ಹೋಲಿಸಿ "ಭವಾಬ್ಧಿ ನಡುವೆ ಸಿಲುಕಿದ ತಮ್ಮಂಥವರ ಪಿಡಿದು ಶ್ರೀಕೃಷ್ಣಸುಖ್ಯಗಳ ಸೇರಿಸುವವರೆಂದು ಪ್ರಶಂಸಿಸುತ್ತಾರೆ. ಹರಿದಾಸರ ಸುಂದರ ಚಿತ್ರಣ, ಹರಿಭಕ್ತಿ–ಕಥೆ ಪ್ರವಚನ ಕುರಿತು ರಚಿಸಿರುವ ಕೃತಿ ಪಾಠ ನಮಗೆ ಇಲ್ಲಿ ಗಮನಾರ್ಹವೆಂದೆನಿಸುತ್ತದೆ. ಇಡೀ ಕೀರ್ತನೆ ಹರಿದಾಸ ಚರ್ಯೆ ರೂಪಗಳನ್ನು ಕಣ್ಣಿಗೆ ಕಟ್ಟುವಂತೆ ತಿಳಿಗನ್ನಡದಲ್ಲಿ ತಿಳಿಯಿಸುತ್ತದೆ :

ಏನು ಧ್ಯಾನ ಮಾಡುವರ ಸಂಗ ಸುಖವೊ ಎಂಥಾ ಸುಖವೊ ಹರಿಯ ॥ಪ॥

ತಂಬೂರಿ ಮೀಟುತ ದ್ವಯ
ಅಂಬಕದಿ ಬಾಷ್ಪ ಬಿಂದು
ತುಂಬಿ ಆನಂದದಿಂದ
ಸಂಭ್ರಮವಾಗಿಹರ ಸಂಗ ॥1॥

ಗೆಜ್ಜೆಯ ಕಾಲಲ್ಲಿ ಕಟ್ಟಿ
ಲಜ್ಜೆಬಿಟ್ಟು ಹರಿಯನಾಮ
ಗರ್ಜನೆ ಮಾಡುತ್ತ ಆಘ
ವರ್ಜಿತರಾಗಿಪ್ಪರ ಸಂಗ ॥2॥

ಪುಷ್ಪದಿ ಸುಗಂಧ ಹ್ಯಾಗೆ
ಇಪ್ಪದೊ ತದ್ವತು ಜಗ
ದಪ್ಪ ಬ್ರಹ್ಮಾದಿಗಳೊಳ
ಗಿಪ್ಪನೆನ್ನುವರ ಸಂಗ ॥3॥

ತುಚ್ಛ ವಿಷಯವ ತೊರೆದು
ನಿಶ್ಚಲ ಭಕುತಿಯಿಂದ
ಅಚ್ಯುತಾನಂತನ ಪಾದ
ಮೆಚ್ಚಿಸಿದವರ ಸಂಗ ॥4॥

ದರ್ವಿಯಂತೆ ಜೀವವನ್ನು
ಸರ್ವತ್ರ ತಿಳಿದು ಶೇಷ
ಪರ್ವತ ವಾಸನ ಕಂಡು
ಉರ್ವಿಯೊಳಿಹರ ಸಂಗ ॥5॥

ನಡೆವುದು ನುಡಿವುದು
ಕೊಡುವುದು ಕೊಂಬುವುದು
ಒಡೆಯನ ಪ್ರೇರಣೆಯೆಂದು
ನುಡಿದು ಹಿಗ್ಗುವರ ಸಂಗ ॥6॥

ಸೃಷ್ಟಿಗೊಡೆಯನ ಮನ
ವಿಟ್ಟು ಭಜಿಸುತ ಜ್ಞಾನ
ಶಿಷ್ಟರಾಗಿ ಸಿರಿ ಕೃಷ್ಣ
ನಿಷ್ಟರಾಗಿಪ್ಪರ ಸಂಗ ॥7॥

ಇಲ್ಲಿ ಮೊದಲೆರಡು ನುಡಿಗಳಲ್ಲಿ ಹರಿದಾಸರ ಚಿತ್ರಣವೆ ಇದೆ. ಶ್ರೀಪಾದರಾಜರು ಸ್ವಯಂ ತಾವೇ ಕಾಲಿಗೆ ಗೆಜ್ಜೆ ಕಟ್ಟಿ, ತಾಳಗಳಿಂದ ಶ್ರೀಹರಿ ಪ್ರೀತ್ಯರ್ಥವಾಗಿ ಗಾನ, ನರ್ತನ ಸೇವೆ ಸಲ್ಲಿಸುತ್ತಿದ್ದುದನ್ನು ವ್ಯಾಸರಾಯರು ನೋಡಿ ಹಿಗ್ಗಿದ್ದರು ಹಾಗೂ ಅವರೂ ಅನಂತರ ಅನುಸರಿಸುತ್ತಿದ್ದಿರಬೇಕು. ಈ ಕೃತಿ ಹರಿದಾಸ ಸಂಪ್ರದಾಯ ಕೊಂಡಾಡುವುದಾದರೂ ಹರಿಭಕ್ತಿ ಮಾಡುವ ವೈಷ್ಣವರ ಬಗ್ಗೆ ಚಿತ್ರವೀಯುವುದರಿಂದ ಇಡೀ ಕೃತಿ ಪಾಠವನ್ನೆ ಉದ್ಧರಿಸಲಾಗಿದೆಯಷ್ಟೆ. "ಶ್ರೀಹರಿ ನಾಮವಂವೆ ಭವರೋಗ

ಹರವಾದ ಸಿದ್ಧೌಷಧಿ", "ಕಮಲನಾಭನ ಚಿಹ್ನೆಯನ್ನು ಧರಿಸಿಕೊಂಡರೆ" ಯಮನಾಳವರು ಗಳೂ ಅಂಜಿಯಾರು "ಜನ್ಮವೆತ್ತಿ ಮಧ್ವಮತದ ಅನುಸರಿಸಿ ನಡೆಯಿರೊ" ಎಂಬುವ ವ್ಯಾಸರಾಯರು ವೈಷ್ಣವನು ಮಾಡುವ ಮಾನಸಪೂಜಾ ವಿಧಾನ ಬಿಂಬೋಪಾಸನದ ಬಗ್ಗೆ ಒಂದು ಅಚ್ಚುಕಟ್ಟಾದ ಕೃತಿಯನ್ನೆ ರಚಿಸಿ ಹಾಡಿದಂತಿದೆ :

ಎನ್ನ ಬಿಂಬಮೂರುತಿಯ ಪೂಜಿಪೆ ನಾನು ॥ಪ॥
ಮನಮುಟ್ಟಿ ಅನುದಿನ ಮರೆಯದೆ ಮರೆಯದೆ ॥ಅ.ಪ.॥

ಗಾತ್ರವೆ ಮಂದಿರ ಹೃದಯವೆ ಮಂಟಪ
ನೇತ್ರವೆ ಮಹದೀಪ ಹಸ್ತ ಚಾಮರವು
ಯಾತ್ರೆ ಪ್ರದಕ್ಷಿಣೆ ಶಯನ ನಮಸ್ಕಾರ
ಶಾಸ್ತ್ರ ಮಾತುಗಳೆಲ್ಲ ಮಂತ್ರಗಳು ॥

ಎಂಬ ಸಾಲುಗಳಲ್ಲಿ ಕಲ್ಪನೆ ತುಂಬ ಉನ್ನತ ಮಟ್ಟದ್ದಾಗಿದೆ.

"......ಇನ್ನು ನಂಡಿವ ಹರಿನಾಮಾಮೃತವೇ ಶೀರ್ಷ ಎನ್ನ ಮನವೆಂಬುದೇ ದಿವ್ಯ ಸಿಂಹಾಸನ" ಏನ್ನುತ್ತಾ ಮಾನಸಪೂಜೆ ಆಚರಿಸುವುದು ಮಾತ್ರವಲ್ಲ "ಜನುಮ ಜನುಮ ದಲ್ಲಿ ಕೊಡು ಕಂಡ್ಯ ಹರಿಯೆ ನಿಮ್ಮ ಸ್ಮರಿಸಂತ್ರ ಹಿಗ್ಗುವ ವೈಷ್ಣವ ಜನುಮವ" ಎಂದು ಕೇಳಿಕೊಳ್ಳುವ ಭಕ್ತನ ಮನ ಅವರದ್ದು. ಹರಿದಾಸರ-ವಿಷ್ಣುಭಕ್ತರ ಒಂದು ಆಚರಣೆ ಹರಿಕಥೆಯಲ್ಲಿ ಪಾಲ್ಗೊಳ್ಳುವಿಕೆ (ಕೇಳುಗನಾಗಿಯೋ-ಪ್ರವಚಕನಾಗಿಯೋ) "ಸೇರಿದೆನು ಸೇರಿದೆನು ಜಗದೀಶನ" ಎಂಬ ಕೃತಿಯಲ್ಲಿ

"ನೇತ್ರಗಳು ಕೃಷ್ಣನ ಮೂರ್ತಿ ನೋಡುತಲಿವೆ
ಶ್ರೋತ್ರಗಳು ಹರಿಕಥೆಯ ಕೇಳುತಲಿವೆ"

ವ್ಯಾಸರಾಯರು ನಂಡಿವಲ್ಲಿ ಆಗಲೇ ಹರಿಕಥೆಯ ವಿಷ್ಣುಭಕ್ತಿ ಪ್ರಸಾರ ಮಹಾದ್ಯಮ ಆಗಿತ್ತೆಂಬುದನ್ನು ಸ್ಪಷ್ಟೀಕರಿಸುತ್ತದೆ. ವೈಷ್ಣವ ಧರ್ಮದ ಅನುಸರಣೆ, ಪ್ರಸಾರ, ವ್ಯಾಸರಾಯರಿಗೆ ಅತ್ಯಂತ ಪ್ರಿಯವಾಗಿತ್ತು, ಹಾಗೂ ಅದೇ ಅವರ ಬದುಕಿನ ತಿರುಳಾಗಿತ್ತು ಎನ್ನಲು ಅವರ ಅನೇಕ ಕೃತಿಗಳು ನಿದರ್ಶನ ನಿಲ್ಲುತ್ತವೆ. ಅವುಗಳ ಸಾಲುಗಳಲ್ಲಿ ಒಂದೆರಡನ್ನು ಗಮನಿಸಬಹುದು :

ಹರಿ ಚಿಹ್ನಾಂಕಿತ ಹರಿದಿನದುಪವಾಸ ।
ನೆರೆಯೂರ್ಧ್ವ ಪುಂಡ್ರ ತುಳಸಿಮಾಲಿಕೆ ॥
ಹರಿಯುತ್ಸವ ಸೇವೆ ಹರಿದಾಸರ ಸಂಗ ।

..............................
ಹರಿಪಾದ ತೀರ್ಥವು ಹರಿಯ ನಿರ್ಮಾಲ್ಯವು ।
ಹರಿಪರ ಧೂಪ ಶೇಷಗಳು .........

ಹರಿಚರಿತೆ ಶ್ರವಣ ದುರಿತಕುಞ್ಜಟನಂ
ಹರಿನಾಮ ಕೀರ್ತನ ಭವರೋಗಕ್ಕೆ ಸಿದ್ಧೌಷಧಂ (ಸುಳಾದಿ)
ಹರಿಚರಣ ಸ್ಮರಣ ಮುಕ್ತ್ಯಾಂಗನೆಗಾಭರುಷಣಂ
ಹರಿಪಾದ ಸೇವನ ಅನಂತಫಲ ಸಾಧನಂ
... ... ... ...
ಇಂತೆಂಬೊದೊಂದು ಪೆರ್ಮೆಯಿ ಹರಿಸೇವೆ ಫಲರೂಪ
ಶ್ರವಣವೆ ಶುಭದ ಬೆಳಗು, ಕೀರ್ತನೆಯೆ ಲೇಸಿನ ಹೆಚ್ಚಿಗೆ
ಸ್ಮರಣವೆಚ್ಚ ಸುಖವೆಂಬುದನಃಭವಸಿದ್ಧ
ಶ್ರೀಕೃಷ್ಣನ ಪಾದಸೇವೆ ಮುಕ್ತಿಕನ್ಯಾ ಸೇರುವೆ॥

ವೈಷ್ಣವ ಧರ್ಮ–ಮಧ್ವಮತ ನಿಷ್ಠೆ, ಹರಿಸರ್ವೋತ್ತಮಂತೆಯನ್ನೆ ತಮ್ಮ ಬದುಕನ್ನಾಗಿ ಪರಿವರ್ತಿಸಿಕೊಂಡ ಪುರಂದರದಾಸರನ್ನು ಅವರ ಭಾವ–ಅನಂಭಾವಗಳ ಕೃತಿಗಳನ್ನು ಅವಲೋಕಿಸಲೇಬೇಕಾಗುತ್ತದೆ. ಇದಕ್ಕೆ ಪ್ರಮುಖ ಕಾರಣ, ಪುರಂದರದಾಸರಲ್ಲಿದ್ದ ನಿಷ್ಠೆ.

ಮಧ್ವಮತವನ್ನಪ್ಪಿದ ವ್ಯಾಪಾರಿ ಪುರಂದರದಾಸರು ಹರಿಸೇವೆಯನ್ನೆ ಮಹಾ ವ್ಯಾಪಾರವೆಂದು ಪರಿಗಣಿಸಿ ತಾವು ಗಳಿಸಿದ್ದ ಎಲ್ಲ ಹೊನ್ನನ್ನು ಕೃಷ್ಣಾರ್ಪಣವೆಂದು, ಅಕ್ಷಯ ನಿಧಿಯಾದ ಶ್ರೀನಿಧಿ ಸೇವೆಗೆ ತೊಡಗಿಸಿದ ಪತ್ನೀ ಕಂಲ ಸಾವಿರವಾಗಲೆಂದು ಹಾರೈ ಸಂತೃ ವೈಷ್ಣವ ಧರ್ಮಾಚರಣೆ ಮಧುಕರವೃತ್ತಿ, ನವವಿಧಭಕ್ತಿ, ಹರಿದಾಸತ್ವಕ್ಕೆ ತಮ್ಮನ್ನು ತಾವೇ ಸಮರ್ಪಣೆ ಮಾಡಿಕೊಂಡರು. ವ್ಯಾಸರಾಯರಂಥ ಗುರುವರ್ಯರ ಹತ್ತಿರ ಹರಿದಾಸ ದೀಕ್ಷೆ, ತಪ್ತಮುದ್ರಾಂಕನ, ಪಂಡರಿಗೆಯ ಪಾಂಡುರಂಗನ ಪ್ರಿಯ ನಾಮ ಆದ ವಿಠಲಾಂಕಿತವೂ ಆಯಿತು. ತಾವು ವೈಷ್ಣವ ಹರಿದಾಸರಾದ ಮೇಲೆ ಪಡೆದ ಒಂದೊಂದು ಅನುಭವಕ್ಕೂ ಒಂದೊಂದು ಕೃತಿಯ ಮೂರ್ತಿ ಸ್ವರೂಪ ನೀಡಿದ್ದಾರೆ ಶ್ರೀಯುತ ಪುರಂದರದಾಸರು, ಅವರ ಹರಿದಾಸ್ಯ ವೃತ್ತಿ ಕ್ರಮೇಣ ವಿಕಸನಗೊಂಡಿತೆ ವಿನಾ, ಅವರ ಆನಂಭವ–ಜ್ಞಾನಶಕ್ತಿಜ ವಿಸ್ತಾರಗೊಂಡಿತೆ ಹೊರತು ಕಿರಿದಾಗಲಿಲ್ಲ.

ವೈಷ್ಣವ ಧರ್ಮದಲ್ಲಿ ಗುರುಭಕ್ತಿಗೆ ಹರಿಭಕ್ತಿಯಷ್ಟೇ ಪ್ರಮುಖ ಸ್ಥಾನ. ಶ್ರೀ ಪುರಂದರದಾಸರು, ವ್ಯಾಸರಾಯರಂಥ ಗುರುಗಳು ದೊರೆತದ್ದು ತಮ್ಮ ಭಾಗ್ಯ ಎಂದು ಅನೇಕ ಕಡೆ ಸ್ಮರಿಸಿದ್ದಾರೆ. ವ್ಯಾಸರಾಯರ ಚರಣ ಕಮಲ ದರುಶನವೆನಗೆ ಏಸು ಜನ್ಮದ ಸುಕೃತ ಫಲ ದೊರಕಿತೋ ಎನ್ನ ಸಾಸಿರಕಂಲ ಕೋಟಿ ಪಾವನವಾಯಿತು। ಶ್ರೀಪನ್ನ ಭಜಿಸುವುದಕಧಿಕಾರಿ ನಾನಾದೆ। ದೋಷರಹಿತನಾದ ಪುರಂದರವಿಠಲನ ದಾಸರ ಕರುಣ

ಪೆನ್ನಮೇಲೆ ಇರಲಾಗಿ''–ಎಂದು ತಮ್ಮ ಅಮಿತವಾದ ಆನಂದ, ಗುರುಭಕ್ತಿ, ''ದೋಷ ರಹಿತ'' ಎಂಬಲ್ಲಿ ಶ್ರೀಹರಿ ನಿರ್ದೋಷಿ ಎಂಬ ಆನಂದತೀರ್ಥರ ತತ್ತ್ವವಾದದ ತಿರುಳು, ಎಲ್ಲವನ್ನೂ ಮೇಳೈಸಿ ತಿಳಿಸಿದ್ದಾರೆ. ''ಗುರು ಉಪದೇಶವಿಲ್ಲದ ಜ್ಞಾನ। ಗುರು ಉಪದೇಶವಿಲ್ಲದ ಯೋಗ। ಗುರು ಉಪದೇಶವಿಲ್ಲದ ಕ್ರಿಯೆಗಳು। ಉರಗನ ಉಪವಾಸ ದಂತೆ ಕಾಣಿರೋ। ಗುರುವ್ಯಾಸರಾಯರೆ ಕರುಣದಿಂದೆನಗೆ। ವರಮಂತ್ರ ಮಂತ್ರಗಳ ಉಪದೇಶಿಸಿದರು। ಪುರಂದರವಿಠಲನೆ ಪರನೆಂದರುಹಿ। ದುರಿತ ಭಯವನೆಲ್ಲ ಪರಿ ಹರಿಸಿದರಾಗಿ''॥ ಎಂದು ಗುರುಭಕ್ತಿಯನ್ನೂ ತೋಡಿಕೊಂಡಿದ್ದಾರೆ ಹರಿಭಕ್ತಿ ಅವರಲ್ಲಿ ಎಷ್ಟರ ಮಟ್ಟಿಗೆಂದರೆ :

ನಿನ್ನ ದಾಸನಾಗಿ ನಿನ್ನೆಂಜಲುಂಡವನ
ನೀನುದಾಶೀನವಮಾಡಿದರೆ ಲೋಗರು ನಗರೆ ?
ನಿನ್ನ ಚರಣ ಕಮಲವನ್ನು ಕೊರಳಲ್ಲಿ
ಕಟ್ಟಿಕೊಂಬುವೆ ಪುರಂದರವಿಠಲ

–ಎಂದು ದೇವರನ್ನೇ ಕೇಳುವಷ್ಟು ವ್ಯಾಸರಾಯರ ಕಾರ್ಯ, ಮಧ್ವಮತ ಪ್ರಸಾರ, ಪ್ರತಿವಾದಿ ಖಂಡನ ಕುರಿತು ಪುರಂದರದಾಸರು ತಿಳಿಸುವುದಿದೆ :

ಈಸು ಮುನಿಗಳಿದ್ದೇನು ಮಾಡಿದರು। ವ್ಯಾಸಮುನಿ ಮಧ್ವಮತವನುದ್ಧರಿಸಿದ।
ಕಾಸಿಗದಾಧರಮಿಶ್ರನ್ನ ಸೋಲಿಸಿದ। ದಾಸನ್ನ ಮಾಡಿಕೊಂಡ ಧಾರುಣಿಯೊಳಗೆ।
ಕಾಸಿಮಿಶ್ರ ಪಕ್ಷಧರ ವಾಜಪೇಯ ನಾ। ರಸಿಂಹ ಯೋಗಿ ಲಿಂಗಣ್ಣ ಮಿಶ್ರ ಮೊದಲಾದ।
ವಿದ್ವಾಂಸರ ನೂರೆಂಟುಮಂದಿಯ ಜ। ಯಿಸಿ ಜಯ ಪತ್ರಿಕೆಯನ್ನು
ವಾಸುದೇವಗೋಪಾಲಕೃಷ್ಣಗೆ। ಭೂಷಣ ಮಾಡಿ ಹಾಕಿಸಿದ।
ಶ್ರೀಶ ಪುರಂದರವಿಠಲ ಬ್ರಹ್ಮ। ಈಶ ಇಂದ್ರಾದಿಗಳಿಗೆಲ್ಲ। ಈಶನೆಂದು ಡಂಗುರವ
ಹೊಯಿಸಿ ಮೆರೆದ ಜಗವರಿಯೆ......

ಹರಿಸರ್ವೋತ್ತಮತ್ವವನ್ನು ಸಾರಿದ ವ್ಯಾಸರಾಯರು ''ಪರಮಧ್ವಮತವೆಂಬ ಸಾಗರ ದೊಳು ಉದ್ಧರಿಸಿದರು'' ಚಂದ್ರನಂತೆ.

ಇದು ಗುರುಗಳ ಬಗ್ಗೆಯಾದರೆ, ಪುರಂದರದಾಸರು ತಮ್ಮ ಭಾವತುಮುಲ, ಅಂತರಂಗದ ಆರ್ತಭಾವ, ಮಾಹಾತ್ಮ್ಯಜ್ಞಾನ, ಅವರು ತಮ್ಮ ನಿಡಿದಾದ ಎಂಭತ್ತು ವರ್ಷದ ಬದುಕಿನಲ್ಲಿ ಕಂಡುಕೊಂಡ 'ಮೋಸ ನೀತಿ', ಅನುಭವಿಸಿದ, ಭಕ್ತಿಯ ಕೃಷ್ಣ ಲೀಲಾ, ಅವರನುಸರಿಸಿದ ಪೂಜಾಸತ್ವ, ಎಲ್ಲವನ್ನೂ ಶ್ರೀಪುರಂದರ ಸಾಹಿತ್ಯದ ವಿವಿಧ ಸಂಪುಟಗಳಲ್ಲಿ ಧಾರವಾಡದ ಮಿಂಚಿನಬಳ್ಳಿ ಕಾರ್ಯಾಲಯದವರು ಪ್ರಕಟಿಸಿರುವುದು ತುಂಬ

ಉಪಯುಕ್ತ ಆಗಿದೆ. ಪುರಂದರದಾಸರ ಕೀರ್ತನೆ, ಸುಳಾದಿ, ಉಗಾಭೋಗಗಳು ಒಂದೊಂದು ಒಂದು ಪ್ರತ್ಯೇಕ ಪ್ರಪಂಚವನ್ನೇ ನಿರ್ಮಿಸುವಂಥವು. ಎಲ್ಲದರಲ್ಲೂ ಭಕ್ತಿಯು ಎಳೆ ಲೋಕಾನುಭವದ ಬೆಳಕಿನ ಕಿರಣವಿದ್ದೇ ಇರುತ್ತದೆ. ಹಂಬಲವಂತೂ ಹೇಳು ವಂತೆಯೇ ಇಲ್ಲ. "ಬಿನ್ನಹಕೆ ಬಾಯಿಲ್ಲವಯ್ಯಾ ಅನಂತ ಅಪರಾಧವೆನ್ನಲ್ಲಿ ಇರಲಾಗಿ" ಎಂದವರು, ವೆಂಕಟೇಶ್ವರನನ್ನು "ದಾಸನ ಮಾಡಿಕೋ ಎನ್ನ ಸಾಸಿರನಾಮದ ವೆಂಕಟ ರಮಣ" ಎಂದು ಸೆರಗೊಡ್ಡಿ ಬೇಡುತ್ತಾರೆ. ಹರಿದಾಸರ ಸಂಯಮ, ಸಹನೆಗೆ ಮಿತಿ ಬೇಡವೆ ?

> ನಿನ್ನ ಭಕ್ತರೆಂದೆನಿಸಿದ ಜನರು ಭಂಗಪಡಲೀಬೇಕು (ಉಗಾಭೋಗ)
> ದಿನ ಪ್ರತಿದಿನ ಅನ್ನ ಉದಕ ವಸ್ತ್ರಗಳು ಕಾಣದೆ ಇರಬೇಕು
> ಬೆನ್ನಟ್ಟಿ ರೋಗಗಳು ಹತ್ತಿ ಇರಲಿಬೇಕು
> ತನ್ನವರ ಕೈಯಿಂದ ಛೀ ಅನಿಸಿಕೊಳ್ಳಬೇಕು
> ಪನ್ನಗಶಯನ ಶ್ರೀಪುರಂದರವಿಠಲಾ

ಇದಂ ದಾಸನ ಪರಿಯಾದರೆ ಅವನು ಬದುಕುವುದಾದರೂ ಹೇಗೆ? ಅಂದರೆ, ಏನೇ ಆಗಲಿ, ಅವಗಢ ಬರಲಿ, ಹರಿದಾಸಪಥ-ಹರಿಪಂಥ ಬಿಡಬಾರದೆಂಬ ದೃಢತ್ವ ರೂಢಿಸಿ-ರೂಪಿಸಿ ಕೊಳ್ಳಬೇಕೆಂಬುದೆ ದಾಸರ ಮತ. ಶ್ರೀಹರಿಯ ಒಂದು ಅವತಾರವೆ ಆದ ಶ್ರೀಕೃಷ್ಣನ ದರ್ಶನ, ಕೃಷ್ಣಮೂರುತಿ ಬಗ್ಗೆಯಂತೂ ಅವರು ಅನೇಕ ವಿಧದಲ್ಲಿ ಹಾಡಿದರೂ, ದಣಿಯರು.

> ಮೂರುತಿಯನೆ ನಿಲ್ಲಿಸೊ ಮಾಧವ ನಿನ್ನ
> ಎಳತುಳಸಿಯ ವನಮಾಲೆಯು ಕೊರಳೊಳು
> ಹೊಳೆವ ಪೀತಾಂಬರದುಡೆಯಲೊಪ್ಪುವ ನಿನ್ನ ॥
> ಮುತ್ತಿನಹಾರ ನವರತ್ನದುಂಗರ ಬೆರಳ
> ಮತ್ತೆ ಶ್ರೀಲಕುಮಿಯು ಉದರದಲೊಪ್ಪುವ ನಿನ್ನ ॥
> ಭಕ್ತರ ಕಾಮಧೇನು ಕಲ್ಪತರುವೆಂಬ
> ಭಕ್ತವತ್ಸಲ ಪುರಂದರವಿಠಲನೆ ನಿನ್ನ ॥

ಇಂಥ ಮೂರ್ತಿಯನ್ನು ಕಂಡ ನಂತರ "ಕೃಷ್ಣಮೂರ್ತಿ ಕಣ್ಣ ಮುಂದೆ ನಿಂತಿದಂತಿದೆ" ಎಂದು ಮತ್ತೆ ಭಾವಪರವಶರಾಗಿ ಹಾಡುತ್ತಾರೆ. ಹರಿದಾಸರಲ್ಲಿ ಇದು-ಈ ಒಂದು ಭಕ್ತಿಯ ಅವಸ್ಥೆ, ತುಮುಲ ಸಾಮಾನ್ಯ. "ಕಣ್ಣಾರೆ ಕಂಡೆನಚ್ಯುತನ, ಕಂಚಿ ಪುಣ್ಯಕೋಟಿ ಕರಿರಾಜ ವರದನ" ಎಂದು ಅನಂತರ ಹೊಗಳುವಲ್ಲಿ ಶ್ರೀಪುರಂದರರಿಗೆ ಅದೆಷ್ಟು

ಭಾವಾವೇಶ ಒಡಮೂಡಿತ್ತೊ. ಪುರಂದರದಾಸರ ಹಾಗೆ ಆತ್ಮಾನುಸಂಧಾನದ ವಿವಿಧ ಮಜಲು ಬೇರೆ ನಾವು ಯಾವ ದಾಸರಲ್ಲೂ ಎಳೆ ಎಳೆಯಾಗಿ ಕಾಣೆವು. ಹರಿದಾಸರಾಗಲು ಎಷ್ಟು ಸುಕೃತವೆಂದು ಅವರಿಗೆ ಗೌರವ, ಭಕ್ತಿ ಇದ್ದುವೊ ಅಷ್ಟೆ ಕಪಟಗಳನ್ನು ಕಂಡರೆ ಕೋಪ, ಇದನ್ನ ವ್ಯಾಸರಾಯರಲ್ಲೂ ಕಂಡಿದೇವೆ.

ದಾಸನೆಂತಾಗುವೆನು ದಧರೆಯೊಳಗೆ ನಾನು ।
ವಾಸುದೇವನಲಿ ಲೇಶ ಭಕುತಿಯ ಕಾಣೆ ॥ಪ॥

ಗೋಟನಾಮನ ಹೊಡೆದು ಗುಂಡುತಂಬಿಗೆ ಹಿಡಿದು ।
ಗೋಟಂಚು ಧೋತರ ಮಡಿಯನುಟ್ಟು ॥
ದಾಟುಗಾಲಿಡುತ ನಾಧರೆಯೊಳಗೆ ಬರವನ್ನ ।
ಬೂಟಕತನ ನೋಡಿ ಭ್ರಮಿಸದಿರಿ ಜನರೆ ॥

ಹರಿಸರ್ವೋತ್ತಮತ್ವ ಪ್ರಸಾರ ಮಾಡುವಲ್ಲಿ ಶ್ರೀಪುರಂದರದಾಸರು ವೀರ ವೈಷ್ಣವರಾಗುತ್ತಾ ಬಗೆ ಬಗೆಯಾಗಿ ತಿಳಿಸುತ್ತಾರೆ ಹರಿಯೆ ಸರ್ವೋತ್ಕೃಷ್ಟನೆಂದು :

ಹೊಡೀ ನಗಾರಿಮೇಲೆ ಕೈಯಾ ।
ಆನಂದ ಮದವೇರಿ ಢಡ ಢಡ ॥ಪ॥

ಮೃತಸಖನ ಪಾದ ಬಿಡದೆ ಭಜಿಪರಘ
ಬಿಡಿಸಿಕಾಯ್ವ ಜಗದೊಡೆಯ ಶ್ರೀಹರಿಯೆಂಬ ॥

ಹರಿಯೆ ಸರ್ವೋತ್ತಮ ಹರಿಯೇ ಪರದೈವತ ।
ಹರಿಯೆ ಸರ್ವಂ ವಿಷ್ಣುಮಯಂ ಜಗತು ॥ಪ॥

ಹರಿಯಲ್ಲದನ್ಯತ್ರ ದೈವಗಳವಂವೆಂದು
ಉರಗನ ಮುಡಿಯ ನಾರಾದರೆತ್ತಲಿ...

ವಿಧಾತ್ರ ದೇವತೆಗಳೂ ವಿಷ್ಣುವಿನ ಹಿಂದೆ ।
ಇದಕೆ ತಪ್ಪಿದರೆ ಫಣಿ ಫಣವ ಹಿಡಿವೆ ।
ಸಕಲ ತೀರ್ಥಗಳೆಲ್ಲ ಸಾಲಗ್ರಾಮದ ಹಿಂದೆ ।
ಪ್ರಕಟ ಗ್ರಂಥಗಳೆಲ್ಲ ಭಾರತದ ಹಿಂದೆ ।...
ಮತಗಳೆಲ್ಲವು ಮಧ್ವಮತದ ಸಾರದ ಹಿಂದೆ ।

ಹರಿಯ ಸ್ಮರಣೆ, ಕಥೆ, ಭಜನಗೋಷ್ಠಿ ಇರುವೆಡೆ ಎಲ್ಲ ಪುಣ್ಯತೀರ್ಥಗಳೂ ಮೂರ್ತೀಭವಿಸಿ ಬಂದು ಮಂಡಂಗಟ್ಟಿ ನಿಲ್ಲುವರಂತೆ ಇದು ಶ್ರೀಪುರಂದರರ ಭಕ್ತಿಪೂರ್ವಕ ನಂಬುಗೆ ಹಾಗೂ ಆ ಹರಿಯೆ ಎಲ್ಲ ಬಲ "ಸಕಲ ಗ್ರಹಬಲ ಸರಸಿಜಾಕ್ಷ" ನವರಿಗೆ :

ಎಲ್ಲಿ ಹರಿಕಥಾ ಪ್ರಸಂಗವೊ।
ಅಲ್ಲಿ ಗಂಗಾ–ಯಮುನೆ–ಗೋದಾ–ಸರಸ್ವತಿ–ಸಿಂಧು।
ಎಲ್ಲ ತೀರ್ಥಗಳು ಬಂದು ಎಣೆಯಾಗಿ ನಿಲ್ಲುವವು।
ವಲ್ಲಭ ಶ್ರೀಪುರಂದರವಿಠಲ ಮೆಚ್ಚುವನು ॥

ಜಯಜಯಾ ಹರಿಯೆಂಬುವುದೇ ಸುದಿನವು।
ಜಯ ಹರಿಯೆಂಬುವುದೇ ತಾರಾಬಲವು।
ಜಯ ಹರಿಯೆಂಬುವುದೇ ಚಂದ್ರಬಲವು।
ಜಯ ಹರಿಯೆಂಬುವುದೇ ವಿದ್ಯಾಬಲವು।
ಜಯ ಹರಿಯೆಂಬುವುದೇ ದೈವಬಲವು।
ಜಯ ಹರಿ ಪುರಂದರವಿಠಲನ ಬಲವಯ್ಯ ಸುಜನರಿಗೆ ॥

ಎಂದು ಶಂಸಿಸುತ್ತ, "ಹರಿ ಭಜನೆ ಮಾಡೋ ನಿರಂತರ। ಪರಗತಿಗಿದು ನಿರ್ಧಾರ ನೋಡೋ" ಎನ್ನುವ ಎಚ್ಚರದ ಮೆಚ್ಚಿನ ಮಾತನ್ನೂ ಆಡುತ್ತಾರೆ. ಹರಿದಾಸರೆಲ್ಲರ ಪಾಲಿಗೆ ಶ್ರೀಹರಿನಾಮ ಸ್ಮರಣೆ 'ಪಾವನ ಮಾಳ್ಪುದು' ಮಾತ್ರವಲ್ಲ 'ಭೂವಲಯದೊಳು ಈವುದಿಷ್ಟಾರ್ಥವ'. ಇಷ್ಟೇ ಅಲ್ಲ ಶ್ರೀನಿವಾಸನ ಶ್ರೀನಾಮ ಸುಧಾರಸ ಅವರಿಗೆ ಜೇನು ತುಪ್ಪದಂತೆ ರುಚಿ: ಅರದ ಪಾಕವದು

ಶ್ರೀನಿವಾಸನ ಶ್ರೀನಾಮ ಸುಧಾರಸ।
ಏನು ರುಚಿಯೊ ಕಾಣೆ ಜೇನುತುಪ್ಪದಂತೆ ॥1॥

ಸಕ್ಕರೆ ಬೆರಸಿದ ಚೊಕ್ಕ ಪಾನಕದಂತೆ
ಮುಕ್ಕು ಮಾಣಿಸುತಿದೆ ರಕ್ಕಸಾರಿಯ ಧ್ಯಾನ ॥2॥

ಕದಳಿ ಖರ್ಜೂರ ದ್ರಾಕ್ಷಿ ಇದಕೊ ಇಮ್ಮಿಗಿಲಾಗಿ
ಮುದಕೊಡುವುದು ಜಿಹ್ವೆಗೊದಗಿದ ತಕ್ಷಣ ॥3॥

ಕಾಸಿದ ಕೆನೆಹಾಲ ದೂಷಿಸುವಂತಿದೆ! ಏನು ರುಚಿಯೊ ಹರಿದಾಸರೆಲ್ಲರಿಗೆ–ಎಂದು ವಿವಿಧ ರೀತಿಯಲ್ಲಿ ಬಣ್ಣಿಸುತ್ತಾರೆ ಶ್ರೀವಾದಿರಾಜರು. ಹರಿಯ ಸ್ಮರಣೆಯ ಮಹತ್ವ ಎಷ್ಟು ವರಿಷ್ಠ ಮಟ್ಟದ ಭಕ್ತಿಯೊ ಹಾಗೆಯೆ 'ನಿರ್ವ್ಯಾಜ್ಯ ಪ್ರೇಮ', 'ಅಹೇತು ಪ್ರೇಮ' ವಿಲ್ಲದ ಭಕ್ತಿ ಇದ್ದರೆಷ್ಟು ಬಿಟ್ಟರೆಷ್ಟು? ತರ್ಕ, ಯಜ್ಞ, ಡಾಂಭಿಕ ಕೂಗಾಟ, ಬೂಟಾಟಿಕೆ, ಶ್ರೀಹರಿಗೆ ಪ್ರಿಯ ಅಲ್ಲ. ಅವನಿಗೆ ಬೇಕಾದ್ದು ಅಮಲ ಭಕ್ತಿ–ನಿರ್ಮಲ ಭಕ್ತಿ–ವಚನಕಾರರ 'ಭಕ್ತಿ ಪ್ರಿಯತೆ'ಯೂ ಧ್ವನಿಗೈದಿದೆ. "ಕೇಳನೋ ಹರಿ ತಾಳನೊ! ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ" ಎಂಬ ಸುವಿಖ್ಯಾತ ಕೃತಿಯಲ್ಲಿ ಶ್ರೀಪುರಂದರ ದಾಸರು ಸಾರುವಂತೆ,

ತಂಬೂರಿ ಮೊದಲಾದ ಅಖಿಳ ವಾದ್ಯಗಳಿದ್ದು ।
ಕೊಂಬು ಕೊಳಲು ಧ್ವನಿ ಸ್ವರಗಳಿದ್ದು ।
ತುಂಬುರು ನಾರದರ ಗಾನ ಕೇಳುವ ಹರಿ ।
ನಂಬಲಾರ ಈ ಡಂಭಕದ ಕೂಗಾಟ ॥1॥

ನಾನಾ ಬಗೆಯ ರಾಗ ಭಾವ ತಿಳಿದು ಸ್ವರ ।
ಜ್ಞಾನ ಮನೋಧರ್ಮ ಜಾತಿಯಿದ್ದು ॥
ದಾನವಾರಿಯ ದಿವ್ಯನಾಮರಹಿತವಾದ ।
ಹೀನ ಸಂಗೀತ ಸಾಹಿತ್ಯಕ್ಕೆ ಮನವಿತ್ತು ॥2॥

ಅಡಿಗಡಿಗಾನಂದ ಬಾಷ್ಪಪುಳಕದಿಂದ ।
ನಡೆನುಡಿಗೆ ಶ್ರೀಹರಿಯೆನ್ನುತ ॥
ದೃಢಭಕ್ತರನು ಕೂಡಿ ಹರಿ ಕೀರ್ತನೆ ಪಾಡಿ ।
ಕಡೆಗೆ ಪುರಂದರವಿಠಲನೆಂದರೆ ಕೆಳ್ಳ ॥3॥

ಎಂಬಲ್ಲಿ ಭಕ್ತಿಯ ಆರ್ತತೆ ಇದ್ದರೆ, ಹಂಬಲವಿದ್ದರೆ ಮಾತ್ರ ವಿಠ್ಠಲನೊಲಿವನೆಂಬುದೂ ತಿಳಿಯಬೇಕಾದ್ದೆ. ಇದು "ನಾದಪ್ರಿಯನೂ ಅಲ್ಲ ವೇದಪ್ರಿಯನೂ ಅಲ್ಲ ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವಾ" ಎಂಬ ವಚನ ಸಾಲನ್ನು ನೆನಪಿಸುತ್ತದೆ. ಇದಲ್ಲದೆ ಹರಿದಾಸರು ಜನತೆಗೆ ಜಾಗೃತಿಗೊಳಿಸುವಂತೆ ಕೇಳುವುದೂ ಇದೇ : "ನಾಲಿಗ್ಗೆ ಮುರಿದಿತೊ ನೆಗ್ಗಿಲ ಕೊನೆ ಮುಳ್ಳು। ಬಾಲಕತನದಲ್ಲಿ ಭೂತಹಿಡಿಯಿತೊ" ಏನಾಯ್ತು ನಿಮಗೆ ? ಎಂದು ಕೆಚ್ಚಿನಿಂದ ಕೇಳುತ್ತಾರೆ :

ಅಂದೆ ನಿರ್ಣಯಿಸಿದರು ಕಾಣೊ। ಇಂದಿರಾಪತಿ ಪರದೈವತವೆಂಬುದ ॥ಪ॥

......ವೇದೈಶ್ಚ ಸರ್ವೈರಹಮೇವ ವೇದ್ಯ ।
ವೇದ ವಿಧಾಯಕ ನಾಮದವನು ।
... ... ... ... ...
ಬಿಡು ಪಾಷಂಡಮತದ ದುರ್ಬುದ್ಧಿಯ ।
ಬಿಡದೆ ಮಾಡು ವೈಷ್ಣವ ಸಂಗವ ॥......
ಹರಿಯಧಿಕ ಹರನಧಿಕ ಎಂದುಹೋರಾಡದಿರಿ ।
ಹರಿಹರರ ಭಕ್ತರೇ ಸಾಕ್ಷಿ ಲೋಕದೊಳು ॥ಪ॥

ಎಂಬ ಹೋಲಿಕೆ ಎಂದು ಹೇಳುವುದರ ಜತೆ ಅದ್ವೈತ ಖಂಡನವೂ ನಡೆದಿದೆ :

ಎಲ್ಲಾ ಒಂದೇ ಎಂಬವರ ಎರಡು ದಾಡಿಯಲ್ಲಿದ್ದ ।
ಹಲ್ಲುದುರೆ ಬಡಿಯಬೇಕು ಹರಿಭಕ್ತರಾದವರು ।
ಸಲ್ಲದು ಸಲ್ಲದು ಈ ಮಾತು ಇದಕೆ ಸಂಶಯ ಬೇಡ ॥

ಹರಿಸರ್ವೋತ್ತಮತೆಯ ಜತೆಗೇ ಮಧ್ವಮತ ನಿಷ್ಠೆ, ಶ್ರೀಪುರಂದರದಾಸರಲ್ಲಿ ಮಿಗಿಲಾದುದು. ಅವರು ತಮ್ಮ ಗುರುಗಳ (ವ್ಯಾಸರಾಯರ) ಹಾದಿಯಲ್ಲಿ ಸಾಗಿದಂತಿದೆ

ಸತ್ಯ ಜಗತಿದು ಪಂಚಭೇದವು, ನಿತ್ಯ ಶ್ರೀಗೋವಿಂದನ ।
ಕೃತ್ಯ ತಿಳಿದು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ ॥ಪ॥
ಜೀವ ಈಶಗೆ ಭೇದ ಸರ್ವತ್ರ ಜೀವಜೀವಕೆ ಭೇದವು
ಜೀವ ಜಡರೊಳು ಭೇದ ಜಡ ಪರಮಾತ್ಮಗೆ ॥

ಇದರೊಂದಿಗೆ ಮಧ್ವಮತದ ಅನೇಕ ಸೈದ್ಧಾಂತಿಕ ಪ್ರಮೇಯಗಳನ್ನು ಶ್ರೀಸಾಮಾನ್ಯರಿಗೂ ಅರ್ಥವಾಗುವಂತೆ ಲಲಿತ ಶೈಲಿಯಲ್ಲಿ ಹೇಳಿದ್ದಾರೆ. ಶ್ರೀಹರಿಸರ್ವೋತ್ತಮನೆಂದು ಸಾರುವಲ್ಲಿ ಅವರ ಪ್ರಸಿದ್ಧ ಕೃತಿ "ಈ ಪರಿಯ ಸೊಬಗಾವ ದೇವರೊಳು ಕಾಣೆ। ಗೋಪೀಜನಪ್ರಿಯ ಗೋಪಾಲಗಲ್ಲದೆ" ಉತ್ತಮ ನಿದರ್ಶನ. ಇದಲ್ಲದೆ ಹರಿದಾಸರಿಗೆ ಜಾಗೃತಿ, ಹರಿಭಕುತಿ ಬಗ್ಗೆ ಶ್ರೀಪುರಂದರದಾಸರ ಕಳಕಳಿ ತುಂಬ ।

ಹರಿಭಕುತಿ ಸುಖವು ಅನುಭವಿಗಲ್ಲದೆ ಮಿಕ್ಕ ।
ನರ ಕುರಿಗಳದರ ಸಖ್ಯವ ಬಲ್ಲರೆ......

ಎಂದು ಹೇಳಿ ಹರಿಭಕ್ತಿಗೆ ಭಕ್ತಿ ಮುಖ್ಯವೆ ವಿನಾ ವಯಸ್ಸಲ್ಲ ಎಂದೂ ತಿಳಿಸುತ್ತಾರೆ. ತರಳ ಪ್ರಹ್ಲಾದ, ಧ್ರುವ, ಮುಂತಾದ ಭಕ್ತರ ಉದಾಹರಣೆ ನೀಡುತ್ತಾರೆ. "ತಾಸು ಬಾರಿಸುತಿದೆ ಕೇಳಿ ಹರಿದಾಸರೆಲ್ಲ।" ಎಂಬುದು ಜಾಗೃತಿ ಭಾವದ ಹಾಡು.

ಹಾಸು ಮಂಚ ಸುಪ್ಪತ್ತಿಗೆಯಲ್ಲಿ, ಹಗಲು ಇರುಳು
ಹೇಸರಗತ್ತೆಯಂತೆ ಹೊರಳಿ-ಸ್ತ್ರೀಯರೊಡಗೂಡಿ......
ಬೇಸರದೆ ನಿತ್ಯ ಉರುಳಿ ॥........."

ಎಂದು ಹೇಳುತ್ತ

ಸಿಂಗಾರವಾದ ದೇಹವೆಲ್ಲ । ಅಂಗವಳಿದು ಮುರಿದುಬೀಳೆ ।
ಅಂಗಳಿಗಾತ್ಮ ಸೇರಿದಾಗ । ರಂಗನ ಧ್ಯಾನವು ದೊರೆಯುದೊ

ಎಂದು ಎಚ್ಚರಿಸುತ್ತಾರೆ. ಮಧ್ವಾಚಾರ್ಯರ ತಾರತಮ್ಯ ವಾದಕ್ಕೆ ನಿದರ್ಶನ ಪುರಂದರದಾಸರ ಈ ಒಂದು ಉಗಾಭೋಗ ;

ನಿತ್ಯ ಪತಿಭಾವ ಶ್ರೀ ಲಕುಮಿಪತಿಗಯ್ಯ ।
ನಿತ್ಯ ಪುತ್ರಭಾವ ಬ್ರಹ್ಮ ಪ್ರಾಣರಿಗೆ ।
ನಿತ್ಯ ಪೌತ್ರಭಾವ ಗರುಡ, ಶೇಷ, ರುದ್ರರಿಗೆ ।

ನಿತ್ಯ ಭೃತ್ಯಭಾವ ಇಂದ್ರ, ಕಾಮ, ಆತ್ಮಜೀವರಿಗೆ ।
ಇಂತೆಂದ ಪುರಂದರವಿಠಲಾ

ಇದರಂತೆಯೇ ಪಂಚಭೇದ ತತ್ತ್ವ-ಮಧ್ವ ಸಿದ್ಧಾಂತದ ಮುಖ್ಯ ಪ್ರಮೇಯದ ಬಗ್ಗೆ ಶ್ರೀ ಪುರಂದರದಾಸರ ಇನ್ನೊಂದು ಉಗಾಭೋಗದ ರಚನೆ ಇಂತಿದೆ ।

ಜೀವಜೀವಕೆ ಭೇದ ಜಡಜಡಕೆ ಭೇದ ।
ಜೀವ ಜಡ ಪರಮಾತ್ಮನಿಗೆ ಭೇದ ।
ಜೀವಾಜೀವ ಮುಕ್ತಾಮುಕ್ತರ ಭೇದ ।
ಸಂಸಾರದೊಳು ಭೇದ ।
ಮುಕ್ತರೊಡೆಯ ಹರಿ ಭಕ್ತರಾಧೀನ ।
ಜಗತ್ಕರ್ತು ನೀ ಸಲಹಯ್ಯ ಪುರಂದರವಿಠಲಾ..."

ಆದರಂತೆಯೇ ಮಧ್ವನಿಷ್ಠರ ಮಂಗಲವನ್ನೆ ಅವರು ಶ್ರೀಹರಿಗೆ ಹಾಡಿರುವುದು ।

ಕಲಿಯುಗದಿ ಶಂಕರನ ದುರ್ಮತವ ತರಿದವಗೆ
ಖಳ ಬೌದ್ಧ ಚಾರ್ವಾಕ ಮತವ ಗೆಲಿದವಗೆ ॥
ಒಲಿದು ಸಚ್ಛಾಸ್ತ್ರವನು ಸಾಧುಗಳಿಗೊರೆದವಗೆ
ಸುಲಭ ಪುರಂದರವಿಠಲನ ದಾಸಗೆ ॥

ಮಧ್ವಮತದಲ್ಲಿ ವಾಯುದೇವರಿಗೇ ಪ್ರಥಮ ಸ್ಥಾನ. ಪುರಂದರದಾಸರ ಈ ಸಾಲು ಗಮನಾರ್ಹ ।

ಕರಮುಗಿದ ಮುಖ್ಯಪ್ರಾಣ ।
ಜೀವೇಶ್ವರೈಕ್ಯವು ಜಗತು ಮಿಥ್ಯವೆಂದು
ಈ ವಿಧ ಪೇಳುವ ಮಾಯಿಗಳನಳಿಯೆಂದು ॥1॥

ಇಲ್ಲಿ ಮಾತ್ರ ಭೇದ ಅಲ್ಲಿ ಒಂದೇಯೆಂಬ
ಖುಲ್ಲಜನರನು ಪಿಡಿದು ಹಲ್ಲಗಳ ಮುರಿಯೆಂದು ॥2॥
ತಾರತಮ್ಯ ಪಂಚಭೇದ ಸತ್ಯವೆಂದು
ಮಾರುತಮತ ಹೊಂದಿದವರನು ಪೊರೆಯೆಂದು ॥3॥

ಮಧ್ವಾಚಾರ್ಯರ "ತತ್ತ್ವವಾದ" ಶ್ರೀ ಪುರಂದರದಾಸರಿಗೂ ಪ್ರಿಯವೆನಿಸಿದೆ ।

ಶ್ರೀ ತತ್ತ್ವವಾದ ಮತವಾರ್ಧಿ ಶುಭಚಂದ್ರಮನ ।
ಭೂತಲದೊಳಪ್ರತಿಮ ಶ್ರೀಯತಿವರನ
ಪ್ರೀತಿಯಿಂ ಭಜಿಸೆ ಇಷ್ಟಾರ್ಥಗಳ ಸಲಿಸುವ ವಾತಜಾತನ ಸ್ಮರಿಸಿರೈ ॥

ಈ ತೆರನಾದ ನೇರ ಧಾಳಿ, ಪರಮತಖಂಡನ, ಮಧ್ವನಿಷ್ಠೆ ಪುರಂದರದಾಸರಲ್ಲಿ ಸಾಮಾನ್ಯ, ಶ್ರೀಪೂರ್ಣಪ್ರಜ್ಞರನ್ನು ಕುರಿತ ನವರತ್ನಮಾಲಿಕಾ ಸ್ತುತಿಯಲ್ಲಿ ಅವರು ನುಡಿಯುವುದೇ ಹೀಗೆ:

> ಕಲಿಯುಗವು ಪ್ರಾಪ್ತವಾಗಲು ಮಧ್ವನಾಮದಿ ।
> ಇಳೆಯೊಳವತರಿಸಿ ಸೋಹಂ ಎಂಬ ಶಂಕರನ
> ಹುಲುಮತಂಗಳ ಜರಿದು ಮಾಯಿಗಳ ಗೆಲಿದು ಮೋ- ।
> ಹನಶಾಸ್ತ್ರಬಲೆಯನರಿದು ॥
>
> ಮಲೆತ ದುರುಳನವೈದ ನುಂಗಿ ಜೀರ್ಣಿಸಿಕೊಂಡು
> ಪ್ರಲಯಭೈರವನೆಂಬ ಬಿರುದ ಅವನಿಯ ಮೇಲೆ
> ನೆಲೆಗೊಳಿಸಿ ವಿಷ್ಣು ಪರದೈವವೆಂದರುಹಿದಾ
> ಅಲವಬೋಧರ ಭಜಿಸಿರೈ ॥

ಎಂದು, ಮುಂದೆ ವಾಯುದೇವರು ಬ್ರಹ್ಮಪಟ್ಟಕ್ಕೆ ಬರುವವರೆಂದೂ ಸಾರಿದ್ದಾರೆ. ''ಪರಮ ವೈಷ್ಣವರಿಗೆಣೆಯಿಲ್ಲ ಲೋಕದೊಳೆಂದು'' ಕರೆಯುವಂತೆಯೆ ಮಧ್ವಮತವನ್ನು 'ಹನುಮಂನಮತ'ವೆಂದೂ ಕರೆವ ವಾಡಿಕೆಯಿದೆ. ಇದಕ್ಕೆ ಕಾರಣ ಹನುಮ-ಭೀಮ-ಮಧ್ವ ಅವತಾರತ್ರಯ ಮಾಧ್ವರಿಗೆ, ವೈಷ್ಣವರಿಗೆ ಹೆಚ್ಚು ಪೂಜ್ಯ. ''ಹನುಮನ ಮತವೆ ಹರಿಯ ಮತವು । ಹರಿಯ ಮತವೇ ಹನುಮನ ಮತವು ॥ ಹನುಮನು ಒಲಿದರೆ ಹರಿ ತಾನೊಲಿವನು । ಹನುಮನು ಮುನಿದರೆ ಹರಿ ಮುನಿವ ॥'' ಎಂಬುದೇ ಪುರಂದರ ದಾಸರ ನಿಷ್ಠವಚನ. ಇದು ಎಲ್ಲ ಅನುಭವ ಮಾರ್ಗಗಳಲ್ಲಿಯೂ ಉಂಟು. ಸಂತರಿಗೆ, ಭಕ್ತರಿಗೆ ಹರಿಯಷ್ಟು ಮಹತ್ವದವನೂ ಗುರುವೂ ಅನಿತೆ ಪೂಜ್ಯ. ಕೆಲವು ಭಕ್ತಿಪಂಥ ಗಳಲ್ಲಿಯಂತೂ ಗುರುವೇ ಪರಮಾತ್ಮ ಅಥವಾ ದೇವರಿಗಿಂತ ಗುರುವೇ ಶ್ರೇಷ್ಠನೆಂದೂ ನಡೆದುಕೊಳ್ಳುತ್ತಾರೆ. ಗುರುವೂ ಎಂಥವನು ? ತಾನು ಪ್ರತ್ಯಕ್ಷ ಅನುಭವ ಪಡೆದು, ಶಿಷ್ಯನ ಅಜ್ಞಾನದ ಕತ್ತಲನ್ನು ಕಳೆಯುವಂತಹನು. ಆದ್ದರಿಂದ ಅವನೆ ಶಿಷ್ಯನಿಗೆ ಮಾರ್ಗ ದರ್ಶಿ ಆಗಬಲ್ಲ. ಇಂಥ ಗುರು ಸದ್ಗುಣವಂತನೂ ಆಗಿರಬೇಕೆಂದು ಮತ್ತೆ ಹೇಳುವ ಆಗತ್ಯವಿಲ್ಲ. ಹರಿದಾಸರಿಗೆ ಗುರುದೀಕ್ಷೆ ಮುಖ್ಯ. ಗುರುಗಳಿಂದ ಪ್ರತ್ಯಕ್ಷ ದೀಕ್ಷೆ ಪಡೆದವರೇ ಹೆಚ್ಚು. ಎಲ್ಲೊ ಅಲ್ಲಲ್ಲಿ ಗುರುವು ಸ್ವಪ್ನದಲ್ಲಿ ಕಾಣಿಸಿಕೊಂಡೊ ಅಥವಾ ಧ್ಯಾನಾವಸ್ಥೆಯಲ್ಲಿ ತೋರಿಯೊ ಶಿಷ್ಯನನ್ನು ಹರಿದಾಸ ದೀಕ್ಷೆಯಿತ್ತು ದಾಸನಾಗಿಸು ವುದುಂಟು. (ಉದಾ: ವಿಜಯದಾಸರಿಗೆ ಶ್ರೀಪುರಂದರದಾಸರಿಂದ ದೊರೆತ ದಾಸದೀಕ್ಷೆ). ''ಮಧ್ವ ಮುನಿಯೆ ನಮ್ಮ ಗುರು ಮಧ್ವ ಮುನಿಯೆ'' ಎಂದು ಹಾಡುವ ಶ್ರೀಪುರಂದರ ದಾಸರು ಮಧ್ವಾಚಾರ್ಯರ-ಹನುಮ, ಭೀಮ, ಮಧ್ವ ಅವತಾರತ್ರಯಂಗಳನ್ನು ಹಾಡಿ ಹೊಗಳುತ್ತಾರೆ. ಹಾಗೆಯೆ ''ಪ್ರಾಕೃತ ಭಾಷೆಯಲ್ಲಿ ನೀಕೃತಿಪೇಳೆ : ಅಪ್ರಾಕೃತ ಹರಿ ಯಿಂದ ಸ್ವೀಕೃತನಾದ್ಯೋ'' ''ಪ್ರಾಕೃತ ಅಂದರೆ ಕನ್ನಡ-ಆಡುಭಾಷೆ) ಎಂದು ಪ್ರತಿ

ವಾಸರದಲಿ "ಶ್ರೀನಿವಾಸನ್ನ ತೋರೊ ದಯಾಸಾಂದ್ರ, ದಾಸರಾಯಾ ಪುರಂದರದಾಸ ರಾಯಾ" ಎಂದು ಗುರು ಶ್ರೀ ವ್ಯಾಸರಾಯರೇ ಶಿಷ್ಯನ ಮಹತಿಯನ್ನು ಗುರುತಿಸಿ ಪ್ರಶಂಸಿಸಿರುವುದೂ ಇದೆ. "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ। ಪರಿಪರಿ ಶಾಸ್ತ್ರವನೋದಿದರೇನು ವ್ಯರ್ಥವಾಯ್ತು ಯುಕುತಿ" ಎನ್ನುವ ಪುರಂದರದಾಸರು ಗುರುವೇ ಮುಕ್ತಿ-ಭಕ್ತಿಮಾರ್ಗ ಸಾಧಕರೆಂದು ತಿಳಿಹುವ ಸಾಲು ಸರಳ, ಮನೋಜ್ಞ:

ಆಗಮಶಾಸ್ತ್ರವನೋದಿದರೇನು ಮೂ।
ರಾರು ಪುರಾಣವ ಮುಗಿಸಿದರೇನು॥

ಸಾರಿಸಜ್ಜನರ ಸಂಗವ ಮಾಡದೆ।
ಧೀರನೆಂದು ತಾ ತಿರುಗಿದರೇನು ॥ 1 ॥

ಕೊರಳೊಳು ಮಾಲೆಯ ಧರಿಸಿದರೇನು। ಬೆರಳೊಳು ಜಪಮಣಿ ತಿರುವಿದರೇನು।
ಮರಳಿ ಮರಳಿ ತಾ ಹೊರಳಿ ಬೂದಿಯೊಳು।
ಮರುಳನಂದದಿ ತಿರುಗಿದರೇನು ॥ 2 ॥

ಇಂಥ ಗುರುವಿನ ಉಪದೇಶ, ಹರಿದಾಸರಿಗೆ, ವೈಷ್ಣವ ಧರ್ಮದ ಅನುಯಾಯಿಗೆ ಆತ್ಯಗತ್ಯ. ಈ ಬಗ್ಗೆ ನಿಡಿದಾದ ಸಂಕಾದಿಯನ್ನು ರಚಿಸಿರುವ ಶ್ರೀಪುರಂದರದಾಸರು ತಿಳಿಸುವ ಸಾಲು, "ಗುರು" ಸ್ಥಾನ ಎಂದೆಂದಿಗೂ ಮಹಾನೀಯ ಎಂಬುದನ್ನು ಸ್ಪಷ್ಟ ಪಡಿಸುತ್ತಾರೆ ಹಾಗೂ ಅದು ಇಂದೂ ಈ ಹೊತ್ತೂ ಚಲಾವಣೆಯಲ್ಲಿ ನಿಲ್ಲುತ್ತದೆ।

"ಗುರು ಉಪದೇಶವಿಲ್ಲದ ಜ್ಞಾನ।
ಗುರು ಉಪದೇಶವಿಲ್ಲದ ಯೋಗ।
ಗುರು ಉಪದೇಶವಿಲ್ಲದ ಕ್ರಿಯೆಗಳು।
ಉರಗನ ಉಪವಾಸದಂತೆ ಕಾಣಿರೊ
ಗುರು ವ್ಯಾಸರಾಯರ ಕರುಣದಿಂದೆನಗೆ
ವರಮಹಾಮಂತ್ರಗಳ ಉಪದೇಶಿಸಿದರು
ಪುರಂದರವಿಠಲನ ಪರನೆಂದರುಹಿ
ದುರಿತ ಭಯವನೆಲ್ಲ ಪರಿಹರಿಸಿದರಾಗಿ ॥

ಗುರುಕರುಣವಾಹೋದು ಪರಮದುರ್ಲಭವಯ್ಯ
ಪರಿಪರಿ ವ್ರತಗಳಾಚರಿಸಿ ಫಲವೇನು
ಗುರುಕರುಣ ಪೊಂದಿಲ್ಲದೆ ಗತಿಗೆ ಬೇರುಂಟೆ......॥

ಪುರಂದರದಾಸರ ನಂತರ ಬಂದ ದಾಸಕೂಟದ ಪ್ರಮುಖರಲ್ಲೊಬ್ಬರಾದ ಶ್ರೀ ವಿಜಯ ದಾಸರೂ ತಮ್ಮ ದೀಕ್ಷಾ ಗುರುವಿನ ಹಾದಿಯಲ್ಲಿ ಸಾಗುತ್ತಾರೆ : ಸಾದರದಿ ಗುರುಕರುಣ ತಾ ಪಡೆದ ಬಳಿಕ...

ಕಂಡ ಕಂಡದ್ದೆಲ್ಲ ಕಮಲನಾಭನ ಮೂರ್ತಿ
ಉಂಡು ಉಟ್ಟದ್ದೆಲ್ಲ ವಿಷ್ಣುಪೂಜೆ
ಕಂಡ ಕಂಡದ ವಾರ್ತೆ ಪಾರಿಜಾಕ್ಷನ ಕೀರ್ತಿ
ಹಿಂದು ಮಾತುಗಳೆಲ್ಲ ಹರಿಯನಾಮ......

"ಯದೃಚ್ಛಾಲಾಭವೇ ಸುಖವು ಎನ್ನ
ಮಧ್ವಾಂತರ್ಗತ ಶ್ರೀ ವಿಜಯವಿಠ್ಠಲರೇಯ
ಹೃದ್ಗತಾರ್ಥವ ತಿಳಿದು ಒಪ್ಪಿಕೊಳದೆ...... ಎಂದು ಸಾರುತ್ತಾರೆ.

ವಿಜಯದಾಸರ ಒಂದು ಸುಳಾದಿ ಹರಿಸರ್ವೋತ್ತಮತ್ವ, ಮಧ್ವನಿಷ್ಠೆ, ಹರಿದಾಸರ ಮಹಿಮೆ ಎಲ್ಲವನ್ನೂ ಒಳಗೊಂಡಿದೆ. ಇದರ ಕೆಲವು ಸಾಲು ತಿಳಿಸುವುದು ಈ ದಿಸೆಯಲ್ಲಿ ಸೂಕ್ತವೆನ್ನಿಸುತ್ತದೆ :

"ಮುಪ್ಪು ಇಲ್ಲದ ಅಪ್ಪ ತಿರುಪತಿ ತಿಮ್ಮಪ್ಪ
ಮುಪ್ಪು ಇಲ್ಲದ ತಾಯಿ ಅಲಮೇಲು ಮಂಗಾಯಿ
ಮುಪ್ಪು ಇಲ್ಲದ ಗುರು ಶ್ರೀಮದಾಚಾರ್ಯರು
ಮುಪ್ಪು ಇಲ್ಲದ ಬಾಂಧವರು ಹರಿಭಕ್ತರು
ಮುಪ್ಪು ಇಲ್ಲದ ಧನ ಹರಿನಾಮ ಸಾಧನೆ
ಮುಪ್ಪು ಇಲ್ಲದ ಸದನ ದಿವ್ಯಾನಂತಾಸನ
ಮುಪ್ಪೆ ಮುಪ್ಪೆ ಇಲ್ಲ ಎಮ್ಮ ಸೌಭಾಗ್ಯಕ್ಕೆ
ಮುಪ್ಪುರದೊಳಗೆ ಹರಿದಾಸರಿಗೆ ಎಣೆಯೆ
ಮುಪ್ಪುರವ ಗೆಲಿದ ಅನಘ ವಿಜಯವಿಠ್ಠಲರೇಯ
ಅಪ್ಪ ಭಕ್ತರ ಒಡನಾಡುವದು ತಪ್ಪ

ಇಲ್ಲಿ ಹರಿಯ ಅಳಿಯದ, ಮಾಸದ ದಿವ ಸೌಂದರ್ಯ, ಗುರುಗಳ ಭೀಮಬಲ, ಹರಿಭಕ್ತರ ತನು-ಮನ ಜಾಗೃತಾವಸ್ಥೆ, ಹರಿನಾಮ ಸಾಧನ ಸಂಪತ್ತಿಗೆಣೆಯಾದದ್ದು ಯಾವುದೆಂಬ ವಿಶ್ಲೇಷಣೆ, ಹರಿದಾಸರಿಗೆ ಮುಪ್ಪುರದೊಳಗೆ ಎಣೆಯಿದೆಯೆ ಎಂಬ ದಾಸವರ್ಯರ ಕೇಳ್ಕೆ ಆಡುನುಡಿಯ ಬಳಕೆ, ಎಲ್ಲವೂ ಸುಳಾದಿಯ ಈ ಭಾಗವನ್ನೆ ಪೂರ್ಣವೆಂದೆನ್ನಿಸುವಂತಿವೆ. ಇದೇ ಒಂದು ಭಾವಗೀತೆಯಂತಿದೆ.

ಹರಿಸರ್ವೋತ್ತಮತ್ವವನ್ನು ಡಿಂಡಿಮದಂತೆ ಸಾರಿದವರು ವಾದಿರಾಜರು. ಅವರ ಮಧ್ವನಿಷ್ಠೆಯೂ ಅಷ್ಟೇ ದೃಢ ಅಚಲ. ಪ್ರತಿಪಾದನೆಯೂ ಹಾಗೆಯೆ ಅಲ್ಲಿ ಅಳುಕು, ಶಂಕೆ, ಕೊಂಡಿಗೆ ಅವಕಾಶವೆ ಇಲ್ಲ. ಎಲ್ಲಿ ಸಾಧಾರ ಸಾಮರ್ಥ್ಯ ವಾಗ್ವಿಲಾಸದ ಪಟುತ್ವ ತುಂಬಿದೆಯೊ ಅಲ್ಲಿ ಜಾಳಾದ ಮಾತಿಗೆಡೆಯೆ ಇರದು. ಇದೇ ವಾದಿರಾಜರ ವ್ಯಕ್ತಿತ್ವ.

ವೈಷ್ಣವ ಧರ್ಮ ಪ್ರತಿಪಾದಿಸುವ ವಾದಿರಾಜರು ಬದುಕಿನಲ್ಲಿ ಬರುವ ನಾನಾ ವಿಧದ ಪ್ರಲೋಭನೆ ಕುರಿತು ಪ್ರಸ್ತಾಪಿಸಿದ್ದಾರೆ. ಅದೆಲ್ಲದರ ನಡುವೆಯೂ, ವಿಷಯಾಸಕ್ತಿಯಿರದೆ, ವಿವೇಕದಿಂದ ಬದುಕನ್ನು ಸಂಪೂರ್ಣ ಆಗಿಸುವ ಪರಿಯನ್ನೂ ತಿಳಿಸಿ ಕೊಟ್ಟಿದ್ದಾರೆ ಅವರ ಅನೇಕ ಕೃತಿಗಳಲ್ಲಿ

ಓದಿದೆನು ವಿದ್ಯೆಗಳ ಓದನದ ಬಯಕೆಯಲಿ
ವೇದಶಾಸ್ತ್ರಗಳನ್ನು ಪಠಿಸಿ ನಟಿಸಿ
ಕಾದುವೆನು ತರ್ಕವ್ಯಾಕರಣಾದಿ ಬಲದಿಂದ
ಬೀದಿ ಬೀದಿಯೊಳು ಚರಿಸಿ ಆರಿಸಿ
ಮಾಧವನ ಸ್ಮರಿಸದಲೆ ಪರರ ಅನ್ನವನುಂಡು
ಶೋಧಿಸದೆ ಪುಣ್ಯಪಾಪಲೇಪ
ಕ್ರೋಧದಿಂದಲಿ ಇನಿತು ಕುಧರ್ಮದಲಿ ಯಮನವರ
ಬಾಧೆಗೆ ಗುರಿಯಾಗಿ ಸದ್ಧರ್ಮವನು ಮರೆದೆ

ಈ ಸಾಲುಗಳಲ್ಲಿ ಪಂಡಿತನೊಬ್ಬ ತನ್ನ ಶುಷ್ಕ ಪಾಂಡಿತ್ಯ ಮೆರೆಯುವಲ್ಲಿ, ಕೆಲವಾರು ಅನುಸರಣೀಯ ನೇಮ ನಿಯಮ ಬಿಟ್ಟು ಪಾಪಕರ್ಮದಲ್ಲಿ ಗಳಿಸಿದವರ ಮನೆಯೂಟ ಮಾಡಿ. (ಅನ್ನದ ಜತೆ ಅನ್ನವೀಯುವವನ ಕರ್ಮಲೇಪವೂ ಬರುತ್ತದೆಂಬುದು ಯೌಗಿಕ ಶಾಸ್ತ್ರ ಮತ. ಅದರಿಂದಲೆ ಹಿಂದೆ ಬಹಳ ಜನರು ಪರಾನ್ನ ನೇಮವಿರಿಸಿಕೊಂಡರು.)

ಕೆಲಹೊತ್ತು ಚದುರಂಗ ಪಗಡೆ ಆಟಗಳಿಂದ। ಕೆಲ ಹೊತ್ತು ಹಸಿವೆ ನಿದ್ರೆಗಳಿಂದಲಿ ॥
ಕೆಲಹೊತ್ತು ಕಾಕ ಪ್ರೋಕರ ಕಥೆಗಳಿಂದ । ಕೆಲಹೊತ್ತು ಪರವಾರ್ತೆ ಪರನಿಂದೆಗಳಿಂದ ॥
ಕಾಲವು ಕಡೆಯಾಗೆ ಹರಿ ನಿಮ್ಮನರ್ಚಿಸೆ । ವೇಳೆಯಿಲ್ಲದೆ ಹೋಯ್ತು ಬಂಜೆಯಾಗಿ ॥

ಎಂಬಲ್ಲಿ ಕಡೆಯ ಸಾಲಿನ ಪದಗಳೂ ಧ್ವನ್ಯಾತ್ಮಕವಾಗಿವೆ. ಶ್ರೀ ವೆಂಕಟೇಶದರ್ಶನ ಸುಳಾದಿ, ಕೃಷ್ಣನ ಸುಂದರ ಮೂರ್ತಿಯ ಬಣ್ಣನೆ, ಶ್ರೀ ಹಯವದನನ ಸ್ತುತಿ, ಎಲ್ಲದರಲ್ಲೂ ವೈಷ್ಣವ ಧರ್ಮ ತಾನೆ ತಾನಾಗಿದೆ. "ಜಗವನೆತ್ತಿದವನ ಮಗುವೆಂದೆತ್ತುವಳಂತೆ" ಎಂಬ ಯಶೋದೆಯ-ಅಂತಃಕರಣ, ವಾತ್ಸಲ್ಯ, ವಾದಿರಾಜರು ತಮ್ಮ ಧ್ಯೇಯವಾದ ಹರಿಪಾರಮ್ಯವನ್ನು ಸಾಧಾರವಾಗಿ ಸಮರ್ಥಿಸುತ್ತಾರೆ. ಅವರ ಅನೇಕ ಕೃತಿಗಳಲ್ಲಿ ಪರಿದಾಸ್ಯ ಭಾವವೂ ಅವರ ಪಾಂಡಿತ್ಯಕ್ಕೆ ವಿಶೇಷ ಕಳೆ ನೀಡುತ್ತವೆ. ತಾವು ಶ್ರೀಹರಿಯ

ಸೇವಕನೆಂದು ಅರ್ಪಿಸಿಕೊಳ್ಳುತ್ತಾರೆ. "ಸೇವಕನೆಲೊ ನಾನು ನಿನ್ನಯ ಪಾದ ಸೇವೆ ನೀಡೆಲೊ ನೀನು"- ಅವರ ಅನೇಕ ಕೃತಿಗಳು ಅವರ ಕವಿ ಹೃದಯವನ್ನೂ ತೆರೆದು ತೋರುತ್ತವೆ :

ಅರಳಿದ ಕೆಂದಾವರೆಯ ಇರವ ಧಿಕ್ಕರಿಸುವ
ಗಿರಿಯ ತಿಮ್ಮರಾಯನ ಚರಣಗಳ ಕಂಡೆ ನಾ
ಅರುಣ ತಳದಲ್ಲಿಪ್ಪ ಅಂಕುಶ ಧ್ವಜ ವಜ್ರಾದಿ
ಸುರಚಿರರೇಖೆಗಳ ಸೊಬಗನು ಕಂಡೆ ನಾ......
ಗುರುಭಕುತಿಯಿರಬೇಕು ಹಿರಿಯರ ಕರುಣವು ಬೇಕು
ಹರಿಕಥೆಗಳ ನಿತ್ಯದಲಿ ಕೇಳುತಿರಬೇಕು
ವಿರಕುತಿಬೇಕು ವಿಷ್ಣುವಿನಾರಾಧನೆಬೇಕು
ವರ ಮಂತ್ರಜಪಬೇಕು ತಪಬೇಕು ಪರಗತಿಗೆ...

ರಂಗ ನಿನ್ನ ಪಾದ ಕೆಂಗಮಲದಲ್ಲಿ
ಭೃಂಗನಪ್ಪುದೆಂತೊ...

...ಸಂಜೆಯ ತೋರಿಸಿ ಧನಂಜಯನ ಕಾಯ್ದವನೆ ಬಾರೊ...

ಇದಲ್ಲದೆ, ಸಾಮಾನ್ಯ ಜನತೆಯ ಮನ ಪ್ರತಿಬಿಂಬಿಸುವಂತೆ ಇರುವ ಅವರ ಅನೇಕ ರಚನೆಗಳಲ್ಲಿ ಮನುಷ್ಯನ ಮನ ತುಮುಲ, ಸಂಸಾರಗೋಜು, ಎಲ್ಲ ಅಭಿವ್ಯಕ್ತ ಗೊಳ್ಳುತ್ತವೆ :

ವಾಸುದೇವನ ಗುಣಗಳ ಸ್ತುತಿಸದು
ರಾಸೆಯೊಳುಬಿದ್ದು ಕಾಡುತಿದೆ
ಲೇಸಾಗಿ ನಾಯಿಬಾಲಕೆ ನಾರಾಯಣತೈಲ
ಏಸು ಬಾರಿ ತೀಡಿದರೆ ನೀಟಾಗುವುದೆ

ಕಂಬಳಿಯು ಬುತ್ತಿಯುಂತೀದೇಹದೊಳಗೆ ಸುಖ
ವೆಂಬುದಿಲ್ಲವು ದುಃಖಭರಿತ...
ಅಂಬುಜಾಕ್ಷನ ದಿವ್ಯಮಂಗಳ ಕಥಾಮೃತವ
ನುಂಬ ಸಂಭ್ರಮಕೆ ಸರಿಗಾಣೆನು...

ಎಂದೆಲ್ಲ ತಿಳಿಸುವ ವಾದಿರಾಜರು ಹರಿದಾಸರಾಗಿ, ಭೃತ್ಯ ಭಾವದಿಂದ ಬೇಡುವುದಿದೇ :

ನಿನ್ನ ಧ್ಯಾನ ಶಕ್ತಿಯಕೊಡೊ
ಅನ್ಯರಲಿ ವಿರಕ್ತಿಯ ಕೊಡೊ

ನಿನ್ನ ನೋಡುವ ಯುಕ್ತಿಯ ಕೊಡೊ
ನಿನ್ನ ಪಾಡುವ ಭಕ್ತಿಯ ಕೊಡೊ ॥
ನ್ಹುತ್ತಬರುವ ಸಂಪತ್ತಿಯ ಕೊಡೊ ॥
ಚಿತ್ತದಿ ತತ್ವದ ಕೃತ್ಯವ ತೋರೊ
ಮತ್ತೆ ತುದಿಯಲಿ ಎನಗೆ ಮುಕ್ತಿಯ ಕೊಡೊ
ಅತ್ರಿಕ್ತ ಮಾಡೊ ಭವ ಕತ್ತಲೆಯನಗೆ ಮುತ್ತಿದೆ ಹಯವದನೆ...

ಇದರೊಂದಿ ವೈಷ್ಣವ ಧರ್ಮದ ಇನ್ನೊಂದು ಲಕ್ಷಣ-ವಿಶಿಷ್ಟತೆಯಾದ 'ದಾಸೋಹಂ 'ತ್ವದ್ಭತ್ಯ ಭೃತ್ಯ' ಎಂಬ ಭಾವ :

ಮಾನ್ಯ ಹಯವದನ್ನ ತ್ರಿವಿಕ್ರಮ
ನನ್ನು ದಾಸೋಹಂ ಎನ್ನೋಆಶಾಸ್ತ್ರೋಕ್ತಿ
ಮನ್ನಿಸಿ ಬಾಳೋಜೀವ.

ನಾ ನಿನ್ನ ಮರೆತರೂ ನೀನೆನ್ನ ಮರೆತರೆ
ಹಾನಿನಿನಗೆ ನಿನ್ನ ಭಕ್ತ ವತ್ಸಲತೆಗೆ
ಹೀನತೆ ಬಂದಹಾಗಿ

"ಧ್ವಜಪದ್ಮರೇಖೆಗಳಿಂದ ಒಪ್ಪುವ
ಸಿರಿಪಾದ ಪದುಮವನು
ಭಕ್ತಿಯಿಂದ ಭಜಿಸಲು ಸಿರಿಹಯವದನನೆ
ಪ್ರತ್ಯಕ್ಷವಾಗಿ ಸಲಹುವ ನಮ್ಮನು"

ಎಂಬಲ್ಲೆಲ್ಲ ದಾಸ್ಯ, ಸಖ, ಪಾದವಂದನ ಭಕ್ತಿ ಸಹಜವಾಗಿ ಮೂಡಿ ಬಂದು ವಾದಿರಾಜರ ವೈಷ್ಣವತ್ವವನ್ನು ಸಮರ್ಥಿಸುತ್ತವೆ. 'ನೂರೆಂಟು ನೆನೆದು ಫಲವೇನು ಈರೇಳು ಜಗದೊಡೆಯ ಹರಿಯನೊಮ್ಮೆ ನೆನೆಮನವೆ' ಎನ್ನುತ್ತ "ಕೇಳು ಹರಿ ಮಹಿಮೆಯನು ಪೇಳು ಹರಿನಾಮವನು : ಬಾಳು...ಬಂದಷ್ಟರಿಂದ ತಾಳುಹಸಿ ತೃಷೆಗಳ", "ಕೂಗಳತೆಗೆ ಕೊಂಚ ದೂರವೊ ಹರಿಯಪುರ", ಇವೆಲ್ಲ ಹರಿಸರ್ವೋತ್ತಮತೆ, ಹರಿಭಕ್ತಿಯನ್ನು ನಿಚ್ಚಳವಾಗಿ ಪ್ರತಿಪಾದಿಸುತ್ತವೆ. ದಾಸಸಾಹಿತ್ಯದ ಪ್ರಥಮ ಹಂತದ ಹರಿದಾಸರಲ್ಲಿ, ಸನ್ಯಾಸಿಗಳು-ಮಠಾಧೀಶರಾಗಿದ್ದು ಹರಿದಾಸರಾಗಿ ಹರಿಭಕ್ತರಾದ ವಾದಿರಾಜರಂಥವರಲ್ಲಿ, ಒಡಮೂಡಿ ಬಂದಿರುವ ಸರಳ, ಸುಂದರ ಸಹಜ ರಚನೆ, ಅವರ ಸಮುದಾಯದ ಭಕ್ತಿ-ಮಂಶೀಯ ಆಂದೋಲನದ ದ್ರುತಗತಿಯನ್ನೂ ಬಿಂಬಿಸುತ್ತವೆನ್ನಲಡ್ಡಿಯಿಲ್ಲ. ಹರಿಸರ್ವೋತ್ತಮತ್ವ ಪ್ರತಿಪಾದನೆ, ವೈಷ್ಣವ ದಾಸರ, ಯತಿಗಳ ಮುಖ್ಯ ವೈಶಿಷ್ಟ್ಯವೆಂದೇ ಅದನ್ನು ಸುಷ್ಪವಾಗಿ ತಿಳಿಸಲಾಗಿದೆ.

ಇದು ಅವರ ವಿಷ್ಣುಪಾರಮ್ಯ ಸಮರ್ಥನೆ ಭಾಗವತ ಧರ್ಮಿಗಳಾಗಿ, ಹರಿದಾಸರಾದ, ಕನಕದಾಸರು ಹರಿಹರ ಸಮನ್ವಯತೆ ಕಂಡಿತು ಹೇಳಿದರೂ ಮಧ್ವಮತ ನಿಷ್ಠೆ, ಹರಿ ಸರ್ವೋತ್ತಮತೆಯೆಡೆಗೆ ವಾಲಿದಂತಿದೆ. ಅವರ ಅನೇಕ ರಚನೆ ಇದನ್ನು ಧ್ವನಿಸಂತ್ತವೆ.

ಜಗದಂತರ್ಯಾಮಿ ಎಂದೆಂದು ನಿಮ್ಮ
ನಿಗಮ ಸಾರುವ ಮಾತು ಪುಸಿಯೇ ರಂಗ॥ ಎಂದು ಹಾಡುತ್ತ,
ಇಂತು ಅಣುರೇಣುತೃಣಕಾಷ್ಠದೊಳಗೆಲ್ಲ
ಸಂತೋಷವಾಗಿಹುದು ನಿಮ್ಮ ಸ್ಮರಣೆ
ಯಂತ್ರವಾಹಕನೆಂಬ ಬಿರುದು ಸಲ್ಲದು ನಿಮಗೆ
ಚಿಂತಾಯಕನೆ ನೆಲೆಯಾದಿ ಕೇಶವನೆ ಎನ್ನುತ್ತಾರೆ

ಪುರಂದರದಾಸರ ಈ ಸುಪ್ರಸಿದ್ಧ ರಚನೆ ಎಲ್ಲರೂ ಕೇಳಿರುವಂತಿದೆ :

ಸಕಲ ಗ್ರಹಬಲ ನೀನೆ ಸರಸಿಜಾಕ್ಷ ।
ನಿಖಿಳ ರಕ್ಷಕ ನೀನೆ ವಿಶ್ವವ್ಯಾಪಕನೆ ॥ಅ. ಪ॥

ರವಿ ಚಂದ್ರ ಬುಧ ನೀನೆ ರಾಹು ಕೇತುವು ನೀನೆ
ಕವಿ ಗುರು ಶನಿಯು ಮಂಗಳನು ನೀನೆ
ದಿವರಾತ್ರಿಯು-ನೀನೆ ನವ ವಿಧಾನವು ನೀನೆ
ಭವರೋಗ ಹರ ನೀನೆ ರಕ್ಷಕನು ನೀನೆ ॥ 1 ॥

ಪಕ್ಷಮಾಸವು ನೀನೆ ಪರ್ವಕಾಲವು ನೀನೆ
ನಕ್ಷತ್ರ ಯೋಗ ತಿಥಿಕರಣ ನೀನೆ
'ಅಕ್ಷಯ'ವೆಂದು ದ್ರೌಪದಿಯ ಮಾನವ ಕಾಯ್ದ
ಪಕ್ಷಿವಾಹನ ದೀನ ರಕ್ಷಕನು ನೀನೇ ॥ 2 ॥

ಋತು ವತ್ಸರವು ನೀನೆ ಪೃಥಿವಿಗಾದಿಯು ನೀನೆ
ಕ್ರತು ಹೋಮ ಯಜ್ಞ ಸದ್ಗತಿಯು ನೀನೆ
ಜಿತವಾಗಿ ಎನ್ನೊಡೆಯ ಪುರಂದರವಿಠ್ಠಲನೆ
ಶ್ರುತಿಗೆ ಸಿಲುಕದ ಅಪ್ರತಿಮ ಮಹಿಮ ನೀನೆ ॥ 3 ॥

ಎಂಬಲ್ಲಿ ಕೊನೆಯ ಸಾಲು "ಶ್ರೀಹರಿಯು ಕೇವಲ ಭಕ್ತಿಗೆ ನಿಲುಕುವ"ನೆಂಬುದನ್ನೂ ಸಮರ್ಥಿಸುತ್ತದೆ.

ಹರಿಸರ್ವೋತ್ತಮತೆಯ ಪ್ರತಿಪಾದನೆ ವೈಷ್ಣವ ಧರ್ಮದ ಪ್ರಮುಖ ಲಕ್ಷಣಗಳಲ್ಲೊಂದೆಂದಾಗ, ಹರಿದಾಸನ ಗುಣವಿಶೇಷಗಳ ಬಗ್ಗೆಯೂ ಕೆಲವು ಮಾತು ತಿಳಿಯಸ ಬಹುದೆನ್ನಿಸುತ್ತದೆ. ಆದರಿಂದ ವಿಚಾರ ಕಂಡರಿಸುವಿಕೆ ಕೂಡ ಪೂರ್ಣ ಆದಂತಾಗುತ್ತದೆ. ಹರಿಭಕ್ತರ-ಹರಿದಾಸರ ಗುಣವಿಶೇಷಣಗಳನ್ನು ಕುರಿತೆ ಅನೇಕ ಕೃತಿಗಳು ಕಾಣಬರುತ್ತವೆ.

ಇದು ಆಗ್ಗೆ ಪ್ರಚಲಿತವಿದ್ದ, ಇನ್ನೂ ಅಲ್ಲಲ್ಲಿ ಬದುಕುಳಿದಿರುವ ಹರಿದಾಸ ಸಂಪ್ರದಾಯ-ಬದುಕಿನ ಜತೆಗೆ ಹರಿಭಕ್ತರ ಲಕ್ಷಣಗಳನ್ನು ತಿಳಿಯಪಡಿಸುತ್ತದೆ. ಇದನ್ನು ಸಮಾಜದಲ್ಲಿ ಪ್ರಚುರಪಡಿಸುವುದೆ, ಹಾಗೂ ಸಮಾಜ ಸ್ವಾಸ್ಥ್ಯವನ್ನು ಕಾಪಾಡಿ, ಹೆಚ್ಚಿಸುವುದೆ ಅವರ ಧ್ಯೇಯವೂ ಆಗಿತ್ತೆಂಬುದನ್ನು ತೋರ್‍ಪಡಿಸುತ್ತದೆ.

ಹರಿಭಕ್ತಿ-ಗುರುಭಕ್ತಿ, ಹರಿಸರ್ವೋತ್ತಮತ್ವ-ಗುರುವಿನಲ್ಲಿ ಅತ್ಯಂತ ಉನ್ನತ ಮಟ್ಟದ ಗೌರವ, ತೋರುವುದು ಹರಿದಾಸರ ಪರಂಪರಾನುಗತ ಆಗಿ ಬೆಳೆದು ಬಂದ ಪದ್ಧತಿ ಆದರಂತೆಯೆ, ಅವರಿಗೆ ತಮ್ಮ ಲೋಕಾನುಭವ, ಇಹದ ನೂರೆಂಟು ದೃಶ್ಯ, ಹಾಗೂ ಹರಿದಾಸರ ಕರ್ತವ್ಯವಾಗಿ ಅವರು ಕೈಕೊಳ್ಳುತ್ತಿದ್ದ ತೀರ್ಥಕ್ಷೇತ್ರ ಪರ್‍ಯಟನ ಅವರಿಗೆ ಎರಡು ವಿಧದಲ್ಲಿ ನೆರವು, ಪೋಷಕ ಆಗುತ್ತಿದ್ದತೆನ್ನಿಸುತ್ತದೆ. ಒಂದು, ಅವರ ಭಗವದ್ಭಕ್ತಿ ದೃಢಗೊಳ್ಳಲು, ಹಾಗೂ ಅವರು ತಮ್ಮ ಸಗುಣೋಪಾಸನೆಯ ವಿವಿಧ ಸ್ವರೂಪಗಳಾದ ಶ್ರೀಹರಿಯ ಅನಂತ ದರುಶನ ಪಡೆಯಲು ಸಾಧಕ ಆಗುವುದೆಂಬುದು. ಇನ್ನೊಂದು, ತೀರ್ಥಕ್ಷೇತ್ರ ಪರ್‍ಯಟನ ಹರಿದಾಸರಿಗೆ ಲೋಕಾನುಭವ ತಿಳಿಯಗೊಡುತ್ತಿದ್ದಲ್ಲದೆ ವಾದಿರಾಜರು, ಕನಕದಾಸರು, ಶ್ರೀಪುರಂದರದಾಸರು, ವಿಜಯದಾಸರಂಥವರಿಗೆ ತಮ್ಮ ದಾಸಕೂಟದಧ್ಯೇಯ ಆದ ಶ್ರೀಹರಿಭಕ್ತಿ, ಮಧ್ವಮತ ಆಂದೋಲನ ಬಲಗೊಳಿಸುವಲ್ಲಿಯೂ ಸಾಧಕ ಆಗುತ್ತಿದ್ದಿತೆನ್ನಬಹುದು. ಪ್ರವಾಸ, ಪರ್ಯಟನ, ಶ್ರಮ-ಕಷ್ಟಕರ ಆದರೂ, ಅವರು ಕಾಣುತ್ತಿದ್ದ ದರ್ಶನ ಕಾಣ್ಕೆ ಅವರನ್ನು ಇನ್ನೂ ಮಾನಸಿಕವಾಗಿ ಉನ್ನತರಾಗಿಸುತ್ತಿತ್ತು, ಪರಿಪಕ್ವ ಮತಿಯವರಾಗಿಸಿ, ಅವರ ವೈಷ್ಣವಧರ್ಮೀಯ ಮನೋಧರ್ಮದ ವಿಕಸನಕ್ಕೂ ಹಾದಿಯಾಗುತ್ತಿತ್ತು. ವಾದಿರಾಜರು 'ತೀರ್ಥಪ್ರಬಂಧ' ವನ್ನೆ ಬರೆದರೆ, ವಿಜಯದಾಸರು ತೀರ್ಥಕ್ಷೇತ್ರ ಮಹಿಮಾ ಸಂಬಂಧಿಗಳೆಂಟ ತಮ್ಮ ಪರ್‍ಯಟನ-ದರ್ಶನ ಅನುಭವವೆಲ್ಲ ತೋಡಿಕೊಂಡಿದ್ದಾರೆ. ಆದು ಆಗ್ಗೆ ಒಡ ಮೂಡಿ ಬಂದು, ಅಂದು ಅವರಿಗಿದ್ದ ಸಾರಿಗೆ ಸೌಲಭ್ಯ ಕೊರತೆಯಲ್ಲೂ ಅವರಿರಿಸಿಕೊಂಡ ಮನೋದಾರ್ಢ್ಯಕ್ಕೂ ನಿದರ್ಶನವಾಗಿತ್ತದೆ. ನಾವು ಎಷ್ಟೆಷ್ಟೊ ಕಾಣದ ಸ್ಥಳಗಳನ್ನು ಅವುಗಳ ಇತಿಹಾಸ ಸ್ಥಳ ಪುರಾಣಗಳನ್ನು ಕೇಳುತ್ತೇವೆ. ಒಮ್ಮೊಮ್ಮೆಯಂತೂ ಭಕ್ತಿ ನಿರ್ಭರ ಆಗಿರುವ ಅವರ ರಚನೆಗಳು, ಆಯಾ ಕ್ಷೇತ್ರ ದೇವತೆಯೆದುರು ನಮ್ಮನ್ನು ನಿಲ್ಲಿಸುತ್ತವೆ. ನದ-ನದಿಗಳನ್ನೂ ಹರಿದಾಸರು ಸ್ತುತಿಸಿದ್ದಾರೆ. ಹೋದ ಪ್ರಾಂತ್ಯಗಳಲ್ಲಿ ತಮ್ಮ ಹರಿಭಕ್ತಿ ಪ್ರಸಾರ, ವೈಷ್ಣವ ಧರ್ಮ ಬೆಳೆಸಿ, ಪ್ರಚುರ ಪಡಿಸಿದ್ದಾರೆ. ಜನತೆಯನ್ನು ಧರ್ಮ-ನೀತಿ-ಜ್ಞಾನ-ಭಕ್ತಿಯ ದೃಢ ಮಾರ್ಗದಲ್ಲಿ ಒಂದಾಗಿ ಸಮಾಜ ಚೆನ್ನಾಗಿರಿಸಲು ಕೋರಿದ್ದಾರೆ. (ಹರಿದಾಸರ ಕ್ಷೇತ್ರ ದರ್ಶನದ ಅನುಬಂಧವನ್ನೆ ನಿಬಂಧದ ಕೊನೆಯಲ್ಲಿ ನೀಡಲಾಗಿದೆ.) ಇಲ್ಲಿಲ್ಲ (ಮುಂದಿನಿಂದ ಹರಿಯ ಪ್ರವಿಷ್ಟಾ ಪ್ರವಿಷ್ಟ ಕಥೆ: ಬಣ್ಣ ಸಂವಂತ) ಧರ್ಮ-ನೀತಿ-ಜ್ಞಾನ-ವೈರಾಗ್ಯ ಮಡಂಗಟ್ಟಿದ್ದರೂ, ಶೋಭಿಯ ಪಾತಳಿ ರುಲ್ಲಿ ಹೆಪ್ಪುಗಟ್ಟಿದ್ದರೂ ಅಲ್ಲಲ್ಲಿ ಸಮಾಜದರ್ಶನ, ಬದುಕಿನ ವಿವಿಧ ನೋಟ ಎಲ್ಲ ಕಾಣಬರುತ್ತವೆ :

ಭಾಗೀರಥೀ ಸರಸ್ವತಿ ಯಮುನ ವಾರುಣಾ
ಶ್ರೀಗೋದ ಫಲ್ಗುಣೀ ಶ್ರೋಣ, ಭದ್ರಾ ನರ್ಮ
ದಾ ಗಂಡಿಕಿ ಭೀಮರಥಿ ತುಂಗಭದ್ರಾ ಪ್ರಯಾಗ ತ್ರಿವೇಣಿ ಹೇಮಾ ॥

ವೇದವತಿ ಗಾಯತ್ರಿ ಕೌಶಿಕೀ ಮಣಿಕಾರಣಿ
ಕಾ ಗೌತುಮಿ ವಿಯದ್ಗಂಗಾ ಕುಮುದ್ವತೀ
ಕಾಗಿನೀ ನೇತ್ರವತಿ ವೈತ್ರರಣಿ ಹೈರಣಿ ಸಿಂಧು ಪಾಪಾಘನಾಶೀ...

ಇಲ್ಲಿ ಎಷ್ಟೊ ನದ-ನದಿಗಳ ಹೆಸರು ನಾವು ಕೇಳಿಯೆ ಇಲ್ಲ. ಇಂಥ ಕ್ಷೇತ್ರ ಸ್ಥಳಗಳನ್ನು ಶ್ರೀವಿಜಯದಾಸರ ಮಹಿಮಾ ಕೃತಿ ರಚನೆಗಳಲ್ಲಿ ಕಾಣಬಹುದು.

ಹರಿದಾಸರಲ್ಲಿ ಅನೇಕರು ಸಂಸ್ಥಾನಾಧಿಪತಿಗಳಾಗಿ ಸನ್ಯಾಸ ಸ್ವೀಕರಿಸಿ, ತಮ್ಮ ಉಪಾಸ್ಯ ದೈವದಂಕಿತವಿರಿಸಿಕೊಂಡು, ದಾಸಕೂಟ ಹರಿದಾಸ ಪರಂಪರೆಯನ್ನು ಸಂಘಟಿಸಿ ಬೆಳೆಸಿದಂಥವರು. ಉದಾ : ಶ್ರೀನರಹರಿತೀರ್ಥರರು, ಶ್ರೀಪಾದರಾಜರು, ಶ್ರೀವ್ಯಾಸರಾಯರು, ಶ್ರೀವಾದಿರಾಜರು, ಶ್ರೀರಾಘವೇಂದ್ರತೀರ್ಥರ ಬೃಂದಾವನ ಸ್ಫೂರ್ತಿ-ಹೀಗೆ ಮಧ್ವಮತ ನಿಷ್ಠೆ ಸಾಧಾರವಾಗಿ ಪ್ರತಿಪಾದಿತ ಆಗಬೇಕಾದ, ಹಾಗೂ ವರ್ಣಾಶ್ರಮ ಧರ್ಮ, ವೇದ ಪ್ರಾಮಾಣ್ಯ, ಸದ್ಗುಣವಿಷಯ, ಸ್ನಾನ-ಮಡಿ-ಜಪ-ಸಾಧನ. ಭಗವಂತನಲ್ಲಿ ಭಕ್ತಿ, ಇವೆಲ್ಲ ಸೇರ್ಪಡೆ ಆಗುತ್ತವೆ. ಇದರ ಜತೆ ಜಗತ್ತು ಸತ್ಯ ಎಂಬತಕ್ಕದಾದ, ತಾರತಮ್ಯ, ವಾಯು ಜೀವೋತ್ತಮ ಪ್ರತಿಪಾದನೆ, ಪಂಚಭೇದ ಮೊದಲಾದ ಪ್ರಮೇಯಗಳೂ ಇವೆ. ಮಧ್ವಮತ ಧರ್ಮಕ್ಕೆ ಸಂಬಂಧಿಸಿದ ಗಹನ ಆದ ಉಪಾಸನೆ, ಭಗವಂತನ ವ್ಯಾಪ್ತಿ, ಸರ್ವಾಂತರ್ಯಾಮಿ ವ್ಯಕ್ತಿತ್ವ ಇತ್ಯಾದಿ ವೈಶಿಷ್ಟ್ಯ, ತಪಸ್ಯೆಯಿಂದ ಅಪರೋಕ್ಷಜ್ಞಾನಿಗಳಾದವರ ಸ್ತುತಿ ಇವೆಲ್ಲ ಒಳಪಡುತ್ತವೆ. ಇದರಿಂದ, ದಾಸಸಾಹಿತ್ಯ ಪರ್ಯಾಲೋಚನೆಯು ಮಧ್ವಮತದ ಚೌಕಟ್ಟಿನಲ್ಲಿಯೆ ಎದಾಗುತ್ತದೆ. ಹಾಗೆಂದ ಮಾತ್ರಕ್ಕೆ ಇದು ಸಂಕುಚಿತವೇನಲ್ಲ. ಈ ಮತದ ವಿಶಿಷ್ಟತೆ, ಇದೇಯೆ ಎನ್ನಬೇಕಾಗುತ್ತದೆ. ವ್ಯಾಸರಾಯರು, ಜನ್ಮ ಜನ್ಮದಲ್ಲೂ ನನಗೆ ಮಧ್ವಮತದಲ್ಲಿಯೆ ಹುಟ್ಟಿಸೆಂದೇ ಬೇಡುತ್ತಾರೆ ;

ಜನುಮ ಜನುಮದಲ್ಲಿ ಕೊಡು ಕಂಡ್ಯ ಹರಿಯೆ ॥ ಪ ॥

ಅನಿಮಿತ್ತ ಬಂಧು ಕೃಷ್ಣದಯದಿಂದಲೆನಗೆ ॥ಅ.ಪ.॥

ಮೆರೆವ ಊರ್ಧ್ವಪುಂಡ್ರ ಎರಡಾರು ನಾಮವು
ಕೊರಳೊಳು ತುಲಸಿಯ ವನಮಾಲೆಯು
ಮೆರೆವ ಶಂಖಚಕ್ರ ಭುಜದೊಳೊಪ್ಪುತ ನಿಮ್ಮ
ಸ್ಮರಿಸುತ್ತ ಹಿಗ್ಗುವ ವೈಷ್ಣವ ಜನುಮವ ॥ 1 ॥

ಹರಿಯೆ ಸರ್ವೋತ್ತಮ ರಾಣಿ ಲಕುಮಿ ಬೊಮ್ಮ
ಹರ ಇಂದ್ರಾದ್ಯಖಿಳರು ತವ ಸೇವಕರು
ವರ ತಾರತಮ್ಯ ಪಂಚ ಭೇದ ಸತ್ಯವೆಂದು
ನೆರೆ ಪೇಳುವ ವಾಯುಮತದ ಸುಜ್ಞಾನವ ॥ 2 ॥

ಸಕಲ ವಿಬುಧೋತ್ತಮರಲ್ಲಿ ನಮ್ರತೆಯು
ಸುಖ ತೀರ್ಥರಲಿ ಮುಖ್ಯ ಗುರು ಭಾವನೆಯು
ಮುಕುತಿ ಪ್ರದಾಯಕ ಸಿರಿ ಕೃಷ್ಣ ನಿನ್ನಲ್ಲಿ
ಅಕಳಂಕವಾದ ನವವಿಧ ಭಕುತಿಯನು ॥ 3 ॥

ಇಲ್ಲಿ ಇಡೀ ವೈಷ್ಣವ ಧರ್ಮ, ಮಧ್ವನಿಷ್ಠೆ, ಹರಿದಾಸತನ, ಆನಂದತೀರ್ಥರಲ್ಲಿ ಗುರು ಭಕ್ತಿ, ಹರಿಯೆ ಮುಕ್ತಿದಾಯಕನೆಂಬ ಉನ್ನತ ಪ್ರಜ್ಞೆ, ಎಲ್ಲವೂ ಒಡಮೂಡಿ ಬಂದಿರುವು ದನ್ನು ಮನಗಾಣಬಹುದು.

ವ್ಯಾಸರಾಯರ ಮಧ್ವಮಂತ ನಿಷ್ಠೆ, ಅವರು ಸಂಘಟಿಸಿದ ಹರಿದಾಸರಲ್ಲಿಯೂ ಬೆಳೆದುಬಂದಿತು. ಹರಿಹರರನ್ನು ಸಮಾನವಾಗಿ ಸ್ತುತಿಸಿರುವ ಕನಕದಾಸರೂ ಮಧ್ವಮಂತ ಚೌಕಟ್ಟಿನ ಪ್ರಭಾವಕ್ಕೊಳಗಾಗಿ ಸುಖತೀರ್ಥರನ್ನು ನಂಡಿಸುವ ಪಂಕ್ತಿಗೆ :

ಕರ್ನಾಟಕದ ಹರಿದಾಸರೆಲ್ಲರೂ ಮಧ್ವಮತವನ್ನು ಮುಕ್ತಕಂಠದಿಂದ ಪ್ರಶಂಸಿಸಿ ದ್ದಾರೆ. ಅದಕ್ಕೆ ಪ್ರಮುಖ ಕಾರಣಗಳು ಹೀಗಿದ್ದುವು : ಒಂದು, ತಾವು ನಂಬಿದ ಅನು ಸರಿಸುವ ಸ್ವಮತದ ಪ್ರತಿಪಾದನ, ಸಮರ್ಥನೆ, ಹರಿಭಕ್ತಿ ಪ್ರಸರಣಕ್ಕೆ ಅನುಕೂಲ ವಾದ, ಆದನ್ನೇ ವೈಯಾಂತ ಹರಿಮತವೆಂಬ ಅಭಿಮಾನ. ಹಾಗೂ ವಿಪ್ರಭಕ್ತಿ ವೈಷ್ಣವಧರ್ಮ-ವೈದಿಕ ವಾಙ್ಮಯ ಪ್ರಾಮಾಣ್ಯ ಪ್ರತಿಷ್ಠಾಪಿಸುವ ಹೆಬ್ಬಯಕೆ ಅದೇ ಧ್ಯೇಯ.

ಕೆಲವು ವಿಶಿಷ್ಟ ರಚನೆಗಳು, ರೂಪಕ, ಪುರಂದರದಾಸರ ಕವಿತ್ವಕ್ಕೊ ನಿದರ್ಶನ ವೆನಿಸುತ್ತವೆ.

ವೈದೀಕ ಮತದಲ್ಲಿ ನಡೆದೇವೆಂದು ತಾವು
ವೈಷ್ಣವವು ಬಿಟ್ಟುಕೊಟ್ಟರು ಕೆಲವರು
ವೈಷ್ಣವ ಮತದಲ್ಲಿ ನಡೆದೇವೆಂದು ನಾವು
ವೈದಿಕವು ಬಿಟ್ಟುಕೊಟ್ಟವರು ಕೆಲವರು
ವೈದಿಕ ವೈಷ್ಣವ ಪೊಂದೆಂದು ಮಧ್ವಮುನಿ
ಪ್ರತಿಪಾದಿಸಿದ ಪುರಂದರವಿಠಲನ ಮೆಚ್ಚ ॥
...ಸಿರಿ ಮಧ್ವಾಚಾರ್ಯರಿಗೆ ಪುರಂದರವಿಠಲಗೆ ಶರಣು
ಶರಣೆಂಬೆ ನಾ ಶರಣೆಂಬೆನನವರತ......

ಏನಾದರೂ ಒಂದಾಗಲಿ, ನೂರೆಂಟು ದೇವರು ಮೊರಕುಂಟ ಕಲ್ಲೆ
ಅತ್ತೆಯ ಕಣ್ಣು ಹೋಗಲಿ ಮಾವನ ಕಾಲು ಮುರಿಯಲಿ
ಹಿತ್ತಲಗೋಡೆ ಬೀಳಲಿ, ಕಾಳ ಕತ್ತಲೆ ಬಂದು ಕವಿಯಲಿ ಹರಿಯೇ ॥ 1 ॥

ಮನೆಯ ಗಂಡ ಮಾಯವಾಗಲಿ, ಉಣಬಂದ ಮೈದುನ ವರಗಲಿ
ಮನೆನೆರಮನೆ ಹಾಳಾಗಲಿ ಮತ್ತೆ ಅಕ್ಕಿಗೆ ನಾದಿನಿ ಮಡಿಯಲಿ ಹರಿಯೇ ॥ 2 ॥

ಕಂದನ ಕಣ್ಣು ಮುಚ್ಚಲಿ ಚಂದ್ರನ ಹಾವು ಕಚ್ಚಲಿ ಈ
ದ್ವಂದ್ವಾರ್ಥಗಳು ಬಿಚ್ಚಲಿ ಪುರಂದರವಿಠಲನು ಮೆಚ್ಚಲಿ ಹರಿಯೇ ॥ 3 ॥

ಈ ಕೃತಿಯಲ್ಲಿನ ಅರ್ಥ ಹೀಗೆ :-

ಅತ್ತೆ ಎಂದರೆ : ಸ್ವಾರ್ಥ
ಮಾವ : ಆಸೆ
ಹಿತ್ತಲಗೋಡೆ : ಪಂಚೇಂದ್ರಿಯಗಳು
ಮನೆಯಗಂಡ : ಮಿಥ್ಯಾಜ್ಞಾನ
ಮೈದುನ : ಅಜ್ಞಾನ
ಮನೆನೆರಮನೆ : ಅರಿಷಡ್ವರ್ಗಗಳು
ಕಂದನ ಕಣ್ಣು ಮುಚ್ಚಲಿ : ಎಂಬಲ್ಲಿ "ಕಂದ" ಎಂದರೆ "ಹರಿದ್ವೇಷ",
ಹಾಗೂ ತತ್ತ್ವ ದ್ವೇಷ
ಚಂದ್ರ : ಕಾಮ ನೆಂದರ್ಥ.

ಕೊನೆಗೆ "ದ್ವಂದ್ವಾರ್ಥಗಳು ಬಿಚ್ಚಲಿ" ಎಂಬಲ್ಲಿಯೂ ಎರಡು ಅರ್ಥಮಾಡಿಕೊಳ್ಳ ಬಹುದು :

ಒಂದನೆಯದು ದ್ವೈತತತ್ತ್ವ ಅಥವಾ ಮಧ್ವಮತ ತತ್ತ್ವ ಎಲ್ಲರಿಗೂ ತಿಳಿಯಲಿ ಎಂಬುದು, ಇನ್ನೊಂದು, ಈ ಕೀರ್ತನೆಯ ರೂಪಕ ಬಳಕೆಯ ಅರ್ಥ ತಿಳಿಯಲಿ ಎಂಬುದು.

ಮತದೊಳಗೆ ಒಳ್ಳೆ ಮತ ಮಧ್ವಮತವು । ರಘು
ಪತಿ ಪೂಜಾ ವಿಧಾನಕ್ಕೆ ಪಾವನ ಮತವು । ಇದು ಪಾವನ ಮತವು ॥ ಪ ॥

ನಾರಾಯಣನ ನಾಮ ಸ್ಮರಣೆ ನಂಬಿದ ಮತವು । ಇದು ನಂಬಿದ ಮತವು
ಪಾರಾಯಣಕೆ ಅನುಕೂಲ ಮತವು । ತಾರತಮ್ಯದಿ ಉದ್ಧರಿಸಿ
ಶ್ರುತಿಗಳನೊರೆದ । ಧಾರುಣಿಯ ಸುರರ ಸಂತೋಷದ ಮತವು ॥ 1 ॥

ಅಕಳಂಕ ಶ್ರೀಹರಿಗೆ ವಜ್ರಾಂಕಿತ ಮತವು । ಇದು ಮುದ್ರಾಂಕಿತ ಮತವು
ಸಕಲ ದೇಶಕ್ಕೆ ಸನ್ಮತವಾದ ಮತವು । ಅಕುಟಿಲ ಶುಕ ಸನಕಾದಿ ಮುನೀಂದ್ರರ
ನಿಖಿಳ ಕ್ರಿಯಾ ಪದವೀವ ನಿರ್ಮಲ ಮತವು ॥ 2 ॥

ಸರಸ ಸದ್ಗುಣ ಸತ್ವ ಸಾತ್ವಿಕವೀ ಮತವು । ಇದು ಶುದ್ಧ ಸಾತ್ವಿಕ ಮತವು
ಗುರು ಶಿಷ್ಯರಿಗೆ ಅನುಕೂಲವಾದ ಮತವು । ಪರಮತ ಖಂಡಿಸಿ ಪಂಡಿತರು ಪೇಳಿದ
ಪುರಂದರವಿಠಲನ ಮತವೆ ಹನುಮನ ಮತವು ॥ 3 ॥

ವಿಜಯದಾಸರ ಅದ್ವೈತ ಖಂಡನ ನೇರ, ಖಡ್ಗದಿಂದ ಕತ್ತರಿಸಿದಂಥದು. ಸ್ವಮತ ಪ್ರತಿಪಾದನೆಯೂ (ಮಧ್ವನಿಷ್ಠೆ) ಅಷ್ಟೆ ಖಚಿತ. ಸಾಧನೆಯನ್ನು ಮಾಡುವ ಬಗೆಯನ್ನು ಕುರಿತ ಸುಳಾದಿಗಳನೇಕ ರಚಿಸಿರುವ ವಿಜಯದಾಸರು ಒಂದೆಡೆ ಹೇಳುವುದಿದು.

ಅದ್ವೈತಮತವನು ಅಧ್ಯರ ಮಾಡುವ
ನದ್ವೇಷವನ್ನ ಬಳಿಸು ಸದ್ವರ್ತನವ ಪೇಳು ।
ದ್ವೈತಮತದಲ್ಲಿ ಸದ್ವೈಷ್ಣವೋತ್ತಮನಾಗು
ಸದ್ವಿಚಾರದಲ್ಲಿ ತದ್ವಿದ್ಗಿಯಾಚರಿಸು ॥
ಮಧ್ವರಾಯರ ಪಾದ ದ್ವಯವ ಭಜಿಸಿ
ಊರ್ಧ್ವಲೋಕಕೆ ಪೋಗುವ ದ್ವಾರ ಮಾಡು॥
ಅದ್ವೈತಮಹಿಮ ದಾನವಧ್ವಂಸಿ ವಿಜಯವಿಠಲ
ವಿದ್ವತ್ತಮನ ನೀ ಹೃದ್ವನಜದೊಳಗಿರಿಸೋ...

ಅದ್ವೈತ ಮತವು ವೇದವಿರುದ್ಧವಾದ್ದರಿಂದ ಅದನ್ನು ಕೈಬಿಟ್ಟು, ವೈಷ್ಣವ ತತ್ವವನ್ನು ಅನುಸರಿಸಿರೆಂದು ಬೋಧಿಸುವುದೇ ವಿಜಯದಾಸರ ಧ್ಯೇಯ. ಆದರೆ ಅವರ ಮಾತು ಕೆಲವೊಮ್ಮೆ ಒರಟು, ಹೀಗೇಕೆ ಬೋಧಿಸುವರೆಂದೂ ಅನ್ನಿಸುತ್ತದೆ.

ಮಾಯಾವಾದಿಯ ನಿನ್ನ ಮನವು ದೊಡ್ಡದು ಎಂದು
ಬಾಯಿ ಕೊಬ್ಬಿನಿಂದ ಬಲು ಬಗೆಯಲ್ಲಿ
ಕುಯುಕ್ತಿಯ ಮಂಡಿಸಿ ಕುತ್ಸಿತ ವಚನದಿಂದ
ಶ್ರೀಯರಸಗೆ ದೋಷಗಳ ಕಲ್ಪಿಸಿದರು

ಎಂದು ಘೋಷಿಸುತ್ತ, "ನಾಯಿ ಮತ್ತು ಮಾತಂಗ ಒಂದೆ ಆಗುವುದೇನೊ" ಎಂದು ಹೋಲಿಸಲೂ ಹಿಂಜರಿಯುವುದಿಲ್ಲ. ಈಶ್ವರನನ್ನು ನುಡಿಸಿದರೂ ಈಶ್ವರರಾಗುವರೆಂಬ ಅದ್ವೈತದ ಜೀವಪರಮಾತ್ಮೈಕ್ಯವಾದವನ್ನು ಟೀಕಿಸುತ್ತಾರೆ, ಖಂಡಿಸುತ್ತಾರೆ ದಾಸರು :

ಗಂಗಾದಿ ತಡಿಯಲ್ಲಿ ಭಕುತಿಯಿಂದಲಿ ಕುಳಿತು
ಅಂಗೈಯ್ಯ ಒಳಗೊಂದು ಲಿಂಗವರಚಿಸಿ

ಹಿಂಗದಲಿ ಪೂಜಿಸಿ......
ಮಂಗಳ ಗತಿಯನು ಬೇಡುವ ಮನಸು
ಲಿಂಗವು ನೀನಾದನೆಂದೂ ಮನಸು
ಲಿಂಗ ನೀನಾದರೆ ಲಿಂಗದ ನಿಜರಾಣಿ
ಶೃಂಗಾರ ಗಿರಿಸುತೆ ನಿನಗೇನಾದಳೊ...

ಎಂದು ಕೇಳುವಲ್ಲಿ, ಅದರ ಗಂಭೀರತೆ ಅರ್ಥ ಆದೀತು ಪರಮತ ತತ್ವ ಆನುಷ್ಠಾನ ಅರಿತು ಅವುಗಳನ್ನು ತಮ್ಮ ಮತದೊಂದಿಗೆ ಹೋಲಿಸಿ ಪ್ರತಿಖಂಡಿಸುವುದು ದಾಸರಿಗೆ ಇತರ ಮತಧರ್ಮಗಳ ಬಗ್ಗೆ ಇದ್ದ ಅರಿವನ್ನೂ ಸಾದರಪಡಿಸುತ್ತದೆ. ಒಂದೆಡೆಯಂತೂ ಶ್ರೀವಿಜಯದಾಸರು "ಮಾಯಾವಾದಿಯ ಮನೆಯಲ್ಲಿ ಗಜವಾಗಿ ಅನುದಿನ...ಸಂಚಿಸು ವುದಕ್ಕಿಂತ...ವೀರವೈಷ್ಣವರ ಸದನದಲ್ಲಿ ಶುನಕನಾಗಿ ಒಂದು ಘಳಿಗೆ ತನುವು ಧರಿಸಿ... ಬಾಳುವ ಬದುಕೆ ಲೇಸು" ಎನ್ನುತ್ತಾರೆ.

ಮಧ್ವಮತವ ಪೊಂದದವನ ಭಕುತಿಯಾತಕೆ
ಊರ್ಧ್ವಪುಂಡ್ರ ತಿದ್ದವವನ ಕರ್ಮವ್ಯಾತಕೆ

ಎಂಬ ಅವರ ಕೃತಿಯ ಒಂದು ಸಾಲಿನಲ್ಲಿ ಮಧ್ವಮತದ ಒಂದು ವೈಶಿಷ್ಟ್ಯವಾದ 'ತಪ್ತಮುದ್ರಾಂಕನ' (ಶಂಖ ಚಕ್ರ ಮುದ್ರೆ) ವಿಲ್ಲದವನ ಜನುಮವ್ಯಾತಕೆ ಎಂದು ಬರುತ್ತದೆ.

"ಮಧ್ವರಾಯರ ಕರುಣ ಪಡೆಯದವನದರೆಯೊಳಗೆ ಇದ್ದರೇನು ಇಲ್ಲ ದಿದ್ದರೇನು" ಎಂದು ಘೋಷಿಸುವ ದಾಸವರ್ಯರು "ಮಧ್ವರಾಯರ ದಾಸನಾದವನೆ ನಿರ್ದೋಷಿ ಮಧ್ವರಾಯರ ಭಂಟ ಜಗಕೆ ನೆಂಟ"ನೆಂದು ಸಾರಿ, "ಸರ್ವೇಶ ನಿನ್ನ ಚಿತ್ತಕೆ ನೀನು ಬಂದದ್ದು ಮಾಡು, ಆದರೆ, ಆವಾವ ನರಕದಲಿ ಬಹುಕಾಲವಿಟ್ಟರು ಇಷ್ಟೆ ನಾನೊಲ್ಲ ಮಿಥ್ಯ ಮತವ"ನೆಂದು ಹೇಳುತ್ತಾರೆ.

ವೈಷ್ಣವ ಧರ್ಮವನ್ನು ಪ್ರತಿಪಾದಿಸುವ ಹರಿದಾಸಸಾಹಿತ್ಯದ ಉಳಿದ (ಅದಕ್ಕೆ ಸಂಬಂಧಿಸಿದಂತೆಯೇ) ವೈಶಿಷ್ಟ್ಯಗಳೆಂದರೆ, ಅದ್ವೈತ ಖಂಡನ, ಹಾಗೂ ಕ್ಷೇತ್ರಸ್ಥ ಭಗವದ್ರೂಪಗಳ ವರ್ಣನೆ. ಎರಡನೆಯದನ್ನು ಪ್ರಾಸಂಗಿಕವಾಗಿ ಈ ಮೊದಲೇ ಪ್ರಸ್ತಾಪಿಸಲಾಗಿದೆ. ಅದ್ವೈತ ಖಂಡನವೆ, ಮಧ್ವಮತದ ಪ್ರಮುಖ ಧ್ಯೇಯಗಳ ಲ್ಲೊಂದು. ಹಾಗೂ ವೈಷ್ಣವ ಧರ್ಮಾನುಯಾಯಿಯ ಒಂದು ಲಕ್ಷಣ. ಜಗನ್ಮಿಥ್ಯಾ ವಾದನ್ನೊಪ್ಪದ ಮಧ್ವಮತಾನುಯಾಯಿಗಳು ಜಗತ್ತು ಸತ್ಯ, ಹರಿಯೊಬ್ಬನೆ ಸರ್ವಶಕ್ತ, ಸರ್ವತಂತ್ರ ಸ್ವತಂತ್ರ, ನಿರ್ದೋಷಿ, ಅನಂತಕಲ್ಯಾಣಗುಣಗಣಪರಿಪೂರ್ಣನೆಂದರು.

ಮಾಯಾವಾತವೊಳಕಲ್ಲ ನಿನಗೆ ಎನ್ನುವ ಶ್ರೀಪಾದರಾಜರು
ಜಗಕೆ ಕಾರಣ ದೇವ (ತಾ) ನಿಂತು
(ಬೊಗಳಿಕೊಂಬೆ) ಭೇದವಿಲ್ಲೆಂದು
(ತೆಗೆವನು) ಯಮ ಬೆನ್ನಚರ್ಮ ಇದು
ನ (ಗೆ)ಯಲ್ಲ ಕೆಳಲೊ ತಿಳಿಯೊ ದುಷ್ಕರ್ಮ

ಶಂಕರ ಮತಕೆ ನೀ ಹೊಂದಿ
ಪಂಕದೊಳು ಬೀಳ ಬೇಕಲ್ಲೊ
ಸಂಕಟಗೊಳಗಾದಿಯಲ್ಲ ನಿನ್ನ...
......ಇನ್ನಾದರು ಭೇದ ಮತವನು ನೀನು
ಚೆನ್ನಾಗಿ ತಿಳಿಯೋ......

ಎಂದು ತಿಳಿಸಿಹಂತ್ತಾರೆ. ಶ್ರೀಮಧ್ವಾಚಾರ್ಯರು ತಮ್ಮ ತತ್ತ್ವವಾದವನ್ನು ಪ್ರತಿಷ್ಠಿಸಿ ಮೂರು ಶತಮಾನ ಕಳೆದಿದ್ದರೂ, ವಾದಿರಾಜರು ತಮ್ಮ ಮಂತದ ಬಗ್ಗೆ ಮಾತಾಡುತ್ತಾ ಇತರ ಮತಗಳನ್ನು ಪ್ರಾಸಂಗಿಕವಾಗಿ ಟೀಕಿಸುವುದನ್ನು ಗಮನಿಸಿದರೆ ಆಗಲೆ ಇದ್ದ ಮತ ಸಂಘರ್ಷ ಕೂಡ ತಿಳಿಯ ಬರುತ್ತದೆ. ಮಧ್ವಾಚಾರ್ಯರನ್ನೂ ನಂಡಿಸುತ್ತ "ಮೂರಾರು ಎರಡೊಂದು ಮೂಢ ಮಂತಗಳ ಜರಿದು : ಸಾರ ಮಧ್ವ ಶಾಸ್ತ್ರವನು ಸಜ್ಜನರಿಗೊರೆದ"ವರೆಂದು ಕೊಂಡಾಡುತ್ತಾರೆ. "ಗಂಡಕ್ರಿಯ" ಕೃತಿಯಲ್ಲಿ ವಾದಿರಾಜರು ಅನ್ಯಮತಸಾರವೆಲ್ಲ ತಿಳಿಯ ಹೇಳಿ ಅವುಗಳಲ್ಲಿನ ಕಂದನ್ನತ್ರಿ ಹಿಡಿದು ಅನಂತರ ತಮ್ಮ ಮಧ್ವಮತವನ್ನು ಸಮರ್ಥಿಸುತ್ತಾರೆ. "ಸ್ಯಾದೆಂಬವಾದಿನಾವೆಂಬ ಪ್ರಮೇಯವ" ಜೈನರ ಸ್ಯಾದ್ವಾದ ತತ್ತ್ವ ನಿರಾಕರಿಸಿ, ಚಾರ್ವಾಕ, ಬೌದ್ಧ ಮತಗಳನ್ನು ಸೂಕ್ಷ್ಮವಾಗಿ ಖಂಡಿಸುತ್ತ, ಅದ್ವೈತವನ್ನು ಸ್ವಲ್ಪ ವಿವರವಾಗಿಯೆ ಖಂಡಿಸುತ್ತಾರೆ :

ಅದ್ವೈತವಾದಿ ನಿನ್ನವಿದ್ವನ್ನತದಲ್ಲಿ
ಬುದ್ಧದೇವಗೆ ಪೆಸರಿದ್ದ ಕಾಮಾದಿಂದ
ಆದ್ವಯವಾದಿಯೆಂದು
ರಾದ್ಧಾಂತದ ಗುರುಶುದ್ಧೋದನ ಮುನಿ ಪೇ
ಳಿದ ಬುದ್ಧ ಮತವ

-ಎಂದು ಅದ್ವೈತ, ಬೌದ್ಧ ಮತವೆರಡನ್ನೂ ಜರಿದು, "ಹಯವದನನೊಬ್ಬನೆ ಸರ್ವಾಗ್ರೇಸರ ಕಾಣಿರೊ" ಎನ್ನುತ್ತ, ಶ್ರುತಿ ಪ್ರಮಾಣ್ಯ ಕೂಡ ನೀಡಿ ಹರಿಪಾರಮ್ಯ ಸಮರ್ಥಿಸುತ್ತಾರೆ". "ಮೂರ್ತಿಯ ನೋಡಲು ವಿಶ್ವತಶ್ಚಕ್ಷ ಎಂಬಶ್ರುತಿಯರ್ಥವಾದ

ಶ್ರೀಹರಿಯು ಪರಮ ವ್ಯಾಪ್ತಿಯು ನೋಡಲಾಗಿ ತತ್ವವಿಷ್ಣುಷ್ಟು ಅಷ್ಟಷ್ಟರಲ್ಲಿ ವೇದೋಕ್ತಿಯಿಂದಲಿ ಸರ್ವವ್ಯಾಪ್ತ ನಾರಾಯಣಸ್ಥಿತ ಎಂಬ ಶ್ರುತಿ ನೀತಿಗೆ ಪ್ರತಿಯಿಲ್ಲ"ವೆಂದೂ ದೃಢೀಕರಿಸುತ್ತಾರೆ. ಇದೇ ರೀತಿಯ ಅದ್ವೈತ ಖಂಡನ ಉಳಿದ ಹರಿದಾಸರಲ್ಲೂ ಮುಂದುವರಿದಿದೆ. ಪುರಂದರದಾಸರು "ಕರವ ಮುಗಿದಾವು ಮುಖ್ಯಪ್ರಾಣ" ನೆಂದು ಮುಖ್ಯಪ್ರಾಣದೇವರನ್ನು ಕೊಂಡಾಡುತ್ತ, "ಇಲ್ಲಿ ಮಾತ್ರ ಭೇದ ಅಲ್ಲಿ ಒಂದೇ ಎಂಬ ಕ್ಷುಲ್ಲಕರನು ಹಿಡಿದು ಹುಲ್ಲುಮುರಿಯೆಂದು" "ಜೀವೇಶ್ವರೈಕ್ಯ ಜಗತು ಮಿಥ್ಯಾ ಎಂದು ಈ ವಿಧವೆಲುವ ಮಾಯಿಗಳ ನಳಿಯೆಂದು" ಕೇಳಿ ಕೊಂಡನೆಂದು ಸಾರುವಲ್ಲಿ ಅದ್ವೈತ ಖಂಡನ ಎದ್ದು ಕಾಣುತ್ತದೆ. ಅವರದ್ದೆ ಇನ್ನೊಂದು ರಚನೆ "ಎರಡೂ ಒಂದಾಗದು ರಂಗ: ಎರಡು ಒಂದಾಗದು ಎಂದೆಂದಿಗು ರಂಗ" ದ್ವಾಸುಪರ್ಣಾ ಉಪನಿಷದ್ವಾಕ್ಯ-ಅದ್ವೈತವನ್ನು ಖಂಡಿಸುವ ಕೀರ್ತನೆ. ವಿಜಯದಾಸರಲ್ಲಿಯಂತೂ ದಾಸಸಾಹಿತ್ಯದಲ್ಲಿ ಶಾಸ್ತ್ರ ನಿಷ್ಠತೆಯು ಹೆಚ್ಚಳವಾದ್ದರಿಂದ, ಅದ್ವೈತ ಖಂಡನವೂ ಅಷ್ಟೆ ಖಂಡತುಂಡ ರೀತಿಯದಾಗಿದೆ. ಅವರ ಒಂದು ಉಗಾಭೋಗ ಹೀಗಿದೆ :

ನಾನು ನೀನು ಎಂದು ಒಮ್ಮೆಗಾದರು ನರ ["ಎನ್ನ ಹೃತ್ಕಮಲದ ಚಂದ್ರ
ಅನಂತ ಜನುಮದಲ್ಲಿ ನುಡಿದನಾಗೆ ಅದ್ವೈತ ಮತಾರಣ್ಯ ದಾವಾನಲು
ಶ್ವಾನಸೂಕರ ದುರ್ಯೋನಿಯಲ್ಲಿ ಪುಟ್ಟಿ ಗಣಸಾಂದ್ರ" ಇದು ವಿಜಯ
ಮಾನವಾಧಮನಾಗಿ ಕೆಟ್ಟ ಕಡೆಗೆ ದಾಸರು ಮಧ್ವಾಚಾರ್ಯರನ್ನು
ನಾನಾ ಸಂಕಟಪಟ್ಟು ಹೀನ ಭೋಜನವಮಾಡಿ ಬಣ್ಣಿಸುವ ರೀತಿ]
ತಾನಿಳಿವ ನಿತ್ಯ ನರಕದಲ್ಲಿ
ಅನಂತ ಜನುಮದೊಳು ಸೇವಕನೆಂದೆನೆ

ತಾನೊಲಿದು ಈವ ವಿಜಯವಿಠಲ ಗತಿ-ವಾಯುದೇವರ ಅವತಾರತ್ರಯಗಳಾದ ಹನುಮ, ಭೀಮ, ಮಧ್ವರ ಸ್ತುತಿ ಮಾಡುತ್ತ "ಅದ್ವೈತಮತ ಕೋಲಾಹಲನ್ನ : ವೇದ ಸಿದ್ಧಾಂತ ಶಂಭಗುಣ ಶೀಲನ್ನ" ಎಂದು ಆಚಾರ್ಯರ ಪ್ರಶಂಸೆ ಮಾಡುತ್ತಾರೆ. ವಿಜಯದಾಸರ ಶಿಷ್ಯರಾದ ಗೋಪಾಲದಾಸರ ಕೆಲವು ಕೃತಿಗಳು ಅದ್ವೈತವನ್ನು ಖಂಡಿಸುವ ರೀತಿ ಒರಟೆಂದು ಅನ್ನಿಸಿದರೂ ಅವು ಹರಿದಾಸರ ಅಭಿಮತವೆಂದು ಮಾತ್ರ ಪರಿಗಣಿಸಬೇಕಾಗುತ್ತದಷ್ಟೆ. (ಆದರೆ ಇಲ್ಲಿ ನಮಗೆ ಒಂದು ಅನುಮಾನ ಕೃತಿ ಸಂಪಾದನ ವಿಚಾರದಲ್ಲಿ ಬರುತ್ತದೆ. ಪುರಂದರದಾಸರಲ್ಲಿ ಬರುವ "ಕರವ ಮುಗಿದ ಮುಖ್ಯ ಪ್ರಾಣ" ಎಂಬ ಕೃತಿ "ಗೋಪಾಲವಿಠಲ" ಅಂಕಿತದಲ್ಲಿಯೂ ಬಂದಿದೆ.)

ಮಧ್ವಮತವೆಂಬೊ ಅಬ್ಧಿಯಲಿ ಚಂದ್ರನು ಶುದ್ಧವಿಪಿ ಶರಣಾರಿತ್ಯ
ಅದ್ವೈತಮತ ಕಾಲಮೊದ್ದು ಸದ್ಭಕ್ತರಿಗೆ ॥ ತಿದ್ದಿ ಅಮೃತವುಣಿಸಿದ

ಎಂದೂ ಆಚಾರ್ಯ ಮಧ್ವರ ಸ್ತುತಿಸುತ್ತ ಅದ್ವೈತ ಖಂಡಿಸಿದ್ದಾರೆ. ಗುರುಚರಣವನ್ನು ಸ್ಮರಿಸುತ್ತ

ಶುದ್ಧಾದ ಸಂಪ್ರದಾಯತನನ್ನು ತತ್ವ ತಿದ್ದಿ ಮುದ್ದೆ ಮಾಡಿದಾತನ್ನ
ಅದ್ವೈತ ಮತ ಭೂಷಿತನ್ನ .........ಪರಮತಗಳನ್ನು ಖಂಡ್ರಿಸಿದನ್ನು ॥

ಎಂದು ಕೊಂಡಾಡುತ್ತಾರೆ. ಅದ್ವೈತ ಖಂಡನ ಹೀಗೆ ಹರಿದಾಸರಲ್ಲಿ ಒಂದೇ ಸವ ಮುಂದರಿದು ಬಂದಂತೆ, ಅವರು ತಾವು ಪ್ರವಾಸಗೈದು ಕಂಡ ಕ್ಷೇತ್ರ-ಭಗವದ್ರೂಪಗ ವರ್ಣನೆಯೂ ಅಷ್ಟೇ ಚೆನ್ನಾಗಿ ಒಡಮೂಡಿದೆ. ಶ್ರೀ ರಾಘವೇಂದ್ರತೀರ್ಥರು ಹರಿದಾಸ ಪಂಥವನ್ನು ಉತ್ತೇಜನಗೊಳಿಸಿ ಪೋಷಿಸಿದ ಅಗ್ರಗಣ್ಯರು. ಅವರ ಬೃಂದಾವನ ಸ್ಫೂರ್ತಿಯು ಅನೇಕ ಹರಿದಾಸರಿಗೆ ಚೈತನ್ಯದಾಯಿ ಆಯಿತು. ಹಾಗೂ ವೈಷ್ಣವಧರ್ಮ ಪ್ರಸಾರ ಮುಗಿಲು ಮುಟ್ಟಿತು. ಅವರು ತಮ್ಮ ಪ್ರಸಾರ ಪ್ರತಿಭೆ, ವಾಕ್‌ಚಾತುರ್ಯ-ವ್ಯಕ್ತಿತೆಗಳಿಂದ ಅನೇಕ ಜನರನ್ನು ಆಕರ್ಷಿಸಿ, ಮಧ್ವಮತಾಭಿಮಾನಿಗಳಾಗಿ, ವೈಷ್ಣವ ರಾಗಿ ಪರಿವರ್ತಿಸಿದರೆಂದು ತಿಳಿದು ಬರುತ್ತದೆ.

ಕ್ಷೇತ್ರಗಳ ಭಗವದ್ರೂಪವರ್ಣನೆಯಂತೆಯೆ ವೈಷ್ಣವಧರ್ಮದ ಇನ್ನೊಂದು ವೈಶಿಷ್ಟ್ಯ, ಹರಿದಾಸರು ಮಾಡಿರುವ ಶ್ರೀಹರಿಯ ದಶಾವತಾರ ಸ್ತುತಿ ವೈವಿಧ್ಯ, ಅದರಲ್ಲೂ ಕೃಷ್ಣನ ಲೀಲಾ ವಿನೋದಗಳ ಚಿತ್ರಣ. ಪ್ರಸನ್ನ ವೆಂಕಟದಾಸರಂತೂ ಇಡಿ ಭಾಗವತಕ್ಕೆ ಕನ್ನಡದಲ್ಲಿ ತಿಳಿಸಿದ್ದಾರೆ. ಶ್ರೀಕೃಷ್ಣ ವಿರಹ ತಾಳದ ಭ್ರಮರಗೀತೆಗಳನ್ನು ಹರಿದಾಸಕೂಟದ ಆದ್ಯ ಪ್ರವರ್ತಕರಾದ ಶ್ರೀಪಾದರಾಜರೂ, ವೇಣುಗೀತೆಗಳನ್ನು ವ್ಯಾಸರಾಜರು, ಪುರಂದರದಾಸರು, ಕನಕದಾಸರು, ಪ್ರಸನ್ನ ವೆಂಕಟದಾಸರು, ಹೀಗೆ ಅನೇಕ ಹರಿದಾಸರು ವಿಧ ವಿಧ ರೀತಿಯಲ್ಲಿ ತಮ್ಮ ತಮ್ಮ ಕವಿ ಹೃದಯ ತೋಚಿದಂತೆ ಬಣ್ಣಿಸಿರುವುದು ದಾಸಸಾಹಿತ್ಯದ ವೈವಿಧ್ಯ-ಸ್ವಂತಿಕೆಗೂ ನಿದರ್ಶನವಾಗುತ್ತದೆ. ದಶಾವತಾರ ಸ್ತುತಿ ಹರಿದಾಸರಿಗೆ ಪ್ರಿಯವಾದದ್ದು. ಅವರು ನಂಬಿ, ನೆಚ್ಚಿದ ಶ್ರೀಹರಿಯು ವಿಷ್ಣುವಿನ ದಶಾವತಾರ ಸ್ತುತಿಸುವುದು ಅವರಿಗೆ ಪರಮಪ್ರಿಯ ಕಾವ್ಯ. ಹಾಗೂ ಎಲ್ಲ ಹರಿದಾಸರಲ್ಲಿಯೂ ಇದು ಸಾಮಾನ್ಯವಾಗಿ ಕಾಣಬಂದಿರುವುದನ್ನು ಗಮನಿಸಿದರೆ, ಮಹಾಕಾವ್ಯ ಲಕ್ಷಣಗಳಂತೆ ಇದನ್ನು ತಮ್ಮ ಕೃತಿಗಳ ಲಕ್ಷಣ, ಕರ್ತವ್ಯ ಆಗಿ ಭಾವಿಸಿದ್ದಾರೆ ಎನ್ನಿಸಿದರೂ ಅವರವರ ಭಕ್ತಿ ವೈವಿಧ್ಯ ಅಷ್ಟಷ್ಟು ಮಟ್ಟಿಗೆ ಪ್ರಕಟ ಆಗುತ್ತದೆ. ಇವುಗಳಲ್ಲಿ ದಶಾವತಾರ ವೈವಿಧ್ಯವನ್ನು ಮೊದಲು ಗಮನಿಸಬಹುದು.

ಅವತಾರ ಎಂಬುದು ಯಥಾರ್ಥವಾದದ್ದು. ''ಅನಂತ''ನೆಂದ ಹೆಸರಾದ ಭಗವಂತನಿಗೆ ಇರುವ ಅನಂತರೂಪ, ಗುಣಕ್ರಿಯೆ, ಎಲ್ಲ ವೇದೋಕ್ತ ಶ್ರುತಿಗಳಲ್ಲಿ ಬಂದಿವೆ. ''ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್'' ಎಂದೆಪುರುಷಸೂಕ್ತ ಪರಮಾತ್ಮನ ಅನಂತತ್ವವನ್ನು ಪ್ರತಿಪಾದಿಸುತ್ತದೆ. ಶ್ರೀಹರಿಯ ಪ್ರಥಮ ದಾಸಿ ಲಕ್ಷ್ಮೀದೇವಿ. ಆಕೆಯು ದೇಶ ಕಾಲತಃ ಶ್ರೀಹರಿಗೆ ''ಸಮನಾ'' ಎಂಬಂತೆ ಸಮನಾಗಿರುವವಳು. ಆದರೆ ಹರಿಯ ಮಹಿಮೆ ''ಯಸ್ಯಾಂತಂ ನವಿದುಃ ಸುರಾಸುರಗಣಾ'' ಎಂದು ಗೀತೆಯ ನಾಂದೀಶ್ಲೋಕದಲ್ಲಿ ಬಂದಂತೆ.

ಭಗವಂತನ ರೂಪಗಳಲ್ಲಿ ಅವನ ದಶಾವತಾರ ವಿಶೇಷ. ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಭಾರ್ಗವರಾಮ, ಶ್ರೀರಾಮ, ಶ್ರೀಕೃಷ್ಣ, ಬುದ್ಧ, ಕಲ್ಕಿ ಎಂಬುದೇ ದಶಾವತಾರ ವರ್ಣನೆ ಹರಿದಾಸರ ಕೃತಿಗಳಲ್ಲಿ ಸಾಮಾನ್ಯವಾದರೂ ದಾಸಸಾಹಿತ್ಯದ ಆದ್ಯ ಶ್ರೀಪಾದರಾಜರು ಒಂದೆಡೆ ಸ್ವಲ್ಪ ಪ್ರಸ್ತಾಪಿಸುತ್ತಾರೆ : ಜೋಗುಳದ ಹಾಡೊಂದರಲ್ಲಿ, ಶ್ರೀರಂಗವಿಠಲನಿಗೆ ಜೋಗುಳ ಹಾಡುತ್ತ, ಅವನ ಗುಣವರ್ಣನೆಯಲ್ಲಿ ದಶಾವತಾರ ನಿರೂಪಣೆ ತಂದಿರುವ ಪರಿ ಸರಳ, ಚೆಂದ. "ಸರ್ವಶಾಸ್ತ್ರ ನಿಷ್ಣ, ಭಾವೀಸಮೀರಮಾನ, ವಾದೀಭಸಿಂಹ, ಸುಮತಪ್ರತಿಷ್ಠಿತ" ಎಂದೆಲ್ಲ ಪ್ರಶಂಸೆಗೆ ಪಾತ್ರರಾಗುವ ಸಹಜ ವ್ಯಕ್ತಿತ್ವವನ್ನು ಹೊಂದಿರುವ ಶ್ರೀವಾದಿರಾಜರು ಬಣ್ಣಿಸುವ ದಶಾವತಾರ ಸ್ತುತಿಗಳನೇಕ. ಅವುಗಳೊಂದೊದರಲ್ಲಿ ವೈವಿಧ್ಯ, ವಿಶಿಷ್ಟತೆ ಇದೆ. ಈಶ್ವರನನ್ನು ಕುರಿತು ರಚಿಸಿರುವ "ಧವಳ ಗಂಗೆಯ ಗಂಗಾಧರ ಮಹಾಲಿಂಗ ಮಾಧವನ ತೋರಿಸಯ್ಯ ಗುರುಕುಲೋತ್ತುಂಗ" ಎಂಬ ಕೃತಿಯಲ್ಲಿ ಅವರು ಈಶ್ವರನ ಮೂಲಕ ತಮಗೆ ಶ್ರೀಹರಿಕೃಪೆ, ಆಶೀರ್ವಚನ ದೊರಕಿಸಿ ಕೊಡಲು ಪ್ರಾರ್ಥಿಸುತ್ತಾರೆ. ಹಾಗೆಯೇ ದಶಾವತಾರ ನಿರೂಪಣದಲ್ಲಿ ವಾದಿರಾಜರು ಅನುಸರಿಸುವ ವಿಧಾನ ಗಮನಾರ್ಹ. ಒಂದು ಕ್ಷಣವೂ ಶ್ರೀಹರಿಯನ್ನು ಬಿಟ್ಟಗಲದೆ ಅವನ ಸೇವೆ ನಡೆಸುವ ಶ್ರೀಲಕ್ಷ್ಮೀದೇವಿ, ತನ್ನ ಪತಿಗೆ "ಉರುಟಣೆ" (ಮದುವೆಶಾಸ್ತ್ರಗಳಲ್ಲೊಂದು) ಮಾಡುವ ಸಂದರ್ಭದಲ್ಲಿ ಆತನ ಹಿರಿಮೆ, ಮಹತಿ ಕುರಿತು ಹಾಡಿ, ಹೊಗಳುತ್ತ ಒಂದೊಂದು ಅವತಾರವನ್ನೂ ಪ್ರಸ್ತಾಪಿಸುತ್ತಾಳೆ :

ಮಚ್ಛ ಕಚ್ಛಪ ಕಿರನೆ । ಕೇಸರಿಯುಂದದ ಮುಖನೆ ।
ಸ್ವಚ್ಛಮುಖವ ತೋರೈ ಅರಿಸಿನ ಹಚ್ಚುವೆನು ॥

ಎಂದು ಹಾಡುವಲ್ಲಿ ಒಂದೇ ನುಡಿಯಲ್ಲಿ ಮೂರು ಅವತಾರಗಳ ಉಲ್ಲೇಖವಿದೆ.

ಇದರಂತೆಯೆ

ವೇದವ ತಂದು ಬೆಟ್ಟವ ಹೊತ್ತು ಧರಣಿಯ
ಸಾಧಿಸಿ ಕಂಬದಿ ಬಂದವಗೆ ॥
ಭೂದಾನವಬೇಡಿ ನೃಪರ ಸಂಹರಿಸಿದ
ಆದಿಮೂರುತಿಗಾರತಿ ಎತ್ತಿರೆ ॥

ಎಂಬ ಕೃತಿಯ ಸಾಲುಗಳಲ್ಲಿ ಶ್ರೀಹರಿ ದಶಾವತಾರದಲ್ಲೆಸಗಿದ ಕಾರ್ಯಗಳ-ಉದ್ದೇಶಗಳ ಬಣ್ಣಿಸುವಿಕೆಯಿದೆ. ಇಲ್ಲಿ ಉಕ್ತಗೊಂಡಿರುವ ಮತ್ಸ್ಯಾವತಾರ, ಕೂರ್ಮಾವತಾರ, ವರಾಹಾವತಾರ, ನರಸಿಂಹಾವತಾರ, ವಾಮನಾವತಾರ, ಮತ್ತು ಪರಶುರಾಮರ

ಅವತಾರಗಳನ್ನು ಗಮನಿಸಿದಾಗ ಶ್ರೀವಾದಿರಾಜರು ಅನುಸರಿಸುವ ಸರಳ ಸಂಕ್ಷಿಪ್ತ ವಿಧಾನ, ಮನಮೆಚ್ಚಿ ತಲೆದೂಗಿಸುತ್ತದೆ. ಇದೇ ಸಂಕ್ಷಿಪ್ತತೆ "ಎನಗೆ ನೀ ಬಂಧು ಎಂದೆಂದು ದಯಾ ಸಿಂಧು" ಎಂಬ ಕೀರ್ತನೆಯಲ್ಲೂ ರಾಜರು ಅನುಸರಿಸಿದ್ದಾರೆ. ಜನ ಪದ ಸೊಗಡಿರುವ ಕೃತಿ "ಏನೆಂದು ಸ್ತುತಿಸಲಿ ದೇವ ರಂಗಯ್ಯ ನಿನ್ನ ಜಾಣತನವ ನೀನೆ ಬಲ್ಲೆ ಶ್ರೀರಂಗಯ್ಯ" ಎಂಬಲ್ಲಿ "ಉಭಯಕಾವೇರಿ" ವಾಸನಾದ (ಶ್ರೀರಂಗಕ್ಷೇತ್ರ) ಶ್ರೀರಂಗನಾಥನನ್ನು ಸ್ತುತಿಸುತ್ತ "ಬಲಿಯನ್ನು ವಂಚಿಸಿದೆಥ ರಂಗಯ್ಯ ನೀನು ನೆಲವ ಮೂರಡಿ ಮಾಡ್ದೆ ರಂಗಯ್ಯ" ಎಂದು ಆಡು ಭಾಷೆಯಲ್ಲಿ ಬಣ್ಣಿಸುತ್ತಾರೆ. ಶ್ರೀಕೃಷ್ಣ-ಸತ್ಯಭಾಮೆಯರ ಸಂಭಾಷಣೆಯಲ್ಲಿಯೇ ಶ್ರೀವಾದಿರಾಜರು ಹತ್ತವತಾರಗಳ ನಿಂದಸ್ತುತಿ ನಿರೂಪಿಸಿರುವ ವಿಧಾನವಂತೂ ಸಂಸ್ಕೃತದಲ್ಲಿಯಂತೆಯೆ ಕನ್ನಡ ನುಡಿಯನ್ನವರು ಹೇಗೆ ಹೇಗೆ ಬಳಸಬಲ್ಲರು ಎಂಬುದಕ್ಕೆ ನಿದರ್ಶನ.

ವಿರಂಗಧಾಮ ರಂಗ ವಿರಂಗಧಾಮ ॥ಪ॥
ಸಾರುವ ಮೈಯವನತ್ತ ಸಾರು ಮುಟ್ಟದಿರೊ ಎನ್ನ
ದೂರನಿಲ್ಲು ತರವಲ್ಲ ವಿರಂಗಧಾಮ ।
ಸಾರ ಶ್ರುತಿಗಳ ತಂದು ವಾರಿಜಸಂಭವಗಿತ್ತೆ ।
ಧೀರಮತ್ಸ್ಯರೂಪ ಕಾಣೆ ಎಲೆ ಸತ್ಯಭಾಮೆ ॥ ೧ ॥

ಎನ್ನುವ ಈ ಕೃತಿ ಒಂದು ನೀಳ್ಗವನ.

ದೊರೆತನವುಳ್ಳವನೆಂದು ಮರುಳುಗೊಂಡೆ ನಾ ನಿನಗೆ
ತಿರುಕನೆಂಬೋದರಿಯದಾದೆನೊ ವಿರಂಗಧಾಮ
ತರಳೆಸುರರಿಗಾಗಿ ಬಲಿಯ ತುಳಿದು ಪಾತಾಳಕೊತ್ತಿದ
ಗರುವ ವಾಮನ ಕಾಣೆ ಎಲೆ ಸತ್ಯಭಾಮೆ ॥

ಎಂಬಲ್ಲಿ ವಾಮನನ ನಿಂದೆ-ಸ್ತುತಿ ಎರಡೂ ಅಡಕಗೊಂಡಿವೆ. ಇದಕ್ಕಿಂತ ಯಶೋದೆ ಮಾತೃವಾತ್ಸಲ್ಯ, ಪ್ರೀತಿಪ್ರೇಮಗಳಿಂದ ಶ್ರೀಕೃಷ್ಣನ ಪುಟ್ಟ ರೂಪವನ್ನೂ ಆಡಿಸುತ್ತ, ಊಡಿಸುತ್ತ, ಬಣ್ಣಿಸುವ ದಶಾವತಾರ ತಂತ್ರ ವೈವಿಧ್ಯ-ಮನಸ್ಸನ್ನು ಸೆರೆಹಿಡಿಯುತ್ತದೆ:

ಕೇಳಲೊಲ್ಲನೆ ಎನ್ನ ಮಾತನು ರಂಗ ॥ಪ॥
ಕಾಳೀಮರ್ದನ ಕೃಷ್ಣಗೆ ಹೇಳೆ ಗೋಪ್ಯಮ್ಮ ಬುದ್ಧಿ ॥ಅ. ಪ.॥
ಬಿಟ್ಟ ಕಣ್ಣನು ಮುಚ್ಚಲೊಲ್ಲನೆ ದೊಡ್ಡ
ಬೆಟ್ಟಕ್ಕೆ ಬೆನ್ನೊತ್ತಿ ನಿಂದನೆ ಬಲು

ಸಿಟ್ಟಲಿ ಕೋರೆಹಲ್ಲ ಕಿರಿದನೆ ಈಗ
ಗಟ್ಟಿ ಉಕ್ಕಿನ ಕಂಬವೊಡೆದು ಬಂದನೆ ರಂಗ ॥ ೧ ॥

ಮೂರಡಿಭೂಮಿ ಬೇಡಿಬಂದನೆ ತಾಯ
ಶಿರವ ಕಡಿಯಲಿಕೆ ಕೊಡಲಿಕೊಂಡನೆ
ನಾರಸೀರೆಯನುಟ್ಟು ಕೊಂಡನೆ ಬಲು
ಚೋರತನದಲಿ ಹರವಿಹಾಲ ಕುಡಿದನೆ ರಂಗ ॥ ೨ ॥

ಬತ್ತಲೆನಾರಿಯರ ಅಪ್ಪಿದ ಹೋಗಿ
ಉತ್ತಮ ಅಶ್ವವ ಹತ್ತಿದ
ಹತ್ತವತಾರವ ತೋರಿದ ದಿಟ್ಟ
ಮೂರ್ತಿನಮ್ಮ ಚೆಲುವ ಶ್ರೀಹಯವದನ ॥ ೩ ॥

ಇದರಂತೆಯೇ ಲಕ್ಷ್ಮೀದೇವಿಯನ್ನು "ಹ್ಯಾಂಗೆ ಮೆಚ್ಚಿದೆ ಹೆಂಗಳರನ್ನೆ ಹಲವು ರೂಪ ತಾಳಿದವನ" ಎಂಬ ಕೃತಿಯಲ್ಲಿ ಪತ್ತವತಾರದ ಉದ್ದೇಶ ತಿಳಿಸಂಬ ವಾದಿರಾಜರು, ದಶಾವತಾರ ಓರಿಮೆ ಕುರಿತೆ ಅನೇಕ ಕೃತಿ ರಚಿಸಿದ್ದಾರೆ. ಇಲ್ಲೆಲ್ಲ ಶ್ರೀವಾದಿರಾಜರ ಕನ್ನಡ ಭಾಷಾ ಪ್ರಭುತ್ವ ಸಹ ತಿಳಿಯ ಬರುತ್ತದೆ. ಒಂದು ಉಗಾಭೋಗ, ಸಂಸ್ಕೃತ ದಲ್ಲಿ ಅಶ್ವಧಾಟಿಯಲ್ಲಿ ಮುಂದರಿವ ಗತಿಯುಳ್ಳ ಕೃತಿಬಂಧ-ಬಂಧುರವೂ ಆಗಿವೆ.

ಪುರಂದರದಾಸರ-ಕನಕದಾಸರ ದಶಾವತಾರಸ್ತುತಿ, ಕೀರ್ತನೆಗಳಲ್ಲಿ ಸರಳತೆ, ಕನಕ ದಾಸರಿಗೆ ಪ್ರಿಯ ಆದ ಜಟಿಲತೆಯೂ ಕಾಣಬರುತ್ತದೆ. ಕನಕದಾಸರ "ಈಶ ನಿನ್ನ ಚರಣ ಭಜನೆ ಆಸೆಯಿಂದ ಮಾಡುವೆನು। ದೋಷರಾಶಿ ನಾಶಮಾಡೋ ಶ್ರೀಶ ಕೇಶವಾ" ಎಂಬ ಇಪ್ಪತ್ತನಾಲ್ಕು ನಾಮಾವಳಿಗಳೊಳಗೊಂಡ ನಿಡಿದಾದ ಕೃತಿಯಲ್ಲಿ ದಶಾವತಾರವು ಪ್ರಸ್ತಾಪಿತ ಆಗಿದೆ. "ಕೇಳಲೊಲ್ಲನೆ ಎನ್ನ ಮಾತನು ರಂಗ" ಎಂಬ ಪುರಂದರದಾಸರ ಕೀರ್ತನೆ, ವಾದಿರಾಜರ ಕೃತಿ ವಿಭಾಗದ, ಪಡಿನೆಳಲೆನ್ನಿಸುತ್ತದೆ. ಇದ ರಂತೆಯೇ ಶ್ರೀವಿಷ್ಣು ದಶಾವತಾರ ಸ್ತೋತ್ರದ ನಿರೂಪಣೆಯ ವೈವಿಧ್ಯ ಸಂಕ್ಷಿಪ್ತ, ಹಾಗೂ ನೇರವಾದದ್ದಾಗಿದೆ. ಮಂಗಳ ಹಾಡುವ ಗೀತೆಯಲ್ಲಂತೂ ಪುರಂದರರ ಸರಳ ಕನ್ನಡ ನುಡಿ-ಸಾಮಾನ್ಯರನ್ನೂ ಸೆಳೆದುಕೊಂಡು, ಹರಿದಾಸರಾಗಿಸುತ್ತದೆ.

ನಿಗಮವ ತಂದ ಮತ್ಸ್ಯಾವತಾರಗೆ । ಆಗವ ಬೆನ್ನಲಿ ಪೊತ್ತ ಕೂರ್ಮನಿಗೆ
ಜಗವನುದ್ಧರಿಸಿದ ವರಹನಿಗೆ ಚೆಕ್ಕ । ಮಗುವನ ಕಾಯ್ದ ಮುದ್ದು ನರಸಿಂಹಗೇ ॥ ೧ ॥

ಭೂಮಿಯ ದಾನವ ಬೇಡಿದಗೆ । ಆ ಮಹಾ ಅಸುರರ ಗೆಲಿದವಗೆ
ರಾಮಚಂದ್ರನೆಂಬ ಸ್ವಾಮಿಗೆ ಸತ್ಕ । ಭಾಮೆಯ ಅರಸ ಗೋಪಾಲಕೃಷ್ಣಗೆ ॥ ೨ ॥

ಬತ್ತಲೆ ನಿಂತಿದ್ದ ಬೌದ್ಧನಿಗೆ । ಉತ್ತಮ ಹಯವನೇರಿದ ಕಲ್ಕಿಗೆ
ಹತ್ತವತಾರದಿ ಭಕ್ತರ ಸಲಹಿದ । ಕರ್ತ ಶ್ರೀಪುರಂದರವಿಠಲನಿಗೆ ॥ ೩ ॥

॥ ಮಂಗಳಂ ಜಯ ಮಂಗಳಂ ॥

"ಏನು ಮೆಚ್ಚಿದೆಲೆ ಹೆಣ್ಣೆ, ಏನು ಮರುಳಾದೆ" ಎಂಬ ಕೀರ್ತನೆಯಲ್ಲಿ ದಾಸರು ನಿಂದಾಸ್ತುತಿಯ ಜತೆ ಅವತಾರ ಸ್ವರೂಪವನ್ನೂ ತಿಳಿಸುತ್ತಾರೆ.

ಗಂಭೀರ ಪುರುಷ ನಿವನೆಂಬೆನೆ ದಿಗಂಬರ । ಅಂಬರದೊಳಗೆ ಕಂದುರೆಯ ಕಟಿಸುವ
ಅಂಬುಜಾಕ್ಷ ಸಿರಿಪುರಂದರ ವಿಠಲಗೆ ಸಂಭ್ರಮದಿ ನೀಮೆಚ್ಚಿಮದುವ್ಯಾದೆಯಲ್ಲೇ ॥

ಎಂಬಲ್ಲಿ ಉತ್ತರ ಕನ್ನಡದ ಆಡುನುಡಿ ಸೊಗಸನ್ನು ಕಾಣಬಹುದು. ದಶಾವತಾರ ವರ್ಣನೆಯಲ್ಲದೆ ಶ್ರೀಹರಿಯ ಕೇಶವಾದಿ ಇಪ್ಪತ್ತನಾಲ್ಕು ನಾಮಗಳಲ್ಲಿ ಸ್ತುತಿ, ಜಗನ್ನಾಥದಾಸರದು. ಅವರ ಪಾಂಡಿತ್ಯಕ್ಕೆ ಸಾಟಿಯೆಂಬಂತಿದೆ :

ಶ್ರೀಮತ್ಸ್ಯ ಕೂರ್ಮ ಭೂವರಾಹ ನರಸಿಂಹ ದಧಿ
ವಾಮನ ತ್ರಿವಿಕ್ರಮಾ ಪರಶುರಾಮ ।
ರಾಮಯಾದವ ಕೃಷ್ಣ ಬೌದ್ಧ ಕಲ್ಕಿ ಹಯಾಸ್ಯ
ನಾಮ ತಾಪಸ ಉಪೇಂದ್ರ ಅಜಿತಾದಿಗೆಣಗಿನಮಿಪೆ ॥

ವಾಸುದೇವಾಚ್ಯುತಾನಂತ ಗೋವಿಂದ ಮಹಿ
ದಾಸ ಹರಿಹಂಸ ಧನ್ವಂತ್ರಿ ದತ್ತಾ ।
ವ್ಯಾಸ ಕಪಿಲಾತ್ಮಾನಂತರಾತ್ಮ ಪರಮಾತ್ಮ ಯ
ಜ್ಞೇಶ ವೈಕುಂಠ ನಾರಾಯಣದ್ವವತಾರಕಾನಮಿಪೆ ॥
ನಾರಾಯಣೀ ಋಷಭ ಐತರೇಯಾ ಶಿಂಶು
ಮಾರ ಯಜ್ಞ ಪ್ರಾಜ್ಞ ಸಂಕರ್ಷಣಾ
ಕ್ಷೀರಾಬ್ಧಿ ನಿಲಯ ಯಮನಂದನ ಕೃಷ್ಣ
ಹರಿನಾರಾಯಣಾದ್ಯಮಿತ ಧರ್ಮರೂಪಾದಿಗಳಿಗಾನಮಿಪೆ ॥

ಇಲ್ಲಿ ದಶಾವತಾರ ಅಲ್ಲದೆ, ಕಪಿಲ, ದತ್ತಾತ್ರೇಯ, "ಹಂಸರೂಪಿ ಪರಮಾತ್ಮ" (ಜ್ಞಾನ ಸ್ವರೂಪಿ) ಮುಂತಾದ ಅವತಾರ ರೂಪಗಳ ವರ್ಣನೆಯೂ ಬಂದಿರುವುದು ಗಮನಾರ್ಹ. ಮೋಹನದಾಸರ ಕೋಲುಪದ, ಪ್ರಸನ್ನ ವೆಂಕಟದಾಸರು ಹೀಗೆ ಸಾಮಾನ್ಯವಾಗಿ ಹರಿದಾಸರೆಲ್ಲ ಶ್ರೀಹರಿಯ ದಶಾವತಾರ ಕೊಂಡಾಡಿದ್ದಾರೆ. ವ್ಯಾಸರಾಯರಲ್ಲಿಯಂತೂ ಮಧುರಭಾವ ಭಕ್ತಿಯ ಮಾಧ್ಯಮದ ಮೂಲಕ ದಶಾವತಾರ ಬಣ್ಣಿಸಿರುವುದು ಅವರ ಕೃಷ್ಣ ಭಕ್ತಿಯ ಪ್ರತೀಕವೆಂದೇ ಹೇಳಬೇಕು. ಅದೇ ರೀತಿ ಕನಕದಾಸರ ಒಂದು ಸಾಲು ಗಮನಾರ್ಹ :

ಕೆಂಗಣ್ಣು ವಿಷಾನವಾಗಿ ನಮ್ಮ ರಂಗ ಗುಗಾಡಿ ಸೋಮನ ಕೊಂದಾನಮ್ಮಾ
ಗುಂಗಾಡಿ ಸೋಮನ ಕೊಂದು ವೇದವ ಬಂಗಾರದೊಡಲಗಿತ್ತಾನಮ್ಮಾ

ಇಲ್ಲಿ "ಮ್ಮಾ ಮ್ಮಾ" ಎಂಬ ಪೋಕೆಯ ಕರೆವ ಸದ್ದು, ಜಾನಪದ ಸೊಗಸಂತರಿಸಂತ್ತದೆ. ಕನಕದಾಸರ ಕೇಶವ ನಾಮವಂತೂ ಸುಪ್ರಸಿದ್ಧ ಹಾಗೂ ಅನೇಕರ ನಿತ್ಯಸ್ತೋತ್ರ. ದಶಾವತಾರ ರೂಪಗಳಲ್ಲದೆ ನೃಸಿಂಹ, ಕೃಷ್ಣ, ರಾಮ, ಮೊದಲಾದ ವಿಶಿಷ್ಟ ಅವತಾರಗಳ ಹಾಗೂ ಆಯಾ ದೇವತಾ ಸ್ವರೂಪವು ಕೆಲವೆಡೆ ನೆಲೆನಿಂತು ಪೂಜೆಗೊಂಬ ವೈವಿಧ್ಯ ಕೂಡ ಅನೇಕ ಹರಿದಾಸರು ಭಕುತಿ ತುಂಬಿ ಹಾಡಿದ್ದಾರೆ. ಉದಾ : ತೊರವೆಯ ನರಸಿಂಹ, ಮಾನ್ವಿಯ ಪ್ರಾಣದೇವರು, ಹಂಪೆಯ ಯಂತ್ರೋದ್ಧಾರಕ ಪ್ರಾಣದೇವರು, ಪಂಢರಿಗೆಯ ವಿಠಲ, ಉಡುಪಿಯ ಕೃಷ್ಣ. ಹೀಗೆ ಕೃಷ್ಣ ಲೀಲೆಗಳಂತೂ ಪುರಂದರರ ಒಂದು ಪ್ರಪಂಚವೇ ಆಗಿಬಿಟ್ಟಿದೆ. ಕೃಷ್ಣನ ವಿನೋದ, ಆಟಪಾಟಗಳು, ಅದರಲ್ಲಡಗಿರುವ ಭಕ್ತಿ-ವಂಧುರಭಾವ-ವಿರಹ, ಶೃಂಗಾರ, ಅಲಂಕಾರ, ಎಲ್ಲವೂ ಇಡೀ ದಾಸಸಾಹಿತ್ಯ ಸಂಪದವನ್ನೆ ಶ್ರೀಮಂತಗೊಳಿಸಿವೆ. ಹರಿದಾಸರ ನಿಂದಾ ಸ್ತುತಿಗಳನ್ನು ಕುರಿತು ಹಿಂದೆಯೆ ಪ್ರಸ್ತಾಪಿಸಲಾಗಿದೆ. ಇವನ್ನು ವೈಷ್ಣವಧರ್ಮದ ಅವಲಂಬಿಗಳಾದ ಹರಿದಾಸರ ಒಂದು ವಿಶಿಷ್ಟ ರಚನೆ, ಒಂದು ವಿಶಿಷ್ಟ ಸಾಹಿತ್ಯಿಕ ಪ್ರಕಾರವೆಂತಲೂ ಕರೆಯಬಹುದು. ನಿಂದಾಸ್ತುತಿಯಲ್ಲಿ ಪರಮಾತ್ಮ-ಭಕ್ತರ ಸಲುಗೆ, ನೋವು ತೋಡಿಕೊಳ್ಳುವ ಸಲುಗೆ, ಆರ್ದ್ರತೆ, ಎಲ್ಲವೂ ವ್ಯಕ್ತಗೊಳ್ಳುತ್ತದೆ. "ಬಡ್ಡಿ ಕಾಸು ಸೇರಿಸಿ ಗಂಟುಕಟ್ಟುವ ಶ್ಯಾಸಕ್ತಿ ತಿಮ್ಮಪ್ಪ ನೀನೆ" ಎಂದು ಶ್ರೀವಾದಿರಾಜರು ನುಡಿದರೆ, ವಿಜಯದಾಸರು, "ತೊಳಸದಕ್ಕಿಯಂತಿಂಬ : ಕಿಲುಬು ತಳಿಗೆಯಲುಂಬ : ಕೊಳಗದಲಿ ಹಣಗಳನು ಅಳೆದುಕೊಂಬ : ಇಲ್ಲ ಕಾಸು ಎಂದು ಸುಳ್ಳು ಮಾತಾಡಿದರೆ! ಎಲ್ಲವನು ಕಸುಕೊಂಬ ಕಳ್ಳರೊಡೆಗೆ!!"ಎಂದೇ ಮಂಗಳ ಹಾಡಿದ್ದಾರೆ! ಪಂಢರಿಗೆಯ ವಿಠಲನಂತೂ ಹರಿದಾಸರ ಆರಾಧ್ಯದೈವ, ಅಂಕಿತ ಮೂರ್ತಿ. ಅವನ ಬಣ್ಣನೆಯಿಲ್ಲದ ದಾಸರ ಸ್ತುತಿ ಇಲ್ಲವೆಂದೆ ಹೇಳಬಹುದು. ಈ ರೀತಿಯ ಹರಿದಾಸರ ಧರ್ಮ-ವೈಷ್ಣವಧರ್ಮ-ಭಾಗವತ ಪ್ರಜ್ಞೆ-ಪೌರಾಣಿಕ ಪ್ರಜ್ಞೆ-ವಿವಿಧ ಭಗವತ್ಸ್ವರೂಪವರ್ಣನೆ ಇವೆಲ್ಲ ಕುರಿತ ಹೇಳಿಕೆ ಎಷ್ಟು ತಿಳಿಸಿದರೂ ಕಡಿಮೆಯೆ ಎಂದೆನಿಸುವುದರಿಂದ ಪುರಂದರದಾಸರ ಎರಡು ಸಾಲುಗಳಿಂದ ಈ ವೈವಿಧ್ಯ ಸ್ಪಷ್ಟೀಕರಿಸಿ ಮುಂದರಿಯಬಹುದೆಂದೆನ್ನಿಸುತ್ತದೆ :

ಹರಿನಾಮದರಗಿಣಿಯು ಹಾರುತಿದೆ ಜಗದಿ
ಪರಮ ಭಾಗವತರು ಬಲೆಯ ಬೀಸುವರು ॥ಪ॥
ಎಷ್ಟು ವರ್ಣಿಸಲಿ ನಾನೀ ಮುದ್ದು ಅರಗಿಣಿಯ
ಹೊಟ್ಟೆಯೊಳಗೀರೇಳು ಜಗವನಿಂಬಿಟ್ಟು ॥
ಸೃಷ್ಟೀಶ ಪುರಂದರವಿಠ್ಠಲನ ನೆನೆನೆನೆದು
ಮುಟ್ಟಿ ಭಜಿಸುವುದು ಈ ಮುದ್ದಿನರಗಿಣಿಯು ॥

## ಭಕ್ತಿ ಸ್ವರೂಪ, ವೈವಿಧ್ಯ

ಮಯ್ಯಾವೇಶ್ಯ ಮನೋಯೇ ಮಾಂ ನಿತ್ಯಯುಕ್ತಾ ಉಪಾಸತೇ
ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ಶ್ಲೋ. 2
ಯೇ ತು ಸರ್ವಾಣಿ ಕರ್ಮಾಣಿ ಮಯಿ ಸನ್ನಸ್ಯ ಮತ್ಪರಾ
ಅನನ್ಯೇನೈವಯೋಗೇನ ಮಾಂ ಧ್ಯಾಯಂತ ಉಪಾಸತೇ ಶ್ಲೋ. 6
ತೇಷಾಮಹು ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್
ಭವಾಮಿ [redacted] ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಂ ಶ್ಲೋ. 7
ಮಾಹಾತ್ಮ್ಯಜ್ಞಾನ ಪೂರ್ವಸ್ತು ಸುದೃಢಃ ಸರ್ವತೋಧಿಕಃ
ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನಚಾನ್ಯಥಾಃ -(ಮಧ್ವಾಚಾರ್ಯರು)

"ಭಕ್ತಿಯೋಗ"ವೆಂದೆ ಹೆಸರಿಸಿರುವ ಭಗವದ್ಗೀತೆಯ ಹನ್ನೆರಡನೆಯ ಅಧ್ಯಾಯದ ಮೂರು ಶ್ಲೋಕಗಳನ್ನು ಮೇಲೆ ಉದಾಹರಿಸುವುದರೊಂದಿಗೆ ದ್ವೈತತತ್ತ್ವ ಸಂಸ್ಥಾಪಕರಾದ ಮಧ್ವಾಚಾರ್ಯರು ತಮ್ಮ ಭಾರತ ತಾತ್ಪರ್ಯನಿರ್ಣಯ ವ್ಯಾಖ್ಯಾನದಲ್ಲಿ ಭಕ್ತಿಯನ್ನು ಕುರಿತು ನೀಡಿರುವ ನಿರೂಪಣೆಯನ್ನೂ ಉಲ್ಲೇಖಿಸಲಾಗಿದೆ. ಮೊದಲ ಮೂರು ಶ್ಲೋಕಗಳು ಭಕ್ತಿ-ಅದರ ಲಕ್ಷಣ ಕುರಿತು ಹೇಳಿರುವಂಥವು. 'ಯಾರು ನನ್ನಲ್ಲಿ ಮನಸ್ಸನ್ನು ನಿಲ್ಲಿಸಿ, ನಿತ್ಯಯುಕ್ತರಾಗಿ ಪರಮಶ್ರದ್ಧೆಯಿಂದ ಕೂಡಿದವರಾಗಿ ನನ್ನನ್ನು ಉಪಾಸನೆ ಮಾಡುತ್ತಾರೆಯೊ. ಅವರು ಯುಕ್ತತಮರೆಂದು ನನ್ನ ಅಭಿಮತ. ಯಾರು ಸಮಸ್ತ ಕರ್ಮಗಳನ್ನೂ ನನ್ನಲ್ಲಿ ಸಮರ್ಪಿಸಿ, ಅನನ್ಯ ಯೋಗದಿಂದ ನನ್ನನ್ನೆ ಧ್ಯಾನಿಸುತ್ತ ಉಪಾಸಿಸುವರೊ, ನನ್ನಲ್ಲಿ ಮನಸ್ಸುಳ್ಳ ಅಂಥವರನ್ನು ನಾನು ಮೃತ್ಯು ಸಂಸಾರಸಾಗರದಿಂದ (ಭವದಿಂದ) ಶೀಘ್ರವಾಗಿಯೆ ಉದ್ಧರಿಸುತ್ತೇನೆ. ನನ್ನಲ್ಲಿಯೆ ಮನಸ್ಸಿಡು, ನನ್ನಲ್ಲಿಯೆ ನಿನ್ನ ಬುದ್ಧಿಯಿರಿಸು. ನೀನು ನನ್ನಲ್ಲಿ ವಾಸಿಸುವೆ. ಸಂಶಯ ಬೇಡವಿದಕೆ' ಎಂದು ಗೀತೆ ನುಡಿಯುತ್ತದೆ. ಆನಂದತೀರ್ಥರಾದರೊ ಭಕ್ತಿಯ ವ್ಯಾಖ್ಯೆ ಮಾಡುತ್ತ ಅದರ ಸ್ವರೂಪ ಕುರಿತು ಘೋಷಿಸುತ್ತಾರೆ. ಮಾಹಾತ್ಮ್ಯಜ್ಞಾನ (ಶ್ರೀಹರಿಸರ್ವೋತ್ತಮನೆಂಬ ಜ್ಞಾನದಿಂದ ಹುಟ್ಟಿದ), ದೃಢ ಆದ, ಅಧಿಕ ಸ್ನೇಹ ಪ್ರೇಮವೇ ಭಕ್ತಿ. ಇದಿಲ್ಲದೆ ಮುಕ್ತಿಯೆಂಬುದು ಬೇರೆ ಇಲ್ಲ. ಮಧ್ವಾಚಾರ್ಯರ ಭಕ್ತಿ ಪಥದಲ್ಲಿ ಮುನ್ನಡೆದ ಶ್ರೀವ್ಯಾಸರಾಯರು ಹರಿದಾಸ ಪರಂಪರೆಯನ್ನು ಸಂಘಟಿಸಿದವರು, ಪ್ರಗತಿಶೀಲ ಮನೋಭಾವದವರು. ಶ್ರೀವ್ಯಾಸರಾಯರು ಉತ್ಕಟ ಭಾವುಕತೆಯಿಂದ ಹೀಗೆ ಹೇಳಿಕೊಂಡಿದಾರೆ :

ಸೇರಿದೆನು ಸೇರಿದೆನು ಜಗದೀಶನ
ಹರಿನಾಮಸ್ಮರಣೆಯನು ನುಡಿಯುತಿದೆ ಎನ್ನ ಜಿಹ್ವೆ
ಹರಿಭಕುತಿ ಸುಧೆಯ ಪಾನಂಗಳಿಂದಲಿ
ಹರಿಪ್ರೀತಿಯಾಗಿದೆ ನೋಡಿದರೆನ್ನ ದೇಹ
ಸಿರಿಕೃಷ್ಣರಾಯನ್ನ ಮನ ಮಂದಿರದಿ ಕಂಡೆ...

ಇಂಥ ಭಕ್ತಿ ಸಾಹಿತ್ಯವನ್ನು ಕನ್ನಡ ಸಾಹಿತ್ಯ ಪ್ರಕಾರವಾಗಿ ತಂದವರು ವಚನಕಾರರು ಹಾಗೂ ಹರಿದಾಸರು. ಭಕ್ತಿ ಇಬ್ಬರ ಸಮಾನ ಅಂಶ ಹಾಗೂ ಈ ಭಕ್ತಿಸಾಹಿತ್ಯ ವಿಶ್ವ ಸಂಸ್ಕೃತಿಗೇ ಒಂದು ಕೊಡುಗೆ.

ಭಕ್ತಿಯ ಸ್ವರೂಪ, ವೈವಿಧ್ಯ ಹರಿದಾಸರಲ್ಲಿನ ವಿವಿಧ ರೀತಿಯ ಭಕ್ತಿ ನಿರೂಪಣೆ, ವೈಷ್ಣವಧರ್ಮಕ್ಕೆ ಪೋಷಕವೆನಿಸಿರುವ ಪ್ರಯುಕ್ತ ಈ ವಿವಕ್ಷೆ ನಡೆಸಲಾಗಿದೆ.

## ಭಕ್ತಿ ಕುರಿತ ವಿವಿಧ ಕಾಣ್ಕೆ

ಎಲ್ಲರೂ ಸುಖದಿಂದಿರಲು ಬಯಸುತ್ತಾರೆ. ಇಡೀ ಜೀವಕೋಟಿಯ (ಮನುಷ್ಯನೂ ಸೇರಿದಂತೆ) ಉದ್ದೇಶ ಇದೇ ! ಹಾಗೂ ಸುಖದ ಸಾಧನೆಗಾಗಿ ಹಂಬಲಿಸುತ್ತದೆ, ಶ್ರಮಿಸುತ್ತದೆ, ತೊಳಲುತ್ತದೆ. ಆದರೆ, ಈ ಸುಖ ಪ್ರಮುಖವಾಗಿ ಇಲ್ಲಿಯದು. ಅಂದರೆ, ಇಹದ ಸುಖಕ್ಕೆ ಸಂಬಂಧಿಸಿದುದು. ತಾನು ಚೆನ್ನಾಗಿರಬೇಕು, ದುಡಿದು, ಬೇಕಾದದ್ದು ತಿಂದುಂಡು, ಒಡನಾಡಿ ಒಡನೋದಿ, ಸಂತೋಷಿಸಿ, ತಾನು ತನ್ನವರೆಂಬುದರಷ್ಟರಲ್ಲಿ ಮುಳುಗಿ ನಾದುವುದು, ಇತ್ಯಾದಿ. ಇದು, ಇಷ್ಟಕ್ಕೇ ಪರಿಮಿತ ಆದದ್ದು. ಇನ್ನೊಂದು ತೆರನಾದ ಸುಖವಿದೆ. ಸಂಪಾದಿಸಲು ಹಾಗಿರಲಿ, ಸಾಧಿಸಲೂ ಕಷ್ಟವೆ. ಅದನ್ನು ತಿಳಿದ ಹಿರಿಯರು ಪರಮ-ಅರ್ಥ-ಪರಮಾರ್ಥ, ಆತ್ಮಕ್ಕೆ-ಚಿಂತನಶಕ್ತಿಗೆ ನಿಲುಕುವ, ಭಾವಾತೀತವಾದ, ಲೌಕಿಕ ಮೀರುವ ಆಧ್ಯಾತ್ಮ ಸುಖ ಎಂದೆಲ್ಲ ಕರೆಯುತ್ತಾರೆ. ಪ್ರಪಂಚದ ಎಲ್ಲ ಜಾಗತಿಕ ಸಾಹಿತ್ಯ-ಜೀವರಲ್ಲೂ ಈ ಅಲೌಕಿಕ ಸುಖಕ್ಕಾಗಿ ಸಾಧನೆ ನಡೆದೆ ಇದೆ. ಭಾರತ ವರ್ಷದಲ್ಲಂತೂ ಮೊದಲಿಂದ ಇದಕ್ಕೇ ಪ್ರಾಮುಖ್ಯ. ಆಧ್ಯಾತ್ಮದಾನಂದಕ್ಕೇ ಪ್ರಾಧಾನ್ಯವಿತ್ತ ಭಾರತೀಯರು ಇಹದ ಬದುಕನ್ನು ಅಷ್ಟು ಪ್ರಮುಖವೆಂದು ಪರಿಗಣಿಸಲಿಲ್ಲ. ಇಹದ ಬದುಕೇ ಬೇಡ, ಎನ್ನಲೂ ಇಲ್ಲ.

ಆದರೆ ಆಧ್ಯಾತ್ಮ ಸುಖವನ್ನು ಬಯಸುವವರು ಇಹದ ಬದುಕನ್ನು ಅದಕ್ಕೆ ಸಾಧನ ಮಾಧ್ಯಮವನ್ನಾಗಿ ಮಾಡಿಕೊಳ್ಳಲೆಳಸಿದರು. ಈ ಹಾದಿ, ಬದುಕು, ಸುಲಭ ಅಲ್ಲ, ದುಸ್ಸಾಧ್ಯ, ಕಷ್ಟಸಾಧ್ಯ. ದೈವಸಾಕ್ಷಾತ್ಕಾರ, ಸಾನ್ನಿಧ್ಯವನ್ನೆ ಚರಮಧ್ಯೇಯ ಆಗಿರಿಸಿಕೊಂಡ ಆಧ್ಯಾತ್ಮ ಪಿಪಾಸುಸಾಧಕರಿಗೆ, ಸಿದ್ಧಿಯ ಹಾದಿಯಲ್ಲಿ ಸಾಧನೆ ಅತ್ಯಗತ್ಯ. ಆ ಸಾಧನೆಗೆ ಮಾರ್ಗಗಳು ಮೂರು : ಜ್ಞಾನ, ವೈರಾಗ್ಯ, ಭಕ್ತಿ.

ವಿವಿಧ ಮಂತ ಧರ್ಮಗಳು ಉದಯಿಸಿರುವ ಭಾರತದಲ್ಲಿ-ಕರ್ನಾಟಕದಲ್ಲಿ, ಭಕ್ತಿಯ ಸ್ತರಗಳೂ ವಿವಿಧ ರೀತಿಯವೆ ಆಗಿವೆ. ಒಟ್ಟಾರೆ, ನಮ್ಮ ಇಡಿ ಸಾಹಿತ್ಯವನ್ನೆ ಭಕ್ತಿ ಸಾಹಿತ್ಯ, ಮತೀಯ ಸಾಹಿತ್ಯವೆಂದೂ ಕರೆಯುವುದುಂಟು. ಅದಕ್ಕೆ ಕಾರಣ, ಭಕ್ತಿಗೆ ದೊರೆತಿರುವ ಪ್ರಾಧಾನ್ಯ. ಇಹದ ಬದುಕು, ಸಂಸಾರ, (ಕನಕದಾಸರಂತೆ) ರಾಷ್ಟ್ರಾಡಳಿತದಲ್ಲಿ ನೆಮ್ಮದಿ-ಆದೇ ನಿಸ್ಸಾರವೆನಿಸುವಿಕೆ, ಇದೆಲ್ಲದರ ಅಸ್ಥಿರತೆ, ಗುರುತಿಸುವ ವಿವೇಕಿಯಾದವನಿಗೆ ಮೊದಲು ಹುಟ್ಟುವ, ಅನಂತರ ಬಲಗೊಳ್ಳುತ್ತ ದೃಢಗೊಳ್ಳುವ, ವೈರಾಗ್ಯ (ರಾಗ ತೊರೆದಾತ ವಿರಾಗಿ). ವೈರಾಗ್ಯಕ್ಕೆ ಸಾಧನ ಕರ್ಮಪಥ, ದೇವರು-ಧರ್ಮ

ಭಾವ. ಸಾಧಕನಿಗೆ ಕರ್ಮ ಮುಖ್ಯವಾದ ಅಡಿಗಲ್ಲು. ಸತ್ಕರ್ಮಾಚರಣೆಯೆ ಜ್ಞಾನ ಹೇತು. ಇಲ್ಲಿ ನಿಷ್ಕಾಮ ಕರ್ಮಕ್ಕೇ ಪ್ರಾಧಾನ್ಯ (ಗೀತೆ ತಿಳಿಸುವುದೂ ಇದೇಯೆ) ಆತ ತನ್ನ ಸಾತ್ವಿಕ, ರಾಜಸ ಅಥವಾ ತಾಮಸ, ಸ್ವಭಾವಗಳನ್ನು ಪರಿಷ್ಕರಿಸಿಕೊಳ್ಳುವಲ್ಲಿ ಕರ್ಮ ಸಹಾಯಕ. ಅನಂತರ, ಧ್ಯಾನ, ಉಪಾಸನೆ, ಶಾಸ್ತ್ರಾಭ್ಯಾಸ, ಶ್ರವಣ, ಮನನ ಇತ್ಯಾದಿ ಸಾಧಕ ಮಾರ್ಗ. ವೇದೋಪನಿಷತ್ತು, ಪುರಾಣ ಧರ್ಮಗ್ರಂಥಗಳ, ಶಾಸ್ತ್ರದ ಅಧ್ಯಯನವನ್ನು ಮನದಲ್ಲಿ ರೂಪಿಸಿ ಕೊಂಬುವುದೆ ಮನನ. ಗುರುವಿನ ಮೂಲಕ ತಿಳಿದುಕೊಂಬುದೆ ಶ್ರವಣ.[13] ಮನನದಿಂದ ಧ್ಯಾನ ಸಾಧ್ಯವಾಗುತ್ತದೆ. ಧ್ಯಾನ ದಲ್ಲಿ ಏಕಾಗ್ರತೆ, ಯಾರನ್ನೂ ದ್ವೇಷಿಸದೆ (ನಾಭಿನಂದತಿ, ನದ್ವೇಷ್ಟಿ-ಗೀತಾ) ಜಾಗೃತಾ ವಸ್ಥೆಯಲ್ಲಿ ಪರವಸ್ತು ಕುರಿತು ಚಿಂತನೆ ಗೈಯುವಿಕೆ, ಸಮಾಧಿಯ ಅವಸ್ಥೆ. ಪರಬ್ರಹ್ಮ ಸಾಕ್ಷಾತ್ಕಾರಕ್ಕೆ ಇವೆಲ್ಲ ಸಾಧನಗಳು. ಧ್ಯಾನದಲ್ಲಿ ಪರಮಾತ್ಮನ ಚಿಂತನೆ ಸತತ ನಡೆಯುತ್ತಿರುತ್ತದೆ. ಈ ಧ್ಯಾನದ ಮೂಲಕ ಉಂಟಾಗುವ ಅಖಂಡ ಸ್ಮೃತಿಶಕ್ತಿ-ಭೌತಿಕ ಚಕ್ಷುಸ್ಸಿಗೆ ಮೀರಿದ-ಅಪರೋಕ್ಷಜ್ಞಾನಕ್ಕೆ ಕಾರಣ ಆಗುವುದೆಂಬುದು, ಹಿರಿಯ ಜ್ಞಾನಿಗಳ, ಅನುಭವದ ಮಾತು. ಇದನ್ನೆ ಅನುಭಾವ ಎಂದೂ ಕರೆಯುತ್ತಾರೆ. ಶ್ರುತಿ ವಾಕ್ಯ, 'ಯ ಮೇವೈ ನ ಶೃಣುತೇ ತೇ ನ ಲಭ್ಯಃ' ಎಂದು ಸಾರುವುದಿದನ್ನೆ, ಭಗವಂತನ ದಿವ್ಯ ಪ್ರಸಾದದಿಂದಲೆ ಬ್ರಹ್ಮಜ್ಞಾನ ಲಭ್ಯವಾಗುವುದು. ಭಗವತ್ಪ್ರಸಾದಕ್ಕೆ ಉಪಾಸನೆಯೆ ಮುಖ್ಯ. ಧ್ಯಾನ, ನಿರಂತರ ಚಿಂತನೆಯೇ ಉಪಾಸನೆ. ಇವೆಲ್ಲಕ್ಕೂ ಬಿಡಿಸ ಲಾಗದ, ಬಿಡಿಸಬಾರದ, ಒಂದು ನಂಟಿದೆ. ಒಟ್ಟಾರೆ, ಭಕ್ತಿ, ಅತಿ ಮುಖ್ಯವಾದ ಮಾರ್ಗ. ಅಷ್ಟೇ ಸುಲಭಮಾರ್ಗ, ಆತ್ಮಸಾಕ್ಷಾತ್ಕಾರ, ದೈವಸಾಕ್ಷಾತ್ಕಾರ-ಮುಂತಾದ ದಿವ್ಯಾನಂದ ಪಡೆಯುವಲ್ಲಿ. ಯಜ್ಞ, ಯಾಗ-ಪೂಜೆ-ಹೋಮಾದಿಗಳಿಂದ ಸಾಧಿತ ಆಗ ಬಹುದಾದದ್ದು, ಭಕ್ತಿಯೊಂದರಿಂದಲೆ ಸಾಧಿತವಾಗುವುದೆಂದು, ಭಕ್ತಿಯ ಹಿರಿಮೆ ಸಾರುವಂಥ ಒಂದು ಉಗಾಭೋಗವನ್ನು ಹರಿದಾಸಸಾಹಿತ್ಯದ ಆದ್ಯ ಪ್ರವರ್ತಕರಾದ ಶ್ರೀಪಾದರಾಜರು ಹೀಗೆ ನುಡಿಯುತ್ತಾರೆ :

ಧ್ಯಾನವು ಕೃತಯುಗದಲ್ಲಿ[14]
ಯಜನ ಯಜ್ಞವು ತ್ರೇತಾಯುಗದಿ
ದಾನವಾಂತಕನ ದೇವತಾರ್ಚನ ದ್ವಾಪರಯುಗದಿ
ಆ ಮಾನವರಿಗೆಷ್ಟು ಫಲವೊ ಅಷ್ಟು ಫಲವು
ಕಲಿಯುಗದಿ ಗಾನದಲಿ ಕೇಶವಯೆನಲು
ಕೈಗೊಡುವನು ರಂಗವಿಠಲ.

ಇದರಿಂದ, ಭಕ್ತಿಮಾರ್ಗ ಸುಲಭವೆಂಬುದೆಂತೂ ಅದರ ಹಿರಿಮೆ ಅಷ್ಟೇ ಮಹತ್ವದ್ದೆಂದು ತಿಳಿಯಬಹುದು.

**ಭಕ್ತಿ ಪದ-ಶಬ್ದದ ಹಳಮೆ**

ಭಕ್ತಿಪಂಥದ ಪ್ರಾಚೀನತೆ ಕುರಿತು ಹರಿದಾಸಸಾಹಿತ್ಯದ ಉಗಮ ಕುರಿತು ಚರ್ಚಿಸುವಲ್ಲಿಯೆ ತಿಳಿಸಿದೆವೆ. ಭಕ್ತಿಯ ಪ್ರಾಚೀನತೆ ಆದಿ ಮಾನವನ ತನಕ ಹೋಗುತ್ತದೆ. ಪ್ರಕೃತಿಯ ಸ್ವರೂಪದಲ್ಲೆಲ್ಲ ಅದರ ಅದ್ಭುತ ವೈಚಿತ್ರ್ಯ ಕಂಡು ಮಾನವ, ಬೆದರಿ, ಆರಾಧಿಸಲಾರಂಭಿಸಿದ (ಗಾಳಿ, ನೀರು, ಬೆಂಕಿ, ಮಳೆ, ಇತ್ಯಾದಿ). ಸೂರ್ಯ, ಚಂದ್ರರಾದಿಯಾಗಿ ಎಲ್ಲರೂ ಅವನಿಗೆ ಶಕ್ತಿಸ್ವರೂಪರಾದರು. ಭಕ್ತಿಯ ಮೂಲ ಮತ್ತು ಬೆಳವಣಿಗೆಯನ್ನು ಗಮನಿಸುವಲ್ಲಿ ಪದ್ಮಪುರಾಣದ ಒಂದುಮಾತು ಗಮನಾರ್ಹ: ಭಕ್ತಿ ದ್ರಾವಿಡ ದೇಶದಲ್ಲಿ ಹುಟ್ಟಿತೆಂದೂ ಕರ್ನಾಟಕದಲ್ಲಿ ಬೆಳೆದು ಖ್ಯಾತಿಗೊಂಡಿತೆಂದೂ ಒರಿಂತ್ತದೆ. "ಉತ್ಪನ್ನ ದ್ರಾವಿಡೇದೇಶೇ ವೃದ್ಧಿಂ ಕರ್ನಾಟಕೇಗತಾ". ವೇದಕಾಲದಿಂದ ಭಕ್ತಿಯ ಸ್ವರೂಪ ಕುರಿತ ವ್ಯಾಖ್ಯೆಯಿದ್ದಂತೆಯೆ, ಸುಮಾರು ೫೦೦೦ ವರ್ಷ ಹಿಂದೆಯೆ ಭಕ್ತಿ ಆವಿರ್ಭವಿಸಿದ ಬಗ್ಗೆ ಸಿಂಧೂ ನಾಗರಿಕತೆ, ಮೊಹೆಂಜೊದಾರೊ ಸಂಶೋಧನೆ ಬೆಳಕು ಚೆಲ್ಲುತ್ತದೆ. ಆಗಿನ ಕಾಲಕ್ಕೆ ಶಿವ, ನಾಗ ದೇವತೆ, ವೃಕ್ಷ ದೇವತೆಗಳಾರಾಧನೆ ಇತ್ತಿತೆಂದೂ ಸರ್ ಜಾನ್ ಮಾರ್ಷಲ್ ಅಭಿಪ್ರಾಯಪಡುತ್ತಾರೆ. ಇದಲ್ಲದೆ, ಯೋಗಾಭ್ಯಾಸ ಕೂಡ ಆಗಲೇ ಪ್ರಚಲಿತಗೊಂಡುದರ ಸುಳುಹು ದೊರೆತಿವೆ. ಆಗಿನ ಕಾಲದಲ್ಲಿ ಮೂರ್ತಿ ಪೂಜೆ ಇದ್ದುದಾದರೆ, ಭಕ್ತಿಯ ಪ್ರಾಚೀನತೆ, ಸಂಚಾರ, ಜನಪದ ಮನದಲ್ಲಿ ಇನ್ನೂ ಹಿಂದೆಯೆ ಆಗಿದ್ದಿತು. ಮನಶ್ಶಾಸ್ತ್ರಜ್ಞರು, ಮನುಷ್ಯನ ಹುಟ್ಟಿನೊಂದಿಗೇ ಭಕ್ತಿಯ ಹುಟ್ಟೂ ಆಯಿತೆನ್ನುತ್ತಾರೆ.

ಪ್ರಕೃತಿಯ ಮೃದುಲಾಸ್ಯ-ಬೆಡಗುಗಳು. ವಿವಿಧ ದೃಶ್ಯ, ಋತುಗಳನ್ನು ಕಂಡು ಮಾನವ ಸಂತಸ ಪಟ್ಟಿದ್ದಾನು. ಅವನ ಕಂಡುಕೊಂಡ ಮನದಲ್ಲಿ ಇದೇನೀ ವೈವಿಧ್ಯ, ವೈಶಿಷ್ಟ್ಯ ವೈಚಿತ್ರ್ಯ ವೈಲಕ್ಷಣ್ಯ ಎಂದೆಲ್ಲ ಅನ್ನಿಸಿ ತುಮುಲ ನಡೆದಿರಲು ಸಾಕು. ಆ ಮಾನಸಿಕ ತುಮುಲ, ಆಂದೋಲನ, ಭಯ-ಭಕ್ತಿಗಳ ಉದಯಕ್ಕೆ ಕಾರಣ ಆಯಿತೆನ್ನಬಹುದು. ವೇದಯುಗದಲ್ಲಿ ಭಕ್ತಿಯ ಸ್ವರೂಪದ ಬಗ್ಗೆ ಜಿಜ್ಞಾಸೆ ನಡೆದಿರುವುದನ್ನು ಮನಗಾಣಬಹುದು. ಹಾಗೆಯೇ ಪ್ರಜ್ಞೆ-ಜಾಗೃತಿಗಳ ವೈಯಾಂತ ಹಾಗಿದ್ದ ಅನೇಕ ಋಷಿಗಳ ದರ್ಶನ, ಜಿಜ್ಞಾಸೆಯ ಫಲವಾಗಿ ಮೂಡಿ ಬಂದಿರುವ ವೇದಗಳಲ್ಲಿ ಭಕ್ತಿ ಪ್ರಮುಖ ಸ್ಥಾನಗಳಿಸಿದೆ. ಪ್ರಕೃತಿಯ ಎಲ್ಲ ಕಾರ್ಯ, ಚಟುವಟಿಕೆಗಳಿಗೂ ಒಂದು ಕಾರಣೀಭೂತ ಆದ ಅತ್ಯುನ್ನತ ಶಕ್ತಿಯೊಂದಿದೆ ಎಂಬುದನ್ನು ಋಷಿ-ದಾರ್ಶನಿಕರು ಕಂಡುಕೊಂಡಿದ್ದರು. ಆದನ್ನೆ ಅವರು ದೈವ-ಆದಿಶಕ್ತಿ, ಪಂಚಭೂತ ಗಳಿಗಧಿಪತಿಯಾದ ಪರಮಾತ್ಮ ಎಂದೆಲ್ಲ ಕರೆದರು. ಅಗ್ನಿ, ಇಂದ್ರ, ರುದ್ರ, ವರುಣ, ಇತ್ಯಾದಿ ದೇವತೆಗಳ ಕುರಿತ ಸ್ತುತಿ ವೇದ ಸಾಹಿತ್ಯದಲ್ಲಿ ಬಂದಿದೆ. ರುದ್ರನನ್ನು ಮನದಣಿಯೆ ಕೊಂಡಾಡಿದಾರೆ, ಇದಲ್ಲದೆ, "ಏಕಂಸದ್ವಿಪ್ರಾಬಹುಧಾ ವದಂತಿ" (ಋಗ್ವೇದ-೧೬೪) "ಮಹನ್ನೇ ವಿಷ್ಣೋ ಸುಮತಿಂ ಭಜಾಮಹೇ" (ಋ-೧೦-೧೫೬) "ಸತ್ಯಂ ಜ್ಞಾನಮನಂತಂ ಬ್ರಹ್ಮ", ಇವುಗಳಲ್ಲೆಲ್ಲ ಭಕ್ತಿಯ ಹೊಳಹು ಇದೆ. ವೇದ ಮಂತ್ರಗಳಲ್ಲಿ ಬರುವ ಅಗ್ನಿ, ವರುಣ

ಮೊದಲಾದ ಪ್ರತಿಯೊಬ್ಬ ದೇವತೆಯನ್ನೂ ಸರ್ವೋತ್ಕೃಷ್ಟ (Henotheism) ಎಂದು ಆರಾಧಿಸುವ ಹವ್ಯಾಸ ಕಾಣಬರುವುವೆಂಬುದು ವಿದ್ವಾಂಸರ ಅಭಿಮತ.

ಹೀಗೆ ಋಷಿಗಳನೇಕರ ಮೂಲಕ ವೇದಗಳಲ್ಲಿ ಪ್ರಕಟಗೊಂಡ ಭಕ್ತಿಯ ಹೊನಲು, ಉಪನಿಷತ್ತುಗಳಲ್ಲಿ ಗುಪ್ತಗಾಮಿನಿಯಾಗಿ ಪ್ರವಹಿಸುತ್ತದೆ. 'ರಹಸ್ಯವಿದ್ಯೆ' ಎಂದೆ ಉಪನಿಷತ್ತನ್ನು ಕರೆದಿದ್ದಾರೆ. ವೇದವಿದ್ಯೆಯ ಫಲರೂಪ ಉಪನಿಷತ್ತುಗಳು. ಆರ್. ಡಿ. ರಾನಡೆಯವರು ಹೇಳಿರುವಂತೆ 'ವೇದಗಳ ಸಾನುಪ್ರದೇಶದಿಂದ ಹೊರ ಹೊಮ್ಮಿದ ಭಕ್ತಿಯನೆಲೆ, ಉಪನಿಷತ್ತುಗಳ ದಾರ್ಶನಿಕ ಅರಣ್ಯದಲ್ಲಿ ಅಡಗಿಕೊಂಡಿದೆ'' ಉಪನಿಷತ್ತುಗಳಲ್ಲಿ ಭಕ್ತಿ, ಪ್ರಾರ್ಥನೆಯ ರೂಪತಳೆದಿದೆ.

ಯಸ್ಯದೇವೇ ಪರಾಭಕ್ತಿ | ಯಥಾದೇವೇ ತಥಾ ಗುರೌ ।
ತಸ್ಯೈತೇ ಕಥಿತಾಃ ಯತ್ಯಾಃ ಪ್ರಕಾಶಾಂತೇ ಮಹಾತ್ಮನಾಃ ॥
(ಶ್ವೇತಾಶ್ವತರೋಪನಿಷತ್ತು : 6-5).

ಯಾರಿಗೆ ನನ್ನ ಆಚಾರ್ಯ ಹಾಗೂ ದೇವರಲ್ಲಿ ಭಕ್ತಿಯಿದೆಯೋ, ಅಂಥ ಧೀರಾತ್ಮನಿಗೆ, (ಇಲ್ಲಿ ಬೋಧಿಸಿರುವ ಧರ್ಮಾಧ್ಯಾಯಗಳು) ತಮ್ಮಿಂದ ತಾವೇ ಅಭಿವ್ಯಕ್ತಗೊಳ್ಳುತ್ತವೆ. ಹಾಗೆಯೇ ''ಅಸತೋಮಾ ಸದ್ಗಮಯ । ತಮಸೋಮಾ ಜ್ಯೋತಿರ್ಗಮಯ । ಮೃತ್ಯೋರ್ಮಾ ಅಮೃತಂಗಮಯ'' ಎಂಬ ಶಾಂತಿ ಮಂತ್ರ, ''ಸಹನಾವವತು ಸಹ ನೌಭುನಕ್ತು ಸಹವೀರ್ಯಂ ಕರವಾವಹೈ ತೇಜಸ್ವಿನಾವಧೀತಮಸ್ತು ಮಾವಿದ್ವಿಷಾವಹೈ ಓಂ ಶಾಂತಿಃ ಶಾಂತಿಃ ಶಾಂತಿಃ'' ಎಂಬ ಪ್ರಾರ್ಥನೆಗಳಲ್ಲಿ ಭಕ್ತಿ ಭಾವ ತನ್ನಿಂತಾನೆ ಸಂಪ್ರಕಟಗೊಂಡಿದೆ.

ಭಕ್ತಿ, ಒಂದು ಅಂತರಿಕ ಅನುಭವ. ಅದು ಹೇಗೆ, ಎಲ್ಲಿ ಆರಂಭ ಆಗುವುದೊ ಹಾಗೂ ಹೇಗೆ ಕೊನೆಗೊಳ್ಳುವುದೂ ತಿಳಿಯುವುದು ಕಷ್ಟ. ಪ್ರಪಂಚದ ಎಲ್ಲ ಮಂತಗಳೂ ಭಕ್ತಿಗೆ ಉನ್ನತಸ್ಥಾನವಿತ್ತಿವೆ. ಸುಮಾರು ಕ್ರಿ. ಪೂ. 5-6ನೆ ಶತಮಾನ, ಭಕ್ತಿ ಸೂತ್ರಗಳ ಕಾಲ. ಪಾಣಿನಿಯ ಭಕ್ತಿಸೂತ್ರಗಳಲ್ಲಿರುವ ಭಕ್ತಿಪದ ಪ್ರಯೋಗ, ಹಾಗೂ ಇದೇ ಕಾಲದಲ್ಲಿ ಅವತಾರಗಳ ಬಗ್ಗೆಯೂ ಪ್ರಸ್ತಾಪವಿರುವುದನ್ನು ಕಾಣಬಹುದು. ಆಗಲೇ ಶ್ರೀ ಕೃಷ್ಣನನ್ನು ವಿಷ್ಣುವಿನ ಅವತಾರವೆಂದು ಪೂಜಿಸುತ್ತಿದ್ದರು.ಪತಂಜಲಿ ಸಹ ಕೃಷ್ಣನು ''ವಾಸುದೇವ'' ಎಂಬ ಹೆಸರಿಂದ ಪೂಜಿಸಲ್ಪಡುತ್ತಿದ್ದನೆಂದು ತಿಳಿಸುತ್ತಾನೆ (ವಾಸುದೇವಃ ಸರ್ವಮಿತಿ). ಗೀತೆ, ಭಕ್ತಿಯೋಗಕ್ಕೇ ಮೀಸಲಾಗಿದೆ. ಪರಮಾತ್ಮನ ಪ್ರಸಾದಕ್ಕೆ ಪಾತ್ರರಾಗಲು ಗೀತೆ ಮೂರು ಹಾದಿಗಳನ್ನು ವಿವರಿಸುತ್ತದೆ : ಭಕ್ತಿ, ಜ್ಞಾನ ಮತ್ತು ಕರ್ಮಯೋಗ. ಕೃಷ್ಣ ಮೊದಲ ಸ್ಥಾನವನ್ನು ಭಕ್ತಿಗೇ ನೀಡಿದ್ದಾನೆ. ಭಕ್ತಿಯಿಂದ ಜ್ಞಾನ, ಕರ್ಮಕ್ಕೆ ಪ್ರಾಶಸ್ತ್ಯವಿಲ್ಲ. ''ಗಹನಾ ಕರ್ಮಣೋ ಗತಿಃ'' ಎಂದು ಕರ್ಮಯೋಗವನ್ನು ಗಹನ ಆದದ್ದೆಂದು ತಿಳಿಸುವ ಕೃಷ್ಣ, ಭಕ್ತರ ವಿವಿಧ ಸ್ವಭಾವಗಳನ್ನು

ತಿಳಿಸಿದ್ದಾನೆ. ವಿಷ್ಣು ಭಕ್ತಿ, ಗೀತೆಯಲ್ಲಿ ಮಂಡುಗಟ್ಟಿದೆ. ಉಪನಿಷತ್ಸಾರವಾದ ಗೀತೆ, ವಿಷ್ಣುಭಕ್ತಿಯನ್ನೆತ್ತಿ ಹಿಡಿದಿದೆ. "ಯೋಮೇ ಭಕ್ತಃ ಸಮೇ ಪ್ರಿಯಃ", "ಸರ್ವೇಭಕ್ತಃ ಪ್ರಣಶ್ಯತಿ" ಇತ್ಯಾದಿ ಭಕ್ತಪ್ರಿಯತೆಯನ್ನು ಕೃಷ್ಣ ತಿಳಿಸುತ್ತಾನೆ. ಇದೇ ಗೀತೆಯ ಭಕ್ತಿಯ ಸಂದೇಶವಾಗಿದೆ.

## ವಿವಿಧ ಧರ್ಮಗಳಲ್ಲಿ ಭಕ್ತಿ

ಭಕ್ತಿಯ ಬೆಳವಣಿಗೆಯಲ್ಲಿ ಜೈನ, ಬೌದ್ಧಧರ್ಮ (ಕ್ರಿ. ಪೂ. ಸು. ೫೦೦) ಹೆಸರಿಸಬಂತಹವೇ ಆದರೂ, ಜೈನ ಧರ್ಮದಲ್ಲಿಯ ಜನ್ಮಗಳ ಕೋಟಿಲೆಯ ಜಟಿಲತೆ, ಬೌದ್ಧ ಧರ್ಮದ ನಿರಾಶಾವಾದ ಬದುಕಿಗೆ ಪ್ರೋತ್ಸಾಹಕಾರಿ ಆಗದ ಹಿಂದೂ ಧರ್ಮದ ಎದುರು ನಿಲ್ಲದಾದವೆಂದೆ ಹೇಳಬೇಕು. ಪಾರಮಾರ್ಥ ಸಾಧನೆಗಿಂತ ಇವುಗಳಲ್ಲಿ ಮೇಶೀಯ ಕಟ್ಟುನಿಟ್ಟಿನ ನಿಯಮ ಹೆಚ್ಚಾಗಿ, ಇವು ಚಾರ್ವಾಕರಿಗೆ ಸಮೀಪವೆಂದೆನ್ನಿಸುತ್ತವೆ.

ಇವರ ನಂತರ ನಾವು ಕಾಣುವುದು ವಿಷ್ಣುಭಕ್ತಿ ಪಾರಮ್ಯ ಪ್ರಚಾರ ಮಾಡಿದ ತಮಿಳುನಾಡಿನ ಆಳ್ವಾರ್ ಹಾಗೂ ಶಿವಭಕ್ತಿಯನ್ನು ಪ್ರತಿಪಾದಿಸಿದ ನಾಯನಾರ್‌ರವರನ್ನು. ಭಕ್ತಿಯ ಹೊನಲು ಉತ್ತರದೇಶದಿಂದ ಬಂದು ಜನರಲ್ಲಿ ವ್ಯಾಪಿಸಿದಂತೆ, ದಕ್ಷಿಣದೇಶದ ತಮಿಳುನಾಡದ ವೈಷ್ಣವ-ಶೈವ ಸಂತರಿಂದಲೂ ಹೊರಹೊಮ್ಮಿತು. ದೇವಸ್ಥಾನ, ಅರ್ಚಾವಿಗ್ರಹದ ಪ್ರಾಮುಖ್ಯತೆಯನ್ನು ಆಳ್ವಾರರು ಹೆಚ್ಚಿಸಿದರು. ದೇವಾಲಯ ಭಕ್ತಿಯ ಕೇಂದ್ರ ಬಿಂದು, ಹಾಗೂ ಭಕ್ತರ ಒಕ್ಕೂಟದ ನೆಲೆಯಾಯಿತು.[16]

## ವಿಷ್ಣು ಭಕ್ತಿಯ ಮಜಲು ಆಳ್ವಾರ್ ಸಂತರಲ್ಲಿ

ಭಕ್ತಿಮಾರ್ಗಕ್ಕೆ ಯಾವುದೆ ಭೇದವಿಲ್ಲೆಂದು ಉಪದೇಶಿಸಿದವರು ಶ್ರೀವೈಷ್ಣವ ಆಳ್ವಾರರು (ಆಳ್ವಾರ್ ಎಂದರೆ, ಆಳುವವರು-ವಿಷ್ಣುಭಕ್ತಿ ಸಾಮ್ರಾಜ್ಯವನ್ನಾಳುವವರು ಎಂದೂ ಅರ್ಥ ಮಾಡುತ್ತಾರೆ ವಿದ್ವಾಂಸರು). ಆಳ್ವಾರರ ಭಕ್ತಿಪಂಥ ಕುರಿತೆ ಭಾಗವತ ಒಂದು ಶ್ಲೋಕ ಹೀಗೆನ್ನುತ್ತದೆ :

> ಕಲೌಖಲು ಭವಿಷ್ಯಂತಿ ನಾರಾಯಣ ನಾರಾಯಣಾಃ ।
> ಕ್ವಚಿತ್‌ಕ್ವಚಿನ್ಮಹಾಭಾಗ ದ್ರಮಿಡೇಶಂ ಚ ಭೂರಿಶಃ ।
> ತಾಮ್ರಪರ್ಣೀ ನದೀ ಯತ್ರ ಕೃತಮಾಲಾ ಪಯಸ್ವಿನೀ ।
> ಕಾವೇರೀಚ ಮಹಾಭಾಗಾಪ್ರತೀಚೀಚ ಮಹಾನದೀ ॥

ಇಲ್ಲಿ ಉಕ್ತಗೊಂಡಿರುವ ಎಲ್ಲ ನದಿಗಳ ತೀರದಲ್ಲಿ ಅವತರಿಸಿದ ಆಳ್ವಾರ್ ಸಂತರಿಂದ, ಅನಂತರ ಬಂದ ಭಗವದ್ರಾಮಾನುಜರು ಸ್ಫೂರ್ತಿ ಪಡೆದದ್ದು ಸಂಸ್ಪಷ್ಟ. ಮುಂದಿನದು ಇಲ್ಲಿ ಅಪ್ರಸ್ತುತ.

ಆಳ್ವಾರ್‌ರವರ ವಿಷ್ಣುಭಕ್ತಿ ಅನ್ಯಾದೃಶವಾದದ್ದು, ಅನನ್ಯವಾದದ್ದು ಕೂಡ. ಓಂಕಾರದ ಅಕಾರ ಉಕಾರ ಮಕಾರ ಇತಿ ಎಂಬುದಕ್ಕೆ ಅನಾದಿ. ಉನಕ್ಕಾಹ, (ನಿನಗಾಗಿಯೇ), ಮಹಾನ್ ಎಂಬರ್ಥದಲ್ಲಿ ಪರಮಾತ್ಮನನ್ನು ಸ್ತುತಿಸಿದರು ಆಳ್ವಾರರು. ಪರಿಪರಿಯಾಗಿ ಹಾಡಿ, ಅವತಾರಗಳನ್ನು ಬಣ್ಣಿಸಿದಷ್ಟೂ ತಣಿಯದ ಭಕ್ತರು. ಹಾಗೂ ಭಕ್ತಿಪಂಥದ ಪಥದಲ್ಲಿ "ಶರಣಾಗತಿ" ಅಥವಾ "ಪ್ರಪತ್ತಿ"ಯನ್ನು ತಂದವರು ಆಳ್ವಾರರು. "ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂಮಮ". ಎಂಬುದು "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವಜ್ರ" ಎಂಬ ಭಾವ ಅವರದು.

ವೈಷ್ಣವ ಭಕ್ತಿಪಂಥಕ್ಕೆ ಪದೇ ಪದೇ ಅಡ್ಡಿ, ಧಕ್ಕೆ ತಗುಲಿದ್ದು ಇಸ್ಲಾಂ, ಧರ್ಮ (ಮ್ಲೇಚ್ಛ ಧರ್ಮವೆಂದೆ ಕರೆದರು) ದ ಹಾವಳಿಯಿಂದ ಮುಸ್ಲಿಮ್ ದಂಡಾಧೀಶರು ಮತ್ತೊಮ್ಮೆ ಮೂದಲಿಗೆ ಹಿಂದೂ ಧರ್ಮ ಸಂಸ್ಥೆಗಳಾದ ದೇವಾಲಯ, ಸ್ತ್ರೀಯರ ಬಲಾತ್ಕಾರದ ಮತಾಂತರ, ಇಂಥ ಕುಕೃತ್ಯಗಳನ್ನು ನಡೆಸುತ್ತಿದ್ದರ ಬಗ್ಗೆಯೆ ಮನಮಾಡಿದ್ದು ಎಂಬುದು ಇತಿಹಾಸವೆ ಸಾರುತ್ತಿದೆ. ಇದರಿಂದಾಗಿ ವೈಷ್ಣವ ಭಕ್ತಿ ಇಸ್ಲಾಂ ವಿರುದ್ಧ ಸೆಣಸಿ, ಸ್ವಸಾಮರ್ಥ್ಯದಿಂದ ನಿಲ್ಲಬೇಕಾಗಿ ಬಂದಿತು.

ಭಕ್ತಿಯನ್ನು ಕುರಿತ ಎಲ್ಲರ ಅನುಭವ ಒಂದೇ ಆದರೂ ಅನುಭವದ ಅಭಿವ್ಯಕ್ತಿಯಲ್ಲಿ ವೈವಿಧ್ಯವಿದೆ. ವಿವಿಧ ದಾರ್ಶನಿಕರು, ಜ್ಞಾನಿಗಳು ಭಕ್ತಿಯ ಕುರಿತು ನಡೆಸಿರುವ ಚಿಂತನವನ್ನು ತಿಳಿಸುವ ಮೂಲಕ ನಾವು ಹರಿದಾಸರ ಭಕ್ತಿ ವೈವಿಧ್ಯದೆಡೆ ಗಮನವೀಯಬಹುದು.

## ಭಕ್ತಿ ಎಂದರೇನು ?

ಭಗವಂತನಿಗೂ, ಭಕ್ತನಿಗೂ ಇರುವ ಪರಸ್ಪರ ಅವಿನಾ ಸಂಬಂಧವೆ ಭಕ್ತಿ. ಅಥವಾ ಪರಮಾತ್ಮ ನೆಡೆಗೆ ಹರಿಯುವ ನಿರಂತರ ನಿರ್ವ್ಯಾಜ ಪ್ರೇಮ ಪ್ರವಾಹವೇ ಭಕ್ತಿ. ಭಕ್ತ ನೆನಿಸಿಕೊಂಡಾತ ತಾನು ನಂಬಿದ ಭಗವಂತನಲ್ಲಿ ಇಟ್ಟಿರುವ ಅನನ್ಯ (ಇದರಿಂದ ಭಕ್ತ-ಭಗವಂತರ ನಂಟು, ಶಾಶ್ವತ ಆಗುತ್ತದೆ.) ಪ್ರೀತಿಯೆ ಭಕ್ತಿ. ರಾಮಾನುಜರ ಅಭಿಮತದಂತೆ ಜ್ಞಾನ ಸಾರ್ಥಕವಾಗಬೇಕಾದರೆ, ಭಕ್ತಿ ರೂಪದಲ್ಲಿ ಪರಿಣತಿ ಹೊಂದಿರಬೇಕು-ಭಕ್ತಿ ರೂಪನ್ನ ಜ್ಞಾನಃ, "ಶೇಮುಷೀ ಭಕ್ತಿರೂಪಾ" ಎಂದೇ ತಿಳಿಸಿದರು. ಈ ಸಂದರ್ಭದಲ್ಲಿ ಕುಲಶೇಖರ ಆಳ್ವಾರರ ಮುಕುಂದಮಾಲಾ ಸ್ತೋತ್ರದ ಒಂದು ಶ್ಲೋಕ ಅವರ ಭಕ್ತಿಭಾವ ಕುರಿತು ಪ್ರಕಟಿಸಿರುವುದನ್ನು ಉದಹರಿಸಬಹುದಾಗಿದೆ :

ನಾಸ್ಥಾ ಧರ್ಮೇ ನವಸುನಿಚಯೇ ನೈವ ಕಾಮೋಪಭೋಗೇ
ಯದ್ಯದ್ಭವ್ಯಂ ಭವತು ಭಗವನ್ ಪೂರ್ವ ಕರ್ಮಾನುರೂಪಂ ।
ಯೇತತ್ಪ್ರಾರ್ಥ್ಯಂ ಮಮ ಬಹುಮತಂ ಜನ್ಮ ಜನ್ಮಾಂತರೇಪಿ ।
ತ್ವತ್ಪಾದಾಂಭೋರುಹ ಯುಗಗತಾ ನಿಶ್ಚಲಾ ಭಕ್ತಿರಸ್ತು ॥

ಇಲ್ಲಿ ಅವರು ಭಕ್ತಿಗೆ ಇತ್ತಿರುವ ಪ್ರಾಶಸ್ತ್ಯ ಗಮನಾರ್ಹ.

### ಭಜ್ ಎಂಬುದರಿಂದಲೆ ಭಕ್ತಿ

ಭಕ್ತಿಯಲ್ಲಿರುವ ಭಜ್ ಎಂಬ ಧಾತು ಆಶ್ರಯಿಸು, ಪೂಜಿಸು, ಎಂದೆಲ್ಲ ಅರ್ಥ ವೀಯುತ್ತದೆ. ಭಕ್ತಿ ಎಂದರೆ ಭಗವಂತನಿಗೆ ನಿವೇದಿಸುವ ಶ್ರೇಷ್ಠವಾದ ಅನ್ನರೂಪ ವೆಂದೂ ಅರ್ಥ. ತಮ್ಮ ಭಕ್ತಿ ಸೂತ್ರಗಳಲ್ಲಿ ಭಕ್ತಿಯನ್ನು ಕುರಿತು ದೇವರ್ಷಿಗಳಾದ ನಾರದರು ಸಾಭಕ್ತಿಃ ಕಸ್ಮೈಚಿತ್ಪರಮಾ ಪ್ರೇಮರೂಪಾ ಎಂದಿದ್ದಾರೆ. ಪರಮಪ್ರೇಮ ರೂಪವೇ ಭಕ್ತಿ. ಅದು ಅಮೃತದಂತೆ ರುಚಿಕರ ಹಾಗೂ ಆನಂದದಾಯಕ ಆದದ್ದು. ಶಾಂಡಿಲ್ಯ ಸೂತ್ರಗಳಲ್ಲಿನ ಪ್ರಕಾರ ಪರಮಾತ್ಮನಲ್ಲಿನ ಅತ್ಯಂತ ಅನುರಕ್ತಿಯೇ ಭಕ್ತಿ. Love of God with exceeding affection (Fondness) ''ಸಾಭಕ್ತಿಃ ಪರಾನುರಕ್ತಿರೀಶ್ವರೇ'' ಭಕ್ತಿಯೆಂದರೆ ಜ್ಞಾನವಲ್ಲ. ಅದು ಜ್ಞಾನಕ್ಕಿಂತ ಶ್ರೇಷ್ಠ, ಜ್ಞಾನ ಭಕ್ತಿಗೆ ಸಾಧಕ. ಇಂಥ ಭಕ್ತಿ ಅನಿರ್ವಚನೀಯ. ಆ ಪ್ರೇಮಾನಂದ, ಮೂಕ ಸಿಹಿ ಯನ್ನು ಸವಿದಂತಹ ಅನುಭವ. (ಅನಿರ್ವಚನೀಯಂ ಪ್ರೇಮಸ್ವರೂಪಂ : ಮೂಕಾಸ್ವಾದನವತ್) ಭಕ್ತಿಯನ್ನು ಕುರಿತಂತೆ ವಿಶೇಷ ವ್ಯಾಖ್ಯೆ, ಪರಿಶೀಲನೆಗಳ ಇವೆ. ಇವುಗಳು ನಮ್ಮ ಹರಿದಾಸ ಆಂದೋಲನದ ಭಕ್ತಿ ವೈವಿಧ್ಯ, ವೈಶಿಷ್ಟ್ಯದ ದೃಷ್ಟಿ ಯಿಂದಲೂ ಗಮನಿಸಲು ತಕ್ಕುವನ್ನಿಸುತ್ತವೆ.

### ಭಕ್ತಿಯ ವಿವಿಧ ಭಾವ ಅರ್ಥಭಾವ ಇತ್ಯಾದಿ...

ನಿತ್ಯಸಂಬಂಧ, ಪ್ರೇಮದಿಂದಲೆ ಹುಟ್ಟಿ ಪ್ರೇಮಮಯವಾಗಿಯೇ ಪರಮಾತ್ಮನತ್ತ ಪ್ರವಹಿಸುವ ಪ್ರೇಮವೇ 'ಭಕ್ತಿ'. ಹೀಗೆ ಉಗಮವಾಗಿ, ಬೆಳೆದು, ಹರಿಯುವ ಭಕ್ತಿ ಗಾಢ ಆದಂತೆ, ದೃಢ ಆದಂತೆಲ್ಲ, ಭಕ್ತನ ಮನಸ್ಸು ಯಾವಾಗಲೂ ದೈವಪ್ರೀತ್ಯರ್ಥ ಆದ ಕಾರ್ಯವನ್ನೆ ಮಾಡಲೆಳಸುತ್ತದೆ. ಇದೂ ಒಂದು ಅವಸ್ಥೆ : ಭಕ್ತ ತನ್ನನ್ನು ತಾನು ಮರೆತು, ಸಂಪೂರ್ಣವಾಗಿ ತಾನಿಲ್ಲಾಗಿಸಿಕೊಂಡು ದೇವರಲ್ಲಿ ಅರ್ಪಿಸಿಕೊಂಡಾಗಲೆ ಈ ಅವಸ್ಥೆಗೆ ಚರಮಗತಿ. ಯಾವುದೊ ಒಂದು ಘಳಿಗೆ, ಒಂದು ಸಂದರ್ಭ, ಸನ್ನಿವೇಶ ದಲ್ಲಿ ಹುಟ್ಟುವ ಇದು, ಭಕ್ತನ ಬದುಕನ್ನ ಪೂರ್ತಿ ಪರಿವರ್ತಿಸಬಲ್ಲುದು. ಕನಕದಾಸರು, ಪುರಂದರದಾಸರು, ಜಗನ್ನಾಥದಾಸರು, ಶರ್ಜಗಿಯದಾಸಪ್ಪ (ಶ್ರೀದವಿಠಲ-ಜಗನ್ನಾಥ ದಾಸರ ಶಿಷ್ಯರಾಗಿ ಅನಂತರ ಶ್ರೀಮದ್ಹರಿಕಥಾಮೃತಸಾರಕ್ಕೆ ಫಲಶ್ರುತಿ ಬರೆದವರು) ನವರು ಮುಂತಾದ ಅನೇಕ ಹರಿದಾಸರ ಉದಾಹರಣೆಗಳಿಲ್ಲವೆ ? ಶಾಪಾಸಕ್ತನಾದ ತುಳಸಿದಾಸನಿಗೆ ಹೆಂಡತಿಯೆ ಗುರು ಆಗಲಿಲ್ಲವೆ ? ಹೀಗೆ ಎಷ್ಟೊ. ಭಕ್ತಿ, ಜ್ಞಾನ, ಒಂದೆ ನಾಣ್ಯದ ಎರಡು ಮುಖಗಳಿದ್ದ ಹಾಗೆ.

ಜ್ಞಾನಸ್ಯ ಭಕ್ತಿಭಾಗತ್ವಾತ್ ಭಕ್ತಿಜ್ಞಾನಮಿತೀರ್ಯತೇ ।

(ಅನು. ವ್ಯಾ. 3-4).

ಜ್ಞಾನ, ಭಕ್ತಿಯ ಒಂದು ಅಂಶ, ಭಾಗ । ಜ್ಞಾನದ ವಿಶೇಷವೆ ಭಕ್ತಿ । ಭಕ್ತಿಗೆ ಜ್ಞಾನ ಅಗತ್ಯ । ಜ್ಞಾನದ ಒಂದು ರೂಪ ಭಕ್ತಿ ಭಕ್ತಿಯಿಲ್ಲದೆ ಜ್ಞಾನಾರ್ಜನೆ ಅಶಕ್ಯ. ಯಾವ

ವಿಚಾರವನ್ನೇ ಆಗಲಿ ತಿಳಿಯಬೇಕಾದರೆ, ಅದನ್ನು ಕುರಿತು ಪ್ರೀತಿ, ಆಸೆ ಇರಬೇಕಾಗು ತ್ತದೆ. ಭಕ್ತಿ-ಜ್ಞಾನದ ನಿಕಟ ನಂಟು ಇನ್ನೂ ನಿಚ್ಚಳಗೊಳ್ಳುವುದು, ಸ್ಪಷ್ಟಗೊಳ್ಳುವುದು ನಾವು ಭಕ್ತಿಯ ಅನೇಕ ಹಂತಗಳನ್ನು ಅರಿತಾಗ। ಭಕ್ತಿ, ಪಕ್ವಭಕ್ತಿ, ಮತ್ತು ಪರಿಪಕ್ವ ಭಕ್ತಿ. ಇವೇ ಆ ಹಂತಗಳು.

ಭಕ್ತ್ಯಾ ಜ್ಞಾನಂ ತತೋ ದೃಷ್ಟಿಸ್ತಸ್ಯಾ ಸಾ ।
ತತೊ ಮುಕ್ತಿಸ್ತತೊ ಭಕ್ತಿಃ । ಸೈವ ಸ್ಯಾತ್ ಸುಖರೂಪಿಣೀ ॥

(ಅಣು ವ್ಯಾಖ್ಯಾನ)

ಭಗವಂತನ ವಿಚಾರದಲ್ಲಿ ಜ್ಞಾನ ಹೆಚ್ಚಿದಂತೆಲ್ಲ, ಭಕ್ತಿಯ ಪಟ್ಟುವೂ ಏರುತ್ತ ಹೋಗು ತ್ತದೆ. ಭಗವಂತನ ಅಧೀನರು ನಾವು ಎಂಬ ಅರಿವು ಜೀವಿಗಳಿಗೆ ಬರಬೇಕಾದರೆ ಜ್ಞಾನ ಅತ್ಯವಶ್ಯ. ಮನುಷ್ಯ ತನ್ನ ಇತಿಮಿತಿಯ ಪರಿಧಿ, ಪರಿಮಿತಿಯರಿತು, ಅದೆಲ್ಲವೇನೂ ಇರದ, ಅಂತ್ಯವ ಕಾಣದ, ಮೇರೆಯನರಿಯದ ಅಮಿತದ, ಅಪ್ರಮೇಯಂತೆಯ ತಿಳಿವು ಪಡೆಯಲು ಶ್ರಮಿಸುತ್ತಾನೆ. ತನ್ನದು ತಿಳಿವು, ಕಾರ್ಯ, ಎಲ್ಲ ವೀರ್ಯ, ಶರೀರವೂ ಕೆಲವು ಕಾಲದ್ದು ಎಂಬ ವಿಚಾರದಲ್ಲಿ ಅರಿವುಂಟಾದಂತೆ, 'ನಾನು, ನನ್ನದು, ನಾನೆ ಮಾಡಿದ್ದು' ಎಂಬ ಅಹಂಭಾವ ಅಳಿಯುತ್ತ ಹೋಗುತ್ತದೆ, (ಅಹಂದೂರ ತಸ್ಮೇ ಪದಾಂಭೋಜಯುಗ್ಮ ಪ್ರಣಾಮೇಚ್ಛಯಾ ಗತ್ಯ ಸೇವಾಂಕರೋಮಿ) ದೈವಕ್ಕೆ ತಲೆ ಬಾಗುತ್ತಾನೆ. ಈ ದೇವರು ಒಬ್ಬನಿಗಾಗಿ ಮಾತ್ರ ಅಲ್ಲದೆ, ವ್ಯಕ್ತಿ ಸಮಂದಾಯದ ಆದ ಸಮಾಜದ ದೇವರಾಗಿ ಪರಿಣಮಿಸುತ್ತದೆ. ಸಮಾಜದ ಅನೇಕ ಪ್ರತಿಷ್ಠಿತ ಅನ್ನಿಸಿ ಕೊಂಡವರ ಅನೇಕರ ಅಹಂಕಾರ ತೊಡೆಯುವ ಜ್ಞಾನ ಹೆಚ್ಚಿಸುವ ಸ್ಥಳವೆ, ಸಮಾಜ ಸಂಸ್ಕೃತಿ ಕಾಪಾಡುವ ಸ್ಥಳವೆ ದೇವಾಲಯದ ಕಲ್ಪನೆ. ಅದು ದೇವಾಲಯ-ಅಮಿತ ಚೇತನನೊಬ್ಬನಿದಾನೆ ಅಲ್ಲಿ. ಅವನು ಸಕಲ ಗ್ರಹಬಲ, ಪರಮಾತ್ಮ, ಅಮಿತ, ಅಪ್ರಮೇಯ, ಅನುಪಮ. ಅವನೆದುರು ಮನುಷ್ಯ ಜೀವ ಮಿತ. ಇದೇ ಭಕ್ತಿಯ ಹುಟ್ಟು.

## ಭಕ್ತಿಯ ಸ್ತರ-ಪರಿಪಕ್ವತೆ

ನಮ್ಮಲ್ಲಿರುವ ಅನೇಕ ರಾಗಗಳು (ವಿಕಾರವೆಂದರ್ಥದಲ್ಲಿ), ವಿವೇಚನೆ ಮಾಡಿ ದಂತೆಲ್ಲ, ಭಕುತಿಯಾಗಿ ಪರಿಣಮಿಸುತ್ತವೆ. ಆ ದಿಸೆಯಲ್ಲಿ ಮನಹರಿದಂತೆ ವಿವೇಚನೆಯ ಶಕ್ತಿ ಏರಿದಂತೆ, ರಾಗ ಅಳಿಯುತ್ತ, ಭಕ್ತಿಭಾವದ ಉದಯ-ಬೆಳವಿಗೆ ಕಾರಣವಾಗು ತ್ತದೆ. ಪರಮಾತ್ಮನ ವಿಷಯಕವಾಗಿ, ಸಂಪೂರ್ಣ ಜ್ಞಾನ ಲಭಿಸಿದಾಗಲೇ ಅದು "ಪರಿಪಕ್ವ ಭಕ್ತಿ" (ಹಿಂದೆ ತಿಳಿಸಿದ ಭಕ್ತಿ ವೈವಿಧ್ಯ) ಯಾಗಿ ಪರಿಣಮಿಸಲು ಸಾಧ್ಯ. ಪರಿಪಕ್ವ ಭಕ್ತಿಯ ಅವಸ್ಥೆ ತಲುಪಿದ ಭಕ್ತ ಇಹಲೋಕದ ನಶ್ವರತೆ, ಸಂಸಾರದ ಕ್ಷಣಿಕತೆ-ಭೋಗದ ನಿಸ್ಸಾರತೆ, ಬಂಧನದ ಜಟಿಲತೆ-ತೊಡರು, ಕರ್ಮ ಕೋಟಲೆ ಎಲ್ಲ

ವನ್ನು ಕಳಚಿಕೊಳ್ಳುತ್ತ ಮುಂದುವರಿಯುತ್ತಾನೆ. ಅವನಿಗೆ ತಾನು ಕೇವಲ ಭಗವಂತನ ಕಿಂಕರನೆನ್ನಿಸುತ್ತದೆ. (ತ್ವದ್ಭೃತ್ಯ ಭೃತ್ಯ ಪರಿಚಾರಕ ಭೃತ್ಯ ಭೃತ್ಯಸ್ಯ ಭೃತ್ಯ ಇತಿಮಾಂ ಸ್ಮರಲೋಕನಾಥ : ಶ್ರೀ ಕುಲಶೇಖರ ಆಳ್ವಾರ್-ಮುಕುಂದಮಾಲಾ ಸ್ತೋತ್ರ) ಅಥವಾ ಮಧ್ವಮತ ಪರಿಭಾಷೆಯಲ್ಲಿ ಹೇಳುವುದಾದರೆ ಬಿಂಬರೂಪಿಯಾದ ಭಗವಂತನಲ್ಲಿ ತಾನು ಪ್ರತಿಬಿಂಬ ಮಾತ್ರ. ತನ್ನ ಶಕ್ತಿ ತುಂಬ ಮಿತ ಆದದ್ದೆಂಬ ಜ್ಞಾನ ಭಕ್ತನಿಗೆ ಅಗತ್ಯವಾಗುತ್ತದೆ. ಪರಮಾತ್ಮನೆ ಸರ್ವತಂತ್ರ ಸ್ವತಂತ್ರ, ತಾನು ಪರತಂತ್ರನೆಂಬ ಅರಿವೂ ಉಂಟಾಗುತ್ತದೆ. ಇವೆಲ್ಲ ತಿಳಿಯುವುದು, ಜ್ಞಾನ ಭಕ್ತಿ ಒಂದುಗೂಡಿದಾಗ ಮಾತ್ರ. ಪ್ರತಿಬಿಂಬ ಆದ ಜೀವಾತ್ಮರು ಬಿಂಬರೂಪೀ ಸರ್ವಶಕ್ತನ ಮೇಲೆ ಸಂಪೂರ್ಣ ಅವಲಂಬಿಸಿರುತ್ತಾರೆ. ನೆರಳು ಮೂಲವನ್ನು ಹೋಲುವಂತೆ ಹಾಗೂ ಮೂಲದ ಇರವಿನ ಮೇಲೆ ನೆಳಲು ಅವಲಂಬಿಸುವಂತೆ, ಪರಮಾತ್ಮನೊಂದಿಗೆ ಜೀವಾತ್ಮರು ಅವಿನಾ ಸಂಬಂಧ ಪಡೆಯುತ್ತಾರೆ. ಅವರ ನೈಜಸ್ವಭಾವ, ಜಾಗೃತಿ, ಎಲ್ಲ ವಿಚಾರದಲ್ಲೂ ದೇವರ ಮೇಲೆಯೆ ಅವಲಂಬಿಸುತ್ತಾರೆ. ಜ್ಞಾನ ಭಕ್ತಿ ಒಂದುಗೂಡುವಿಕೆಯನ್ನೆ ಶ್ರೀಮಧ್ವಾಚಾರ್ಯರು "ಮಹಾತ್ಮ್ಯಜ್ಞಾನ"ವೆಂದು ಕರೆದರು. ಮಹಾತ್ಮ್ಯಜ್ಞಾನವುಂಟಾದೊಡನೆಯೆ ಭಕ್ತ ತನ್ನ ಭಕ್ತಿ ಸಾಧನೆಯಲ್ಲಿ ಉನ್ನತ ಹಂತ ತಲುಪುತ್ತಾನೆ. ಭಕ್ತಿಯು ಭಾಗವತ ಬಂದದ್ದೆ ಶ್ರೀಕೃಷ್ಣನಿಂದ ಹಾಗೂ ವ್ಯಾಸಾಗಮಗಳಾದ ಮಹಾಭಾರತ, ಗೀತೆಯೂ ಅಷ್ಟೆ. ಇವುಗಳ ಪ್ರಕಾರ, ಭಕ್ತಿ ದ್ವಿಮುಖಿ ಆದುದು ! ಭಕ್ತಿ ಮತ್ತು ವಿರಕ್ತಿ.

## ಭಕ್ತಿ ದ್ವಿಮುಖ : ಭಕ್ತಿ-ವಿರಕ್ತಿ

ವಿರಕ್ತಿ ಎಂದರೆ ಎಲ್ಲದರಲ್ಲೂ ಉದಾಸೀನ ಭಾವನೆ ತಳೆವುದೆಂದಲ್ಲ. ಇಂದ್ರಿಯ ಚಾಪಲ್ಯದಲ್ಲಿ ವಿರಕ್ತಿ : ಇದಕ್ಕೆ ಹೆಚ್ಚು ಪ್ರಾಶಸ್ತ್ಯ. ಪ್ರಪಂಚ ಶಾಶ್ವತವಲ್ಲ, ಕ್ಷಣಿಕ ಲೌಕಿಕ ಸುಖಲೋಲುಪನಾಗದೆ ತನ್ನ ಇಂದ್ರಿಯಗಳನ್ನು ನಿಗ್ರಹಿಸಬಲ್ಲಾತನಿಗೆ ಮಾತ್ರವೆ ವಿರಕ್ತಿ ಸಾಧ್ಯ. (ಅಹಿಂಸಾ ಸತ್ಯ ಅಸ್ತೇಯ ಬ್ರಹ್ಮಚರ್ಯ ಅಸಂಗ್ರಹ ಶರೀರ ಶ್ರಮ। ಸ್ವಾದಾ ಸರ್ವತ್ರ ಭಯವರ್ಜನ ಎಂದೇ ಗೀತೆ ವ್ರತ ವಿಧಿಸಿದೆ-ಈ ದಿಸೆಯಲ್ಲಿ) ವಿರಕ್ತಿ ಕೇವಲ ಹೊರತೋರಿಕೆಗೆ ಅಲ್ಲ : ಅಂತರಿಕವಾಗಿಯೂ ಇರಬೇಕು.

> ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।
> ರಸವರ್ಜ್ಯಂ ರಸೋಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥

ವಿರಕ್ತಿ ಎತ್ತರಕ್ಕೇರಿದಂತೆ, ಇಹದೆಡೆಯ ವಸ್ತುಗಳೆಡೆ ಅವನ ದೃಷ್ಟಿಕೋನವೂ ಬದಲಾಗುತ್ತ ಹೋಗುತ್ತದೆ. ಹರಿದಾಸರು ದೈವಪ್ರಸಾದದ ಮಹತ್ವ ಅರಿತು, ಅದಕ್ಕಾಗಿ ಹಂಬಲಿಸಿದ್ದಾರೆ-ತಮ್ಮ ಕೀರ್ತನೆ, ಕೃತಿಗಳಲ್ಲಿ. ಇದೇ ಆರ್ತಭಾವ-ಇದೇ ಹರಿದಾಸ ವಾಙ್ಮಯವೆ ಉಪನಿಷದ್ವಾಣಿಗೆ ನಿದರ್ಶನ. "ಯಮೇವೈಷ ವೃಣುತೇ ತೇನಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್" (ಕಠೋಪನಿಷತ್ತು) ಇದು ಭಗವತ್

ಸಾದಿಸುವುದಕ್ಕಾಗಿ ಇರುವ ಭಕ್ತಿ. ಇದರಲ್ಲಿ ಕಾಮ, ಕ್ರೋಧ, ದ್ವೇಷ ಯಾವುದೂ ಇಲ್ಲ. ಇದನ್ನು ತಲುಪಿದ ಭಕ್ತ-ವಿರಕ್ತ, "ಪ್ರಾಣ, ಬುದ್ಧಿ, ಮನ, ಆತ್ಮ, ಐಶ್ವರ್ಯ, ಎಲ್ಲವೂ ಪರಮಾತ್ಮನ ಸಂಪರ್ಕದಿಂದ ಪ್ರಿಯವಾಗುವುದೇ ವಿನಹ ಆವನಿಗಿಂತ ಪ್ರಿಯ ವಸ್ತು ಬೇರಾವುದಿದೆ" ಎಂಬ ಹಂತಕ್ಕೇರುತ್ತಾನೆ.

## ಭಕ್ತಿಯ ಪ್ರಭೇದ

ಭಕ್ತಿಯಲ್ಲಿ ಗೌಣೀಭಕ್ತಿ, ಪರಾಭಕ್ತಿ ಎಂದು ಎರಡು ರೀತಿಗಳನ್ನು ಬಲ್ಲವರು ಹೇಳುತ್ತಾರೆ. ಮೊದಲನೆಯದು ಹೊರಗಿನ ಆಚಾರ, ಎರಡನೆಯದು ಮಾಂಕಿಕ ಭಕ್ತಿ ಎಂದೂ ಕರೆಯುವುದುಂಟು. ಗೌಣೀಭಕ್ತಿ ಎರಡು ವಿಧ । ಗುಣಭೇದ, ಆರ್ತಭೇದ. ಭಗವಂತನಲ್ಲಿ ಭಕ್ತಿ ಪ್ರೇಮಮಯ ಆದದ್ದು ಆದರೂ ಆ ಹಂತ ತಲುಪದ, ಆದರೆ, ಆ ಹಂತ ತಲುಪಲು ನೆರವಾಗುವವು ಹೊರಗಿನ ಆಚಾರಗಳು. ಗೌಣೀಭಕ್ತಿ ಮತ್ತೆ ಮೂರು ರೀತಿ : ಸಾತ್ವಿಕ, ರಾಜಸಿಕ, ತಾಮಸಿಕ. ಸಾತ್ವಿಕ ಭಕ್ತಿ ಸರ್ವ ರೀತಿಯಲ್ಲಿಯೂ ಶ್ರೇಷ್ಠ ವೆಂದೆ ಪರಿಗಣಿಸಲ್ಪಟ್ಟಿದೆ. ಸಾತ್ವಿಕ ಸ್ವಭಾವದ ಭಕ್ತ-ಕೇವಲ ಶುದ್ಧವಾದ ಭಕ್ತಿ-ಜ್ಞಾನಗಳನ್ನು ಮಾತ್ರ ಬಯಸುತ್ತಾನೆ. ರಾಜಸ ಸ್ವಭಾವದ ಭಕ್ತ ಯಾವುದಾದರೂ ನಿರ್ದಿಷ್ಟ ಫಲ ಬಯಸುವವ : ತಾಮಸಿಕ, ಅಜ್ಞಾನ ಜನ್ಯ, ಅಜ್ಞಾನದಿಂದಾವೃತ್ತ ವಾದದ್ದು. ಅದು ಭಕ್ತಿಯ ಸಾಧನೆಯಲ್ಲಿ ತುಂಬಾ ಕೆಳಗಿನ ಮೆಟ್ಟಿಲು.

ಆರ್ತಭಾವ ಮೂರು ತೆರನಾದ್ದು : ಜಿಜ್ಞಾಸು, ಆರ್ತ, ಅರ್ಥಾರ್ಥಿ. ಇದನ್ನು ಗೀತೆಯೆ ತಿಳಿಸುತ್ತದೆ. ವಿಚಾರ ಪ್ರೇರಿತನಾಗಿ, ಹೋಗುವಾತ, ತಿಳಿಯಲು ಇಚ್ಛೆ ಯುಳ್ಳವನೇ ಜಿಜ್ಞಾಸು. ಅನೇಕ ಸಮಸ್ಯೆಗಳಿಂದ ಪ್ರಶ್ನೆಬದ್ಧನಾಗಿ, ಸರಿಯಾದ ತಿಳಿವಳಿಕೆ ಪಡೆಯಲು ದೇವರ ಮೊರೆ ಹೊಂಗುವಾತ ಅರ್ಥಾರ್ಥಿ. ಉಳಿದವನು ಆರ್ತ. ತನ್ನ ದುಃಖ ಶಮನಕ್ಕಾಗಿ ದೇವರ ಮೊರೆ ಹೋಗುವಾತ. ಇವರೆಲ್ಲ ಕ್ರಮೇಣ ಭಗವಂತ ನನ್ನೆ ಪ್ರೀತಿಸಲಾರಂಭಿಸುತ್ತಾರೆ. ದಿನೇ ದಿನೇ ಆ ಪ್ರೀತಿ ಬೆಳೆಯುತ್ತ ಗಾಢ ಆದಂತೆ, ಅವರು 'ಪರಾಭಕ್ತಿ'ಯ ಹಂತವೇರುತ್ತಾರೆ. ಇದು ಸಾತ್ವಿಕ ಸ್ವಭಾವದ ಭಕ್ತಿ. ಈ ಭಕ್ತಿಯಿಂದೊಡಗೂಡಿದಾತ ಶ್ರೇಷ್ಠ ಜ್ಞಾನವನ್ನೆ ಹೊಂದುತ್ತಾನೆ. ಆದರೆ, ಒಂದು ಮರೆಯಬಾರದು. ಪರಾಭಕ್ತಿಗೆ ಗೌಣೀಭಕ್ತಿ ಅನಿವಾರ್ಯ. ಗೌಣೀಭಕ್ತಿಯೆ, ಪರಾಭಕ್ತಿಗೆ ಸಾಧಕ.

ಭಕ್ತಿ, ಮುಕ್ತಿಯತ್ತ ಭಕ್ತ ನಡೆಸುವ ಸಾಧನ, ಜೀವಾತ್ಮನಿಗೆ, ಮೋಕ್ಷ ಸಾಧನೆಗೆ ಶ್ರವಣ, ಮನನ, ನಿಧಿಧ್ಯಾಸನ, ದಾನ, ತಪಸ್ಸು, ಯಜ್ಞ-ಯಾಗ, ಇತ್ಯಾದಿ ಹಲವು ಮಾರ್ಗಗಳಿದ್ದಾಗ್ಯೂ ಭಗವಂತನ ದಿವ್ಯಪ್ರಸಾದ ಒದಗಿಸುವಲ್ಲಿ ಭಕ್ತಿಯೆ ಸುಲಭ ಸಾಧನ.

ಯದಿಭವತಿ ಮುಕುಂದೇ ಭಕ್ತಿರಾನಂದಸಾಂದ್ರಾ
ವಿಲುಠತಿ ಚರಣಾಗ್ರೇ ಮೋಕ್ಷ ಸಾಮ್ರಾಜ್ಯ ಲಕ್ಷ್ಮೀಃ ।...

ಮಂಕ್ತಿಯು ಭಕ್ತಿಯ ದಾಸಿ! ಇದು ಭಕ್ತಿಯ ಮಹಿಮೆ! ಶ್ರೀಕೃಷ್ಣನೂ ಭಕ್ತಿಯ ಮಹತಿಯನ್ನು ಮುಕ್ತಕಂಠದಿಂದ ಸಾರಿದ್ದಾನೆ: "ಜ್ಞಾನೀತು ಆತ್ಮೈವ ಮೇಮತಂ..." "ಜ್ಞಾನಿಯು ನಾನೇ ಎಂದು ತಿಳಿಯಬೇಕೆಂಬುದೇ ನನ್ನ ಮತ", ಗೀತೆ ಮತ್ತೆ ಈ ದಿಸೆಯಲ್ಲಿ ಹೀಗೆಂದಿದೆ:

ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ ।
ತತೋ ಮಾಂ ತತ್ವತೋ ಜ್ಞಾತ್ವಾ ವಿಶತೇ ತದನಂತರಂ ॥
(ಅ.18 ಶ್ಲೋಕ 55)

"ಭಕ್ತಿಯ ಮೂಲಕ ನಾನು ಯಾರು, ಎಂಥವನು ಎಂಬುದನ್ನು ತತ್ವತಃ ಅರಿತು ಅವನು ಮುಂದೆ ತನ್ನಲ್ಲಿ ಸಾಯುಜ್ಯ ಪಡೆವ"ನೆಂಬುದೇ ಗೀತಾಚಾರ್ಯನ ಅಭಿಮತ. ಆದ್ದರಿಂದ "ತ್ವ ಮೇವ ಶರಣಂ ಗಚ್ಛ" ಎನ್ನುವುದು. ಭಗವಂತನಲ್ಲಿ ಸಂಪೂರ್ಣವಾಗಿ ಶರಣಾದರೆ, ಅವನ ಕೃಪೆಯಿಂದ ಪರಮ ಶಾಂತಿಯನ್ನೂ, ಶಾಶ್ವತ ಪದವಿಯನ್ನೂ ಪಡೆಯಬಹುದು. ಇದನ್ನೆ ಶ್ರೀಪಾದರಾಜರು ಹಾಡುವ ಸೊಬಗೇ ಬೇರೆ:

ಭಕ್ತಿಬೇಕು ಶಕ್ತಿಬೇಕು ಮುಂದೆ !
ಮುಕ್ತಿಯ ಬಯಸುವವಗೆ

ಶ್ರೀಪುರಂದರದಾಸರಾದರೂ "ಮುಕ್ತಿ ಪಡೆವುದಕೆ ಪುರಂದರ ವಿಠಲನ ಭಕ್ತನಾಗುವುದೇ ಸಾಕ್ಷಿ ॥ ಎಂದೂ, "ಭಕ್ತಿಯಲಿ ಶ್ರೀ ಪುರಂದರವಿಠಲನ ನೆನೆದರ ಮುಕ್ತಿ ಸಾಧನ" ಎಂದಿದ್ದಾರೆ. ಇದರಿಂದ ಭಕ್ತಿಯ ಪ್ರಾಮುಖ್ಯತೆ ಎಷ್ಟೆಂದು ತಿಳಿಯಬರುತ್ತದೆ.

ಭಕ್ತಿಯನ್ನು ಪಡೆದ ಭಕ್ತ ಎಲ್ಲದರಲ್ಲೂ ಕಾಣುವುದು ಭಗವಂತನನ್ನೆ. ಸುಖಕ್ಕೆ ಹಿಗ್ಗದೆ, ಕಷ್ಟದಲ್ಲಿ ಕುಗ್ಗದೆ, ದುಃಖಕ್ಕೆ ಅಂಜಿ ಅಳುಕದೆ, ಎಲ್ಲ ಒಂದೇ ಎಂಬ ಭಾವಿ ಸುವ ಸ್ಥಿತಪ್ರಜ್ಞ ಲಕ್ಷಣ ಅವನಲ್ಲಿರುತ್ತದೆ.

ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।
ವೀತರಾಗಭಯ ಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥
ಯಃ ಸರ್ವತ್ರಾನಭಿಸ್ನೇಹತ್ತತ್ತತ್ಪ್ರಾಪ್ಯಶುಭಾ ಶುಭಂ ।
ನಾಭಿನಂದತಿ ನದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥

ಇದು ಭಕ್ತನ ನೈಜಸ್ವಭಾವ. ಸಂಸಾರದಲ್ಲಿದ್ದರೂ "ಪದ್ಮಪತ್ರ ಮಿವಾಂಭಸಾ" ರೀತಿ ಸಂಸಾರ ವಿರಾರಿದ ಸ್ಥಿರತೆ ಅವನ ಚಿತ್ತದ್ದು. ಎಲ್ಲವೂ ಹರಿಪ್ರೀತಿಯೆಂಬುದೆ ಅವನ ಹೃದ್ಗತ. ಇಂಥ ಭಕ್ತ ಪರಿಪೂರ್ಣ, ಹಾಗೂ ಪರಮಾತ್ಮನಿಗೆ ಪ್ರಿಯನಾದವನು.

ಭಗವಂತನನ್ನು ದರ್ಶಿಸಿ, ಭಕ್ತಿಯ ಅನುಭವವನ್ನು ಪಡೆದ ಅನುಭಾವಿಯ ವ
ಭಾಗವತದಲ್ಲಿ ಹೀಗೆ ಉಲ್ಲೇಖ ಆಗಿದೆ :

ವಾಗ್ ಗದ್ಗದಾ ದ್ರವತೇ ಯಸ್ಯ ಚಿತ್ತಮ್ ।
ರುದತ್ಯಭೀಕ್ಷ್ಣಂ ಹಸತಿ ಕ್ವಚಿತ್ ಚ ।
ವಿಲಜ್ಜ ಉದ್ಗಾಯತಿ ನೃತ್ಯತೇ ಚ ।
ಮದ್ಭಕ್ತಿಯುಕ್ತೋ ಭುವನಂ ಪುನಾತಿ ॥

ಕಂಠ ಗದ್ಗದಗೊಳ್ಳುತ್ತದೆ, ಮನಸ್ಸು ಕರಗುತ್ತದೆ, ಕಣ್ಣು ಹನಿಗೂಡುತ್ತದೆ, ಆನಂದಾ
ಹರಿಯುತ್ತವೆ. ತನಗೆ ತಾನೆ ನಗು : ಲಜ್ಜೆ ನಾಶವಾಗುತ್ತದೆ. "ಮಂಗಳಕಬಧಿರ
ಪ್ಪರೊ" ಎಂಬ ಕೀರ್ತನೆಯು ಭಕ್ತನ ಲಕ್ಷಣ ಆವನದ್ದು ಇಂಥ ಭಗವದ್ಭಕ್ತಿಯಿಂ
ಭುವನವನ್ನೇ ಪಾವನಗೊಳಿಸುತ್ತಾನೆ.

## ಭಕ್ತಿಯ ಅನುಭವ

ಇಂಥ ಎಣೆಯಿಲ್ಲದ ಆನಂದ ಅನುಭವಿಸುವ ಭಕ್ತನನ್ನು ಕಂಡರೆ, ಭಗವಂತ
ತುಂಬ ಪ್ರೀತಿ. ಬಸವಣ್ಣನವರೊಂದೆಡೆ ಹೇಳುವಂತೆ :

ಮನ ಮನ ಬೆರಸಿದಲ್ಲಿ ತನುಕರಗದಿದ್ದಡೆ
ನೋಂಕಿನಲ್ಲಿ ಪುಳಕಂಗಳು ಹೊರ ಹೊಮ್ಮದಿದ್ದರೆ
ಕಂಡಾಗಲಶ್ರುಜಲಂಗಳು ಸುರಿಯದಿರ್ದಡೆ
ನುಡಿವಲ್ಲಿ ಗದ್ಗದಂಗಳು ಪೂಣ್ಯದಿರ್ದಡೆ
ಕೂಡಲಸಂಗಮದೇವರ ಭಕ್ತಿಗಿದು ಚಿಹ್ನ,
ಎನ್ನಲ್ಲಿ ಇಲ್ಲವಾಗಿ ಡಂಭ ಕಾಣಿರೊ

ಇದೇ ರೀತಿ ವ್ಯಾಸರಾಯರದೂ ಒಂದು ಕೃತಿ ನಮ್ಮನ್ನು ಭಕ್ತಿಪರವಶವಾಗಿಸುತ್ತದೆ :

ಕಂಗಳು ಚೆಲುವನು ನೋಡಿ ।
ಕರ್ಣಂಗಳು ವಾರುತಿಯ ಕೇಳಿ ।
ಹಿಂಗದ ನಾಮವ ವದ ನದಿ ಸವಿಯುತ್ತ ಪ ।
ದಂಗಳ ಮನದಿನೆನೆನೆದು ರೋ ।
ಮಂಗಳು ಪುಳಕಿತವಾಗಿ ಲೋ ।
ಕಂಗಳ ಕಡಲೊಳು ಮುಳುಗಿ ಮೈಯುಬ್ಬಿ ಕೊಬ್ಬುತ್ತ
ಅಂಗವ ಮರೆದಾನಂದದಿ ।
ರಂಗ ಎನುತಿದ್ದರೆ ಸಾಲದೆ......ಸಿರಿಕೃಷ್ಣರಾಯ

ಭಕ್ತಿಮಾರ್ಗದ ಸಾಧನೆಗೆ ಚಿಕ್ಕವರು-ದೊಡ್ಡವರು, ಹೆಣ್ಣು-ಗಂಡು, ಬಡವ-ಬಲ್ಲಿದ, ಯಾವುದೆ ಭೇದ ಅಡ್ಡಿಯಿಲ್ಲ. ಕಾಲ-ಸ್ಥಳಕ್ಕೂ ಭಕ್ತಿ ವಿಹಾರಂತ್ರದೆ. ಅದು ಕಾಲಾತೀತ, ಸ್ಥಳಾತೀತ. ಸಾಮಾನ್ಯ ಕೂಡ ಸಾಧಿಸಬಲ್ಲ ಸುಲಭ ಮಾರ್ಗ. ಅದರ ಸಾಧನೆಗೆ ವರ್ಚಸ್ಸು, ವಂಶ್ಯ, ವಯಸ್ಸಲ್ಲ. ತರಳಪ್ರಹ್ಲಾದ, ಬಾಲಕಧ್ರುವ, ಭೀಷ್ಮ ರುಕ್ಮಾಂಗದ, ಕೃಷ್ಣಭಕ್ತೆ ದ್ರೌಪದಿ, ಸಂತ ಸಖೂಬಾಯಿ, ಹೀಗೆ ಎಷ್ಟೋ ಜನ ದಾಸ ಶ್ರೇಷ್ಠರಾದ ಪುರಂದರದಾಸರೊಂದೆಡೆ ಎನ್ನುತ್ತಾರೆ॥ "......ವರುಪ ಕಾರಣವಲ್ಲ ಹರಿಭಜನೆಗೆ ಅರಿತ ಸಜ್ಜನರೆಲ್ಲ ಕೇಳಿ ಸಮ್ಮತಿದಿ"

ಭಕ್ತಿಯನ್ನು ಕುರಿತ ವ್ಯಾಖ್ಯೆ ಹೀಗೆ. ಸಾಗಿದಷ್ಟೂ ಅನಂತವೆ ಎಂದೆನಿಸಿದರೂ ವಿಸ್ತಾರದ ಭೀತಿಯಿಂದ, ಹಾಗೂ ಅಧ್ಯಯನದ ನಿಟ್ಟಿನಿಂದ ಮೊಟಕುಗೊಳಿಸಬೇಕಾಗಿದೆ. ಆದರೆ, ವಿವಿಧ ಮತ ಪ್ರವರ್ತಕರು ಭಕ್ತಿಯನ್ನು ಕುರಿತು ನೀಡಿರುವ ನಿರೂಪಣೆ ನಾವು ಗುರುತಿಸಬೇಕಾಗುತ್ತದೆ. ಈ ರೀತಿಯ ನಿರೂಪಣೆ ಬಹು ವಿಸ್ತಾರ ಆಗಿದ್ದರೂ, ಮುಖ್ಯವಾದವುಗಳನ್ನು ಮಾತ್ರ ಪರಿಭಾವಿಸಲಾಗಿದೆ.

ಭಾಗವತದಲ್ಲಿ ಭಕ್ತಿ ಕುರಿತಂತೆ, ದೇವರಲ್ಲಿ ಮಾಡುವ ನಿಸ್ವಾರ್ಥಪ್ರೇಮ, ಪರಮ ಚೇತನದಲ್ಲಿ ನಿಕಟವಾಗಿ ಸ್ನೇಹ ಇರಿಸಿಕೊಂಬುವುದು ಭಕ್ತಿ ಎಂದೆನಿಸಿಕೊಳ್ಳುತ್ತದೆ.

| | | |
|---|---|---|
| ರಾಮಾಯಣ | : | ಅಧಿಕ ಮಹಾನ್ ವಿಷಯಃ ಸ್ನೇಹಃ ...ಉತ್ಕೃಷ್ಟ ಪ್ರೀತಿಃ... |
| ರಾಮಾನುಜ | : | ಸ್ನೇಹಪೂರ್ವಕಂ ಅನುಧ್ಯಾನಮ್ |
| ವೇದಾಂತಶಿಕರು | : | ಮಹನೀಯ ವಿಷಯೇ ಪ್ರೀತಿರೇವ ।<br>ಸ್ನೇಹಪೂರ್ವ ಅನುಧ್ಯಾನಮ್ ಇತಿ<br>ಪ್ರೀತಿರೂಪಾಪನ್ನ ಸ ಏವ ಭಕ್ತಿಯೋಗಃ । |
| ಮಧ್ವಾಚಾರ್ಯರ | : | ಮಾಹಾತ್ಮ್ಯಜ್ಞಾನ ಪೂರ್ವಸ್ತು ಸುದೃಢಃ । ಸರ್ವತೋಧಿಕಃ<br>ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನಚಾನ್ಯಥಾ ॥ |

ಇದು ವಿವಿಧ ಕಾವ್ಯ, ಮತಾಚಾರ್ಯ, ದಾರ್ಶನಿಕರ ಭಕ್ತಿಯ ನಿರೂಪಣೆ. ಹರಿದಾಸರಲ್ಲಿ ಭಕ್ತಿ ದೃಷ್ಟಿಯಿಂದ ನಾವು ಮಧ್ವಾಚಾರ್ಯರ ನಿರೂಪಣೆಯ ತಿರುಳನ್ನೆ ಮುಂದೆ ಪರಿಭಾವಿಸುತ್ತೇವೆ. ಏಕೆಂದರೆ ಹರಿದಾಸರೆಲ್ಲ ಮಧ್ವಮತಾನುಯಾಯಿಗಳೆ ಆಗಿ, ತಮ್ಮ ನವ ವಿಧ ಭಕ್ತಿ ವೈವಿಧ್ಯದಲ್ಲಿ ಮಧ್ವಮತವನ್ನು ಪ್ರಸರಿಸುವುದು ತಿಳಿದು ಬರುವಂಥ ವಿಚಾರ. ಎಲ್ಲಕ್ಕಿಂತ ಹೆಚ್ಚು ಅಧಿಕವಾಗಿ ದೇವರನ್ನು ಪ್ರೀತಿಸುವುದು (ಅವನ ಮಾಹಾತ್ಮ್ಯವನ್ನರಿತು) ಅದು ಮಾತ್ರವೆ ವಿಮೋಚನೆ-ಮೋಕ್ಷ ನೀಡುವಂಥದು. ಭಕ್ತಿ ನವರಸಗಳಿದ್ದಂತೆ, ಒಂದು ರಸ: ಅದರಲ್ಲಿ ಆತ್ಮಮೊಲ್ಲ ಆದದ್ದು, 'ತನ್ಮಯ', 'ದಾಸ್ಯ' ಮತ್ತು 'ಸಖ್ಯ', ದ್ವೈತತತ್ವದ ನಂಟಿನಲ್ಲಿ ಭಕ್ತಿಯೆಂದರೆ, ದಾಸ್ಯ-ಸಖ್ಯ-ಆತ್ಮನಿವೇದನ ಎನ್ನಬಹುದು. ಭಕ್ತಿಯ ಫಲ ಅನಂತ.

### ಭಕ್ತ್ಯಾವಸ್ಥೆ-ನಾರದಭಕ್ತಿಸೂತ್ರ ಹಾಗೂ ಇತರ ದಾರ್ಶನಿಕರ ಅಭಿಮತ

ಭಕ್ತಿಯನ್ನು ಹೊಂದಿದ ಭಕ್ತನ ಅವಸ್ಥೆಯೆಂತಹದು ಎಂಬುದಕ್ಕೆ ನಾರದರು ಮನಸಾರ ಬಣ್ಣಿಸಿದ್ದಾರೆ : ಯತ್‌ಲಬ್ಧ್ವಾ ಪುಮಾನ್ ಸಿದ್ಧೋ ಭವತಿ, ಅಮೃತೋ ಭವತಿ, ತೃಪ್ತೋ ಭವತಿ, ಯತ್‌ಪ್ರಾಪ್ಯ ನ ಕಿಂ ಚಿದ್ವಾಂಛತಿ. ನಶೋಚತಿ, ನದ್ವೇಷ್ಟಿ ನರಮತೇ ನೋತ್ಸಾಹೀಭವತಿ ಯಜ್‌ಜ್ಞಾತ್ವಾ ಮತ್ತೋಭವತಿ, ಆತ್ಮಾರಾಮೋಭವತಿ" ಭಗವಂತ ಇಂಥ ಭಕ್ತನನ್ನು "ಸಮೇ ಪ್ರಿಯಃ ಎಂದಿದ್ದು.

ಮಧ್ವ ಸಿದ್ಧಾಂತದಲ್ಲಿ ಬಹುದೊಡ್ಡ ಹೆಸರು, ಮಧ್ವಾಚಾರ್ಯರ ಗ್ರಂಥಗಳಿಗೆ ಟೀಕೆ ಬರೆದ ಶ್ರೀಜಯತೀರ್ಥರದು. ಜಯತೀರ್ಥರ "ನ್ಯಾಯಸುಧಾ" ಮಾಧ್ವ ವಾಙ್ಮಯ ಅತ್ಯಂತ ಭಕ್ತಿಯಿಂದ ಪೂಜಿಸುವ ಗ್ರಂಥ. ಅಲ್ಲಿ ಭಕ್ತಿಯನ್ನು ಕುರಿತು ಹೀಗೆನ್ನುತ್ತಾರೆ :

> ನಿರವಧಿಕ ಅನಂತ ಅನವದ್ಯ ಕಲ್ಯಾಣಗುಣತ್ವ ಜ್ಞಾನಪೂರ್ವಕಃ ।
> ಸ್ವಾತ್ಮೀಯ ಸಮಸ್ತ ವಸ್ತುಭ್ಯೋ ಅನೇಕ ಗುಣಾಧಿಕೋ
> ಅಂತರಾಯ ಸಹಸ್ರೇಣಾಪಿ ಅಪ್ರತಿಬದ್ಧೋ ನಿರಂತರ ಪ್ರೇಮ ಪ್ರವಾಹಃ ॥

ತನ್ನೆಲ್ಲರನ್ನೂ ಮೀರಿಸಿ-ಎಲ್ಲದಕ್ಕಿಂತ ಪ್ರೀತಿಸುವ ಪ್ರೇಮಪ್ರವಾಹವೆ ಭಕ್ತಿ. ಭಾಗವತದಲ್ಲೊಂದೆಡೆ "ನರಾನಂ ನತಪೋ ನೇಜ್ಯಾ ನಶೌಚಂ ನವ್ರತಾನಿಚ । ಪ್ರೀಯಂತೇ ಮಲಯಾ ಭಕ್ತ್ಯಾ ಹರಿರನ್ಯಾದ್ ವಿಡಂಬನಮ್" ಎಂದಿದಾರೆ. ಪರಮಾತ್ಮನಿಗೆ ದಾನ, ತಪ, ಶುಚಿ, ವ್ರತ, ಯಜ್ಞ, ಯಾವುದೂ ಸಂತೋಷಪಡಿಸದು, ನಿರ್ಮಲವಾದ ಭಕ್ತಿಯೊಂದೇ ಸಾಕು. ಭಕ್ತಿಯೆಂಬುದು ರಹಸ್ಯವಾದದ್ದು, ಪವಿತ್ರವೂ, ಜ್ಞಾನಸಾಧಕವೂ, ಆಚರಣೆಗೆ ತುಂಬ ಸುಲಭವೂ ಆದ ರಾಜವಿದ್ಯೆ... (ಗೀತಾ ೯-೨). ಇಂಥ ಅನನ್ಯ ಭಕ್ತಿಯಿಂದಲೇ ಪರಮಾತ್ಮನನ್ನು ಹೊಂದಲು ಸಾಧ್ಯ (ಗೀತಾ : ೮–೨೨) ಭಕ್ತಿಯೋಗ ಯಾವುದೆ ಪೂರ್ವಸಿದ್ಧತೆ ಅಪೇಕ್ಷಿಸುವುದಿಲ್ಲ. ಈ ಯೋಗ ಸಾಧನೆಗೆ ಬೇಕಾದ ಶುದ್ಧಿ ಜ್ಞಾನಗಳನ್ನು ಕ್ರಮೇಣ ಸಾಧಕನಿಗೆ ಭಕ್ತಿಯೇ ತರುತ್ತದೆ (ಗೀತಾ : ೯-೩೦, ೩೧) ಪರಮಾತ್ಮನ ಜ್ಞಾನ, ದರ್ಶನ, ಮುಕ್ತಿಗಳಿಗೆಲ್ಲ ಭಕ್ತಿಯೆ ಏಕ ಮಾತ್ರ ಸಾಧನ ಗೀತಾ : ೧೧-೫೪). ಮುಕ್ತಿಯು ಭಕ್ತಿಗೆ ಉತ್ತಮ ಸಾಧನ-ಅಮಲಾಭಕ್ತಿಶ್ಚ ತತ್ಸಾಧನಮ್. ಈ ಭಕ್ತಿ, ಹೊರಗಿನ ಪೂಜೆ, ಕಾಯ ಕರ್ಮ ಮೊದಲಾದ ಬಾಹ್ಯ ಕಾವ್ಯಗಳಿಂದ ಆರಂಭ ಆಗಿ, ಕೀರ್ತನ ಭಜನೆ ಮುಂತಾದ ವಾಚನ ವಾಚ್ಯ ಕರ್ಮದಿಂದ ಬೆಳೆದು ಸ್ಮರಣಾದಿಗಳಲ್ಲಿ ಸೂಕ್ಷ್ಮ ರೂಪ ಹೊಂದಿ ಮನೋಗತ ಆಗಿ ಆತ್ಮ ನಿವೇದನದ ಸರ್ವ ಸಮರ್ಪಣಭಾವವನ್ನು ನೆಲೆಗೊಳಿಸುವಲ್ಲಿ ಪರಿಣತಿಯನ್ನು ಹೊಂದುತ್ತದೆ. ಆಗಲೇದೈವ ಸಾಕ್ಷಾತ್ಕಾರ, ಮುಕ್ತಿ. ಮುಮುಕ್ಷುವಿನ ಧ್ಯೇಯವೇ ಮುಕ್ತಿ. ಮುಕ್ತಿಗೆ ಜ್ಞಾನ ಬೇಕು, ಜ್ಞಾನ ಭಕ್ತಿಯಿಂದ ಲಭ್ಯ. ಭಕ್ತಿ, ದೃಢವಾದ ನಿರ್ಹೇತುಕ ಪ್ರೇಮ ಅದರಿಂದಲೇ

"ಅಮಲಾ ಭಕ್ತಿಶ್ಚ ತತ್ಸಾಧನಮ್" ಎಂದಿರುವುದು ಭಕ್ತಿ ಎಂಬ ಪರಂಶ ಶಿಲೆ ಮುಟ್ಟಿದ್ದೆಲ್ಲ ದೈವಮಯ ಆಗಿ, ಭಕ್ತನಿಗೆ ಆ ಭಕ್ತಿಯಿಂದ ದೈವಸಾಕ್ಷಾತ್ಕಾರ ಆಗುತ್ತದೆ. ಕನಕ, ಯಮುನಾರಾಜನ ಕೋಣವನ್ನೆ ಕರೆಸಿ, ಕೆರೆಯ ತೂಬು ಸರಿಪಡಿಸಿದುದು ಮುಗ್ಧಭಕ್ತಿಯ ದೃಢತೆಯಿಂದಲೆ. ಭಕ್ತಿಯನ್ನು ದೈವದೆಡೆಗೆ ಸಾಗುವ ಒಂದು ಮಂತ್ರಿಯ ಮಾರ್ಗ, ಧರ್ಮಜಾಗೃತಿ ಎಂದೂ ತಿಳಿದವರು ಹೇಳುವುದುಂಟು. ಭಕ್ತಿಯ ಅನುಭವ ಅನಿರ್ವಚನೀಯ, ಕಾಣದ, ಕೇಳದ, ಕಂಡರಿಯದ, ಪರಮಾಂತೀನವನ್ನು ಕಂರಿತು ಓರಂತರಸ್ಫೂರ್ತಿಸಂವಲ್ಲಿ, ಉಂಟಾಗುವ ಭಗವದ್ಭಕ್ತಿಯ ಭವ್ಯ, ದಿವದರ್ಶನ ಮಾಡಿಸುತ್ತದೆ. "ಆದೊಂದು ತೇಜೋಶಕ್ತಿ, ಧೀಶಕ್ತಿ, ಅನಂತ, ಅನುಪಮ ಎಂದೆಲ್ಲ ಅನುಭವವಾಗುತ್ತದೆ." ಆದು ಪ್ರಕಾಶಕ್ಕೆ ಬರುವುದೇ "ಪಾತ್ರ" ನಾದವನಲ್ಲಿ (ಪ್ರಕಾಶಿತೇ-ಕ್ವಾಪಿ ಪಾತ್ರೆ,...) ಹೆಣ್ಣು ಹೊನ್ನು ಆಸ್ತಿ, ಒಡವೆ, ಎಲ್ಲ ಕಾಮನೆ ತೊರೆದು, ಏಕಾಗ್ರತೆಯಿಂದ ನೀನೇ ಎಲ್ಲ, ನಾನಿಲ್ಲ...ನಾಹಂಕರ್ತಾ ಹರಿಕರ್ತಾ-ಎಂಬ ಏಕೋಭಾವದಿಂದ ನಂಬಿಸಿದರೆ, ನಂಬಿಕರೆದರೆ ಶಿವನು ಓ ಎಂದು ಬಹನಯ್ಯ ಎಂದಂತೆ ಅಖಿಲಭುವನ ಮನಮೋಹಕನಾದ ಭಗವದ್ದರ್ಶನ ಆಗುತ್ತದೆ. ಆದು ಒಂದು ವಿಶೇಷ ಆಂತರಿಕ ಅನುಭವ ಮಾತ್ರ. ಲೌಕಿಕ ಮೋಹ, ಕಾಮನೆ, ವಿಕಾರ ತೊರೆಯಲು ದಾರಿಯೊಂದೆ ಭಗವಂತನಲ್ಲಿ ಗಾಢಪ್ರೇಮ, ಅದರ ಇನ್ನೊಂದು ಸ್ವರೂಪ, ಭಕ್ತಿ. ಇವುಗಳನ್ನು ಕಾಣಸಿಕ್ಕವರಭಕ್ತರೆಂದೆನ್ನಿಸಿಕೊಳ್ಳಲರ್ಹರು. (ಗಣರಹಿತಂ ಕಾಮನಾರಹಿತಂ ಪ್ರತಿಕ್ಷಣ ವರ್ಧಮಾನಂ ಅವಿಚ್ಛಿನ್ನಂ ಸೂಕ್ಷ್ಮತರಂ ಅನುಭವ ರೂಪಂ-ಏವಭಕ್ತಿಃ) ಇದರಿಂದಲೆ ಕೃಷ್ಣನೆಂಡಿಯಂವುದು :

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು
ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥

(ಅ. ಶ್ಲೋ 34)

ರಾಮಾನುಜರು ತಮ್ಮ ಶ್ರೀಭಾಷ್ಯ ಪ್ರಾರ್ಥನೆಯಲ್ಲಿ ಭಗವಂತನನ್ನು ಕಂರಿತೇ ಹೀಗೆನ್ನುತ್ತಾರೆ :

ಅಖಿಲಭುವನ ಜನ್ಮಸ್ಥೇಮ ಭಂಗಾದಿ ಲೀಲೇ ।
ವಿನತ ವಿವಿಧಭೂತವ್ರಾತ ರಕ್ಷೈಕದೀಕ್ಷೇ ।
ಶ್ರುತಿಶಿರಸಿ ವಿದೀಪ್ತೇ ಬ್ರಹ್ಮಣಿ ಶ್ರೀನಿವಾಸೇ ।
ಭವತು ಮಮ ಪರಸ್ಮಿನ್ ಶೇಮುಷೀಭಕ್ತಿರೂಪಾ ।

## ಬೇರೆ ಬೇರೆ ಭಕ್ತರ ಅನುಭವಗಳು

ಭಕ್ತ್ಯಾವಸ್ಥೆ ಪ್ರಾಪ್ತ ಆದ ನಂತರ ಭಕ್ತನ ಚೇತನ ಎಲ್ಲೆಡೆಯೂ ಭಗವಂತನ ದಿವ್ಯ ಸ್ವರೂಪವನ್ನೇ ಕಾಣುತ್ತದೆ : ಮಾತು, ಆಲೋಚನೆ, ಕೆಲಸ, ಓದು, ಊಟ,

ಎಲ್ಲೆಲ್ಲೂ ಅವನದೆ ಧ್ಯಾನ-ಚಿಂತನ. "ಸ್ವಯಂ ಪ್ರಮಾಣಸ್ವಾತ್"-ಪ್ರಮಾಣವುಳ್ಳದ್ದು ಎಂದೆನಿಸಿಕೊಳ್ಳುವ ಭಕ್ತಿ ಇದೇಯೆ. ತುಲಸೀದಾಸರಂಥ ಶ್ರೀರಾಮ ಭಕ್ತರು "ನನಗೆ ಯಾವ ಸ್ಪೃಹೆಯೂ ಇಲ್ಲ......ನಿರ್ಭರ ಭಕ್ತಿ ಮಾತ್ರ ದಯಪಾಲಿಸು" ಎಂದು ಸ್ತುತಿಸಿದ್ದಾರೆ. ಶ್ರೀಚೈತನ್ಯರಂಥ ವಿಷ್ಣುಭಕ್ತರದೂ ಇದೇ ಪರಿ. ನಿರ್ವ್ಯಾಜಪ್ರೇಮೊಂದೆ ಅವರು ಬಯಸುವಂಥದು. ನಾರದರೂ ನಿಷ್ಕಾಮ ಕರ್ಮ, ಫಲ ತ್ಯಾಗಕ್ಕೆ ಹೆಚ್ಚು ಒತ್ತು ಕೊಡುತ್ತಾರೆ. ಅವರೇ ಇನ್ನೊಂದೆಡೆ ತಿಳಿಸುವಂತೆ, "ಪರಾಭಕ್ತಿ (ಪ್ರೇಮ) ಹನ್ನೊಂದು ವಿಧ: (ಭಗವಂತನ) ಗುಣಮಾಹಾತ್ಮ್ಯಾಸಕ್ತಿ, ರೂಪಾಸಕ್ತಿ, ಪೂಜಾಸಕ್ತಿ, ಸ್ಮರಣಾಸಕ್ತಿ, ದಾಸ್ಯಾಸಕ್ತಿ, ಸಖ್ಯಾಸಕ್ತಿ, ವಾತ್ಸಲ್ಯಾಸಕ್ತಿ, ಕಾಂತಾಸಕ್ತಿ, ಆತ್ಮನಿವೇದನಾಸಕ್ತಿ, ತನ್ಮಯತಾಸಕ್ತಿ, ಪರಮವಿರಹಾಸಕ್ತಿ. ಹೀಗೆ ಇಲ್ಲಿ ಬಸವಣ್ಣನವರ ಒಂದು ವಚನ ನೆನಪಾಗಂತ್ತವೆ: "ನಾನು ಆರಂಭವ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು। ನಾನು ಬೆವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು। ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು। ನಾನಾವ ಕರ್ಮಂಗಳ ಮಾಡಿದರೆಯೂ ಆ ಕರ್ಮಫಲಭೋಗವ ನೀಕೊಡುವೆಯೆಂಬುದ ನಾನು ಬಲ್ಲೆನು। ನೀಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದ ಕ್ರೀಯ ಮಾಡೆನು। ನಿಮ್ಮ ಸೊಮ್ಮಿಂಗೆ ಸಲಿಸುವೆನು, ನಿಮ್ಮಾಣೆ ಕೂಡಲಸಂಗಮದೇವಾ॥" ಇದು ಭಕ್ತಿಯೆಂದೆನಿಸುವ ವಿವಿಧ ಚಿಂತನೆ॥ ಎಲ್ಲ ಒಂದೇ ನೆಲೆಗೆ, ಅದು ಭಕ್ತಿಯ ನೆಲೆಗೇ, ಅಲ್ಲಿ ಪರಮಾತ್ಮನ ಜ್ಞಾನ, ದರ್ಶನ, ವಂಂಕ್ಕೆ, ಏನಿದಲ್ಲಿ-ಅದೆಲ್ಲಕ್ಕೂ ಸಾಧನ ಭಕ್ತಿಯೆ ನೆಲೆಯೆ. ಹೀಗೆ ಶೈವ, ಶಾಕ್ತ, ವೈಷ್ಣವ ಅಷ್ಟಾದಶ ಪುರಾಣ ಎಲ್ಲ ಧರ್ಮಗ್ರಂಥಗಳೂ ಭಕ್ತಿಯನ್ನೆ ಪ್ರತಿಪಾದಿಸಿದವು.

ಭಕ್ತಿ ಅನಂತ ಅದದ್ದು ; ವಿಶ್ವವ್ಯಾಪಿ. ಜಗತ್ತಿನಲ್ಲಿ ಆಗಿ ಹೋದ ಎಲ್ಲ ಧರ್ಮ ಪ್ರವರ್ತಕರೂ ಆಚಾರ್ಯರೂ ಭಕ್ತಿಯ ಹಂತ-ಅನುಭವಗಳನ್ನು ತಂತಮ್ಮ ರೀತಿಯಲ್ಲಿ ಬಿತ್ತರಿಸಿದ್ದಾರೆ.

ಜೆರೊಸಲೆಮ್‌ನಲ್ಲಿ ಜನಿಸಿ, ಕ್ರೈಸ್ತ ಧರ್ಮ ಬೋಧಕನೆನ್ನಿಸಿರುವ ಯೇಸು, ಸರ್ವೋದಯ ಹರಿಕಾರನೆ: ದೇವರು ತನ್ನ ತಂದೆಯೆಂದಾತಭಾವಿಸಿದ್ದ. ಹಾಗೂ ಮಾನವ ಕೋಟಿಯು ಆ ತಂದೆಯ ದಿವ್ಯ ಸಂತಾನ, ಎಲ್ಲರೂ ಸೋದರರೆಂದೆ ಆವನು ಸಾರಿದ. ಕ್ರೈಸ್ತ ಧರ್ಮದಲ್ಲಿ ಅನೇಕ ಸಾಧುಸಂತರು ಆಗಿಹೋಗಿದಾರೆ.

### ತಮಿಳುನಾಡಿನ ಆಳ್ವಾರರ ಭಕ್ತಿ

ಭಕ್ತಿಯು ವಿವಿಧ ಧರ್ಮಗಳಲ್ಲಿ ಪ್ರಸರಿಸಿರುವ ಪರಿ ನಾವು ಗಮನಿಸಿದಾಗ, ವಂತ್ತೆ ಕ್ರಿ. ಶ. ೪-೫ ರಿಂದ ೭-೮ರ ಶತಕದಲ್ಲಿದ್ದವರೆನ್ನಲಾದ ಆಳ್ವಾರರ ದ್ರಾವಿಡ ದಿವ್ಯ ಪ್ರಬಂಧ ಮರೆವಂತಿಲ್ಲ. ಅದರ ಪ್ರಭಾವವೇ ಹರಿದಾಸರ ಆದ್ಯ ಪ್ರವರ್ತಕರಾದ ಶ್ರೀಪಾದರಾಜರ ಮೇಲಾಯಿತೆಂಬುದನ್ನು ತಿಳಿಯಪಡಿಸಿದೆ, ಬೇರೊಂದೆಡೆ. ಆಳ್ವಾರ್ ಸಂತರಲ್ಲಿ ಹಿರಿಯರಾದ ನಮ್ಮಾಳ್ವಾರ್ ಅವರ ತಿರುವಾಯ್ಮೊಳಿಯ ಒಂದು ಪಾಶುರ

ಇಲ್ಲಿ ಉಲ್ಲೇಖಿಸಲು ಕಾರಣ, ಭಕ್ತಿಯನ್ನು ಅವರು ಅನುಭವಿಸಿದ ಬಗೆ ಗುರುತಿಸಲು (ಏಕೆಂದರೆ, ಹರಿದಾಸರು-ಆಳ್ವಾರರ ತುಲನೆಯನ್ನು ನಿಬಂಧದ ಕೊನೆಯಲ್ಲಿ ಮಾಡಲಾಗಿದೆ),

ಓ ಪರಮಸುಂದರನೇ,
ಮುಗಿಲವಣ್ಣಾ, ಕಮಲನಯನ,
ಎನ್ನಾತ್ಮವ ಸೆಳೆಯುತಿರುವ
ಪರಮಾನುಗ್ರಹವೇ......

ಎಂದು ಹಂಬಲಿಸುವ ಆಳ್ವಾರರದು ಪ್ರೇಮಭಕ್ತಿ. ಆಳ್ವಾರರಂತೆಯೇ ಹದಿನಾಲ್ಕನೇ ಶತಕದಲ್ಲಿ ಆಗಿ ಹೋದ ಮಹಾರಾಷ್ಟ್ರದ ಸಂತ ಜ್ಞಾನದೇವ, ಏಕನಾಥ, ತುಕಾರಾಮ ಮೊದಲಾದವರೆಲ್ಲ ಪಂಢರಿಗೆಯ ವಿಠೋಬನ ಪ್ರಿಯ ಭಕ್ತರು. ಸಂತ ತುಕಾರಾಮನ 'ಅಭಂಗ' (ಛಂದ) ಭಜನ ಗೋಷ್ಠಿಯಲ್ಲಿ ಪಾಲ್ಗೊಂಡು ಭಕ್ತಿಯ ಆನಂದ ಸವಿಯಲು ಛದ್ಮವೇಷದಲ್ಲಿ ಶಿವಾಜಿ ಮಹಾರಾಜ ಬರುತ್ತಿದ್ದನಂತೆ. ಏಕನಾಥನಂತೂ "ಭಾಗವತ" ವನ್ನು ಬರೆದಾತ, ಹಾಗೂ ಸಮಾಜ ಸುಧಾರಣಾತ್ಮಕ ಭಕ್ತ-ಯೋಗಿ. ಅವನ ಪ್ರಕಾರ, ಸರ್ವಸ್ಥಳದಲ್ಲೂ ಸಂತತವೂ ದೇವರನ್ನು ನೋಡುವುದೆ ನಿಜವಾದ ಪೂಜೆ. (ಇದನ್ನು ನಮ್ಮ ಹರಿದಾಸ ಶ್ರೇಷ್ಠರಾದ ಶ್ರೀಪುರಂದರದಾಸರು, "ಸರ್ವಸ್ಥಳದಿ ವ್ಯಾಪ್ತನಾದ ಸರ್ವದೋಷರಹಿತನಾದ ಸರ್ವವಂದ್ಯನಾದ ಹರಿಯ ತಾನೇಸೇವೆ(ಮಾಡುತಿಹಳೋ॥ ಏನು ಧನ್ಯಳೊ ಲಕುಮಿ ಎಂಥ ಮಾನ್ಯಳೋ...ಎಂದು ಕೊಂಡಾಡಿರುವುದು ಸುವಿದಿತ.) "ಹರಿ ಭವೆ ಭವ ತಾಳ ಎನ್ನುವ ತುಕಾರಾಮ, ದೇವರು ನನ್ನ ಸುತ್ತಮಂತ್ತ ಸುತ್ತುತ್ತಿದಾನೆ" ಎಂದು ಹಿಗ್ಗುತ್ತಾನೆ, ಅವನಿಗಾಗಿ ಹಂಬಲಿಸುತ್ತಾನೆ. ನನಗೆ ಇದೊಂದನ್ನು ಮಾತ್ರ ದಾನ ಮಾಡು, ನಾನು ನಿನ್ನನ್ನು ಎಂದಿಗೂ ಮರೆಯಬಾರದು, ಎಂಬುದೆ ತುಕಾರಾಮನ ಅನವರತದ ಪ್ರಾರ್ಥನೆ.

## ವೀರಶೈವ ಶರಣರ ಭಕ್ತಿ

ಕರ್ನಾಟಕದಲ್ಲಿ ಕ್ರಿ. ಶ. 12ನೆ ಶತಮಾನ ವಿಶಿಷ್ಟ ಯುಗ ಸಾಹಿತ್ಯಿಕ, ಮತೀಯ, ಧಾರ್ಮಿಕ, ಭಕ್ತಿ ಎಲ್ಲದರಲ್ಲೂ ಹೊಸತನ ಕಂಡ ಯುಗವಿದು, ಆ ಸಮಯದಲ್ಲಿ ಆಗಿ ಹೋದ, ಅನಂತರವೂ ಬಂದ ಶಿವಶರಣರು, ಶಿವನ ಒಲುಮೆಗಾಗಿ ಹಾತೊರೆದ ಭಕ್ತರೂ ಹೌದು. ಅಲ್ಲಮ, ಬಸವಣ್ಣ, ಮಹಾದೇವಿಯಕ್ಕ ಮುಂತಾದವರೆಲ್ಲ ಭಕ್ತಿಯ ಕುರಿತಾದ ತಂತಮ್ಮ ಅನುಭವ-ವಿವರಣೆಗಳನ್ನೆ ನೀಡುತ್ತಾರೆ. ಸುಂದರ ವಚನ ಬಂಧವಲ್ಲಿ, ಅವರಿಗೆ ಉಂಟಾದ ನೆನಹು, ಬಯಕೆ, ಭಕ್ತಿ ಸ್ಥಿತಿಯಿಂದ ಬಂದು ತುಂಬಿ, ಹಾಡುವ ಬಯಕೆ ಬಸವಣ್ಣನವರದು ಭಕ್ತಿಯ ಬಂಡಿರುವ ಅನುಭಾವ ಸಾಹಿತ್ಯ ಧಾರೆಯಿಂದ ವಚನ ಸಾಹಿತ್ಯವಿಡೀ ಇದೇ ಧಾರೆ ; ಅಂತರಂಗ ಶುದ್ಧಿ ಬಹಿರಂಗಶುದ್ಧಿಯ

ಕೂಡಲಸಂಗಮದೇವನನೊಲಿಸಿಂವ ಪರಿಯಿಂದಂ ನಡೆದ ಬಸವಣ್ಣನವರು ಮೂಲಕ "ದಯೆಯಿಲ್ಲದ ಧರ್ಮವ್ಯಾವುದಯ್ಯಾ, ದಯೆಯೆ ಬೇಕು ಸಕಲ ಪ್ರಾಣಿಗಳಲ್ಲೂ" ಎಂಬ ತಿಳಿವನ್ನ ನೀಡಿದರು. "ನಾದಪ್ರಿಯ ಶಿವನೆಂಬರು, ನಾದಪ್ರಿಯ ಶಿವನಲ್ಲ" ಎಂಬ ಅವರ ಇನ್ನೊಂದು ವಚನ "ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ" ಎನ್ನುತ್ತದೆ. ಅಲ್ಲದೆ ಪ್ರಭುವಿನ ಮಾತಂತೂ ಸಿಡಿಗುಂಡು. "ಭಕ್ತಿಯೆಂಬುದು ತೋರುಂಬ ಲಾಭ... ಗೊಹೇಶ್ವರನೆಂಬುದು ವಿನಾದಿ ಘನ"ವೆನ್ನುತ್ತಾನೆ ಆತ. "ಕಡೆಗೆ ಮಾಡದ ಭಕ್ತಿ... ದೃಢವಿಲ್ಲದಾಳಿಂತನ...ವೃಂಡನೋಲಿಯ ಹೇಳಿದಂತೆ ಎಂತೊಲಿವನಯ್ಯ" ಎನ್ನುತ್ತಾಳೆ ಅಕ್ಕಮಹಾದೇವಿ. ಶರಣರು ಭಕ್ತಿಗಾಗಿ ಹಂಬಲಿಸಿ ಅದನ್ನ ಕಟ್ಟುನಿಟ್ಟಾಗಿ ಆಚರಿಸಿದಾರೆ.

## ಹರಿದಾಸರ ಭಕ್ತಿ ಹಾದಿ ಹಾಗೂ ವೈವಿಧ್ಯ

ಹರಿದಾಸ ಆಂದೋಲನ, ತನ್ನ ತನಕ ಈ ಎಲ್ಲ ಆಂದೋಲನ, ಭಕ್ತಿಪಂಥಗಳ ನೆಲ್ಲ (ಅಂದರೆ ೧೪ ನೆ ಶ.ದವರೆಗೆ) ತಿಳಿದು ತನ್ನದೆ ಆದ ಸ್ವತಂತ್ರ ಹಾದಿ ಕಂಡು ಕೊಂಡಿತು. ಇಲ್ಲಿ ಒಂದು ವಿಚಾರ ಹೇಳಬೇಕಾಗುತ್ತದೆ. ಭಕ್ತಿ ವೈದಿಕ ಧರ್ಮದಲ್ಲಿಲ್ಲ, ಇದು ದ್ರಾವಿಡರಿಂದ ಬಂದುದೆಂದು ಫಾದರ್ ಹೆರಾಸ್ ಅವರು Mystic Teachings of the Haridasas of Karnataka ಎಂಬ ಕಲವಂದಾನಿಯವರ ಇಂಗ್ಲೀಷ್ ಗ್ರಂಥದ ಮುನ್ನುಡಿಯಲ್ಲಿ ಬರೆಯುತ್ತಾರೆ. ಈ ಮಾತನ್ನು ವಿದ್ವಾಂಸರು, ಪ್ರೊ|| ಆರ್. ಎಸ್. ಪಂಚಮುಖಿಯವರು ಒಪ್ಪಿಲ್ಲ. ವೇದಯುಗದಲ್ಲಿ ಭಕ್ತಿಯ ಕುರುಹುಗಳಿರುವು ದನ್ನು ಪಂಚಮುಖಿಯವರು ಸೋದಾಹರಣಪೂರ್ವಕವಾಗಿ ಸಮರ್ಥಿಸಿ ಹೆರಾಸ್ ಅವರ ಅಭಿಮತವನ್ನು ಖಂಡಿಸಿರುವುದು ಭಕ್ತಿಸಾಹಿತ್ಯದ ಅಧ್ಯಯನದ ದೃಷ್ಟಿಯಿಂದ ಬೆಲೆಯುಳ್ಳ ಅಂಶವೆ ಆಗಿದೆ. ಇದನ್ನು ನಾವೂ ಒಪ್ಪಬೇಕಾಗುತ್ತದೆ. ವೇದಯುಗದಲ್ಲಿ ಕಾಣುವ, ಭಕ್ತಿ ದ್ರಾವಿಡನನ್ನವೆನ್ನಲಾಗುವುದಿಲ್ಲ. ವೈದಿಕ ಯುಗದಲ್ಲಿ ಭಕ್ತಿಯ ಉಗಮವಿದೆ. ಆದರಿಂದ ಹೆರಾಸ್ ಅವರ ಹೇಳಿಕೆಯಲ್ಲಿ ಹುರುಳು ಕಾಣದೆಂದೆ ತಿಳಿಸ ಬೇಕಾಗುತ್ತದೆ. "ಶ್ರದ್ಧಾದೇವಾಯಜಮಾನ ವಾಯುಂ ಗೋಪಾ ಉಪಾಸತೇ", "ಭಜೇ ರಥಸ್ಯಸತ್ಪತಿ", "ಮಹನ್ತೇವಿಷ್ಣೋಃ ಸುಮತಿಂ ಭಜಾಮಹೇ" ಎಂಬ ಋಗ್ವೇದ ಮಂತ್ರಗಳಲ್ಲಿ ಶ್ರದ್ಧೆ, ಭಜನ ಮೊದಲಾದ ಶಬ್ದಗಳು ದೇವತೆಗಳನ್ನು ಕುರಿತು ನುತಿಸುವ ಭಕ್ತನ ಮನಸ್ಸನ್ನು ತೋರುತ್ತದೆ. ಅಲ್ಲದೆ, "ಭಕ್ತಿರೈವೈನಂ ನಯತಿ ಭಕ್ತಿರೇವೈನಂ ದರ್ಶಯತಿ ಭಕ್ತಿರಶಃ ಪುರುಷೋ ಭಕ್ತಿರೇವ ಭೂಯಸಿ" ಎಂಬ ಶ್ರುತಿ ವಾಕ್ಯ ಭಕ್ತಿಯ ಆಗತ್ಯವನ್ನೇ ತಿಳಿಸುತ್ತದೆ. ಇದರಿಂದ ವೈದಿಕ ವಾಙ್ಮಯದಲ್ಲಿ ಭಕ್ತಿಗೆ ಹೆಚ್ಚಿನ ಪ್ರಾಶಸ್ತ್ಯವಿತ್ತೆಂದು ತಿಳಿಯಬರುತ್ತದೆ. ಭಕ್ತಿಪಂಥಕ್ಕೂ ದ್ರಾವಿಡರ ಅಧಿದೇವತೆಯಾದ ಶಿವನಿಗೂ ವಿಶೇಷ ಸಂಬಂಧವಿದೆಯೆಂಬ ಮಾತನ್ನು ಪಂಚಮುಖಿ ಯವರು ಒಪ್ಪದೆ ಪುರಾಣಗಳ ಹೃದ್ಗತ ವಿಷ್ಣು "ಸರ್ವೋತ್ತಮತ್ವ"ವೆಂದು ಉದಾಹರಣೆ ಗಳ ಮೂಲಕ ಸಮರ್ಥಿಸಿದ್ದಾರೆ. ಆದ್ದರಿಂದ ಭಕ್ತಿ ವೈದಿಕವೇ ವಿನಾ ಅವೈದಿಕವೆನ್ನಲಾಗು

ವುದಿಲ್ಲವೆಂಬ ನಿಲುವಿಗೆ ನಾವು ಬರಬೇಕಾಗುತ್ತದೆ. ಭಕ್ತಿಯ ಬೆಳವಣಿಗೆಗೆ ಭಾಗವತವೆ ಮೂಲ. ಭಾಗವತ ಪಂಥ ಇದರಿಂದ, ಹಾಗೂ ಗೀತೆ ಭಾಗವತಪಂಥದ ಗ್ರಂಥ ವೆಂದೂ ಕೆಲವರು ಇತಿಹಾಸತಜ್ಞರ ಅಭಿಮತ. ಇದು ಸರಿಯೆ. ಭಾಗವತದಲ್ಲಿ ಭಕ್ತಿಯ ಬೆಳವಣಿಗೆ ಕಂಡ ಹಾಗೆ ಇತರ ಪುರಾಣಗಳಲ್ಲಿ ಕಂಡಿಲ್ಲ. ಶ್ರೀಮಧ್ವಾಚಾರ್ಯರಂತೂ "ಭಕ್ತ್ಯಾಭಾಗವತಂ ಶಾಸ್ತ್ರಂ" ಎಂದು ಭಾಗವತವನ್ನು ಶಾಸ್ತ್ರವೆಂದೆ ಕರೆದಿದಾರೆ, ಇದಕ್ಕೆ ತಾತ್ಪರ್ಯವನ್ನು ರಚಿಸಿದ್ದಾರೆ. ಭಾಗವತ, ಎಲ್ಲ ಹರಿಭಕ್ತರ ಹಾಗೂ ಸಾಮಾನ್ಯವಾಗಿ ಭಕ್ತಿ ಸಾಹಿತ್ಯಪ್ರಿಯರ ಪ್ರಿಯಗ್ರಂಥ. ಭಕ್ತಿಯ ಹೊನಲಿಗೆ ಹರಿಭಕ್ತಿ ಆಕರವಾಗಿರಬಹು ದೆಂದು ಇದರಿಂದ ತಿಳಿಯಬರುತ್ತದೆ. ಈ ತೆರನಾದ ಹರಿಭಕ್ತಿ, ಹರಿಸರ್ವೋತ್ತಮತ್ವ ಉಜ್ವಲಭಾವ, ಬೆಳೆದು ವಿಜೃಂಭಿಸಿದ್ದು ಕರ್ಣಾಟಕದ ಹರಿದಾಸರಲ್ಲಿ. ಭಕ್ತಿಸಾಹಿತ್ಯದ ಅನೇಕ ತಂಣುಕುಗಳನ್ನು ಗುರುತಿಸಿ, ಗಮನಿಸಿದ ನಾವು ಇಂಥದೆ ಭಕ್ತಿಸಂಧೆಯ ಹೊನಲು ಹರಿದಾಸ ಸಾಹಿತ್ಯದಲ್ಲಿಯೂ ಪ್ರವಹಿಸಿರುವುದನ್ನು ಮನಗಾಣಬಹುದಾಗಿದೆ. ಹಾಗೂ ಇದು ಹರಿದಾಸರ ಭಕ್ತಿಯ ವಿಶಿಷ್ಟತೆ, ವೈವಿಧ್ಯ, ಸ್ವರೂಪ ಎಲ್ಲವನ್ನೂ ನಿರ್ಧರಿಸು ವುದಲ್ಲದೆ ಭಕ್ತಿ-ಆಧ್ಯಾತ್ಮಿಕ ಆಂದೋಲನದಲ್ಲಿ ಹರಿದಾಸರ ಸ್ಥಾನದ ಉನ್ನತಿಯನ್ನೂ ಸಮರ್ಥಿಸುತ್ತದೆ, ಎನ್ನಬಹುದು. ಹರಿಭಕ್ತಿ, ವಿಷ್ಣುವಿನ ಉಪಾಸನೆ, ಹರಿದಾಸ್ಯ, ಹರಿಯ ಅನುಗ್ರಹ ಒಲುಮೆ ಪಡೆಯಲು ಸರ್ವಸ್ವತ್ಯಾಗ, ಹರಿಪ್ರಸಾದ ದಿಂದ ತೋಷ, ಹರಿವಿರಹದ ಅಗಲುವಿಕೆಯ ಅಳಲು, ಹರಿಭಕ್ತರಲ್ಲಿ ಭಕ್ತಿ, ಭಾವ ತುಂಬುಲ, ಲೌಕಿಕ ಸುಖದತ್ತ ಔದಾಸೀನ್ಯ, ಸದಾ ಹರಿ ಚಿಂತನ, ಹರಿಯಲ್ಲಿ ಪ್ರೇಮ, ಸ್ನೇಹ, ವಾತ್ಸಲ್ಯ ಭೃತ್ಯಭಾವ, ಸಿಗ್ಗಾದರೆ ನಿಂದಾಸ್ತುತಿ, ಹೀಗೆ ಬಗೆಬಗೆಯಂದಾದ ರೀತಿಯಲ್ಲಿ ಹರಿದಾಸರು ನುಡಿದಿರುವ ನೂರಾರು ಕೃತಿಗಳನ್ನು ನಾವು ಕಾಣಬಹು ದಾಗಿದೆ. ಅದೇ ರೀತಿ ಭಕ್ತಿಯ ಮಧುರಭಾವ, ಸತಿಪತಿಭಾವ, ಸ್ವಾಮಿಭೃತ್ಯಭಾವ, ಇವುಗಳೂ ಉಂಟು. ಭಗವಂತನ ದರುಶನದ ದಿವ್ಯಾನುಭವ ಪಡೆದ ಸಂತ ಶಂಕಾರಾಮ, ತುಳಸೀದಾಸ, ಪುರಂದರದಾಸಾರ್ಯರು, ಹೀಗೆ ಅನೇಕರಿಗೆ ದೈವ ಸಾಕ್ಷಾತ್ಕಾರವಾಗಿರುವ ಬಗ್ಗೆ ಅವರ ಭಕ್ತಿಪರ ಕೃತಿಗಳಲ್ಲಿ ವ್ಯಕ್ತ ಆಗುತ್ತದೆ. ಅದಲ್ಲದೆ, ಹೃದಯಾವಿಷ್ಟನಾದ ಪರಮಾತ್ಮನ ವರ್ಣನೆ 'ನಾರಾಯಣೋಪನಿಷತ್ತಿನ' ಸ್ಮೃತಿ ಸಾಲುಗಳಲ್ಲಿ ಒಂದಿರುವ ಪರಿ ಜೀವನ್ಮುಕ್ತಿಯ ಅವಸ್ಥೆಯನ್ನೇ ಕಂಡರಿಸುತ್ತದೆ :

ಪದ್ಮಕೋಶ ಪ್ರತೀಕಾಶಂ ಹೃದಯಂಚಾಪ್ಯಧೋಮುಖಂ ।
ಅಧೋನಿಷ್ಟ್ಯಾ ವಿತಸ್ತ್ಯಾಂತೇ ನಾಭ್ಯಾಮುಪರಿ ತಿಷ್ಠತಿ ।
ಜ್ವಾಲಾಮಾಲಾಕುಲಂಭಾತಿ ವಿಶ್ವಸ್ಯಾಯತನಂ ಮಹತ್ ।
ಸಂತತಗ್‌ಂ ಶಿಲಾಭಿಸ್ತು ಲಂಬತ್ಯಾಕೋಶ ಸನ್ನಿಭಮ್ ।
ತಸ್ಯಾಂತೇ ಸುಷಿರಂ ಸೂಕ್ಷ್ಮಂ ತಸ್ಮಿನ್ ಸರ್ವಂ ಪ್ರತಿಷ್ಠಿತಮ್ ।
ತಸ್ಯಾ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ।
ಯಿಷ್ಟ್ಮಾತ್ಮಾಂ ಪುರುಷೋ ಮಧ್ಯ ಆತ್ಮಾವತಿಷ್ಠತಿ ।
ಈಶಾನೋ ಭೂತ ಭವ್ಯಸ್ಯನತತೋ ವಿಜಿ ಗುಪ್ಸತೇ ।......

ಹೃದಯನಿವಾಸಿಯಾದ ಪರಮಾತ್ಮನ ಉಪಾಸನೆಯ ಮಹತ್ವ ಕುರಿತು ಹರಿದಾಸರಲ್ಲಿ ಅನೇಕ ಭಾವುಕ ಕೃತಿಗಳು ಬಂದಿವೆ. ಈ ರೀತಿ ಸ್ವಯೋಗ್ಯ ಬಿಂಬದರ್ಶನದಿಂದಲೇ ಮೋಕ್ಷವೆಂಬುದನ್ನು ವೇದವ್ಯಾಸರು ಬ್ರಹ್ಮಸೂತ್ರದಲ್ಲಿ ತಿಳಿಸಿದ್ದಾರೆ. ಇದಕ್ಕೆ ಶ್ರೀ ಮಧ್ವಾಚಾರ್ಯರು 'ನಾರಾಯಣತಂತ್ರ'ವೆಂಬ ಪ್ರವರ್ತಾನಗಳನ್ನು ನೀಡಿ ಸ್ವೀಕರಿಸಿರು ವುದು ವಿದ್ವಾಂಸರು ತಿಳಿದು ಹೇಳಿರುವ ಮಾತು. ಈ ರೀತಿಯ ಬಿಂಬೋಪಾಸನೆಯನ್ನು ಪ್ರಚಲಿತಗೊಳಿಸಿದವರು ಮಧ್ವಾಚಾರ್ಯರು-ಅದೇ ಹರಿದಾಸರಲ್ಲೂ ಮುಂದುವರೆದು ಬಂದಿದೆ. ಈ ರೀತಿಯ ದೈವ ಸಾಕ್ಷಾತ್ಕಾರ ಪಡೆದಾತನೆ ಅಪರೋಕ್ಷಜ್ಞಾನಿಯೆಂಬುದು ಉಪನಿಷತ್ತಿನ ಮಾತು. "ಅಂತರಂಗದಲ್ಲಿ ಹರಿಯ ಕಾಣದವ ಹುಟ್ಟು ಕುರುಡನೋಟ," "ಎನ್ನ ಬಿಂಬ ಮೂರುತಿಯ ಪೂಜಿಪೆನಾನು" ಪುರಂದರದಾಸರ ಮಾನಸಪೂಜಾ ವಿಧಾನ, ವಿಜಯದಾಸರ ಅನಂತರವಂತೂ ಬಿಂಬೋಪಾಸನೆ ಪರಾಕಾಷ್ಠೆಯ ಹಂತ ಏರಿದೆ. "ಅಂತರಂಗದ ಕದವು ತೆರೆಯಿತಿನ್ನು", "ಧ್ಯಾನವನೆ ಮಾಡು ಬಿಂಬ ಮೂರುತಿಯ" (ಗೋಪಾಲದಾಸರು) ಜಗನ್ನಾಥದಾಸರ ಉದ್ಧ ಕೃತಿಯಾದ ಹರಿಕಥಾ ಮೃತಸಾರದ ಪದ್ಯಗಳಲ್ಲಿ ಎಳೆ ಎಳೆಯಾಗಿ ಬಂದಿರುವುದನ್ನು ಕಾಣುತ್ತೇವೆ. ಇದು ಸತತ ಸಾಧನೆಯಿಂದ ಸಾಧ್ಯವೆಂಬುದಕ್ಕೆ ಇವರೆಲ್ಲ ಜ್ವಲಂತ ನಿದರ್ಶನವೆ ಆಗಿದ್ದಾರೆ. "ನಾಹಂಕರ್ತಾ, ಹರಿಕರ್ತಾ" ಎಂಬ ಹರಿಯೇ ಸರ್ವತಂತ್ರ ಸ್ವತಂತ್ರ, ತಾನವನ ಕಿಂಕರ ನೆಂಬ ದಾಸ್ಯ ಭಾವ ಮನದಲ್ಲಡಗಿರುವ ಅಹಂತಮದ ಕಾಳಿಕೆಯನ್ನು ಕಿತ್ತೊಗೆದು ಜ್ಞಾನ ದೀಪ್ತಿಯನ್ನು ಸಹಸ್ರಾಕ್ಷನಾಗಿ ಚೆಲ್ಲುತ್ತದೆ. ಭಕ್ತಿ ವೈರಾಗ್ಯ ಜ್ಞಾನಗಳ ಸಮನ್ವಯತೆಯಿಂದ ದೈವ ಸಾಕ್ಷಾತ್ಕಾರ ಆಗುತ್ತದೆ. "ಅಣೋರಣೀಯನಾದ, ಮಹತೋ ಮಹೀಯನಾದ", ಸರ್ವಸ್ಥಳದಿ ವ್ಯಾಪ್ತನಾದ ಸರ್ವದೋಷರಹಿತನಾದ ಸರ್ವವಂದ್ಯನಾದ ಹರಿಯದರ್ಶನ, ದಾಸನನ್ನು ಭೂಮಹಾವಸ್ಥೆಗೇರಿಸುತ್ತದೆ, ಇದು ಕರ್ನಾಟಕದ ಹರಿ ದಾಸರು ಕಂಡುಕೊಂಡ ಬೆಳಕಿನ ಹಾದಿ: ಭಕ್ತಿಯ ಸುಲಭ ಮಾರ್ಗದ ಮೂಲಕ ಮುಂದರಿದು, ಜ್ಞಾನದ ನೆರವಿನಿಂದ ವೈರಾಗ್ಯ ನೆಮ್ಮಿ ಕಂಡುಕೊಂಡ ಆರದ, ಅಳಿಯದ, ಜ್ವಲಂತನಾದ ಪ್ರಣವದ ದಿವ್ಯ ಜ್ಯೋತಿ ಪಥ. ಇದೇ ಹರಿದಾಸರ ಹಿರಿಯಂತನ ಕೊಡ.

## ಸಮೀಕ್ಷೆಯ ಹಿನ್ನೋಟ

ಭಕ್ತಿಯ ಪ್ರಾಮುಖ್ಯತೆ ಕುರಿತು ಈವರೆಗೆ ಸಮೀಕ್ಷೆ ನಡೆಸಿದೆವು. ಎಲ್ಲ ಸಾಧ ನವೂ ಸಾರ್ಥಕ್ಯವೈದಬೇಕಾದರೆ, ಭಕ್ತಿಯೊಡಗೂಡಿದರೆ ಮಾತ್ರವೆಂದೂ ತಿಳಿಯಬಹು ದಾಗಿದೆ. ಭಕ್ತಿ ಬೃಹದಾಕಾರ ತಳೆದಂತೆ, ಹಲವಾರು ರೀತಿ ವಿವಿಧ ಮಾಧ್ಯಮಗಳ ಮೂಲಕ ಅದು ಅಭಿವ್ಯಕ್ತಿ ಪಡೆಯುವುದೂ ಉಂಟು. ಕವಿ ಪ್ರತಿಭಾಶಾಲಿಯಾದರೆ, ಕಾವ್ಯ ಅವತಾರ ಆಗುತ್ತದೆ. ಅಥವಾ ಚಿತ್ರಕಾರನಾದರೆ, ಶ್ರೀಕೃಷ್ಣನ ಬಾಲಲೀಲೆ ಗಳನ್ನು ಮನೋಜ್ಞವಾಗಿ ಚಿತ್ರಿಸುತ್ತಾರೆ. ಹೀಗೆ ವಿವಿಧ ಕಲೆಗಳಾಗಿಯೂ ಭಕ್ತಿ ಹೊರ ಹೊಮ್ಮುವುದಿದೆ. ಪ್ರೇಮವೇ ಇದಕ್ಕೆಲ್ಲ ತಳಹದಿ.

ಭಕ್ತಿಯೆಂದಾಗ, ಅದರ ವಿವೇಚನೆ ಬಲ್ಲವರ ಮಾತಂಗಳ ಮೂಲಕ ನಡೆಸುವಲ್ಲಿ, ಹರಿದಾಸರ ಭಕುತಿ ವೈವಿಧ್ಯ ಕುರಿತು ತಿಳಿಸುವುದೆ ನಮ್ಮ ಧ್ಯೇಯ, ಕರ್ತವ್ಯವಾಗಿದೆ. ಹರಿದಾಸರು ಅನುಸರಿಸಿದ್ದು "ನವವಿಧ ಭಕುತಿ"ಯ ಮಾರ್ಗ. ಭಾಗವತದಲ್ಲಿ ಏಳನೇ ಸ್ಕಂಧದಲ್ಲಿ ಭಕ್ತಿ ಕುರಿತು ಒಂದು ಶ್ಲೋಕವಿದೆ :

ಶ್ರವಣಂ ಕೀರ್ತನಂ-ವಿಷ್ಣೋಃ ಸ್ಮರಣಂ ಪಾದಸೇವನಂ
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ ॥

ಪಂಚಭಾವಗಳಾದ ವಾತ್ಸಲ್ಯ, ದಾಸ್ಯಾದಿ ಭಾವಗಳಲ್ಲಿ ಅಡಕಗೊಂಡಿರುವ ಭಕ್ತಿಯೇ ಇಲ್ಲಿ ನವವಿಧದಲ್ಲಿ ವಿಸ್ತೃತಗೊಂಡಿದೆ. ಇದೇ ರೀತಿ ನಾರದಭಕ್ತಿ ಸೂತ್ರಗಳಲ್ಲಿ ಹನ್ನೊಂದು ವಿಧವಾದ "ಆಸಕ್ತಿ"ಗಳನ್ನು ತಿಳಿಸಿದ್ದಾರೆ. ಇದನ್ನು ಪರಭಕ್ತಿಯ ವಿವಿಧ ರೂಪ ಗಳೆಂದೂ ಹೇಳಲಾಗುತ್ತದೆ : (ಭಗವಂತನ) ಗುಣಮಾಹಾತ್ಮ್ಯಾಸಕ್ತಿ, ರೂಪಾಸಕ್ತಿ, ಪೂಜಾಸಕ್ತಿ, ಸ್ಮರಣಾಸಕ್ತಿ, ದಾಸ್ಯಾಸಕ್ತಿ, ಸಖ್ಯಾಸಕ್ತಿ, ವಾತ್ಸಲ್ಯಾಸಕ್ತಿ, ಕಾಂತಾಸಕ್ತಿ, ಆತ್ಮನಿವೇದನಾಸಕ್ತಿ, ತನ್ಮಯತಾಸಕ್ತಿ, ಪರಮ ವಿರಹಾಸಕ್ತಿ ಹೀಗೆ.

ನವವಿಧ ಭಕುತಿಗೇ ಹರಿದಾಸರಲ್ಲಿ ಒಟ್ಟಾರೆ ವಾಙ್ಮಯಗಳಲ್ಲಿ ವಿಶೇಷ ಪ್ರಾಶಸ್ತ್ಯ. ಅದೇ ಹರಿದಾಸ ಸಾಹಿತ್ಯದ ಒಂದು ವಿಶಿಷ್ಟತೆ ಕೂಡ.

## ನವವಿಧ ಭಕುತಿ ವೈವಿಧ್ಯ ಹರಿದಾಸರ ವೈಶಿಷ್ಟ್ಯ

ಮೇಲ್ಕಾಣಿಸಿರುವ ನವವಿಧ ಭಕುತಿಯೊಳಗೊಂಡ ಶ್ಲೋಕವನ್ನೇ ಚಿಂತನೆಗೈದು, ಶ್ರೀಪುರಂದರದಾಸರು ತುಂಬ ಅರ್ಥಪೂರ್ಣವಾದ ಭಕುತಿ ಸುಳಾದಿಯನ್ನು ರಚಿಸಿದ್ದಾರೆ. ಅದು ಸಾಕಷ್ಟು ವಿವರವಾದರೂ ಎಲ್ಲದಕ್ಕೂ ಉದಾಹರಣೆ ಆಗುವ ಪ್ರಯುಕ್ತ ಸುಳಾದಿಯ ಸಂಪೂರ್ಣ ಪಾಠ ನೀಡಿದೆ.

ಹರಿಯ ಒಂಬತ್ತುಭಕ್ತಿಯ ಬಲ್ಲ ಧೀರ ।
ಮರಳಿ ಸಂಸೃತಿಯ ದಾರಿಗೆ ಹಚ್ಚಿ ಬಾರ ।
ದುರಾಚಾರ ದುಷ್ಕೃತಿಗಳನು ಕಂಡು ಸೇರ ।
ಹಿರಿಯರೊಳು ಬಿರುನುಡಿಯ ಜಿಹ್ವೆಗೆ ತಾರ ।
ಪುರಂದರವಿಠಲರೇಯನುದಾರ ।
ಚರಣಾಬ್ಜನಿಷ್ಠೆ ಅಂಗಡಿ ಇಟ್ಟು ತೋರ ॥

### ಶ್ರವಣಭಕ್ತಿ

ಹರಿಕಥಾಶ್ರವಣಕ್ಕೆ ಮನವಿಟ್ಟ ಪ್ರೌಢ ।
ಅರುವತ್ತು ಗಳಿಗೆಗಳ ವ್ಯರ್ಥದಿ ಹೋಗಾಡ ।

ಸ್ವರೂಪವ ಹರಿಯಂಘ್ರಿಗರ್ಪಿಸಿ ನಿಂದ ।
ಹರುಷವನಂಬು ಉನ್ಮಾಹಗಳಿಂದ ।
ಪುರಂದರವಿಠಲರಾಯನ ದಯದಿಂದ ।
ಸುರನುಷಿಯೊಲುಮೆಗೆಲ್ಲವು ನಿಜಾನಂದ ॥

## ಉಪಸಂಹಾರ

ಹರಿಕಥಾಶ್ರವಣವು, ಹರಿನಾಮಸಂಕೀರ್ತನೆ, ।
ಹರಿಸ್ಮರಣೆ, ಹರಿಪಾದಸೇವನ, ।
ಹರಿಪೂಜನ, ವಂದನ, ದಾಸ್ಯ, ಸಖ್ಯತ್ವ ।
ಹರಿಗಾತ್ಮ ಅರ್ಪಣ ಹರಿಭಕ್ತಿಯೆ ಮುಂಕ್ತಿಪಥ ತತ್ತ್ವ ।
ಪುರಂದರವಿಠಲ ಪರಮಾತ್ಮ ಸಿದ್ಧ ।
ಗುರುಮಧ್ವವಂತ ಶ್ರುತಿಸ್ಮೃತಿಯೊಳು ಪ್ರಸಿದ್ಧ ॥

ಇದರಂತೆಯೆ ದಾಸಸಾಹಿತ್ಯದ ದ್ವಿತೀಯ ಹಂತ ಪ್ರಮುಖರಾದ ಶ್ರೀವಿಜಯದಾಸರು "ಜ್ಞಾನಸುಳಾದಿ" ಹಾಗೂ "ಭಕ್ತಿ ಸುಳಾದಿ"ಗಳನ್ನೂ ಅವರ ಪ್ರಿಯ ಶಿಷ್ಯರಾದ ಶ್ರೀಗೋಪಾಲದಾಸರು "ವೈರಾಗ್ಯ ಸುಳಾದಿ"ಯನ್ನೂ ಹಾಡಿದ್ದಾರೆ. ಮೊದಲಿನದರಲ್ಲಿ ಜ್ಞಾನಿಯಾದವನ ಲಕ್ಷಣಗಳಿದ್ದಂತೆ, "ಭಜನೆ ಮಾಡು ಮನವೆ ಒಂದೆ ಜ್ಞಾನದಲಿ... ಹರಿಯ ವ್ಯಾಪಾರವನ್ನು..." ಎಂದು ಹಾಡಿದಂತೆಯೆ, "ಹರಿದಾಸರೊಡನಾಡು । ಹರಿಯಂಘ್ರಿಯುಗ್ಮನೋಡು । ಹರಿಯೆಂದು ಕೊಂಡಾಡು । ಹರಿನಾಮ ಪಾಡು"ಎಂದು ಭಕುತಿ ಸುಳಾದಿಯಲ್ಲಿ ಭಕ್ತಿ ವೈವಿಧ್ಯ ಕುರಿತು ಹಾಡಿದಾರೆ ವಿಜಯದಾಸರು. ಗೋಪಾಲ ದಾಸ ವೈರಾಗ್ಯ ಸುಳಾದಿ ನಿಜವಾದ ವಿರಾಗಿಯ ಲಕ್ಷಣ, ವೈರಾಗ್ಯದ ತಿಳಿವಳಿಕೆಯನ್ನು ನೀಡುತ್ತದೆ. ಹರಿದಾಸರೆಲ್ಲ ಸಾಮಾನ್ಯವಾಗಿ ಹರಿ ಭಕುತಿ ಕುರಿತು ಹಾಡಿಯೆ ಇದ್ದಾರೆ. ಹರಿಕಥಾಮೃತಸಾರದ ಒಂದು ಪದ್ಯ ಮತ್ತೆ ಮತ್ತೆ ಸವಿಯಬೇಕೆನ್ನಿಸುವಂಥದು :

ಶ್ರವಣಮನಕಾನಂದವೀವುದು
ಭವಜನಿತದುಃಖಗಳ ಕಳೆವುದು
ವಿವಿಧ ಭೋಗಗಳಿಹ ಪದಂಗಳನಿತ್ತು ಸಲಹುವದು ।
ಭುವನ ಪಾವನನೆನಿಪ ಲಕುಮಿಪ
ಧವನ ಮಂಗಳ ಕಥೆಯ ಪರಮೋ-
ತ್ಸವದಿ ಕಿವಿಗೊಟ್ಟಾಲಿಪುದು ಸಂತಸದಿ ಭೂಸುರರು ॥

ಇಲ್ಲಿ ಶ್ರವಣ ಭಕ್ತಿ ಕುರಿತು ಜಗನ್ನಾಥದಾಸರು ತಿಳಿಸಿರುವರೆಂದು ಬೇರೆ ಹೇಳಬೇಕಿಲ್ಲ ; ಕನಕದಾಸರ 'ಕೇಶವನಾಮ' ಭಜನೆಗೆ ಹೇಗೆ ಸೂಕ್ತವೊ, ಹಾಗೆಯೆ ಕೀರ್ತನಭಕ್ತಿ ಕುರಿತ ಅವರ ಆ ಒಂದು ಕೃತಿ ಅಷ್ಟೇ ಸುಂದರ ರಚನೆ.

ಪರಮಾತ್ಮನ ಲೀಲಾವಿನೋದ ಕಂಡ ಭಕ್ತನ ಮನಸ್ಸು ಪುಳಕಗೊಳ್ಳುತ್ತದೆ. ವಿಸ್ಮಯಗೊಳ್ಳುತ್ತದೆ. ಶಾಂತಿಯಿಂದ ಧ್ಯಾನಿಸುತ್ತದೆ. ಶ್ರೀಹರಿಯ ಒಲವು ಚೆಲುವನ್ನು, ಹಿರಿಮೆಗಳನ್ನು ಎಷ್ಟು ಹೊಗಳಿದರೂ ದಾಸರಿಗೆ ಮನತಣಿಯದು. "ಈಪರಿಯ ಸೊಬಗಾವ ದೇವರಲಿ ಕಾಣೆ" ಇದಕ್ಕೊಂದು ಉತ್ತಮ ಉದಾಹರಣೆ. ಅಥವಾ "ಅಣೋರಣೀಯಾನ್ ಮಹತೋಮಹೀಯಾನ್" ಎಂಬ ಸೂಕ್ತದ ಕನ್ನಡೀಕರಣವನ್ನು ಪುರಂದರದಾಸರು, ಕನಕದಾಸರೂ ಸರಳವಾಗಿ ಮಾಡಬಲ್ಲರು. ವ್ಯಾಸರಾಯರು, ಭಗವಂತನ ರೂಪ ಕಂಡು ಮೋಹಿತವಾದಂತೆಯೆ ಗೋಪಿಯರ ಮೂಲಕ ಶ್ರೀಕೃಷ್ಣನನ್ನು ನೆನೆನೆನೆದು ಹಾಡುವುದೂ ಇದೆ. ಅವರ ಒಂದು ಸುಳಾದಿಯ ಸಾಲು ಎಷ್ಟು ಚೆನ್ನಾಗಿದೆ :

ಹರಿಚರಿತೆ ಶ್ರವಣ ದುರಿತಉಚ್ಚಾಟನಂ
ಹರಿನಾಮ ಕೀರ್ತನ ಭವರೋಗಕ್ಕೆ ಸಿದ್ಧೌಷಧಂ ।
ಹರಿಚರಣ ಸ್ಮರಣ ಮುಕ್ತ್ಯಾಂಗನೆಗಾಕರುಷಣಂ
ಹರಿಪಾದ ಸೇವನ ಅನಂತಫಲ ಸಾಧನಂ ।
ಇಂತೆಂಬೊದೊಂದು ಪೇರ್ಮೆಯೆ ಹರಿಸೇವೆ ಫಲರೂಪ
ಶ್ರವಣವೆ ಶುಭದ ಬೆಳಗು, ಕೀರ್ತನೆಯು ಲೇಸಿನ ಹೆಚ್ಚುಗೆ ।
ಸ್ಮರಣವೆಚ್ಚ ಸುಖವೆಂಬುದನುಭವಸಿದ್ಧ
ಶ್ರೀಕೃಷ್ಣನ ಪಾದಸೇವೆ ಮುಕ್ತಿಕನ್ಯಾಸೇರುವೆ ॥

"ರಂಗಯ್ಯ ಮನೆಗೆ ಬಂದರೆ । ಅಂತರಂಗದಿ ಗಂಡಿಕಟ್ಟ ಕಾಣಿವೆ ನಾ"ನೆಂಬ ಡಿಂಗರಿಗರು ಶ್ರೀವ್ಯಾಸರಾಯರು ಅಲ್ಲಿಯ ಭಾವಗೀತಾತ್ಮಕತೆ, ಗೇಯತೆಯೊಡಗೂಡಿ ನದಿಯ ಜುಳು ಜುಳು ನೀರಿನಂತೆ ಸಾಗುತ್ತದೆ :

ಬಿಸಿಲು ಬೆಳದಿಂಗಳಾಯಿತು ತಾ ।
ಮಸ ಹೋಗಿ ಜ್ಞಾನೋದಯವಾಯಿತು ।
ಕುಸುಮನಾಭನು ತಾಬಂದರೆ ಅಲ್ಲಿ ।
ವಿಷಹೋಗಿ ಅಮೃತವಾಯಿತು ನೋಡಾ ।......

## ಹರಿದಾಸರ ನವವಿಧ ಭಕುತಿ ವೈವಿಧ್ಯದ ವಿಶ್ಲೇಷಣೆ

ನವವಿಧ ಭಕುತಿ ಕುರಿತು ಪ್ರಸನ್ನವೆಂಕಟದಾಸರು ಮಾಡಿರುವ ಸುಳಾದಿ ಕೂಡ "ಅಲಸವಂತಿಯನೆ ಸಂಟ್ಟು ಆಲವ ಬೋಧಾರ್ಯ ವಂತದವವನು ಪೊಂದಿ" ಸುಖಿಸು ಎನ್ನುತ್ತದೆ. ಕನಕದಾಸರು ಮಾಡಿರುವ "ತೊರೆದು ಜೀವಿಸಬಹುದೆ ಹರಿನಿನ್ನ ಚರಣಗಳ" ಎಂಬ ಕೀರ್ತನೆ, ಅವರ ಭಕ್ತಿ, ವಿರಹ, ಚರಣಸೇವೆಯ ಬಯಕೆ ಉತ್ಕಟವಾಗಿ ಅಭಿವ್ಯಕ್ತಗೊಂಡಿದೆ.

ಭಗವಂತನಲ್ಲಿ ವಿರಹಭಾವದ ಭಕ್ತಿಗೆ ಶ್ರೀಪಾದರಾಜರು ರಚಿಸಿರುವ "ಭ್ರಮರ ಗೀತ", ವ್ಯಾಸರಾಯರ "ಯಾಕೆ ಬೃಂದಾವನ ಯಾಕೆಗೋಕುಲ ನಮಗೆ। ಯಾಕೆ ಬಂದೆಯೊ ಉದ್ಧವ", "ರಂಗಬಾರ ಬಾಲೆ ಕುರಂಗನಯನೆ ಕೇಳೆ" ಉತ್ತಮ ಉದಾಹರಣೆ. ಇಂಥವೆಷ್ಟೊ ನಿದರ್ಶನ ಹರಿದಾಸರಲ್ಲಿ ಅಪಾರ. "ಕಾರಮುಗಿಲೊಳು ಹೊಳೆವ ಮಿಂಚಿನಂತೆ ಮಾಟ। ಹಾರ ಹೀರಾವಳಿಯಂಪದಕ್ಕೊಪ್ಪುವ॥ ವಾರಿಗೆ ಗೋಪಾಲರೊಡನಾಡೊ ನಂದ ಕುಮಾರನ। ಕಾಣದಿನ್ನೆಂತುಳಿವೆ"ನೆಂದು ಹಂಬಲಿಸುವ ಶ್ರೀಪುರಂದರದಾಸರ ರಚನೆಗಳು ಅವರ ದಾಸ ಮನೋಧರ್ಮಕ್ಕೆ ಉತ್ತಮ ನಿದರ್ಶನ. ಪುರಂದರದಾಸರದ್ದೆ "ನಾರಾಯಣತೇ ನಮೋನಮೋ। ನಾರದಸನ್ನುತ ನಮೋ ನಮೋ" ಎಂಬ ಕೃತಿ ವಂದನ ಭಕ್ತಿಗೆ ಉದಾಹರಣೆಯಾದರೆ, ದಾಸ್ಯಭಾವಕ್ಕೆ ಜಗನ್ನಾಥದಾಸರ "ದಾಸೋऽಹಂ ತವ ದಾಸೋऽಹಂ" ಕೃತಿ ನಂಡಿಗಟ್ಟು ನಿದರ್ಶನವಾಗುತ್ತದೆ. "ಎನ್ನ ಬಿಂಬಮೂರುತಿಯ ಪೂಜಿಸುವೆನು ನಾನು" ಎಂಬುದು ವ್ಯಾಸರಾಯರ ಅರ್ಚನ ಭಕ್ತಿಗೊಂದು ಉತ್ತಮ ಉದಾಹರಣೆ : ಪ್ರಸನ್ನವೆಂಕಟರ "ಸಖ್ಯವಿರಬೇಕು ಹರಿಭಕ್ತ ಜನಕೆ। ಮುಕ್ತಿದಾಯಕ ಪಾರ್ಥಸಖ್ಯ ಪಾದಾಬ್ಜದಲಿ" ಸಖ್ಯಭಾವಕ್ಕೆ ಹೋಲಿಕೆಯಾಗುತ್ತದೆ. ಸ್ಮರಣ ಭಕ್ತಿಗಂತೂ ಪುರಂದರದಾಸರ

ಕಲಿಯುಗದೊಳು ಹರಿ। ನಾಮ ಸ್ಮರಿಸಿದರೆ
ಕುಲಕೋಟಿಗಳುದ್ಧರಿಸುವುವು ॥ ಪ ॥

ಎಂಬ ಅತ್ಯಂತ ಜನಪ್ರಿಯ ಕೃತಿಯು, ಉದಾಹರಣೆ. ಸ್ಮರಣೆಯಲ್ಲಿ ಮೂರ್ತಿಯ ಧ್ಯಾನಿಸುವ ಧ್ಯೇಯವಿರುತ್ತದಷ್ಟೆ. ಧ್ಯೇಯ ವಸ್ತುವಿನ ಸ್ಮರಣೆಯು ಧ್ಯಾನ. ಧ್ಯಾನಕ್ಕೆ ನಿಯಮಗಳಿವೆ. ಸಂಪ್ರದಾಯವನ್ನನುಸರಿಸಿ, ಶಾಸ್ತ್ರ ರೀತ್ಯ ರಚಿಸಿದ ಕೃತಿ ವಿಜಯದಾಸರ

ಧ್ಯಾನವನೆ ಮಾಡು। ಬಿಂಬಮೂರುತಿಯ ॥ಪ॥
ಆನಂದದಲಿ ಕುಳಿತು। ಅಂತರಂಗದೊಳಗೆ

ಎಂಬ ಉದ್ದ ಕೃತಿ ಧ್ಯಾನಕ್ಕೆ ಉದಾಹರಣೆ.

ಕೃಷ್ಣನ ಪ್ರಳಯಕಾಲದ "ಆಲದೆಲೆಯಲಿ ಮಲಗಿದಂದನು" ಹರಿದಾಸರು ಮೈ ಮನತಣಿಸಿ ಹಾಡುವ ರೀತಿ ಕೃಷ್ಣನ ರೂಪ ಸೌಂದರ್ಯವನ್ನು ಮನದಲ್ಲಿ ತರಿಸುತ್ತದೆ. ಶ್ರೀಹರಿನಾಮ ಮಹತಿಯೊ ?

ನಾಮವೇ ಕಾಯ್ವುದು ನಾಮವೇ ಉಣಿಪುದು
ನಾಮವೇ ಸರ್ವತ್ರ ಪವಿತ್ರ ಮಾಡುವುದು...

ಎನ್ನುತ್ತಾರೆ ವಿಜಯವಿಠಲರು. "ಭಗವಂತನು ಭಕ್ತಬಂಧು"ವೆನ್ನಲು ದಾಸರು ಕೊಂಡಾಡುವ ರೀತಿ ಗಮನಾರ್ಹ :

ಅಂತ್ಯವಿಲ್ಲದ ನಿಜಾನಂದ ತೃಪ್ತನುಗದ
ಸಂತರೊಕ್ಕುಡಿತೆಯ ಜಲಕೆ ಹಿಗ್ಗುವಗಡ...

ದಾಸ್ಯಭಾವಕ್ಕೆ ಅಂಜನಾಸುತ ಹನುಮಂತನಿಗಿಂತ ಅಗ್ರಪಂಕ್ತಿಯ ಭಕ್ತರು ಬೇಕೆ ? "ದಾಸನ ಮಾಡಿಕೊ ಎನ್ನ ಸ್ವಾಮಿ ಸಾಸಿರನಾಮದ ವೆಂಕಟರಮಣ"ನೆಂದಂತೆ ವ್ಯಾಪಾರದ ಪ್ರತಿನಿಧಿಯ ಮುಖಾಂತರ "ಶ್ರೀಪತಿಯ ಪಾದಾರವಿಂದ ಸೇವೆಯೆಂಬೊ ವ್ಯಾಪಾರ ನಮಗಾಯಿತು" ಎಂದು ಶ್ರೀಪುರಂದರದಾಸರು ಹಾಡುತ್ತಾರೆ. ವ್ಯಾಸರಾಯರ ಕೃತಿಯಂತೂ ದಾಸ್ಯಭಾವವನ್ನು ಅತ್ಯಂತ ಸ್ಪಷ್ಟವಾಗಿ ನಿರೂಪಿಸುತ್ತದೆ :

ಆಳಿದ ನೀನು ನಿನ್ನಾಳು ನಾನು
ತಂದೆ ನೀನು ಕಂದ ನಾನು......

ಇಂಥ ಹರಿಭಕ್ತರಿಗೆ ಹರಿಯು ಒಲಿಯುವುದು ಅವನ ಹಿರಿತನಕ್ಕೇ ಕಳಸವಿಟ್ಟಂತೆ ; ಭಕ್ತ ಪರಾಧೀನನೆಂಬ ಅವನಿಗಿರುವ ಹೆಗ್ಗಳಿಕೆಯೂ ಸಾರ್ಥಕ :

"ನಿನ್ನಿಂದ ನಿನ್ನ ದಾಸರೆ ಹಿರಿಯರೊ ಕೃಷ್ಣ" ಎಂದು ಹರಿಭಕ್ತ ಮಹಿಮೆ ಬಣ್ಣಿಸುವ ವ್ಯಾಸರಾಯರು,

ಬೊಮ್ಮಾದಿಗಳಗಗನಮ್ಮಾ ಗೋಚರ ಪರ
ಬ್ರಹ್ಮ ನಿನ್ನನು ಬಲಿ ಬಾಗಿಲ ಕಾಯ್ದನೇ

ಎನ್ನುತ್ತಾರೆ.

ನವವಿಧ ಭಕುತಿಗಳಲ್ಲಿ ಸಖ್ಯಭಾವ, ಮಧುರವಾದದ್ದು. ಭಕ್ತ, ಸ್ವಾಮಿಯನ್ನು ತನ್ನ ಗೆಳೆಯನೆಂದೆ ಸಲಿಗೆಯಿಂದ ಸ್ತುತಿಸುವ ಈ ಪರಿಯಲ್ಲಿ ಲಘುವಾದ ಟೀಕೆ, ಪರತತ್ತ್ವ ಇಲ್ಲದಿಲ್ಲ. ಪುರಂದರದಾಸರ ಪ್ರಸಿದ್ಧ ಕೃತಿ ಇದಕ್ಕೊಂದು ಉದಾಹರಣೆ. ಅದು ನೀಡುವ ಚಿತ್ರವೂ ಅಷ್ಟೇ ಸರಳ, ಚೆಲುವಿನದು :

ಎನಗೂ ಆಣೆ ರಂಗ ನಿನಗೂ ಆಣೆ ॥ಪ॥

ಎನಗೂ ನಿನಗೂ ಇಬ್ಬರಿಗು ನಿನ್ನ ಭಕ್ತರಾಣೆ ॥ಅ. ಪ.॥

ನಿನ್ನ ಬಿಟ್ಟು ಅನ್ಯರ ಭಜಿಸಿದರೆನಗೆ ಆಣೆ, ರಂಗ
ಎನ್ನ ನೀ ಕೈಬಿಟ್ಟು ಪೋದರೆ ನಿನಗೆ ಆಣೆ ॥1॥

ತನುಮನಧನದಲಿ ವಂಚಕನಾದರೆ ಎನಗೆ ಆಣೆ. ರಂಗ
ಮನಸು ನಿನ್ನಲಿ ನಿಲಿಸದಿದ್ದರೆ ನಿನಗೆ ಆಣೆ ॥2॥

ಕಾಕು ಮನುಜರ ಸಂಗವ ಮಾಡಿದರೆನಗೆ ಆಣೆ, ರಂಗ
ಲೌಕಿಕವ ಬಿಡಿಸದಿದ್ದರೆ ನಿನಗೆ ಆಣೆ ॥3॥

ಶಿಷ್ಟರ ಸಂಗವ ಮಾಡದಿದ್ದರೆ ಎನಗೆ ಆಣೆ, ರಂಗ
ದುಷ್ಟರ ಸಂಗವ ಬಿಡಿಸದಿದ್ದರೆ ನಿನಗೆ ಆಣೆ ॥4॥

ಹರಿ ನಿನ್ನಾಶ್ರಯ ಮಾಡದಿದ್ದರೆ ಎನಗೆ ಆಣೆ, ರಂಗ
ಪುರಂದರವಿಠಲ ನೀನೊಲಿಯದಿದ್ದರೆ ನಿನಗೆ ಆಣೆ ॥5॥

ಎಂಬಲ್ಲಿ ಕೊನೆಯ ಸಾಲು ದಾಸರಿಗೆ ವಿಠಲನಲ್ಲಿರುವ ಸಖ್ಯಭಾವ ಪ್ರಕಟಿಸುತ್ತದೆ. ಹರಿದಾಸರಲ್ಲಿ ಕವಿಗಳಾದ ಕನಕದಾಸರು ಕಾಗಿನೆಲೆಯಾದಿ ಕೇಶವನನ್ನು ನುತಿಸುವ ರೀತಿಯೆ ವಿಶಿಷ್ಟತರದ್ದು. ಪುರಂದರದಾಸರ ಒಂದು ರಚನೆ, ಅವರು ತಮ್ಮ ಹೆಗ್ಗಳಿಕೆ ಹೇಳಿಕೊಂಡು, ದೇವರನ್ನೆ ಪ್ರಶ್ನಿಸಿದಂತಿದೆ ಈ ಉಗಾಭೋಗದಲ್ಲಿ :

ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ ।
ನಿನ್ನಂಥ ತಂದೆಯು ಎನಗುಂಟು ನಿನಗಿಲ್ಲ ।
ನಿನ್ನಂಥ ದೊರೆಯು ಎನಗುಂಟು ನಿನಗಿಲ್ಲ ।
ನೀನೆ ಪರದೇಶಿ ನಾನೆ ಸ್ವದೇಶಿ ।

ನಿನ್ನರಸಿ ಲಕುಮಿ ಎನ್ನ ತಾಯಿ ।
ನಿನ್ನ ತಾಯ ತೋರೊ ಪುರಂದರವಿಠಲ ।

ಇದು, ಆತ್ಮಾಭಿಮಾನವೆಂದರೆ !

ಹರಿದಾಸಸಾಹಿತ್ಯದಲ್ಲಿ ಮಧುರಭಾವ ನಿರೂಪಣೆ, ತಮಿಳುನಾಡಿನ ಆಳ್ವಾರರ ಮಧುರಭಾವ ನಿರೂಪಣೆಯನ್ನು ನೆನಪಿಸುತ್ತದೆ. ಹಾಗೆಯೆ ಚೈತನ್ಯ, ಮೀರಾ, ಕಬೀರ, ತುಲಸೀದಾಸರ ಮಧುರಭಾವ ಪೂರಿತ ಕೃತಿಗಳನೇಕ. ಹರಿದಾಸರು ಗೋಪಿಯರು ಕೃಷ್ಣನಲ್ಲಿರಿಸಿದ್ದ ಪ್ರೇಮದ ವಿವಿಧತೆಯನ್ನು ಪರಿಪರಿಯಾಗಿ ಚಿತ್ರಿಸಿದ್ದಾರೆ. ಶ್ರೀಪಾದರಾಜರ "ಭ್ರಮರಗೀತ"ದಿಂದ ಮಧುರಭಾವ ಹರಿದಾಸರಲ್ಲಿ ಆರಂಭವೆನ್ನ

ಬಹುದು. ಮೀರಾಳ ಒಂದು ಕವಿತೆಯ ಸಾಲು, ಮಧುರಭಾವ ಭಕ್ತಿ ಪರಾಕಾಷ್ಠತೆ ಮುಟ್ಟಿದಂತಿದೆ :

ಹರೀ ! ಮೈತೋಪ್ರೇಮ್ ದಿವಾನೀ !
ಮೇರೀ ದರ್ದ್‌ನ ಜಾಣ್ಯೋ ಕೋಯ !
ಸೂ ಊಪರ್‌ಸೇಜ್ ಪಿಯಾಕಾ ಮಿಲಣೋಕಿಸ್ ವಿಧ ಹೋಯ ॥

''ನಾನು ಪ್ರೇಮೋನ್ಮತ್ತಳಾಗಿದ್ದೇನೆ ಯಾರೂ ನನ್ನನೋವನ್ನರಿತಿಲ್ಲ ! ನನ್ನ ಪ್ರಿಯಕರ ನಿಗೆ ಮಂಚದ ಮೇಲೆ ಶಯ್ಯೆ ಸಿದ್ಧವಾಗಿದೆ । ಆತನನ್ನು ಹೇಗೆ ಪಡೆದೇನು ? ನೊಂದ ವನೇ ನೋವನ್ನು ಬಲ್ಲ ; ರತ್ನದ ಬೆಲೆ ಅದರ ಪರೀಕ್ಷಕರಿಗಲ್ಲದೆ ಬೇರೆಯವರಿಗೆ ಹೇಗೆ ತಿಳಿದೀತು ? ವಿರಹವೇದನೆಗೊಳಗಾಗಿ ನಾನು ವನದಿಂದ ವನಕ್ಕೆ ಅಲೆಯುತ್ತಿದೇನೆ ; ಘನಶ್ಯಾಮನು ವೈದ್ಯನಾದರೆ ಮೀರಾಳ ವೇದನೆ ಪರಿಹಾರವಾದೀತು...''ವ್ಯಾಸರಾಯರ ಒಂದು ರಚನೆ, ಮಧುರಭಾವಕ್ಕೆ ಒಂದು ಸುಂದರ ಉದಾಹರಣೆ :

ತುಂಬಿತು ಬೆಳದಿಂಗಳು-ಈ ವನದೊಳು
ತುಂಬಿತು ಬೆಳದಿಂಗಳು ॥ ಪ ॥

ತುಂಬಿತು ಬೆಳದಿಂಗಳೀವನದೊಳಗೆಲ್ಲ
ಅಂಬುಜನಾಭನು ಬಾರಕಾಣಕ್ಕ ॥ಅ.ಪ.॥

ಮಾಗಿ ಹೋಗಿ ವಸಂತವು ಬರುತಿದೆ
ಕೋಗಿಲೆ ತುಂಬಿಲ್ಲಿ ಕೂಗುತಿದೆ
ಆಗಲೆ ಎಳೆಮಾವು ತಳಿರೇಳುತಲಿದೆ
ನಾಗಶಯನ ಕೃಷ್ಣ ಬಾರಕಾಣಕ್ಕ ॥ 1 ॥

(ಇದೇ ರೀತಿ ಶ್ರೀಕನಕದಾಸರ ಯಾದವರಾಯ ಬೃಂದಾವನದೊಳು। ವೇಣುನಾದವ ಮಾಡುತಿರೆ॥ ಎಂಬ ವೇಣುಗೀತೆ ಸೊಗಸಾಗಿದೆ)

ಪುರಂದರದಾಸರು ಹರಿದಾಸನ ಜೀವನವನ್ನು ಮುತ್ತೈದೆಯ ಜೀವಿತಕ್ಕೆ ಹೋಲಿಸಿ ರಚಿಸಿರುವ ಕೀರ್ತನ ಸಂಪ್ರದಾಯನಿಷ್ಠವಾದದ್ದಾದರೂ ಭಕುತಿಪಾರಮ್ಯ ಘೋಷಿಸುವ ಕೃತಿಯಾಗಿದೆ. ಅದರ ಒಂದು ಚರಣ ಹೀಗೆ :

ಮುತ್ತೈದೆಯಾಗಿರಬೇಕು ಮಂದದಿಂದಲಿ
ಹತ್ತುನೂರು ನಾಮದೊಡೆಯ ಹರಿಪತಿಯೆಂದು ॥ ಪ ॥

ಹರಿಕಥೆ ಕೇಳುವುದು ಕಿವಿಗೆ ಮುತ್ತಿನ ವಾಲೆ...
ಪೊಡವಿಯೊಳು ಪರಹಿತದ ಪಟ್ಟಾವಳಿಯನುಟ್ಟು
ಕೊಡುವ ದಾನಗಳೆಂಬೊ ಕುಬುಸದೊಟ್ಟು
ಬಿಡದೆ ಎನ್ನೊಡೆಯ ಶ್ರೀ ಪುರಂದರವಿಠಲನೊಳು
ದೃಢಭಕ್ತಿಯೆಂಬಂಥ ಕಡಗ ಬಳೆ ಇಟ್ಟುಕೊಂಡು ॥

ಹರಿದಾಸರ ನಡೆ-ನುಡಿ ಪರಮಾತ್ಮನ ಪ್ರೇಮಕ್ಕಾಗಿ ಹಾತೊರೆಯುವ ಮನೋವ್ಯಾಪಾರವೆಂಬುದು ಈ ಕೀರ್ತನೆಯ ದೃಷ್ಟಿ.

ಹರಿದಾಸರಲ್ಲಿ ಬಂದಿರುವ ವಾತ್ಸಲ್ಯಭಾವ ತನ್ನದೆ ಆದ ಒಂದು ಸೊಬಗಿನೊಡಗೂಡಿದೆ. ಪುರಂದರದಾಸರು ಇದರಲ್ಲಿ ನಿಸ್ಸೀಮರು. ಅವರ ಕೃಷ್ಣಲೀಲಾ ವರ್ಣನೆಗಳು ಒಂದೊಂದೂ ರಮ್ಯ : ನುಡಿಗಟ್ಟು, ಕನ್ನಡದೇಸಿ, ಸಹಜ ಉಪಮೆ, ದಾಸರಲ್ಲಿ ಅವರನ್ನು ಪೂತಾತ್ಮರೆಂದೆನಿಸುತ್ತವೆ : ಯಶೋದೆ ಕೃಷ್ಣನನ್ನಾಡಿಸುವ ಹಾಡುಗಳು, ಅವನನ್ನು ಹರಸುವ ಹಾಡು, ಕೃಷ್ಣನ ತುಂಟತನ, "ಗೋಪಿಯ ಭಾಗ್ಯವಿದು : ಶ್ರೀಪತಿ ತಾ ಶಿಶುರೂಪಿನಲಿರುವುದು" "ಲಾಲಿಸಿದಳು ಮಗನ" ಎನ್ನುವಲ್ಲಿ ಯಶೋದೆ, ಅವನಿಗೆ ಎಲ್ಲ ಸೇವೆಗೈವ ಭಾಗ್ಯ ಪಡೆದಿದಾಳೆ.

ಕೃಷ್ಣನ ಕಳ್ಳತನ ಮೀರಿ, ತ್ರಿವಿಕ್ರಮನಾಗಿಸುತ್ತದೆ : ಯಶೋದೆ ಕೃಷ್ಣನ ತುಂಟಾಟ ತಡೆಯಲಾಗದೆ, ಅವನನ್ನು ಒರಳಿಗೆ ಕಟ್ಟಿ ಹಾಕುವುದು, ಗುಮ್ಮ ಬಂದಿತೆಂದು ಹೆದರಿಸುವುದು, ಹೆದರಿದನೆಂದು ದೃಷ್ಟಿ ತೆಗೆಯುವ ಪರಿ, ಎಣ್ಣೆಯೊತ್ತುವ ಮಜ್ಜನದ ಸೊಗಸು ಒಂದೊಂದೂ ಎಲ್ಲರನ್ನೂ ರಂಜಿಸುತ್ತದೆ. ದಾಸರ ವಾತ್ಸಲ್ಯಭಾವ ಒರತು ಹೊನಲಾಗಿ ಹರಿದಿದೆ. ಈ ಕೀರ್ತನೆ ನೋಡಿ :

ಬಣ್ಣಿಸಿ ಗೋಪಿ ಹರಸಿದಳು ॥ ಪ ॥
ಎಣ್ಣೆಯನೊತ್ತುತ ಯದುಕುಲ ತಿಲಕಗೆ ॥ಅ.ಪ.॥

ಆಯುಷ್ಯವಂತನಾಗು ಅತಿ ಬಲ್ಲಿದನಾಗು ।
ಮಾಯದ ಖಳರ ಮರ್ದನನಾಗು ।
ರಾಯರ ಪಾಲಿಸು ರಕ್ಕಸರ ಸೋಲಿಸು ।
ವಾಯುಸುತಗೆ ನೀನೊಡೆಯನಾಗೆನುತ ॥ 1 ॥

ಇಲ್ಲಿ ಅದ್ವೈತ ಖಂಡನವೂ ಬಂದಿದೆ. ಇದಲ್ಲದೆ ತಾಯಿಹರಕೆ.

ವಾತ್ಸಲ್ಯಭಾವದಿಂದ ಕೃಷ್ಣನನ್ನು ಜೋಗುಳ ಹಾಡಿ ಮಲಗಿಸುವ ಕೃತಿಗಳಂತೂ ಹರಿದಾಸರು ಅವರವರು ಮೈವಂತೆತುಂಬಿ ಅನುಭವಿಸಿದಷ್ಟು. ಶ್ರೀಪಾದರಾಯರ ರಚನೆಯು ಒಂದು ನುಡಿ ಅವರ ಅದ್ಭುತ ಕಲ್ಪನೆಗೂ ಸಾಕ್ಷಿಯಾಗಿದೆ :

ಜೋ ಜೋ ಜೋ ಜೋ ಕೃಷ್ಣ ಪರಮಾ
ನಂದ ಗೋಪಿಯ ಕಂದ ಮುಕುಂದ ಜೋ ಜೋ ॥ ಪ ॥

ಭೂಮಿಯ ಚಿನ್ನದ ತೊಟ್ಟಿಲ ಮಾಡಿ
ಸೋಮಸೂರ್ಯರೆಂಬ ಕಲಶವ ಹೂಡಿ
ಆ ಮಹಾಆಕಾಶ ಕೆಂದಟ ಮಾಡಿ
ನೇಮದಿ ವೇದಗಳ ಸರಪಣಿ ಮಾಡಿ
ಆ ಮಹಾಕಾಶಕ್ಕೆ ಕೊಂಡಿಗಳ ಹಾಕಿ ॥1॥
ವಸುದೇವ ಸುತನಾದ ಮುದ್ದು ಮುರಾರಿ
ಅಸುರೆ ಪೂತನಿಯ ಪ್ರಾಣಾಪಹಾರಿ
ಅಸಮ ಸಾಹಸಮಲ್ಲ ದೈತ್ಯರವೈರಿ
ಶಿಶುವಾಗಿ ದೇವಕಿಗಾನಂದ ತೋರಿ, ಜೋ ಜೋ ॥2॥
ಬುದ್ಧನಾಗಿ ದೈತ್ಯರನಳಿದಿಯಲ್ಲೊ
ಮುದ್ದುತುರಗವನೇರಿ ಕಲ್ಕ್ಯಾದಿಯಲ್ಲೊ
ಪದ್ಮನಾಭ ಸಿರಿ ಭಕುತವತ್ಸಲ
ನಿದ್ರೆಯಮಾಡಯ್ಯ ಶ್ರೀರಂಗವಿಠಲ ಜೋ ಜೋ... ॥3॥

ಶ್ರೀಪಾದರಾಜರ ರಚನೆಗಳಲ್ಲಿರುವ ಕಲ್ಪನೆ, ಪರಮಾತ್ಮನ ಸುಕೋಮಲ ಅವಯವದ ವರ್ಣನೆ, ಅನುಭವಿಸಿದಷ್ಟೂ ಮತ್ತೆ ಓದಿ ಸವಿಯಬೇಕೆಂದೆನಿಸುತ್ತದೆ.

ಹರಿದಾಸರಲ್ಲಿ ಒಂದೊಂದು ವಿಧದ ಭಕ್ತಿ ವರ್ಣಿಸುವಲ್ಲಿಯೂ ಭಾವಪರವಶತೆ ತಾನೇ ತಾನಾಗಿ ಹಾಲಿನಲ್ಲಿನ ಮಧುರಿಮೆನಿಸುತ್ತದೆ. ನವವಿಧ ಭಕುತಿಯನ್ನು ಅವರು ಎಷ್ಟು ಗಾಢವಾಗಿ ಅನುಭವಿಸಿರುವರೆಂಬುದು ತಿಳಿಯಲ್ಪಡದಲ್ಲದೆ ಅವರ ತಿಳಿಗನ್ನಡ ರಚನೆಗಳು ಹೃದಯಂಗಮವೆನಿಸುತ್ತವೆ. ಭಗವಂತ ಭಕ್ತರ ಪರಸ್ಪರ ಸಂಬಂಧ, ಸಲುಗೆ ವಾತ್ಸಲ್ಯ, ಮಧುರಭಾವ, ಸಖ್ಯ, ಎಲ್ಲ ಪ್ರಕಟಿಸುವ ಒಂದು ರೀತಿ ಇಡೀ ಭಕ್ತಿ ಸಾಹಿತ್ಯಕ್ಕೆ, ವಿಶ್ವಸಂಸ್ಕೃತಿಯ ದಿವ್ಯ ಪ್ರೇಮಕ್ಕೇ ಒಂದು ಶಾಶ್ವತ ಕೊಡುಗೆಯೆಂದೆನಿಸುತ್ತದೆ. ಭಕ್ತ ಭಗವಂತರ ಬಾಂಧವ್ಯ ಎಷ್ಟು ನಿಕಟ, ಬಂಧುರವಾದದ್ದೂ ಅಷ್ಟೆ ಅಲೌಕಿಕವಾದದ್ದು. ವ್ಯಾಸರಾಯರು ಒಂದೆಡೆ ತಮ್ಮ ಹಾಗೂ ತಮ್ಮ ಆರಾಧ್ಯ ದೈವನಾದ ಸಿರಿಕೃಷ್ಣನ ಪರಸ್ಪರ ನಂಟನ್ನು ಕುರಿತು ಮನದುಂಬಿ ಹೇಳುತ್ತಾರೆ :

ತಾಯಿಯೆಂಬೆನೆ ನಿನ್ನ-ಧ್ರುವನನ್ನ ತಾಯಿಯು ನಿನ್ನಂತೆ ಕಾಯದಳೆ
ತಂದೆಯೆಂಬೆನೆ ನಿನ್ನ-ಪ್ರಹ್ಲಾದನ ತಂದೆ ನಿನ್ನಂತೆ ಕಾಯಿದನೆ ॥

–ಇದು ಅವರಿಗೆ ದೇವರಲ್ಲಿರುವ ಆತ್ಮೀಯ ಭಾವ.

ವಾದಿರಾಜರಲ್ಲಂತೂ ಅವರ ಹಂಬಲ, ಕೃಷ್ಣಭಕ್ತಿ, ಕಾವ್ಯಶಕ್ತಿ ಎಲ್ಲವೂ ಭಕ್ತಿಯನ್ನೆ ಪ್ರಧಾನ ಧ್ಯೇಯವಾಗಿ ರಚಿಸಿರುವುವಾಗಿವೆ. ಅವರ ಕೃಷ್ಣ-ಸತ್ಯಭಾಮೆಯರ ಸಂವಾದ, ಕಥನ ಕವನ ಕೌಶಲ್ಯಕ್ಕೆ ನಿದರ್ಶನ. ಹಾಗೆಯೇ ಯಶೋದೆಯ ಮಾತೃವಾತ್ಸಲ್ಯ, ರಾಜರು ಕಾಂಬ ಪರಮಾತ್ಮನ ಅಪ್ರಮೇಯ ಗುಣವನ್ನೂ ಪ್ರಕಟಿಸುತ್ತದೆ. "ಸೇವಕನೆಲೊ ನಾನು ನಿನ್ನಯ ಪಾದಸೇವೆ ನೀಡೆಲೊ ನೀನು" ಎಂಬ ದಾಸ್ಯಭಾವದ ಆವರು, ನೀನೆ ನನಗೆ ಆಧಾರವಯ್ಯ ಶ್ರೀ ಹಯವದನರಾಯ, ಎಂದು ಬೇಡಿದ್ದಾರೆ. ವಾದಿರಾಜರ ಪದ್ಯ, ವೃತ್ತನಾಮಗಳೆಲ್ಲ ಭಾವಪರವೂ, ಅವರ ಕೀರ್ತನೆಗಳೂ ಹಾಗೆಯೇ. ಸಂಸ್ಕೃತ ಕನ್ನಡಗಳಲ್ಲಿ ಪರಿಣತರಾದ ವಾದಿರಾಜರು ಸಾಹಿತ್ಯ-ಶಾಸ್ತ್ರ ಎರಡನ್ನೂ ಸಮನ್ವಯಗೊಳಿಸಿದರು. ಅವರ ಶ್ರೇಷ್ಠ ರಚನೆಗಳಲ್ಲೊಂದಾದ "ತಾಳಿಂಕಿಗಿಂತ ತಪವು ಇಲ್ಲ : ಕೇಳಬಲ್ಲವರಿಗೆ ಹೇಳುವೆನು ಸೊಲ್ಲ" ಎಂಬುವ ಕೀರ್ತನೆ ತಾಳ್ಮೆಯ ಮಹತಿ, ಬೆಲೆಯನ್ನು ಬದುಕಿಗೆ ಸಂಯಮತೆಯ ಸಂದೇಶವನ್ನು ನೀಡುತ್ತದೆ.

ಹರಿದಾಸರ ಭಕ್ತಿಸಾಹಿತ್ಯ, ಅವರ ನವವಿಧ ಭಕ್ತಿ ನಿರೂಪಣೆ, ಕನ್ನಡ ಸಾಹಿತ್ಯಕ್ಕೇ ಒಂದು ಅಮೂಲ್ಯ ಕೊಡುಗೆ ಹಾಗೂ ಆ ನುಡಿಯ ಸೌಂದರ್ಯವನ್ನು ಹೆಚ್ಚಿಸಗೊಳಿಸಿದೆಯೆಂದರೆ ಅತಿಶಯೋಕ್ತಿಯಾಗಲಾರದು.

## ಹರಿದಾಸರು ಸಗುಣೋಪಾಸಕರು

ನವವಿಧ ಭಕ್ತಿಗಳನ್ನು ಹರಿದಾಸರು ತಮ್ಮ ಕೃತಿಗಳಲ್ಲಿ ಕಂಡರಿಸಿರುವ ರೀತಿ ಅವರ ಭಕ್ತಿ ಯಾವುದೆಂಬುದನ್ನು ಸ್ಪಷ್ಟಪಡಿಸಿದೆ. ಅಂದರೆ, ಭಕ್ತಿಯು ಬೆಳವಣಿಗೆ ಆದಂತೆ, ಭಗವಂತನ ಸ್ವರೂಪದ ಬಗ್ಗೆ ಜಿಜ್ಞಾಸೆ ಹರಿದಾಸರಿಗೆ ಮುಂಚೆಯೇ ಆರಂಭ ಆಗಿ, ಒಂದು ಹಂತ ತಲುಪಿತ್ತು ಎನ್ನಬಹುದು.

ಭಕ್ತಿಯ ತಾತ್ವಿಕ ವಿವೇಚನೆಯಲ್ಲಿ ಎರಡು ಪಂಥದವರನ್ನು ಗಮನಿಸುತ್ತೇವೆ :

1. ಸಗುಣೋಪಾಸಕರು : ಇವರು ಮೂರ್ತಿ ಪೂಜಕರೂ ಹೌದು.
2. ನಿರ್ಗುಣೋಪಾಸಕರು : ಮೂರ್ತಿ ಪೂಜೆ ನಂಬದವರು.

ಭಗವಂತನಿಗೆ (The ultimate reality, Supreme, Infinite) ಅನಂತ, ಅಪ್ರಮೇಯ ಮುಂತಾದ ಅನೇಕ ಗುಣವಿಶೇಷಗಳನ್ನಾರೋಪಿಸಿ, ಆದಕ್ಕನುಗುಣವಾಗಿ, ಅವನನ್ನು ಒಂದು ಆಕಾರದಲ್ಲಿ ಹೀಗೆ ಎಂಬುದಾಗಿ ಕಲ್ಪಿಸಿಕೊಂಡು, ಉಪಾಸನೆ ಮಾಡುವುದು ಒಂದು ಪಂಥ, ಒಂದು ಬಗೆ. ಇವರದ್ದು ಸಗುಣಭಕ್ತಿ-ಇವರು ಸಗುಣೋಪಾಸಕರು, ಬ್ರಹ್ಮನ್ ಅಥವಾ ಪರಮಾತ್ಮನಿಗೆ ಷಡ್ಗುಣಗಳು ಇವೆ ಎಂದು ಹೇಳುತ್ತಾರೆ, ಕಲ್ಪಿಸುತ್ತಾರೆ : ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸು—ಇವೇ ಆ ಆರು ಗುಣಗಳು. ಇವುಗಳ ಜತೆ ಸೌಶೀಲ್ಯ, ವಾತ್ಸಲ್ಯ, ಮಧುರಭಾವ, ಸಖ್ಯ ಹೀಗೆಲ್ಲ ಗುಣಗಳನ್ನು ಸೇರಿಸಿ, ಈ ಎಲ್ಲವೂ ದಯಾಗುಣರಹಿತವಾಗಿಬಿಟ್ಟರೆ, ಆಗ ನಿಷ್ಪ್ರಯೋಜಕವೆಂದು ಭಾವಿಸುತ್ತಾರೆ, ಅಂದರೆ ಭಗವಂತನಿಗೆ ದಯಾಗುಣ ಪ್ರಧಾನ, (ಬಸವಣ್ಣನವರ

ದಯೆಯೇ ಧರ್ಮದ ಮೂಲವಯ್ಯಾ...ನೆನಪಾಗದಿರದು). 'ಭಗವಂತನ ವಿಶ್ವವ್ಯಾಪೀ ವ್ಯಕ್ತಿತ್ವ, ಅವನ ದಯಾ ಪರಗುಣವೂ ಹೌದು. ಅದೇ ಅವನ ವೈಶಿಷ್ಟ್ಯ' ಶ್ರೀಮದ್ರಾಮಾಯಣದಲ್ಲಿಯೂ ಸಹ ಶ್ರೀ ರಾಮನ ಬಗ್ಗೆ ಹೇಳುವಾಗ "ರಿಪೂಣಾಮಪಿ ವತ್ಸಲಃ" ಎಂಬ ಮಾತಿದೆ. ಇಲ್ಲಿ ಮೇಲ್ಕಾಣಿಸಿದ ಎಲ್ಲ ಗುಣಗಳನ್ನೂ ಎರಡು ವಿಧವಾಗಿ ವಿಂಗಡಿಸಬಹುದಾಗಿದೆ.

## ಭಗವಂತ ಎಂಬುದಕ್ಕೆ ಆರು ಗುಣ ವಿಶೇಷ

ಒಂದನೆಯದು ಸ್ವರೂಪಗತ ಗುಣ, ಎರಡನೆಯದು ವಿಗ್ರಹಗತ ಗಣ, ಸ್ವರೂಪಗತ ಗುಣದಲ್ಲಿ : ಶೌರ್ಯ, ಧೈರ್ಯ, ಪರಾಕ್ರಮ ಅಳವಡುತ್ತವೆ. ವಿಗ್ರಹಗತ ಗುಣದಲ್ಲಿ : ವಾತ್ಸಲ್ಯ, ಸೌಶೀಲ್ಯ, ಸೌಲಭ್ಯ ಮುಂತಾದವು, ಈ ಆರಂಗುಣದಲ್ಲಿಯೆ ಸೌಂದರ್ಯ, ಯೌವ್ವನ, ಲಾವಣ್ಯಾದಿ ಕಾಂತಿಗುಣಗಳೂ ಸೇರುತ್ತವೆ. ಇಲ್ಲಿ ಭಗವಂತ ಬಲವಾನ್-ಬಲ ವಾಗಿರುವವನೆಂದಾಗ, ಬಲ ಎಂದರೇನು ? ಎಂದಾಗ ಶ್ರಮ ಪ್ರಸಂಗ ರಹಿತಂ ಸರ್ವಧಾರಣ ಸಾಮರ್ಥ್ಯಂ ಎಂಬ ಆಚಾರ್ಯ ವಿವರಣೆ ಇದೆ. ಭಗವಂತನು ಎಲ್ಲವನ್ನೂ ಸರಿದೂಗಿಸಿ ನಡೆಯಿಸುವುದು ಬಲದಿಂದಲೆ ತಾನೆ ? ಇನ್ನು ಐಶ್ವರ್ಯ. ಅವನ ಕ್ರಿಯಾತ್ಮಕ ಶಕ್ತಿ. ಸ್ವಾತಂತ್ರ್ಯಗಳು ಅವನ ಸರ್ವೇಶ್ವರತ್ವ. ವೀರ್ಯಗುಣವೆಂದರೆ ಹೀಗೆ : ನಿರ್ವಿಕಾರನೂ, ಪರಿಶುದ್ಧನೂ ಆದ ಭಗವಂತನ ಜಗತ್ತಿನ ಸೃಷ್ಟಿಗೆ ವಸ್ತುವಾಗಿ ಪರಿಣಮಿಸುತ್ತಾನೆ. ಆದರೂ ಅವನ ಪರಿಪೂರ್ಣತೆಗೆ ಎಳ್ಳಿಯೂ ಭಂಗ ಬರುವುದಿಲ್ಲ. ಅದೇ ಅವನ ವೀರ್ಯಗುಣವಿಶೇಷ. ಶಕ್ತಿಗುಣ : ಭಗವಂತನ ಇನ್ನೊಂದು ಗುಣ. ಅವನು ಮಾಡುವ ವಿಶ್ವಸೃಷ್ಟಿ ಶಕ್ತಿಯನ್ನು ಈ ಶಕ್ತಿಗುಣ ಅಭಿವ್ಯಕ್ತಗೊಳಿಸುತ್ತದೆ.

ಜಗತ್ತಿನ ಸೃಷ್ಟಿ, ಸ್ಥಿತಿ, ಲಯದ ಕಾರ್ಯದಲ್ಲಿ, ದೇವರು ಯಾವ ಬಾಹ್ಯಶಕ್ತಿಯ ನೆರವನ್ನು ಪಡೆಯದೆಯೆ-ತನ್ನಲ್ಲಿನ ಅಂತಶ್ಶಕ್ತಿಯಿಂದಲೇ ನಿರ್ವಹಿಸುತ್ತಾನೆ. ಇದೇ ಅವನ ತೇಜೋಗುಣ. (ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ಸಾಧನ ತತ್ವ-ಇದು ಒಂದು ಕ್ರಮ.)

## ಸಗುಣೋಪಾಸನೆ : ನಿರ್ಗುಣೋಪಾಸನೆ ಒಂದು ನೋಟ

ಪರಮಾತ್ಮನನ್ನು ಗುಣರಹಿತನೆಂದು ಭಾವಿಸುವುದೆ ನಿರ್ಗುಣೋಪಾಸನೆ. ತನ್ನನ್ನು ತಾನೆ ಅರಿಯುವಂಥದು-ಇದೇ ನಿರ್ಗುಣೋಪಾಸನೆ. 'ಅಹಂ ಬ್ರಹ್ಮಾಸ್ಮಿ'. ತತ್ವವನ್ನು ನಂಬಿ, ಜ್ಞಾನ ಮಾರ್ಗದ ಮೂಲಕ ಅದನ್ನು ಸಾಧಿಸುವ ಸಾಧಕ ಮಹನೀಯರೆಲ್ಲ ನಿರ್ಗುಣೋಪಾಸಕರು. ಇಂಥ ಸಾಧಕರಿಗೆ ಯಾವುದೆ ಮೂರ್ತಿ-ಇತ್ಯಾದಿ ಮಾಧ್ಯಮದ ಅವಶ್ಯಕತೆಯೂ ಇರುವುದಿಲ್ಲ. ವಚನಕಾರರು ಮೂರ್ತಿಪೂಜೆ, ವಿಗ್ರಹಾರಾಧನೆ ಖಂಡಿಸಿದರೂ ಇಷ್ಟಲಿಂಗಪೂಜೆ ಪವಿತ್ರವೆಂದು ಭಾವಿಸಿ, ಆಚರಿಸುತ್ತಿದ್ದರು.

ಸಗುಣೋಪಾಸನೆಯ ರೀತಿಯೆ ಬೇರೆ ತೆರನಾದ್ದು. ಒಬ್ಬ ತಿಳಿದ ಗುರುವಿನ ಮುಖೇನ ಪರಮಾತ್ಮನನ್ನು ಅರಿತುಕೊಂಬ ಸಾಹಸಿ ಸಗುಣೋಪಾಸಕ. ಸಗುಣೋಪಾಸನೆಯಲ್ಲಿ ಭಗವಂತನ ಅವತಾರ ವಿಶೇಷದ ಕಲ್ಪನೆಗೇ ಪ್ರಾಮುಖ್ಯ.

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ......
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥

ಎಂಬ ಶ್ರೀಕೃಷ್ಣನ ಮಾತನ್ನು ಅಚಲವಾಗಿ ನಂಬಿರುವವರು, ಸಗುಣೋಪಾಸಕರು. ಪಂಚಭಕ್ತಿಭಾವ, ನವವಿಧಭಕ್ತಿ, ಹನ್ನೊಂದು ಆಸಕ್ತಿ, ಹೀಗೆ ದಾಸ, ಸಖ, ಬಂಧು, ಪ್ರಿಯಂಕರ, ಪ್ರೇಮಿ, ಹೀಗೆಲ್ಲ ನಾನಾ ರೀತಿಯ ಸಂಬಂಧವನ್ನು ಆರೋಪಿಸಿಕೊಂಡು ತಮ್ಮ ಸಾಧನೆಯನ್ನು ಮುಂದುವರೆಸುತ್ತಾರೆ. ಈ ರೀತಿಯ ಸಗುಣೋಭಕ್ತಿಯ ಆಧಾರದ ಮೇಲೆ ನಿರ್ಗುಣೋಪಾಸಕನಾಗುವುದು ಸುಲಭ. ಆರಂಭದಲ್ಲಿ ನಿರ್ಗುಣ ಭಕ್ತಿಯ ಸಾಧನೆ ಕಷ್ಟಕರ ಎಂಬುದು ತಿಳಿದವರ ಅಭಿಪ್ರಾಯ. ಸಗುಣಭಕ್ತಿ ಸಾಧನೆಯಲ್ಲಿ ಇಂದ್ರಿಯಗಳು ಮಾಧ್ಯಮ ಆಗುತ್ತವೆ. ಕಂಗಳಲ್ಲಿ ಶ್ರೀಹರಿಯ ದಿವ್ಯರೂಪ ಕಂಡರೆ, ಕಿವಿಯಿಂದ ಹರಿಕಥೆ ಕೇಳಬೇಕು. ನಾಲಗೆಯಿಂದ ಹರಿನಾಮೋಚ್ಚಾರಣೆ ಮಾಡಿದರೆ, ಕೈಯಿಂದ ಸೇವಾಕೈಂಕರ್ಯ ನಡೆಸಬೇಕು. ಈ ಕೈಂಕರ್ಯ ಭಾವನೆಯಿಂದ ಆತ ಇಂದ್ರಿಯಗಳೆಲ್ಲವನ್ನೂ ದೇವಗರ್ಪಿಸುತ್ತಾನೆ''. ಸಗುಣೋಪಾಸಕನದು ಹೀಗಾದರೆ, ನಿರ್ಗುಣೋಪಾಸಕನದು ಹಾಗಲ್ಲ. ಆತ ಎಲ್ಲ ಇಂದ್ರಿಯಗಳನ್ನೂ ನಿಯಂತ್ರಿಸಲು ತುಂಬ ಪ್ರಯತ್ನಿಸುತ್ತಾನೆ. ಇದು ಶ್ರಮ ಸಾಧ್ಯ ಮಾತ್ರ. ಇಂದ್ರಿಯಗಳ ಮೇಲೆ ವಿಜಯ ಸಾಧಿಸುವುದೆಂದರೆ ದುಸ್ಸಾಧ್ಯ, ಕಷ್ಟಕರ ; ಸಗುಣೋಪಾಸಕನಿಗೆ ಭಗವಂತನ ವಿಗ್ರಹ ಮೂರ್ತಿಯೆ ಆಧಾರ. ನಿರ್ಗುಣೋಪಾಸಕ ಸ್ವಾವಲಂಬಿ.

ಭಕ್ತನಾದವನು, ಭಕ್ತಿ ಮಾರ್ಗದಲ್ಲಿ ಸಿದ್ಧಿಯ ಹಂತವನ್ನೇರುವಲ್ಲಿ ಮೊದಲು ನಿರ್ಗುಣದ ನೆಲೆಗೇರಲೇಬೇಕು. ನಿರ್ಗುಣದ ಅಭಾವ, ಸಗುಣ, ಸದೋಷ, ನಿರ್ಗುಣದ ಮರಿಯಾದೆ ಸಗುಣವನ್ನು ಸಮತೋಲ ಆಗಿಸುತ್ತದೆ. ಎರಡೂ ಪಂಥಗಳು ಪರಸ್ಪರ ಪೂರಕವಾದರೆ, ಸಗುಣೋಪಾಸನೆಗೆ ಉತ್ತಮ ನಿದರ್ಶನ-ರಾಮಾಯಣದ ಲಕ್ಷ್ಮಣ ಸದಾ ಅಣ್ಣನ ಜತೆಗಿದ್ದು, ಅವನ ದಿವ್ಯಮೂರ್ತಿಯನ್ನು ಕಣ್ಣು ತುಂಬ ನೋಡಿ ಆನಂದಿಸಿ, ಸೇವೆಸಲ್ಲಿಸಿದ (ಮುಂದೆ ಲಕ್ಷ್ಮಣನೇ ರಾಮಾನುಜರು ಆಗಿ ಅವತರಿಸಿದರೆಂದು ಪ್ರತೀತಿ).

ಸಗುಣ-ನಿರ್ಗುಣ ಭಕ್ತಿಪಂಥದಲ್ಲಿ ಯಾವುದು ಶ್ರೇಷ್ಠ ? ಭಗವದ್ಗೀತೆಯಲ್ಲಿ ಇದರ ಬಗ್ಗೆ ಚರ್ಚೆ ನಡೆದಿರುವುದನ್ನು ಕಾಣುತ್ತೇವೆ. ಅರ್ಜುನ, ಶ್ರದ್ಧೆಯಿಂದ ಸ್ಥಿರ

ವಾದ ಭಕ್ತಿ ಮಾರ್ಗವನ್ನು ಅನುಸರಿಸೆಂದಿದ್ದಾನೆ ಶ್ರೀಕೃಷ್ಣ. ಯಾವುದಾಗಲಿ ಶ್ರದ್ಧೆ ಮುಖ್ಯ ಅದೇ ಜ್ಞಾನ ಬಂದ್ಕಿಗೆ ಲಬ್ಧಿಗೆ ಹೇತು ; ಶ್ರದ್ಧಾವಾಲ್ಲಭತೇ ಜ್ಞಾನಮ್... ಇಂದ್ರಿಯಗಳ ಶಕ್ತಿಯನ್ನು ಏಕೀಕರಿಸಿ, ಸಗುಣರೀತಿಯಲ್ಲಿ ಸ್ಥಿರೀಕರಿಸುವುದು ಅಷ್ಟೇನೂ ಕಷ್ಟವೆನಿಸದು : (ಅರ್ಚಾವಿಗ್ರಹ-ಆಳ್ವಾರರ ಅನುಸರಣೆ) ಆದುದರಿಂದ ಸಗುಣ ಮಾರ್ಗವೆ ಶ್ರೇಷ್ಠ ಎಂಬ ಅಭಿಪ್ರಾಯವನ್ನು ಶ್ರೀ ಕೃಷ್ಣ ವ್ಯಕ್ತಪಡಿಸಿದ್ದಾನೆ. ನಿರ್ಗುಣೋಪಾಸಕನಿಗೂ ಮೋಕ್ಷ ಪ್ರಾಪ್ತಿಯಾಗುವುದಾದರೂ ಈ ಹಾದಿ ಕಠಿಣ. "ಕ್ಲೇಶೋ ಅಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್" ಗೀತೆಯಲ್ಲಿ ಉದ್ದಕ್ಕೂ ಸಗುಣೋಪಾಸನೆಯ ಭಕ್ತಿ ಸ್ವರೂಪವನ್ನೆ ನಾವು ಕಾಣುವುದು. ಅದರಲ್ಲಿಯೂ "ವಿಶ್ವ ರೂಪದರ್ಶನ"ದ ಅಧ್ಯಾಯವಂತೂ ಸಗುಣ, ಸಾಕಾರಭಕ್ತಿಯ ಪ್ರತೀಕ. ಎಲ್ಲ ಶ್ರೇಷ್ಠ ವಸ್ತುಗಳಲ್ಲೂ ತಾನು ಇರುವುದಾಗಿ ಹೇಳುವ ಪರಮಾತ್ಮನ ನುಡಿಯೆ, ಸಗುಣ ಭಕ್ತಿಯನ್ನು ಸ್ವೀಕರಿಸುತ್ತದೆ.

ಈ ದಿಸೆಯಲ್ಲಿ ಮೂವರು ತತ್ತ್ವ ಸಂಸ್ಥಾಪಕ ಆಚಾರ್ಯರ ಅಭಿಪ್ರಾಯವನ್ನು (ಶಂಕರ, ರಾಮಾನುಜ, ಮಾಧ್ವ) ಗಮನಿಸಿದರೆ, ಶ್ರೀಶಂಕರರು ಸರ್ವ ಸಗುಣ ಶ್ರುತಿಗಳಿಗಿಂತ ನಿರ್ಗುಣ ಶ್ರುತಿಗಳೇ ಬ್ರಹ್ಮತತ್ತ್ವದ ಅರಿವಿಗೆ ಪ್ರಮುಖ ಸಾಧ್ಯ ಎಂದು ಭಾವಿಸಿದಾರೆ. ಅವರ ಪ್ರಕಾರ, 'ಬ್ರಹ್ಮನ್' ಒಂದೇ ಸತ್ಯ. ಉಳಿದುದೆಲ್ಲ ಮಾಯೆಯಿಂದಾವೃತ (ಬ್ರಹ್ಮ ಸತ್ಯಂ ಜಗನ್ಮಿಥ್ಯಂ). ಆ ಬ್ರಹ್ಮತ್ವವೇ ಅಜ್ಞಾನದಿಂದ ಕೂಡಿ ತನ್ನ ಆವರಣ ಶಕ್ತಿಯಿಂದ ಜೀವಾತ್ಮನಾಗಿ ಪರಿಣಮಿಸುತ್ತಾನೆ. ಶಂಕರರ ಪ್ರಕಾರ, ಮಾಯೆ ತೊಡೆದು, ಜ್ಞಾನದಿಂದಲೇ ಮುಕ್ತಿ ಪಡೆಯಲು ಸಾಧ್ಯ. ಜೀವಾತ್ಮನಿಗೆ ತಾನೇ ಬ್ರಹ್ಮ (ಅಹಂ ಬ್ರಹ್ಮಾಸ್ಮಿ) ಎಂಬ ಅರಿವು ಬರುವುದೇ ಮೋಕ್ಷ. ಇನ್ನೊಂದು ಅಂಶವೆಂದರೆ, ಪರಬ್ರಹ್ಮ ತತ್ತ್ವವನ್ನು ನಿರ್ಗುಣ-ನಿರಾಕಾರನೆಂದು ಭಾವಿಸಿದರೂ, ಈಶ್ವರ ತತ್ತ್ವಕ್ಕೆ ಎಲ್ಲ ಗುಣಗಳನ್ನೂ ಆರೋಪಿಸಿ, ಅದೂ ಮಾಯೆಯ ಆವರಣದ ಪ್ರಭಾವವೆನ್ನುತ್ತಾರೆ. ಇಲ್ಲಿ ರಾಮಾನುಜರ ಹಾಗೂ ಮಧ್ವಾಚಾರ್ಯರ ಅಭಿಮತ ಗಮನಾರ್ಹ ಆದದ್ದು. ಇಬ್ಬರೂ ಮತಾಚಾರ್ಯರೂ ಸಗುಣ ಶ್ರುತಿಗಳನ್ನೂ, ನಿರ್ಗುಣ ಶ್ರುತಿಗಳನ್ನು ಸಮಾನವಾಗಿ ಕಾಣುತ್ತಾರೆ. ಎಲ್ಲ ವೈಷ್ಣವರ ದೃಷ್ಟಿಯೇ ಇದು. ಇವರ ಮೋಕ್ಷದ ಕಲ್ಪನೆಯೂ ಶಂಕರರಿಗಿಂತ ಭಿನ್ನವಾದದ್ದು. ಕೇವಲ ಆತ್ಮಜ್ಞಾನವೊಂದೇ ಸಾಲದು. ಅದರ ಜತೆ ಭಗವಂತನ ಪ್ರಸಾದವೂ ಬೇಕು. ಅದಿಲ್ಲದೆ ಮುಕ್ತಿಯಿಲ್ಲ.

### ಸಗುಣೋಪಾಸನೆ

ಈ ಎಲ್ಲ ಅಂಶಗಳನ್ನು ಗಮನದಲ್ಲಿರಿಸಿಕೊಂಡು, ಹರಿದಾಸಸಾಹಿತ್ಯ ಕೃತಿಗಳನ್ನು ಪರಿಶೀಲಿಸಿದಾಗ ಹರಿದಾಸರು ಸಗುಣೋಪಾಸಕರೂ, ಸಗುಣಭಕ್ತರೂ ಎಂದು ವಿದಿತವಾಗುತ್ತದೆ. ಹರಿದಾಸರ ಕೀರ್ತನೆ, ಅವರ ಭಗವಂತನ ಕಲ್ಪನೆ, ಅನಂತ ತತ್ತ್ವದ ಜತೆ ವಿಗ್ರಹ ಮೂರ್ತಿಯ ಕಲ್ಪನೆ, ದರ್ಶನ, ಇವೆಲ್ಲ ಅವರು ಸಗುಣೋಪಾಸಕರೆಂದು

ಸ್ಪಷ್ಟಪಡಿಸುತ್ತವೆ. ಇದರೊಂದಿಗೆ ಮತ್ತೊಂದು ವಿಶಿಷ್ಟ ಗುಣ ಹರಿದಾಸರ ಬಿಂಬೋಪಾಸಕ ಗುಣ. (ಈ ಬಗ್ಗೆ ಬೇರೆಡೆ ಪ್ರಸ್ತಾಪಿಸಲಾಗಿದೆ.) ಕೆಲವು ಹರಿದಾಸ ವರ್ಯರ ನುಡಿಗಳು ಈ ದಿಸೆಯಲ್ಲಿ ಗಮನಾರ್ಹ (ಸಗುಣೋಪಾಸನೆ) :

ಶ್ರೀಪಾದರಾಜರು : ಉತ್ತುಂಗ ಗುಣಗಳ ಅಂತರಂಗ

ಶ್ರೀವ್ಯಾಸರಾಯರು : ಕಾಕು ಮಾಡದೆ ನೀ ಎನ್ನ ಸಲಹಯ್ಯ ಸಾಕಾರ ಶ್ರೀಕೃಷ್ಣ

ಶ್ರೀಪುರಂದರದಾಸರು : ನಿತ್ಯಗುಣಾರ್ಣವ, ನಿಜಗುಣ ಪರಿಪೂರ್ಣ.

ಶ್ರೀಗೋಪಾಲದಾಸರು : ಅಗಣಿತಗುಣವವನವನು.

ಇವುಗಳಲ್ಲದೆ "ಆಕಾರವಿದ್ದು ನಿರಾಕಾರ...ರೂಪವಾಗಬಲ್ಲ...ಅಪರೂಪವಾಗಬಲ್ಲ... ರೂಪ ಅಪರೂಪವೆಕೊಂಡಾಗಲಿಲ್ಲ" ಎನ್ನುವ ಮಾತೂ ಹರಿದಾಸರಲ್ಲಿ ಬಂದಿದೆ. ಇಲ್ಲಿ ಸಗುಣ-ನಿರ್ಗುಣಗಳ ಇನ್ನೊಂದು ಮಂಖವನ್ನು ಕಾಣಬಹುದಾಗಿದೆ. ಒಂದು ಪಂಥ ಬ್ರಹ್ಮನನ್ನು ನಿರ್ಗುಣ ಬ್ರಹ್ಮನೆಂದರೆ (ಗುಣರಹಿತ-ಬ್ರಹ್ಮನೆಂದೂ) ನಿರಾಕಾರ ನೆಂದರೆ ಯಾವುದೆ ನಿಶ್ಚಿತ ಆಕಾರವಿರದ ಬ್ರಹ್ಮನೆಂದೂ) ನಿರಾಕಾರನೆಂದರೆ ಯಾವುದೇ ನಿಶ್ಚಿತ ಆಕಾರವಿರದವನೆಂದೂ ಅರ್ಥೈಸಿದರೆ, ಮತ್ತೊಂದು ಪಂಥದವರು ನಿರ್ಗುಣನೆಂದರೆ ಗುಣಾತೀತನೆಂದೂ ಗೇಯಗುಣರಹಿತನೆಂದೂ ಅರ್ಥೈಸುತ್ತಾರೆ. ರಾಮಾನುಜ ಪಂಥದ ಪ್ರಕಾರ ನಿರಾಕಾರನೆಂದರೆ ಪ್ರಾಕೃತ ದೇಹರಹಿತನೆಂದಷ್ಟೆ :

"ಭಗವತೋವ್ಯೂಹವಿಭವಾರ್ಚಿತವಾದ ಶರೀರಾದ್ಯಪಿ ಅಪ್ರಾಕೃತ ಮಯಾನಿ... (The bodies of Bhagwan in his aspects of vyhua, vibhava and avatara are made up of non-material substance) (ಯತೀಂದ್ರ ದೀಪಿಕಾದ ; ಸಂ : ಶ್ರೀನಿವಾಸದಾಸ, ಪುಟ-೧೧) ಎಂದರೇ ಸಕಲ ಚರಾಚರ ವಸ್ತುಗಳಲ್ಲಿ ವ್ಯಾಪಿಸಿದ್ದರೂ ಪ್ರಾಕೃತ ಶರೀರ ಪಡೆದವನಲ್ಲವೆಂದು ಇವರ ಭಾವನೆ.

ನಿರ್ಗುಣ ಪಂಥದವರು ಮೊದಲ ಅರ್ಥ ಅನುಮೋದಿಸಿದರೆ, ಸಗುಣ ಪಂಥದವರು ಎರಡನೆಯ ಅರ್ಥವನ್ನು ಒಪ್ಪುತ್ತಾರೆ.

ಹರಿದಾಸರು ಪ್ರಧಾನತಃ ಮಧ್ವಮತಾನುಯಾಯಿಗಳು ಆದರೂ, ಭಾಗವತ ಧರ್ಮಾವಲಂಬಿಗಳು. ವಿಷ್ಣುವಿನ ಉಪಾಸಕರು (ಆದರೂ ಶಿವನನ್ನೇನೂ ವರ್ಜಿಸುವರಲ್ಲ) ತಾರತಮ್ಯ-ಭೇದ ತತ್ವವೊಪ್ಪಿದವರು (ಕನಕದಾಸರು ಸ್ವಲ್ಪ ಹೊರತಾಗಿ ಕಾಣುತ್ತಾರೆ. ಆದರೂ ಮಧ್ವಮತ ಪ್ರಭಾವ ಅವರ ಕೃತಿಗಳಲ್ಲಿ ಕಂಡಿದೆ.) ಆದರಿಂದ ಸಗುಣ-ಸಾಕಾರ ಬ್ರಹ್ಮನೃತ್ತ-ಸಗುಣಭಕ್ತಿ-ಸಗುಣೋಪಾಸನೆಯು ಹರಿದಾಸರ ಭಕ್ತಿ ವಿಶೇಷ. ಅದೇ ಅವರ ವೈಶಿಷ್ಟ್ಯ. ನವವಿಧ ಭಕುತಿ ಸ್ವೀಕರಿಸಿ, ಶ್ರೀಹರಿಯನ್ನು, ವಿಠಲನ್ನ, ತಿರುಪತಿ ತಿಮ್ಮಪ್ಪನನ್ನು, ಹಾಗೂ ಗುರುಗಳನ್ನು ಕೊಂಡಾಡಿರುವುದೇ ಸಗುಣ ತತ್ವ ಸೃಷ್ಟೀಕರಿಸಲು. ಅದು ಅವರ ಮನದಲ್ಲಿ ನಿಚ್ಚಳವಾಗಿದೆ ; (ಶ್ರೀ ಪುರಂದರದಾಸರ : ಕೃಷ್ಣಮೂರ್ತಿ ಕಣ್ಣ ಮುಂದೆ ನಿಂತಿದಂತಿದೆ ಎಂಬುದು ಇದಕ್ಕೆ ನಿದರ್ಶನ). ಈ ಭಕ್ತಿ ಸ್ವರೂಪ, ವೈವಿಧ್ಯ ನಮಗೆ ಗಮನಾರ್ಹ.

ಅಡಿಟಿಪ್ಪಣಿಗಳು

1 Visishtadwaitha,...was clearly inadequate as the highest conception of God......It failed to take proper note of the supreme transcendence and homogeniety of God ......It was left to Madhva to make good the deficiency and supply the lacuna in Visistadvaitic thought and administered the much needed corrective to its ideology of ವಿಶಿಷ್ಟಾದ್ವೈತ through that of ಸ್ವತಂತ್ರ, ಅದ್ವಿತೀಯ— History of Dvaita School of Vedanta, Dr. B. N. K. Sharma, 1981, p. 70.

2 "Though souls and matter are modes of God, they have enjoyed a kind of individual existence which is theirs from all eternity and which cannot be entirely resolved into Brahman" (Dr. S. Radhakrishnan : Indian Philosophy) quoted in : History of Dvaita School of Vedanta, Ibid

3 ಅಶೇಷಗುಣ ಪೂರ್ಣತ್ವಂ ಸರ್ವದೋಷ ಸಮುಜ್ಝಿತಃ
ವಿಷ್ಣೋರ್ಯಚ್ಚ ತ್ವಂತ್ರಮಿತಿ ಸಮ್ಯಗ್ ವಿನಿರ್ಣಯಃ॥
ಸ್ವತಂತ್ರ ತ್ವಮ್ ಸದಾ ತಸ್ಯ ತಸ್ಯಭೇದಶ್ಚ ಸರ್ವತಃ
ಮುಕ್ತಾ ನಾಮಪಿ ಭೇದಶ್ಚ.........॥
ನಿರ್ದೋಷತ್ವಮ್ ಯಾಯಾಶ್ಚ ತದನಂತರತಾ ತಥಾ
ಬ್ರಹ್ಮಾ ಸರಸ್ವತೀ ವೀಂದ್ರ ಶೇಷರುದ್ರಶ್ಚ ತತ್‌ಸ್ತ್ರೀಯಃ॥
ಶಕ್ರಕಾವು ತದನ್ಯೇಚ ಕ್ರಮಾತ್ ಮುಕ್ತಾವಪಿತಿಚ
ಸತ್‌ಸಿದ್ಧಾಂತಂ ಇದಿಜ್ಞೇಯೋ ನಿರ್ಣೀತೋ ಹರಿಣಾ ಸ್ವಯಂ॥

4 ವಿಷ್ಣುತತ್ವ ನಿರ್ಣಯ : ಶ್ಲೋಕ–2.

5 ಈ ಬಗ್ಗೆ ಶ್ರೀ ಪುರಂದರದಾಸರು ಕೃತಿಯೊಂದರಲ್ಲಿ "ಆಲದೆಲೆಯ ಮೇಲಗಿದ್ದಾಗ ನಿಮಗೆ ಆಲಮೇಲು ರೂಪದ ಲಕ್ಷ್ಮೀದೇವಿಯರೆ ವಟಪತ್ರರಾಗಿದ್ದರಲ್ಲವೆ ?" ಎಂದಿದ್ದಾರೆ.

6 ಸೋಽಯಂ ವಿಹಾರ ಇಹಮೇ : ತಾತ್ಪರ್ಯ ನಿರ್ಣಯ

7 Vaishnavism, Saivism and other Minor religious Systems, R. G. Bhandarkar, 1947, p. 35.

8 Ibid.

9 Ibid, Also quoted in Karnataka Haridasa ahithya by R. S. Panchamukhi (1952) ಪೀಠಿಕೆ.

10 ........The original Vaishnava Faith...... appeared in a near form on the rise of Badami Chalukyas. Vaishnavism-6-8 A. D. Mixture of Saivisum-8-10 A. D. ಕರ್ನಾಟಕ ಹರಿದಾಸ ಸಾಹಿತ್ಯ ಪೀಠಿಕೆ, xviii R. S. Panchamukhi

11 Roman writer CICERO held that it came from a roof-leg-meaning 'to take up', 'gather', or observe, to observe- the strings of ▪ Divine Communication (Comparative Religion-A. C. Billinet)

12 Religion shall mean for us, the feelings, acts and experiences of individual men in their solitude so far as they apprehend themselves to stand in relation to whatever they may Consider divine—Varieties of Religious Experiences—Sir William James, p. 50.

13 ಶ್ರೀವ್ಯಾಸರಾಯರ ಹಾಡುಗಳು : ಸಂ : ಕಾವ್ಯಪ್ರೇಮಿ : (1977) : ಸಮಾಜ ಪುಸ್ತಕಾಲಯ : ಧಾರವಾಡ : ಪುಟ : 60-61.

14 ಧ್ಯಾನ ಎಂಬುದರಲ್ಲಿ : ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ ಈ ಎಂಟು ಅವಸ್ಥೆಗಳೂ ಒಳಪಡುತ್ತವೆ. ಯೌಗಿಕ ಸಾಧನೆಯ ಹಂತ ಇವು.

15 ಶ್ರೀಪಾದರಾಜರ ಕೃತಿಗಳು : (1973) : ಸಂ : ಡಾ : ಜಿ. ವರದರಾಜರಾವ್ : ಪುಟ-74. ಇದರ ಮೂಲ ವಿಷ್ಣುಪುರಾಣದಲ್ಲಿದೆ.

ಧ್ಯಾಯನ್ ಕೃತೇ ಯ ಜನ್ ಯಜ್ಞೈಃ । ತ್ರೇತಾಯಾಂ ದ್ವಾಪರೇ ರ್ಚಯನ್ ।
ಯದಾಪ್ನೋತಿ ತದಾಪ್ನೋತಿ । ಕಲೌ ಸಂಕೀರ್ತ್ಯ ಕೇಶವಂ ॥

ಅಧ್ಯಾಯ ಏಳು

# ಹರಿದಾಸರ ಸಾಹಿತ್ಯ ರಚನೆಗಳ ಮೌಲ್ಯ

# ಹರಿದಾಸರ ರಚನೆಗಳ ಸಾಹಿತ್ಯ ಮೌಲ್ಯ

ಕನ್ನಡ ಸಾಹಿತ್ಯದಲ್ಲಿ ಹೊಸ ಅಲೆಯೆಬ್ಬಿಸಿದ ವಚನ-ಹರಿದಾಸ ಸಾಹಿತ್ಯಗಳಲ್ಲಿ ಸಾಹಿತ್ಯಿಕ ಮೌಲ್ಯ ಉಂಟೆ, ಬರಿಯ ಭಕ್ತಿ, ನೀತಿಬೋಧೆಗಳಲ್ಲವೆ ಎಂಬುದೆ ಕೆಲವರ ಅಭಿಮತ. ಹನ್ನೆರಡನೆ ಶತಮಾನದ ತನಕ ಇದ್ದ ಮಾರ್ಗಸಾಹಿತ್ಯವನ್ನು ಕನ್ನಡದೇಸಿ-ಹೊಸಗನ್ನಡದೆಡೆಗೆ ಹೊರಳಿಸಿದ ಈ ಎರಡು ಭಕ್ತಿ ಆಂದೋಲನಗಳವರು ಆಡಿದ್ದು, ಹಾಡಿದ್ದು ಸಾಹಿತ್ಯವೆಂದೆನಿಸಿಕೊಳ್ಳಲು ಕಾರಣ, ಅನೇಕ .ಎರಡೂ ಭಕ್ತಿ ಹಾಗೂ, ಜನತೆಯಲ್ಲಿ ತಂತಮ್ಮ ಮಂತ ಧರ್ಮ ಪ್ರಚಾರಕ್ಕಾಗಿ ಹುಟ್ಟಿಕೊಂಡವು. ಒಂದು ಮಾತಾಡಿದ ಹಾಗಿದ್ದರೆ, ಇನ್ನೊಂದರಲ್ಲಿಂದ, ಆ ಮಾತಿಗೆ ಗೇಯತೆಯೂ ಬೆರೆತು ಸಂಗೀತದ ಮೂಲಕ ಜನಪ್ರಿಯ ಸಾಹಿತ್ಯವಾಗಿಸಿದ್ದು ಮಾತ್ರ ಅಲ್ಲದೆ ಸಂಗೀತಕ್ಕೂ ಕೊಡುಗೆಯಾಯಿತು. ವಚನದಲ್ಲಿ ಶಿವಭಕ್ತಿ, ದಾಸರಲ್ಲಿ ಹರಿಭಕ್ತಿ, ಕಾಯಕದಲ್ಲಿ ಎಲ್ಲ ಒಂದೇ ಎಂಬ ಧ್ಯೇಯ ಇದು ಸಾಹಿತ್ಯವೆನಿಸಿಯಾತೆ ? ಇಬ್ಬರೂ, ಭಕ್ತರು, ಅನುಭಾವಿಗಳಾದ್ದರಿಂದ ಈ ಅಭಿಪ್ರಾಯ ತಲೆದೋರಿರುವುದು. ಹರಿದಾಸರೂ ಇತರರಂತೆ ಮೊದಮೊದಲಲ್ಲಿ ಆಸೆಯ ದಾಸರಾಗಿ ಬದುಕಿದ್ದವರೆ. ಆದರೆ ಯಾವುದೊ ಕಾರಣ, ಯಾವುದೊ ಘಳಿಗೆಯಲ್ಲಿ ಬದುಕಿನಲ್ಲಿ ಒದಗಿದ ಆಕಸ್ಮಿಕವೊ (ಶ್ರೀಪುರಂದರದಾಸರಲ್ಲಿ ನಡೆದ ಮೂಗುತಿ ಘಟನೆ), ಆಘಾತವೊ (ಕನಕದಾಸರಲ್ಲಿ ಅನುಭವಿಸಿದ ಯುದ್ಧ-ನೋವು) ಒಟ್ಟಾರೆ, ಇದರಿಂದ ಮಿಂಚಿಗೊಳಗಾದಂತೆ ಎಚ್ಚೆತ್ತುಕೊಂಡು, ತಮ್ಮನ್ನು ತಾವೇ ಪ್ರಶ್ನಿಸಿಕೊಂಡು ಅದು ವರೆಗೆ ಕವಿದಿದ್ದ ಸಂಕೋಲೆ ಬಿಡಿಸಿಕೊಂಡು, ಸಂಸಾರದ ಜಟಿಲತೆ ನಿವಾರಿಸಲು ಪ್ರಯತ್ನಿಸುತ್ತ "ದಾರಿ ಯಾವುದಯ್ಯ ವೈಕುಂಠಕೆ"ಎಂದು ಅರಸುತ ಹೊರಟ ಭಕ್ತರು, ಕಾಣದುದನ್ನು ಕಂಡನುಭವಿಸಿದ, ಅಪರೋಕ್ಷಜ್ಞಾನಿಗಳು ಹರಿದಾಸರು. ಎಚ್ಚರ, ಎಚ್ಚರದ ಜತೆ ಬೆರೆತುಕೊಂಬ ಹಂಬಲವೆ ಅನುಭಾವ. ಇದೇ ಸಾಧನೆಯ ಮಾರ್ಗದ ಕೈಮರ. ಹರಿದಾಸಸಾಹಿತ್ಯ ಹರಿದಾಸದೀಕ್ಷೆ-ವೃತ್ತಿ ಸ್ವೀಕರಿಸಿದವರ ಹಾಗೂ ಅವರ ವಿಚಾರಾನುಭವಗಳಿಂದ ನಿರ್ಮಿತಿ ಆದದ್ದು. ಜನಪದ ಸಾಹಿತ್ಯದಂತೆ ಮುಖೇನ ಪರಂಪರಾನುಗತ ಆಗಿ ಬೆಳೆದದ್ದು. ಇಲ್ಲಿ ಸಾಹಿತಿಯ ಮನೋಧರ್ಮವೂ ಇದೆ. ಹಂಬಲವೂ ಇದೆ. ಕಾವ್ಯವನ್ನು ರಚಿಸುವ ಕವಿಹೃದಯ, ಕೃಷ್ಣರಾಧೆಯರ ಭಕ್ತಿ ವಿರಹ ಚಿತ್ರಿಸುವ ಭಾವುಕತೆ-ಮಧುರಭಾವವೂ ಇದೆ. ಲೋಕಾನುಭವವಂತೂ ಮಡುಗಟ್ಟಿ ನಿಂತಿದೆ. (ಈ ದೃಷ್ಟಿಗಳಲ್ಲಿ ಕನಕದಾಸರ ಕೃತಿ ಅಧ್ಯಯನ ಸಂಪೂರ್ಣ ಸಫಲಗೊಳ್ಳುತ್ತದೆಂದೆನ್ನಿಸುತ್ತದೆ). ಈ ರೀತಿಯ ಕಾವ್ಯ-ಕೀರ್ತನೆ, ಕೀರ್ತನೆಯ

ಪ್ರಕಾರಗಳಿಂದ ಶ್ರೀಮಂತ ಆದದ್ದು ಹರಿದಾಸಸಾಹಿತ್ಯ-ಸಾಹಿತ್ಯಿಕ ಮೌಲ್ಯಗಳನ್ನೊಳಗೊಂಡಿದುದಾಗಿದೆ.

### ಹರಿದಾಸರ ಸ್ವತಂತ್ರ ಪ್ರವೃತ್ತಿ

ಹರಿದಾಸರ ಇನ್ನೊಂದು ಗಮನಾರ್ಹ ಅಂಶವೆಂದರೆ, ಅವರೇನೂ ಸಾಹಿತ್ಯ ಸೃಜನೆಯನ್ನು ಬದುಕಿನ ಉಪ ವೃತ್ತಿಯಾಗಿಯೊ, ಧ್ಯೇಯ ಆಗಿಯೊ ಇರಿಸಿಕೊಂಡವರಲ್ಲ. (ಅವರಿಗೆ ಆ ವಿಚಾರದಲ್ಲಿ ವೈಯುಕ್ತಿಕ ಆಶಯ, ಆಸಕ್ತಿ, ರಾಜಾಶ್ರಯದ ಬಯಕೆ, ಕಂಕಣ-ಅಗ್ರಹಾರಗಳ ಬಹುಮಾನ ಪಡೆಯುವ ಮಾನಸಿಕ ಒತ್ತಡವಿರಲಿಲ್ಲ.) ಅವರಿಗೆ ಈ ಇಹದ ಬದುಕಿನಾಚೆಯ ಅಲೌಕಿಕ ಆಧ್ಯಾತ್ಮದ ಪರಿಧಿಯಲ್ಲಿದ್ದು, ಅದರಾಚೆ ಸಾಕ್ಷಾತ್ಕಾರದನುಭವ ಪಡೆವ ಹಂಬಲ ಹಿರಿದಾಗಿತ್ತು : ಇಹದ ನಿಡಿದಾದ ಬದುಕನ್ನು ಈಸಬೇಕು, ಇದ್ದು ಜೈಸಬೇಕೆಂಬ ಪ್ರವೃತ್ತಿಯಿತ್ತು. ಲೋಕಾನುಭವ, ಕ್ಷೇತ್ರ ಪರ್ಯಟನಗಳ ಅನುಭವವೂ ಇತ್ತು. ಎಲ್ಲರೂ ಮಾಡುವುದು ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ ಎಂಬ ವ್ಯಾವಹಾರಿಕ ಮನೋಧರ್ಮ ಮನಗಂಡಿದ್ದರು. ಅದರಿಂದಾಗಿ, ಅವರು ನುಡಿದ ಆ ಆಧ್ಯಾತ್ಮಿಕ ಸಾಹಿತ್ಯ, ಸಮಾಜದ ಬಗ್ಗೆ ನುಡಿದ ಮಾತು-ಅಭಿಪ್ರಾಯ, ಭಾಗವತ ಧರ್ಮದ ಅನುಸರಣ-ಪ್ರಸಾರ, ಇವುಗಳೆಲ್ಲದರ ಸಾಹಿತ್ಯಿಕ ಅಭಿವ್ಯಕ್ತಿಗಳನ್ನು, ರಚನೆಗಳನ್ನು ನಾವು ಸಾಹಿತ್ಯವೆಂದರೆ, ಅವರ ಪಾಲಿಗೆ ಅದು ಸಾಧನೆಯ ಒಂದು ಹಂತ, ಎಂದು ಕಾಣಬೇಕಾಗುತ್ತದೆ.

ಹರಿದಾಸರ ಸಾಹಿತ್ಯ ಕೃತಿಗಳಲ್ಲಿ ಅಷ್ಟಾದಶವರ್ಣನೆಗೆ ಪ್ರಾಧಾನ್ಯವಿದೆಯೆ, ಪ್ರೌಢಿಮೆ, ರಂಜನೆಯ ವಿಚಾರ ಇದೆಯೆ (ಕನಕದಾಸರ ಮೋಹನತರಂಗಿಣಿಯಲ್ಲಿದು) ಇತಿಹಾಸ ಇದೆಯೆ ? ಇಲ್ಲಿ ಬರೀ ಭಕ್ತಿ, ತೀರ್ಥಕ್ಷೇತ್ರ ಪರ್ಯಟನಾನುಭವ, ಆಧ್ಯಾತ್ಮ ಪರಿಪಾಕ ಮಾತ್ರ ಮಡುಗಟ್ಟಿದೆಯೆಂದಾಗ, ಅದನ್ನೇಕೆ ದಾಸಸಾಹಿತ್ಯ ಎಂದು ಕರೆವುದೆಂಬ ಸಂದೇಹವೂ ಕೆಲವರಿಗೆ ಬಂದಾತು. ದಾಸಸಾಹಿತ್ಯವನ್ನುಲು ಕಾರಣ, ಹರಿದಾಸರ ಕೃತಿಗಳಲ್ಲಿರುವ ಸಾಹಿತ್ಯ ಗುಣ, ಸಾಹಿತಿಯ ಮನೋಧರ್ಮ. ಸಾಹಿತ್ಯಾಭಿವ್ಯಕ್ತಿಯ ಸ್ವಂತಿಕೆ, ತಾವೇ ಕಂಡುಕೊಂಡು ಹಾಡಿ ಕೊಟ್ಟ ಹೊಸ ಹಾದಿ. (ಕೀರ್ತನ ಸಂಪದ, ಸುಳಾದಿ, ಉಗಾಭೋಗ ಇತ್ಯಾದಿ) ಅದರಿಂದಾಗಿ ಅವರು ಬರೆದದ್ದು ಸಾಹಿತ್ಯ, ಹಾಡಿದ್ದು ರಚಿಸಿದ್ದು ಸಾಹಿತ್ಯವೆ. ಇಲ್ಲಿ ಕಾವ್ಯ ಸೌಂದರ್ಯ, ಕಾವ್ಯ ತತ್ವಗಳೂ (ಛಂದಸ್ಸು, ಅಲಂಕಾರ, ಇತ್ಯಾದಿ) ಮೇಳವಿಸಿವೆ.

ಭಕ್ತರ ಸಂಪರ್ಕಸಾಧನ ಜಾಸ. ಹಾಗೂ ಅದರಲ್ಲಿ ರಚಿತವಾದ ಭಕ್ತಿ ಸಾಹಿತ್ಯ, ವಿವಿಧ ಹೂವುಗಳು ಇದ್ದಹಾಗೆ. ಆಯಾ ಹೂವಿಗೆ ಆಯಾ ರಮಣೀಯತೆಯಿರುವಂತೆ ಯಿರುವಂತೆ ಆಯಾ ಹರಿದಾಸರ ಕೃತಿಗಳಿಗೆ ಅದರದ್ದೆ ಸ್ವಂತ ಅಭಿವ್ಯಕ್ತಿ ಸೌಂದರ್ಯ, ಗಾಂಭೀರ್ಯ ಇರುತ್ತದೆ. ಉದಾ : ಪುರಂದರದಾಸರ ಸರಳತೆ, ಕೃಷ್ಣಲೀಲಾ ವಿನೋದ, ವ್ಯಾಸರಾಯರ ವೇಣುಗೀತ, ಶ್ರೀಪಾದರಾಜರ ಭ್ರಮರಗೀತ, ಕನಕದಾಸರ ಮುಂಡಿಗೆ,

ಕೀರ್ತನ ವೈಖರಿ, ಭಾಷೆ-ಘಟನೆಗಳ ಚಮತ್ಕೃತಿ(ಯಾರಂ ಬದುಕಿದರಯ್ಯ ಹರಿ ನಿನ್ನನಂಬಿ-ಕೃತಿ ಸಾಲುಗಳು... ಮೋಹನ ತರಂಗಿಣಿಯ ಹಾಡುಗಬ್ಬದ ಛಂದ) ಜಗನ್ನಾಥದಾಸರ ಪಾಂಡಿತ್ಯ, ವಿಜಯದಾಸರ ಪದ್ಯನಿಷ್ಠೆ ಹೀಗೆ ಇದೆ. ಇದರಿಂದ ಹರಿದಾಸ ಸಾಹಿತ್ಯದ ಸಾಹಿತ್ಯಿಕ ಮೌಲ್ಯಗಳನ್ನು ತಿಳಿಯಬಹುದು. ದೈವದೊಲವಿಂ, 'ದಿವ'ದರುಶನಕ್ಕಾಗಿ, ಸತ್ಯದ ಅನಂತ ಮುಖದ ಅನ್ವೇಷಣೆಯ ಸಾಧಕ ಪಥದಲ್ಲಿ ಅವರು ಹೃದಯದ ಒಳ ತೋಟಿಯನ್ನು ತೋಡಿಕೊಂಡರು, ಹಾಗೆಯೇ ಭಾಷೆಯ ಮೂಲಕ ಅಭಿವ್ಯಕ್ತಗೊಳಿಸಿದರು. ಇಂಥ ಭಕ್ತರ ವಾಣಿಯಲ್ಲಿ ಸಾಹಿತ್ಯ ತತ್ವ ಸ್ಪಷ್ಟ ಕಂಡಾಗ ಜನಸಮುದಾಯ (ಸಮಾಜ) ಅವರನ್ನೂ ಅವರ ಭಕ್ತಿ ಸಾಹಿತ್ಯ ಕೃತಿಗಳನ್ನೂ ಗೌರವಿಸಿತು, ಈಗಲೂ ಅದು ಮುಂದರಿದಿದೆ. ಬದುಕನ್ನು ಅರಳಿಸುವ, ಸತ್ಪಥದಲ್ಲಿ ನಡೆಯಿಸುವ, ನೀತಿಯನ್ನು ವಿಂಡಿಸುವ, ಇಹದ ಬದುಕಿನ ಶ್ರೇಷ್ಠತೆ-ಅಂತೆಯೆ ಅಸ್ಥಿರತೆ-ಭಂಗುರತೆಗಳನ್ನು ತಿಳಿಯ ಹೇಳುವ, ಜನತೆಯನ್ನೆಚ್ಚರಿಸುವ, ಒಮ್ಮೆ ಕೇಳಿದರೆ ಮತ್ತೆ ಓದಿ, ಕೇಳಬೇಕೆನ್ನಿಸುವ ಬಂಧುರ ರಚನೆ, ಸಾಹಿತ್ಯದ ಲಕ್ಷಣಗಳೆಂದು ತಿಳಿದವರು ಅನೇಕ ರೀತಿ ನಿರೂಪಿಸಿದಾರೆ. ಈ ಅನೇಕ ನಿಟ್ಟಿನಿಂದ, ದೃಷ್ಟಿಗಳಿಂದ ಹರಿದಾಸ ಸಾಹಿತ್ಯ ಕೃತಿಗಳಲ್ಲಿರುವ ಸಾಹಿತ್ಯಿಕ ಮೌಲ್ಯಗಳನ್ನು ಗುರುತಿಸುವುದು ಈ ಅಧ್ಯಾಯದ ಉದ್ದೇಶ. ಶಂಷ್ಕ ನೀತಿಬೋಧೆ, ಬದುಕು-ಸಂಸಾರ, ಸೀರ ಮೇಲಣ ಗುಳ್ಳೆಯೆನ್ನುವ ನಿರಾಸೆಹುಟ್ಟಿಸುತ್ತದೆಂದು ಹರಿದಾಸರ ಕೃತಿಗಳನ್ನು ಅಲ್ಲಗಳೆಯಬೇಕಾದಿಲ್ಲ. ಸಾಹಿತ್ಯ ಎನ್ನುವುದಕ್ಕೆ ಸರ್ವಹಿತ, ಎಂದು ಹೇಳುವುದಿದೆ. ಶ್ರುತಿ ಸಂಭಗವಾಗಿದ್ದು, ಮನಸ್ಸು-ಹೃದಯಕ್ಕೆ ಆನಂದ ತರುವಂಥದು ಸಾಹಿತ್ಯ. ಹಾಗೆಯೆ ಶಬ್ದ-ಅರ್ಥ, ಭಾವಾಸೌಂದರ್ಯದಿಂದೊಡಗೂಡಿ ಶ್ರವಣ, ಮನಕ್ಕೆ ಆನಂದವೀಯುವಂತಹ ವಾಕ್ಯ ಸಮುದಾಯ ಸಾಹಿತ್ಯವೆಂದೆನಿಸಿಕೊಳ್ಳುತ್ತದೆ. ಇಂಥ ಸಾಹಿತ್ಯ ಓದಿದಂತೆಲ್ಲ, ಹಾಡಿದಂತೆಲ್ಲ, ಸಾಹಿತ್ಯ ಕೃತಿ ಅರಳಿಕೊಳ್ಳುವುದರ ಜತೆಗೆ ಸುಪ್ತ ಚೇತನವನ್ನೂ ಅರಳಿಸುತ್ತದೆ. ಮನಸ್ಸಿಗೆ ಹಿತ ಉಂಟುಮಾಡುತ್ತದೆ. ಈ ದಿಸೆಯಲ್ಲಿ ಸಾಹಿತ್ಯ, ಬದುಕಿನ ಉಸಿರಾಗಿ, ಅವಿಭಾಜ್ಯ ಅಂಶ ಆಗುತ್ತದೆ. ಜನತೆಯ ಸಂಸ್ಕೃತಿಯನ್ನು ಪೋಷಿಸುತ್ತದೆ, ಬೆಳೆಸುತ್ತದೆ. ಕಾರ್ಲೈಲ್ (Carlyle) ಎಂಬ ಪ್ರಸಿದ್ಧ ಇಂಗ್ಲಿಷ್ ಸಾಹಿತಿ, ಹೇಳುವಂತೆ "ಹೃದಯಕ್ಕೆ ಆಹ್ಲಾದವೀಯುವ ಸಾಹಿತ್ಯದ ಸಲ್ಲಕ್ಷಣ ಜನಾಂಗದ ಆತ್ಮವಿಕಾಸ, ಸಾಹಿತ್ಯದಲ್ಲಿ ಕಾಣುತ್ತದೆ." ಸಾಹಿತ್ಯ ಬದುಕಿನ ವ್ಯಾಖ್ಯಾನ ಮೆಂದೂ ವಿದ್ವಾಂಸ ಮತ. (ಈ ದಿಸೆಯಲ್ಲಿ ಸಾಹಿತ್ಯ ಜನಜೀವನದ ಪ್ರತಿಬಿಂಬ ಎಂಬ ಮಾತು ಗಮನಾರ್ಹ.) ಇದನ್ನೆ ನಮ್ಮ ಕಾವ್ಯಮೀಮಾಂಸಕರು ರಮಣೀಯಂಕ, ರಸಾತ್ಮಕ ಎಂದರು.

ಭಾರತದ ಭಾಷೆಗಳಲ್ಲೆಲ್ಲ ಸಾಹಿತ್ಯಕ್ಕೂ-ತತ್ವಶಾಸ್ತ್ರಕ್ಕೂ ಅವಿನಾನಂಟು. ತತ್ವ ಆನುಷಂಗಿಕವಾಗಿರಲಿ, ಮುಖ್ಯವಾಗಿರಲಿ, ಒಟ್ಟಾರೆ ಸಾಹಿತ್ಯದಲ್ಲಿ ಅದರ ಅಂಶವಿದ್ದೆ ಇರಬೇಕು. ಇದು ಸಾಮಾನ್ಯನಿಗೆ ಅರಗಿಸಿಕೊಳ್ಳಲು ಕಷ್ಟವೆ. ಬದುಕಲ್ಲರಳಿದ ಜನಪದ ಸಾಹಿತ್ಯದಲ್ಲಿ ತತ್ವವಿದ್ದರೂ, ಅದು ಬದುಕಿನ ಸತ್ಯಕ್ಕೆ ಸನಿಹದ ಉದಾಹರಣೆಗಳ ಸಹಿತ

ವಿರುವುದರಿಂದ ರೈತನಿಗೂ ತಿಳಿಯುತ್ತದೆ. ಪಂಡಿತ-ವಂತಾಚಾರ್ಯರ ತತ್ತ್ವ ಹೀಗಲ್ಲ, ಕಾವ್ಯದಲ್ಲಿ ತತ್ತ್ವ ಹಾಳತವಾಗಿ ಬೆರತಿದ್ದರೆ, ತನ್ನ ಉದ್ದೇಶವನ್ನು ಅದು ಸುಲಭವಾಗಿ ನೆರವೇರಿಸಿಕೊಂಡಂತೆ. ಮಾತು-ಮಾತಿನರ್ಥ ಶಿವಶಿವೆಯರ ದಾಂಪತ್ಯವಿದ್ದಂತೆ ಇರಬೇಕೆಂಟ ಕವಿಕುಲಗುರು ಕಾಳಿದಾಸನ ಮಾತಲ್ಲಿ ಅಡಕ ಆಗುವ ಅರ್ಥ ಇದೇಯೆ. ಅಲ್ಲಿನ ಅನ್ಯೋನ್ಯತೆ (ಶಬ್ದಾರ್ಥದ) ಕೇಳಂಗ-ಓದುಗನಿಗೆ ಸಹಾಯಕವಾಗುತ್ತದೆ. ಇದನ್ನೆ ವಚನಕಾರರು 'ಮಾತಾ ಜ್ಯೋತಿರ್ಲಿಂಗ'ವೆಂದರು. ಶ್ರೇಷ್ಠ ಸಾಹಿತ್ಯದ ಧ್ಯೇಯ, ಲಕ್ಷಣ, ಮನಸ್ಸನ್ನು ಪರಿಪಕ್ವಗೊಳಿಸಿ ಆತ್ಮನನ್ನು ದೃಢಪಡಿಸುವ ಉದಾತ್ತದರ್ಶನವನ್ನೂ ತನ್ನಲ್ಲಿ ಒಳಗೊಂಡಿರುವುದು. ಇದು ವಚನ-ಹರಿದಾಸ ಸಾಹಿತ್ಯಗಳೆರಡಕ್ಕೂ ಹಾಗೂ ಇಡಿಯ ಭಕ್ತಿಸಾಹಿತ್ಯಕ್ಕೇ ಅನ್ವಯಿಸುವ ಮಾತು. ಹರಿದಾಸಸಾಹಿತ್ಯದಲ್ಲಿ ಭಕ್ತಿಜೀವಾಳ. ಅದೇ ಉಸಿರು. ತತ್ವವೆ ಶರೀರ-ದಾಸರು ತಮ್ಮ ತಮ್ಮ ಪರಿಸರದ ಭಾವನೆಯನ್ನು ಒಳಸಿಕೊಂಡ ಸಾಮರ್ಥ್ಯ, ನಿರೂಪಿಸುವ ಕಲಾತ್ಮಕತೆ, ಇವು ಅವರವರ ಪ್ರತಿಭೆಗಳನ್ನು ಪ್ರತಿಬಿಂಬಿಸುತ್ತವೆ. ಪ್ರತಿಭೆ ದೃಷ್ಟಿಯೂ ಹೌದು. ಸೃಷ್ಟಿಯೂ ಹೌದು, ಇದು ಹರಿದಾಸರ ಕೃತಿಗಳಲ್ಲಿ ಕಾಣಬರುವ ಅಂಶ. ಕಾವ್ಯಮೀಮಾಂಸಕಾರರು ಹೇಳುವಂತೆ, ಸೂರ್ಯನ ಕಿರಣಗಳಿಂದ ಪ್ರತಿಫಲಿತ ಚಂದ್ರನು ತಂಪಾದ ಬೆಳುದಿಂಗಳನ್ನೀಯುವಂತೆ, ಕವಿಯು ಸೂಕ್ತಿಗಳಲ್ಲಿ ತರ್ಕ ಕರ್ಕಶವಾದ (ಶುಷ್ಕತತ್ತ್ವ) ವಸ್ತುಗಳೂ ಅನ್ಯಾದೃಶವಾದ ಕಾಂತಿಯನ್ನು ತಳೆಯುತ್ತವೆ : ಎಂಬಲ್ಲಿ ಕವಿಯ ಪ್ರತಿಭೆಗೆ ಅನುಸಾರಿಯಾಗಿ ಕಠಿಣವಾದ ಶಾಸ್ತ್ರವೂ ರಂಜಕವಾದ ಕಾವ್ಯವೆನಿಸುವುದೆಂದು ತಿಳಿಯಬಹುದು. ಪ್ರಜ್ಞಾಜನ್ಯ ಅದದ್ದು ಶಾಸ್ತ್ರ, ಪ್ರತಿಭಾಜನ್ಯ ಆದದ್ದು ಕಾವ್ಯ. ಬುದ್ಧಿ-ತರ್ಕಕ್ಕೆ ಶಾಸ್ತ್ರ ಆಹಾರವಾದರೆ, ಕಾವ್ಯ, ಹೃದಯಕ್ಕಾಹಾರವಾಗಿ ಆನಂದ, ಸಂತೃಪ್ತಿಗಳನ್ನು ನೀಡುತ್ತದೆ. ಅಂದರೆ, ಸಾಮಾನ್ಯ ದೃಷ್ಟಿಯಲ್ಲಿ ಸಾಹಿತ್ಯದ ಧ್ಯೇಯ-ಆನಂದ ನೀಡುವಿಕೆ, ಮನಸ್ಸಿಗೆ ಶಾಂತಿ, ನೆಮ್ಮದಿಯುಂಟು ಮಾಡುವಿಕೆ ಎಂದಾಯಿತು. ಹಾಗೇ ಬದುಕನ್ನು ವೈಯಕ್ತಿಕ-ಸಾಮುದಾಯಿಕ ರೀತಿಯಲ್ಲಿ ತಿದ್ದುವುದೆ ಸಾಹಿತ್ಯದ ಧ್ಯೇಯ. ಹತ್ತನೆ ಶತಮಾನದ ಪಂಪ ಕವಿ ತಿಳಿಸುವ ''ಧರ್ಮಮುಂ, ಕಾವ್ಯಧರ್ಮಮುಂ'' ಸಾಹಿತ್ಯದಲ್ಲಿ ಹಾಸುಹೊಕ್ಕಾಗಿ ಬೆಳೆದು ಬಂದಿತು. ಇದೇ ಹೊಸ ರೀತಿಯಲ್ಲಿ ಮಾರ್ಗದ ಪ್ರೌಢಿಮೆ ತೊರೆದು, ಸರಳಗನ್ನಡ ರೂಪಗಳಲ್ಲಿ ವಚನ ಕೀರ್ತನ ಪ್ರಕಾರಗಳಲ್ಲಿ ಶಿವಶರಣರ-ಹರಿದಾಸರ ಮೂಲಕ ಇನ್ನೂ ದ್ರುತಗತಿಯಲ್ಲಿ ಮುಂದರಿಯಿತು. ಹರಿದಾಸಸಾಹಿತ್ಯದ-ಅದರ ಸೃಜಕರ-ಮುಖ್ಯಧ್ಯೇಯವೆ ಹರಿಭಕ್ತಿ ಪ್ರತಿಪಾದನೆ, ಹರಿಸರ್ವೋತ್ತಮತ್ವ ಸಮರ್ಥನೆ. ಆದುದರಿಂದ ಅದು ತತ್ತ್ವ ಗರ್ಭಿತ ಆಗಿ, ಭಕ್ತಿಪ್ರಸಾರದಲ್ಲಿ ತೊಡಗಿದೆ ಮುಂದೆ ಮೂಗುಮುರಿಯಬೇಕಾದ್ದಿಲ್ಲವೆನಿಸುತ್ತದೆ. ಹರಿದಾಸರ ಇನ್ನೊಂದು ಗುರಿ, ವೈಷ್ಣವಧರ್ಮ, ಮಧ್ವನಿಷ್ಠೆ ಜನತೆಯಲ್ಲಿ ಬಿತ್ತರಿಸುವಿಕೆ. ಅದ್ದರಿಂದ ಕವಿಯೊಬ್ಬನಿಗೆ ಇರುವ ವಸ್ತು ಸ್ವಾತಂತ್ರ್ಯ ಹರಿದಾಸರಿಗಿರಲಿಲ್ಲ, ಆದರೂ ಕನಕದಾಸರಂಥ ಸಮನ್ವಯಕಾರರಲ್ಲಿ ವಾದಿರಾಜರಂಥ ಸಮಾಜ ಸಂಧಾರಕ ಪ್ರವೃತ್ತಿಯವರಲ್ಲಿ, ಅನೇಕ ವಿಚಾರ

ಅಲ್ಲಲ್ಲಿ ಅವರ ಪ್ರತಿಭೆಯ ಮೂಲಕ ಮಿಂಚಿ, ಅವರ ಕಾವ್ಯ, ಲೋಕಾನುಭವ-ಬದುಕನ್ನು ನೋಡುವ ದೃಷ್ಟಿ ಇವೆಲ್ಲವನ್ನೂ ಅಭಿವ್ಯಕ್ತಗೊಳಿಸುತ್ತವೆ. ಕನಕದಾಸರ ವರ್ಣಕ ಕಾವ್ಯ (ಮೋಹನ ತರಂಗಿಣಿ), ಮುಂಡಿಗೆ (ಬೆಡಗಿನ ವಚನ)ಗಳಂತೂ ವಿಶಿಷ್ಟ ರಚನೆಯೆ ಆಗಿವೆ. ಅಲ್ಲಿಯ ಉಪಮೆ, ಕಾವ್ಯ ಸೌಂದರ್ಯ, ಶೈಲಿ, ಭಾವನೆ, ಭಾವುಕತೆ (ವಾದಿರಾಜರ ಅನೇಕ ಕೃತಿಗಳಲ್ಲಿ) ವಿಶಿಷ್ಟ ರೀತಿಯವೆ ಆಗಿವೆ. "ಶರಣರ ವಚನಗಳಂ" ಮಾತನ್ನೂ ಆಡಿದ ಹಾಗಿದ್ದರೆ, ದಾಸರ ಪದಗಳು ಮಾತನ್ನು ಹಾಡಿದ ಹಾಗಿದೆ. ಈ ಮಾತುಗಳಲ್ಲಿ ಚಿತ್ರಶಕ್ತಿಯಿದೆ ; ಜೀವಂತವಾದ, ಪ್ರಾಮಾಣಿಕವಾದ ಅನುಭವವಿದೆ. ಹರಿದಾಸರ ರಚನೆಗಳನ್ನು ಒಟ್ಟಾಗಿ 'ದಾಸಸಾಹಿತ್ಯ' ಎನ್ನಲು ಇರುವ ಬೇರೊಂದು ಕಾರಣ ದಾಸರಲ್ಲಿರುವ ಸಾಹಿತಿಯ ಮನೋಧರ್ಮ. ಆದರಿಂದ ಅವರು ಬರೆದದ್ದು ಸಾಹಿತ್ಯವೆ ಆಗಿದೆ.

ಸಾಹಿತಿಯ ಮನೋಧರ್ಮ ಎಂದರೆ ಕಾಣತಕ್ಕದ್ದು, ಕಾಣಿಸತಕ್ಕದ್ದು, ಕಾಣತಕ್ಕದ್ದು ಲೋಕವನ್ನು ತನ್ನನ್ನು : ಅದರ ಸತ್ವವನ್ನು, ಸತ್ಯವನ್ನು, ಸೌಂದರ್ಯವನ್ನು ಇನ್ನೇನೇನು ಸಾಧ್ಯವೊ ಆ ಎಲ್ಲವನ್ನೂ ಕಂಡದ್ದನ್ನು ಕಾಣಿಸತಕ್ಕದ್ದು ಮುಂದಿನ ಕೆಲಸ. ಎನ್ನುವ ಮಾತು ಚಿಂತನಶೀಲರಾದ ಹರಿದಾಸರಿಗೆ ಅನ್ವಯಿಸುತ್ತದೆ. ಸಾಹಿತಿ ಕಂಡ ಘಟನೆಯನ್ನೊ, ಬದುಕನ್ನೊ, ಅನುಭವವನ್ನೊ, ಸೌಂದರ್ಯವನ್ನೊ ಒಟ್ಟಾರೆ ಅದನ್ನು ಕಂಡರಿಸುವಂಥ ಕಲೆ ಅವನಲ್ಲಿರಬೇಕು. ಅದಕ್ಕೆ ಮಾತು, ರೀತಿ ಅಗತ್ಯ. ಮನಮುಟ್ಟುವ (ಶ್ರವಣ ಮನನಾನಂದವೀವ) ಹೃದಯದ ಬಾಗಿಲು ತಟ್ಟುವ ರೀತಿಯಲ್ಲಿ ಜೀವಂತವಾಗಿ ಅನುಭವದ (ವೈಯಕ್ತಿಕ, ಸಾಮುದಾಯಿಕ) ಬಹುಮುಖಗಳನ್ನು ಚಿತ್ರಿಸುವ ಪ್ರಕಟಪಡಿಸುವ ರಸಿಕತೆ ಆತನಿಗಿರಬೇಕು. ಪುರಂದರದಾಸರು, ಕನಕದಾಸರಾದಿಯಾಗಿ ಬಂದ ಅನೇಕ ಹರಿದಾಸರು ಈ ಮನೋಧರ್ಮವುಳ್ಳವರು. ಶ್ರೀಪಾದ ರಾಜರ, ವ್ಯಾಸರಾಯರ, ವಾದಿರಾಜರ, ವಾಗ್‌ವಿಲಾಸ ಲೋಕದ ಅನೇಕ ತಿಳಿಗನ್ನಡ ರಚನೆಗಳಲ್ಲಿ ಚೆಲುವಿದೆ, ಚೆಲುವನ್ನು ಗ್ರಹಿಸಿ ಹಾಗೇ ಕಂಡರಿಸುವ ಕೌಶಲವೂ ಇದೆ. ಹರಿದಾಸರಲ್ಲಿ ಲೋಕಾನುಭವ, ಹೃದಯವಂತಿಕೆ ಉನ್ನತ ಮಟ್ಟದ ರಸಿಕತೆ ಇರುವಂತೆಯೆ, ಅವರ ವಾಗ್ರೂಪದ ಅಭಿವ್ಯಕ್ತಿಯಲ್ಲಿ ಸಾಹಿತಿಯ ಮನೋಧರ್ಮ ಸಹ ಕಾಣಬರುತ್ತದೆ. ಹರಿದಾಸರು ತಮ್ಮ ಮತ್ತು ಭಗವಂತನ ನಡುವೆ ಇರಿಸಿಕೊಂಡ ನಂಟು, ಸಂಬಂಧ ಒಂದಾದರೆ, ಹಾಗೆಯೆ ತಮಗೂ ತಮ್ಮ ಸುತ್ತಣ ಸಮಾಜ-ಲೋಕಕ್ಕೂ ಸಂಪರ್ಕ ಸಂಬಂಧವಿರಿಸಿಕೊಂಡವರೆಂಬುದು ಅವರ ಕೃತಿಗಳಲ್ಲೆಲ್ಲ ತಿಳಿದು ಬರುತ್ತದೆ. ಭಗವಂತನ ಒಲುಮೆಯ ಹಲುಬುವಿಕೆ ಇದ್ದ ಹಾಗೆಯೆ, ತಮ್ಮ ಸುತ್ತಣ ಜಗತ್ತಿಗೆ ಹೇಳುವಂಥ ಮಾತೂ ಕೆಲವು ಕೀರ್ತನೆಗಳಲ್ಲಿವೆ. ಅವರ ಆ ಅನುಭಾವ (Mysticism) ದಲ್ಲಿ ಹಾಗೂ ತಮ್ಮ ಆತ್ಮನಿವೇದನೆಯನ್ನು ಮಾಡಿಕೊಂಡಿದಾರೆ, ಒಳಗಿನ ದನ್ನು, ತುಮುಲವನ್ನೂ ದ್ವಂದ್ವಾದ್ವಂದ್ವವನ್ನು ಹೇಳಿಕೊಂಡಿದಾರೆ. ಭಗವಂತನೆದುರು ಹೀಗೆ ಬಿಚ್ಚುಮನಸ್ಸಿನಿಂದ ತೋಡಿಕೊಂಡುದು ದೇವರಿಗಷ್ಟೆ ಅಲ್ಲ, ಲೋಗರಿಗೂ

ತಿಳಿಯುವಂತಾಗಿದೆ. ಇಹದ ಬದುಕಿನ ಅನೇಕ ಮುಖ-ಮಜಲುಗಳನ್ನು. ಸಂಕಟ ಆಸೆ-ನೋವನ್ನು ಸಹಜ ಅನುಕಂಪದಿಂದ ತಿಳಿಸಿದಾರೆ, ವಿಶ್ಲೇಷಣೆ ನಡೆಸಿದಾರೆ, ಕನಕದಾಸರಂತೆ ವಿಡಂಬನೆ ಮಾಡಿದಾರೆ, ಪುರಂದರರಂತೆ ಮರುಗಿದರೂ ಇನ್ನೂ ಹೀಗೆಯೇ ? ಎಂದು ಪ್ರಶ್ನಿಸಿದಾರೆ, ಇದೆಲ್ಲ ಹರಿದಾಸರ ಶೈಲಿ, ವಿಧಾನಗಳು.

ದಾಸಸಾಹಿತ್ಯ, ಅವರ ಅಂದಂದಿನ ಅನುಭವ ಮಿಡಿಸಿದ, ಪ್ರತಿಕ್ರಿಯಿಸಿದ ಸಾಹಿತ್ಯ. ಲಕ್ಷ್ಮೀದೇವಿಯ ಚೆಲುವು ಕಂಡ ಪುರಂದರರು ನಕ್ಕು ಹೇಳಿದರು :

ಮರುಳು ಮಾಡಿಕೊಂಡೆಯಲ್ಲೇ-ಮಾಯಾದೇವಿಯೆ ॥ ಪ ॥
ಇರುಳು ಹಗಲು ಏಕವಾಗಿ-ಹರಿಯು ನಿನ್ನ ಬಿಡದಿಪ್ಪಂತೆ ॥ ಅ.ಪ. ॥
ಮಕ್ಕಳು ಪಡೆದರೆ ನಿನ್ನ-ಚೊಕ್ಕತನವು ಪೋಪುದೆಂದು
ಪೊಕ್ಕುಳೊಳು ಮಕ್ಕಳ ಪಡೆದು-ಕಕ್ಕುಲಾತಿ ಪಡುವಂತೆ ॥

ಎಂಬಲ್ಲಿ ಪುರಂದರದಾಸರಿಗೆ ಜಗದ್ಧಾತ್ರಿಯಲ್ಲಿ ಇರುವ ಸಲುಗೆ ಕಂಡು ಅಚ್ಚರಿಯೂ ಆಗುತ್ತದೆ. "ಎಲ್ಲಾರು ಮಾಡುವುದು ಹೊಟ್ಟೆಗಾಗಿ" ದಾಸರ ಒಂದು ಚಿತ್ರಣ ಆದರೆ, ಮಡಿಮಾಡುವ ಒಗೆಯರಿಯದೆ ಗುಂಡುಮುಣುಗನ ಹಕ್ಕಿಯಂತೆ ಮುಳುಗೆದ್ದು ಮಂಡೆ ನೋವು ತಂದುಕೊಂಬ ಮಡಿಯೆಂದರೆ ಮೂರ್ವಾರು ಹಾರುವ ಬಿಕನಾಸಿಗಳನ್ನು ಕಂಡು, ಪ್ರಶ್ನಿಸಿ, ಮಡಿ ಬಗ್ಗೆ ವಿಶ್ಲೇಷಿಸಿದರು. ಉದಯಾಸ್ತಮಾನಗಳೆರಡು ಕೊಳಗ ಮಾಡಿ ಅಳೆಯುವ ವಿಧಾನ-ಕಲ್ಪನೆ ನವನವೀನ. ಹೊರಗಡೆ ಡಂಭಕ್ಕೆ, ಬೂಟಾಟಿಕೆಗೆ ಸ್ನಾನ, ಗಟ್ಟಿಯಾಗಿ ಕೂಗಿಕೊಳ್ಳುವಿಕೆ, ಮಂತ್ರ, ಜಪ, ಇವೆಲ್ಲ ದಾಸರು ಕಂಡರು, "ಉದರ ವೈರಾಗ್ಯವಿದು ನಮ್ಮ ಪದುಮನಾಭನಲಿ ಲೇಶ ಭಕುತಿಯಿಲ್ಲ" ವೆಂದರು, ಅಕ್ಕಿಯಿದ್ದೂ ಭಿಕ್ಷಕ್ಕೆ ರಾಗಿ ತಂದವರಿಗೆ ಹೇಳಿದಂತೆ, "ಬೋಳಿ ನಿನಗೆಷ್ಟು ಸೊಕ್ಕು" ಎಂದು ದಾಸರನ್ನು ಅಪನಿಂದಿಸಿದವಳಿಗೆ ಹೇಳಿದ್ದಲ್ಲದೆ ದಾಸರು ಭಿಕ್ಷಕ್ಕೆ ಹೋದಾಗ ಬಾಗಿಲನ್ನು ರಪ್ಪನೆ ಮುಚ್ಚಿದ ಹೆಣ್ಣಿಗೆ "ಕದವ ಮುಚ್ಚಿದಳಿದೆಕೊ ಗಯ್ಯಾಳಿ" ಎಂದು ಹಾಡಿದರು. ಈಗಲೂ ಅದೇ ಪ್ರವೃತ್ತಿ ಮುಂದುವರಿದಿರುವುದೂ ಉಂಟು. ಎಲ್ಲೊ ಜಾತ್ರೆ, ಸಿಡಿ, ಕೋಣನ ಕಡಿತ ಕಂಡ ಕನಕರು "ಏಕನಾತಿ, ಜಕ್ಕಿಣಿ ನೂರೆಂಟು ದೈವವೇಕೆ, ಬೇವಿನ ಸೊಪ್ಪಿನ ಹೊಡೆತವೇಕೆ, ಬೆನ್ನಿಗೆ ಕಟ್ಟುವುದೇಕೆಂದು" ಮರುಗಿ ಹೇಳಿದರು. 'ನಿಂದಕರಿರಬೇಕು, ನಿಂದಕರು' ಎಂದ ದಾಸರು, "ಹಂದಿಯಿದ್ದರೆ ಕೇರಿ ಹ್ಯಾಗೆ ಶುದ್ಧವೊ ಹಾಗೆ"-ಎಂದು ಆಡಿದಾಗ ಆ ನಿಂದಕರ ಮುಖವೇನಾಗಿದ್ದಿತು ? ಹರಿದಾಸರ ನಿಂದಿಸ ಬೇಡ ಪ್ರಾಣಿ-ಮನುಜ-ಕನಕದಾಸರ ಕಬ್ಬಲಿಗನೆಂದು ಕರೆಯ ಬೇಡಿರೊ, ಎಂದಂತೆಯೆ ಗೋಪೀಜನಪ್ರಿಯ ಗೋಪಾಲನಿಗಲ್ಲದೆ ಈ ಪರಿಯ ಸೊಬಗಾವ ದೇವರಲ್ಲೂ ಕಾಣೆನೆಂದು ಹಾಡಿ ಬಣ್ಣಿಸಿದರು. ತಂಬೂರಿ ಮೀಟಿದವ, ಭವಾಬ್ಧಿದಾಟಿದವನಂತೆಯೆ, ತಂಬೂರಿ ಮೀಟಿದ ಡಿಂಗರಿಗ ಪ್ರತಿಭೆಯಲ್ಲಿ ದೇವರ

ಬಗೆಬಗೆಯ ರೂಪ ಸ್ವರೂಪಗಳನ್ನು ಹಾಡಿದ್ದಲ್ಲದೆ, ತಾವು ಕಂಡಾನಂದಿಸಿದ ಅನುಭವ-ಅನುಭಾವಕ್ಕೂ ಹಾಡಿನ ಅಭಿವ್ಯಕ್ತಿ ನೀಡಿದ್ದು ಹರಿದಾಸರ ಹೆಚ್ಚಳ. ಅದೇ ಮಾರ್ಗ, ಅದೇ ಪಂಥ ನಿರ್ಮಿತಿ. ಪುರಂದರದಾಸರಲ್ಲಿ ಇಂಥ ನೂರಾರು ರಚನೆಗಳಿವೆ. ಪಿಳ್ಳಾರಿಗೀತೆಯನ್ನು ರಚಿಸಿ ಹಾಡಿದಂತೆಯೆ, ದಿವ್ಯವಾಗ್ದಾಯಿನಿಯಾದ ಸರಸ್ವತಿಯನ್ನು ನಮ್ಮ ಕಣ್ಮುಂದೆ, ಮನದಲ್ಲಿ ನಿಲ್ಲಿಸುವ ಅವರ ಕಲಾವಂತಿಕೆ, ದಾಸಸಾಹಿತ್ಯದ ನಿಧಿಯಲ್ಲಿ ಅಂಥ ಅನೇಕ ಮುತ್ತು ರತ್ನಗಳಿವೆಯೆಂದು ಸಾದರ ಪಡಿಸುವಂತಿದೆ :

ನಲಿದಾಡೆ ಎನ್ನ ನಾಲಗೆ ಮೇಲೆ-ಸರಸ್ವತಿದೇವಿ ।
ಕುಣಿದಾಡೆ ಎನ್ನ ನಾಲಗೆಮೇಲೆ...
ಘಲುಘಲು ಘಲ್ಲು ಗೆಜ್ಜೆಯ ನಾದ । ಛಳಿಛಳಿರೆಂಬಂದುಗೆ ।
ಹೊಳೆವ ಬೆರಳುಂಗುರ ಕಿಣಿಕಿಣಿನಾದ । ಎಳೆಯ ಮಾವಿನ ।
ತಳಿರ ಪೋಲುವ ದಿವ್ಯಪಾದ । ಚೆಲ್ವಪೆಂಡೆಯ ಭೇದ ॥
.. ನಲಿವ ಯುಗಳಜಂಘೆ । ...ಹೊಳೆವ ಸುಗುಣೆಯೆ...

ಇದು ಗೇಯಗುಣದಿಂದೊಡಗೂಡಿದ ಭಾವಗೀತೆಯೂ ಆಗಿದೆ, ಹಾಗೂ ದಾಸರ ಸೌಂದರ್ಯ ಪ್ರಜ್ಞೆಗೆ ಸೋದಾಹರಣೆಯಾಗಿದೆ.

ದೇವರ ಕೃಪೆ, ಅವನ ಕರುಣೆ, ಅವನ ಸೇವೆಗೈದರೆ ಆತ ಒಲಿವ ರೀತಿ ಕುರಿತು ದಾಸರು ವ್ಯಂಗ್ಯವಾಗಿ ಹೀಗೆ ಹಾಡುತ್ತಾರೆ :

ಹೂವ ತರುವರ ಮನೆಗೆ ಹುಲ್ಲ ತರುವ
ಅವ್ವ ಲಕುಮಿರಮಣ ಅವಗಿಲ್ಲ ಗರುವ ॥ ಪ ॥

ತೊಂಡರಾಮನೆಗಳಲಿ (ತೊಂಡುಗೆಲಸವ ಗೈವ)
ಪಾಂಡವರ ಮನೆಯಲ್ಲಿ ಕುದುರೆಗಳ ತೊಳೆದ ।
ಅಂಡಜಾಸನ ನಮ್ಮ ಪುರಂದರವಿಠ್ಠಲನು ।
ತೊಂಡರಿಗೆ ತೊಂಡನಾದ ಹಿಂಡು ದೈವದ ಗಂಡ ॥

ಆತ ಒಲಿದು, ಭಕ್ತರಿಗೆ ಭಕ್ತನಾದಂತೆಯೆ, ಅನೇಕ ದೈವಗಳ ಗಂಡನೂ ಅಹುದು ; ಇದು ಪುರಂದರರ ಹರಿಪಾರಮ್ಯ ಪ್ರಸಾರವೂ ಹೌದು.

ಶ್ರೀಕೃಷ್ಣನು ಗೋವು ಕಾಯ್ದ ರೀತಿಯನ್ನು ವಿಜಯದಾಸರು ಬಣ್ಣಿಸಿರುವ ರೀತಿ ಅವರ ಸಾಹಿತಿ-ಮನೋಧರ್ಮಕ್ಕೆ ನಿದರ್ಶನ...

ಕಾದನಾವತ್ಸವ ಹರಿಕಾದನಾ ಮೋದದಿಂದ ಮಾಧವ ॥ ಪ ॥
ವೇದವೇದ್ಯ ಸಾಧುವಿನುತ ರಾಧಿಕಾರಮಣ ಕೃಷ್ಣ ॥ಅ.ಪ.॥
ಎಳೆಯಗರಿಕೆ ಇರುವ ಸ್ಥಳದಿ ನೆರೆದು ವತ್ಸಗಳನೆ ನಿಲಿಸಿ,
ಕೊಳಲು ತನ್ನ ಕೈಲಿ ಪಿಡಿದು ಮುರಳಿಗಾನ ಮಾಡುತ್ತ । ಕಾದನಾ ।
...ಒಂದು ತಿಂಗಳ ಕರುಗಳು
ಇಂದಿರೇಶನು ಮೇಯಿಸಲು
ಒಂದು ವರುಷ ಕರುಗಳಂತೆ
ಆನಂದದಿಂದ ಬೆಳೆದವು...
ಅಜಗಳಂತೆ ಕರುಗಳು ಗಜಗಳಂತೆ ಆದವು
ತ್ರಿಜಗದೊಡೆಯ ವಿಜಯವಿಠ್ಠಲ ವ್ರಜಕೆ ದೊರೆಯಾಳುವೆ...

ನಕದಾಸರು ಶ್ರೀಹರಿಯನ್ನು ಉಪ್ಪವಡಿಸುವ ಬಗೆಯಾದರೂ ಎಂಥದು :

ಮೂಡುಗಡೆ ಮುಗಿಲು ಕೆಂಪಾದುದಡವಿಯ ತಾವು
ಚೂಡ ಕಾಳ್ಗೋದರವು ಕೋಗಿಲೆಗಳುಲಿಯುತಿರೆ ॥
ನಾಡನಾನಾ ತಪೋಧನರು ತತ್ಕಾಲದಲಿ ।
ಬೀಡ ಹೊರವಂಟು ನಡೆದುದು ॥

ಗದಿರನನಿಮಿಷ ತಾರಕೆಗಳು ಮಸುಳಿಸೆ : ಮತಂಗ ಪರ್ವತವ ಅಡರಿಬಂದನು...
ದು ಕವಿಗಳಾದ ಕನಕದಾಸರು ಹಾಡಿರುವ ರೀತಿ ಅವರನ್ನು ಸಾಹಿತಿಯೆನಿಸದೆ ?
ಗಯೆ ಅವರಲೋಕಾನುಭವವೂ

ಬಾಯಿನಾರಿದ ಮೇಲೆ ಏಕಾಂತವೇ ।
ತಾಯಿತೀರಿದ ಮೇಲೆ ತವರಾಸೆಯು ॥ ಪ ॥
ಕಣ್ಣು ಕೆಟ್ಟಮೇಲೆ ಕಡುರೂಪಚೆಲ್ವಿಕೆಯು ।
ಬಣ್ಣಗುಂದಿದ ಮೇಲೆ ಬಹುಮಾನವೆ ।
ತೃಷ್ಣೆ ತೀರಿದ ಮೇಲೆ ಪರಲೋಕ ಸಾಧ್ಯವೆ ।
ಸುಣ್ಣವಿಲ್ಲದ ವೀಳ್ಯವದು ಸ್ವಾದುಮಯವೆ ? ॥ ೧ ॥
ಕಿಲುಬಿನಾ ಬಟ್ಟಲೊಳು ಹುಳಿ ಕಲಿಸಿ ಉಣಬಹುದೆ
ಚಳಿಯುರಿಗೆ ಚಂದನದ ಲೇಪ ಹಿತವೆ ।
ಮೊಲೆ ಬಿದ್ದ ಹೆಣ್ಣಿನೊಳು ಮೋಹಕ್ಕೆ ಸೊಗಸಹುದೆ
ಬೆಲೆ ಬಿದ್ದಸರಕಿನೊಳು ಲಾಭವುಂಟೆ ? ॥ ೨ ॥

ಹಾಗೆಯೆ

ಕುಸುಮದೊಳು ಗಂಧವೊ ಗಂಧದೊಳು ಕುಸುಮವೋ ।
ಕುಸುಮ ಗಂಧಗಳೆರಡು ಘ್ರಾಣದೊಳಗೊ...

ಎಂಬೆಡೆ ಆದರ ಕಾವ್ಯಪ್ರಜ್ಞೆಯು ಜತೆಗಿರುವ ಅನುಭಾವಿತನ ಸಹ ಪ್ರಕಟವಾಗುತ್ತದೆ. ಪುರಂದರರಲ್ಲಂತೂ ಕೃಷ್ಣನ ಚೆಲುವನ್ನು ಹಿಡಿದಿಟ್ಟ ಅನೇಕ ಭಕ್ತಿಯುತ ಭಾವಗೀತೆ ಇವೆ. ಆದರ ಒಂದು ತುಣುಕು ಗಮನಾರ್ಹ :

ಚಂದವ ನೋಡಿರೆ-ಗೋಕುಲಾ- ।
ನಂದನ ಮೂರುತಿಯ ॥ ಪ ॥

ಅಂದುಗೆ ಕಡಗ ಗೆಜ್ಜೆಯು ಧರಿಸಿ ।
ಧಿಂ ಧಿಂ ಧಿಮಿಕೆಂದು ಕುಣಿವ ಕೃಷ್ಣನ ॥ ಅ.ಪ. ॥

ಕೊರಳ ಪದಕಹಾರ ಬಿಗಿದು ।
ತರಳರೆಲ್ಲರ ಕೂಡಿಕೊಂಡು ॥
ಕುರುಳುಗೂದಲ ಅರಳೆಲೆಯು ।
ಮಿರು-ಮಿರುಗುತ ಮೆರೆವ ಕೃಷ್ಣನ ॥ ೧ ॥

ಉಡೆಯ ಗಂಟೆ ಘಣಘಣಿಸುತ ।
ನುಡಿಯ ಮೆಲ್ಲನೆ ಪಿಡಿದುಕೊಂಡು ॥
ನಡೆದಾಡುತ ಸಡಗರದಲಿ ।
ಬೆಡಗ ಮಾಡಿ ಆಡುವ ರಂಗನ ॥ ೨ ॥

ಇಲ್ಲಿ ಸಹಜ ವರ್ಣನೆಯ ಚಿತ್ರಣವಿದೆ. ಹಾಗೆಯೆ ದಾಸರ ನೃತ್ಯಪ್ರಜ್ಞೆ, ಸಾಹಿತ್ಯ ಜೊಡಗೂಡಿ ವ್ಯಕ್ತವಾಗುತ್ತಿದೆ ಇಲ್ಲಿ :

"ಕಾಡು ಕಿಚ್ಚು ಮುಸುಕಿ ಗೋವ- ।
ವಾಡಿಯು ಬೆಂದದ್ದು ನೋಡಿ ।
ಈಡಿಲ್ಲದ ಉರಿಯ ಹೀರಿದ ।
ಅಚ್ಯುತ್ತತ್ತತ್ತತ್ತತ್ತ ॥

ಬೇಡಿದ ವರಗಳನೀವ ।
ಪುರಂದರವಿಠಲನ ಲೀಲೆಯ ।
ರೂಢಿಯೊಳೀತನ ಸಮರು ಯಾರು ।
ಇಲ್ಲಿಲ್ಲಿಲ್ಲಿಲ್ಲಿಲ್ಲಿಲ್ಲಿ ॥

ಇಲ್ಲೆಲ್ಲ ಸಾಹಿತ್ಯಿಕ ಮೌಲ್ಯಗಳೇನಿಲ್ಲ ಎಂಬ ಪ್ರಶ್ನೆಯೇಳುತ್ತದಷ್ಟೆ. ಹರಿದಾಸ ಸಾಹಿತ್ಯದ ಆದ್ಯಪ್ರವರ್ತಕರಾದ ಶ್ರೀಪಾದರಾಯರಿಂದ ಹಿಡಿದು ಈ ತೆರನಾದ ಅನೇಕ ಸರಳ ಸುಂದರ ರಚನೆಗಳು ಅದೆಷ್ಟೊ ಇವೆ.

ಹರಿದಾಸರು ತಾವು ಕಂಡ ಅನುಭವಿಸಿದ ಚಿತ್ರಣವನ್ನೂ ಅನೇಕ ಕೃತಿಗಳಲ್ಲಿ ನೀಡಿದ್ದಾರೆ. ಸಾಮಾನ್ಯ ಮನುಷ್ಯ ತನ್ನ ಬದುಕಿನಲ್ಲಿ ಶನಗರಿತೊ ಅರಿಯದೆಯೋ ಮಾಡುವಂಥ ಕಾರ್ಯ ನಡವಳಿಕೆ ಬಗ್ಗೆಯೆ ದಾಸರ ಚೂಪು ವಿಮರ್ಶೆ, ಎಚ್ಚರದ ನುಡಿ. ಇದು ಕೇವಲ ಆದರ್ಶವೆನಿಸದೆ, ಅನುಸರಣೀಯ ಎಂದೂ ಅನ್ನಿಸುತ್ತದೆ. "ನೇಮವಿಲ್ಲದ ಹೋಮವೇತಕಯ್ಯ-ರಾಮನಾಮವಲ್ಲದೆ ಮತ್ತೆ ನಮಗೆ ಬೇರೊಂದೆ

ಅಂಬರ ತೊರೆಯಲೇಕೆ ತಾಂಬೂಲ ಬಿಡಲೇಕೆ
ಡಂಭತನದಲ್ಲಿ ನೀನಿರಲೇತಕೆ...

ವಿಜಯದಾಸರು ಒಂದು ನುಡಿ ತುಂಬ ಸಹಜವಾಗಿದೆ :

ಪರಮ ಶ್ರೇಯಸ್ಸು ನೋಡಿ ಸಂಕಟಪಟ್ಟರೆ
ಗಿರಿಗೆ ಮಸ್ತಕವಿಟ್ಟು ಬಳಲಿ ಬೆಂಡಾದಂತೆ...

ಬದುಕಿನಲ್ಲಿ ಎಲ್ಲ ಆಸೆ ಈಡೇರುವುದೂ ಅಪರೂಪವೆ. ಜೀವನದಲ್ಲಿ ತಾನಾಗಿ ಒದಗಿ ಬಂದಷ್ಟರಲ್ಲಿ "ಯದೃಚ್ಛಾಲಾಭ ಸಂತುಷ್ಟಾ" ಎಂಬಂತಿರಬೇಕೆಂಬುದೆ ದಾಸರ ಮಾತು.

ಹರಿಮಾಡ್ದ ಮರ್ಯಾದೆ ಅನುಭವಿಸಲೇ ಬೇಕು
ಸರಸಿಜ ಭವಾದ್ಯರಿಗೆ ಬಿಡದು ॥ ಪ. ॥
ವರಕಲ್ಪ ಕಲ್ಪದಲಿ ಮಾರಿವವರುಂಟೆ ನಿಂ
ದಿರದಾವ ಜನುಮವಾಗೆ ಪ್ರಾಣಿ ॥ಅ.ಪ.॥

ಇದಲ್ಲದೆ, ಸಮಾಜದ ಮನುಷ್ಯನಿರ್ಮಿತವೇ ಆದ ಜಾತಿ ಪ್ರಶ್ನೆ ಬಗ್ಗೆ ದಾಸರು ವಿಚಾರ ಮಾಡುವಲ್ಲಿ (ಈ ಬಗ್ಗೆ ಬೇರೆಡೆ ಪ್ರಸ್ತಾಪಿಸಲಾಗಿದೆ). "ಹುಟ್ಟಿನಿಂದಲ್ಲ, ಆಚರಣೆಯಿಂದ ಹೊಲೆಯನೆ"ನ್ನುವ ಅವರ ಸುಳಾದಿ ನಿಡಿದಾದದ್ದು. ವಿಜಯದಾಸರದ್ದೆ ಹಬ್ಬ ಕುರಿತ ಸುಳಾದಿ, ತುಂಬ ಮಾರ್ಮಿಕ ಹಾಗೂ ಬೋಧಕ ಆಗಿದೆ.

ಹಬ್ಬಗಳಿವೆ ಕೇಳಿ ಊರ್ವಿಯೊಳಗೆ ವೈ
ದರ್ಭಿರಮಣನ ಕರುಣಾಬ್ಧಿಯೊಲಿದ ಬಳಿಕ
ಒಬ್ಬರಕಾಡಿ ಬೇಡಿಹಬ್ಬ ಮಾಡಿದರಿಂದ
ಉಬ್ಬುತೀರದುಕಾಣೊ ಬುದ್ಧಿದ ಜನರಿಗೆ

...ಕಾಮಕ್ರೋಧಂಗಳ ಬಿಡುವುದೇ ಬಲುಹಬ್ಬ
ನೇಮನಿಷ್ಠೆ ನಿತ್ಯ ಮಾಳ್ಪುದೇ ಬಲುಹಬ್ಬ
ಬಂದ ಅತಿಥಿಗಳ ಪೂಜಿಸುವುದೇ ಹಬ್ಬ
... ... ... ...
ಋಣರೂಪವಾಗದ ಸಂಸಾರವೆ ಹಬ್ಬ...

ಇಲ್ಲಿ ಒಳ್ಳೆ ಚಿಂತನೆ, ಸದಾಚಾರಕ್ಕೇ ಪ್ರಾಧಾನ್ಯ. ಅಬ್ಬರ, ಆಡಂಬರ ಇಲ್ಲ. "ದಂಪತಿಗಳು ಏಕವಾಗಿಪ್ಪುದೇಹಬ್ಬ ಶರಪದಂತೆ ವಿಜಯವಿಠಲ ಹೊಳೆವುದೇಹಬ್ಬ" ಎಂಬ ವಾಣಿಗಳು ರಮಣೀಯವೆನಿಸುತ್ತದೆ.

## ಹರಿದಾಸ ಸಾಹಿತ್ಯ-ಮಧ್ವಮತ ಪ್ರಭಾವ

ಹರಿದಾಸರದ್ದು ಪ್ರಧಾನವಾಗಿ ಮತಸಾಹಿತ್ಯ, ಹೌದು. ಆದರಿಂದ, ಅವರ ಸಾಹಿತ್ಯಿಕ ಮೌಲ್ಯ ಕುರಿತು ತಿಳಿಸುವಾಗ ಅವರು ಪ್ರತಿಪಾದಿಸಿದ, ಚಿತ್ರಿಸಿದ, ಬದುಕಿದ ಮತ-ಸಂಪ್ರದಾಯನಿಷ್ಠೆ ಮರೆಯುವಂತಿಲ್ಲ. ಹರಿಭಕ್ತಿ ಚಿತ್ರಿಸುವುದರೊಂದಿಗೆ ಮಧ್ವಮತ ಪ್ರಸಾರ ಹರಿದಾಸರ ಮುಖ್ಯಗುರಿ. ವಿಜಯದಾಸರಿಂದಾಚೆಗಂತೂ ದಾಸ ಸಾಹಿತ್ಯ ಹೆಚ್ಚು ಹೆಚ್ಚು ಮತೀಯ, ಶಾಸ್ತ್ರೀಯವಾಗಿರುವುದನ್ನು ನಾವು ಮನಗಾಣ ಬಹುದು. ಪ್ರಮೇಯ ಭಾಗ ಸುಳಾದಿ, ಸಾಧನ ಸುಳಾದಿ, ತೀರ್ಥಕ್ಷೇತ್ರ ಮಹಿಮಾ ಸುಳಾದಿ, ಇವೆಲ್ಲ ಮತ ಪ್ರಸಾರ-ಮತನಿಷ್ಠೆಯ ನಿಟ್ಟಿನಲ್ಲಿ ರಚಿಸಿದವುಗಳಾಗಿವೆ. "ಆದರೆ ವಿಜಯದಾಸರ ದೃಷ್ಟಿ ಕೇವಲ ಶಬ್ದ ಜಾಲಕ್ಕೆ ಸಿಕ್ಕಿಬೀಳದೆ ಸ್ವಾನುಭವದಿಂದ ಶಾಸ್ತ್ರದ ಮರ್ಮವನ್ನು ತಿಳಿಯಲು ತೊಡಗಿದುದರಿಂದ ಇಲ್ಲಿನ ನಿರೂಪಣೆಗೆ ಸಾಹಿತ್ಯದ ಮಾಧುರ್ಯವೂ ಸ್ವಾಭಾವಿಕವಾಗಿ ಒದಗಿಬಂದಿದೆ. ಹುಟ್ಟಿನಿಂದ, ಬೆಳೆದ ಗುರು ಪರಂಪರೆಯಿಂದ, ಲೋಕಾನುಭವದಿಂದ, ಅವರು ನೀಡುವ ಉದಾಹರಣೆ, ಪ್ರಮಾಣ, ಸೂಕ್ತಿ, ಇಲ್ಲೆಲ್ಲ ಅವರ ಶಾಸ್ತ್ರ ಪ್ರೇಮ ಅನುಭವಗಳೆರಡೂ ವೇದ್ಯ ಆಗುತ್ತವೆ. "ಕೊಟ್ಟಿಗೆ ಮೇಲುಪ್ಪರಿಗೆಯಾಗುವುದೆ", "ದುರುಳರಿಮನ ನಿಲಿಸುವುದು ಸುರರುಗಳ ವಲ್ಲ", "ಆಗಸ ಮಲಿನ ವಸ್ತ್ರಹಸನ ಮಾಡುವುದಕ್ಕೆ : ಕೊಸರಿ ಬಂಡಿಗೆ ಬೀಸಿ ಎಂಸು ಕದೆ ಬಡಿಯಲು : ಮಸಕ್ಕೆ ಪೆಟ್ಟು, ತಾಕಿಸಲು ಮಲಿನ ಬಿಟ್ಟು : ಅಸಿತ ಹಿಂಡಾಗಿ ರಂಜಿಸುವುದು ಬಿಳಪಿಲಿ" ಎಂಬೆಡೆ ಮನಶುದ್ಧತೆಯನ್ನು ಗಮನಿಸಿ ಅವರು ನೀಡಿರುವ ಹೋಲಿಕೆ, ತುಂಬ ಸಹಜವಾಗಿದೆ.

ಸಾಹಿತಿ, ಕವಿ ತನ್ನ ಮನಸ್ಸಿನ ಭಾವನೆಗಳನ್ನು ಸ್ಪಷ್ಟವಾಗಿ ತಿಳಿಯಿಸಲೋಸುಗ, ಭಾಷೆಯನ್ನು ಅವಲಂಬಿಸುವನಷ್ಟೆ. ಅಲ್ಲಿ ಹೋಲಿಕೆ, ಉಪಮೆ, ಆತ ಆ ಹೋಲಿಕೆ ನೀಡುವುದರ ಮೂಲಕ ಇನ್ನೂ ಹೆಚ್ಚು ಸ್ಪಷ್ಟ ಅರ್ಥ ಬರುವಂತೆ ಪ್ರಯತ್ನಿಸುವುದು. ಇದಕ್ಕೆ ಕಾವ್ಯ ಗುಣ ತಿಳಿದವರು, ಲಕ್ಷಣಕಾರರು "ವಕ್ರವ್ಯಾಪಾರ"ವೆಂದೂ ಹೇಳುವು

ದಂತಿದೆ. ಇಲ್ಲಿ ಪ್ರತಿಭೆಯೇ ಕವಿಯ ಜೀವಾಳ. ಕವಿ ಬಳಸುವ ಹೋಲಿಕೆ, ಜನರಿಗೆ ಸುಲಭವಾಗಿ ತಲುಪುವಂತಿದ್ದರೆ ಕಾವ್ಯದ ಖ್ಯಾತಿ, ಸೊಗಸು ಹೆಚ್ಚುತ್ತದೆ. ವಿಜಯ ದಾಸರು ತತ್ತ್ವ-ಶಾಸ್ತ್ರ-ವಿವರಣೆ ನೀಡುವಲ್ಲಿ ಬಳಸುವ ಹೋಲಿಕೆ, ಅನೇಕಡೆ ಸುಲಭ ವಾಗಿದ್ದು ಅವರ ಕೃತಿಗಳು ಕೇವಲ ಶಾಸ್ತ್ರವೆನಿಸದೆ ಸಾಹಿತ್ಯವೂ ಕೂಡ ಎಂದೆನ್ನಿಸಿ ಕೊಳ್ಳುತ್ತವೆ.

ಹರಿದಾಸರ ಕೃತಿಗಳು ಸಾಹಿತ್ಯಿಕ ಮೌಲ್ಯಗಳುಳ್ಳವೆನ್ನಲು ಈ ಪರಂಪರೆಯಲ್ಲಿ ಬಂದ ದಾಸರು ಬಳಸಿರುವ ಉಪಮೆಗಳೂ ಕಾರಣವೆನ್ನಿಸುತ್ತದೆ. ಉಪಮೆ, ಅಲಂಕಾರ, ಶೈಲಿ, ಭಾಷೆಯ ಬಳಕೆ ಹಾಗೂ ಭಾಷೆಯ ಮೇಲಣ ಪ್ರಭುತ್ವ ಇವೆಲ್ಲ ಯಾವುದೇ ಕೃತಿಯ ಸಾಹಿತ್ಯಿಕ ಮೌಲ್ಯವನ್ನು ಹೇಗೆ ಅಳೆಯುತ್ತದೆಯೊ ಹಾಗೆಯೇ ಸಾಹಿತಿಯ। ಕವಿಯ। ಕೃತಿಕಾರನ ಪ್ರತಿಭೆ, ಅಂತಃಸತ್ತ್ವ ದ್ಯೋತಕ. ಹರಿದಾಸರಉಪಮೆಗಳು ಕೇವಲ ಕವಿಲೋಕದ ಕಲ್ಪನೆಯಲ್ಲ. ಕವಿಸಮಯದ ಹೋಲಿಕೆಗಳಂತೆಯೂ ಅಲ್ಲ. ಅವರದ್ದೆ ಲೋಕಾನುಭವ ಟಂಕಿಸಿದ ನಿಜವಾದ ಉಪಮೆಗಳು. ದೈನಂದಿನ ಬದುಕಿನಿಂದ, ಪೌರಾಣಿಕ ಪ್ರಸಂಗ-ಭಾಗವತ ಪ್ರಸಂಗಗಳಿಂದ ಒಡಮೂಡಿ, ಆರಿಸಿ ಬಂದ ಮೌಕ್ತಿಕ ಅವು.

ಭಾಗವತವನ್ನು ಆಧರಿಸಿ ಶ್ರೀಪಾದರಾಜರು ಬಳಸಿರುವ ಒಂದು ರಚನೆಯನ್ನು ಉದಾಹರಿಸಬಹುದು :

ಬಿಡುವರು ಅಧನರ ಗಣಿಕೆಯರು ನೆರೆ
ಬಿಡುವುವು ವಿಫಲತರುವ ದ್ವಿಜಗಣ
ಬಿಡುವನು ಜಾರ ಪರವಧುವನು ತೆರೆದಿನ್ನು
ಇವು ದಿಟವಾಯಿತು ನಮ್ಮ ವಲ್ಲಭನೊಳು
ಅಕಟಕಟ ರಂಗ ವಿಠ್ಠಲನು ಕರುಣಿಯೆ ॥

ಇಲ್ಲಿರುವ ಕಟುವಾದ ನೋವು ! ಅದರಲ್ಲಿರುವ ಕನ್ನಡ ಸ್ವಂತಿಕೆ ! ಇಂಥ ಉಪಮೆಗಳನೇಕ. ವಿಜಯದಾಸರಲ್ಲಿ ಒಂದೆಡೆ, "ಭಾಷೆಹೀನರ ಆಸೆ, ಪ್ರಾಣಘಾಸೆ-ಬ್ಯಾಸತ್ತು ಬ್ಯಾಲಿಯು ಮ್ಯಾಲೊರಗಿದಂತೆ", "ಪುರುಷನಾರಿಯು ವೇಷದಂತೆ" ಎಂದು ಬರುತ್ತದೆ. ಇದಲ್ಲದೆ,

"ಚಾಲೀಯ ಮರದಂತೆ ದುರ್ಜನರು"
':ಸೆಗಣಿಯುವನೊಡನೆ ಸರಸವಾಡುವುದಕ್ಕಿಂತ
ಗಂಧದವನೊಡನೆ ಗುದ್ದಾಡುವುದೆ ಲೇಸು"
"ಸಾಲವ ಮಾಡಿ ಸಕ್ಕರೆಯ ಮೆದ್ದಂತೆ"
"ಬಾಲಕನ ಕಲಭಾಷೆ ಜನನಿಯುಕೇಳಿ ಸುಖಿಪಡುವಂತೆ"

ಮೊದಲಾದವೂ ಗಮನಾರ್ಹ.

ಒಟ್ಟಾರೆ, ಹರಿದಾಸರ ಉಪಮೆಗಳಲ್ಲಿ ಉದ್ದೇಶವಿರುತ್ತದೆ. ಸಮಾಜ ಸಂಧಾರಣೆ, ತತ್ವ, ಪ್ರಾರ್ಥನೆ, ಇಲ್ಲೆಲ್ಲ ಅವರ ಉಪಮೆಗಳು ಕೃತಿಗಳಿಗೆ ಸಾಹಿತ್ಯಸತ್ವವೀಯುತ್ತವೆ.

**ರೂಪಕ**

ಹರಿಯ ನಾಮವನ್ನು "ಕಲ್ಲುಸಕ್ಕರೆ" ರೂಪಕದ ಮೂಲಕ ಹಾಡಿರುವ ಶ್ರೀಪುರಂದರರ ಕೃತಿ ಈಗಲೂ ಬಹುಜನಪ್ರಿಯ.

"ಮಾನಸಪೂಜೆ" ಭಕುತಿ ವಿಧಾನದಲ್ಲೊಂದು. ಈ ವಿಧಾನವನ್ನನುಸರಿಸುವಲ್ಲಿ ರೂಪಕಾಲಂಕಾರವನ್ನು ಬಳಸಿರುವ ವ್ಯಾಸರಾಯರ ಒಂದು ಗಣ ಕೀಲಂಗನ ಮನಸ್ಸನ್ನು ಸಂಲಭವಾಗಿ ತಲುಪುತ್ತದೆ : "ಗಾತ್ರವೇ ಮಂದಿರ ಹೃದಯವೇ ಮಂಟಪ, ನೇತ್ರವೆ ಮಹಾದೀಪ." ಅದೇ ರೀತಿ, ಕನಕದಾಸರು ರಾಗಿ-ಭತ್ತದ ಜಗಳವನ್ನು ಕಲ್ಪಿಸಿ, ದಲಿತ-ಉಚ್ಚವರ್ಗದವರ ನಡುವೆ ನಡೆವ ಯಾದವೀ ಕಲಹ ಸಮೀಕರಿಸಿ ರೂಪಕವಾಗಿ ರಚಿಸಿರುವ 'ರಾಮಧಾನ್ಯ ಚರಿತೆ' ಒಂದು ವಿಡಂಬನ ಕಾವ್ಯವಾಗಿ, ಆಗಿನ ಕಾಲದ ಒಟ್ಟು ನೋಂದವನ ಕೂಗಾಗಿ ನಿಲ್ಲುತ್ತದೆ. ಅಲಂಕಾರಗಳನ್ನು ಕುರಿತು ಹಿಂದಿನ ಅಧ್ಯಾಯದಲ್ಲಿ ಪ್ರಸ್ತಾಪಿಸಿರುವ ಪ್ರಯುಕ್ತ ಈಗ ಮುಂದುವರಿಯಲು ಹೋಗದೆ, ಹರಿದಾಸರ ಶೈಲಿ-ಕನ್ನಡ ಬಳಕೆಯ ಸ್ವರೂಪದ ಬಗ್ಗೆ ಕೆಲವು ಮಾತು ತಿಳಿಸಿದರೆ, ಅಲ್ಲಿಗೆ ಹರಿದಾಸರ ಕೃತಿಗಳಲ್ಲಿನ ಸಾಹಿತ್ಯಿಕ ಮೌಲ್ಯಗಳ ಕುರಿತ ಸಮೀಕ್ಷಿಸಿದಂತಾಗುತ್ತದೆ.

**ಶೈಲಿ**

ಶೈಲಿ ಎಂದಾಗ ಹರಿದಾಸರ ಅನೇಕ ಕೃತಿಗಳು ಅವುಗಳ ವಿವಿಧ ನಡೆ ಒಮ್ಮೆಲೆ ನೆನಪಿಗೆ ಬರುತ್ತವೆ. ಶ್ರೀಪಾದರಾಜರ-ವ್ಯಾಸರಾಯರ ಸರಳತೆ ಇದ್ದಂತೆ, ಪುರಂದರರ ಶೈಲಿಯ ಒಂದು ವಿಧ. ಕನಕದಾಸರ ಶೈಲಿ ಸರಳ ಮತ್ತೊಮ್ಮೆ ಅವರು ಪ್ರಾಸ ಪ್ರಿಯರೋ, ಸಮಾಸಪ್ರಿಯರೊ, ಆಗಿ ತಮ್ಮ ಶೈಲಿಯನ್ನು ಜಟಿಲ ಆಗಿಸಿಲ್ಲ. ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರುಗಳ ಶೈಲಿಗಳು ಹೆಚ್ಚು ಕಡಿಮೆ ಜಟಿಲವೆಂದೆ ಹೇಳಬೇಕು. ವಿಜಯದಾಸರ ಕೃತಿಗಳಿಗಿಂತಲೂ ಗೋಪಾಲದಾಸರಲ್ಲಿ ವಿವಿಧ ಪ್ರಾಸ ಹೆಚ್ಚು. ಜಗನ್ನಾಥದಾಸರು ಸಂಸ್ಕೃತ ಪಾಂಡಿತ್ಯವಿದ್ದವರು. ಪುರಾಣ, ಶಾಸ್ತ್ರವೇತ್ತರು. ಆಶುಕವಿಗಳು ಇದರಿಂದಾಗಿ ಅವರ ಶೈಲಿ ಅರ್ಥ ಯಿಸುವುದು ಸ್ವಲ್ಪ ಕಷ್ಟವೆ ಆದರೂ ಅವರು ತಮ್ಮ ಭಾವನಿನಿಷ್ಟದಿಂದು 'ಹರಿಕಥಾ-ಮೃತಸಾರ' ಹಾಗೂ ತ್ರಿಪದಿ ಛಂದದ 'ತತ್ವಸುವ್ವಾಲಿ'ಗಳನ್ನು ಸರಳ ಶೈಲಿಯಲ್ಲಿ ಬರೆದಿದ್ದಾರೆ. ತನಗೆ ತೋಚಿದ ಮಾತು, ನುಡಿಮುತ್ತು, ಸಮಾಜದ ಪರಿಸ್ಥಿತಿ, ದೇವಾಲಯ ಕೊಳ.ತಟಾಕ-ಪ್ರಕೃತಿ, ಅನುಭವ ವಿನಾದರೊಂದನ್ನು ತನ್ನ ಕೃತಿಯಲ್ಲಿ ಕವಿ-ಸಾಹಿತಿ ಒಡಮೂಡಿಸುತ್ತಾನೆ. ಅವನ ಇತರ ಕೃತಿಗಳನ್ನು ಗಮನಿಸುವಲ್ಲಿ ಆತನ ಬಗ್ಗೆ ಹೆಚ್ಚು ತಿಳಿಯಬರುತ್ತದೆ. ಅವನ ಬರಹ, ಬರವಣಿಗೆಯ ನಡೆ-ನುಡಿ ಪರಿಚಯ

ಆಗುತ್ತದೆ. ಇದೇ ಶೈಲಿಯನ್ನ ಬಹುದು-ಶೈಲಿಯೆನ್ನು "ಭಾಷೆ ಭಾವಗಳ ಸಮರಸ ಸಂಯೋಜನೆ" ಎಂದು ತಿಳಿಸುವುದುಂಟು. ಶೈಲಿಯಿಲ್ಲದಿದ್ದರೆ ಬರವಣಿಗೆ ನೀರಸ ವಾಗುತ್ತದೆ. ಅಲ್ಲಿ ಕಾವ್ಯಗುಣವಿರುವುದಿಲ್ಲ. ಅಂದ ಮೇಲೆ ಆನಂದ ಸೊನ್ನೆಯೆ ! ಸಾಹಿತ್ಯ-ಶೈಲಿಗೆ ಸಂಬಂಧ, ಸಾಮೀಪ್ಯ ಬಹಳ. ಶೈಲಿಯೆ ಸಾಹಿತ್ಯವೆಂದೂ ಹೇಳುವು ದುಂಟು. ಶೈಲಿಯ ಹೆಗ್ಗುರುತು ವ್ಯಕ್ತಿತೆ. ಹೇಳಬೇಕಾದ ವಿಷಯವನ್ನು ದೈವಿಕ ವಾಗಿ, ಭಾವೋತ್ಕರ್ಷದಿಂದ, ಉದ್ರೇಕಾವಸ್ಥೆಯಲ್ಲಿ ಮೇಲ್ಮೆಗೊಳಿಸಿ ರೂಪಾಂತರ ಪಡಿಸುವುದರಿಂದ ಬರವಣಿಗೆಗೆ ಗಾಂಭೀರ್ಯವೂ ವೈಶಿಷ್ಟ್ಯವೂ, ಕೂಡಿಕೊಂಡು ಅದೇ ಶೈಲಿಯೆನ್ನಿಸಿಕೊಳ್ಳುತ್ತದೆ. ಈ ದಿಸೆಯಲ್ಲಿ ಕನಕದಾಸರ ಅನೇಕ ಕೃತಿಗಳು, ಅವರ ಭಾವೋತ್ಕರ್ಷಕ್ಕೆ, ಗಾಂಭೀರ್ಯಕ್ಕೆ ನಿದರ್ಶನ ಆಗುತ್ತವೆ. ಪುರಂದರದಾಸರ ಕೃಷ್ಣ ಲೀಲಾವಿನೋದ-ಯಶೋದೆಯ ಪ್ರೇಮ, ವಾತ್ಸಲ್ಯ, ಚಿತ್ರಣಗಳು ವಿಪುಲವಾಗಿವೆ. ಇಲ್ಲೆಲ್ಲ ಅವರವರ ಶೈಲಯಿಂದ ಅವರ ವ್ಯಕ್ತಿತೆ ಪ್ರಕಟಗೊಳ್ಳುತ್ತದೆ.

ಕನಕದಾಸರು ಒಮ್ಮೊಮ್ಮೆ ವರ್ಣನೆ, ಪ್ರಾಸ, ಜಟಿಲತೆಗೆ ಆಕರ್ಷಿತವಾಗುತ್ತಾ ರೆನ್ನಲು ಸಣ್ಣ ಉದಾಹರಣೆ :

ಡೊಂಕು ಬಾಲದ ನಾಯಕರೆ ಅಲ್ಲೇನೂಟವ ಮಾಡಿದಿರಿ
ಕಣಕ ಕುಟ್ಟೋ ಅಲ್ಲಿಗೆ ಹೋಗಿ ।
ಹಣಿಕಿ ಇಣಿಕಿ ನೋಡುವಿರಿ...
ಕಣಕವ ಕುಟ್ಟುವ ಒನಕೇಲಿ ಬಡಿದರೆ
ಕೈಕುಂಯ್ ರಾಗವ ಪಾಡುವಿರಿ

ಪುರಂದರದಾಸರ ಕೃತಿಗಳನೇಕ ಭಾವಗೀತೆಯೆ ಆಗಿವೆ. ಭಾವಗೀತೆಯಲ್ಲಿ ವ್ಯಕ್ತಿನಿಷ್ಠತೆ, ವ್ಯಕ್ತಿಯ ಭಾವನೆ ಗೇಯತೆ ಪ್ರತಿಫಲಿಸಿರುತ್ತವೆ. ಪುರಂದರದಾಸರು ತಮ್ಮ ಬದುಕಿನಲ್ಲಿ ನಡೆದ ಅಲೌಕಿಕ ಘಟನೆ, ತಾವು ದಾಸರಾದ ಬಗ್ಗೆ ಅದೇ ಘಳಿಗೆಯಲ್ಲಿ ಸ್ಫೂರ್ತಿ ತುಂಬಿ ಹಾಡಿದುತಿದೆ :

ಆದದ್ದೆಲ್ಲ ಒಳಿತೇ ಆಯಿತು : ನಮ್ಮ
ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು ॥

ದಂಡಿಗೆ ಬೆತ್ತ ಹಿಡಿಯುವುದಕ್ಕೆ ।
ಮಂಡೆ ಬಾಗಿ ನಾಚುತಲಿದ್ದೆ ॥
ಹೆಂಡತಿಯು ಸಂತತಿ ಸಾವಿರವಾಗಲಿ ।
ದಂಡಿಗೆ ಬೆತ್ತ ಹಿಡಿಸಿದಳಯ್ಯ ॥ ೧ ॥

ಗೋಪಾಳ ಬುಟ್ಟಿ ಹಿಡಿಯುವುದಕ್ಕೆ ।
ಭೂಪತಿಯೆಂದು ಗರ್ವಿಸುತಿದ್ದೆ ॥

ಆ ಪಕ್ಷಿಕುಲ ಸಾವಿರವಾಗಲಿ ।
ಗೋಪಾಲ ಬುಟ್ಟಿ ಹಿಡಿಸಿದೆಲಯ್ಯ......

ಎಂದು ಹಾಡಿದಂತೆಯೆ

ಛೀ ಹಳಿಘು ಮೋಡಿ ಪಾಪಿ ಮನವೆ ॥ ಪ ॥
ಬಣ್ಣದ ಬೀಸಣಿಗೆಯಂತೆ ಹೆಣ್ಣುತಿರುಗೋದ ಕಂಡು ।
ಕಣ್ಣು ಸನ್ನೆಯ ಮಾಡಿ ಕೈಹೊನ್ನುತೋರಿ ।
ಕಣ್ಣಲಿ ಸುಣ್ಣಹರಳಿನ ಮೇಲೆ ತನ್ನೀರು ಹೋಯ್ದಂತೆ ।
ಕಣ್ಣಲಿ ಕಂಡವಾ ಚೆಲ್ಲಿಕೊಂಡೆ ಮನವೆ ॥

ಎಂದೂ ಎಚ್ಚರಿಸದಿರರು

ಗೂಟಿನಾಮ ಹಿಡಿದು ಗೋಟಿಂಚು ಧೋತರ ಮಡಿಯನುಟ್ಟರೆ ದಾಸನಾದಂತಾ ಯಿತೆ ? ಮನಮಂಟಪ ಶ್ರೀಹರಿಗೆ ಸರ್ವಸಮರ್ಪಣಭಾವದಿಂದ ದಾಸನಾಗಬೇಕೆಂ, ಬುದು ಶ್ರೀಪುರಂದರರ ಧ್ಯೇಯ.

ಮೋಹನತರಂಗಿಣಿಯಂಥ ವರ್ಣಕ ಕಾವ್ಯ ಬರೆದ ಶೈಲಿ, 'ಹರಿಭಕ್ತಿಸಾರ'ವನ್ನೂ ಅಷ್ಟೆ ತಿಳಿಗನ್ನಡ ಷಟ್ಪದಿಯಲ್ಲಿ ರಚಿಸಿದ್ದಾರೆ. ಅಷ್ಟಾದರೂ ಅವರ ಸಂಸ್ಕೃತ ವ್ಯಾಮೋಹ ಕೆಲವೆಡೆ ಹೆಚ್ಚು : ಆಪೋನಾರಾಯಣಕತ್ವಂ : ವಿಚ್ಛೇದನೋದ್ಯೋಗ ; ನೇತ್ರಲಾಂಛನಗೆ : ವಾರಿಮಸ್ತಕನ : ನಾಪುತ್ರಸ್ಯಲೋಕೇಽಸ್ತಿ : ಅಬ್ಬಾರಿ ರಜನೀಚರ ಹರನಾತ್ಮ ಸಂಭವ......ಎಂಬುದಲ್ಲದೆ ಬೇರೆ ಬೇರೆ ಹೆಸರಂಗಳಿಂದ ಕರೆವುದೂ ಅವರಿಗೆ ನೆಮ್ಮದಿ ತರುತ್ತದೆಂದೆನ್ನಿಸುತ್ತದೆ. ಕನಕದಾಸರ 'ನಳಚರಿತ್ರೆ' ಭಾವಿಂನಿಷ್ಟದಿಯಂ ವಿಶಿಷ್ಟ ಕೃತಿ.

ಕನಕದಾಸರಲ್ಲಿ ವಂಗ್ಯತೆ, ಸರಳತೆ, ಪಾರಮಾರ್ಥಿಕ ಶುದ್ಧಶ್ರದ್ಧೆ, ಎಲ್ಲ ನಾವು ಕಾಣುತ್ತೇವೆ. "ಗತಿಹೀನರಿಗಾರು ನೀನೆ ಗತಿ ಕಣ" ಎಂದು ಬೇಡಿದಂತೆಯೆ, "ತಲ್ಲಣಿಸ ದಿರು ಕಂಡ್ಯ ತಾಳು ಮನವೆ" ಎನ್ನುತ್ತಾರೆ. "ನೀ ಮಾಯೆಯೊಳಗೊ ನಿನ್ನೊಳು ಮಾಯೆಯೊ" ಎಂದು ಪ್ರಶ್ನಿಸುವಂತೆಯೆ "ಆದ್ಯ್ಮರಂಗನಾಥ ಯುಗಗಳೀದ ನೀನಿಲ್ಲ ಮಲಗಿದ್ದರೂ ಎಬ್ಬಿಸುವರೊಬ್ಬರನು ಕಾಣೆ"ಎಂದು ವಿಡಂಬನ ಮಾಡಿದಾರೆ. ಅವರೆಷ್ಟು ಸರಳತೆ ಅಷ್ಟೆ ಒಮ್ಮೊಮ್ಮೆ ಅವರ ಶೈಲಿ ಗಂಟು, ಜಟಿಲ : "ಬಾಗಿಲನು ತೆರೆದು ಸೇವೆ ಕೊಡುಹರಿಯೆ" ಪದ್ಯದ ಸಾಲುಗಳು ಇದಕ್ಕೆ ನಿದರ್ಶನ. "ಈತನೀಗ ವಾಸುದೇವನು" ಕೀರ್ತನೆಯಲ್ಲಿ ಬರುವ ನುಡಿಗಳು ಕುಮಾರವ್ಯಾಸನ "ವೇದ ಪುರುಷನ ಸಂತನ ಸಂತನ" ನೆನಪಿಗೆ ತರುತ್ತವೆ. ಕನಕದಾಸರ ಶೈಲಿಗೆ ಅವರದ್ದೆ ಆದ ಸ್ವಂತಿಕೆ, ಮಣ್ಣಿನ ಕಂಪು ಇದೆ : ಅಲ್ಲಿ ಮಂಡಲಾಧಿಪನ ಗತ್ತು ಕರಗುತ್ತಾ ಭಕ್ತನ ಆರ್ದ್ರತೆ ಹೆಪ್ಪು ಗಟ್ಟುತ್ತಿರು ವುದು ಅನೇಕ ಕಡೆ ಗೋಚರವಾಗುತ್ತದೆ. "ತೊರೆದು ಜೀವಿಸಬಹುದೆ ಹರಿ ನಿನ್ನ

ಚರಣವನು""ಜಪವ ಮಾಡಿದರೇನು: ಕಪಟಗುಣ ವಿಪರೀತ......"."ಆವ ಬಲವಿದ್ದರೇನು ದೈವಬಲವಿಲ್ಲದನಕ" "ಬೊಂಬೆಯಾಟವನಾಡಿಸಿದೆ-ಮಹಾಭಾರತವ", "ಈತನೀಗ ವಾಸುದೇವನು", "ಉದಯಾಸ್ತಮಾನವೆಂಬ ಎರಡು ಕೊಳಗದ ಮಾಡಿ ಆಯುಷ್ಯದ ರಾಶಿಯನು ಅಳೆಯಿರಯ್ಯ" ಮುಂತಾದ ಕನಕದಾಸರ ಸಾಲುಗಳ ಶೈಲಿ ಅವರ ಧೀರ ವ್ಯಕ್ತಿತ್ವಕ್ಕೆ ನಮ್ರ ಹರಿದಾಸತ್ವಕ್ಕೆ ಹೆಗ್ಗುರುತುಗಳಾಗುತ್ತವೆ.

ಜಗನ್ನಾಥದಾಸರ "ಹರಿಕಥಾಮೃತಸಾರ"ದ ಅನೇಕ ಪದ್ಯಗಳು ಎಂಥವರನ್ನೂ ಮನಸೆಳೆದು "ಕೇಳು" ಎಂದು ಪ್ರೇರಿಸುವಂಥವು : "ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ"ದಷ್ಟೆ. ತಿರುಪತಿಯ ಶ್ರೀ ಶ್ರೀನಿವಾಸನನ್ನು ಕುರಿತು ಅವರು ತಮ್ಮ ಭಕ್ತಿಯ ಹಂಬಲದಿಂದ ತೋಡಿಕೊಂಡಿರುವ ನೀಳ್ಗವನ, ತನ್ನದೆ ಆದ ಓಟದಿಂದ ಸಾಗುತ್ತದೆ. ನಮ್ಮ ಸಂಸ್ಕೃತಿಯ ಸಾರವೇ ಹರಿದಾಸರ ನುಡಿಗಳಲ್ಲಿದೆ. ಅವರು ತಮ್ಮ ಬಾಳನ್ನು ಮಾತ್ರ ಹಸನುಗೊಳಿಸುವ ಸ್ವಾರ್ಥವುಳ್ಳವರಾಗಿರಲಿಲ್ಲ ; ಇಡೀ ಮಾನವಕೋಟಿಯ ಮನ ತುಂಬಿ ಅವರ ಬದುಕು ಹಸನಾಗಿಸುವ ಪರಾರ್ಥಬುದ್ಧಿ ; ಅನುಕಂಪಗಳುಳ್ಳವರಾಗಿದ್ದರು. ಹರಿದಾಸರಲ್ಲಿ ಪೌರಾಣಿಕ ಪ್ರಜ್ಞೆ, ಸಾಮಾನ್ಯ, ಎಲ್ಲರೂ ಸಾಮಾನ್ಯವಾಗಿ ತಿಳಿಸುವ ಪ್ರಹ್ಲಾದ, ಧ್ರುವ, ಗಜೇಂದ್ರ ಮೋಕ್ಷ, ಅಜಾಮಿಳರ ಕಥಾನಕ ಚರ್ವಿತ ಚರ್ವಣವೆನಿಸುತ್ತಿದ್ದಾದರೂ, ಪುರಂದರದಾಸರ, ಶ್ರೀಪಾದರಾಜ-ವ್ಯಾಸರಾಯ-ವಾದಿರಾಜರ ಕೃಷ್ಣ ಲೀಲಾವಿನೋದ ಪ್ರಸಂಗಗಳು, ಆಲಂಕಾರಿಕ ಶೈಲಿಯುಳ್ಳದ್ದು ಅಲ್ಲಿಯ ಪ್ರಕೃತಿ ವರ್ಣನೆ ಮನಸ್ಸಿಗೆ ಹಿತನೀಡುತ್ತದೆ. ವಾದಿರಾಜರು ಒಂದೆಡೆ "ತೆಂಗಿನ ತಿಳಿಗೊಳ ನಿಂಬೆ ಕಿತ್ತಲೆ ಇಳೆ ಹೊಂಬಾಳೆ ಅಡಿಕೆ ಬನಗಳು" ಎಂಬ ತಮ್ಮ ಸೋದೆ ಸುತ್ತ ಮುತ್ತಣ ಉತ್ತರ ಕನ್ನಡದ ಪ್ರಕೃತಿ ಸೊಬಗನ್ನೆ ಬಣ್ಣಿಸುತ್ತಾರೆ. 'ಅಮ್ಮಾಲೆ ಆಡೋಳು ಒಮ್ಮೊಮ್ಮೆ ನೋಡೋಳು" ಎಂದು ಮೋಹಿನಿಯ ಅವತಾರ ವಿಷ್ಣುವಿನ ವರ್ಣನೆ ಮಾಡುವ ಹಯವದನ ಪ್ರಿಯರಲ್ಲಿ ಅಂಥದೆ ಮೃದುಶೈಲಿಯಿದೆ. 'ವೇಣುನಾದ ವಿನೋದ ಮುಕುಂದ ! ಗಾನವಿನೋದ ಶೃಂಗಾರ ಗೋಪಾಲ" ತೆರನಾದ ಅನೇಕ ಬಂಧ ವಾದಿರಾಜರಲ್ಲಿ ದೊರಕುತ್ತವೆ.

### ಕೀರ್ತನ

ಪರಮಾತ್ಮನ ಲೀಲಾವಿನೋದ, ಅನಂತಗುಣಗಳನ್ನು ನುಡಿಸುವುದು, ಹಾಡುವುದು. ಶ್ರೀಪಾದರಾಜರ ಪ್ರಸಿದ್ಧ ಉಗಾಭೋಗದ ಸಾಲು :

ಧ್ಯಾನವು ಕೃತಯುಗದಿ
ಯಜನ ಯಜ್ಞವು ತ್ರೇತಾಯುಗಾದಿ
ದಾನವಾಂತಕನ ದೇವತಾರ್ಚನೆ ದ್ವಾಪರ ಯುಗದಿ
ಈ ಮಾನವರಿಗೆಷ್ಟು ಫಲವೊ ಅಷ್ಟು ಫಲವು

ಕಲಿಯುಗದಿ ಗಾನದಲಿ ಕೇಶವಯನಲು
ಕೈಗೊಡುವನು ರಂಗವಿಠಲ

ಎಂಬಲ್ಲಿ ಇದು ಒಂದು ಉತ್ತಮ ಸಾಹಿತ್ಯ ಕೃತಿ ಎನಿಸುತ್ತದೆ, ಹಾಗೆಯೇ

ತನುನಿನ್ನದು ಜೀವನ ನಿನ್ನದು
ಅನುದಿನದಲಿ ಬಾಹೊ ಸುಖದುಃಖನಿನ್ನದಯ್ಯ : ಶ್ರೀಕನಕದಾಸರು
ಬಿನ್ನಹಕೆ ಬಾಯಿಲ್ಲವಯ್ಯ
ಅನ್ನಂತ ಅಪರಾಧವೆನ್ನಲ್ಲಿ ಇರಲಾಗಿ : ಶ್ರೀಪುರಂದರದಾಸರು ನಿದರ್ಶನ,

ನವವಿಧ ಭಕುತಿ ವೈವಿಧ್ಯದಲ್ಲಿ ಕಾಣುವ ಕವಿತಾ ರಚನಕೌಶಲ, ಭಾವದೀತ್ತತೆ, ಹರಿದಾಸರ ಅನೇಕ ಕೃತಿಗಳನ್ನು ಭಾವಗೀತೆಗಳಾಗಿರಿಸುತ್ತವೆ. ಅವರ ತೀರ್ಥಕ್ಷೇತ್ರ ಪರ್ಯಟನ-ಅನುಭವ, ಪ್ರವಾಸ ಸಾಹಿತ್ಯವೂ ಹೌದು. ಶ್ರೀವಾದಿರಾಜರ "ತೀರ್ಥ ಪ್ರಬಂಧ" (ಸಂಸ್ಕೃತ) ಹಾಗೂ ಅದರಂತೆಯೆ ಅನೇಕ ಹರಿದಾಸರು ತಾವು ಸಂಚರಿಸಿದ ತೀರ್ಥಕ್ಷೇತ್ರ ಪರಿಚಯ ಮಾಡಿಕೊಡುತ್ತಾರೆ. ಶ್ರೀವಿಜಯದಾಸರ ತೀರ್ಥಕ್ಷೇತ್ರ ಮಹಿಮಾ ಸುಳಾದಿ ಅಂಥ ಒಂದು ಸಂಕಲನ.

ಹರಿದಾಸರ ಕೃತಿಗಳು ಅವರ ಶೈಲಿಯಲ್ಲಿ ಹಾಸು ಹೊಕ್ಕಾಗಿರುವ ಸರಳತೆ, ಕನ್ನಡ ನುಡಿ ಪ್ರಜ್ಞೆ, ನಾಮಮಾಧುರ್ಯ, ಗೇಯತೆ, ತತ್ವವಿವೇಕ, ಲೋಕಾನುಭವ ಸೂಕ್ತಿ-ನಾಣ್ಣುಡಿ, ಗಾದೆಮಾತು, ಶ್ರೀಕೃಷ್ಣ ಭಕ್ತಿ. ಧವಳಗಂಗೆಯ ಗಂಗಾಧರ ಮಹಾಲಿಂಗನನ್ನು ಮಾಧವನನ್ನು ತೋರಿಸಯ್ಯ ಗುರುಕುಲೋತ್ತುಂಗನೆಂಬ ಈಶನ ಮೂಲಕ ನಾರಾಯಣನ ಕಾಣುವ ಭಾವುಕತೆ, ಇವಲ್ಲದೆ ಕಾವ್ಯ ದಂಡಕ ಇತ್ಯಾದಿ ರಚನೆಗಳಲ್ಲಿರುವ ಸಾಹಿತ್ಯಿಕ ಮೌಲ್ಯಗಳ ಶತ ಶತಮಾನ ಸಂದರೂ ಸ್ಥಿರ ಆಗಿ ಉಳಿದಿದೆಯೆಂಬುದು ನಿರ್ವಿವಾದ. ಜನಪದದ ಭಾಷೆಯನ್ನು ಬಳಸಿ, ಸಹಜ ರೂಪಕ ಉಪಮೆ ದೃಷ್ಟಾಂತಗಳನ್ನು ನೀಡಿ, ಸಂಸ್ಕೃತ ಭೂಯಿಷ್ಠ ಆಗಿದ್ದ ವೇದಾಂತ, ಆಚಾರ್ಯ ಗ್ರಂಥಗಳ ಸಾರವನ್ನು, ವೇದಾಗಮ-ಭಾರತ-ರಾಮಾಯಣ-ಭಾಗವತಾದಿ ಉದ್ಗ್ರಂಥಗಳ ಪ್ರಸಂಗಗಳನ್ನು ಅಚ್ಚುಕಟ್ಟಾಗಿ ತಿಳಿಗನ್ನಡದಲ್ಲಿ ಸಾಮಾನ್ಯನಿಗೂ ಮುಟ್ಟುವಂತೆ ತಿಳಿಯ ಹೇಳಿದ ಕನ್ನಡ ಪ್ರವಾದಿಗಳಾದ ಹರಿದಾಸರ ಶೈಲಿ, ಸಹಜದೇಸಿಯ ಪೆಂಪನ್ನು ಪಡೆದಿದೆ. ಅದು ಆಯಾಯ ಹರಿದಾಸರ ಬದುಕಿ ಬೆಳೆದ ಪರಿಸರದ ಹಿನ್ನೆಲೆಯಲ್ಲಿನ ಜಾನಪದ ಅಂಶವನ್ನು ಮೈಯಾಂತಿದೆಯೆಂದು ಕೂಡ ಹೇಳಬಹುದು.

## ಹರಿದಾಸ ಸಾಹಿತ್ಯದಲ್ಲಿ ಭಾವಗೀತಾತ್ಮಕತೆ

ಹೊಸಗನ್ನಡ ಸಾಹಿತ್ಯ ಸ್ವೀಕರಿಸಿರುವ ಒಂದು ಪ್ರಕಾರ, ಭಾವಗೀತೆ. ಇಂಗ್ಲಿಷಿನ **'ಲಿರಿಕ್'** (Lyric) ಎಂಬ ಪದಕ್ಕೆ ಸಂವಾದ ಕನ್ನಡ ಪದ ಆಗಿ 'ಭಾವಗೀತೆ'ಯೆಂಬ ಪದವನ್ನು ಬಳಸುವುದು ಸುವಿದಿತವೆ ಆಗಿದೆ. ರಸಾನುಭವದ ವಾಗ್ರೂಪದ ಅಭಿವ್ಯಕ್ತಿಯೆ

ಸಾಹಿತ್ಯ ಎಂಬ ಮಾತಿಗೆ ಭಾವಗೀತೆ "ಕಾವ್ಯ" ಆಗಿ ಗೇಯಗುಣದ ಸಾಹಿತ್ಯ ಪ್ರಕಾರ ಆಗಿ ಅಳವಡುತ್ತದೆಯೆಂದು ತಿಳಿಸಬಹುದು. ಭಾವಗೀತೆಯದು ಎರಡು ಮುಖ್ಯ ಲಕ್ಷಣ. ಭಾವಾತ್ಮಕ, ಹಾಗೂ ಆ ಭಾವನೆ ಗೀತ ರೂಪದಲ್ಲಿ ಪ್ರಕಟಗೊಳ್ಳಬೇಕು. ಭಾವಗೀತೆಯಲ್ಲಿ ಭಾವಪ್ರಧಾನ, ಜತೆಗೆ ರಾಗ-ತಾಳ ಬದ್ಧತೆ ಸೊಗಸನ್ನು ಹೆಚ್ಚಿಸುತ್ತದೆ. ಸಮರಸಭಾವ ಆದರ ನಾದಗುಣ, ಗೇಯಗುಣ, ಇದರ ಮೇಳವಿಕೆ-ಭಾವಗೀತೆಯಲ್ಲಿ ಅಭಿವ್ಯಕ್ತಿಗೊಳ್ಳುತ್ತದೆ.

ಭಾವಗೀತೆಯ ವಿಶಿಷ್ಟ ಲಕ್ಷಣಗಳು ಗೇಯತೆ, ಸಂಕ್ಷಿಪ್ತತೆ, ಸ್ವಾಂತತೆ, ಚಿರಂತನತೆ, ಶ್ರವಣಸುಭಗತೆಯು ಗೇಯತೆಯ ಸಾಧನೆ. ಕವಿಯ ವ್ಯಕ್ತಿನಿಷ್ಠವಾದ ಅನುಭವ ಪಡೆದ ತೀವ್ರವಾದ ಸಂವೇದನ ಕೆಲವು ಘಳಿಗೆಗಳಲ್ಲಿ ಗೇಯಗುಣಪೂರ್ಣ, ಸಂಕ್ಷಿಪ್ತತೆಯಿಂದಿರುವ, ಶಕ್ತಿಯುತ ಆದ, ಒಂದು ಅಭಿವ್ಯಕ್ತಿ ವಿಶೇಷ ಭಾವಗೀತೆಯಲ್ಲಿ ಸ್ಫುರಣಗೊಳ್ಳುತ್ತದೆ. ಆಲ್ಲಿಗೆ ಭಾವಗೀತೆ, ಕವಿಯ ಆತ್ಮನಿವೇದನವೆನ್ನಬಹುದು. ಇಲ್ಲಿ ಪ್ರತಿಭೆ, ವಾಙ್ಮಯ, ಶಬ್ದ ಸಂಪತ್ತಿ, ಎಲ್ಲವೂ ಸಹಾಯಕ ಸಾಮಗ್ರಿಗಳಾಗುತ್ತವೆ. ಹರಿದಾಸರ ಅನೇಕ ಕೃತಿಗಳು ಈ ದೃಷ್ಟಿಯಲ್ಲಿ ಭಕ್ತ್ಯಾತ್ಮಿಕ, ಆಧ್ಯಾತ್ಮಿಕ ಭಾವಗೀತಗಳಾಗುತ್ತವೆ.

ಹರಿದಾಸ ಪರಂಪರೆಯವರು ರಚಿಸಿರುವ, ಅನೇಕ ಕೀರ್ತನೆ, ಸುಳಾದಿ, ಉಗಾಭೋಗಗಳಲ್ಲಿ, ಮೇಲೆ ಕಾಣಿಸಿರುವ ಭಾವಗೀತೆಯ ಲಕ್ಷಣಗಳು ಕಾಣಬರುವುದು ಗಮನಾರ್ಹ. "ಅಪರಾಧಿನಾನಲ್ಲ, ಅಪರಾಧವೆನಗಿಲ್ಲ, ಕಪಟ ನಾಟಕ ಸೂತ್ರಧಾರಿ ನೀನು" ಎಂಬ ಶ್ರೀಪುರಂದರದಾಸರ ಕೃತಿ, ವ್ಯಾಸರಾಯರ ಕೃಷ್ಣ-ರಾಧೆಯರ ವಿರಹಗೀತೆ, ಶ್ರೀಪಾದರಾಜರ 'ಭ್ರಮರಗೀತೆ', ಇವುಗಳಲ್ಲಿ ಕೆಲವು ಸಂಕ್ಷಿಪ್ತ, ಹಾಗೂ ನಿಡಿದಾದ ರಚನೆ ಆದರೂ ಅಲ್ಲಿ ಅನುಭವ ಸ್ವಂತಿಕೆ, ಶಬ್ದ ಚಮತ್ಕೃತಿ, ಅರ್ಥರಮಣೀಯತೆ, ಶ್ರುತಿಸುಭಗತೆ, ಭಾವದೀಪ್ತತೆ, ಅವೆಲ್ಲದರ ಜತೆ ಗೇಯಗುಣ ತಾನೇ ತಾನಾಗಿ ಹಾಸುಹೊಕ್ಕಾಗಿವೆ.

ಹರಿದಾಸರ ಕೀರ್ತನೆಗಳಲ್ಲಿ ಸಾಹಿತ್ಯಕ್ಕೆ ಸಂಗೀತವನ್ನು ಶಾಸ್ತ್ರ ರೀತ್ಯ ಮೇಳವಿಸುವ ಪ್ರಯತ್ನ ನಡೆದಿರುವುದನ್ನು ನಾವು ಕಾಣಬಹುದು. ಆದರೆ ಬರಬರುತ್ತ ಅನಂತರ ಎಂದರೆ ಹರಿದಾಸ ಸಾಹಿತ್ಯದ ದ್ವಿತೀಯ ಹಂತದ ಕೊನೆ ಕೊನೆಗೆ ಬಂದಿರುವ ಅನೇಕ ದಾಸರ ರಚನೆಗಳಲ್ಲಿ ಸಾಹಿತ್ಯವನ್ನು ಸಂಗೀತಕ್ಕಾಗಿಯೇ ರಚಿಸುವ, ಚರ್ವಿತ ಚರ್ವಣ ಪ್ರಯತ್ನ ನಡೆದಿರುವುದು ಕಾಣಬರುತ್ತದೆ. ಭಗವತ್ಪ್ರೇಮ, ಭಕ್ತಿಯೇ ಈ ಎಲ್ಲದರ ಪ್ರಧಾನಭಾವ. ಪದಗಳ ಬಳಕೆ, ಅವುಗಳಿಗಿರುವ ಅರ್ಥಕ್ಕೆ ವಿಶೇಷತೆ ನೀಡುವುದು ಸಂಗೀತದ ವೈಶಿಷ್ಟ್ಯ. ಒಂದು ವೇಳೆ ನಿಖರ ಆದ ಪದಗಳಿರದಿದ್ದರೂ ರಚನಕಾರರ ಭಾವನೆಯ ಛಾಯೆಯನ್ನು ತಲುಪಿಸುವ ಕಾರ್ಯ ಸಂಗೀತ ನಿರ್ವಹಿಸುತ್ತದೆ. ಇಲ್ಲಿ ಆಯಾಯ ಹರಿದಾಸರ ಸ್ಥಳೀಯ ಉಪಭಾಷೆಯು ಹೊಸುಹೊಕ್ಕಾಗಿರುವುದು ಅವರ ಭಾವನೆಗಳನ್ನು ಸಮರ್ಥ ರೀತಿಯಲ್ಲಿ ಅಭಿವ್ಯಕ್ತಿಸಲು ನೆರವಾದ ಅಂಶವಾಗಿದೆಯೆಂಬುದೂ

ಮನಗಾಣಬೇಕಾದ್ದೆ. ಇಲ್ಲಿ ವಚನಕಾರರ ಪ್ರಭಾವ ಸಹ ಕಾಣದಿಲ್ಲ. ಮೊದಲೆ ಹೇಳಿದಂತೆ ಶಾಸ್ತ್ರೀಯ ಸಂಗೀತ ಹರಿದಾಸರ ವಿಶಿಷ್ಟತೆ. ಆದರಲ್ಲಿಯೂ ಭಾವನಿರ್ಭರ ರಚನೆ ಹೆಚ್ಚು. (ಉದಾ : ನಾರಾಯಣ ನಿಮ್ಮ ನಾಮದಸ್ಮರಣೆ ಸಾರಾಮೃತವೆನ್ನನಾಲಗೆಗೆ ಬರಲಿ.)

"ಹರಿದಾಸ ಸಾಹಿತ್ಯ...ವಿಷಯಾನುಗುಣವಾದ ರೂಪವನ್ನು ಆಯ್ದುಕೊಳ್ಳುವ ರೀತಿಯಲ್ಲಿ ಅದು ಭಾವಗೀತೆಯ ಲಕ್ಷಣವನ್ನು ಸ್ವೀಕರಿಸಿದೆ. ಸ್ವಯಂಪೂರ್ಣವಾದ ಏಕಮೇವ ಭಾವದ ನಿರೂಪಣೆಯಿಂದಲೂ ಅದು ಭಾವಗೀತೆಯ ಸ್ವರೂಪ ತಾಳಿದೆ" ಎಂಬ ಸಾಹಿತ್ಯಚರಿತಕಾರರ ಮಾತು ಇಲ್ಲಿ ಉಲ್ಲೇಖಾರ್ಹ. ದಾಸರಲ್ಲಿ ಕವಿಗಳೆಂಬ ಹೆಗ್ಗಳಿಕೆಗೆ ಪಾತ್ರರಾದ ಕನಕದಾಸರ ಅನೇಕ ಕೀರ್ತನೆ ಅವರ ಅಂತರಂಗದ ನಾನಾಭಾವ, ಭಕ್ತಿನಿರ್ಭರಗುಣ ಸ್ಪಂದಿಸುವ ಉಜ್ವಲ ಭಾವಗೀತೆಗಳಾಗಿವೆ. "ತನುವಿನ್ನದಂ ಜೀವನ ನಿನ್ನದಂ ರಂಗ", "ತಲ್ಲಣಿಸದಿರು ಕಂಡ್ಯತಾಳು ಮನವೆ", "ನೀನಾಯೆಯೊಳಗೊ ನಿನ್ನೊಳಂಮಾಯೆಯೊ", "ಬದುಕಿದೆನು ಬದುಕಿದನು"–ಇಲ್ಲೆಲ್ಲ ಭಾವಗೀತೆ, ಭಕ್ತಿ ಯೊಂದಿಗೇ ಮೂಡಿದೆ. "ಉದಯಾಸ್ತಮಾನವೆಂಬ ಎರಡು ಕೊಳಗವ ಮಾಡಿ ಆಯುಷ್ಯದ ರಾಶಿಯನ್ನು ಅಳೆಯಿರಯ್ಯ" ಎಂಬ ಕಲ್ಪನೆ, ಕನಕದಾಸರ ರೂಪಕ ಶಕ್ತಿ, ಅವರ ಮೋಹನತರಂಗಿಣಿಯಲ್ಲಿ ಬಣ್ಣನೆ, ದೇಸಿ-ಭಾವಗೀತೆ ಎರಡರ ಲಕ್ಷಣವನ್ನೂ ತಾಳಿವೆಯೆನ್ನಿಸುತ್ತದೆ. ಕನಕದಾಸರಲ್ಲಿ ಕಾಣಬರುವ ವಿಡಂಬನದ ನಿಶಿತಗುಣ ಓದುಗರನ್ನಾಗಲಿ, ಕೀರ್ತನೆಯ ಕೇಳುಗರನ್ನಾಗಲಿ ಸಹಜವಾಗಿಯೆ ಆಕರ್ಷಿಸುವ ಗುಣ ಪಡೆದಿವೆ. ಹೀಗೆಯೆ ವಿಜಯದಾಸರ, ಗೋಪಾಲದಾಸರ, ಜಗನ್ನಾಥದಾಸರ ಅನೇಕ ಕೀರ್ತನೆಗಳು ಸಾಂಪ್ರದಾಯಿಕನಿಷ್ಠ ಆದರೂ, ಮಧ್ವಶಾಸ್ತ್ರೀಯ ಆದರೂ, ಅಲ್ಲಲ್ಲಿ ಭಾವಗೀತಾತ್ಮಕ ಲಕ್ಷಣ ಮೈದಳೆದಿವೆ ಎನ್ನಬಹುದು. ಈ ಗೀತೆಯ ಒಂದು ತುಣುಕು ಗಮನಿಸಿ :

ಶ್ರೀ ಮಾರುತನ ಮಾನಿನಿ, ಭಾರತೀದೇವಿ
ಆ ಮಹಾ ಭಕುತಿಗಭಿಮಾನಿ ॥ ಪ ॥

ಒಡನಡು ಕಿಂಕಿಣಿ ನಿಡುತೋಳ್ದಳೆಯ
ತೊಡೆ ಪದದಂದಿಗೆ ಉಡುಗೆಯಿಂದೊಪ್ಪುತ
ಪೊಡವಿಗೊಡೆಯ ನಮ್ಮ ವಿಜಯವಿಠ್ಠಲನ
ಅಡಿಗಳರ್ಚಿಪುದಕೆ ದೃಢಮನ ಕೊಡುವಳೆ...

ಇಲ್ಲಿಯ ವರ್ಣನೆ ಸರಳ, ಸುಂದರ.

ಶ್ರೀಪಾದರಾಜರ "ಕಂಗಳಿದ್ಯಾತಕೊ ಕಾವೇರಿ ರಂಗನ ನೋಡದ" "ಧ್ಯಾನವು ಕೃತಯುಗದಿ" ಎಂಬ ವಿಷ್ಣು ಪುರಾಣ ಶ್ಲೋಕವಾಧರಿಸಿದ ಉಗಾಭೋಗ, "ಮಾನನಿಧಿ ಶ್ರೀಕೃಷ್ಣ ಮಂಧರಗೈದುವನಂತೆ" ಎಂಬ ರಚನೆಯಲ್ಲಿ (ವ್ಯಕ್ತನಾಮ) ಬರುವ

ಭಾವೋತ್ಕರ್ಷ, ಭಾವಗೀತೆಯ ಲಕ್ಷಣವೈತಳಿದಿದೆ. "ರಂಗಕೊಳಲನೂದಂತ ಬಂದ ಯಶೋದೆಯ ಕಂದ" ಎಂಬ ರಚನೆಯಂತೂ ತಿಳಿಗನ್ನಡದ ಜತೆ ಗೇಯಗುಣ ಸಹ ವಾಗಿಯೆ ಪಡೆದ ಒಂದು ಉತ್ಕೃಷ್ಟ ರಚನೆಯಾಗಿದೆ :

...ವಿಹಂಗ ಭುಜಂಗ ನವಿಲು ಸಾ
ರಂಗ ಗಿಣಿಯು ಮಾತಂಗ ಮರಿಯು ಕು
ರಂಗ ಮಧ್ಯೆ ಚರಣಂಗಳೆಡೆಗೆ ವೇ
ದಂಗಳಿಗೆ ಕಾಮಂಗಳಲಿಂಗೆ ನೇ
ತ್ರಂಗಳಗತಿ ಚಿತ್ರಂಗಳಾಗೆ ಆ
ರಂಗನೊದ್ವ ಸಾರಂಗ ಕೇಳಿ ರುಚಿ
ಪುಂಗಸಹಿತ ತಾವ್ರುಗಳು ಬರೆ ನರ
ಸಿಂಗನೂದಿದ ಜಗಂಗಳ ಮೋಹಿಸಿ...

ಹಾಗೆಯೇ, ವ್ಯಾಸರಾಯರ ಒಂದು ಕೃತಿ ಸಾಲು ಉದಹರಿಸಬಹುದು :

ಮರುಗ ಮೊಲ್ಲೆ ಮಲ್ಲಿಗೆ ಜಾಜಿ ಸಂಪಿಗೆ
ತುರುಬಿಲೊಪ್ಪುದ ಚೂಡಾರತುನ ಮಾಣಿಕದ
ಮೆರೆವ ಚಂದ್ರ ಸೂರಿಯ ಮುಡಿಯಲೊಪ್ಪೆ
ಕುರುಳ ಗೂದಲು ಬೈತಲಿ ಥಳಥಳಗಳ...

ಹೀಗೆ ಸಾಗುತ್ತದೆ. (ಉಡುಪಿಯಲ್ಲಿ ಶುಕ್ರವಾರದಂದಿನ ಶ್ರೀಕೃಷ್ಣನಿಗೆ ಮಾಡುವ ಮೋಹಿನಿ ಅಲಂಕಾರದ ವರ್ಣನೆಯಿದು) ಇದೇ ರೀತಿ ಅನೇಕ ಉಗಾಭೋಗ, ಭಾವಗೀತೆ ಎನಿಸುತ್ತವೆ,

ಕಂಗಳು ಚೆಲುವನು ನೋಡಿ
ಕರ್ಣಂಗಳು ವಾರುತಿಯ ಕೇಳಿ
ಹಿಂಗದೆನಾಮವ ವದನದಿ ನಲಿಯುತ್ತ ॥ಪ॥
ವಂಗಳ ಮನದಿ ನೆನೆನೆನೆದು ರೋ–
ಮಂಗಳು ಪುಳಕಿತವಾಗಿ ಲೋ ।
ಕಂಗಳ ಕಡಲೊಳು ಮುಳುಗಿ ಮೈಯ್ಯಬ್ಬಿ ಕೊಬ್ಬುತ್ತ ।
ಅಂಗವ ಮರೆದಾನಂದದಿ ।
ರಂಗ ಎನುತಿದ್ದರೆ ಸಾಲದೆ ।
ಮಂಗಳ ಜಯವನ್ನು ಕರುಣಿಸೋ ಮತ್ತೊಂದು ।
ಸಂಗವನೊಲ್ಲೆನೋ ಸಿರಿಕೃಷ್ಣರಾಯ ॥

ಬಾಲಕೃಷ್ಣನ ಪರಿಪರಿಯ ಸೊಬಗು, ಕ್ರೀಡೆ, ದಾಸರಿಗೆ ವರ್ಣಿಸಿದಷ್ಟೂ ತೀರದು, ಪುರಂದರದಾಸರ "ಲಾಲಿಸಿದಳು ಮಂಗನ", "ಜಗದೋದ್ಧಾರನ ಆಡಿಸಿದಳು

ಯಶೋದ" ಇವೆಲ್ಲ ಭಾವಗೀತೆಗಳೆ. "ಬಾರೆಗೋಪಮ್ಮ ನಿಮ್ಮ ಬಾಲಯ್ಯಗಳಂಬೆ ಬಾರೆಗೋಪಮ್ಮ", "ಪಿಳ್ಳಂಗೋವಿಯ ಚೆಲ್ವಕೃಷ್ಣನ ಎಲ್ಲಿ ನೋಡಿದಿರಿ", "ಗೋಪಿಯಂ ಭಾಗ್ಯವಿದು" ಇವೆಲ್ಲ ಭಕ್ತಿಯುತ ಭಾವಗೀತೆಗಳೇ ಆಗಿವೆ. ಉಗಾಭೋಗವೊಂದರ ಒಂದು ಸಾಲು ಗಮನಾರ್ಹ :

ತಂಬೂರಿ ಮಿಾಟಿದವ ಭವಾಬ್ಧಿದಾಟದವ ।
ತಾಳವ ತಟ್ಟಿದವ ಸುರರೊಳು ಸೇರಿದವ ।
ಗೆಜ್ಜೆಯ ಕಟ್ಟಿದವ ಖಳರೆದೆ ಮೆಟ್ಟಿದವ ।
ಗಾಯನ ಪಾಡಿದವ ಪರಿಮೂರ್ತಿ ನೋಡಿದವ ।
ಪುರಂದರವಿಠಲನ ನೋಡಿದವ ವೈಕುಂಠಕ್ಕೋಡಿದವ..."

"ಹರಿಯ ಒಂಭತ್ತು ಭಕ್ತಿಯ ಬಲ್ಲ ಧೀರ ।
ಮರಳಿ ಸಂಸೃತಿಯ ದಾರಿಗೆ ಹುಟ್ಟಿಬಾರ ।

"ಲೊಳಲೊಟ್ಟೆ ಬದುಕು ಲೊಳಲೊಟ್ಟೆ", "ಹಂಪ್ವ ತರಂವರ ಮನೆಗೆ ಹಂಲ್ಲ ತರಂವ"—ಇವೆಲ್ಲ ಭಾವಗೀತೆಗಳ ಸಾಲಿಗೆ ಸೇರತಕ್ಕವೆ.

ಭಗವಂತನ ಸಾಕ್ಷಾತ್ಕಾರಕ್ಕಾಗಿ ಹಂಬಲಿಸಿ ಕಾತರಿಸಂವ ಭಕಂತಮನ ಆ ದಿವ್ಯ ದರ್ಶನವಾದಾಗ, ಭಕ್ತಿಭಾವೋತ್ಕರ್ಷದಿಂದ ಹಾಡುವುದೆಲ್ಲ ಭಾವಗೀತೆಗಳೆ. ಹರಿದಾಸರಲ್ಲಿ ಮಂತಾಧೀಶರಾಗಿ ದಾಸದೀಕ್ಷೆಯನುಸರಿಸಿದ ವಾದಿರಾಜರ ಅರ್ಥಗರ್ಭಿತ ಭಾವಗೀತೆಗಳ ತಂಣುಕು ಅನೇಕ. ಅವರ ಒಂದು ರಚನೆಯ ತಂಣುಕಂ ನೋಡಿ :

ಕಂಡೆ ಕಂಡೆನು ಕೃಷ್ಣ ನಿನ್ನಯ ದಿವ್ಯ ಮಂಗಳ ವಿಗ್ರಹ
ಕಂಡು ಬದುಕಿದೆ ಇಂದು ನಾನು ಕರುಣಿಸೊ ಎನ್ನೊಡೆಯನೆ ॥ಪ॥
...ಮಂದಹಾಸವು ದಂತ ಪಂಙ್ತಿಯು
ಚೆಂದದ ಕಡೆಗಣ್ಣ ನೋಟವು
ಅಂದವಾದ ಕುರುಳು ಗೂದಲು
ಮುದ್ದು ಸುರಿವೋ ಮುಖವ ನಾ...

ಇಂಥ ಭಾವಗೀತೆಗಳು ವಾದಿರಾಜರ ವಾಙ್ಮಯ ಸಂಪದದಲ್ಲಿ ಅನೇಕ.

ಸಂಗೀತವೂ ಬೆರೆತು ಸಾಹಿತ್ಯದೊಡಗೂಡಿ ಮನಸ್ಸಿಗೆ ಹಿತತರುವುದರಿಂದ, ಹರಿದಾಸರ ಕೀರ್ತನೆಗಳಲ್ಲಿ ಒಂದು ವಿಶಿಷ್ಟತೆ ಇದೆ. ಅದು ಆಸ್ವಾದನೀಯವೆ, ವಿನಾ ಅನಿರ್ವಚನೀಯವೆಂದೇ ಹೇಳಬಹುದು. ಅವರ ಅನೇಕ ಕೃತಿಗಳಲ್ಲಿ ಪಲ್ಲವಿ, ಅನು ಪಲ್ಲವಿಗಳೆ ಒಂದು ಕಾವ್ಯದಂತಿರುತ್ತವೆ. ಇಡೀ ಕೃತಿಯೆ ಪೊನರಾಗಿ ಹರಿದು ಕೇಳಂಗ ನನ್ನ ತನ್ನೊಂದಿಗೊಯ್ಯುತ್ತವೆ ತನಗೆ ತಾನೇ ಹೇಳಿಕೊಳ್ಳುತ್ತಿದ್ದರೆ, ಮನ ಹಗು ರಾಗಂತ್ತದೆ. ಉದಾಹರಣೆ :

ಕಲ್ಲುಸಕ್ಕರೆ ಕೊಳ್ಳಿರೋ ನೀವೆಲ್ಲರು । ಕಲ್ಲುಸಕ್ಕರೆ ಕೊಳ್ಳಿರೋ ।
ಕಲ್ಲುಸಕ್ಕರೆ ಸವಿ ಬಲ್ಲವರೆಬಲ್ಲರು । ಫುಲ್ಲಲೋಚನ ಶ್ರೀಕೃಷ್ಣನಾಮವೆಂಬ ॥ಪ॥

ನಾಡೊಂಕಾದರೆ ಏನೋ ನಿನ್ನ ನಾಮ ಡೊಂಕೆ ವಿಠಲ
ನಾನಿಂದು ಡೊಂಕು ಆದರೇನು ಉದಕ ಡೊಂಕೆ ವಿಠಲ ॥
ಕೇಳನೋ ಹರಿತಾಳಸೋ । ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ ।
''ಸಕಲಗ್ರಹಬಲ ನೀನೆ ಸರಸಿಜಾಕ್ಷ ।
''ನಮ್ಮಮ್ಮ ಶಾರದ ಉಮಾಮಹೇಶ್ವರಿ । ನಿಮ್ಮೊಳಗಿಹನ್ಯಾರಮ್ಮ (ಕನಕದಾಸರು)

ಹರಿದಾಸರು ಆತ್ಮಸಾಕ್ಷಾತ್ಕಾರ—ದೈವದರ್ಶನ ಹಂಬಲಿಗರು. ಆದರೂ ಸಮಾಜದತ್ತ ದೃಷ್ಟಿ ಹೊರಳಿಸದಿರಲಿಲ್ಲ. ಇಹದ ಬದುಕನ್ನು ಚೆನ್ನಾಗಿ ಬಾಳಬೇಕೆಂಬುದೆ ಅವರ ಕೃತಿಗಳ ಧ್ಯೇಯ. ಸಂಗೀತ—ಜನಬಳಕೆ ಭಾಷೆಯ ನೆರವನ್ನು ಪಡೆದ ಅವರ ಸಂದೇಶ, ಅನೇಕ ಭಕ್ತಿಯಂತ ಭಾವಗೀತೆಗಳಲ್ಲಿ ಹೆಪ್ಪುಗಟ್ಟಿದೆ. ಅದನ್ನು ನಾವು ಅದರ ಸನಿಹ ಹೋಗಿ ಪಡೆಯಬೇಕಷ್ಟೆ. ದಾಸರು ಜೋಳಿಗೆಯನ್ನು ಹಿಡಿದು ಮನೆ ಮನೆಗೆ ನಡೆದರು, ಭಿಕ್ಷೆ ಬೇಡುವುದಕ್ಕಲ್ಲ ; ಹಸಿದ ಹೃದಯಗಳಿಗೆ ಭಗವದನುರಾಗದ ಭಿಕ್ಷೆ ನೀಡುವುದಕ್ಕೆ ಭಾವ, ಗೇಯಗುಣ ಹಾಳತವಾಗಿ ಬೆರೆತ ಹದಪಾಕದಂಥ ಭಾವಗೀತ ಉಣ ಬಡಿಸ ಲಿಕ್ಕೆನ್ನುವುದು .

ಹರಿದಾಸರ ಸಾಹಿತ್ಯದ ಮೇಲೆ ಜನಪದ ಸಾಹಿತ್ಯ ಪ್ರಭಾವ ಇಲ್ಲದಿಲ್ಲ. ಏಕೆಂದರೆ ಅನುಭಾವಿಗಳಾದರೂ ಹರಿದಾಸರು ಜನತೆಯ ನಡುವೆ ಬದುಕಿದವರೆ. ಮೇಲ್ಪತರಗತಿಯ ಬ್ರಾಹ್ಮಣ ಸಂಪ್ರದಾಯ ಅದರಲ್ಲೂ ಮಾಧ್ವನಿಷ್ಠೆಗೆ ಸೇರಿದ ಹರಿದಾಸರೇ ಹೆಚ್ಚಾದರೂ ಅದಕ್ಕೆ ಅಪವಾದ ಆದ ಕನಕದಾಸರೂ ಇದಾರೆ, ವೃತ್ತಿಯಿಂದ ವ್ಯಾಪಾರಿಗಳಾಗಿದ್ದು ಅನಂತರ ದಾಸದೀಕ್ಷೆ ವಹಿಸಿದ ಪುರಂದರದಾಸರೂ ನಿದರ್ಶನವಾಗಿದಾರೆ. ಹರಿದಾಸರನೇಕ ರಲ್ಲಿ ಕಾಣಬಂದಿರುವ ಅವರ ರಚನೆಗಳು ಜನಪದ ಮೋಡಿಗೆ ವರ್ಚಸ್ಸಿಗೆ ತನ್ನಿಂತಾನೆ ಒಳಗಾಗಿವೆ. ಅದಕ್ಕೆ ಆಯಾ ಪರಿಸರವೂ ಇಂಬಾಗಿದೆ. ಇದರಿಂದಾಗಿ ಹರಿದಾಸರ ತಾತ್ವಿಕ ಔನ್ನತ್ಯಕ್ಕೇನೂ ಕೊರೆಕಂಡು ಬಂದಿಲ್ಲ ; ಮೇಲಾಗಿ ಅದು ಇನ್ನೂ ನವೋನವೀನ ವಾಗಿ ಅರಳಿದೆ. ಹರಿದಾಸ ಸಂಪ್ರದಾಯದ ಒಂದು ಪ್ರಕಾರವಾಗಿ ಮೂಡಿ ಬಂದ ಹರಿಕಥೆ ಒಂದು ಅರೆಜಾನಪದ ಕಲೆಯೆ ಆಗಿದೆ. ಜನಪದ ಸಾಹಿತ್ಯ ಹೇಗೆ ಜನಪದದ ಬಾಯಿಯಾಗಿ, ಕಂಠಸ್ಥ ಸಾಹಿತ್ಯ ಆಗಿ ಬೆಳೆದು ಬಂದಿದೆಯೊ ಹಾಗೆಯೆ ಹರಿದಾಸ ಸಾಹಿತ್ಯವೂ ಮೊದಲಿಂದ ನಮಗೆ ದೊರೆತು ಬಂದಿರುವುದು ಪರಂಪರೆಯಿಂದ ಕಂಠಸ್ಥ ಸಾಹಿತ್ಯವಾಗಿ ಎಂದರೆ ತಪ್ಪಾಗದು (ಜಾನಪದವೆಂದರೆ ಒಂದು ಭಾಷೆಯ ಜನಪದ ಸಾಹಿತ್ಯ, ಸಂಸ್ಕೃತಿ, ನುಡಿ–ನಡವಳಿ, ನಂಬಿಕೆ, ಧಾರ್ಮಿಕ ಆಚರಣೆಗಳು, ರೂಢಮೂಲ ಪದ್ಧತಿ–ಹೀಗೆ ಎಲ್ಲ ಜೀವನರಂಗಗಳನ್ನು ಒಳಗೊಳ್ಳುತ್ತದೆ. ಜಾನಪದ, ಜನಪದ

ಸಮಾಜದ ಜಾತವಿದ್ದಂತೆ, ಎನ್ನಬಹುದು. ಹರಿದಾಸ ಸಾಹಿತ್ಯ ಬೆಳೆದು ಬಂದದ್ದೂ ಜಾನಪದದಿಂದಲೆ).

ದಾಸಸಾಹಿತ್ಯದ ಮೇಲೆ ಜನಪದ ಸಾಹಿತ್ಯ ಪ್ರಭಾವವನ್ನು ಗುರುತಿಸುವಲ್ಲಿ ನಮಗೆ ನೆರವಾಗುವ ಪೋಷಕ ಸಾಮಗ್ರಿ ಕನಕದಾಸರ ರಚನೆಗಳಲ್ಲಿ ಹೆಚ್ಚು ಸ್ಪಷ್ಟವಾಗಿ ದೊರೆಯುವುದು. ಅದಕ್ಕೆ ಕಾರಣವೂ ಇದೆ. ಕನಕದಾಸರು ಬಂದದ್ದು ಸಮಾಜದ ಒಂದು ಕೆಳವರ್ಗದಿಂದ, ಅಂತಸ್ಸಾಕ್ಷನೆಯಿಂದ ಅವರು ಇಂದೂ ಏಕಮೇವಾದ್ವಿತೀಯರು. ಅವರಿಗಿದ್ದ ಬಂದ ಜಾತಿ ಕುಲ, ಮೇಲುವರ್ಗದವರ ಭರ್ತ್ಸನೆ ವ್ಯಾಸರಾಯರ ಶಿಷ್ಯ ವರ್ಗದ (ಹರಿದಾಸರೆಷ್ಟಿದ್ದರೋ ಆಗ್ಗೆ ಎಂಬುದಿನ್ನೂ ತಿಳಿದುಬಂದಿಲ್ಲ ; ಅಂತೂ ಒಂದು ಬಣವೆ ಇದ್ದಾತು. ಅದಲ್ಲದೆ ಶಿಷ್ಯ ವರ್ಗದವರು ಮಠದಲ್ಲಿ ಇದ್ದೇ ಇರುತ್ತಾರೆ) ಕೆಲವು ಕುಹಕಿಗಳಿಂದ ನೋವು ಆಗಿಯೆ ಇದ್ದಿರಬೇಕು. ದಾಸಶ್ರೇಷ್ಠರೆಂಬ ಪ್ರಶಂಸೆಗೆ ಪಾತ್ರರಾದ ಪುರಂದರದಾಸರೆ ತಿರುಪತಿಯಲ್ಲಿ ತಮಗಾದ ಅನುಭವ ಹೇಳಿಕೊಂಡಿದ್ದಾರೆ :

ನಿನ್ನದಿವ್ಯ ಮೂರುತಿಯ ಕಣ್ಣು ದಣಿಯಲು ನೋಡಿ
ಧನ್ಯನಾದೆನು ಧರೆಯೊಳು...
...ನೆಟ್ಟನೆಯೆ ದ್ವಾರವ ದಾಟಿ ಪೋಗುತಲಿರಲು
ದಟ್ಟಣೆಯ ಮಹಾಜನದೊಳು
ಕೃಷ್ಣಾಜಿನದವರ ಕೈಪೆಟ್ಟು ಕಾಣುತ್ತ ಕು
ಗೆಟ್ಟು ಹರಿಹರಿಯೆನುತಲಿ
ಗಟ್ಟಿಮನಸಿನಲಿ ತಲೆ ಚಿಟ್ಟೆಟ್ಟು ಶೀಘ್ರದಲಿ
ಕಟ್ಟುಂಜನಕೆ ಪೋಗುತ...
ಬೆಟ್ಟದಧಿಪತಿ ನಿನ್ನದೃಷ್ಟಿಯಿಂದಲಿನೋಡಿ
ಸುಟ್ಟೆ ಎನ್ನಯ ದುರಿತವಾದೇವಾ..."

ಈ ಕೀರ್ತನೆಯಲ್ಲಿ ಅವರಿಗೆ ಉಂಟಾದ ನೋವು, ಪ್ರತಿಷ್ಠಿತರ ಪೆಟ್ಟು, ಎಲ್ಲವೂ ವ್ಯಕ್ತವಾಗುತ್ತವೆ. ಇದು ಹದಿನೈದನೆ ಶತಮಾನದ ಮಾತು—ಆಗಲೇ ಆದ್ದ "ದಟ್ಟಣೆ ಜನಗಳು."

ಈ ಹಿಂದೆ ಹೇಳಿದಂತೆ, ಕನಕದಾಸರ ಕೃತಿಗಳಲ್ಲಿ ಕಾಣಬರುವ ಜಾನಪದ ಅಂಶಗಳನ್ನು ಕುರಿತು ವಿವೇಚಿಸಬಹುದು, ಅವರ ಅನೇಕ ಕೀರ್ತನೆಗಳು ಜಾನಪದ ಧಾಟಿಯಿಂದ, ಉತ್ತರ ಕರ್ನಾಟಕದ ನಡುಗನ್ನಡ ಭಾಷೆಯಿಂದೊಡಗೂಡಿ, ಆ ಮಣ್ಣಿನ ಕಂಪನ್ನು ಒಳಗೊಂಡಿದೆ. ಕನಕದಾಸರ ವಿಶಿಷ್ಟವೆ ದೇಸಿ (ದೇಸ್ಯ ಛಂದಸ್ಸು). ಅವರ 'ಮೋಹನತರಂಗಿಣಿ' ಅಂಥ ಒಂದು ಹಾಡುಗಬ್ಬ, ವರ್ಣಕ ಕಾವ್ಯ ಆದರೆ, ಸಮಾಜದ ಕೆಳವರ್ಗದ ನೋವನ್ನು ಪ್ರತಿನಿಧಿಸುವ 'ರಾಮಧಾನ್ಯ ಚರಿತೆ', ಶಿಳಿಗನ್ನಡದ ಭಾವಿಂನಿ

ಷಟ್ಪದಿಯಂ 'ನಳಚರಿತೆ', ಭಕ್ತಿಕಾವ್ಯಗಳಾದ 'ಹರಿಭಕ್ತಿಸಾರ', ಹಾಗೂ ಅನೇಕ ಕೀರ್ತನೆಗಳಲ್ಲಿ ದೇಸಿಯ ಜನಪದ ಅಭಿವ್ಯಕ್ತಿ ರಂಜಿಸುತ್ತದೆ. ಕನಕದಾಸರಲ್ಲಿ ಕಾಣುವ ಜನಪದ ಸಾಹಿತ್ಯ ಸೊಗಡುಂ ಬೇರೆ ಹರಿದಾಸರಲ್ಲಿ ನಾವು ಅಷ್ಟಾಗಿ ಕಾಣಲಾರೆವು. ಆಚಾರ್ಯ ಬಿ.ಎಂ.ಶ್ರೀಯವರು ಹೇಳುವಂತೆ "ಜನವಾಣಿ ಬೇರು ಕವಿವಾಣಿಯ ಹೂವು" ಎಂಬ ಮಾತಿಗೆ ಕನಕದಾಸರು ನಿದರ್ಶನರಾಗುತ್ತಾರೆ.

ಕನಕರದು ಬೇರೆ ಹರಿದಾಸರಂತೆ ಮಾಧ್ವ ಸಂಪ್ರದಾಯ ನಿಷ್ಠೆ ಮಾತ್ರ ಅಲ್ಲ : ಭಾಗವತ ಸಮನ್ವಯ ದೃಷ್ಟಿ, ಮಾನವೀಯ ದೃಷ್ಟಿ. ಅವರ ಮೊದಲ ಕೀರ್ತನೆಯಲ್ಲಿ ನಮಗೆ ಜಾನಪದ ಸೊಗಡು ಪರಿಚಯ ಆಗುವ ರೀತಿಯಾದರೂ ಹೇಗೆ :

ನಮ್ಮಮ್ಮ ಶಾರದೆ ಉಮಾಮಹೇಶ್ವರಿ
ನಿಮ್ಮೊಳಗಿಹನ್ಯಾರಮ್ಮಾ ॥ ಪ ॥

ಕಮ್ಮಗೋಲನ ವೈರಿಸುತನಾದ ಸೊಂಡಿಲ
ಹೆಮ್ಮೆಯ ಗಣನಾಥನೆ ॥ಅ.ಪ.॥

ಎಂದು ಸಾಗುವ ಕೀರ್ತನೆಯು ಕನ್ನಡ ಭಾಷೆ, ಬನಿಯಿಂದೊಡಗೂಡಿದೆ.

ರಾಶಿವಿದ್ಯೆಯ ಬಲ್ಲ ರಮಣೀಹಂಬಲನೊಲ್ಲ
ಭಾಷಿಗನಿವನ್ಯಾರಮ್ಮ

ಎಂಬಲ್ಲಿ ಗಣಪತಿಯ ಇಡೀ ಮಹತ್ವ ಒಕ್ಕೂಡಿಸಿರುವ ಅವರ ಜಾಣ್ಮೆ ಮೆಚ್ಚುವಂಥದೆ : 'ಭಾಷಿಗ'ನೆಂಬ ಒಂದೆ ಪದ ಗಣಪತಿಯ ಬಗ್ಗೆ ಬಳಸಿರುವುದು, ತುಂಬ ಸಾರ್ಥಕವೆನಿಸುತ್ತದೆ.

ಗುಂಡು ಮುಣುಗಿನ ಹಕ್ಕಿಯಂತೆ ಕಂಡ ಕಂಡ ನೀರ ಮುಳುಗಿ ।
ಮಂಡೆಶೂಲೆ ಬಾಹುದ್ಯಸ ಗತಿಯಕಾಣೆನೊ...
ಹೇಗಿದ್ದು ಹೇಗಾದೆಯೊ ಆತ್ಮ
ಯೋಗೀಶನಾನಂದಪುರದಲಿರುವುದ ಬಿಟ್ಟು ॥ಪ॥

ಬಸಿರಹಳ್ಳಿಗೆ ಬಂದು ಮಾಸನೂರಲಿನಿಂದು ।
ಗುಸುಗಾಡಿ ನುಡಿದು ನೆಲಬಟ್ಟೆ ಎಡಿದು ॥

ಎಂಬಲ್ಲಿ ಇರುವ ಜಾನಪದ ವರ್ಣನೆ

ಹೇಗೆ ನೀದಾಸನಾದೆ-ಹೇ ಪ್ರಾಣಿ ।
ಕುಣಿಕುಣಿದು ಮನದಣಿದು ಸಜ್ಜನಪದಕೆ ।
ಅಣಿಮಾದಿ ಅಷ್ಟಸಿದ್ಧಿಯ ಕೈಕೊಳ್ಳದಲೀ ॥

ಇದರಂತೆಯೆ,

ಬಯಲು ಆಲಯದೊಳಗೊ ಆಲಯದೊಳಗೆ ಬಯಲೊ ।
ಬಯಲು ಆಲಯವೆರಡು ನಯನದೊಳಗೊ ।
ನಯನ ಬುದ್ಧಿಯ ಒಳಗೊ ಬುದ್ಧಿ ನಯನದ ಒಳಗೊ ।
ನಯನ ಬುದ್ಧಿಗಳೆರಡು ನಿನ್ನೊಳಗೊ ಹರಿಯೆ ..
...ಕುಸುಮದೊಳು ಗಂಧವೊ ಗಂಧದೊಳು ಕುಸುಮವೊ ।
ಕುಸುಮ ಗಂಧಗಳೆರಡು ಘ್ರಾಣದೊಳಗೊ

ಎಂಬಲ್ಲಿ ಆಧ್ಯಾತ್ಮಿಕತೆ, ಹಾಗೂ ಜನಪದ ಅಭಿವ್ಯಕ್ತಿ ಮೇಳವಿಸುತ್ತವೆ. ಜನಪದದ ನಡಂ ನಡುವೆ ಸಂಸ್ಕೃತ ಬಳಕೆಯ ಪರಿಣತಿಯನ್ನೂ ಕನಕದಾಸರು ಬಿಟ್ಟಿಲ್ಲ. "ಏಕೋದೇವನ ದ್ವಿತೀಯಂ ಬ್ರಹ್ಮ ನೀನೆಂಬುದಕೇ ಏಕಾರ್ಣವದಲಿದ್ದ ವಟಪುತ್ರ ಹೊಣೆಯೊ" ಎನ್ನುವ ಅವರ ಧಾಟಿ ಅವರಂಥ ಭಕ್ತನಿಗೆ ಮಾತ್ರ ವಿಲಾಸಲಂ. ಇನ್ನೊಂದು ಕೃತಿಯ ಸಾಲು, ಕನಕರ ಅಭಿವ್ಯಕ್ತಿಗೆ ಸಾಕ್ಷಿ :

ದೇವಿನಮ್ಮ ದ್ಯಾವರುಬಂದರು ನೋಡಬನ್ನಿರೇ ॥ಪ॥
ಕೆಂಗಣ್ಣು ವಿಷಾನಾಗಿ ನಮ್ಮ ರಂಗ
ಗುಂಗಾಡಿ ಸೋಮನ ಕೊಂದಾನ್ಯಾ ॥
ಗುಂಗಾಡಿ ಸೋಮನ ಕೊಂದು ವೇದವನು ।
ಬಂಗಾರದೊಡಲನಿಗಿತ್ತಾನ್ಯಾ ॥
ದೊಡ್ಡ ಮಡುವಿನೊಳಗೆ ನಮರಂಗ
ಗುಡ್ಡವಹೊತ್ತು ಕೊಂಡು ನಿಂತಾನ್ಯಾ ॥
ಗುಡ್ಡವ ಹೊತ್ತುಕೊಂಡು ನಿಂತು ಸುಂದನು ।
ದುಡ್ಡವರನ್ನು ಮಾಡ್ಯಾನ್ಯಾ ॥

ಇಲ್ಲಿ ಜನಪದಗೀತೆಯ ಬೆಡಗಿನ ಅಶ್ವಧಾಟಿಯಲ್ಲಿ ಯಾವುದೆ ಆಯಾಸವಿಲ್ಲದೆ, ಅತ್ಯಂತ ಪರಿಣಾಮಕಾರಿಯಾದ ಜನಬಳಕೆ ಮಾತಲ್ಲೆ ದಶಾವತಾರ ವರ್ಣಿಸುತ್ತಾರೆ. ಅವರಿಗೆ 'ನಮರಂಗ' ತುಂಬ ಪರಿಚಿತ, ಆತ್ಮೀಯ ಆಚ್ಚಗನ್ನಡದ ಕಸುವು, ಜಾನಪದ ಶೈಲಿಯ ರಮಣೀಯತೆ-ಇಲ್ಲಿ ಪುರಾಣದ ಆಯಾಯ ಅವತಾರ ಪರಿಸರವನ್ನು ಜ್ವಲಂತವಾಗಿ ಪುನರ್ನಿರ್ಮಿಸುತ್ತದೆ.

ಹಾಗೆಯೆ ಕನಕದಾಸರು ತಮ್ಮನ್ನು ಕುರುಬನೆಂದು ಶ್ರೀಹರಿಯನ್ನು ಕುರಿಕಾಯುವ ಕುರುಬರ ಅಜ್ಜನೆಂದು ಕರೆದಿರುವ ಹಾಡು ಗಮನಾರ್ಹ.

ನಾವು ಕುರುಬರು ನಮ್ಮ ದೇವರೊ ಬೀರಯ್ಯ ॥ ಪ ॥
ಕಾವನಮ್ಮಜ್ಜ ನರಕುರಿಹಿಂಡುಗಳ ॥ ಅ.ಪ. ॥
ಅಷ್ಟಮದ ಮತ್ಸರಗಳೆಂಬ ಟಗರುಗಳು ।
ದೃಷ್ಟಿ ಜೀವಾತ್ಮನೆಂಬೊ ಆಡು ॥
ಸೃಷ್ಟಿ ಪ್ರಸಿದ್ಧವೆಂತೆಂಬಲವಾ ಹೋತಗಳು ।
ಕಟ್ಟಿ ಕೋಲಿನಲಿ ಇರುತಿರುವ ನಮ್ಮಜ್ಜ ।
ವೇದಶಾಸ್ತ್ರ ಪುರಾಣವೆಂತೆಂಬ ಶ್ವಾನಗಳು ।
ಕಾದಿದ್ದು ನಮ್ಮಜ್ಜ ಹಿಂಡಿನೊಳಗೆ ॥
ಹಾದಿಕಾಣದೆ ಕೂಗಿ ಬಾಯಾರಿ ಕಾಲೂರಗೆ
ಆದರಿಸಿ ಅಂಬಲಿಯನೆರೆವ ನಮ್ಮಜ್ಜ ॥ 2 ॥
ಅರಿಯೆಂಬ ಮರಿಗಳು ಹಿಂಡಿನೊಳಗೆ ಒಂದು ।
ಮಾರಿವ್ಯಾಘ್ರವೆಂತೆಂಬ ತೋಳ ಹೊಕ್ಕು ॥
ಕುರುಚ ಹಿಂಡುಗಾವದಲಿ ಕುರಿಯ ಮುರಿವುದ ಕಂಡು ।
ಅರಿತು ಅರಿಯದ ಹಾಗೆ ಇರುವ ನಮ್ಮಜ್ಜ ॥3॥

...ಹೀಗೆಯೇ ಮುಂದುವರಿದ ಈ ಕೃತಿ, ಕವಿಯುಗಕೆ ಕಾಗಿನೆಲೆಯಾದಿಕೇಶವ "ಗೌಡನಿವ" ಎಂದನ್ನುತ್ತದೆ. "ಇವನು ಶುದ್ಧ ಕುರುಬ ಕಣೋ" ಎಂದು ಈಗಲೂ ಹೇಳಿದರೆ "ಏನೂ ಅರಿಯದ ಮುಗುದ, ಒಳ್ಳೆಯಾತ"ನೆಂಬ ಅರ್ಥ ಬಳಕೆಯಲ್ಲಿದೆ. "ಕುರುಬರ ಬೋಣಿಗೆ" ಎಂದೂ ವ್ಯಾಪಾರ ಮೊದಲು ಮಾಡಿಸುವುದು ಕೆಲವೆಡೆ ಇರುವ ಸಂಪ್ರದಾಯ. ಇಲ್ಲಿ ಕುರುಬ-ಬರಿಯ ಜಾತಿವಾಚಕ ಅಲ್ಲ ಎಂಬುದು ಗಮನಿಸ ಬೇಕಾದ್ದು.

ದೇವರ ಬಂದಾವ ಬನ್ನಿರೋ
ಸ್ವಾಮಿ ನಮ್ಮಯ್ಯ ದೇವರ ಬಂದಾವ...
ದೇವ ದೇವರ ನಮ್ಮಯ್ಯ
ಹಾಡಿಗೆ ಮೊದಲು ನಮ್ಮಯ್ಯ
ಬಡ್ಡಿಗೆ ಮೊದಲು ನಮ್ಮಯ್ಯ...
ನಾಲೀಗಿ ಮ್ಯಾಲ ನಲಿದಾಡುತ ಬಾಯಪ್ಪ
ಕೋಗಿಲೆಯಸ್ವರ ಕೊಡೊಮಹಾದೇವಪ್ಪ...

ಎಂದು ಸಾಗುವ ಈ ಜನಪದ ಗೀತಕ್ಕೂ ಕನಕದಾಸರ ರಚನೆಗೂ ಸ್ವಲ್ಪ ಸಾಮ್ಯವಿದೆ. ಕನಕದಾಸರು ಸರಳ ಜನಪದ ಗೀತೆಯ ಧ್ವನಿಯನ್ನು ಅಷ್ಟೇ ಸಮರ್ಥವಾಗಿ ಬಳಸಿ ಕೊಂಡಿದ್ದಾರೆ.

ಕನಕದಾಸರಂತೆಯಲ್ಲದಿದ್ದರೂ, ಅವರ ಸಮಕಾಲೀನಸ್ಕಂಧವಾದ ದಾಸಶ್ರೇಷ್ಠ ಪುರಂದರದಾಸರಲ್ಲಿ, ಭಾಗವತ ಪ್ರಜ್ಞೆ-ಶ್ರೀಕೃಷ್ಣ ಭಕ್ತಿಯ ಜತೆ ಅಲ್ಲಲ್ಲಿ ಒಮ್ಮೊಮ್ಮೆ ಜನಪದ ಸಾಹಿತ್ಯ ಪ್ರಭಾವ ಕಾಣಬಹುದು. ಅದೇ ಸಮಯದಲ್ಲಿದ್ದ ವಾದಿರಾಜರ ಅನೇಕ ರಚನೆ ಜನಪದ ಮಟ್ಟಿನಲ್ಲೆ ಇದೆ. ವಾದಿರಾಜರು, ಸನ್ಯಾಸಿಗಳು ಹಾಗೂ ಹರಿದಾಸ ಸಂಪ್ರದಾಯದಭಿಮಾನಿಗಳು. ತಮ್ಮ ಪರಿಸರದ ಭಾಷೆ ಅವರು ಬಳಸಿರುವ ಧಾಟಿ, ಕೆಲವೆಡೆ ಉದಹರಿಸಬೇಕೆನ್ನಿಸುತ್ತದೆ :

ದಿಮ್ಮಿ ಸಾಲೆ ರಂಗ ದಿಮ್ಮಿ ಸಾಲೆ ॥ಪ॥

ದಿಮ್ಮಿಸಾಲೆನ್ನಿರೊ ಗೋಪಮಕ್ಕಳೆಲ್ಲ ನೆರೆದು
ಗೋಪಾಂಗನೇರ (ಮೇಲೆ) ಒಕ್ಕು ಧಕ್ಕ ಸೂಸುತ ॥ ಅ.ಪ. ॥

ಇದು ಹೋಳಿಯಹಾಡುವ ಬಣ್ಣನೆ ಹಾಗೂ ಒಂದು ಸಮೂಹ ಜನಪದಗೀತೆ.

ಸುವ್ವಿ ಸುವ್ವಿ ನಮ್ಮ ಶ್ರೀರಮಣನ ಸುವ್ವಿ
ಸುವ್ವಿ ಸುವ್ವಿ ನಮ್ಮ ಭೂರಮಣನ ಸುವ್ವಿ
ಸುವ್ವಿ ಎಂದು ಪಾಡಿ ಸಜ್ಜನರೆಲ್ಲ ಕೇಳಿ ॥ಪ॥

ವಾದಿರಾಜರಲ್ಲಿ ಕಂಡುಬರುವ "ಕೋಲು ಪದ" ಮಟ್ಟು ಅನಂತರ ೧೯ನೇ ಶತಮಾನದ ಪ್ರಸನ್ನವೆಂಕಟದಾಸರ "ಕೋಲು ಪದ"ದಲ್ಲೂ ಕಾಣಬರುತ್ತದೆ.

ಕೋಲು ಕೋಲೆನ್ನ ಕೋಲು
ಕೋಲು ಕೋಲೆನ್ನ ಕೋಲು
ಕೋಲು ಕೋಲೆನ್ನ ಕೋಲೆ
ಕೋಲು ಕೋಲೆನ್ನ ಕೋಲು
ಕೋಲು ಕೋಲೆನ್ನ ಕೋಲು
ಕೋಲು ಕೋಲೆನ್ನ ಕೋಲೆ... ॥ಪ॥

ಇದೇ ರೀತಿ ಪುರಂದರರ "ಬಂಡಬಂಡಕೆ ಹಾಡು", ಹಾಗೂ ಇನ್ನೊಂದು ಕೃತಿ ಸಾಲು ಗಮನಾರ್ಹ :

ಗೂಡು ಸಿಕ್ಕಲಿಲ್ಲಾ : ಗೂಡಿನ ಜಾಡು ತಿಳಿಯಲಿಲ್ಲಾ ॥ ಪ ।
ಜೋಡು ಹೆಂಡರು ಓಡೇ ಹೋದರು
ಗೋಡೆ ಬಿದ್ದು ಬಯಲಾಯಿತಲ್ಲಾ... ॥ಅ.ಪ.॥

ಸಂಸ್ಕೃತ ಅಶಕವಿಗಳಾದ ಶ್ರೀ ಜಗನ್ನಾಥದಾಸರು, ಕನ್ನಡದಲ್ಲಿ ಸಾಮಾನ್ಯರಿಗಾಗಿ ಸ್ಥೂಲವಾಗಿ ಅರ್ಥವಾಗುವಂತೆ "ತತ್ವ ಸುವ್ವಾಲಿ"ಗಳನ್ನು ತ್ರಿಪದಿ ಮಟ್ಟನಲ್ಲಿ ರಚಿಸಿದ್ದಾರೆ. ಇವುಗಳ ರಚನೆಯ ಮುಖ್ಯೋದ್ದೇಶ, ಮಧ್ವತತ್ವ ಜ್ಞಾನ ಪ್ರಸಾರವೆ ಆದರೂ, ಬಳಸಿರುವ ಮಾಧ್ಯಮ, ಜನಪದದ ಛಂದ, ಅನಂತರ ಕ್ರಿ.ಶ. ಹದಿನೇಳನೇ ಶತಕದಲ್ಲಿ ಬಾಗಲಕೋಟೆಯಿಂದಾಗಮಿಸಿದ ಪ್ರಸನ್ನ ವೆಂಕಟದಾಸರಲ್ಲಿ ಜಾನಪದ ಅಂಶ ತುಂಬ ದೊರೆಯಲು ಕಾರಣ, ಅವರ ಸರಳ ಶೈಲಿ, ಗ್ರಾಮೀಣ ಪರಿಸರ, ಅಲ್ಲಿನ (ಉತ್ತರ ಕರ್ನಾಟಕ) ಬಯಲು ಸೀಮೆಯ ಭಾಷೆ ಬಳಸಿಕೊಂಡಿರುವ ರೀತಿ. ಕಬೀರ, ಏಕನಾಥರಂಥ ಅನುಭಾವಿ ಸಂತರು ಪ್ರಸನ್ನ ವೆಂಕಟದಾಸರು. "...ಇವರ ಭಾಷೆ ಹೊಸದಾದರೂ ವಿವಿಧ ವೃತ್ತ, ಬಂಧ, ಅಲಂಕಾರ–ರಸವಳಗಳಿಂದ ಪಂಡಿತರನ್ನು ಬೆರಗುಗೊಳಿಸುವಷ್ಟು ಬಂಧುರವೂ ಬಿಗುವುಳ್ಳದ್ದೂ ಆಗಿದೆ." ಅವರ ಎಲ್ಲ ರಚನೆ ಗಳಲ್ಲೂ ಕನ್ನಡದ ಆಡುಭಾಷೆಯ ಬಳಕೆಯೇ ಹೆಚ್ಚು. ಇದಕ್ಕೆ ಒಂದು ಸಣ್ಣ ಉದಾಹರಣೆ :

ಹಲವು ಕೊರವಿಯರ ಕೂಡಿ ಶ್ರೀರಂಗದಿ ।  
ಬೆಲೆಯಿಲ್ಲದುಡಿಗೆ ತೊಡಿಗೆ ಇಟ್ಟು ಮುದದಿ ।  
ಇಳೆಯ ಜನರು ಮೋಹಿಸುವ ಪರಿ ಇಹಳು ।  
ಕೆಳದೇಶ ಗಡಿನಾಡಿ ಚಲುವೆ ಒಕ್ಕದಳು ॥

ರುಕುಮಿಣಿಗೆ ಒಲಿದು ಶ್ರೀಹರಿಪಾರಮ್ಮ ಪ್ರಶಂಸೆ ಮಾಡುಂತ್ತಾಳೆ,

ಮಂಜಲಾಗವಿಯ ಸೀರೆ ನಿಂತೆ ಗೆದರಟ್ಟು  
ಕಲಜಾಡೆ ಬಿಚ್ಚೋರೆ ದುರುಬೀನ ಕಟ್ಟು ॥  
ಪಂಜಿನೋಲಯ ಮುಗುತಿಬಾಲೆ ಇಟ್ಟುಗುಲ  
ಗಂಜಿ ಹೊಂದಾಳೆ ಸರಗಳ ಅಳವಟ್ಟು ॥

ವೇಷ ವರ್ಣನೆ ಅಷ್ಟೆ ಸಹಜವಾಗಿದೆ.

ಸಾಹಿತ್ಯಕ್ಕೂ ಬದುಕಿಗೂ ಶರೀರ–ಉಸಿರು ಇರುವ ನಂಟು. ಬದುಕನ್ನು ಬಿಟ್ಟು ಸಾಹಿತ್ಯ ಹೇಗಿರದೊ ಹಾಗೇ ಸಾಹಿತ್ಯವನ್ನು ಬಿಟ್ಟು ಬದುಕೂ ಇರಲಾರದೆನ್ನಲು ಅನಾದಿಂಕರ ವಾಗ್ಗೂ ಪದ ಅಭಿವ್ಯಕ್ತಿಯಾದ ಜನಪದ ಸಾಹಿತ್ಯವೆ ನಿದರ್ಶನ. ಹರಿ ದಾಸರು ಈ ಸಾಹಿತ್ಯ ಪ್ರಕಾರವನ್ನು ಬಳಸಿಕೊಳ್ಳಲು ಪ್ರಮುಖ ಕಾರಣ : ತಾವು ನುಡಿದುದು ಶ್ರೀಸಾಮಾನ್ಯರಿಗೂ ಮುಟ್ಟುವುದೆಂಬ ಆಶಯ, ಹಂಬಲ ; ಹೇಳುವುದು ಜಟಿಲ ತತ್ವ, ನಿಷ್ಠೆ ಕಂಠಿತಾದರೂ ಬಳಸುವ ಮಾಧ್ಯಮ ಆಡುನುಡಿಯಾದ್ದರಿಂದ ಕಿಳಿಯಲು ಸುಲಭ ಗ್ರಾಹ್ಯವೆಂದೆನಿಸಿಕೊಂಡಾತು. ಇದರಿಂದ ದಾಸರ ಧ್ಯೇಯವೂ ಸಿದ್ಧಿಸಿ ದಂತಾಯಿತು, ಪರಿಶುದ್ಧ ಬದುಕಿಗೂ ಬೆಲೆ–ನೆಲೆ ನೀಡಿದಂತಾಯಿತು.

# ಹರಿದಾಸ ಆಂದೋಲನ ಮತ್ತು ಕರ್ಣಾಟಕ ಸಂಗೀತ

ಸಂಗೀತ ಎಲ್ಲರಿಗೂ ಬೇಕಾದ್ದೆ. ಅದನ್ನು ಬೇಡವೆಂದು ಮೂಗು ಮುರಿದವರನ್ನು ಅರಸಿಕರೆಂದಾರು. ಅಳುವ ಮಕ್ಕಳನ್ನು ಸುಮ್ಮನಿರಿಸಲು ಹಾಡುವ ಲಾಲಿ ಜೋಗುಳ ಬೆಳಂದಿಗಳ ರಾತ್ರಿಯಲ್ಲಿ ಕೇಳುವ ಗಾನಸಂಪೆ, 'ಮದುವೆ-ಗೋಷ್ಠಿ'ಗಳಲ್ಲಿ ಕಳೆಕಟ್ಟುವುದು ಸಂಗೀತದಿಂದಲೇ. 'ಅರಸುಗಳಿಗಿದು ವೀರ' ಎಂದು ಕುಮಾರವ್ಯಾಸ ಕವಿ ತಿಳಿಸುವಂತೆ ರಣರಂಗದ ಹುರಿಯಾಳುಗಳನ್ನು ಸ್ಫೂರ್ತಿಗೊಳಿಸಲು ಸಂಗೀತ ಸಾಧಕ ಆಗಬಲ್ಲದು (ಇದನ್ನೆ ಇಂಗ್ಲಿಷಿನಲ್ಲಿ Ballads ಎನ್ನುತ್ತಾರೆ-ರಣಗೀತೆ) ವಿವೇಚನೆಯುಳ್ಳ ಸಾಮಾಜಿಕ ಪ್ರಾಣಿಯಾದ ಮನುಷ್ಯನನ್ನು ಬುದ್ಧಿ ಜೀವಿಯೆಂದು ಕರೆವಲ್ಲಿ ಸಂಗೀತವೂ ಒಂದು ವಿಶಿಷ್ಟ ಪಾತ್ರವಹಿಸುತ್ತದೆನ್ನಬಹುದು. ಜೀವನಕ್ಕೆ ಇಷ್ಟೊಂದು ಹೊಂದಿಕೊಂಡಿರುವುದರಿಂದಲೆ ಸಂಗೀತವನ್ನು ದೇವತಾ ವಿದ್ಯೆ ಎನ್ನುವುದುಂಟು. ಸಂಗೀತವನ್ನು ''ಭಾವದ ಭಾಷೆ'' ಎನ್ನುತ್ತಾರೆ. ಭಾಷೆಯ ಮಾಧ್ಯಮವನ್ನು ದಾಟಿ, ಆದರ ಭಾವದ ಮಜಲನ್ನು ಮನಕ್ಕೆ ಮುಟ್ಟಿಸುವ ಸೇತು ಸಂಗೀತವಾಗುವುದರಿಂದ ಒಂದು ರೀತಿಯಲ್ಲಿ ಸಂಗೀತಕ್ಕೆ ಯಾವುದೇ ದೇಶ, ಕಾಲಗಳ ಪಟ್ಟಿಲ್ಲ. ಮತಗಳ ನಿಯಮವೂ ಬೇಕಿಲ್ಲ. ಮನಸ್ಸಿಗೆ ಹಿತವೆನಿಸಿದರೆ ಸಾಕು, ನೆಮ್ಮದಿ ನೀಡಿದರೆ, ಸಾಂತ್ವನ ದೊರೆತರೆ ಸಂಗೀತದ ಗುರಿ ಸಾಧಿಸಿದಂತೆ. ಸಂಗೀತ ಅಂತೆಯೆ ದೇವಭಾಷೆ. ದೇವ ಭಾಷೆಯೆನ್ನಲು ಕಾರಣ, ಶಾಸ್ತ್ರ ಗ್ರಂಥಗಳಲ್ಲಿ ಭಗವಂತ ನನ್ನು ''ಸಾಮಗಾನಪ್ರಿಯ'', ಸಂಗೀತಲೋಲ, ಗಾನಲೋಲನೆಂದೆಲ್ಲ ಹೊಗಳಿದವು. ಪುರಾಣಗಳ ಪ್ರಸಂಗಗಳಲ್ಲಿಯಾದರೋ ಭಗವಂತನ ಸಭೆಯನ್ನು ಕಿನ್ನರ-ಗಾಂಧರ್ವ ಗಾಯನ, ತುಂಬುರು-ನಾರದರ ಗಾಯನ, ರಂಭೆ, ಊರ್ವಶಿ, ಮೊದಲಾದ ಅಪ್ಸರೆಯರ ನರ್ತನ, ನಂದಿ ಭೃಂಗಿಯರ ಗಾನ-ಇವುಗಳಿಂದ ಶೋಭಾಯಮಾನ ಮಾಡಿದವು. ಸ್ವಯಂ ಬ್ರಹ್ಮನೇ ವೇದಗಳನ್ನೊರೆದು-ಸಾಮವೇದದಲ್ಲಿ ಸಂಗೀತ ತಂದರೆ, ಬ್ರಹ್ಮನ ರಾಣಿ ಸರಸ್ವತಿ, ಗಾನ ಸರಸ್ವತಿ, ನೃತ್ಯ ಸರಸ್ವತಿ ಕೂಡ, ಕವಿಗಳಿಗೆ ಕವಿಯಾದ ಗಣಪತಿಯನ್ನು ಗಾನಾಯಂತ್ರಾಯನಮಃ, ಗಾನಪ್ರಣಯವತೇನಮಃ ಗಾನಧ್ಯಾತ್ರೇನಮಃ, ಗಾನಬಂಧವೇ ನಮಃ, ಗಾನಸಂಹೃದೇ ನಮಃ ಎಂದೆಲ್ಲ ಸ್ತುತಿಸುವುದಿದೆ. ಶ್ರೀರಾಮ ಭಕ್ತನಾದ ಹನುಮಂತ ಸಂಗೀತ ಶಾಸ್ತ್ರಕ್ಕೇ ''ಗುಂಡ ಕ್ರಿಯಾ'' ರಾಗ ನೀಡಿದ ಧೀಮಂತ. ಯಾಜ್ಞ ವಲ್ಕ್ಯ ತುಂಬುರು ನಾರದರೆಲ್ಲ ಸಂಗೀತದಿಂದ ಪರಮಾರ್ಥದ ಸಾಧನೆ ಸುಲಭ ಎಂದರೆ, ಶುಕಮುನಿಗಳು, ಸಂಕೀರ್ತನ ಪದ್ಧತಿಗೆ ಆದ್ಯ ಪ್ರವರ್ತಕರಾದರು.

ಪರಮಾತ್ಮನನ್ನು ಜ್ಞಾನಗಮ್ಯನೆಂದು ವೇದಾದಿ ಗ್ರಂಥಗಳು ಸಾರುತ್ತವೆ. ಆಂದರೆ ಶಾಸ್ತ್ರ ವಿಷಯಕವಾದ ಜ್ಞಾನದ ತಿಳಿವು ಇರದೆ ಭಗವಂತನನ್ನು ಅರಿಯಲಾಗುತ್ತಿಲ್ಲ. ಈ

ಶಾಸ್ತ್ರ ಯಾವ ಭಾಷೆಯಲ್ಲಾದರೂ ಇರಲಿ. ಭಾಷೆಗಿಂತ ವಿಚಾರ ಮುಖ್ಯ. ಭಾಷೆಯನ್ನು ಹಿಡಿದಿಡುವುದೇ ವ್ಯಾಕರಣದ ಕಾರ್ಯ. ಆದರೆ ಭಾಷೆಯನ್ನು ತಲುಪಿಸುವ ಭಾವ ವಿರುತ್ತವಲ್ಲ, ಆ ಭಾವದ ಭಾಷೆಯನ್ನೆ ಸಂಗೀತವೆಂದಿರುವುದು; ತತ್ವಜ್ಞಾನ ಬುದ್ಧಿವಂತರಿಗೆ ನಿಲುಕುವ ನುಡಿ. (ಶರೀರದಲ್ಲಿ ಮನೋಮಯ, ಜ್ಞಾನಮಯ, ಆನಂದಮಯ ಕೋಶಗಳಿವೆಯೆನ್ನುತ್ತಾರೆ ವೇದಾಂತಿಗಳು. ಮನಸ್ಸು, ಬುದ್ಧಿ, ಅಹಂಕಾರ, ಮೂರೂ ಸೇರಿ ಮನೋಮಯ ಕೋಶ, ಚಿತ್ತ-ಆದಕ್ಕೆ ನಿಲುಕುವ ಮತಿ-ಸ್ಮರಣೆ-ಇದು ಜ್ಞಾನಮಯ ಹಾಗೂ ಇದರಾಚೆ ತಲುಪುವ ಭಗವದನುಭವ ಆದೆ ಆನಂದಮಯ. ಸಂಗೀತಕ್ಕೆ ಸ್ಫೂರ್ತಿಭಾವವೇ ಮೂಲ. ಇಂಥ ಗಾಯನ, ನಾದ ಮೂಲವಾಗಿದ್ದು, ತಾನಾಗಿಯೆ ತನ್ನ ವಿಕಸನ ಕಂಡುಕೊಳ್ಳಬಲ್ಲದು. ಈ ವಿಕಸನಕ್ಕೆ ಭಾಷೆ ಅಗತ್ಯವಿಲ್ಲ, ಆದರ ಧ್ವನಿ ಮಾಧ್ಯಮದ ಮೂಲಕ ಭಾವ ಪ್ರಕಾಶವಾಗುವುದನ್ನು ಗ್ರಹಿಸಲು ಬುದ್ಧಿಗೆ ಸಂಸ್ಕಾರ ಅಗತ್ಯ. ಇದು ಸಾಮಾನ್ಯ ಗ್ರಾಹ್ಯವಲ್ಲ ಸಾಧನೆಯಿಂದ ಸಾಧ್ಯ. ಭಾರತೀಯರ ಧಮನಿಗಳಲ್ಲಿ ರಕ್ತದೊಂದಿಗೆ ಮಿಳಿತ ಆಗಿ ಹರಿಯುತ್ತಿರುವ ದ್ರವ್ಯ-ಧರ್ಮ. ಸಂಗೀತ-ಧರ್ಮಕ್ಕೆ ಸಂಗಾತಿ. ಮಿತ್ರನಾಗಿಯೆ ಜೊತೆಗೂಡಿ ಬಂದಿದೆ ಹಾಗೂ ಇದರಿಂದ ಮತ-ಧರ್ಮ ಪ್ರಸಾರ ಸುಲಭವೆನಿಸಿದೆ.

ಭಾರತದಲ್ಲಿ ಸಂಗೀತ ತುಂಬ ಪ್ರಾಚೀನ ಆದ ಕಲೆ. ಇತಿಹಾಸ ಯುಗದ ಆರಂಭದಲ್ಲಿ ಇದರ ಸುಳುಹು ಕಾಣುತ್ತದೆಂಬುದು ವಿದ್ವಾಂಸರ ಮತ. ವೈದಿಕ ವಾಙ್ಮಯವನ್ನು ಸ್ಥಿರಪಡಿಸಲೋಸುಗ ಅವುಗಳಿಗೆ ಸ್ವರದ ಕಟ್ಟುಕಟ್ಟಳೆ ವಿಧಿಸಿ, ಸ್ವರಾಘಾತದಲ್ಲಿ ತಪ್ಪೆಸಗುವ ಯಜಮಾನನ ಹತ್ಯೆಯ ದಂಡ ವಿಧಿಸಿದರು ! ಋಗ್ವೇದದ 'ಋಕ್'ಗಳಲ್ಲಿ ವ್ಯಕ್ತವಾದ ಸಂಪ್ರದಾಯದ ಬಲದಿಂದ, ಸಾಮಗಾನದ ಹಿರಿಮೆ ನಿಂತಿತು. ಸಂಗೀತವೂ ಗಂಧರ್ವ ವೇದವೆಂದೇ ಪರಿಗ್ರಹೀತವಾಯಿತು. ಆ ಕಾಲದ ವಿವರ (ಸುಮಾರು ೪೦೦೦ ವರ್ಷದ ಹಿಂದಿನ ಮಾತು) ಇನ್ನೂ ಅಸ್ಪಷ್ಟ. ಬಹು ಹಿಂದೆ, ಯಜ್ಞಯಾಗಾದಿಗಳನ್ನು ನೆರವೇರಿಸುವಾಗ ಹವಿರ್ಭಾಗವನ್ನು ಸ್ವೀಕರಿಸಲು ಆಯಾಯ ಮಂತ್ರದಿಂದ ಆದಕ್ಕೆ ಸಂಬಂಧಿಸಿದ ದೇವತೆಯನ್ನು ಆಹ್ವಾನಿಸುವಾಗ ಋಕ್ಕುಗಳನ್ನು, ಸಾಮಮಂತ್ರಗಳನ್ನೂ ಹಾಡುತ್ತಿದ್ದುದು ಪದ್ಧತಿಯಾಗಿತ್ತು.

ಹೋತಾರನು ಋಕ್ಕುಗಳನ್ನು ಸ್ವರಬದ್ಧವಾಗಿ ಪಠಿಸಿದರೆ, ಉದ್ಗಾತೃವು (ಹೋಮ ಮಾಡುವಾತ) ಸಂಗೀತದ ಸಂಸ್ಕರಣದಿಂದ ಅವುಗಳನ್ನು ಸಾಮವನ್ನಾಗಿ ಮಾರ್ಪಡಿಸಿ ಹಾಡುತ್ತಿದ್ದ. ಋಕ್ಕು ವಿಷಯವನ್ನು ಒದಗಿಸಿದರೆ ಸಾಮ ಅದನ್ನು ಪ್ರಕಟಿಸುವ ರೀತಿಯನ್ನು ಒದಗಿಸುತ್ತದೆ. ಒಟ್ಟಾರೆ ಸಾಮವೇದ, ಸಾಮಗಾನ, ಇವು ಸಂಗೀತಕ್ಕೆ ಆಕರ. ಹರಿದಾಸರಲ್ಲಿ ಅಗ್ರಗಣ್ಯರೆನಿಸಿರುವ ಪುರಂದರದಾಸರ ಕೃತಿಗಳಲ್ಲಿ ಹಾಸುಹೊಕ್ಕಾಗಿರುವ ತತ್ವಗಳಿಗೂ ಸಂಗೀತದ ಪ್ರಭಾವಕ್ಕೂ ಋಕ್ ಸಾಮವೇದ ಮಂತ್ರಗಳ ಸಮನ್ವಯವಿದೆ. ಇದರಿಂದ, ಅವರ ಕೃತಿಗಳಿಗೆ ಪುರಂದರೋಪನಿಷತ್ತೆಂಬ ಹೆಸರು ಬಂದಿತೆನ್ನಬಹುದು. ವಿಶ್ವದ ಸಂಗೀತ ಇತಿಹಾಸವನ್ನು ಗಮನಿಸುವಾಗ, ಎಲ್ಲ

ಜನಾಂಗ-ಬುಡಕಟ್ಟಿನವರೂ ಒಂದಿಲ್ಲೊಂದು ರೀತಿಯಲ್ಲಿ ದೇವತೆಗಳ ಆರಾಧನೆ, ಪೂಜೆ ಹಾಗೂ ಮತ ಪ್ರಸಾರದ ಸಾಧನ-ಮಾಧ್ಯಮವಾಗಿ ಸಂಗೀತವನ್ನು ಬಳಸಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ, ಸಂಗೀತದಲ್ಲಿರುವ ನಾದಮಾಧುರ್ಯ, ಹಾಗೂ ಮನಸ್ಸನ್ನು ರಂಜಿಸುವ ಗುಣ.

## ಸಂಗೀತ ಪ್ರಕಾರಗಳು :

ಭಾರತೀಯ ಸಂಗೀತ ಎರಡು ಮುಖ್ಯ ಪ್ರಕಾರಗಳಲ್ಲಿ ಪ್ರಸಿದ್ಧ ಆಗಿದೆ. ಉತ್ತರಾದಿ (ಹಿಂದೂಸ್ಥಾನಿ) ಹಾಗೂ ದಕ್ಷಿಣಾದಿ (—ಕರ್ನಾಟಕ ಸಂಗೀತ).

ಸಂಗೀತ ಪರಿಭಾಷೆಯಲ್ಲಿ ಧಾತು ಎಂದರೆ, ನಾದಮಯ ಸಂಗೀತ, "ಮಾತು" ಎಂದರೆ ಸಾಹಿತ್ಯವೆಂದೂ ವಿದ್ವಾಂಸರು ಅರ್ಥಮಾಡುತ್ತಾರೆ. ಈ ಮೊದಲೆ ಹೇಳಿರು ವಂತೆ, ಇವೆರಡರ ಮೇಳವಿಸುವಿಕೆ ಕಂಡುಬರುವುದು ಋಕ್-ಸಾಮಮಂತ್ರಗಳಲ್ಲಿ, ಇದೇ ವೇದಗಾಯನ ಇಂದೂ ದೇವಾಲಯಗಳಲ್ಲಿ ನಡೆದು ಬಂದಿರುವ "ಸಂಗೀತಮಯ ಧಾರೆಯು" ಎಂಬ ಪದ್ಧತಿ. ವೇದಗಾಯನದಲ್ಲಿ ಉದಾತ್ತ (ಏರು) ಅನುದಾತ್ತ (ಇಳಿಧ್ವನಿ) ಸ್ವರಿತ (ಸಮಧ್ವನಿ) ಹೀಗೆ ಉಚ್ಚಾರಣೆಯ ಸೂಚನೆಗಳುಂಟು. ರಾಮಾಯಣ, ಭಾರತ, ಉಪನಿಷತ್ತುಗಳಲ್ಲಿ ಸಂಗೀತದ ಸ್ವರೂಪ ವಿಶದವಿಲ್ಲ. ವೇದ ಕಾಲದ ಕೆಲವು ವಾದ್ಯಗಳನ್ನು ವೇದ ಸಾಹಿತ್ಯವೆ ಹೆಸರಿಸಿದರೆ, ಹಾಡು, ನಾಟ್ಯ, ನೃತ್ಯ ಒಟ್ಟಿಗೇ ಬಳಕೆಯಾಗುತ್ತಿದ್ದುದೆಂದು ರಾಮಾಯಣಾದಿ ಗ್ರಂಥ ಶಿಸಂತ್ತವೆ. ಅಲ್ಲಿಂದೀಚೆಗೆ ಬಂದಿರುವ ಸಂಗೀತ ಗ್ರಂಥಗಳ ಪ್ರಕಾರ ಭಾರತೀಯ ಸಂಗೀತ ಬೆಳವಣಿಗೆ ಹೀಗೆ : ಆರ್ಚಿಕ-ಏಕಸ್ವರ, ಗಾಥಿಕ-ಎರಡುಸ್ವರ, ಸಾಯಿಕ-ಮೂರುಸ್ವರ, ಸ್ವರಾಂತರ-ನಾಲ್ಕು ಸ್ವರ, ಔಡವ-ಪಂಚಸ್ವರ, ಷಾಡವ-ಆರುಸ್ವರ, ಸಂಪೂರ್ಣ-ಸಪ್ತಸ್ವರ ಪ್ರಯೋಗ.

ಹೀಗೆ ಕಾಲದಿಂದ ಕಾಲಕ್ಕೆ ಭಾರತೀಯ ಸಂಗೀತ ಹೇಗೆ ಬೆಳೆದು ರೂಪುಗೊಂಡಿ ತೆಂದು ನಮಗೆ ತಿಳಿಯಬೇಕಾದರೆ ಸಂಗೀತ ಗ್ರಂಥಗಳನ್ನೇ ಆಶ್ರಯಿಸಬೇಕು.

ಹರಿದಾಸ ಆಂದೋಲನದ ಮೇಲೆ ಸಂಗೀತ ಪ್ರಭಾವ ಗುರುತಿಸುವ ದೃಷ್ಟಿಯಿಂದ ಭಾರತೀಯ ಸಂಗೀತದ ಇತಿಹಾಸವನ್ನು ಮೂರು ಕಾಲಗಳಲ್ಲಿ ವರ್ಗೀಕರಿಸಬಹುದು :

| | | |
|---|---|---|
| ಪ್ರಾಚೀನ ಕಾಲ | : | ಮೊದಲಿಂದ ಕ್ರಿ.ಶ. ೭ನೇ ಶತಮಾನದವರೆಗೆ |
| ಮಧ್ಯಕಾಲ | : | ಪುರಂದರದಾಸರವರೆಗೆ (ಕ್ರಿ.ಶ. ೭ನೇ ಶತಮಾನದಿಂದ ಕ್ರಿ. ಶ. ೧೫೬೪ರ ವರೆಗೆ) |
| ಆಧುನಿಕ | : | ಪುರಂದರದಾಸರ ಅನಂತರದ್ದು (ತ್ಯಾಗರಾಜರು, ಪುರಂದರರ ನಂತರ ದಾಸ ಸಾಹಿತ್ಯದ ಕಾಲ-ತ್ಯಾಗರಾಜರ ಅನಂತರದ ಕಾಲ.) |

ಭಾರತೀಯ ಸಂಗೀತ, ನಾಟ್ಯ ಎರಡನ್ನೂ ವಿವರಿಸುವ ಭರತನ ನಾಟ್ಯಶಾಸ್ತ್ರವೇ ನಮಗೆ ಮೊದಲ ಆಧಾರ. ಇಲ್ಲಿ ಗಂಧರ್ವಗಾನ ಪ್ರಸ್ತಾಪಿಸಿಟ್ಟಿ, ಮನುಷ್ಯ ಸಾಧ್ಯವಾದ

ಗಾನದ ಪ್ರಸ್ತಾಪ ಬಂದಿದೆ. ಭರತನಿಗಿಂತ ಹೆಚ್ಚು ಸ್ಪಷ್ಟವಾದ ಸಂಗೀತ ಗ್ರಂಥಕಾರ "ಬೃಹದ್ದೇಶಿ" ಗ್ರಂಥದ ಕರ್ತೃ ಮತಂಗ. 'ಮತಂಗ ಹಂಪೆಗೆ ಸೇರಿದವನು. ಅಚ್ಚ ಕನ್ನಡಿಗ. ಸುಮಾರು ೪-೭ರ ಶತಮಾನಕ್ಕೆ ಸೇರಿರಬಹುದೆಂದು ಸಂಗೀತ ಇತಿಹಾಸಕಾರರ ಊಹೆ. ಬೃಹದ್ದೇಶಿ ಗ್ರಂಥದಲ್ಲಿ ದಕ್ಷಿಣ ಭಾರತದ ಸಂಗೀತವನ್ನು ವಸ್ತುವಾಗಿ ಗ್ರಹಿಸಿದ್ದಾರೆ. ದೇಶಿ ಎಂದರೆ ದೇಶಗಳಲ್ಲಿ ಸ್ಥಳೀಯವಾಗಿ ಜನರ ನಡುವೆ ಪ್ರಚಲಿತ ಆಗಿರುವ ಸಂಗೀತವೆಂದರ್ಥ. ಕಿನ್ನರಗಾನವಲ್ಲ. ಆ ಕಾಲ ದಲ್ಲಿಯೂ ಸುಸಂಸ್ಕೃತ ಕನ್ನಡಿಗರನೇಕರು ಸಂಗೀತ ಕಲೆಗೆ ಮನಸೋತಿದ್ದು, ಅಭ್ಯಸಿಸು ತ್ತಿದ್ದರು ಎಂಬುದು ಖುಷಿಪಡುವ ಮಾತು. ಭರತಮುನಿ ಹೇಳಿರುವ ಜಾತಿಗಳ ಬದಲು "ರಾಗ" ಎಂಬ ಪ್ರಸ್ತಾಪ ಮಾಡಿದವನೆ ಮತಂಗ. ಆರೋಹಣ-ಅವರೋಹಣ ಕ್ರಮದಲ್ಲಿ ಮೇಳಯಿಸುವ ಸ್ವರಗಳನ್ನೂ ರಾಗವೆಂದು ಕರೆದ ಮತಂಗ. ರಾಗಗಳನ್ನೂ ಶುದ್ಧ ಛಾಯಾಲಗ, ಸಂಕೀರ್ಣವೆಂದು ವಿಭಾಗಿಸಿ, ಶ್ರುತಿ, ಸ್ವರ, ವರ್ಣ, ಅಲಂಕಾರ ಇತ್ಯಾದಿ ವಿವರ ನಿರೂಪಿಸುತ್ತಾನೆ. ಸಂಗೀತ ವಾದ್ಯಗಳ ಬಗ್ಗೆಯೂ ವಿವರವಿದೆ. ಇದೇ ಇಂದಿನ ರಾಗ ಪದ್ಧತಿಗೆ ಬುನಾದಿ ಎಂದೂ ಹೇಳಬಹುದು.

ಈ ವೇಳೆಗಾಗಲೆ ನಮ್ಮ ಸಂಗೀತದಲ್ಲಿ ಮಾರ್ಗ ದೇಶೀ ಪದ್ಧತಿಗಳ ಗೊಂದಲ ವೆದ್ದಿತ್ತು. ವಿಧಿಸಿದ ಕಟ್ಟುಕಟ್ಟಳೆಗೆ ಚಾಚೂತಪ್ಪದುದು ಮಾರ್ಗ ಸಂಗೀತ, ವೇದ ಸಾಹಿತ್ಯ ಅದಕ್ಕೆ ನಿದರ್ಶನ. ಬಿಗಿಯಾದ ಪದ್ಧತಿ. ಹೀಗಾದರೆ ದಿನ ನಿತ್ಯದ ಬದುಕಲ್ಲಿ ಸಂಗೀತ ವೈದಿಕವ ಆಗಬೇಕೆ? ಲಕ್ಷಣವೇನೂ ಸಂಗೀತದಲ್ಲಿ ಮುಖ್ಯ. ಆದರ ಲಕ್ಷ್ಯವೊ? ಇದರಿಂದ ದೇಶದ ಜನತೆ ಕಂಡುಕೊಂಡ ಸುಖಿಜೀವಂ ಲೌಕಿಕ ಸಂಗೀತ ಬಯಸಿದ್ದೆ, ದೇಶೀ ಪದ್ಧತಿ ದಾಂಗುಡಿಯಿಡಲು ಕಾರಣ. ಇಲ್ಲಿ ನೃತ್ಯ-ವಾದ್ಯ, ಶಾರೀರ ಎಲ್ಲ ಸೇಳವಿಸಿದವು. ದೇಶೀ ಸಂಗೀತವೆನಿಸಿಕೊಂಡು ಪ್ರಖ್ಯಾತವಾಯಿತು. ಹೀಗೆ ಜನ ರಂಜನೆಯ ಬಳಕೆಗಾಗಿ ಸಂಗೀತ ಬಂದು ಶತಮಾನಗಟ್ಟಲೆ ಪ್ರಯೋಗಗಳು ನಡೆದ ನಂತರವೆ ಪುರಾಣ ಗ್ರಂಥಗಳು ಬಂದದ್ದು ಎಂಬುದು ವಿದ್ವಾಂಸರ ಅಭಿಮತ. ಲೌಕಿಕ, ನಾಗೂ ಕವಿಗಳ ಕಾವ್ಯ ಸಂಗೀತ ಬಳಕೆಗೆ ಬಂದಾಗಲೇ ವಾಗ್ಗೇಯಕಾರರು ಬಂದರು ವಾಕ್+ಗೇಯ=ವಾಗ್ಗೇಯ.)

ವಾಗ್ಗೇಯಕಾರರೆಂದರೆ, ಸಂಗೀತದ ಪರಿಭಾಷೆಗೆ (ಧಾತು) ಮಾತನ್ನು (ಸಾಹಿತ್ಯ) ಳವಡಿಸುವಂಥವರು ಎಂದರ್ಥ. ಸಂಗೀತಶಾಸ್ತ್ರ ಆಗಿ ಬೆಳೆದು, ಪ್ರಮಾಣ ಗ್ರಂಥಗಳೂ ರಿಯಾಗಿ ಸಂಗೀತ ವಿಕಸನ, ಸ್ವರೂಪ ನಿರ್ಧರಿಸುತ್ತ ಬೆಳೆದಂತೆ, ಅದರ ಮಧುರ ರೂಪಣೆಗಾಗಿ ಕೃತಿಗಳನೇಕ ಸಿದ್ಧ ಆದವು. ಇಲ್ಲಿ ಮೂಡಿ ಬಂದದ್ದೆ ಲಕ್ಷಣ-ಲಕ್ಷ್ಯ ಭಾಗ. ಇದನ್ನೂ ಸಂಗೀತದಲ್ಲಿ ಶಿಳಿಸುವ ಪ್ರವೃತ್ತಿ ಭಾರತೀಯರ ವೈಶಿಷ್ಟ್ಯ. ಂದು ರಾಗದ ಸ್ವರ-ಸಾಮಾನ್ಯ-ಸಂಚಾರ-ವಿಶೇಷ ಸಂಚಾರಗಳನ್ನು ವಿವರಿಸಲು ಆದೇ ಗದಲ್ಲಿ ಆಗಮಸಂಚಾರಿಗಳಿಗೆ ಅಳವಡಿಸಿ-ಗೀತೆಗಳನ್ನು ರಚಿಸಿದರು. ಇದನ್ನೆ ಸಂಗೀತ ರರು 'ಲಕ್ಷಣಗೀತೆ'ಗಳೆನ್ನುತ್ತಾರೆ.

ಕ್ರಿ. ಶ. ೬-೧೧ನೇ ಶತಕಗಳಲ್ಲಿ ನಾರದನ 'ಸಂಗೀತ ಮಕರಂದ' ಹಾಗೂ ಜಯದೇವ ಕವಿಯ-ಅಷ್ಟಪದಿ-"ಗೀತಗೋವಿಂದ" ಬಂದದ್ದು ಸಂಗೀತಶಾಸ್ತ್ರ ಬೆಳವಿಗೆ ಪ್ರೋತ್ಸಾಹ ಆಯಿತು. ಕೃಷ್ಣಭಕ್ತಿಯ ಆಂದೋಲನದ ಎಳೆಗಳನ್ನು ಗೀತಗೋವಿಂದದ ಅಷ್ಟಪದಿಗಳಲ್ಲಿ ಕಾಣಬಹುದು. ಕ್ರಿ.ಶ. ೧೩ನೇ ಶತಮಾನದಲ್ಲಿ ಬಂದ ಸಂಗೀತ ಗ್ರಂಥ ಕಾರನೆಂದರೆ ಶಾರ್ಙ್ಗದೇವ (ಸಾರಂಗದೇವನೆಂದೂ ಕರೆಯುತ್ತಾರೆ) ಹಾಗೂ ಅವನ ಪ್ರಸಿದ್ಧ ಪ್ರಮಾಣ ಗ್ರಂಥ ಸಂಗೀತ ರತ್ನಾಕರ-ಸಂಗೀತದ ಇತಿಹಾಸದಲ್ಲೇ ಒಂದು ಸ್ಥಿರ ಹೆಸರುಗಳಿಸಿರುವಂಥದು. ಈತ ತನ್ನ ಗ್ರಂಥದಲ್ಲಿ ಹೆಸರಿಸಿರುವ ಭರತ, ಕಾಶ್ಯಪ, ಮತಂಗ, ಯಾಷ್ಟಿಕ, ಶಾರ್ದೂಲ, ಕೋಹಲ, ದಂತಿಲ, ಅಶ್ವತರ, ವಿಶ್ವಾವಸು, ರಂಭೆ, ಅರ್ಜುನ, ನಾರದ, ತುಂಬುರು, ಆಂಜನೇಯ, ಮಾತೃಗುಪ್ತ, ರಾವಣ, ನಂದಿಕೇಶ್ವರ, ನಾನ್ಯದೇವ, ರುದ್ರಟ, ಸೋಮೇಶ, ಅಭಿನವಗುಪ್ತ ಮುಂತಾದವರೆಲ್ಲರ ಕಾಲ ಇನ್ನೂ ದೃಢ ಆಗಿಲ್ಲ. ಅಂದು ಬಳಕೆಯಲ್ಲಿದ್ದ ರಾಗಗಳನ್ನು ಪುರುಷ-ಸ್ತ್ರೀ ರಾಗಗಳಾಗಿ ವಿಂಗಡಿಸಿ, ೨೬ ರಾಗಗಳನ್ನು ಶಾರ್ಙ್ಗದೇವ ಹೆಸರಿಸಿದ್ದಾನೆ. ರಾಗಾಲಾಪನೆಯಲ್ಲಿ ಅನುಸರಿಸಬೇಕಾದ ಕೆಲವು ನಿಯಮಾವಳಿ ಸೂಚಿಸಿದ್ದಾನೆ. ಸಂಗೀತ ರತ್ನಾಕರ ಗ್ರಂಥಕ್ಕೆ ಭಾಷ್ಯ ಬರೆದಾತ ಸಿಂಹಭೂಪಾಲ (ಸುಧಾಕರ) ಹಾಗೂ ಹದಿನೈದನೆ ಶತಮಾನದ ಕಲ್ಲಿನಾಥ ಕಲಾನಿಧಿಯೆಂಬ ಭಾಷ್ಯವನ್ನು ರಚಿಸಿದ್ದಾರೆ. ಕಲ್ಲಿನಾಥ ಇದ್ದ ಕಾಲ, ಇಮ್ಮಡಿ ಪ್ರೌಢದೇವರಾಯನ (೧೪೪೬-೧೫೬೫) ಆಳ್ವಿಕೆಯ ಕಾಲ. ಸಾಹಿತ್ಯ-ಸಂಗೀತಗಳ ಉತ್ಕರ್ಷ ಕಾಲ. ಈ ನಡುವೆ ರಾಜಕೀಯ ವಿಪ್ಲವ, ಮುಸ್ಲಿಮರ ಧಾಳಿಗೆ ತುತ್ತಾದ ದೇವಗಿರಿ, ಹೊಯ್ಸಳ ಸಾಮ್ರಾಜ್ಯಗಳು ಧ್ವಂಸ ಆದವು. ಹಿಂದೂಗಳಿಗೆ ನೆಲೆ ತಪ್ಪಿ ಬಹುಕಾಲದಿಂದ ಬೆಳೆದು ಬಂದ ಭಾರತೀಯ ಸಾಹಿತ್ಯ-ಕಲೆ ಸಂಸ್ಕೃತಿ ನಿರ್ನಾಮಗೊಂಬ ಭೀತಿ ಹುಟ್ಟಿತು. ಹಾಗಾಗಲಿಲ್ಲ! ಮಾಧವನೆಂದು ಪ್ರಸಿದ್ಧರಾಗಿ ಅನಂತರ "ವಿದ್ಯಾರಣ್ಯ" ರೆಂದು ಖ್ಯಾತಿವೆತ್ತ ಮಹನೀಯರು ಹದಿನಾಲ್ಕನೆ ಶತಮಾನದಲ್ಲಿ ತುಂಗಭದ್ರೆಯ ತೀರದ ಹೇಮಕೂಟದಲ್ಲಿ ಸ್ಥಾಪಿಸಿದ ವಿಜಯನಗರ ಸಾಮ್ರಾಜ್ಯ-ಅವರೆ ನೇಮಿಸಿದ ಹಕ್ಕಬುಕ್ಕರೆಂಬ ಸೋದರರ ದಕ್ಷತೆಯಿಂದಾಗಿ ಮಹಮ್ಮದೀಯರ ಧಾಳಿಗೆ ಜಗ್ಗದೆ ಬಲವಾಗಿ ನೆಲೆಯೂರಿ ನಿಂತಿತು. ೨೫೦ ವರ್ಷ ಕಾಲ ಬಾಳಿತೆಂಬುದು ಇತಿಹಾಸದ ಮಾತು. ವಿದ್ಯಾರಣ್ಯರು ರಾಜ್ಯಸ್ಥಾಪನಾಚಾರ್ಯರಷ್ಟೆ ಅಲ್ಲ, ಸಂಗೀತ ಪುನರುತ್ಥಾನಾ ಚಾರ್ಯರೂ ಹೌದು. ಅವರ ಗ್ರಂಥ 'ಸಂಗೀತಸಾರ' ಈಗ ಉಪಲಬ್ಧವಿಲ್ಲ, ಆದರೂ ಸಂಗೀತದ ಆಕರ ಗ್ರಂಥ ಆಗುಳಿದಿದೆ. ಕಲ್ಲಿನಾಥನಿಗೆ ಮೊದಲು ಗೋಪಾಲ ನಾಯಕ ನೆಂಬಾತ, ಪಾರ್ಶ್ವದೇವ (ಸಂಗೀತಸಮಯಸಾರ), ಹರಿಪಾಲದೇವ (ಸಂಗೀತ ಸುಧಾಕರ) (೧೩೦೯-೧೩೮೦) ಇವರೆಲ್ಲ ಸಂಗೀತ ಗ್ರಂಥಕಾರರು. ವಿದ್ಯಾರಣ್ಯರು ಹದಿನೈದು ಜನಕ ರಾಗಗಳನ್ನು ಹೆಸರಿಸಿ, ಇಂದಿನ ಜನಕ-ಜನ್ಯ ರಾಗ ಪದ್ಧತಿಗೆ ಮಾರ್ಗದರ್ಶಕರಾಗಿದ್ದಾರೆ. ಗೋಪಾಲನಾಯಕ ದಕ್ಷಿಣದವನೆ ಆಗಿದ್ದು ಕಾರಣಾಂತರದಿಂದ ಅಲ್ಲಾವುದ್ದೀನ್ ಖಿಲ್ಜಿಯ ಆಸ್ಥಾನ ಗಾಯಕನಾಗಿದ್ದ. ಇವನಿಗೂ ಪರ್ಷಿಯಾ ದೇಶದ ಕವಿ-ಸಂಗೀತಕಾರ

ಆಮಿಾರ್‌ಖುಸ್ರ್ರುವಿಗೂ ಗಾಢವಾದ ವೈತ್ರಿ ಇದ್ದಿತು. ಗೋಪಾಲನಾಯಕನಿಂದ ಆರಂಭ ವಾಗಿ ಬೆಳದದ್ದು ಹಿಂದೂಸ್ತಾನಿ ಸಂಗೀತ. ಗೋಪಾಲನಾಯಕನ ಪರಂಪರೆಯಲ್ಲಿ ೧೬ನೇ ಶತಕದಲ್ಲಿ ಬಂದಾತ ಪುಂಡರೀಕವಿಠಲ. ಈತನಂತೂ ಬೆಂಗಳೂರು ಜಿಲ್ಲೆಯ ಶಿವಗಂಗೆ ತಾಲ್ಲೂಕಿಗೆ ಸೇರಿದ ಸಾತನೂರಿನವನು. ಪುರಂದರದಾಸರ ಸಮಕಾಲಿಕ. ಇವನನ್ನು ಆಚಲಾನಂದರ ಪೀಠಗಳ ಪೈಕಿ ಶಿವಗಂಗೆ ಪೀಠಕ್ಕೆ ಸೇರಿದ ಹರಿದಾಸನೆಂದೂ ಹೆಸರಿಸ ಬಹುದೆಂದು ಕೇಶವದಾಸರು ತಿಳಿಸುತ್ತಾರೆ[3] ಪುಂಡರೀಕವಿಠಲನ ಗ್ರಂಥಗಳು, ಷಡ್ರಾಗ ಚಂದ್ರೋದಯ, ರಾಗಮಾಲಾ, ರಾಗಮಂಜರಿ.

ವಿದ್ಯಾರಣ್ಯರ ಕಾಲದಿಂದ ದಕ್ಷಿಣಾದಿ ಸಂಗೀತ ಪದ್ಧತಿ–ಹಾಗೂ ಕರ್ಣಾಟಕ ಸಂಗೀತ ಪದ್ಧತಿ ಬಂದಿತೆಂಬುದು ವಿದ್ವಾಂಸರ ಅಭಿಮತ. ಅಂತೂ ಉತ್ತರಾದಿ, ದಕ್ಷಿಣಾದಿಗಳಾಗಿ ಭಾರತೀಯ ಸಂಗೀತ ಕವಲೊಡೆದು, ಭಿನ್ನವಾದ ಸಂಪ್ರದಾಯವೇ ಆಗಿ ಪರಿಣಮಿಸಿದ್ದು "ರಾತ್ರಿಯಿಂದ ಬೆಳಕು ಹರಿದಂತೆ, ಮೊಗ್ಗಿನಿಂದ ಹೂವು ಅರಳಿದಂತೆ" ವಿಕಾಸ ಹೊಂದಿತೆ ವಿನಾ ಇಳಿಮೊಗವೇನಾಗಲಿಲ್ಲ. ಎರಡೂ ಪದ್ಧತಿಗೆ ಕರ್ಣಾಟಕದವರು ಪ್ರಮುಖ ಪ್ರವರ್ತಕರೆಂಬುದು ಹೆಮ್ಮೆಪಡುವ ವಿಚಾರ.

ವಿದ್ಯಾನಗರವೆಂದೆನಿಸಿಕೊಂಡು (ಶಾಸನಗಳಲ್ಲಿ, ವಿದ್ಯಾಭಿದಾನಗರೀ ಎಂದೂ ಪ್ರಸ್ತಾಪವಿದೆ) ಬೆಳೆದು ಹಬ್ಬಿದ ವಿಜಯನಗರ ಸಾಮ್ರಾಜ್ಯ, ಇತರ ಲಲಿತ ಕಲೆಗಳಿಗೆ ಪ್ರೋತ್ಸಾಹ ನೀಡಿದಂತೆ, ಸಂಗೀತಕ್ಕೂ ವಿಶೇಷ ಪ್ರೋತ್ಸಾಹ ನೀಡಿತು. ವಿದ್ಯಾರಣ್ಯರೇ ಆಸಕ್ತರಾಗಿ ತಮ್ಮ ಜಾಣ್ಮೆಯಿಂದ ಕರ್ಣಾಟಕ ಸಂಗೀತ ಸಂಪ್ರದಾಯವನ್ನು ಹಾಕಿ ಕೊಟ್ಟರು. ಮೇಳರಾಗ, ರಾಗಾಲಾಪನೆ ವಿದ್ಯಾರಣ್ಯರ ನಿರೂಪಿಸಿದ್ದು. ಇದನ್ನು ಅನಂತರ ಬಂದ ಗೋವಿಂದ ದೀಕ್ಷಿತನೆಂಬಾತ ಸ್ಮರಿಸಿದ್ದಾನೆ. ವೆಂಕಟಮಖಿ ಎಂಬ ಪ್ರಖ್ಯಾತ ಸಂಗೀತ ವಿದ್ವಾಂಸ ತಾನು ಬರೆದ ಚತುರ್ದಂಡಿ ಪ್ರಕಾಶಿಕೆಯಲ್ಲಿ (೧೬೨೦)ರಲ್ಲಿ ಮೇಳ ರಾಗ ಪದ್ಧತಿ ಮುಂದುವರೆಸಿದ. ಕಲ್ಲಿನಾಥನಿಗೆ ಸಮಕಾಲಿಕನಾಗಿದ್ದವನು ರಾಮಾಮಾತ್ಯ. ಈತನ ಗ್ರಂಥ 'ಸ್ವರಮೇಳ ಕಳಾನಿಧಿ' ಕರ್ಣಾಟಕ ಸಂಗೀತದಲ್ಲಿ ಕ್ರಾಂತಿಯುಂಟು ಮಾಡಿತು. ಹಾಗೆಯೇ 'ಸಂಗೀತ ಸಾರಾಮೃತ'ದ ಕರ್ತೃ ತುಳಜಾಜಿಮಹಾರಾಜ ಹಾಗೂ 'ಸಂಗೀತಸಂಪ್ರದಾಯದರ್ಶಿನಿ'ಯ ಕರ್ತೃ ಆದ ಸುಬ್ಬರಾಮ ದೀಕ್ಷಿತರು ಸ್ಮರಣೀಯರು. ಸಂಗೀತವನ್ನು ಹಿಂದಿನ ಲಕ್ಷಣದ ಕಟ್ಟುಪಾಡಿನಿಂದ ಲಕ್ಷ್ಯವನ್ನು ಬಿಡಿಸಿಕೊಂಟ ಉದ್ದೇಶ ರಾಮಾಮಾತ್ಯನದು. ಈತನು ಅಳಿಯ ರಾಮರಾಯನ ಕಾಲದಲ್ಲಿದ್ದಾತ.

ಹರಿದಾಸ ಸಾಹಿತ್ಯ–ಹರಿದಾಸ ಆಂದೋಲನ ಕರ್ಣಾಟಕ ಸಂಗೀತಕ್ಕೆ ನೀಡಿದ ಕೊಡುಗೆ, ಹಾಗೂ ತಮ್ಮ ಭಕ್ತಿಯ ಆಂದೋಲದ ಪ್ರಸಾರ ಮಾಧ್ಯಮವಾಗಿ–ಮತ ಪ್ರಸಾರ ಸಾಧನವಾಗಿ–ಹರಿದಾಸರು ಸಂಗೀತವನ್ನು ಬಳಸಿಕೊಂಡ ರೀತಿಗಳನ್ನು ಗುರುತಿ ಸುವುದು ಮುಂದಿನ ವಿಚಾರ.

ಹರಿದಾಸ ಆಂದೋಲನ ತನ್ನ ಒಂದು ಪರಿಷ್ಕೃತ ಹಾಗೂ ಸೈದ್ಧಾಂತಿಕ ಪ್ರಸಾರ ಸ್ವರೂಪ ಪಡೆದದ್ದು ಶ್ರೀಪಾದರಾಜರಿಂದ ಎಂದು ಹಿಂದೆಯೆ ತಿಳಿಸಿದೆ. ಸಾಮಾನ್ಯರಿಗೆ ಅರ್ಥ ಆಗುವ ಕನ್ನಡ ಭಾಷೆಯನ್ನು ತಮ್ಮ ಮತ ಪ್ರಸಾರಕ್ಕಾಗಿ (ಮಧ್ವಮತ) ಹಾಗೂ ತತ್ವ ಪ್ರಚುರಗೊಳಿಸಲು (ದ್ವೈತ) ಪಣತೊಟ್ಟ ಶ್ರೀಪಾದರಾಜರು, ತಮಿಳು ನಾಡಿನ ಭಕ್ತಿ ಆಂದೋಲನದಂತೆಯೆ ತಾವೂ ಹರಿದಾಸಪಂಥ ಸಂಘಟಿಸಲು ಉಜ್ಜುಗಿಸಿದರು. ವೀರಶೈವ-ಜೈನ-ಬೌದ್ಧ-ನಿರೀಶ್ವರವಾದದಿಂದ, ತತ್ತರಿಸಿದ್ದ ವಿಷ್ಣುಭಕ್ತಿ-ವೈಷ್ಣವ ಧರ್ಮಕ್ಕೆ ಪುನಶ್ಚೇತನಗೊಳಿಸುವ ಕಾರ್ಯ ತ್ವರಿತಗತಿಯಲ್ಲಿ ಕೈಗೊಂಡ ಕಾರ್ಯ ಶ್ರೀಪಾದರಾಜರ ಶ್ರೀಕಾರದಿಂದಾರಂಭ ಆದ ಹರಿದಾಸಭಕ್ತಿಯ ಆಂದೋಲನವೆಂಬುದನ್ನು ಹಿಂದೆಯೆ ತಿಳಿಸಿದ್ದೇವೆ. ಶರಣರಾಡಿದ ಮಾತಿಗಿಂತ (ವಚನ) ಜನತೆಗೆ ಇನ್ನೂ ಹೃದಯಂಗಮ ಆಗಿಸಲು ಹಾಗೂ ತಮ್ಮ ಧರ್ಮ ಪ್ರಸರಿಸಲು ತಿಳಿಗನ್ನಡದ ನುಡಿಗಳಿಗೆ ಸಂಗೀತದ ಸುಶ್ರಾವ್ಯ ಸಪ್ತಸ್ವರ ಸಂಯೋಜನೆ ಮಾಡಿ ಹಾಡಿದ ಶ್ರೀಪಾದರಾಜರು, ಹರಿದಾಸ ವೃತ್ತಿ-ಪದ್ಧತಿಯನ್ನೆ ತಂದರು ಹಾಗೂ ತಾವೇ ಸ್ವಯಂ ಕಾಲಿಗೆ ಗೆಜ್ಜೆ ಕಟ್ಟಿ, ತಾಳ ಹಾಕುತ್ತಾ ಭಗವತ್‌ಪೂಜಾ ಸಮಯದಲ್ಲಿ ಭಕ್ತಿಯ ಕೈಂಕರ್ಯ ಸಲ್ಲಿಸುತ್ತಿದ್ದರು. ಇದರಿಂದಾಗಿ, ತಮ್ಮ ಮುಖ್ಯ ಧ್ಯೇಯ ಆದ ವಿಷ್ಣುಭಕ್ತಿ-ಹರಿಸರ್ವೋತ್ತಮತ್ವ ಪ್ರತಿಪಾದನೆಯಲ್ಲಿ ಹರಿದಾಸ ಆಂದೋಲನವು ಸಂಗೀತ ಮಾಧ್ಯಮ ಬಳಸಿಕೊಂಬುದರ ಮೂಲಕ ಹೊಸ ಹಾದಿಯನ್ನೇ ಕಂಡುಕೊಂಡಾಯಿತು. ಕನ್ನಡ ಸಾಹಿತ್ಯ-ಸಂಗೀತಗಳಿಗೂ ಹೊಸ ಆಯಾಮ ದೊರೆಯಿತೆಂಬುದನ್ನು ಮುಂದಿನ ಸಾಲುಗಳಲ್ಲಿ ಗುರುತಿಸಬಹುದು.

ಹರಿದಾಸ ಕೃತಿಗಳೆಲ್ಲ ಎಲ್ಲ ಗೇಯಗುಣದೊಡಗೂಡಿದ ಕೀರ್ತನ ಬಂಧದಲ್ಲೇ ಏಕೆ ರಚಿತಗೊಂಡವೆಂಬ ಪ್ರಶ್ನೆ ನಮಗೆ ಬರುತ್ತದೆ. ತಂಬೂರಿ ಮೀಟುತ್ತಾ ಕಾಲಿಗೆ ಗೆಜ್ಜೆ ಕಟ್ಟಿಕೊಂಡು 'ಮಧುಕರ' ವೃತ್ತಿಗಾಗಿ ಹಸಿಬೆ ಚೀಲವನ್ನೂ ಹೆಗಲಿಗೇರಿಸಿ, ಬೆಳಗು ಮೂಡುವ ಮುನ್ನವೆ, ಸ್ನಾನಮಾಡಿ, ಊರ್ಧ್ವ ಪುಂಡ್ರಧರಿಸಿ, ಆಹ್ನಿಕಾದಿಗಳನ್ನು ಮುಗಿಸಿ, ಹರಿನಾಮಸಂಕೀರ್ತನೆಗೈಯುತ್ತ ಬೀದಿ ಬೀದಿಯಲ್ಲೂ ಸಂಚರಿಸುವುದು, ಕೀರ್ತನೆ ಕೇಳುಗರಿಗೆ ಸುಪ್ರಭಾತ ಆದರೂ, ಹರಿದಾಸರ ಮನದ ಭಾವನೆಗಳನ್ನೂ ಅರಿತುಕೊಂಬ ಜನತೆ ಬೇಕಿತ್ತು. ಬಹುತೇಕ ಅಂಥ ಧರ್ಮ ಪೋಷಕರಿದ್ದರೂ ಅಲ್ಲಲ್ಲಿ ಇರದವರೂ ಇದ್ದರು (ಪುರಂದರದಾಸರ ಕೃತಿಗಳಲ್ಲಿ ಉದ್ಧೃತ ಆಗಿದೆ). ಹರಿದಾಸರಲ್ಲಿ ಬಂದ ಪುರಂದರದಾಸರಂತೂ ಕರ್ನಾಟಕ ಸಂಗೀತದ ಆಚಾರ್ಯರು. ಅವರ ನಂತರ ಬಂದ ತಮಿಳುನಾಡಿನ ತೆಲುಗಿನ ಕೃತಿಕಾರ ತ್ಯಾಗರಾಜರಿಗೂ ಪುರಂದರದಾಸರ ಸ್ಫೂರ್ತಿಯುಂಟಾಯಿತೆಂಬುದು ಅವರ ಕೃತಿಯಾದ "ಪ್ರಹ್ಲಾದಭಕ್ತಿ ವಿಜಯಮು"ವಿನಲ್ಲಿ ತಿಳಿದುಬರುತ್ತದೆ :

ದುರಿತ ವ್ರಾತವುಮೆಲ್ಲನು ಪರಿಮಾರ್ಜಿಡಿ ಹರಿಗುಣವುಂಲಬಾಡು
ಚಂನೆಪುಡುಂನ್
ಪರವಶಃದ್ವೆವೆಲವಮು ಪುರಂದರದಾಸಂನಿ ವಂಹಿವುವಂಲನು
ವಂದಿಲೋನ್॥

ಹೀಗೆ ತ್ಯಾಗರಾಜರನ್ನೂ ಹರಿದಾಸರೆಂದು ಕರೆಯಬಹುದಾಗಿದೆ.

ಹರಿದಾಸ ಆಂದೋಲನ-ಸಂಗೀತಯುಕ್ತ ಕೀರ್ತನೆ ರಚಿಸಲು-ಕಾರಣ ಭಗವಂತನು ಗಾನಕ್ಕೆ-ಸಂಕೀರ್ತನಕ್ಕೆ ಬೇಗ ಪ್ರಸನ್ನನಾಗುವನೆಂಬ ಮನೋಭಾವ-ಭಕ್ತಿಯ ಆರ್ತತೆ. ಇದನ್ನು ಶ್ರೀಮಧ್ವಾನಂದತೀರ್ಥರ 'ದ್ವಾದಶ ಸ್ತೋತ್ರ'ದ (ಹರಿಗೀತಿರಿಯಂ ಪರಮಾದರತಃ...) ಸಾಲಲ್ಲಿ ಗಮನಿಸಬಹುದು.

ನವವಿಧ ಭಕ್ತಿಯ ವೈವಿಧ್ಯದಲ್ಲಿ ಕೀರ್ತನ ಭಕ್ತಿಯೂ ಒಂದು ಶ್ರೀಪಾದರಾಜರ ಒಂದು ಉಗಾಭೋಗ ಹೀಗೆನ್ನುತ್ತದೆ :

ಧ್ಯಾನವು ಕೃತಯುಗದಲ್ಲಿ ಯಜನ
ಯಜ್ಞವು ತ್ರೇತಾಯುಗದಲ್ಲಿ
ದಾನವಾಂತಕನ ದೇವತಾರ್ಚನೆಯು
ದ್ವಾಪರ ಯುಗದಲ್ಲಿ ಕಲಿಯುಗದಿ ಗಾನದಿ
ಕೇಶವನೆಂದರೆ ಕೈಗೂಡುವನು ರಂಗವಿಠಲ ॥

ಇದೇ ಅರ್ಥದಲ್ಲಿ ಪುರಂದರದಾಸರೂ ಹಾಡಿದ್ದಾರೆ:

ಧ್ಯಾನವು ಕೃತಯುಗದಲ್ಲಿ
ಯಜ್ಞಯಾಗವು ತ್ರೇತಾಯುಗದಲ್ಲಿ
ಅರ್ಚನೆ ದ್ವಾಪರಯುಗದಲ್ಲಿ ಕೀರ್ತನ ಮಾತ್ರದಿ
ಕಲಿಯುಗದಲ್ಲಿ ಮುಕುತಿಯನ್ನೀವ ಪುರಂದರವಿಠಲ ॥

ಭಕ್ತಿ ಪ್ರಧಾನ ಗ್ರಂಥ ಆದ ಭಾಗವತದ ದ್ವಾದಶಸ್ಕಂದದಲ್ಲಿ ಉಕ್ತವಾಗಿರುವಂತೆ,

ಕೀರ್ತನಾದೇವ ಕೃಷ್ಣಸ್ಯ ಮುಕ್ತಸಂಗಃ
ಕಲೌತಾಹರಿಕೀರ್ತನಾತ್

ಎಂಬಲ್ಲಿ ಕಲಿಯುಗದಲ್ಲಿ ಹರಿನಾಮ ಸಂಕೀರ್ತನೆಗೇ ಪ್ರಾಧಾನ್ಯವೆಂದು ತಿಳಿಯು ಬರುತ್ತದೆ.

ಸಂಗೀತ ವಿಶ್ವಭಾಷೆ ಹಾಗೂ ದೇವಭಾಷೆಯೆಂದು ಮೊದಲೇ ತಿಳಿಸಿದ್ದೇವೆ. ಸಾಹಿತ್ಯ-ಸಂಗೀತಗಳೆರಡಕ್ಕೂ ಪ್ರೋತ್ಸಾಹಕ ಭಕ್ತಿ ಮಾರ್ಗವೆ ಎಂಬುದು ಜಾಗತಿಕ

ಸಾಹಿತ್ಯ ಹಾಗೂ ವಂಶ ಸುಧಾರಣೆಯ ಆಂದೋಲನಗಳಿಂದ ತಿಳಿದು ಬರುವ ಅಂಶ. ಸಂಗೀತ, ಶಾಸ್ತ್ರ ಸಾಹಿತ್ಯವೆ ಆಗಲಿ, ಸಂಲಭ ಸಾಹಿತ್ಯವೆ ಆಗಲಿ, ಅದನ್ನು ಅಳವಡಿಸಿ ಕೊಂಡಾಗ ಸಾಹಿತ್ಯ–ಸಂಗಮಗಳ ಸೊಗಸು, ಸೊಗಡು ತಿಳಿದುಬರುತ್ತದೆ. ಸಾಹಿತ್ಯಕ್ಕೆ ಸಂಗೀತ ಬೆಳಸಿಕೊಳ್ಳುವುದು ವಾದಿರಾಜರು ಹೇಳುವಂತೆ, "ಶ್ರೀನಿವಾಸನ ನಾಮ ಸುಧಾರಸ ಏನು ರುಚಿಯೋ ಕಾಣೆ ಜೇನುತುಪ್ಪದಂತೆ" ಎಂದೊಮ್ಮೆ ಹಾಡಿದರೆ, ಮತ್ತೊಮ್ಮೆ ಭಾವಾವಿಷ್ಟರಾಗಿ "ಸಕ್ಕರೆ ಬೆರೆಸಿದ ಜೊಕ್ಕ ಪಾನಕವನ್ನು ಮಿಕ್ಕು ಮೀರಂತ ಲಿದೆ ರಕ್ಕಸಾರಿಯ ಧ್ಯಾನ" ಎಂದು ಹಾಡುತ್ತಾರೆ. "ಕದಳಿ ಖರ್ಜೂರ ದ್ರಾಕ್ಷಿ ಅಡಕೆಯು ಮ್ಮಿಗಿಲಾಗಿ ಮಂದಕೊಡುವುದು ಜಿಹ್ವೆಗೊದಗಿದ ತಕ್ಷಣ" ಎಂದೂ "ಕಾಸಿದ ಕೆನೆಹಾಲ ದೂಷಿಸುವಂತಿದೆ" ಎಂಬುದಾಗಿಯೂ ತಿಳಿಸುತ್ತ ಘೋಷಿಸುವುದಿದು ಏನು ರುಚಿಯೋ ಹರಿದಾಸರೆ ಬಲ್ಲರು. ಇದು ಸ್ವಾನುಭವ. 'ಕಾಸಿದ, ಅಂದರೆ ಹದವಾಗಿ ಕಾಯಿಸಿದ ಕೆನೆಹಾಲು' ಎಂದರ್ಥ. ಹಾಗೆಯೇ ಹಿತವಾದ ಗಾಯನವೂ ಶ್ರೀಹರಿ ಪ್ರೀತಿಗಳಿಸುವ ಸಾಧಕ–ಹರಿದಾಸರಿಗೆ.

ಹಾಗೆಯೆ ನಾರದರನ್ನು ಕುರಿತು ಭಗವಂತನೊಂದೆಡೆ. "ಎಲ್ಲಿ ನನ್ನ ಭಕ್ತ ನನ್ನನ್ನು ಕುರಿತು ಹಾಡುವನೊ (ಕೀರ್ತಿಸುವನೊ) ಅಲ್ಲಿ ನಾನಿದ್ದೆ ಇರುತ್ತೇನೆಂದಿದಾನೆ..."

"ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿಗಾನರಸಂಫಣೀ–" ಮಗು, ಪಶು, ಹಾವಿನ ಹೆಡೆಯನ್ನು ಕಣಿಸುತ್ತದೆ ಸುಮಧುರ ಸಂಗೀತ (ಕಾಳಿದಾಸ), ಇದು ಸಂಗೀತದ ವಿಚಾರ ದಲ್ಲಿ ಬೇರೆ ಬೇರೆಯವರ ಅಭಿಮತ.

ಭಗವಂತನ ಪೂಜೆಯಲ್ಲಿ ಮಂತ್ರ ಸಾಹಿತ್ಯ–ಸಂಗೀತ ಎರಡರ ನೆರವಿನಿಂದ ಪೂಜಿಸುವಂಥ ರೂಢಿ ಇಂದೂ ಉಂಟು. ನಾದೋಪಾಸನೆಯೆ ಬ್ರಹ್ಮೋಪಾಸನೆ, ದೇವರು ಸಾಮಗಾನಲೋಲ. ಸುಶ್ರಾವ್ಯ ಆದ ಸಂಗೀತಕ್ಕೆ ಆತ ಒಲಿಯುವನೆಂದೂ ತಿಳಿದವರು ಹೇಳುವುದುಂಟು. ಗಾನಯೋಗಿಗಳಾದ ಶ್ರೀ ತ್ಯಾಗರಾಜರು ತಮ್ಮ ಕೃತಿ ಯಲ್ಲೊಂದೆಡೆ, "ಸಂಗೀತಜ್ಞಾನ ವಿಹೀನಲುಕು ಮೋಕ್ಷಮುಗಲದಾ" ಎಂದು ಪ್ರಶ್ನಿ ಸಿದ್ದಾರೆ. ಭಗವಂತನು ಜೀವ ಜಂತುಗಳಿಗೆ ಅನುಗ್ರಹಿಸಿರುವ ಕೆಲವು ಸ್ವರಗಳಲ್ಲಿ ನಾದವೆ ಮೊದಲನೆಯದು. ದೇವಾನುದೇವತೆಗಳಿಗೆ, ನಾರದರೇ ಮುಂತಾದ ದೇವರ್ಷಿ ಸಂಗೀತ ಬ್ರಹ್ಮರಿಗೆ ಕೇವಲ ಗಾನಕಲೆಯಾಗದೆ, ಪರಮಾತ್ಮನನ್ನು ಒಲಿಸಿಕೊಂಬ ಪರಮಾರ್ಥ ಸಾಧನೆಯೂ ಆಗಿತ್ತು, ಇದೇ ಹದಿನೈದನೆ ಶತಮಾನದ ಕರ್ನಾಟಕ ಹರಿದಾಸರಿಗೂ ಪ್ರಿಯ ಆದ ನಾದ ಮಾರ್ಗ. ಸಂಗೀತದೊಲವು, ಸಂಗೀತ ಪರಂಪರೆ ಹರಿದಾಸರಲ್ಲಿ ಮೊದಲಿಂದ ಬೆಳೆದು ಬಂದಿರುವುದು ಇಂದಿಗೂ ಸುವ್ಯಕ್ತ ಆಗುವ ಅಂಶ. ಊಟಕ್ಕೆ ರುಚಿ ಎಷ್ಟು ಅಗತ್ಯವೊ ಹಾಗೆಯೇ ಗಾನಕ್ಕೂ ನಾದಮಾಧುರ್ಯ ಅಗತ್ಯ.

'ಕೀರ್ತನೆ'ಯೆಂಬ ಸಾಹಿತ್ಯ ಪ್ರಕಾರವನ್ನು ರಚಿಸಿ ಹಾಡಿರುವವರು ಶ್ರೀಪಾದ ರಾಜರೆಂದೇ ವಿದ್ವಾಂಸರ ಎಣಿಕೆ ಹಾಗೂ ಅದೂ ಸರಿ ಅಲ್ಲಿವರೆವಿಗೂ ಪಲ್ಲವಿ, ಅನು ಪಲ್ಲವಿಯ ನಿಯತಿ, ಚರಣಗಳು, ಹೀಗೆ ಇರಲಿಲ್ಲ. ಕನ್ನಡದಲ್ಲಿ 'ಕೀರ್ತನೆ' ಪ್ರಕಾರವನ್ನು

ಪ್ರಚುರಪಡಿಸಿದವರಲ್ಲಿ ಆದ್ಯರು ಶ್ರೀಪಾದರಾಜರು ಇವುಗಳನ್ನೇ "ದೇವರನಾಮ", "ದಾಸರಪದಗಳು" ಎಂದೆಲ್ಲ ಕರೆವ ರೂಢಿ ಅನಂತರ ಬೆಳೆದು ಬಂದಿತು.

ಶ್ರೀಪಾದರಾಜರು ಸಂಸ್ಕೃತ, ಕನ್ನಡದಲ್ಲಿ ವಿದ್ವಾಂಸರಲ್ಲದೆ, ಸಂಗೀತದಲ್ಲಿಯೂ ಪರಿಣತರೆನ್ನಲು ಅವರ ಕೀರ್ತನೆಗಳು ಸಾಕ್ಷಿ. ಹಾಗೂ ನೃತ್ಯ-ನಾಟಕ ಕಲೆಗಳಲ್ಲೂ ಕೋವಿದರೆನ್ನಲು ಅವರ 'ಭ್ರಮರಗೀತೆ'ಗಳಲ್ಲಿನ ಸಂಬೋಧನಾತ್ಮಕತೆ ಹಾಗೂ ಐದು ತಾಳಗಳ ಬಳಕೆ ಹೊಂದಿದ ಕ್ಲಿಷ್ಟವೆನಿಸುವ "ಸುಳಾದಿ"ಗಳ ಹಾಗೂ ಉಗಾಭೋಗ ರಚನಕಾರರೂ ಇವರೇ. ಅಷ್ಟೇ ಅಲ್ಲದೆ ಕನ್ನಡ-ಸಾಹಿತ್ಯದಲ್ಲಿ ವಿಶಿಷ್ಟ ಛಂದಸ್ಸಿನ 'ವೃತ್ತನಾಮ' ಶ್ರೀಪಾದರಾಜರೇ ರಚಿಸಿದ್ದು ! ಉಗಾಭೋಗ ರಾಗ ಭಾವಯಂತವಾಗಿ ಹಾಡುವ ಒಂದು ರೀತಿಯ ಪ್ರಬಂಧ, ಆದರೆ ವೃತ್ತನಾಮದಲ್ಲಿ ವೃತ್ತ, ಶ್ಲೋಕ ಪದಗಳೂ ಇರುತ್ತವೆ. ತಮ್ಮ ಕಾಲದಲ್ಲಿ ಪ್ರಚಲಿತ ಇದ್ದ ರಾಗಗಳನ್ನು ಶ್ರೀಪಾದ ರಾಜರು ತಿಳಿಸುತ್ತಾರೆ. ಹಾಗೂ ಅವರ ಕೃತಿಗಳಲ್ಲಿ ಗೇಯಗುಣ ಸಹಜವಾಗಿ ಬಂದಿರುವು ದನ್ನು ಮನವರಿಕೆ ಮಾಡಿಸಿಕೊಡುತ್ತಾರೆ :

ಹೆಂಗಳೇರೊಂದಾಗಿ ಅಂತರಂಗದರಸನ...ಸಂಗೀತದಿಂ ಪೊಗಳುತ್ತ...
ಪಲ್ಲವಾದರೆಯರೆಲ್ಲ ಈ ಶಿಶುವು ! ತುಲ್ಯ ವರ್ಜಿತನೆನುತಲಿ ।
ಸಲ್ಲಲಿತಗಾನದಿಂದ ತೂಗಿದರು ಕಲ್ಯಾಣರಾಗದಿಂದ ।
ಆನಂದಸದನದೊಳಗೆ ಗೋಪಿಯರು । ಆ ನಂದಸುತನ ಕಂಡು ।
ಆನಂದ ಭರಿತರಾಗಿ ತೂಗಿದರು । ಆನಂದಭೈರವಿಯಿಂದ
ದೇವಾಧಿದೇವನೆಂದು ಈ ಶಿಶುವು । ಭಾವನಾತೀತನೆಂದು ।
ದೇವಗಂಧರ್ವಪಾದಿ ತೂಗಿದರು । ದೇವಗಾಂಧಾರದಿಂದ ।

ಇದಲ್ಲದೆ,

ತಾಳ ತಂಬೂರಿಗಳಿಂದ ಕಾಲಗೆಜ್ಜೆ ಧ್ವನಿಗಳಿಂದ
ಕೋಳುಗೊಂಡಂತೆಹರಿಯು ಸಾರಿಪೊಗಳದವನ ಜನ್ಮ
ಜಗುವರಂಬ ಭಯವು ಅಡಗಿ ಜಿಗಿದು ಕುಣಿದು ಮೈಯ ಬಳುಕಿ
ಬಗಿದು ಪರಮ ಸತ್ವದಿಂದ ಪೊಗಳ ನಲಿಯದವನ ಜನ್ಮ ॥

ಎಲ್ಲವೂ ಶ್ರೀ ಹರಿಪೂಜೆಯೆಂಬಂತೆ ಶ್ರೀಪಾದರಾಜರ ಭಾವನೆ. "ರಂಗ ಕೊಳಲನೂದುತ ಬಂದ" ಎಂಬುದು ರಾಗ ರಂಜಿತ ಭಾವಗೀತೆಯಾದಂತೆಯೇ ಅದರಲ್ಲಿ ಬರುವ"...ನೇತ್ರಂ ಗಳಿಗತಿ ಚಿತ್ರಂಗಳಾಗೆ! ಆ ರಂಗನೂದ್ದ ಸಾರಂಗ ಕೇಳಿ ರುಚಿ..." ಎಂಬಲ್ಲಿ ಸಂಗೀತ ವಾದ್ಯಗಳ ಪ್ರಸ್ತಾಪವೂ ಇದೆ. ಇದರಿಂದ ಹರಿದಾಸ ಸಾಹಿತ್ಯದ ಆದ್ಯಪ್ರವರ್ತಕರಾದ

ಶ್ರೀಪಾದರಾಜರು ಹರಿದಾಸ ಸಂಸ್ಥಾಪನದ ಜತೆಗೇ ಸಂಗೀತ ಪರಿಗಣಿಸಲ್ಪಟ್ಟಿಯೂ ಆದ್ಯರೆಂಬ ಪ್ರಶಸ್ತಿಗಳಿಸಿದ್ದಾರೆ.

ವ್ಯಾಸರಾಯರು ತಮ್ಮ ಗುರುವರ್ಯರಾದ ಶ್ರೀಪಾದರಾಜರ ಪರಿಪಂಥವನ್ನು ಅನುಸರಿಸಿ ಅನೇಕ ಕನ್ನಡ ಕೀರ್ತನೆಗಳು, ಸುಳಾದಿ, ಉಗಾಭೋಗಗಳನ್ನು ರಚಿಸಿದ್ದಾರೆ. ಹಾಗೂ ಸಂಗೀತದ ಮೂಲಕ ಹರಿದಾಸ ಆಂದೋಲನ ಸಂಘಟಿಸಿ ಮುಂದುವರಿಸಿದರು; ವ್ಯಾಸರಾಯರ ಅಂಕಿತ ಶ್ರೀಕೃಷ್ಣ–ಸಿರಿಕೃಷ್ಣ. ಇವರ ಕಾಲದಲ್ಲಿ ರಾಗಗಳ ಬಳಕೆಯಲ್ಲಿ ಹೊಸತೇನೂ ಕಂಡುಬಂದಂತಿಲ್ಲ. ಹರಿಯ ಪೊಂಗೊಳಲಿನ ಗಾನ ವೈಖರಿ ಬಣ್ಣಿಸುವ ಅವರ ವೇಣುಗೀತ ಗೇಯಗುಣದದ್ದಾದಂತೆಯೆ, ತಮ್ಮ ಒಂದು ಕೃತಿಯಲ್ಲಿ ಅವರ ಕಾಲದಲ್ಲಿ ಬಳಸುತ್ತಿದ್ದ ಸೋರೆಬುರುಡೆ ವಾದ್ಯ, ವೀಣೆಯನ್ನೂ ಸೂಚಿಸುತ್ತದೆ :

> ನಾರದನವೀಣೆ ಗೋಪರ ಕಿನ್ನರಿ
> ಗೀರ್ವಾಣ ದುಂದುಭಿ ಗೋಪರ ಮುರಜ॥
> ಒಂದೊಂದು ತಾಳಕ್ಕೆ ಒಂದೊಂದು ಪದಗತಿ
> ಒಂದೊಂದು ರಸಕ್ಕೆ ಮತ್ತೊಂದು ಕೈಗತಿ॥

ಇದಲ್ಲದೆ ವ್ಯಾಸರಾಯರ ಕಾಲದ ಏಕನಾದದ ಪ್ರಸ್ತಾಪವೂ ಬಂದಿದೆ.

ಪುರಂದರದಾಸರಾಗಮನದಿಂದ ಸಂಗೀತಕ್ಕೆ ಒಂದು ಹೊಸ ಸ್ವರೂಪ ಬಂದುದಲ್ಲದೆ ಅವರು ತಾವೇ ಸ್ವಯಂ ಸಂಗೀತ ಶಾಸ್ತ್ರದಲ್ಲಿ ಕೆಲವು ಗಮನಾರ್ಹ ಬದಲಾವಣೆ ತಂದರು, ಅದೇ ಮುಂದೆ ಪದ್ಧತಿಯಾಗಿ ಮುಂದುವರೆಯಿತು. ಇದು ಹರಿದಾಸ ಆಂದೋಲನದ ಏಕಮೇವಾದ್ವಿತೀಯ ಕೊಡುಗೆ. ಇಷ್ಟೇ ಅಲ್ಲ, ದಾಕ್ಷಿಣಾತ್ಯ ಸಂಗೀತ ಕ್ಕೊಂದು ಖಚಿತ ಕಟ್ಟಡ ಕಟ್ಟಿದವರು ಪುರಂದರದಾಸರು. ಲಕ್ಷ್ಯ–ಲಕ್ಷಣಗೀತೆಗಳಿಂದಲೆ ತುಂಬಿದ ಸಂಗೀತ ಪ್ರಪಂಚದಲ್ಲಿ ಸಾವಿರಾರು ಕೃತಿ ರಚನೆ ಮಾಡಿದರು. ಅವುಗಳನ್ನೂ ರಾಗ–ತಾಳಗಳ ಚೌಕಟ್ಟಿನಲ್ಲಿ ತಾವೇ ಹಾಡಿ, ತೋರಿಸಿಕೊಟ್ಟರು. ತಂಬಸರಳವಾದ ದೇವರನಾಮಗಳಿಂದ ಹಿಡಿದು ಕ್ಲಿಷ್ಟ ರಚನೆಗಳಾದ ಸುಳಾದಿಗಳವರೆಗೆ ಎಲ್ಲ ರೀತಿಯ ಕೃತಿ ರಚಿಸಿ, ಆಗ ಪ್ರಚಲಿತವಿದ್ದ ರಾಗಗಳನ್ನು ಬಳಸಿ ಕರ್ನಾಟಕ ಸಂಗೀತಕ್ಕೆ ಒಂದು ಸ್ವರೂಪ ಕೊಟ್ಟವರು ಪುರಂದರದಾಸರೆಂದರೆ ಅತಿಶಯೋಕ್ತಿ ಆಗದು. ಭಕ್ತಿ ಪ್ರಧಾನ ವಾದ–ಮತ ತತ್ವ ಸಾರುವ–ಜಾತಿ ಕುಲ ಎಲ್ಲ ಮೀರಿ ಭಗವದನುಭವ ವಿಶೇಷವನ್ನು ಸಾರುವ–ಇವರ ಕೃತಿಗಳು ಹರಿದಾಸ ಆಂದೋಲನದ ಗತಿ ದ್ರುತಗತಿ ತಲುಪಿಸಿದ್ದಲ್ಲದೆ ಮುಂದೆ ಬಂದ ಕ್ಷೇತ್ರಯ್ಯ, ತ್ಯಾಗರಾಜಸ್ವಾಮಿಗಳು, ಮುತ್ತುಸ್ವಾಮಿ ದೀಕ್ಷಿತರೆ ಮೊದಲಾದ ಸಂಗೀತ ವಾಗ್ಗೇಯಕಾರರಿಗೂ ಮಾರ್ಗದರ್ಶಿ ಆದವು. ತಾಳದ ಬಿಗಿ, ರಾಗದ ಸೊಗಸು, ಮಾತಿನ ಸಮರ್ಥ ಬಳಕೆ ಇವು ಪುರಂದರ ಕೃತಿಗಳ ವೈಶಿಷ್ಟ್ಯ, ಭಕ್ತಿ ಯಂತೂ ಹೇಳುವಂತೆಯೆ ಅಲ್ಲ. ಅದೇ ಜೀವಾಳ, ಎಂತಲೇ ಅವರನ್ನು ಕರ್ನಾಟಕದ

ಸಂಗೀತ ಪಿತಾಮಹರೆಂದು ಗೌರವಿಸುವುದು ಸಾರ್ಥಕವಾಗಿದೆಯೆಂದೆ ಅನೇಕ ವಿದ್ವಾಂಸರ ಮತ. "ದೈವೀಸಂಪತ್ತು, ಕಲೆ, ಸಂಸ್ಕೃತಿ ಇವುಗಳೇ ಮೂರ್ತೀಭವಿಸಿ ಬಂತೆಂಬ ದೊಡ್ಡಸ್ಥಿಕೆ" ಪಡೆದವರಲ್ಲಿ ದೊಡ್ಡ ವರೆನಿಸಿದವರು ಶ್ರೀಪುರಂದರದಾಸರು... ಅವರ ಗುರುಗಳಾದ ವ್ಯಾಸರಾಯರೇ ಆಗಲಿ... ಅನಂತರ ಬಂದ ಹರಿದಾಸರಾಗಲಿ, ಇವರನ್ನು ಒಮ್ಮನದಿಂದ ಕೊಂಡಾಡಿದರು. ಮತ್ತು ದಾಸರನ್ನು ನಾರದ ಮಹರ್ಷಿಗಳ ಅವತಾರವೆಂದೇ ಸಾರಿದರು. ದಾಸರಕೃತಿಗಳನ್ನು ಕೇಳಿ ತಮ್ಮ ಮನಸ್ಸಿನ ಮೇಲಾದ ಪರಿಣಾಮದಿಂದ ವ್ಯಾಸರಾಯರಂಥ ಗುರುಗಳು "ದಾಸರೆಂದರೆ ಪುರಂದರದಾಸರಯ್ಯ" ಎಂದು ಹಾಡಿದರು. ಅವರು ಉತ್ತಮವರ್ಗದ ಲಕ್ಷಣಕಾರರು...ಎಂದೆಲ್ಲ ಬಂದಿರುವುವು ಬರಿಯ ಹೊಗಳಿಕೆಯ ಮಾತುಗಳಲ್ಲ, ಅರ್ಥವತ್ತಾದ ನಡಿಗಳು.

ಹರಿದಾಸ ಕೂಟದ ಹೊಣೆಯ ಜತೆ ಪುರಂದರದಾಸರ ಕಣ್ಣ ಮುಂದಿದ್ದದ್ದು ಸಂಗೀತಶಾಸ್ತ್ರದ ಪರಿಸ್ಥಿತಿ "...ಲಕ್ಷ್ಯ ಲಕ್ಷಣಗಳಿಗೆ ವಿರಸವಿದ್ದ ಕಾಲ ಅದು. ಶಾಸ್ತ್ರ ನಿರೂಪಣೆ ವ್ಯವಹಾರದ ಅಗತ್ಯಗಳನ್ನು ಅರಿತುಕೊಳ್ಳದೆ ಬಿಗಿಯಾಗಿ ಬಿಮ್ಮನಿತ್ತು. ಶಾಸ್ತ್ರ ಸಂಕೋಚದಿಂದ ನಿತ್ಯ ವ್ಯವಹಾರವನ್ನು ಬಿಡುಗಡೆ ಮಾಡಬೇಕೆಂದು ಎಲ್ಲ ಲಕ್ಷಣ ಕಾರರೂ ಹೇಳಿದ್ದರು... ಆದರೆ ಲಕ್ಷಣ ಶಾಸ್ತ್ರದ ವಿಧಿ ನಿಷೇಧಗಳನ್ನು ಗಣನೆಗೆ ತಂದುಕೊಳ್ಳದೆ ಪ್ರಯೋಗಸಿದ್ಧವಾದ ವ್ಯವಹಾರ ಶುದ್ಧವಾದ ಲಕ್ಷ್ಯ ಸಂಗೀತವನ್ನು ಪ್ರಚರ ಪಡಿಸಿದ ಧೈರ್ಯ ಆ ಕಾಲದಲ್ಲಿ ಪುರಂದರದಾಸರಿಗಲ್ಲದೆ ಬೇರೊಬ್ಬನಿಗಿದ್ದ ಉಲ್ಲೇಖ ಇಲ್ಲ" ಎಂಬ ಮಾತು ಗಮನೀಯ.

ಪುರಂದರದಾಸರಿಗೆ ಸಂಗೀತದಲ್ಲಿ ಪ್ರವೇಶ ಹೇಗಾಯಿತು, ವ್ಯುತ್ಪತ್ತಿ ಉಂಟಾದ ಬಗೆ ಹೇಗೆ ಎಂಬುದರ ಕುರಿತಾದ ವಿವರ ಅವರಲ್ಲಿಯೇ ಆಗಲಿ, ಮುಂದಿನ ಹರಿದಾಸರ ಕೃತಿಗಳಲ್ಲಾಗಲಿ ತಿಳಿಯಬರುವುದಿಲ್ಲ. ವ್ಯಾಸರಾಯರಲ್ಲಿ ಹರಿದಾಸದೀಕ್ಷೆ ಕೈಗೊಂಡ ಮೊದಲು ಅವರಿಗೆ ಸಂಗೀತದ ಪರಿಚಯವಿತ್ತೆ ? ಸಂಗೀತ ಕಲೆಯಲ್ಲಿ ಅವರಿಗೆ ವಿದ್ವತ್ತು ತುಂಬ ಇತ್ತು ಎಂಬುದು ಅವರ ಕೀರ್ತನೆಗಳಲ್ಲಿ ಸ್ಪಷ್ಟ ಆಗುತ್ತದೆ. ವ್ಯಾಸರಾಯರಿಗೂ ಸಂಗೀತದಲ್ಲಿ ಶಾಸ್ತ್ರೀಯ ಪಾಂಡಿತ್ಯವಿದ್ದಿರಲೇಬೇಕು. ಅದಕ್ಕೆ ಅವರ ಕೃತಿಗಳೆ ನಿದರ್ಶನ. ಆದರೆ ವ್ಯಾಸಕೂಟ-ದಾಸಕೂಟಗಳಲ್ಲಿ ಈ ಬಗ್ಗೆ ಯಾವ ವಿವರವೂ ದೊರೆಯುವುದಿಲ್ಲ. ಪುರಂದರದಾಸರಿಗೆ ಸಂಗೀತದ ಮೇಲಿದ್ದ ವಿಶೇಷ ಪ್ರೀತಿ, ಪರಿಶ್ರಮ, ಅವರ ರಾಗಬಳಕೆ, ರಾಗಗಳನ್ನು ತಿಳಿಸುವಿಕೆ, ನಾಟ್ಯ ಕ್ರಿಯೆಯ ವಿಶೇಷವನ್ನು ತಿಳಿಸುವಿಕೆ, ಎಲ್ಲ ಕೃತಿಗಳಲ್ಲೂ ಅಭಿವ್ಯಕ್ತಗೊಂಡಿವೆ. ಹರಿದಾಸ ಆಂದೋಲನದ ಧ್ಯೇಯ ಸಾಧನೆಯಲ್ಲಿ ಸಂಗೀತದ ಬಳಕೆ ಅತ್ಯಂತ ಸೂಕ್ತ, ಹಾಗೂ ಪರಿಣಾಮಕಾರಿ ಎಂಬುದು ಅವರಿಗೆ ದಾಸದೀಕ್ಷೆ ಕೈಗೊಂಡ ನಂತರ ಥಟ್ಟನೆ ಸ್ಫುರಿಸಿರಬಹುದು. ಅವರ ಪ್ರಸಾರಕರ ಜತೆ ಇದ್ದ ಸಂಗೀತ ಸಂಕೀರ್ತನ, ಭಕ್ತಿಸಾಹಿತ್ಯ-ಶಾಸ್ತ್ರೀಯ ಸಂಗೀತ ಮಾಧ್ಯಮ ಇವೆರಡರ ಪರಸ್ಪರ ಅನ್ಯೋನ್ಯತೆ ಕಾಣಬರದ್ದನ್ನು ಪುರಂದರರೆ ನಿವೇದಿಸಿದ್ದಾರೆ.

ಕೇಳನೋ, ಹರಿತಾಳನೋ, ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ ॥ಪ॥
ತಂಬೂರಿ ಮೊದಲಾದ ಅಖಿಳವಾದ್ಯಗಳಿದ್ದು ।
ಕೊಂಬುಕೊಳಲು ಧ್ವನಿಸ್ವರಗಳಿದ್ದು ।
ತುಬುರು ನಾರದರ ಗಾನ ಕೇಳುವ ಹರಿ ।
ನಂಬಲಾರ ಈ ಡಂಭಕದ ಕೂಗಾಟ ॥
ನಾನಾ ಬಗೆಯ ರಾಗಭಾವ ತಿಳಿದು ಸ್ವರ ।
ಜ್ಞಾನ ಮನೋಧರ್ಮ ಜಾತಿಯಿದ್ದು ।
ದಾನವಾರಿಯ ದಿವ್ಯನಾಮ ರಹಿತವಾದ ।
ಹೀನ ಸಂಗೀತಕ್ಕೆ ಮನವಿತ್ತು ...... ॥

ಹೀಗೆಂದು ಉದ್ಗರಿಸಿ, ಸಂಕೀರ್ತನವು ಹೇಗಿರಬೇಕೇಬಂದನ್ನು ತಾವೇ ತಿಳಿಸಿದ್ದಾರೆ :

ತಾಳ ಬೇಕು, ತಕ್ಕ ಮೇಳ ಬೇಕು ಶಾಂತ ವೇಳೆ ಬೇಕು ಗಾನ ಪಾಡುವಗೆ ॥1॥
ಯತಿಪ್ರಾಸವಿರಬೇಕು ಗತಿಗೆ ನಿಲ್ಲಿಸಬೇಕು
ರತಿಪತಿಪಿತನೊಳು ಅತಿಪ್ರೇಮವಿರಬೇಕು ॥2॥
ಗಳ ಶುದ್ಧವಿರಬೇಕು ತಿಳಿದು ಹೇಳಲು ಬೇಕು ।
ಕಳವಳ ಬಿಡಬೇಕು ಕಳೆಮುಖವಿರಬೇಕು ॥3॥
ಅರಿತವರಿರಬೇಕು ಹರುಷ ಹೆಚ್ಚಲುಬೇಕು ।
ಪುರಂದರವಿಠಲನೆ ಪರದೈವವೆನಬೇಕು ॥4॥

ಇದರಿಂದ ಅವರ ಸಂಗೀತ ಪ್ರೌಢಿಮೆ ತಿಳಿಯುತ್ತದೆ ಹಾಗೂ ಸ್ವರಜ್ಞಾನ, ರಾಗಶಾರೀರ, ಒಳ್ಳೆಯ ತಾಳ ಗತಿ ಇಲ್ಲದೆ ಸಂಗೀತ ಶೋಭಿಸದೆಂದೂ ತಿಳಿಯುತ್ತದೆ. ಇದಲ್ಲದೆ "ಹರಿ ಸರ್ವೋತ್ತಮ ಎನ್ನಬೇಕು ವಾಯು ಜೀವೋತ್ತಮನೆಂತ್ಸ ಹೇಳಬೇಕು" ಎಂಬ ಮಧ್ವಮತ ಪ್ರಸಾರವೂ ನಡೆದಿದೆ.

ಮೇಲ್ಕಂಡ ಉದಾಹರಣೆಯ ಜತೆಗೇ ಪುರಂದರದಾಸರಿಗಿದ್ದ ತಾಳದ ಮೇಲಣ ಪ್ರಭುತ್ವ ಅವರ ಲಯದ ಅರಿವು–ಭರತನಾಟ್ಯದ ಪರಿಚಯ ತಿಳಿಸುವ ಈ ಕೃತಿ; ತುಂಬ ಜನಪ್ರಿಯ :

ಆಡಿದನೋ ರಂಗ, ಅದ್ಭುತದಿಂದಲಿ, ಕಾಳಿಂಗನ ಫಣೆಯಲಿ ॥ಪ॥
ಬೇಡಿದವರಿಗೆ ಬೇಡಿದ ವರಗಳ
ನೀಡುತಲೀದಯೆಮಾಡುತಲೀನಲಿ
ದಾಡುತಲೀ ಬೆಣ್ಣೆ ಬೇಡುತಲಿ ॥ಅ.ಪ.॥

ಅಂಬುಜೋದ್ಭವ ಅಖಿಳ ಸುರರು ಕೂಡಿ
ಅಂಬರದಲಿ ನಿಂತು ಅವರ ಸ್ತುತಿಸೆ
ರಂಭೆ ಊರ್ವಶಿ ರಮಣಿಯರೆಲ್ಲರು
ಚಂದದಿಂ ಭರತನಾಟ್ಯವ ನಟಿಸೆ
ಝಂ ತಟ ತಕ ಧಿಮಿ ತಧಿಗಿಣತೋ ಎಂದು
ಝಂಪೆ ತಾಳದಿ ತುಂಬುರನೊಪ್ಪಿಸೆ
ಧಾ ನು ಪ ಪಾ ಧ ಸ ರೀ ಎಂದು ಧ್ವನಿಯಿಂದ ನಾರದ ತುಂಬುರ
ಗಾನವ ಮಾಡಲು ನಂದಿಯು ಮದ್ದಲೆ ಚಂದದಿ ಹಾಕಲು ॥1॥

'ಝಂಪೆ' ತಾಳ ಅವರ ಮೆಚ್ಚಿನ ತಾಳವಿರಬೇಕು.

ಪುರಂದರದಾಸರು ಸಂಗೀತ ಜಗತ್ತಿನಲ್ಲಿ ಮಾಡಿದ ವ್ಯವಸಾಯ, ಸಂಗೀತದ ಅಧ್ಯಯನಕ್ಕೆ ಭದ್ರವಾದ ಬುನಾದಿ ಹಾಕಲು ಮಾಡಿದ ಕಾರ್ಯ ಸದಾ ಮಾನ್ಯವಾಗಿರುವಂಥದು. ಒಂದು ಸಂಗೀತ ಸಂಪ್ರದಾಯವನ್ನೆ ನಿರ್ಮಿಸಿದರವರು. ಅವರ ಕಾಲದಲ್ಲಿ ಖರಹರಪ್ರಿಯ ರಾಗವನ್ನು ಶುದ್ಧರಾಗವನ್ನಾಗಿ ಗ್ರಹಿಸುವ ವಾಡಿಕೆಯಿದ್ದಿತು. ಮಾಯಾಮಾಳವಗೌಳರಾಗವನ್ನು ಶುದ್ಧರಾಗವೆಂದು ತಿಳಿಸಿಕೊಟ್ಟು ಸಂಗೀತ ಶಾಸ್ತ್ರದ ಪಾಠಕ್ರಮಕ್ಕೆ ಆರಂಭರಾಗವಾಗಿರಿಸಿದುದೆ ಅವರ ವಿಚಾರಪರತೆ, ಪ್ರತಿಭೆಗಳಿಗೆ ನಿದರ್ಶನ. ಮಾಯಾಮಾಳವಗೌಳ ರಾಗದಲ್ಲಿ ಷಡ್ಜ, ಶುದ್ಧ ಋಷಭ, ಅಂತರಗಾಂಧಾರ, ಶುದ್ಧ ಮಧ್ಯಮ, ಪಂಚಮ, ಶುದ್ಧ ಧೈವತ, ಮತ್ತು ಕಾಕಲಿನಿಷಾದ ಈ ಸ್ವರಗಳ ಸಂಚಾರವಿದ್ದು, ಸ್ವರ ಸ್ಥಾನಗಳನ್ನು ಸುಲಭವಾಗಿ ಮನಸ್ಸಿನಲ್ಲಿ ನಿಲ್ಲಿಸಿ, ಅದಕ್ಕನುಗುಣವಾಗಿ ಶಾರೀರ-ಸ್ವರ ಸ್ಥಾನ ಶುದ್ಧಿ ಸಾಧಿಸಲು ತುಂಬ ಮಾರ್ಗದರ್ಶಕ ಆಗಿದೆ. ಸರಳ, ಸುಲಭ, ಶುದ್ಧ–ಈ ಮೂರೂ ಲಕ್ಷಣಗಳುಳ್ಳ ಈ ರಾಗವನ್ನು ಪುರಂದರದಾಸರು ಸಂಗೀತಾಭ್ಯಾಸಕ್ಕೆ ಬುನಾದಿಯಾಗಿ ಹಾಕಿಕೊಟ್ಟುದೆಂದೆ ಕರ್ಣಾಟಕ ಸಂಗೀತದ ಸ್ವರೂಪ ನಿರ್ದುಷ್ಟವಾಯಿತು ಎಂದರೂ ಸರಿಯೆ.

ಈ ತೆರನಾಗಿ ಮಾಯಾಮಾಳವಗೌಳ ರಾಗವನ್ನು ಅಭ್ಯಾಸದ ಪ್ರಥಮ ರಾಗವಾಗಿ ನಿರ್ದೇಶಿಸಿದ್ದಷ್ಟೆ ಅಲ್ಲ, ಶಾಸ್ತ್ರೀಯ ಸಂಗೀತಾಭ್ಯಾಸವನ್ನೂ ಸುವ್ಯವಸ್ಥೆಗೊಳಿಸಲು, ದಾಸರಾಯರು, ಪ್ರಾಚೀನ ತಾಳಗಳನ್ನು ಬದಿಗೊತ್ತಿ, ಸುಲಭವಾದ ಸಪ್ತಸುಳಾದಿ ತಾಳ ಅಳವಡಿಸಿದರು. ಹಾಗೂ ಮಾಯಾಮಾಳವಗೌಳ ರಾಗದಲ್ಲಿಯೆ ಸರಳವರಸೆ, ಜಂಟಿವರಸೆ, ಸ್ವರಾವಳಿ, ಸಪ್ತತಾಳದ ಅಲಂಕಾರ–ಇವೆಲ್ಲವನ್ನೂ ರಚಿಸಿದರು. "ಧಾತು" "ಮಾತು" ಗಳಿಗೆ ಸಂಬಂಧರ ಸಮನ್ವಯವನ್ನೂ ಹಾಗೂ ರಾಗಲಕ್ಷಣ ಪರಿಚಯಿಸ ಲೋಸುಗ ಸಾಮಾನ್ಯ ಗೀತೆಗಳನ್ನೂ ರಚಿಸಿಕೊಟ್ಟರು. ಇದನ್ನು ಪುರಂದರದಾಸರ ಸಮಕಾಲೀನ ಸಂಗೀತ ಶಾಸ್ತ್ರಕಾರನಾದ ರಾಮ ಅಮಾತ್ಯನೂ ಗುರುತಿಸಿ, ಗೌರವಿಸಿದ್ದಾನೆ. ಇಂದಿಗೂ ಕನ್ನಡ, ತಮಿಳು, ತೆಲುಗು, ಮಲಯಾಳ ದೇಶಗಳಲ್ಲಿ ಸಂಗೀತ ಕಲಿಯಂಬವ

ವಿದ್ಯಾರ್ಥಿಗಳು ದಾಸರಾಯರುಹಾಕಿಕೊಟ್ಟ ಪಾಠಗಳನ್ನೇ ಮೊದಲಲ್ಲಿ ಕಲಿಯುವ ಪದ್ಧತಿ ಇದೆ.

ಇದಿಷ್ಟೇ ಅಲ್ಲ ಪುರಂದರದಾಸರು ಸಂಗೀತ ಕಲಿವ ವಿದ್ಯಾರ್ಥಿಗೆ ಮೊದಲು ತನು ಮನ ಶುದ್ಧಿ ಒದಗಲು "ಪಿಳ್ಳಾರಿ" ಗೀತೆಗಳೆಂದು ಪ್ರಸಿದ್ಧ ಆಗಿರುವ ನಾಲ್ಕು ಗೀತೆಗಳನ್ನು ಮಾಯಾಮಾಳವಗೌಳರಾಗದ ಜನ್ಯ ರಾಗ ಆದ "ಮಲಹರಿ" ರಾಗದಲ್ಲಿ ರಚಿಸಿದರು. "ಶ್ರೀ ಗಣನಾಥ ಸಿಂಧುರ ವರ್ಣ", 'ಲಂಬೋದರ ಲಕುಮಿಕರ', 'ಕುಂದಗೌರ ಗೌರೀವರ' "ಕೆರೆಯ ನೀರನು ಕೆರೆಗೆ ಚೆಲ್ಲಿ" ಇವೇ ಆ ನಾಲ್ಕು ಗೀತೆಗಳು. ಇದಲ್ಲದೆ ಇನ್ನೂ ಅನೇಕ ಲಕ್ಷಣ ಗೀತೆಗಳನ್ನು ದಾಸರಾಯರು ರಚಿಸಿದ್ದರೆಂದೂ, ಅವರ ಅಮೂಲ್ಯ ಕೊಡುಗೆ ವಿಜಯನಗರ ಪತನದ ವೇಳೆಯಲ್ಲಿ ನಾಶವಾಗಿರಬಹುದೆಂದೂ ಸಂಗೀತ ಇತಿಹಾಸಕಾರರು ಊಹಿಸುತ್ತಾರೆ. ಪಿಳ್ಳಾರಿಗೀತೆಗಳಿಂದ ಪುರಂದರದಾಸರಿಗೆ ವಾಗ್ಗೇಯಕಾರರಲ್ಲಿಯೇ ಅಗ್ರಗೌರವ ದೊರೆತಿದೆ.

ಪುರಂದರದಾಸರು ಅವರ ಕಾಲದಲ್ಲಿ ತಾಳದ ವಿಚಾರವಾಗಿ ಇದ್ದ ಗೊಂದಲವನ್ನೂ ಪರಿಷ್ಕರಿಸಿದ್ದಲ್ಲದೆ ಸಪ್ತತಾಳಗಳನ್ನು ಹಾಗೂ ಪಂಚಜಾತಿಗಳನ್ನು ನಿರ್ದೇಶಿಸಿದರು. ಧ್ರುವ, ಮಠ್ಯ, ರೂಪಕ, ಝಂಪೆ, ತ್ರಿಪುಟ, ಅಟ್ಟ, ಏಕ-ಇವೇ ಆ ಏಳು ತಾಳಗಳು ; ತ್ರ್ಯಶ್ರ, ಚತುರಶ್ರ, ಖಂಡ, ಮಿಶ್ರ, ಸಂಕೀರ್ಣ-ಇವು ಐದು ಜಾತಿಗಳು. ಇದೇ ಇಂದೂ ಉಳಿದಿರುವ ಅಭ್ಯಾಸ ಪಾಠಕ್ರಮ. ಈ ಏಳು ತಾಳಗಳನ್ನು ಸಂಗೀತ ಶಾಸ್ತ್ರದಲ್ಲಿ ಸುಳಾದಿ ಸಪ್ತ ತಾಳಗಳೆಂದು ಕರೆದಿದ್ದಾರೆ. ("ಸುಳಾದಿ", ಉಗಾಭೋಗ ಇತ್ಯಾದಿಗಳ ಬಗ್ಗೆ ಹಿಂದಿನ ಅಧ್ಯಾಯಗಳಲ್ಲಿ ವಿವರವಾದ ಚರ್ಚೆ ನಡೆದಿರುವಂತೆ ಅವು ತಾಳ ಪ್ರಧಾನ ಕೃತಿಗಳೆಂದು ತಿಳಿಯಬಹುದೆಂದು ಮಾತ್ರ ಇಲ್ಲಿ ಹೇಳಬಹುದಷ್ಟೆ.)

ಸಂಗೀತ ಶಾಸ್ತ್ರ ಕುರಿತ ಈ ಚರ್ಚೆ ಮುಂದುವರಿಸಬಹುದಾದರೂ, ಹರಿದಾಸ ಕೂಟದವರು ಒಟ್ಟಾರೆ ಸಂಗೀತವನ್ನು ಅತ್ಯಗತ್ಯವಾದ ಒಂದು ಅಂಗವೆಂಬ ಪ್ರಾಮುಖ್ಯತೆಯನ್ನಿತ್ತಿತೆಂದು ಅನೇಕ ಹರಿದಾಸರ ಕೃತಿಗಳಲ್ಲಿ ವ್ಯಕ್ತ ಆಗುವ ಅವರ ಭಾವನೆಗಳ ಸಾರಾಂಶವೆ. ಅವರಿಗಿದ್ದುದು ಮುಖ್ಯಧ್ಯೇಯ ಹರಿಸರ್ವೋತ್ತಮತ್ವ, ಹರಿಭಕ್ತಿ, ಮಧ್ವಮತ ತತ್ವ, ವೈಷ್ಣವ ಧರ್ಮ-ಇವುಗಳ ಪ್ರಸಾರ. ಏಕೋದೇವ ಉಪಾಸನೆ ನಾರಾಯಣ ಪರತತ್ವ ಪ್ರಚಾರ ಹಾಗೂ ಅದ್ವೈತ, ನಿರೀಶ್ವರ ವಾದಿ ಮತಗಳ ಖಂಡನ. ಸ್ವಮತ ಪ್ರತಿಪಾದನ. ಇವುಗಳೇ ಹರಿದಾಸ ಆಂದೋಲನದ ಅಂಕುರಿಸುವಿಕೆಗೆ, ಮುಂದುವರಿಕೆಗೆ ಪ್ರಧಾನ ಕಾರಣಗಳೆಂಬುದನ್ನು ನಾವು ಮರೆವಹಾಗಿಲ್ಲ. ಭಕ್ತಿಯ ಅಭಿವ್ಯಕ್ತಿಗೆ, ತಮ್ಮ ಉದ್ದೇಶ-ಧ್ಯೇಯ ಬಿತ್ತರಿಸುವಿಕೆಗೆ, ಸಂಗೀತ ಒಂದು ಸುಲಭವಾದ, ಮನೋಜ್ಞವಾದ ಸಾಧನವೆಂಬುದೆ ಹರಿದಾಸರ ನಂಬುಗೆಯಾಗಿತ್ತು. ಪುರಂದರದಾಸರು ಕರ್ನಾಟಕ ಸಂಗೀತ ಪಿತಾಮಹರೆ ಆದರೂ ಅವರ ಆಚಾರ್ಯ ಪುರುಷ ವ್ಯಕ್ತಿತ್ವದ ಪ್ರಸ್ತಾಪ, ಅಭಿಮಾನ ಹರಿದಾಸರಲ್ಲಿ ಬೆಳೆದು ಬಂದಂತೆ, ಬಿತ್ತರ ಆದಂತೆ ಕಾಣುವುದಿಲ್ಲ. ಪುರಂದರರ ಸಮಕಾಲೀನರಾಗಲಿ, ಅವರ ನಂತರ ಬಂದ ವಿಜಯದಾಸಾರ್ಯರೆ ಆಗಲಿ,

ಪುರಂದರರ ಸಂಗೀತ ವಿವ್ಯತ್ತಿಯು ಮುಖ ಪ್ರಸ್ತಾಪಿಸಿದರು. ಪ್ರಸನ್ನ ವೆಂಕಟದಾಸರು ಮಾತ್ರ "ಗೀತತಾಯಿ ಸುಳಾದ್ಯುಗಾಭೋಗ ಪದ್ಯ ಪದವ್ರಾತ" ಪ್ರಬಂಧಗಳಿಂದ ಪುರಂದರದಾಸ ವಿಠಲನನ್ನು ಪ್ರೀತಿ ಪಡಿಸಿದರೆಂದು ಸ್ಮರಿಸಿದ್ದಾರೆ. ಇವರ ಜತೆ ಹರಿದಾಸರ ಧ್ಯೇಯ, ಹರಿದಾಸರ ಸಂಘಟನೆ, ಹರಿಕಥಾಶ್ರವಣ, ಹರಿಕೀರ್ತನ, ಇವುಗಳನ್ನು ಹರಿದಾಸ ಕೂಟದವರು ಎತ್ತಿ ಹಿಡಿದರೆಂಬುದೂ ಸುವಿದಿತ ಅಂಶವೆ ಆಗಿದೆ.

ಪುರಂದರದಾಸರೊಬ್ಬರೆ ೪,೭೫,೦೦೦ ಕೃತಿ ರಚಿಸಿದರೆಂಬ ಪ್ರತೀತಿ ಇದೆ. ಇವುಗಳಲ್ಲಿ ಪ್ರತಿಯೊಂದಕ್ಕೂ ಜ್ಞಾನ ರಾಗ ರಚನೆ, ಧಾತು-ವರ್ಣ ಮಟ್ಟು ಇದ್ದವೆ ಎಂದು ಹೇಳಲಾಗುವುದಿಲ್ಲ. ಅವರ ರಾಗ ತಾಳ ಮಟ್ಟು ಸರಳವೆಂದು ಹೇಳಬಹುದೆಂಬುದೆ ವಿದ್ವಾಂಸರ ಅಭಿಪ್ರಾಯ. "ಅವರ ಗೀತೆಗಳೆಲ್ಲ ರಾಗ-ಭಾವ-ತಾಳಗಳ ಸಂಬಂಧದ ಸಮನ್ವಯದ ಪರಿಪೂರ್ಣ ದೃಷ್ಟಾಂತಗಳಾಗಿವೆ" ಇದು "ಕೃತಿ" ಎಂದು ನಾವು ಕರೆಯುತ್ತಿರುವ ರಚನಾ ಪ್ರಕಾರವನ್ನು ಪರಿಪೂರ್ಣಗೊಳಿಸಿದವರು ಪುರಂದರದಾಸರೇ.

ಪುರಂದರದಾಸರಂತೆಯೇ ಕನಕದಾಸರು, ವಾದಿರಾಜರು, ವೈಕುಂಠದಾಸರು ಮೊದಲಾದ ಹರಿದಾಸರೆಲ್ಲ ಸಂಗೀತವನ್ನು ಹರಿದಾಸ ಆಂದೋಲನದ ಪ್ರಸಾರ ಮಾಧ್ಯಮವಾಗಿ ತಂತಮ್ಮ ವಿಶಿಷ್ಟ ರೀತಿಯಲ್ಲಿ ಬಳಸಿಕೊಂಡಿದ್ದಾರೆ. ಪುರಂದರದಾಸರ ಕಾಲದಲ್ಲಿ, ಬಳಕೆಯಲ್ಲಿದ್ದ ೩೨ ರಾಗಗಳನ್ನು ಬಸವಣ್ಣನವರೂ 'ಬತ್ತೀಸ' ರಾಗವೆಂದು ತಮ್ಮ ವಚನಗಳಲ್ಲಿ ತಿಳಿಸಿದ್ದಾರೆ. ದಾಸರಾಯರೆ ಒಂದೆಡೆ ಹೀಗೆಂದು ಹಾಡಿದ್ದಾರೆ:

ಪಾಡಿ ಮಲಹರಿ ಭೈರವಿ ಸಾರಂಗದೇಶಿ
ಗುಂಡಕ್ರಿಯೆಗುರ್ಜರಿ ಕಲ್ಯಾಣರಾಗದಿ
ತಂಡ ತಂಡದಲಿ ನೆರೆದು ರಂಗನ ಉಡಿಯಗಂಟೆ
ಘಣ್ ಘಣ್ ಘಣ್ ಘಣರೆಂದು ಹಿಡಿದು ಕುಣಿಸುವರು......

ಸಂಗನೆಯರೆಲ್ಲ ನೆರೆದು ಚಪ್ಪಾಳಿಕ್ಕುತ ಒಟ್ಟಾರೆ. ಮೊಗುಂತಿ ತಂದೆ ವಂಕಂತಿ, ಪುರಂದರರ ಮೂಲಕ ಹರಿದಾಸರೊಬ್ಬರನ್ನೆ ಅಲ್ಲ, ಸಂಗೀತ ಪದ್ಧತಿಯ ಪ್ರವರ್ತಕರನ್ನೇ ನೀಡಿತ್ತೆನ್ನ ಬೇಕು.

ಪುರಂದರದಾಸರ ನಂತರ ಬಂದ ವಿಜಯದಾಸರು ತಮ್ಮ ಗುರುಗಳಿಂದು "ಬೇಸರಿದೆ ಭಜಿಸಿರೋ ಪುರಂದರದಾಸರಾಯರ" ಎಂದು ಹಾಡುತ್ತಾ ತಮ್ಮ ಗುರುಗಳು ಶಿಲಕ್ಷದ ಸುಳಾದಿ ರಚಿಸಬೇಕೆಂದಿದ್ದರೆಂದೂ, ಅವರು ರಚಿಸಿ, ಉಳಿದ ೨೫,೦೦೦ ಕೃತಿ ತಾವು ರಚಿಸಿರುವರೆಂದೂ ತಿಳಿಸಿದ್ದಾರೆ. ಹರಿದಾಸರ ಪದಗಳನ್ನು 'ದೇವರ ನಾಮ' ವೆಂದು ವಾಡಿಕೆ ಇದೆ. ಇದೇ ಸಂಕೀರ್ತನ ಪದ್ಧತಿ-ಕೀರ್ತನೆ, ಎನ್ನುವುದು.

ಪುರಂದರದಾಸರ ಸಮಕಾಲೀನರಾದ ಕನಕದಾಸರು ಸಂಗೀತಕ್ಕೆ ಕೊಡಂಗೆ ನೀಡದ್ದರೂ, ಹರಿದಾಸ ಆಂದೋಲನಕ್ಕೆ ಒಂದು ಕಂತ್ರಾಗಿದ್ದ ಜಾತಿ ಕೆಲ ಪದ್ಧತಿಯ ಗೆ ಸಾಕಷ್ಟು ವಿಡಂಬನ ಮಾಡುವ ಧೈರ್ಯ ಮಾಡಿದ್ದಾರೆ. ಸಂಗೀತವನ್ನಾಗಿ ಹರಿದಾಸ

ಆಂದೋಲನ ಮಾಧ್ಯಮವಾಗಿ ಮಾಡಿಕೊಡುಂದಂತೂ ನಿಜ. ಕೇಳುವವರಿಗೆ ಹಿತವಾಗಿರುವಂತೆ ಸ್ವರಕಂಪಿಸಿ, ರಾಗಕ್ಕನುಗುಣವಾಗಿ ಹಾಡುವುದು, ಸಾಹಿತ್ಯಕ್ಕೆ ಪ್ರಧಾನತೆಯಿಯುವ ಕಲೆ ಗಮಕ ಕಲೆ. ಕನಕದಾಸರ ಷಟ್ಪದಿ ಕಾವ್ಯಗಳು–ನಳಚರಿತ್ರೆ, ಹರಿಭಕ್ತಸಾರ, ಧ್ಯಾಮಧಾನ್ಯ ಚರಿತ್ರೆಯಲ್ಲಿ ಗಮಕ ಮಟ್ಟಿಗೆ ಬಂದರೂ, ಜಾನಪದ ತ್ರಿಪಾದಿಯನ್ನು ಎಳೆದು ಹಾಡುವಂಥ ಸಾಂಗತ್ಯ ಕಾವ್ಯ–ಮೋಹನ ತರಂಗಿಣಿ. ಇದು ರಸಿಕರಿಗೆ ಮನಾಹ್ಲಾದಿಕಾವ್ಯ ಕೂಡ.

ವಾದಿರಾಜರ ವಾಗ್ವಿಲಾಸ ಪ್ರತಿಬಿಂಬಿಸುವ ಅವರ ಅನೇಕ ರಚನೆ, ಹರಿದಾಸ ಆಂದೋಲನಕ್ಕೆ ಅವರನ್ನು ,ಒಬ್ಬ ಸಮರ್ಥನೇಕಾರರನ್ನಾಗಿಸಿವೆ. ತಮ್ಮ ಕಾಲದಲ್ಲಿ (ಕ್ರಿ ಶ ೧೪೮೦–೧೬೦೦) ಅನೇಕ ಸುಧಾರಣೆ ಕ್ರಮ ಕೈಗೊಂಡ ವಾದಿರಾಜಸ್ವಾಮಿಗಳು ಭಕ್ತಕವಿ, ಸಂಗೀತ ಪರಿಣತರು. ಅವರ ಕೀರ್ತನೆ ಹಾಗೂ ಇತರ ಕೃತಿಗಳು ಹರಿದಾಸ ಆಂದೋಲನಕ್ಕೆ ಅವರನ್ನು ಒಬ್ಬ ಸಮರ್ಥನೇಕಾರನೆನಿಸುತ್ತವೆ.

ಅವರ ಒಂದು ರಚನೆ ಇಲ್ಲಿ ಉಲ್ಲೇಖಾರ್ಹ

ಹರಿಯು ಭಜನೆ ಮಾಡೋ ನಿರಂತರ ಪರಗತಿಗಿದು ನಿರ್ಧಾರ
ಮೊದಲಲಿ ತೋರುತದೆ ಮಧುರ ವಿಷಯ ಸುಖ
ಕಡೆಯು ಅದು ದುಃಖ ಅನೇಕ–॥1॥
ವೇದಶಾಸ್ತ್ರಗಳ ನೋಡಿದರೇನು
ಸಾಧನಕಿದು ನಿರ್ಧಾರ–॥2॥
ಸಾರವೊ ಬಹು ಸಂಸಾರ ವಿಮೋಚಕ
ಸೇರೋ ಶ್ರೀ ಹಯವದನನ್ನ-॥3॥

ವಾದಿರಾಜರ ಈಶ್ವರ ಸ್ತುತಿ ಕೀರ್ತನೆಯೂ ಅಷ್ಟೆ ಮನೋಜ್ಞ.

ಧವಳ ಗಂಗೆಯ ಗಂಗಾಧರ ಮಹಾಲಿಂಗ ಮಾ
ಧವನ ತೋರಿಸಯ್ಯ ಗುರುಕುಲೋತ್ತುಂಗ ॥ಪ॥
ಅರ್ಚಿಸಿದವರಿಗಭೀಷ್ಟವ ಕೊಡುವ
ಹೆಚ್ಚಿನ ಅಘಗಳ ಬೇಗನೆ ತರಿವ
ದುಶ್ಚರಿತರನ್ನೆಲ್ಲ ದೂರದಲ್ಲಿಡುವನ
ಮ್ಮ ಅಚ್ಯುತನಲ್ಲದ ಅಸುರರ ಬಡಿವ ॥1॥

ವಾದಿರಾಜರ ಒಂದು ರಚನೆ ಅವರ ಕಾಲದ ವಾದ್ಯಗಳನ್ನು ಪ್ರಕಟಿಸುತ್ತದೆ.

ಕೊಂಬು ಚೆಂಬು ಕಹಳೆಗಳು ತಾಳಮದ್ದಳೆಗಳು
ಕಂಬಟಿ ಭೇರಿ ಕಳಹಗಳು

ಭೋಂ ಭೋಂ ಎಂಬ ಶಂಖ ಹೊಳ್ಳುಮರಿಗಳು
ಅಂಬುಧಿಯ ಮನೆಯಲಿಸೆದುವು

ಇಲ್ಲಿ ನಾಟ ರಾಗವನ್ನು ಕೂಡ ಹೆಸರಿಸುತ್ತಾರೆ.

ಇದಲ್ಲದೆ ಆಗ್ಗೆ ಇದ್ದ ನಿಜಗುಣಶಿವಯೋಗಿಗಳು ಉಲ್ಲೇಖಿಸುವ ಮುರಜೆ, ಕಹಳೆ, ಶಂಖ, ಘಂಟಾದಿ ನಿನಾದ ಇವೆಲ್ಲ ವಾದ್ಯಗಳನ್ನು ಹರಿದಾಸ ಆಂದೋಲನದ ಪರಂಪರೆಯವರು ತಮ್ಮ ಕೃತಿಗಳಲ್ಲಿ ಪರಿಚಯಿಸಿದ್ದಾರೆ. ಭೂಪಾಳಿ, ಧನ್ಯಾಸಿ, ಮುಲಹರಿ, ದೇವಗಾಂಧಾರಿ, ಸೌರಾಷ್ಟ್ರ, ಆತಃಹೆಸರಿಸಿರುವ ಕೆಲವು ರಾಗಗಳು. ಪುರಂದರರು ನೀಡುವ ರಾಗದ ಪರಾಕು, ವಿಜಯದಾಸರು ಭಗವಂತನನ್ನು ಅನೇಕ ರಾಗಗಳ ಹೆಸರಿನಲ್ಲಿ ಸ್ತುತಿಸುವುದನ್ನು ನಾವು ಕಾಣುತ್ತೇವೆ. ಹರಿದಾಸರ ಕೃತಿಗಳಲ್ಲೆಲ್ಲ ಸಾಮಾನ್ಯವಾಗಿ ಬರುವ ಮೊದಲು ತಿಳಿಸಿದ ವಾದ್ಯಗಳ ಜತೆ ಇವನ್ನು ಪ್ರಸ್ತಾಪಿಸಲಾಗಿದೆ. ದಂಡಿಗೆ, ವೀಣೆ, ಕಿನ್ನರಿ, ಮುಖವೀಣೆ, ಕೊಳಲು, ಮದ್ದಳೆ, ಢಕ್ಕೆ, ಚೆಂಡೆ, ಕಿಂಕಿಣಿ, ಡೌಡೆ, ಕಂಕೊಳುರು, ತಿತ್ತಿ,ದಂಟಿಗೆ, ಮುಖರಿ, ಭೇರಿ, ನಿಸ್ಸಾಳ, ಪಟಹ, ಹೆಗ್ಗಾಳೆ, ಶಂಖ, ಇತ್ಯಾದಿ. ಕೀರ್ತನೆ, ಸುಳಾದಿ, ಉಗಾಭೋಗಗಳ ಛಂದೋ ಪ್ರಕಾರ, ರಚನೆಯ ಬಗ್ಗೆ ನಾವು ವಿಶದೀಕರಿಸಲು ಇಲ್ಲಿ ಪ್ರಯತ್ನಿಸಿಲ್ಲ. ಇದು ಬೇರೆ ಅಧ್ಯಯನದ ವಸ್ತುವೇ ಆಗುತ್ತವೆ. ಹರಿದಾಸ ಆಂದೋಲನ ಬಳಸಿದ ಕರ್ನಾಟಕ ಸಂಗೀತ, ಸ್ವಲ್ಪಮಟ್ಟಿಗೆ ಗೀತವಾದ್ಯ ಮೇಳದೊಂದಿಗೆ ನೃತ್ಯವನ್ನೂ ಸಂಗೀತದ ಒಂದು ಅಂಗವಾಗೇ ಪರಿಗಣಿಸಿದರು. ಅನಂತರ, ನೃತ್ಯ ವಿರಹಿತವಾದ ಸಂಗೀತ ಬೆಳೆದರೂ, ಸಂಗೀತವಿರದ ನೃತ್ಯ ಬೆಳೆಯಲಾಗಲಿಲ್ಲ. ಹರಿದಾಸರ ಆಂದೋಲನ ಗಮನವಿತ್ತದ್ದು ಅನುಭಾವದೊಡಗೂಡಿ ಹಾಡುವಾಗ ತಾನಾಗಿಯೆ ಹಾಕುವ ಗೆಜ್ಜೆಯೊಡಗೂಡಿದ ಹೆಜ್ಜೆ ಪಜ್ಜೆಗೆ. ಇದರಿಂದ ಜನಸಾಮಾನ್ಯರು ಕೇಳುವಿಕೆಯೊಂದಿಗೆ, ಪಾದಗಳ ಕುಣಿತ; ಕೂಡ ಅನುಭವಿಸುವಂತಾಗಿ, ಹರಿದಾಸ ಸಂದೇಶ ಇನ್ನೂ ಚೆನ್ನಾಗಿ ಮನದಟ್ಟು ಆಗುವಂತಾಯಿತು. ಈ ದಿಸೆಯಲ್ಲಿ ಹರಿದಾಸ ಪರಂಪರೆಯ ಸಮಾಜ ಹಿತಕಾರ್ಯ ಸಂಗೀತ ಮಾಧ್ಯಮದ ಮೂಲಕ ತೃಪ್ತಿಕರವಾಗಿಯೇ ನೆರವೇರಿತೆಂದು ಹೇಳಬಹುದು. ವಿಜಯದಾಸರ ನಂತರ ಹರಿದಾಸರು ಗಮನ ಹೆಚ್ಚು ಹೆಚ್ಚು ಮಧ್ವ ತತ್ವ–ಶಾಸ್ತ್ರಗಳತ್ತ ತಿರುಗಿದರೂ ಅದನ್ನೂ ಆಚಾರ್ಯ ಗ್ರಂಥಗಳ ಸಾರವನ್ನೂ, ಭಾಗವತಾದಿ ಪೌರಾಣಿಕ ಗ್ರಂಥಗಳ ಸುಂದರ ಪ್ರಸಂಗಗಳನ್ನೂ ಸುಲಲಿತ ಸಂಗೀತ, ಅನೇಕ ಸುಳಾದಿಗಳ ಮೂಲಕ ಪ್ರಸಾರ ಮಾಡಿದ್ದು, ಶಾಸ್ತ್ರ ಶುಷ್ಕರಾಗದೆ ಬರೀ ತರ್ಕಕ್ಕೆ ಮೀಸಲಾಗದೆ, ಸಾಮಾನ್ಯರಿಗೂ ನಿಲುಕುವಂತಾಯಿತು. ಜಗನ್ನಾಥದಾಸರು ವಿರಚಿಸಿದ ಹರಿಕಥಾಮೃತಸಾರ, ತತ್ವಗರ್ಭಿತ ಷಟ್ಪದಿಯಾದರೆ, 'ತತ್ವ ಸುವ್ವಾಲಿ' ತ್ರಿಪದಿಗಳು ಸರಳೆಯಿಂದೊಡಗೂಡಿ ಲಯದೊಡಗೂಡಿ ಪ್ರಚಲಿತ ಆದವು. ಸಂಗೀತದ ಸರ್ವಸ್ವವೂ ನಾದವೆ. ಈ ನಾದ ತತ್ವವನ್ನು ದೈವಿಕವಾಗಿ ಪರಿಗಣಿಸಿದ ಕನ್ನಡದ ಹರಿದಾಸರು ಮನೆ ಮನೆಗೂ ಹೃದಯ ಹೃದಯಗಳಿಗೂ ತಲುಪಿಸಿದ್ದು ಶ್ರುತಿಸುಭಗ

ಕರ್ನಾಟಕ ಸಂಗೀತ ಮಾತ್ರ ಅಲ್ಲ, ಆ ಮೂಲಕ ಅವರ ಸೌಮ್ಯ ಕ್ರಾಂತಿಯ ಧ್ಯೇಯ ಆದ ಭಗವದ್ಭಕ್ತಿಯನ್ನು "ಸರ್ವೇಽಪಿ ಸುಖಿನಃ ಸಂತು" ಎಂಬುದೆ. ಅವರ ಪ್ರಣವ ಪಥ. ಆ ದಿಶೆಯಲ್ಲಿ ಅವರು ವಚನಕಾರರಿಗಿಂತ ಒಂದು ಹೆಜ್ಜೆ ಮುಂದಿರಿಸಿದರೆಂದರೆ, ಅತಿಶಯೋಕ್ತಿಯಲ್ಲ. ಸಂಗೀತದ ಮಾಧ್ಯಮದ ಮೂಲಕ ಮತತತ್ವ ಪ್ರಸಾರ ಮಾಡುವ ಆ ಆಂದೋಲನ ಇನ್ನೂ ಮುಂದುವರಿಯುತ್ತಲಿದೆ. ಇನ್ನು ಅನೇಕರು ಹರಿದಾಸ ದೀಕ್ಷೆ, ಅಂಕಿತ ಪಡೆಯುತ್ತಲೇ ಇದ್ದಾರೆ. ಇದೇ ಮುಂದುವರಿದ ಆಂದೋಲನದ ಚಿನ್ಹೆಯೂ ಕೂಡ.

### ಅಡಿಟಿಪ್ಪಣಿಗಳು

1. ಕರ್ನಾಟಕ ಸಂಗೀತ, ಪ್ರೊ. ಎಸ್. ಕೆ. ರಾಮಚಂದ್ರರಾವ್, ಕನ್ನಡ ವಿಶ್ವಕೋಶ(4), (1972) ಸಂಪುಟ-2, ಮೈಸೂರು ವಿಶ್ವವಿದ್ಯಾನಿಲಯ, ಪು. 177.
2. ಶ್ರೀಹರಿದಾಸ ಸಾಹಿತ್ಯ, ಬೇಲೂರು ಕೇಶವದಾಸರು, ಪುಟ 49.

# ಹರಿದಾಸರು–ವಚನಕಾರರು–ಆಳ್ವಾರರು

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಎದ್ದು ಕಾಣುವ, ಸರ್ವೋದಯ, ಚಳವಳಿಗಳೆರಡು : ಹನ್ನೆರಡನೆ ಶತಮಾನದಿಂದಾಚೆ ನಡೆದ ವಚನಕಾರರ (ಅಥವಾ ಶಿವಶರಣರ) ಚಳವಳಿ ಹಾಗೂ ಹದಿನಾಲ್ಕನೆ ಶತಮಾನದ ಹರಿದಾಸ ಆಂದೋಲನ. ಮೊದಲಿನದು ಚಳವಳಿ, ಎರಡನೆಯದನ್ನು ಆಂದೋಲನ ಎಂದು ಹೆಸರಿಸಿದ್ದಕ್ಕೂ ಕಾರಣವಿದೆ. ಅದು ಸಾಮಾನ್ಯ ಕಾರಣ ಆದರೂ ಚಳುವಳಿಯ ಸ್ವರೂಪವನ್ನೆ ನಿರ್ಧರಿಸುವಂಥದು. ವಚನ ಚಳವಳಿಯು ದ್ದುದ ಸಾಮಾನ್ಯರಿಗಾಗಿ, ಸಾಮಾನ್ಯರಿಂದ, ಸಾವಿರಾರು ಬಲಬೆಂಬಲದಿಂದ. ಜನತೆಯಲ್ಲಿ ಜಾತಿ–ವಂಶ–ವರ್ಣಾಶ್ರಮಧರ್ಮ, ಕರ್ಮಠ ಮನೋಭಾವ, ಜಡ್ಡುಗಟ್ಟಿದ ವೈದಿಕತೆ, ಕಂದಾಚಾರ, ಪುರೋಹಿತಶಾಹಿಯ ವಿರುದ್ಧ ಸಿಡಿದೆದ್ದ ಬಸವಣ್ಣ ಜನ್ಮತಃ ಬ್ರಾಹ್ಮಣ ಕುಟುಂಬದವನೆ ಆದರೂ ಸಂಘಟಿಸಿದ್ದು [ಸಮಾಜದ ಎಲ್ಲ ಸ್ತರಗಳ ಜನರನ್ನು. ಶರಣರ ಚಳವಳಿ, ಸಮಾಜ, ಅವರ ವರ್ಣಾಶ್ರಮ ಧರ್ಮ ವ್ಯವಸ್ಥೆ, ಪಟ್ಟಭದ್ರ ಹಿತಾಸಕ್ತಿ ಎಲ್ಲ ತತ್ತರಿಸಿತು. ಇದು ಜನತಾ ಚಳವಳಿಯಾಯಿತು 'ಕಾಯಕವೆ ಕೈಲಾಸ' ವೆಂಬ ಉನ್ನತ ತತ್ವದ ಬುನಾದಿ ಆದೇ ವಚನ ಚಳುವಳಿಯ ಸಂಘಟನೆ ಸುಭದ್ರ ಆಗಿಸಿದ ತತ್ವ ಕೂಡ. ಇಲ್ಲಿಯವರೆಗೆ ಆ ಮಾತನ್ನ ಸಾಮಾನ್ಯ ಜನತೆ, ಶ್ರಮಜೀವಿ, ಕೇಳಿರಲಿಲ್ಲ. ಯಾವ ಕಾಯಕವಾದರೂ ಅದಕ್ಕೆ ಬೆಲೆ ಇದ್ದೇ ಇದೆ. ಎಂಬುದರಲ್ಲಿ ಐಕ್ಯತೆ ಸಾಧಿಸುವುದು, ಸಮುದಾಯ ಸಂಘಟನೆ ಸುಲಭವೆ ಆಯಿತು. ಅಂದರೆ ತೀರ ಸಂಲಭವೆಂದಲ್ಲ, ಜನತೆಯ ಮನವೊಲಿಸುವ, ಮನಸೆಳೆಯುವ ಸೂಜಿಗಲ್ಲಾಯಿತೆನ್ನಬಹುದು. ಆಗ್ಗೆ ಕನ್ನಡ ಸಾಹಿತ್ಯ, ರಾಜಾಸ್ಥಾನದ, ಕಂಕಣ–ಅಗ್ರಹಾರಗಳಲ್ಲಡಗಿದ್ದ ಪಂಡಿತಮಾನ್ಯ, ಪಾಂಡಿತ್ಯಪೂರ್ಣವಾಗಿ ಶ್ರೀಸಾವಹನ್ನ ಅಲ್ಲಿ ಪಾಲುಗೊಳ್ಳುವಕಾಶ ಆಗಲಿ, ಅವನ ಸದಭಿರುಚಿಗೆ ಮಾನ್ಯತೆ ಆಗಲಿ ದೊರೆವ ಸಂಭವ ತೀರಾ ಕಡಿಮೆಯಾಗಿತ್ತು. ಇಂಥ ಪ್ರತಿಬಂಧಕ ಕರಗಿ, ಕನ್ನಡ ಸಾಹಿತ್ಯ ಶ್ರೀಸಾಮಾನ್ಯನನ್ನು, ಜನತೆಯನ್ನು ಮುಟ್ಟಿದ್ದು ಹನ್ನೆರಡನೇ ಶತಮಾನದಲ್ಲಿ. ಅದು ಒಂದು ಅಭಿವ್ಯಕ್ತಿ ಸ್ವಾತಂತ್ರ್ಯ ಯಂಗವೆಂದೇ ಕರೆಯಬಹುದು. ಮಾರ್ಗಕಾವ್ಯ, ಚಂಪೂಗಳಲ್ಲಿ ಅಲ್ಲಲ್ಲಿ ಕನ್ನಡದ ದೇಸಿಯ ಸಹಜ ಮೆರುಗಿನ ಹೊಳಹು ಕಾಣುತಿದ್ದದ್ದು ಈಗ ಸಾಹಿತ್ಯ ತನ್ನ ದಿಸೆಯನ್ನ ಬದಲಿಸಿದಾಗ ಒಂದು ಹೊಸತನ ಪಡೆದಂತಾಯಿತು. ಮಾರ್ಗಕಾವ್ಯದಲ್ಲಿ ಸಂಸ್ಕೃತಪ್ರಧಾನ ಆದ, ತತ್ಸಮ ಪ್ರಾಮುಖ್ಯತೆವುಳ್ಳ ಭಾಷೆ ಇದ್ದರೆ ಶಬ್ದ, ದೇಶ್ಯ ತದ್ಭವ ಪ್ರಾಮುಖ್ಯ ಉಳ್ಳದ್ದು ದೇಸಿ. ಸಮಾಜದಲ್ಲಿ ಆಗ್ಗೆ ಇದ್ದ (ಈಗಲೂ ಇರುವ) ಚಾತುರ್ವರ್ಣ್ಯ ವ್ಯವಸ್ಥೆ ಬ್ರಾಹ್ಮಣ ಪ್ರಧಾನ ಸಾರಸ್ವತ ಸಂಪದವನ್ನೆ ಬಹುದಾದದ್ದು–ಮಾರ್ಗ ; ವರ್ಣ

ಭೇದ ತೊಡೆದು, ವರ್ಣರಹಿತ-ಜಾತಿರಹಿತ ಸಮಾಜ ಕಟ್ಟಲು, ಶ್ರೀಸಾಮಾನ್ಯರ ಉದ್ಧಾರ ಮಾರ್ಗ ನೀತಿ ಕೈಗೊಂಡದ್ದು ದೇಸಿ. ಮಾರ್ಗಕಾವ್ಯವು ಪ್ರಧಾನವಾಗಿ ಗ್ರಂಥಸ್ಥ; ದೇಸಿ ಕಾವ್ಯವಾದರೂ ಪ್ರಧಾನತಃ ಜನಪದ-ಜನಪದದ ಬದುಕಿನ ಅಭಿವ್ಯಕ್ತಿ-ಸಾಮಾನ್ಯನ ಬದುಕಿಗೆ ಹತ್ತಿರಾಗಿದ್ದು ಅವನ ಭಾವದಲ್ಲಿ ಬೆಳೆದದ್ದು. ಈ ನಿಯಮಗಳನ್ನು ಇರಿಸಿ ದೇಸಿ ಕಾಣುವಲ್ಲಿ ನಮಗೆ ಮೊದಲು ಎದ್ದು ತೋರುವಂಥದು ಹನ್ನೆರಡನೆ ಶತಕದ ಶಿವಶರಣರ ವಚನ ಸಾಹಿತ್ಯ. ವಚನಕಾರರು ಸಾತ್ವಿಕ ಭಕ್ತಿಯನ್ನು ಎತ್ತಿ ಹಿಡಿದು ಸಾರಿದರು. ಇದೇ ಮುಂದುವರೆದು, ಶಿವಶರಣರು ಶಿವಪಾರಮ್ಯ ಪ್ರತಿಪಾದಿಸಿದಂತೆ, ಹರಿದಾಸರು ಹರಿಪಾರಮ್ಯ ಪ್ರತಿಪಾದಿಸಿ, ಸಮರ್ಥಿಸಲು ಶ್ರಮಿಸಿದರು. ವಚನಕಾರರ-ಹರಿದಾಸರ ಧ್ಯೇಯ ಪ್ರಮುಖವಾಗಿ ಒಂದೇ. ಅದು ಭಕ್ತಿ, ನೀತಿ ಪ್ರಸರಣ ವೆನ್ನಬಹುದು. ವಚನಕಾರರು ಈ ದಿಸೆಯಲ್ಲಿ ಸಾಮ್ರಾಜ್ಯಶಾಹಿಯನ್ನು ಧಿಕ್ಕರಿಸಲೂ ಹಿಂದು ಮುಂದು ನೋಡಲಿಲ್ಲ. ಹರಿದಾಸರು ಶ್ರೀಮಂತಿಕೆ, ಪಾಳೆಯಪಟ್ಟು-ತ್ಯಜಿಸಲೂ ಹಿಂದೆಗೆಯಲಿಲ್ಲ.

ಬಹು ಹಿಂದಿನ ಕಾಲದಿಂದಲೂ ಹಿಂದೂ ಧರ್ಮದಲ್ಲಿ ತಿಳಿಸಿರುವ ವರ್ಣ ವ್ಯವಸ್ಥೆಯ ವಿಚಾರದಲ್ಲಿ ಅಸಮಾಧಾನದ ಹೊಗೆಯಾಡುತ್ತಿದ್ದುದು ಇತಿಹಾಸದ ಮೂಲಕ ಕಂಡು ಬರುವಂಥದೆ. ವೈದಿಕ ವಾಙ್ಮಯ, ಧರ್ಮ ಗ್ರಂಥಗಳೆಲ್ಲ ಸಂಸ್ಕೃತದಲ್ಲಿ ಹೆಚ್ಚು. ಸಾಮಾನ್ಯ ಜನರಿಗೆ ನಿಲುಕುವಂಥವಲ್ಲ. ಕೇವಲ ವಿದ್ಯೆಯನ್ನೆ ಬದುಕಿನ ಊರುಗೋಲಾಗಿ ಆಶ್ರಯಿಸಿದ ಬ್ರಾಹ್ಮಣರಿಗೇ ಮೀಸಲು. ಇದರೊಂದಿಗೆ ಜನಸಾಮಾನ್ಯರನ್ನು ಹೆದರಿಸುವ ಪುರೋಹಿತಶಾಹಿಯ ಆಟಾಟೋಪ. ಇಲ್ಲಿ ವರ್ಣಾಶ್ರಮದ ಸಹಜತೆಯನ್ನು ಅರ್ಥ ಮಾಡಿಕೊಳ್ಳಲಾರದ ಬ್ರಾಹ್ಮಣ ತನ್ನ ಹುಟ್ಟು ಮಾತ್ರದಿಂದಲೆ ಘನತೆ-ಸ್ಥಾಪಿಸಿಕೊಳ್ಳ ಲೆತ್ನಿಸಿದ ; ಇದು ವೈದಿಕ ಧರ್ಮದ ತಿರುವು. ಹೋಳಿಗೆಯ ಹೂರಣ ಕಳೆದುಕೊಂಡ ಬರಿಯ ಹಿಟ್ಟಿನ ಕಣಕ. ಧರ್ಮದ ತಿರುಳು ಇರದ ಗೊಡ್ಡು ಆಚರಣೆಯ ಪ್ರತೀಕ. ಇದರ ವಿರುದ್ಧ ಸಿಡಿದೇಳುವ ಕ್ರಾಂತಿ ಅನಿವಾರ್ಯ. ಹನ್ನೆರಡನೇ ಶತಕ ಅಂಥ ಒಂದು ಉಜ್ವಲ ಕ್ರಾಂತಿಯನ್ನು ದರ್ಶಿಯಾಗಿ ವೀಕ್ಷಿಸಿತು. "ವಚನ ಚಳವಳಿಯನ್ನು ಇಡಿಯಾಗಿ ಪರಿಭಾವಿಸಿದಾಗ ತನಗಿಂತ ಹಿಂದೆ ಎಂದೂ ನಡೆಯದಿದ್ದ ರೀತಿಯಲ್ಲಿ ಮತ್ತು ವ್ಯಾಪ್ತಿಯಲ್ಲಿ ಸಾರ್ಥಕ್ಯವನ್ನು ಒಳಗೊಂಡಿತು."[1]

ವಚನಗಳು ಅವುಗಳ ಸ್ವರೂಪ, ವ್ಯಾಪ್ತಿ, ಎಲ್ಲ ಶಿಲಿಯ ಹೊರಟವರಿಗೆ ಅಲ್ಲಿ ಶಿವಶರಣರ ಭಕ್ತಿಯಾಗಲಿ, ಬದುಕಿನ ಪರಿ, ವಚನ ಸಾಹಿತ್ಯಕ ಸೌಂದರ್ಯ, ಆಧ್ಯಾತ್ಮಿಕ ಅರ್ಥ, ಅಗಿನ ಬದುಕು, ಶಿವ ಮತ ಪ್ರಸಾರ, ಪರಿಭಾಷೆಯ ಬಳಕೆ, ಅವುಗಳೆಲ್ಲದಕ್ಕಿಂತ ಇದು ಸಮಾಜದ ಎಲ್ಲ ಸ್ತರ (ವರ್ಣ) ದವರನ್ನು ಒಳಗೊಂಡು, ತೊಡಗಿಸಿಕೊಂಡ ರೀತಿ ಸದಾ ಹೊಸತೇ ಎನ್ನಿಸಂತ್ತದೆ. ಆಗ್ಗೆ ವೈದಿಕ ಧರ್ಮ ತನ್ನ ನೈಜತ್ವವನ್ನು, ಧರ್ಮದ ತಿರುಳಾದ ನೀತಿ-ದಯೆ ಮುಂತಾದ ಗುಣಗಳನ್ನು ಕಳಕೊಂಡು ಜಡತ್ವ ತಳೆಯುತ್ತಿದ್ದಾಗ ಅದರ ವಿರುದ್ಧ ಸಿಡಿದೆದ್ದ ಈ ವಚನ ಆಂದೋಲನ ಒಂದು ಕ್ರಾಂತಿ,

ಸಾಮಾಜಿಕ-ಮತೀಯ ಎರಡು ವಿಧದಲ್ಲೂ ಸಹ. ಕ್ರಾಂತಿ ಪುರುಷನಾದ ಬಸವಣ್ಣನ ನೇತೃತ್ವದಲ್ಲಿ ಸುತ್ತಮುತ್ತಣ ಪ್ರದೇಶಗಳಲ್ಲಿ ಕೊನೆರಿ ವ್ಯಾಪಿಸಿ ವರ್ಧಿಸಿದ ಚಳವಳಿ, ಸಂಘಟನೆಯನ್ನು ಕಳೆದುಕೊಂಡು ಬಿಜ್ಜಳನ ಕೊಲೆ-ಕಲ್ಯಾಣ ಕ್ರಾಂತಿಯಿಂದಾಗಿ ಚೆದರಿದುದು ಹೌದು. ಮುಂದೆ ವೀರಶೈವ ಮತ ಯಥಾಪ್ರಕಾರ ಎಲ್ಲ ಮತಗಳಂತೆಯೆ ತನ್ನ ಆಂದೋಲನತ್ವವನ್ನು (Militant-Revolutionary Tendency)[2] ಕಳೆದುಕೊಂಡಿತು, ಮತ್ತೆ ಜಾತಿಪದ್ಧತಿಯಲ್ಲಿ ಹಿಮ್ಮುಖವಾಯಿತು. ವೀರಶೈವರದ್ದೆ ಒಂದು ಮತ ಬೆಳೆಯಿತು. ಅಲ್ಲಿ ಸಮಾಜದ ಎಲ್ಲರನ್ನು ಒಳಗು ಮಾಡಿಕೊಂಡು ಯಾವುದೆ ಜಾತಿ ಇರದ ಸಮಾಜ ನಿರ್ಮಿಸುವ ಕ್ರಾಂತಿಕಾರಿತನ ಸೋತುಬಿದ್ದಿತು. ಲಿಂಗಾಯಿತರೂ ಒಂದು ಪಂಗಡವಾದರು. ಒಂದೇ ಒಂದು ಪ್ರಮುಖ ಪರಿಗಣನಾರ್ಹ ಅಂಗ, ವಚನಕಾರರು ನಿರ್ಮಿಸಿದ ಪರಿಸರ. ಎಲ್ಲವನ್ನೂ ಅಂಬಿಗರ ಚೌಡಯ್ಯ, ದೇವರದಾಸಿಮಯ್ಯ, ಡೋಹರ ಕಕ್ಕಯ್ಯ, ಮಾದಾರಚೆನ್ನಯ್ಯ, ಎನ್ನುವಂತೆ) ಒಳಕೊಂಡು ಎಲ್ಲರೆಲ್ಲರನ್ನೂ ತೊಡಗಿಸಿತು. ಕೀಳು ವರ್ಗದವರೆನ್ನಿಕೊಂಡವರೂ ತಮ್ಮ ದೀನತ್ವ, ನಿರ್ಬಲತ್ವವನ್ನು ಕೊಡಸೆಲೆನಿಂತು ಆತ್ಮವಿಶ್ವಾಸ ಬೆಳಸಿಕೊಂಡು ಚಳುವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ ರೀತಿ ಹೋಲಿಕೆಗೆ ನಿಲುಕದ್ದು.

ಇನ್ನೊಂದು ಗಮನಾರ್ಹ ಅಂಶವೆಂದರೆ, ಕನ್ನಡ ಸಾಹಿತ್ಯದಲ್ಲಿ ಅಂದಿನವರೆಗೂ ಇದ್ದ ಮತೀಯ ಸಾಹಿತ್ಯ ಪ್ರಾಬಲ್ಯ-ಪ್ರಸರಣ. ಕಲಿತವರಿಗಿಂತ ಓದುಬರಹ ಬಾರದವರಿಗೆ, ಕಲಿತವರ ಬೌದ್ಧಿಕ ಮಟ್ಟ ತಲುಪಲಾಗದ ಸಾಮಾನ್ಯರಿಗೆ ಧರ್ಮ ತಿರುಳು, ಬೋಧೆ ಅರ್ಥ ಆಗಬೇಕಾದರೆ ಅವರಾಡುವ ಭಾಷೆಯೇ ಮುಖ್ಯ ಸಾಧನ. ಕನ್ನಡ ಸಾಹಿತ್ಯದಲ್ಲಿ ಮೊದಮೊದಲು ಸಾಹಿತ್ಯ ರಚನೆಗೈದ ಜೈನರು ಇದನ್ನರಿತಿದ್ದರು. ಬೌದ್ಧರು ಸಂಸ್ಕೃತದ ಧರ್ಮ ತತ್ವಗಳನ್ನು ಅಂದಿನ ಜನರ ನಿತ್ಯಬಳಕೆಯ ಪಾಲಿಭಾಷೆಯಲ್ಲಿ ತರುವುದರ ಮೂಲಕ ತಮ್ಮ ಮತ ಪ್ರಚಾರ ನಡೆಸಿದರು. ಜೈನರಾದರೊ ಪ್ರಾಕೃತವನ್ನು ಬಳಸಿದರು. ಹಾಗೆಯೆ ಪಂಪನಂಥವರು ಕನ್ನಡದಲ್ಲೂ ಜೈನ ಧರ್ಮದ ಸೊಗಸು-ತಿಳಿವನ್ನು ಜನತೆಯಲ್ಲಿ ಬಿತ್ತರಿಸಲು ಶ್ರಮಿಸಿದುದು ಸುವಿದಿತ. ಜೈನ, ಬೌದ್ಧರ ಮತಧರ್ಮ ಜಟಿಲತೆ, ಶೂನ್ಯವಾದ ಒಪ್ಪದ ಜನತೆ, ವೈದಿಕ ಧರ್ಮದಲ್ಲಿ ತಲೆದೋರಿ ಕಟ್ಟಿದ ಕರ್ಮಕಾಂಡದ ಪಾಚಿ-ಕಂದಾಚಾರ, ಪುರೋಹಿತಶಾಹಿಯು ಹರಡುತ್ತಿದ್ದ ಮತ ಭೀತಿ, ಇವೆಲ್ಲದರ ವಿರುದ್ಧ ಸಂಘಟಿತ ಚಳುವಳಿಯನ್ನು ಶರಣರಲ್ಲಿ ಕಂಡುಕೊಂಡಿತು. ಜನಜಾಗೃತಿಯು ಮುಖ್ಯ ಧ್ಯೇಯವಾಗುಳ್ಳ ಅವರಿಗಿದ್ದ ಹಿರಿದಾದ ಬಯಕೆ, ಆದರಿಂದ ಅವರು ಮಾಡಿದ ಮೊದಲ ಕಾರ್ಯ, ವೈದಿಕ ಧರ್ಮ-ಅದರ ನಿರ್ಬಂಧಗಳನ್ನು ಧಿಕ್ಕರಿಸಿ, ವರ್ಣಾಶ್ರಮ ಕಟ್ಟುಪಾಡನ್ನು ತೊಡೆದು ಹಾಕಲು ಶ್ರಮಿಸಿದ್ದು. ಹೆಣ್ಣು-ಮೇಲು ಕೀಳು ಜಾತಿ ಎಂಬ ಯಾವುದೇ ಬಂಧವಿಲ್ಲದೆ ಎಲ್ಲರಿಗೂ ಜ್ಞಾನದ ತಿಳಿವನ್ನು ಅವರ ಆಡುಭಾಷೆಯಲ್ಲಿ ತಿಳಿಸಿಕೊಡುವುದು ; ಈ ಸರ್ವೋದಯ ಚಳವಳಿಯ ಮೊದಲ ಹರಿಕಾರ ಬಸವಣ್ಣ. ಬಸವಣ್ಣನೊಂದಿಗೆ ಸೇರಿ ದುಡಿದವರು

ಪ್ರಭುದೇವ ಮುಂತಾದವರು. ಆದರೆ, ಒಂದು ಪ್ರಮುಖ ಅಂಶ ನಾವು ಮರೆಯಬಾರದು. ವೀರಶೈವ ಮತದ ದಾಳಿ, ಕ್ರಾಂತಿ ಎಷ್ಟರ ಮಟ್ಟಿಗೆ ನಡೆಯಿತೆಂದರೆ, ವೈದಿಕ ಧರ್ಮೀಯರು ತತ್ತರಿಸುವಂತಾದದ್ದು.

ಯಾವುದೆ ಒಂದು ಆಂದೋಲನ, ಸಂಘಟನೆ ಯಶಸ್ವಿಯಾಗಲು, ಅದರ ಅನುಯಾಯಿಗಳ ನಿಷ್ಠೆ ಮುಖ್ಯ. ಶಿವಶರಣರು ಶಿವನಿಷ್ಠೆಯನ್ನೇ ಧ್ಯೇಯ ಆಗಿಸಿಕೊಂಡರು, ಅದನ್ನೇ ಬೆಳೆಸಿಬಿತ್ತರಿಸಿದರು. ಷಟ್ಸ್ಥಲ ಸಿದ್ಧಾಂತ (ಆರು ಹಂತಗಳ) ತತ್ವ-ಭಕ್ತಿ ವಿಕಾಸ ಕ್ರಮವನ್ನು ಹೇಳುವ ವಚನಕಾರರು, ಎರಡನೆಯ ಹಂತದ ಭಕ್ತನು ಮೆರೆಯಬೇಕಾದದ್ದು ಶಿವನಿಷ್ಠೆಯೆಂದು ಹೇಳಿ, ಅದನ್ನೇ ಮಹೇಶ್ವರಸ್ಥಲವೆಂದು ಕರೆದರು. ಶಿವನ ಬಗ್ಗೆ ನಿಷ್ಠೆ, ವೀರಶೈವನ ಲಕ್ಷಣವೆಂದೂ ಸಾರಿದರು. ಈ ನಿಷ್ಠೆ ಜನರನ್ನೂ ಆಕರ್ಷಿಸಿತು. ಜನತೆಯ ನಂಬಿಕೆ-ನಿಷ್ಠೆಯಾಗಿಸಲು ಶಿವಶರಣರು ಮಾಡಿದ್ದೆ ಶಿವ ಕಲ್ಪನೆ. ದ್ರಾವಿಡರ ಮೂಲದೈವ ಆದ ಶಿವ, ಮುಂದೆ ವೇದಗಳ ರುದ್ರನೇ ಆದ. ಇಲ್ಲಿ ಚಳವಳಿ ದ್ರಾವಿಡತನದ್ದಾಯಿತೆಂದೇ ಹೇಳಬರುವಂತಿಲ್ಲ. ಇಲ್ಲಿ ಕಾಣುವುದು ಶಿವಪಾರಮ್ಯ ಸಾತ್ವಿಕತೆ ; ಸಾಮಾನ್ಯನಿಗೂ ಅರ್ಥ ಆಗುವ ಶಿವ ಸಿದ್ಧಾಂತ ಜನಪ್ರಿಯ ಆಯಿತಷ್ಟೆ. ವಚನಕಾರರು ಬುದ್ಧಿಯ ಕಸರತ್ತು, ಪದ ಬಳಕೆಗಳಿಂದ ಬುದ್ಧಿವಂತರನ್ನು ಮಾತ್ರ ಸೆಳೆಯದೇ, ತಮ್ಮ ಘೋಷಣೆ, ನಿಷ್ಠೆ, ಸರಳತೆಗಳಿಂದ, ವಚನಗಳ ಆಡುನುಡಿಯ ಪರಿಭಾಷೆಗಳಿಂದ ತೀರಾಸಾಮಾನ್ಯನನ್ನೂ ಆಕರ್ಷಿಸಿದರು. ಶಿವನಿಷ್ಠರು ಒಂದು ಸಂಘಟನೆ ಚಳುವಳಿಯ ವಲಯದಲ್ಲಿ ಕೂಡಿಕೊಂಡ ನಂತರ ಅವರೆಲ್ಲ ಒಂದೇ ಎಂದು ವಚನಕಾರರು ತಿಳಿಸಿದ ಸಮಾನತೆ, ಎಲ್ಲರಿಗೂ ಪ್ರಿಯವೆನಿಸಿದ್ದು ಆಶ್ಚರ್ಯವೇನಲ್ಲ, ಅಲ್ಲಿನವರೆಗೆ ಸಾಮಾಜಿಕ ಸಂಕಷ್ಟ-ಭರ್ತ್ಸನೆಗಳಿಗೀಡಾದ ಕೆಳವರ್ಗದವರಿಗಂತೂ ತುಂಬ ಸಂತೋಷವೆ ಆಯಿತು. ಈ ಜನರ ಐಕ್ಯತೆ ಸಾಧಿಸಲು ವಚನಕಾರರು ವಿಧಿಸಿದ್ದು "ಪಂಚಾಚಾರ"ದ ನಡೆವಳಿ. ಇದು ಹೊರಗಿನ ನಡವಳಿಯನ್ನು ನಿಯಂತ್ರಿಸಿದರೆ, ಸಪ್ತಾಚಾರಗಳು ಅಂತರಿಕ ಶುದ್ಧಿಯನ್ನು ಕಾಪಾಡುವುದೆಂದು ನಂಬಲಾಯಿತು. ವೀರಶೈವರು ತಮ್ಮ ದೇಹದ ಮೇಲೆ ಸದಾ ಧರಿಸುವ ಲಿಂಗದ ಬಗ್ಗೆ ಇರುವ ಅವರ ನಿಷ್ಠೆ ಲಿಂಗಾಚಾರವು ಸೂಚಿಸುತ್ತದೆ. ಆ ವಲಯಕ್ಕೆ ಸೇರಿದ ಸದಸ್ಯನು ತನ್ನ ದೈನಂದಿನ ಜೀವನದಲ್ಲಿ ಈ ಸಂತ್ರಾಣ ಒಡನಾಡಿಗಳಿಗೆ ಹೊರೆಯಾಗದೆ ಬದುಕಬೇಕಾದುದನ್ನು ಸದಾಚಾರವು ವಿಧಿಸುತ್ತದೆ. ಶಿವಾಚಾರವಾದರೋ ಎಲ್ಲ ಸಹಜೀವಿಗಳನ್ನು ಪೂರ್ತಿ ಸಮಾನತೆಯಿಂದ ಕಾಣಬೇಕೆಂದು ತಿಳಿಸುತ್ತದೆ. ಇವರ ಮತಗಳಿಂದ ತನ್ನ ನಂಬುಗೆಯ ಸಂಘಟನೆಯನ್ನು ರಕ್ಷಿಸಲು ಅಗತ್ಯ ಆದ ಅನನ್ಯತೆಯನ್ನು ಸಾಧಿಸಲು ಶರಣಾಚಾರ ಸೂಚಿಸುತ್ತದೆ; ಈ ನಂಬುಗೆಯ ಜನರೊಡನೆ ಆತ್ಮೀಯವಾಗಿ ಬೆರೆಯುವುದೊಡನೆ ವೈಯಕ್ತಿಕ ವಿನಯವನ್ನು ಭೃತ್ಯಾಚಾರ ತಿಳಿಸಿಕೊಡುತ್ತದೆ. ಜನಸಾಮಾನ್ಯರ ಸಂಘಟನೆಗೆ ಪ್ರಮುಖ ಕಾರಣ, ಭಾವುಕ ಮನೋಧರ್ಮ. ಇದರಿಂದಾಗಿಯೂ ವಚನ ಚಳವಳಿಗೆ ಪ್ರೇರಣೆ, ಪುಷ್ಟಿ ದೊರೆಯಿತೆನ್ನಬಹುದು.

ವಚನ ಚಳವಳಿಯ ಬಗ್ಗೆ ಅನೇಕ ಅಮೂಲ್ಯ ಅಂಶಗಳುಳ್ಳ ಹೊತ್ತಗೆಯಲ್ಲಿ ವಚನ ಚಳವಳಿಯ ಸ್ವರೂಪ, ವಿವರಗಳನ್ನು ಒಟ್ಟಾಗಿ ಕಂಡರಿಸಿರುವ ಡಾ. ಪಿ. ವಿ. ನಾರಾಯಣರ ಪ್ರಯತ್ನ ಇಲ್ಲಿ ಉಲ್ಲೇಖಾರ್ಹ. ಅವರ ಅಭಿಮತದಂತೆ ಪ್ರಾಯಶಃ ಭಾರತದ ಪ್ರಪ್ರಥಮ ದ್ರಾವಿಡ ಚಳುವಳಿ, ವಚನ ಚಳವಳಿ. ಇಲ್ಲಿ ಹಾಗೆಂದರೆ ವಚನಕಾರರ ಮಂಖ್ಯ ಲಕ್ಷ್ಯವಿದ್ದುದು ಯಾವ ದಿಸೆಯಲ್ಲೆಂಬುದು ತಿಳಿಯಬಹುದು. ವೈದಿಕ ಧರ್ಮದ ಒಂದು ಕರ್ಮಕಾಂಡ ಭಾಗವಾದ ಯಜ್ಞ-ಯಾಗಾದಿಗಳನ್ನು ಧಿಕ್ಕರಿಸುವುದು; ಕೆಲವರ ಸ್ವತ್ತಾಗಿದ್ದ ಸಂಸ್ಕೃತ ಪ್ರಧಾನತೆ ವಿರೋಧಿಸುವುದು; ಹೆಣ್ಣು-ಗಂಡು ಭೇದವಿಲ್ಲದೆ ಹೆಣ್ಣನ್ನು ಕೇವಲ ಭೋಗ್ಯವಸ್ತು-ಮನೆಯೊಳಗಣ ದಾಸಿಯೆನಿಸದೆ ಅವಳ ವ್ಯಕ್ತಿತ್ವಕ್ಕೀಯುವ ಗೌರವ; ವರ್ಣಾಶ್ರಮ, ಜಾತಿ, ಇವುಗಳ ಪ್ರತಿಭಟನೆ; ದ್ರಾವಿಡ ದೈವವೆಂದೆನಿಸಿರುವ ಶಿವನ ಶಿವೋತ್ತಮತ್ವವನ್ನು ಸಾರುವುದು. ಇದು ಶಿವಶರಣರ ಅಂದರೆ ವಚನಕಾರರ ಗುರಿ. ಈ ದೃಷ್ಟಿಯಿಂದಲೇ ವಚನ ಚಳವಳಿ ಮೊತ್ತಮೊದಲ ದ್ರಾವಿಡ ಚಳವಳಿ ಕೂಡ. ಅಗ್ಗೆ ಕಾಡುತ್ತಿದ್ದ ಪ್ರಮುಖ ಸಮಸ್ಯೆಗಳಲ್ಲೊಂದು ಜಾತಿ ಪದ್ಧತಿ. ಇದೇ ನಮ್ಮ ಸಮಾಜದ ಐಕ್ಯತೆ ಸಾಧಿಸುವಲ್ಲಿಯೂ ಇರುವ ಬಹುಮುಖ್ಯ ತೊಡಕು ತೊಡರು.(ಈ ಬಗ್ಗೆ ಬೇರೊಂದೆಡೆ ವಿಶದೀಕರಿಸುವುದರಿಂದ ಇಲ್ಲಿ ಆಂದೋಲನ ದೃಷ್ಟಿಯಲ್ಲಿ ಸೂಚ್ಯವಾಗಿ ಪ್ರಸ್ತಾಪಿಸಲಾಗಿದೆಯಷ್ಟೆ.) ಜಾತಿಗಳು ವ್ಯಕ್ತಿ ವ್ಯಕ್ತಿಗಳ ನಡುವೆ, ಅವರ ಹೃದಯ ಪ್ರೇಮ ಬೆರೆಯದಂತೆ, ಒಂದಾಗದ ಚೀನಾಗೋಡೆಗಳನ್ನೆಬ್ಬಿಸಿವೆ. ಇದರ ಬಗ್ಗೆ ಯಾವ ಸಂಘಟನಾ ಆಂದೋಲನ, ಪ್ರತಿಭಟನೆ, ಏನೂ ಮಾಡಲು ಇನ್ನೂ ಆಗಿಲ್ಲ. ಅದಕ್ಕೆ ಒನ್ನೂ ಒಂದು ಅಂಶ ಪೂರಕವಾಗುವುದು, ಹುಟ್ಟಿನಿಂದ ನಿರ್ಧರಿಸುವ ಜಾತೀಯತೆ. ಅದರ ಪರಿಣಾಮ, ಕೆಲವು ಜನರಿಗೆ ದೊರೆಯುವ ಅನುಕೂಲತೆ, ಹಾಗೂ ಇನ್ನೂ ಕೆಲವಡೆ ಜಾತಿಯಿಂದಾಗಿ ದೊರೆತ ಭರ್ತ್ಸನೆ-ಇದಕ್ಕೆ ಕನಕದಾಸರೆ ಸಾಕ್ಷಿ. ಪುರಂದರದಾಸರೂ ಡೆ ಹೇಳಿರುವಂತೆ, ವೈದಿಕ ಧರ್ಮದವರು ಕೃಷ್ಣಾಜಿನದಿಂದ ಹೊಡೆದಟ್ಟುವ ದೃಶ್ಯ! ದೇವರ ದರ್ಶನ, ದಿವ್ಯ ಸಮಾಂಯದಲ್ಲೂ ಆ ಅನುಭಾವ, ಅಸಂಭವ ವಿಶೇಷಕ್ಕೆ ಅವಕಾಶವೀಯದ, ದೇವರನ್ನೆ ಮೀರಿ ನಡವ ಈ ಅಮಾನುಷತೆ ಕೆಲವೆಡೆ ಜಾತಿಯ ಆಧಾರದಿಂದ ವ್ಯಕ್ತಿಯ ಅಂತರಿಕ ಯೋಗ್ಯತೆಯುಳಿಯುವುದನ್ನೂ ಖಂಡಿಸಿದ್ದಾರೆ. ತಿರಪ್ಪಾಣೆಯೆಂಬಾತ ಸಮಾಜ ನಿರ್ಮಿತ ಕೀಳು ಜಾತಿಯವನಾದರೂ ಭಕ್ತಿ ವಿಶೇಷದಿಂದ ಶ್ರೀರಂಗದ ರಂಗನಾಥನನ್ನೆ ಒಲಿಸಿಕೊಂಡು, ರಂಗನಾಥಸ್ವಾಮಿಯ ಅರ್ಚಕನಾದ ಲೋಕಸಾರಂಗ ಮುನಿಗಳೆ ಇವನನ್ನು ಹೆಗಲ ಮೇಲೆ ಕೂರಿಸಿ ಕೊಂಡೊಯ್ದರಂತೆ, ದೇವರ ದರ್ಶನಕ್ಕೆ ಇಂಥ ವರೆಷ್ಟೋ ಕಬೀರ, ಗೋರಾಕುಂಬಾರ, ನಾಮದೇವ, ಅಸ್ಸಾಮಿನ ಶಂಕರದೇವ, ಹೀಗೆ.

ವಚನದ ಉಗಮ, ಅರ್ಥ, ಸ್ವರೂಪ ವಿಶ್ಲೇಷಣೆ ನಮ್ಮ ವಿಚಾರ ಅಲ್ಲ. ವಚನ ವೈಶಿಷ್ಟ್ಯ, ಆಂದೋಲನ, ಹಾಗೂ ಅದಕ್ಕೆ ಹರಿದಾಸರ ಆಂದೋಲನ ಎಷ್ಟರ ಮಟ್ಟಿಗೆ ಕೃತಜ್ಞ ಆಗಬೇಕಾಗಿದೆ, ಹಾಗೂ ಪ್ರಭಾವಿತ ಆಗದೆ, ಅಲ್ಲದೆ ಇವೆರಡರ

ಸಾದೃಶ್ಯ, ವೈದೃಶ್ಯ, ವೈವಿಧ್ಯ ವೈಶಿಷ್ಟ್ಯ ಗುರುತಿಸುವುದಷ್ಟೆ ನಮ್ಮ ಕರ್ತವ್ಯ. ವಚನ ಚಳುವಳಿ ಗುರುತಿಸಿದ ಪ್ರಮುಖ ಅಂಶ ಹಲವಾರು : ಮೊದಲೆ ತಿಳಿಸಿರುವ ಜಾತಿ ಪದ್ಧತಿ : ಸಮಾಜವನ್ನು ಒಂದುಗೂಡಿಸಿ, ಜಾತಿರಹಿತ ಸಮಾಜ ಕಟ್ಟುವ ಬದುಬವಣೆಯ ಅನುಸರಣೆ. ಅದೇ ಶಿವಶರಣರ ಆನುಷ್ಠಾನವೂ ಆಗಿತ್ತು. ವೃತ್ತಿಯ ಪ್ರಭೇದಕ್ಕೆ ಕಾರಕ, ಅದೇ ಜಾತಿಯ ಹುಟ್ಟಿಗೆ ಕಾರಣ. ಆದರಿಂದ ಬಸವಣ್ಣಾದಿ ಸಂಘ ಕ್ರಾಂತಿಕಾರಿಗಳು ಹೇಳಿದ್ದು, ಎಲ್ಲರೂ ಸಮಾನರು; ಭಕ್ತರು, ಭವಿಗಳು, ಎರಡೆ ವಿಧ, ಅವನ ಆಸಕ್ತಿಯುದ್ದದ ಭಕ್ತ ಸಮಂಬಂಧಾಯದ—ಅಂದರೆ ವೀರಶೈವ ಭಕ್ತ ಸಮಾಜದ ಸುವ್ಯವಸ್ಥೆ, ಎಲ್ಲರನ್ನೂ ಒಂದೇ ದೃಷ್ಟಿಯಿಂದ ಕಾಣುವ ಸಮಾನ ದೃಷ್ಟಿ, ಭವಿಗಳಿಲ್ಲ ಒಂದೆ. ಸಮಾಜದಲ್ಲಿ ಜನರಿಗೆ ಎಂಥ ಸ್ಥಾನಮಾನಗಳಿದ್ದರೇನು, ಘನತೆ, ಪ್ರತಿಷ್ಠೆ, ಅಂತಸ್ತಿದ್ದರೂ ಬಸವಣ್ಣ ಲಕ್ಷಿಸಲಿಲ್ಲ. ಪ್ರಭುದೇವ ಇದನ್ನು ಸಮರ್ಥಿಸಿದ. ಉಡುತಡಿಯ ಕೌಶಿಕನನ್ನು ಭವಿಯೆಂದು ತೊರೆದು, ಸಾವಿಲ್ಲದ, ರೂಹಿಲ್ಲದ, ಗಂಡ ನಿಗೊಲಿದು ಬಂದವಳು ಮಹಾದೇವಿಯಕ್ಕ. ಇದರಿಂದ, ತಿಳಿಯ ಬರುವುದಿಷ್ಟು : ಬಸವಣ್ಣ ಹಾಗೂ ಇತರ ಶರಣರ ಈ ವಿರೋಧಿ ನೀತಿ, ವೀರಶೈವ ಸಮಾಜ ಸಂಘಟನೆಗೆ ಮಾತ್ರ ಸೀಮಿತ ಆದದ್ದು. ಇದು ವಚನ ಚಳುವಳಿ ಪಂತೀಯ ಚಳುವಳಿಯೆಂಬುದನ್ನು ಸ್ಪಷ್ಟೀಕರಿಸುತ್ತದೆ. ಇದಕ್ಕೆ ಕಾರಣವೂ ಉಂಟು. ವೀರಶೈವ ಧರ್ಮಕ್ಕೆ ಬಸವಣ್ಣನ ಕಾಲದ ಕಲ್ಯಾಣ ಕ್ರಾಂತಿ ಯುಗದ ಅವಧಿಯಲ್ಲಿ ಸೇರಿದವರೆಲ್ಲ ಹಲವಾರು ಜಾತಿಗಳವರೆ. ಅವರಿಗೆ ತುಂಬು ಹೊಸ ವ್ಯವಸ್ಥೆಗೆ ಬಂದು, ಹೊಸತನ್ನ ನಿರ್ಮಿಸುತ್ತಿರುವೆಂಬ ಉತ್ಸುಕತೆ, ಕೆಚ್ಚು ಇದ್ದರೂ, ಹಿಂದಿನ ತಮ್ಮ ಸಾಮಾಜಿಕ ಸ್ಥಿತಿಗತಿ ಅನೇಕ ಪೀಳಿ ಕಾಡುತ್ತಿದ್ದಿರಬಹುದು. ಅದೂ ಅಲ್ಲದೆ ಕೀಳು ಜಾತಿಯವರು ವೀರಶೈವಕ್ಕೆ ಸೇರಿ ಮೇಲುವರ್ಗದವರ ಜೊತೆ ಸಮಾನರಾಗುವೆಂಬುದನ್ನು ಭಾವಿಸಿ ಬಂದವರ ಹೆಚ್ಚು. ಲ್ಲಿ ಈ ಸಂಘಟನೆ ಸಂಪೂರ್ಣವಾಗಿ ಕ್ರಿಯಾಶೀಲ ಆಗಲು, ತಮ್ಮ ಧ್ಯೇಯ ಕಾರ್ಯಗತ ಗಿಸಲು ಕಷ್ಟಪಡಬೇಕಾಗಿತ್ತು.

> ಉಂಬಲ್ಲಿ ಉಡುವಲ್ಲಿ ಕ್ರೀಯವಿತ್ತೆಂಬರು
> ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು
> ಎಂತಯ್ಯಾ ಅವರ ಭಕ್ತರೆಂಬೆ ?
> ಎಂತಯ್ಯಾ ಅವರ ಯುಕ್ತರೆಂಬೆ ?

ದು. ನೊಂದು ನುಡಿದ ಬಸವಣ್ಣನ ಮಾತಲ್ಲಿ ಮೇಲೆ ತಿಳಿಸಿರುವ ಧ್ವನಿ ಇದೆ. ಂಬಲ್ಲಿ ಕೊಡುವಲ್ಲಿ ಎಂಬಲ್ಲಿ ವಿವಾಹದ ಸಂಬಂಧದಲ್ಲಿ ಜಾತಿ ತಾರತಮ್ಯ ಆಡಚಣೆ ಕ್ಕೆ ಆಗುತ್ತದೆ ; ಇದರಿಂದ ಬಸವಣ್ಣ ಹಾಗೂ ಇತರ ಶಿವಶರಣರ ಗುರಿ, ಸಮಾಜ ಧಾರಣೆ ಆದರಲ್ಲೂ ವೀರಶೈವರಿಗಾಗಿ ಎಂಬುದನ್ನು ಮರೆಯಬಾರದು. ವೀರಶೈವ

ಧರ್ಮವನ್ನಪ್ಪಿಕೊಂಡರೂ ಹಿಂದಿದ್ದ ಜಾತಿಯ ಬಗ್ಗೆ ಪ್ರತಿಭಟನೆ, ಶರಣರಲ್ಲಿ ಒಳಗುದಿ ಇತ್ತೆಂಬುದು ವಚನಗಳಿಂದ ವ್ಯಕ್ತಗೊಳ್ಳುತ್ತದೆ. ಇನ್ನು ಕೊಡು-ಕೊಳ್ಳುವ ವೈವಾಹಿಕ ಪದ್ಧತಿ. ಬಸವಣ್ಣನ ದೃಷ್ಟಿ ಅವನ ಕಾಲಕ್ಕಿಂತ ತುಂಬ ತುಂಬ ಮುಂದಿದ್ದು ಅದನ್ನು ಅವನ ಕೆಲವು ಅನುಯಾಯಿಗಳೆ ಒಪ್ಪಲಾರದೆ ತತ್ತರಿಸಿದರು. ರಕ್ತಪಾತವ ನಡೆಯಿತು ಬಸವಣ್ಣ ಧೈರ್ಯದಿಂದ ನಡೆಯಿಸಿದ ಬ್ರಾಹ್ಮಣ–ಅಂತ್ಯಜರ ವಿವಾಹದ ಪರಿಣಾಮವಾಗಿ. ಇದರಿಂದ ಜಾತಿರಹಿತ ಸಮಾಜ ಬಸವಣ್ಣನ ಕನಸು ಆಯಿತಷ್ಟೆ. ಆದರೆ ಅವನೂ ಹಾಗೂ ವಚನಕಾರರು ಸಾಧಿಸಿದ ಸಾಮಾಜಿಕ ಸುಧಾರಣೆ, ಅಸ್ಪೃಶ್ಯ ಆದದ್ದು ಆಗಿನ ಕಾಲ ಹೋಲಿಕೆ ಮಾಡಿನೋಡಿದಾಗ-ಯಥಾ ಪ್ರಕಾರ ಬಸವಣ್ಣನ ಅನುಯಾಯಿಗಳು ಕಾಲಕ್ರಮೇಣ ತಮ್ಮ ಮುಂದಿನ ಜೀವನಕ್ಕೆ ಹಿಂತಿರುಗಿದರು. ವಚನ ಚಳುವಳಿ ಸಾಮಾನ್ಯರಲ್ಲಿ ಒಡಮೂಡಿಸಿದ ಆತ್ಮಗೌರವ, ಆತ್ಮವಿಶ್ವಾಸ ಯಾರೂ ಮರೆಯುವಂಥ ದಲ್ಲ.

ವಚನ ಚಳವಳಿಯ ಕಾಲದ ಸ್ತ್ರೀಯರ ಸ್ಥಾನಮಾನ, ಬ್ರಾಹ್ಮಣಸಮಾಜ ಅಂದು ಪರಿಗಣಿಸಿದ್ದ ಸ್ತ್ರೀಯರ ಸ್ಥಾನಕ್ಕಿಂತ ಹೆಚ್ಚು ಸುಧಾರಿಸಿದ್ದು ಗುರುತಿಸಲಿಲ್ಲ ಬಹುದು. ಅವರು ಹೆಣ್ಣನ್ನು ದುರ್ಬಲೆಯೆಂದಾಗಲಿ,ಮಾಯೆಯೆಂದಾಗಲಿ ಪರಿಗಣಿಸಲಿಲ್ಲ. ವಸ್ತುನಿಷ್ಠ ಅಭಿಪ್ರಾಯ ವಚನಕಾರರದ್ದು. "ಹೆಣ್ಣು ಮಾಯೆಯಲ್ಲ, ಹೊನ್ನು ಮಾಯೆಯಲ್ಲಮನದ ಮುಂದಿನ ಆಸೆಯೆಮಾಯೆ" ಎಂಬ ಅಲ್ಲಮನ ಮಾತು ತೂಕವಾದದ್ದು ಆಗಿದೆ. ಹೆಣ್ಣಿಗೆ ಪ್ರತ್ಯೇಕ ಅಸ್ತಿತ್ವವುಂಟೆಂದು ಗುರುತಿಸಿದ ವಚನಕಾರರ ಸಾಧನೆ ಆಗ್ಗೆ ಅಸಾಧಾರಣ ವಾದದ್ದೆ. ಗಂಡಹೆಂಡತಿಗಳೊಂದಾದ ಭಕ್ತಿಯೆ ಶಿವನಿಗೆ ಹಿತವೆಂಬುದು ವಚನಕಾರರ ಭಾವನೆ. ಇದರಿಂದಾಗಿ ಸಮಾಜದ ಕೆಳವರ್ಗದವರು-ಕೆಳಮಟ್ಟದಲ್ಲಿ ಹೇಗೋ ಬದುಕು ತ್ತಿದ್ದ ಹೆಂಗಸರಿಗೂ ಕೂಡ ಒಂದು ರೀತಿಯ ಆತ್ಮವಿಶ್ವಾಸ ಮೂಡಿತು. ಅನೇಕ ಶಿವಶರಣೆ ಯರು ವಚನಕಾರ್ತಿಯರಾಗಿ ಮತಧರ್ಮಕ್ಕೂ, ಆಂದೋಲನ ಗತಿಗೂ, ಸಾಹಿತ್ಯಕ್ಕೂ ತಮ್ಮದೇ ಆದ ಸೇವೆ ನಿಷ್ಠೆಯಿಂದ ಸಲ್ಲಿಸಿದರು. ಅಲ್ಲಿಯವರೆಗೆ ಕಟ್ಟಿದ್ದ, ಮುಚ್ಚಿದ್ದ ಹೆಣ್ಣಿನ ಸೃಜನಶೀಲ ವ್ಯಕ್ತಿತ್ವ ಈಗ ಗುರುತಿಸುವಂತಾಯಿತು, ಅವಳ ಬಾಯಿಗೆ ಸ್ವರ ಬಂತು. ಅಭಿನವ ಪಂಪನ (ನಾಗಚಂದ್ರನ) ಸಮಕಾಲೀನಳಾಗಿದ್ದ ಕಂತಿಯನಂತರ ಬಂದ ಹೆಣ್ಣೆಂದರೆ ವಚನಕಾರ್ತಿಯರೆ. ಸಮಾಜದ ಒಂದು ಕೆಳಸ್ತರ ಆಗಿದ್ದ ವೇಶ್ಯಾ ಜಾತಿಯ 'ಸಂಕವ್ವೆ' ಯೆಂಬಾಕೆ ಕೂಡ ವಚನ ಬರೆದಳೆಂದಾಗ ಅಲ್ಲಿಯ ಸುಧಾರಣೆಯ ಉನ್ನತಿ ನಾವು ಗಮನಿಸುವಂಥದು. ಸ್ತ್ರೀಯ ಬೌದ್ಧಿಕ ಸ್ವಾಂತಿಕೆಗೆ ನಿದರ್ಶನ, ಶರಣರ ಮನೆಯ ಅಂಗಳದಲ್ಲಿ ಚೆಲ್ಲಿದ್ದ ಅಕ್ಕಿಯನ್ನು ಆರಿಸಿ ತನ್ನ ಬದುಕು ನಡೆಸುತ್ತಿದ್ದ 'ಆಯ್ದಕ್ಕಿಮಾರಯ್ಯ' ನದು. ಅವನು ತನ್ನ ದಿನ ಬಳಕೆಯ ಪ್ರಮಾಣಕ್ಕಿಂತ ಹೆಚ್ಚು ಅಕ್ಕಿಯನ್ನು ಆಯ್ದು ತಂದಾಗ, ಅವನ ಹೆಂಡತಿ, ತನ್ನ ಗಂಡನ "ಸಂಗ್ರಹ ಬುದ್ಧಿ" ಆಶೆಬುರುಕತನಕ್ಕೆ ರೇಗಿದಳೆಂದು ವಚನ ತಿಳಿಸುತ್ತದೆ :

ಆಸೆಯೆಂಬುದು ಅರಸಿಂಗಲ್ಲದೆ, ಶಿವಭಕ್ತರಿಗುಂಟೆ ಅಯ್ಯಾ ?
ರೋಷವೆಂಬುದು ಯಮದೂತರಿಗಲ್ಲದೆ ಅಜಾತಂಗೆ ಉಂಟೆ ಅಯ್ಯಾ ?
ಈಸಕ್ಕಿಯಾಸೆ ನಿಮಗೇಕೆ ?

ಇದು ಹೆಣ್ಣು ವಚನಕಾರರ ಚಳುವಳಿಯಿಂದಾಗಿ ಪಡೆದ ಬೌದ್ಧಿಕ ತೀಕ್ಷ್ಣತೆ–ಹಾಗೆಯೆ ಬಸವಣ್ಣನ ಹೆಂಡತಿ ನೀಲಾಂಬಿಕೆಯು ವೈಯಕ್ತಿಕ ಆಧ್ಯಾತ್ಮಿಕ ಸಾಧನೆ, ಆತ್ಮಸ್ಥೈರ್ಯ ಅವಳ ವಚನಗಳಲ್ಲಿ ಪ್ರತಿಬಿಂಬಿಸುತ್ತದೆ. ಮಹಾದೇವಿಯಕ್ಕನಂತೂ ವಚನ ಚಳವಳಿಯ ಸಂಧಿ ಸಮಯದಲ್ಲಿ ಹೆಣ್ಣು ಪಡೆದ ಆತ್ಮವಿಶ್ವಾಸದ ಪ್ರತೀಕವೆಂದೆ ಹೇಳಬಹುದು. ಬಸವಣ್ಣ ಹೇಗೆ ಶರಣ ಸಮುದಾಯದ ನೇತಾರನಾದನೋ ಹಾಗೆಯೆ ಅಕ್ಕಮಹಾದೇವಿ ಸ್ತ್ರೀಸಮುದಾಯ ಪಡೆದ ಸ್ವಾಂತಿಕೆಯ ಪ್ರತೀಕ ಎನ್ನಬಹುದು. ಬಲವಂತದಿಂದ ಮದುವೆಯಾದ ಕೌಶಿಕರಾಜನೊಂದಿಗೆ ಆಕೆ ವಿಧಿಸಿದ್ದ ಷರತ್ತುಗಳು, ಅವನು ವಚನಪಾಲಿಸದಾಗ ಅದನ್ನು ಖಂಡಿಸಿ, ದಿಗಂಬರೆಯಾಗಿ (ಕೇಶಾಂಬರೆ) ಹೊರಟ ಅವಳ ಆಗಿನ ಧೈರ್ಯ (ಕ್ರಿ. ಶ ೧೨ನೆ ಶತಮಾನದಷ್ಟು ಹಿಂದೆ) ಯಾರೆ ಆಗಲಿ ಮೆಚ್ಚತಕ್ಕುದೆ ಆಗಿದೆ. ಅಕ್ಕಮಹಾದೇವಿ ಅಂದು ಧಿಕ್ಕರಿಸಿದ್ದು ಕೇವಲ ಕೌಶಿಕ ಹೆಸರಿನಿಂದೊಡಗೂಡಿದ ರಾಜನೊಬ್ಬನನ್ನೆ ಅಲ್ಲ, ಅಧಿಕಾರಿಶಾಹಿ, ಸಾಮಾಜಿಕ ಕಟ್ಟುಕಟ್ಟಳೆ, ವಿಚಾರಹೀನವಾದ ದೌರ್ಬಲ್ಯಗಳು, ಇವುಗಳನ್ನು ! ಇದು ವಚನ ಚಳುವಳಿಯು ನೀಡಿದ ಸ್ಫೂರ್ತಿ, ಹಾಗೂ ಇದು ಆರೋಗ್ಯಕರ ಸ್ಫೂರ್ತಿಯೆಂಬುದನ್ನೂ ಮರೆಯಲಾಗದು.

ಇನ್ನು ನಮಗೆ ಕಾಣಬರುವ ಮತ್ತೊಂದು ಅಂಶ, ವೃತ್ತಿಗಳ ನಡುವಣ ಮೇಲು ಕೀಳು ಭಾವನೆ. ಸಮಾಜದ ಒಡಕಿಗೂ ಇದೇ ಕಾರಣ. ಬುದ್ಧಿಯುಳ್ಳಾತ ವ್ಯೆನೋಯಿಸದೆ, ಬುದ್ಧಿ ಇರದ ಕೀಳು ಜಾತಿಯವನನ್ನು ಗುಲಾಮನಂತೆ ದುಡಿಸಿಕೊಳ್ಳುವಿಕೆ. ಪುರುಷಸೂಕ್ತ ಮಂತ್ರದಲ್ಲಿ ಬರುವ "ಬ್ರಾಹ್ಮಣೋಽಸ್ಯ ಮುಖಮಾಸೀತ್ ಬಾಹೂ ರಾಜನಕೃತಃ ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಗಂ ಶೂದ್ರೋ ಅಜಾಯತ್" ಎಂಬ ಮಾತು (ದೈಹಿಕ ಪರಿಶ್ರಮ ಮಾಡುವರೆಲ್ಲ ವಿರಾಟ್‌ಪುರುಷನ ಕಾಲಿನಿಂದ ಬಂದವರು !) ಹಾಗೂ ಅವರಲ್ಲಿ ವಿವಿಧ ಜಾತಿಗಳು ವಿಭಾಗ ಆದದ್ದು (ಒಳೆಗಾರ, ನೇಕಾರ, ಮಡಿವಾಳ, ಬಣಜಿಗ, ಇತ್ಯಾದಿ) ಅವರವರ ವೃತ್ತಿಗನುಸಾರವಾಗಿ ಆಯಾ ಜಾತಿಯ ಆನುವಂಶೀಕ ಲಕ್ಷಣದಿಂದಾಗಿ. ಶಿವಶರಣರ ಧ್ಯೇಯವೇ ಸಾಮಾಜಿಕ ಸಮಾನತೆ. ವೃತ್ತಿ-ಬದುಕಿಗೆ ವಿಮುಖವೂ ಆಗಬಾರದು, ಹಾಗೂ ಸಾಮಾಜಿಕ ದೃಷ್ಟಿಯಿಂದ ಆರ್ಥಿಕ ವ್ಯವಸ್ಥೆಯೂ ಸುಧಾರಣೆಗೊಳ್ಳಬೇಕು. ಇದು ವಚನಕಾರರ ಆಲೋಚನೆ. ಆದರಿಂದಾಗಿಯೇ ಅವರು ಸೃಷ್ಟಿಸಿದ ತತ್ವ "ಕಾಯಕವೆ ಕೈಲಾಸ", "ಕೃಷಿ ಕೃತ್ಯ ಆವ ಕಾಯಕದಿಂದಾದೊಡೇನು ? ತನು ಮನ ಬಳಲಿಸಿ ಗಳಿಸಿ ತಂದು, ಗುರುಲಿಂಗ ಜಂಗಮಕ್ಕೆ ಮೆಚ್ಚಿಸಿ, ದಾಸೋಹವ ಮಾಡುವ ಪರಮಸದ್ಭಕ್ತನ ಪಾದವ ತೋರಯ್ಯ ನನಗೆ...ಕೂಡಲ ಚೆನ್ನ ಸಂಗಮದೇವಾ", "ಅಸಿಯಾಗಲಿ ಕೃಷಿಯಾಗಲಿ, ಯಾಜಕ ವಾಣಿಜ–ಮಾಡುವಲ್ಲಿ ಹುಸಿಯಿಲ್ಲದಿರಬೇಕು...." ಈ ಸಾಲು ಕಾಯಕತತ್ವವನ್ನು ಸ್ಪಷ್ಟೀಕರಿಸುತ್ತದೆ.

"ಕಾಯದಿಂದ ಗುರುವ ಕಂಡೆ, ಕಾಯದಿಂದ ಜಂಗಮವ ಕಂಡೆ, ಕಾಯದಿಂದ ಪ್ರಸಾದವ ಕಂಡೆ, ಕಾಯದಿಂದ ಸಕಳೇಶ್ವರ ದೇವರ ಪೂಜಿಸುವಲ್ಲಿ ಉತ್ತರ ಸಾಧಕನಾದೆ ಯಲ್ಲಾ ಎಲೆ ಕಾಯವೆ..." ಎಂಬಲ್ಲಿ ಕಾಯಕದಿಂದ ಇಹಪರ ಸಾಧನೆಯನ್ನು ವಚನ ಕಾರರು ಕಂಡುಕೊಂಡ ಪರಿ ತಿಳಿಸುತ್ತದೆ. ಇದರೊಂದಿಗೆ ಸರಳ ನಡೆಯಲ್ಲಿ ಶರಣರ ಮನೋಧರ್ಮ ಕಾಯಕದ ಘಟದಲ್ಲಿ ಹೇಗಿರಬೇಕೆಂಬುದನ್ನು ತಿಳಿಸಿದರು: "ಛಲಬೇಕು ಶರಣಂಗೆ ಪರಸತಿಯನ್ನೊಲ್ಲೆನೆಂಬ" ಎಂಬುದಲ್ಲದೆ. ಕಾಯಕ ತತ್ವ ವಚನಕಾರರ ಹಾಗೂ ಸಮಾಜ ವ್ಯವಸ್ಥೆಯ ದೃಷ್ಟಿಯಿಂದ ಸೃಜನಾತ್ಮಕ ತತ್ವ. ಇಲ್ಲಿ ಎಲ್ಲ ಒಂದೇ. ವಚನಕಾರರ "ಅಸಂಗ್ರಹ" ಮನೋಧರ್ಮ ಕಾಯಕತತ್ವದ ಇನ್ನೊಂದು ಭಾಗ. ದಾಸೋಹಕ್ಕೆಂದೆ ತಾನು ದುಡಿದದ್ದರಲ್ಲಿ ಸ್ವಲ್ಪ ಭಾಗ ವಿನಿಯೋಗ ಮಾಡ ಬೇಕು. ಅದೇ ಸಾರ್ಥಕ, ಹಾಗೂ ಶರಣನ ಕರ್ತವ್ಯ. ಯಾರಿಗೂ ಏನೂ ಕೊಡದೆ, ಪುಣ್ಯ ಮಾತ್ರ ಬಯಸುವವನನ್ನು ಬಸವಣ್ಣ ವಿಡಂಬನೆ ಮಾಡುತ್ತಾನೆ. ಇದರಿಂದ; ಆರ್ಥಿಕ ವ್ಯವಸ್ಥೆ ಹೆಚ್ಚು ಬಲವಾಗುವುದರೊಂದಿಗೆ ಧಾರ್ಮಿಕ ಪ್ರವೃತ್ತಿಯೂ ಜತೆಗೂಡಿ ಬೆಳೆದಂತಾಯಿತು. ಹೀಗೆ ಕಾಯಕವನ್ನು ಶರಣರು ಆರ್ಥಿಕ-ಆಧ್ಯಾತ್ಮಿಕ ಸಾಧನವನ್ನಾಗಿ ಪರಿಗಣಿಸಿ ಅನುಸರಿಸಿದರು. ಅದೇ ಕಾಯಕದಿಂದ ಆ ವ್ಯಾಪ್ತಿಯನ್ನು ಗುರುತಿಸುವ ವಿಶೇಷಣವೂ ಇರುತ್ತದೆ. ಉದಾ: ಡೋಹರ ಕಕ್ಕಯ್ಯ, ಅಂಬಿಗರ ಚೌಡಯ್ಯ, ಮೋಳಿಗೆ ಮಾರಯ್ಯ, ಮಡಿವಾಳ ಮಾಚಯ್ಯ ಎಲ್ಲರೂ ಶಿವಭಕ್ತರೆ. ಕಾಯಕದಿಂದ ಮರ್ತ್ಯಲೋಕವನ್ನೆ ಅಮರ್ತ್ಯ ಆಸಗಿಲು ಶ್ರಮಿಸಿದವರು. ಹಾಗೆಯ ಕಾಯಕದಲ್ಲಿ ಪ್ರಾಮಾಣಿಕತೆಗೂ ಪ್ರಾಮುಖ್ಯ ನೀಡಿದರು. ಚಪ್ಪಲಿ ಹೊಲಿಯುವ ಕಾಯಕವನ್ನು ಕರಿತೇ ಕ್ರಿಯಾಧೂಳನೆಂಬ ವಚನ ಕಾರನ ಸ್ವಾನುಭವ ಹೇಳಿಕೆಯಿದೆ. ಈ ಮಾರ್ಗ ಅನುಸರಣೀಯ ಅನ್ನಿಸುತ್ತದೆ.

ಇದಿಷ್ಟು ವಚನಕಾರರ ಚಳವಳಿಯ ವಿವಿಧ ಸ್ವರೂಪದ, ವಿವಿಧ ಲಕ್ಷಣಗಳುಳ್ಳ ಕಾಣಿಕೆಯಾದರೆ ಅವರು ಸೃಷ್ಟಿಸಿ, ಪ್ರತಿಭೆಯ ಮೂಸೆಯ ಮೂಲಕ ಸವೆದು ಟಂಕಿಸಿದ ವಚನಗಳು ಕನ್ನಡ ಸಾಹಿತ್ಯಕ್ಕೇ ಹೊಸ ಆಯಾಮ ತಿರುವು ನೀಡಿದವೆಂಬುದು ಗಮನೀಯ.

ಯಾವುದೇ ಆದರ್ಶಕ್ಕಾಗಿ ಹೋರಾಡುವ ವ್ಯಕ್ತಿಯೊಬ್ಬನ ಕಾರ್ಯವಾಗಲಿ, ಒಂದು ಗುಂಪಿನ ಕಾರ್ಯವಾಗಲೀ ಚಳವಳಿ ಎನ್ನಿಸಿಕೊಳ್ಳಲಾರದು. ಸಮಾಜದ ಒಂದು ದೊಡ್ಡ ಸಮುದಾಯದ ಆದರ್ಶಗಳನ್ನು ಅವತರಿಸಿಕೊಳ್ಳಲು ಮಾಡುವ ಹೋರಾಟವೇ ಚಳವಳಿಯಾಗುವುದು. ಈ ಚಳವಳಿ ಯಾವುದೇ ಒಂದು ಗೊತ್ತಾದ ಗುಂಪಿಗೇ ಸಂಬಂಧ ಪಟ್ಟಿದ್ದಲ್ಲ. ತಮ್ಮ ಆದರ್ಶವನ್ನು ಧ್ಯೇಯ ಆಗಿರಿಸಿಕೊಂಡಿದ್ದು, ಅದನ್ನು ಪಡೆಯುವ ಮನೋಭಾವ, ಅದಕ್ಕೆ ಸಮಾಜದ ವಿವಿಧ ವರ್ಗ, ಬಣಗಳ ಜನ ಒಟ್ಟಾಗಿ ಸೇರಿ ಆ ಆದರ್ಶ, ಗುರಿಯ ಸಾಧನೆಗಾಗಿ ಹೋರುವ ಶ್ರಮಿಸುವ ಸಾಧನವೆ ಚಳವಳಿ ಎಂದೆನ್ನಿಸಿ

ಕೊಳ್ಳುತ್ತದೆ, ವಚನ ಚಳವಳಿ ಹಾಗೂ ಹರಿದಾಸ ಆಂದೋಲನಗಳೆರಡೂ ಇಂಥ ಆಂದೋಲನಗಳೆ. ಎರಡರ ಪ್ರಧಾನ ಧ್ಯೇಯ, ಭಕ್ತಿ ಪಂಥ ಪ್ರಸಾರ.

ಚಳವಳಿ, ಆಂದೋಲನ, ಯಾವುದೆ ರೀತಿಯದಾಗಿರಲಿ, ಸಮಾಜದ ಒಂದು ದೊಡ್ಡ ವಿಭಾಗವೇ ವಿವಿಧ ಮೂಲಗಳಿಂದ ಅಲ್ಲಿ ಒಟ್ಟಾಗಿ ಸೇರಿರುತ್ತದೆ. ಅದು ಶ್ರೀ ಸಾಮಾನ್ಯರ ಆಶೋತ್ತರಗಳನ್ನು ಪ್ರತಿಬಿಂಬಿಸುತ್ತದೆ, ಪ್ರತಿನಿಧಿಸುತ್ತದೆ. ಇಂಥ ಸಂಘರ್ಷ, ಹೋರಾಟ, ಹೆಚ್ಚು ಪುಷ್ಟ ಆಗಬೇಕಾದರೆ ಸ್ಥಳೀಯ ಭಾಷೆ, ಆಡುನುಡಿಯ ಬಳಕೆಯೆ ಸಂಪರ್ಕ ಸಾಧನ. ಇದು ಅನಿವಾರ್ಯ ಹಾಗೂ ಸ್ವಾಗತಾರ್ಹ ಕೂಡ. ಜಾಗತಿಕ ಸಾಹಿತ್ಯದ ಅಥವಾ ಪ್ರಪಂಚದ ಯಾವುದೇ ಚಳವಳಿಯನ್ನು ಗಮನಿಸಿದರೂ ಅವು ಅಲ್ಲಲ್ಲಿಯ ಜನ ಭಾಷೆಗಳನ್ನು ತಮ್ಮ ಚಳವಳಿಯ ಪ್ರಸಾರ ಮಾಧ್ಯಮವಾಗಿ ಮಾಡಿಕೊಂಡುದು ಗುರುತಿಸಬಹುದು. ಕನ್ನಡ ನಾಡಿನಲ್ಲಿ ನಡೆದ ವಚನ ಚಳವಳಿಯ ಕ್ರಾಂತಿಗೆ ಇಲ್ಲಿನ ಶ್ರೀಸಾಮಾನ್ಯರ ಭಾಷೆ–ತಿಳಿಗನ್ನಡವೆ ಚಲುವಳಿಯ ಉಸಿರಾಯಿತು. ಆಡುಮಾತು, ಪರಿಭಾಷೆ, ಸಹಜ ಉಪಮೆ. ವಣ್ಣನೆ ಸಹಜವಾದ ನಡೆನುಡಿ–ಆಚಾರ –ವಿಚಾರ ಸಂಸ್ಕೃತಿ ಒಳಕೊಂಡ ಮಾತು, ಅದೇ ಜೀವಾಳವಾಯಿತು. ಇಲ್ಲಿ ಕನ್ನಡ ಭಾಷೆಯನ್ನು ಬಳಸುವ ಕಾರಣ ತಾವು ನಂಬಿದ ಆದರ್ಶ, ತಾವು ಅನುಸರಿಸುವ ಪಥ ತಮ್ಮ ಧ್ಯೇಯ ಅದಕ್ಕಾಗಿ ಹೋರಾಟ, ಇವನ್ನು ಜನತೆಗೆ ತಲುಪಿಸಬೇಕಾದ, ಅವರ ಹೃದಯದ ಬಾಗಿಲನ್ನು ತಟ್ಟುವ ಕೆಲಸ ಸಮರ್ಪಕವಾಗಿ ನೆರವೇರಬೇಕಾದರೆ ಕನ್ನಡವೆ ಅವರಿಗೆ ಮುಖ್ಯ ಸಂಪರ್ಕ ಸಾಧನವಾಗಿತ್ತು. ಯಾವುದೇ ಬಗೆಯ ಪ್ರಸಾರ ಕಾರ್ಯದಲ್ಲಿ ತೊಡಗಿದವರು ಅನಿವಾರ್ಯವಾಗಿ ಜನರ ಭಾಷೆಯನ್ನೆ ಬಳಸಬೇಕಾಗುತ್ತದೆ. ಹಾಗಾಗಿ ಶರಣರ ವಚನ ರೂಪದ ಮಾತೂ ಸುಂದರ, ಸತ್ವ, ಸರಳ, ನೇರ. ಕನ್ನಡದ ನುಡಿ ಸಾಮರ್ಥ್ಯ ಕೂಡ ಅವರ ಮೂಲಕ ಪುಟಕ್ಕಿಟ್ಟಂತೆ ವಿಜೃಂಭಿಸುತ್ತದೆ. ಇನ್ನೂ ಒಂದು ವಿಚಾರ. ವಚನಕಾರರು ಸಾಹಿತ್ಯವನ್ನು ಮಂಡೀಯುಬದ್ಧ ಮಾರ್ಗದಲ್ಲಿ ರಚಿಸಲಿಲ್ಲ (Committed Pattern). ಮಡಿಗೂ ವಚನಕಾರರಿಗೂ ತುಂಬ ದೂರ. ಹಾಗಾಗಿ ಅವರ ಭಾಷೆ ಸದಾ ಆಡುವ ಉಸಿರಿನಷ್ಟೆ ಸಹಜ, ಅರಳುವ ಮಲ್ಲಿಗೆಯ ಹಾಗೆ ಸುಂದರ, ಸರಳ ಹಾಗೂ ನಿರಾಡಂಬರ. ಮನಸ್ಸಿಗೆ ತೋಚಿದ, ಆಳದಿಂದೊಡಮೂಹ ಬಂದ ಪಡಿ ನುಡಿ. ಹೀಗಾಗಿ ಶರಣರು ಕಂಡರಿಸಿದ ವಚನ ಸಾರಸ್ವತ ಸಂಪದ ಜನರಿಗೆ ಹೊಸತೆನ್ನಿಸಿತು. ಮಾರ್ಗಕಾವ್ಯ, ಸಾಹಿತ್ಯಗೋಧಿ ಧರ್ಮಗಳಲ್ಲಾಗಿದ್ದ ಮಡಿವಂತಿಕೆ, ಮನೋಧರ್ಮಕ್ಕೆ ಒಂದು ವಿನೂತನ ಕ್ರಾಂತಿಯ ಕದಿರು ಕಂಡಿದ್ದಾತು. ಇಂಗ್ಲಿಷಿನ "ಪಿಂಟಿನ್" (ಕ್ರೈಸ್ತ ಪಾದ್ರಿ)ಗಳಂತೆ ಕನ್ನಡದ ವಚನಕಾರರು ತಮ್ಮ ಧ್ಯೇಯ ತಾವು ಸಾಧಿಸಲು ಹೆಣಗಿದ ರಂಬಂದು ಅವರ ಕೃತಿಗಳಿಂದಲೆ ವೇದ್ಯ ಆಗುತ್ತದೆ. 'ನಾನುಡಿದಲ್ಲಿದೆ ಸೈರಿಸಲಾರೆನಯ್ಯ' ಎಂಬಲ್ಲಿ ಅವರ ಮನಸ್ಸಿನ ತುಡಿತ, ತೀವ್ರತೆ, ಸೋಲಿಗೆ ಜಗ್ಗದ ಸ್ಥೈರ್ಯ, ಇವೆಲ್ಲದ ರಿಂದಾಗಿ ವಚನಕಾರರ ಮಾತು ಜನಕ್ಕೆ ತಲುಪಿತು. ಬಡಕಲಾಗಿದ್ದು, ರಾಜಾಶ್ರಯ ದಲ್ಲಿ ಕಂಕಣ ಅಗ್ರಹಾರಕ್ಕಾಗಿ ಬದುಕುತ್ತಿದ್ದ ಕನ್ನಡದ ಶೃಂಖಲೆ ಬಿಡಿಸಿ, ಅದಕ್ಕೆ

ನುಡಿಯು ಸ್ವಾತಿಕೆಯು ರಕ್ತ ಮಜ್ಜೆ ಮಾಂಸ ತುಂಬಿ, ಹಂಗಿಲ್ಲದೆ ಸ್ವತಂತ್ರ ಆಗಿ ಮಾಡಿದ್ದು ವಚನಕಾರರ ಸಾಧನೆ. "ಜನಸಾಮಾನ್ಯರಲ್ಲಿ ಆತ್ಮವಿಶ್ವಾಸ ಕುದುರಿತು", ಕನ್ನಡ ತಮಗೆ ಆಪ್ತವೆಂಬ ಭಾವನೆ ಬಲವಾಯಿತು. ಅವರು ಕ್ರಿಯಾಶೀಲವಾದಂತೆ ಕನ್ನಡವೂ ಕ್ರಿಯಾಶೀಲವಾಯಿತು. ಕನ್ನಡದ ಸಹಜ ಕಂಪು, ಜನ ನುಡಿದಾಗ ಹೊರಹೊಮ್ಮಿತು. ವಚನಕಾರರಿಗೆ ಕನ್ನಡದ ಸಾಮರ್ಥ್ಯ-ಅಡುವವನ ಬಗ್ಗೆ ಒಲವು ಎರಡೂ ಇದ್ದುದರಿಂದ, ಕನ್ನಡಕ್ಕೆ ಬಾಯಿ ಬಂತು. ಅದರ ಸೊಬಗು ಸ್ವಂತ ಚೆಲುವು ಹೊರಹೊಮ್ಮಿ ಅಚ್ಚರಿ ಎಂದೆನ್ನಿಸುವಂತಾಯಿತು. ಅಧ್ಯಾತ್ಮ, ಅಧ್ಯಾತ್ಮ ಮಂಥನ ಸಾಮಾನ್ಯನಿಗಲ್ಲ, ಹಾಗೂ ಅದನ್ನು ಅಭಿವ್ಯಕ್ತಿಸುವುದು ಆಡುನುಡಿಯಿಂದ ಸಾಧ್ಯವಿಲ್ಲ ಎಂಬ ಸಾಂಪ್ರದಾಯಿಕ ನಂಬುಗೆಯ ಪೊರೆಯನ್ನು ಕಳಚಿ ಕನ್ನಡಕ್ಕೆ ಯಾಜಮಾನ್ಯ ತಂದಿತ್ತವರು ವಚನಕಾರರು. ವಚನಕಾರರ ಧ್ಯೇಯ- "ಜೀವ ಜೀವತ್ವದೆಡೆಗೆ ಅನುಸಂಧಾನಮಾಡಿಕೊಳ್ಳುವುದೇ ಬಾಳಿನ ಉದ್ದೇಶ"[8] ಇದಕ್ಕಾಗಿ ಸಂಸಾರದಿಂದೋಡಬೇಕಿಲ್ಲ, ಅಲ್ಲಿದ್ದೇ ಸಾಧಿಸುವ ಸಮನ್ವಯತೆ ವಚನಕಾರರು ಹಾಕಿ ಕೊಟ್ಟ ಶಿವಪಥ. "ವಚನಗಳಲ್ಲಿ ನಾವು ಕಾಣುವುದು ಒಂದು ಸಮನ್ವಯ ಸಂಸ್ಕೃತಿ. ಉತ್ತಮ ಸಂಸ್ಕೃತಿಯ ಗುಣಗಳಾದ ವಿನಯ, ಶ್ರದ್ಧೆ, ಧೈರ್ಯ, ಸಮಾನತೆ, ಅದು ಇತ್ಯಾದಿಗಳನ್ನು "ಎಂಬ ಮಾತು ಇಲ್ಲಿ ಗಮನಿಸುವಂಥದಾಗಿದೆ." ಇಲ್ಲಿ ಸಮಾಜ ಹಿತ–ಸಮಾಜ ಸಂಘಟನೆಯ ಸೃಜನಾತ್ಮಕ ದೃಷ್ಟಿಯೂ ಇದೆ. ಆದರಿಂದ ವಚನಕಾರರ ಚಳವಳಿ, ಅದು ಪ್ರಧಾನವಾಗಿ ಮತೀಯ ಚಳವಳಿ, ಹಾಗೆಯೆ ಸಂಸ್ಕೃತಿಯನ್ನು ರೂಪಿಸಿದ ಆಂದೋಲನ. "ಮಾನವ ದೈವದ ಶರಣನಾಗುವ ವಿಧಾನವೇ ಈ ಸಂಸ್ಕೃತಿಯ ಸ್ವರೂಪ."

ಇದಿಷ್ಟು ವಚನ ಚಳವಳಿ, ಅದರ ಕೊಡುಗೆ ಬಗ್ಗೆ ಹೇಳಿದಾಗ ವಚನದ ಸಾಹಿತ್ಯಕ ಸ್ವರೂಪದ ಬಗ್ಗೆ ಎರಡು ಮಾತು ಬರೆಯುವುದು ಸಾಧುವೆನಿಸುತ್ತದೆ. ವಚನ ಚಳವಳಿಯ-ಸಂಕ್ರಮಣ ಸಮಯದಲ್ಲಿ ಸೃಷ್ಟಿಯಾದ ವಚನ ಸಾಹಿತ್ಯ ವಿಪುಲ ರಾಶಿಯೆಲ್ಲ ಗಟ್ಟಿಯೆಂದು ನಾವು ಹೇಳಲಾಗುವುದಿಲ್ಲ, ವಚನಕಾರರಲ್ಲಿ ಸಂಸ್ಕೃತ ಚೆನ್ನಾಗಿ ಬಲ್ಲ ಉರಿಮಂಗ ಪೆದ್ದಿಯಂಥವರಿದ್ದಂತೆ, ತುಂಬ ಸಾಮಾನ್ಯರೂ ಇದ್ದರು. ಹಾಗೆಯೆ ವಚನ ಮೌಲ್ಯ-ಅಮೂಲ್ಯವೆಂದೂ, ಸಹಜವೆಂಬುಮೇಥದ್ದು ಒಂದು ಹಂತದ ವಚನ-ಗಳು. ಅವುಗಳಲ್ಲಿ ಆಧ್ಯಾತ್ಮದ, ಅನುಭವದ, ಸಮಾಜ ಸುವ್ಯವಸ್ಥಿತ ಆಗಿಸುವ ಆಂದೋಲನ ಮನೋಭಾವದ ತಿರುಳು ಇದೆ. ಆದರೆ ಇಂಥ ಶ್ರೇಷ್ಠ ವಚನ ಸಂಖ್ಯೆ ಕಡಿಮೆಯು. ಹರಿದಾಸರ ಆಂದೋಲನದ ಹಂತಗಳಲ್ಲೂ ಹಾಗೆಯೆ ಶ್ರೀಪಾದರಾಜ, ವ್ಯಾಸರಾಯರು, ವಾದಿರಾಜರು ಹಾಗೂ ಹರಿದಾಸ ಕೂಟದ ಶ್ರೀ ಪುರಂದರ ಶ್ರೀ ಕನಕ ವಿಜಯ-ಜಗನ್ನಾಥದಾಸರುಗಳ ಕೃತಿಗಳಲ್ಲಿನ ಬನಿ, ಬಿಂದು, ಅನಂತರ ದಾಸಪರಂಪರೆಯವರಲ್ಲಿ ಕಡಮೆ ಆಗುತ್ತದೆ. ಶಾಸ್ತ್ರಪ್ರಜ್ಞೆ, ಆಚಾರನಿಷ್ಠೆ, ಸಂಪ್ರದಾಯತೆ ಹೆಚ್ಚುತ್ತಾ ಬರುತ್ತದೆ. ಹಾಗೆಯೆ ಚರ್ವಿತ ಚರ್ವಣವೆಂಬ ಹಾಗೆ ಅನಂತರದ ಅನೇಕರ ರಚನೆಗಳಲ್ಲಿ ಅದೇ ಉಪಮೆ, ಅದೇ ರೂಪಕ, ಅದೇ ಪರಿ ಎಂಬಂತೆ ಕಂಡುಬಂದರೂ ಆಂದೋಲನದ

ಗತಿ ಮುಂದರಿದ ಹಾದಿ ಇನ್ನೂ ಇವೆ ಎಂಬುದು ಮಾತ್ರ ನಿಚ್ಚಳವಾಗಿ ಗೋಚರ ಆಗುತ್ತದೆ. ಅದೇ ಸಮಾಧಾನ. ಒಟ್ಟಾರೆ ವಚನ ಚಳುವಳಿ ಹಾಗೂ ಹರಿದಾಸ ಆಂದೋಲನ ಎರಡೂ ಜನಪದವಾದದ್ದು, ಹಾಗೂ ಭಕ್ತಿಪೂರ್ವ ಪ್ರತಿಪಾದಕ ಆಂದೋಲನಗಳೆನ್ನಬಹುದು.

## ವಚನ-ಕೀರ್ತನ

ವಚನಸಾಹಿತ್ಯ ಸ್ವರೂಪವನ್ನು ಕುರಿತು ಎರಡು ಮಾತು ತಿಳಿಸಿದ ನಂತರ ಹರಿದಾಸ ಆಂದೋಲನದ ಸ್ವರೂಪ ಕುರಿತು ವಿಚಾರ ಮಾಡುವುದರಿಂದ ವಿಶ್ಲೇಷಣೆ ಪೂರ್ಣ ಆದಂತಾಗುತ್ತದೆ. ವಚನಗಳ ವಿವಿಧ ಸ್ವರೂಪ, ಮಂಖಿಗಳ ಬಗ್ಗೆ ಈಗಾಗಲೇ ಸಾಕಷ್ಟು ಚರ್ಚೆ, ಬರಹ ಆಗಿದ್ದರೂ ಆಂದೋಲನ-ಸಾಹಿತ್ಯಕ ನಿಟ್ಟಿನಿಂದ ಎರಡು ಮಾತು ತಿಳಿಸಬೇಕಾಗುತ್ತದೆ.

ವಚನ, ಒಂದು ಧಾರ್ಮಿಕ ಆವರಣ-ಪರಂಪರೆಗೆ ಸೇರಿದ, ಒಂದೇ ಆದರ್ಶವುಳ್ಳ ವ್ಯಕ್ತಿಗಳು ಸೃಷ್ಟಿಸಿದ ತಿಳಿಗನ್ನಡ ಸಾಹಿತ್ಯ ರೂಪ. ವಚನ-ಹಾಗೂ ಹರಿದಾಸ ಸಾಹಿತ್ಯ ಪ್ರಕಾರಗಳ ಸೃಷ್ಟಿ ಬೇರೆ ಬೇರೆ ಅವುಗಳ ಉಗಮ, ಒದಗಿ ಬಂದ ಪರಿಸರ ಪ್ರೇರಣೆ, ಆಶಯ-ಅಭಿವ್ಯಕ್ತಿ, ಶೈಲಿ, ಛಂದೋರೂಪ, ಪರಸ್ಪರವೋ ಅಥವಾ ಯಾವುದೋ ರೀತಿಯ ಪ್ರಭಾವ, ಪೌರಾಣಿಕ ಸಾಮಾಜಿಕ ಅಂಶ, ಇವೆಲ್ಲ ವಿಚಾರ ಕುರಿತು ಗಮನಿಸಬೇಕಾಗುತ್ತದೆ. ವಚನ ಸಾಹಿತ್ಯ ಪ್ರಕಾರ ಕ್ರಿ. ಶ. ೧೨ನೆ ಶ.ದ. ಮಧ್ಯ ಭಾಗದ ನಿರ್ದಿಷ್ಟ ಸಾಹಿತ್ಯ ರೂಪವಾದರೂ ಅದರ ಉಗಮವನ್ನು ಹನ್ನೊಂದನೆಯ ಶತಮಾನ ಕ್ಕೊಯ್ಯುತ್ತಾರೆ. ಹಾಗೂ ಅವರ ಪ್ರಕಾರ, ಶಿವಶರಣರು ತಮ್ಮ ಭಾವನೆಗಳನ್ನು ಕೇವಲ ಶುದ್ಧವಾಗಿರುವ ಪದ್ಯಗಂಧಿಯಾದ ಭಾಷೆಯಲ್ಲಿ ಅಭಿವ್ಯಕ್ತಗೊಳಿಸಿದ ಮಂಕ್ಷಿಕ ರೂಪದ ರಚನೆಗಳೆ ವಚನಗಳು ಎನ್ನಬಹುದು. ಈಗ ದೊರೆಯುವ ಅತ್ಯಂತ ಪ್ರಾಚೀನ ವಚನಗಳು ಕ್ರಿ.ಶ. ೧೨ನೆ ಶ.ದ ಪೂರ್ವದಲ್ಲಿದ್ದ ಜೇಡರ ದಾಸಿಮಯ್ಯನದೆಂದು ವಿದ್ವಾಂಸರ ಮತ್ತು ಅವನು ಸ್ಮರಿಸುವ ಕೆಲವು ಶರಣರಿಂದಾಗಿ ಈ ಬಗ್ಗೆ ಅನುಮಾನ ಬಂದರೂ ಅದು ಸರಿಯಾದುದಲ್ಲವೆಂದೂ, ವಚನ ಸಾಹಿತ್ಯದ ಹಳಮೆಯನ್ನು ದಾಸಿಮಯ್ಯನವರಿಗೆ ಮಾತ್ರ ಒಯ್ಯಬಹುದೆಂದೂ ತಮ್ಮ ನಿಬಂಧದಲ್ಲಿ ಡಾ. ಪಿ ವಿ. ನಾರಾಯಣರವರು ಸಮರ್ಥಿಸಿರುವುದು ಸಾಧುವೆನಿಸುತ್ತದೆ. 'ಆದ್ಯರ ವಚನ'ಗಳೆಂಬ ಬೇರೆ ವಚನಗಳನ್ನು ಡಾ. ಬಸವರಾಜು ಹೇಳುತ್ತಾರೆ. ಅದು ಕೇವಲ ಊಹೆ ಎನ್ನಿಸುತ್ತದೆ ವಚನ ಸಾಹಿತ್ಯದ ಕನ್ನಡತನ, ಸ್ವಂತಿಕೆಯ ಬಗ್ಗೆ ಅನೇಕ ಚರ್ಚೆ ವಿದ್ವಾಂಸರು ನಡೆಸಿದ್ದಾರೆ, ತಮಿಳಿನ 'ತೇವಾರಂ' ಗಳಿಗೂ ಹೋಲಿಸುವ ಅನ್ವೇಷ ನಡೆದಿದೆ. ಆದರೆ, ವಚನ, ಬೇರೆ ಭಾಷೆಯಿಂದ ಪ್ರೇರಣೆ ಹೊಂದಿ ಬಂದ ಸಾಹಿತ್ಯ ರೂಪ ಅಲ್ಲ. ವಚನದ ವೈಶಿಷ್ಟ್ಯ ಅಲ್ಲಿರುವ ಭಾಷೆ, ಪರಿಭಾಷಿಕ ಪದ, ಹಾಗೂ ನಿರೂಪಣೆಯ ಸೊಗಸು. ಅದು ಬೇರಾವ ಸಾಹಿತ್ಯದಿಂದ ಆವಿರ್ಭವಿಸಿದ್ದಲ್ಲ, ಬೇರಾವ ಛಂದೋರೂಪದಿಂದ ಮಾರ್ಪಟ್ಟುದೂ ಅಲ್ಲ, ಅದಕ್ಕೆ

ಕನ್ನಡವೇ ಮೂಲ ಪ್ರೇರಣೆ. ಇಲ್ಲಿ ಎಂ. ಆರ್. ಶ್ರೀನಿವಾಸಮೂರ್ತಿಯವರು ಹೇಳುವ ಮಾತು ಸರಿ ಎನ್ನಿಸುತ್ತದೆ: "ವಚನ ಸಾಹಿತ್ಯ ಎರವಲು ತಂದದ್ದಲ್ಲ. ಅದು ಕನ್ನಡದ ಸ್ವಾರ್ಜಿತ ಸ್ವತ್ತು" ಹಾಗೆಯೇ ಹರಿದಾಸ ಸಾಹಿತ್ಯದ ಉಗಮ ೧೫ನೆ ಶ.ದ, ಶ್ರೀಪಾದ ರಾಜರಿಂದಲೆಂಬುದನ್ನು ವಿದ್ವಾಂಸರು ನಿರ್ಣಯಿಸಿದ್ದಾರೆ. 'ಅಚಲಾನಂದದಾಸ' ರವರಿಗೆ ಒಯ್ಯುವ ಪ್ರಯತ್ನ ನಿಷ್ಫಲಗೊಂಡಿದೆ. ಇದು ಮೊದಲು ಚರ್ಚಿತ ಆಗಿದೆ.

ಮೇಲಿನ ವಿಶ್ಲೇಷಣೆ, ದಾಸ ಸಾಹಿತ್ಯಕ್ಕಿಂತ ವಚನ ಸಾಹಿತ್ಯದ ಹಳಮೆಯನ್ನು ಸುಮಾರು ೨೦೦ ವರ್ಷದಷ್ಟು ಹಿಂದಕ್ಕೊಯ್ಯುತ್ತದೆ.

ಬಸವಣ್ಣನಿಂದ ಪರಿಷ್ಕೃತಗೊಂಡ ವೀರಶೈವ ಧರ್ಮದ ಮತಪ್ರಸಾರ, ವಚನ ರಚನೆ, ಎರಡೂ ಚಳವಳಿಯು ಬಿರುಸಿನಿಂದಲೆ ನಡೆಯಿತು. ಶಿವನಿಷ್ಠೆ-ಶಿವಪಾರಮ್ಯ ವೀರಶೈವ ಸಿದ್ಧಾಂತದ ತಾತ್ವಿಕ ತಳಹದಿಯ ಆಧಾರದಿಂದ ರೂಪುಗೊಂಡ ಆಧ್ಯಾತ್ಮಿಕ ಸಾಧನೆ, ಸರ್ವಸಮಾನತೆಯ ನೆಲಗಟ್ಟಿನ ಮೇಲೆ ನವಸಮಾಜ ನಿರ್ಮಾಣ, ಸಹಜ ಆದ ಆತ್ಮಶೋಧನ ವಿಮರ್ಶೆ, ವೈದಿಕ ಮತ ಖಂಡನೆ ಸಂಪ್ರದಾಯ-ಕಟ್ಟುಕಟ್ಟಳೆಯ ಬಂಧ ಇರದ ಮುಂಕ್ತ ಅಭಿವ್ಯಕ್ತಿ ಇವು ವಚನಾ ಸಾಹಿತ್ಯ ಪ್ರೇರಕ ಅಂಶಗಳೆನ್ನಬಹುದು. ಷಟ್ಸ್ಥಲ ಸಿದ್ಧಾಂತದ ಹಂತ ಹಂತಗಳ ಸೋಪಾನವೇರಿ ಅನುಭವದ ಉತ್ತುಂಗ ಶೃಂಗ ದಲ್ಲಿ ನೆಲೆನಿಂತು ಶಿವದರ್ಶನದ ಪರಮಸಿದ್ಧಿ ಪಡೆಯುವುದ ವಚನಕಾರರ ಧ್ಯೇಯ. ಆದರೆ, ವಚನ ರಚನೆ ವೀರಶೈವ ಧರ್ಮ ಪ್ರಸಾರದ ಒಂದು ಅವಿಭಾಜ್ಯ ಅಂಗವೆಂಬುದು ಮರೆ ವಂಥದಲ್ಲ. ಹಾಗೆಯೆ ವೈಷ್ಣವ ಧರ್ಮ ಪ್ರಸಾರದ ಅವಿಭಾಜ್ಯ ಅಂಗ, ದಾಸಸಾಹಿತ್ಯ. ವೈದಿಕ ಧರ್ಮದ ನೆಲೆವೀಡಾದ ಭಾರತದಲ್ಲಿ "ಭಕ್ತಿ"ಗೆ ವಿಶೇಷ ಸ್ಥಾನ. ಅದರ ಪರಿಚಯವೂ ಅಷ್ಟೆ ಪ್ರಾಚೀನ. ತುಂಬ ಹಿಂದಿನಿಂದಲೂ "ವಿಷ್ಣು ಭಕ್ತಿ" ಪ್ರಚಾರ ದಲ್ಲಿದೆ (ಈ ಬಗ್ಗೆ ಇದೇ ನಿಬಂಧದ ಹರಿದಾಸ ಸಾಹಿತ್ಯದ ಉಗಮ, ಸ್ವರೂಪದ ಅಧ್ಯಾಯದಲ್ಲಿ ವಿಶದ ಆದ ಚರ್ಚೆ ಇದೆ) ಆದರೆ, ವಿಷ್ಣುಭಕ್ತಿ-ಶಿವಭಕ್ತಿಗಳೆರಡಕ್ಕೂ ಮೊದಲಿಂದ ಸ್ಪರ್ಧೆ, ಒಂದನ್ನೊಂದು ಹತ್ತಿಕ್ಕುವ ಪರಿಸರ. ಪರಿಸರ, ಎಂದಾಗ ಆಳಿದ ಅರಸುಮನೆತನ, ಅವರ ನಿಷ್ಠೆ ಒಲವರವಿದ್ದ ನೆಲೆ, ಇವೇ ಪರಿಗಣನಾರ್ಹ ಆದ ಅಂಶ. ಆದರೆ, ಒಂದು ಗಮನಾರ್ಹ ವಿಚಾರವೆಂದರೆ, ಭಾರತದಲ್ಲಿ ಬಂದ ಮೂರು ಮತ ಗಳಾಚಾರ್ಯರು. ಶೈವ-ವೈಷ್ಣವರ ಯಾದವೀಕಲಹವೇನೆ ಇದ್ದರೂ, ಅನ್ಯಧರ್ಮ ವನ್ನು ತಳವೂರುವ ಅಪಾಯವನ್ನು ಮನಮುಟ್ಟಿಸಿ, ಹಿಂದೂಧರ್ಮ ಸ್ಥಾಪನೆ, ಜನ ಜಾಗೃತಿಯುಂಟು ಮಾಡಿದ್ದು. "ಭಕ್ತಿ"ಯನ್ನು ಮತಧರ್ಮ ಪ್ರಸಾರಕ್ಕಾಗಿ ಬಳಸಿದ ಯಾವುದೇ ಮತಧರ್ಮವಿರಲಿ, ಅದು ತನ್ನ ತತ್ವಗಳನ್ನು ಉಪದೇಶಿಸಲು ಜನಸಾಮಾನ್ಯ ರಿಗೆ ಸುಲಭವಾಗುವ ಜನ ಭಾಷೆಯನ್ನೆ ಬಳಸಬೇಕಾಗುತ್ತದೆ. ಇದು ಅನಿವಾರ್ಯ ಹಾಗೂ ಮತಾಭಿವೃದ್ಧಿಯ ನಿಟ್ಟಿನಿಂದ ಸ್ವಾಗತಾರ್ಹ. ಧರ್ಮತತ್ವ ಸರಳ ಆಗಿ ಅರ್ಥ ಆಗದೆ ಮತ ಬೆಳೆದಾತೆ ? ಇದು ಜೈನರು ಮೊದಲು ಕಂಡುಕೊಂಡದ್ದು. ಅನಂತರ ಕನ್ನಡ ವನ್ನು ಬಳಸಿಕೊಂಬ ಪರಿ ಸ್ಫುರಿಸಿದುದು ಬಸವಣ್ಣನವರಿಗೆ. ಪಂಡಿತಮಾನ್ಯ ಸಾಹಿತ್ಯ

ವನ್ನು ಸಾಮಾನ್ಯ ಮಾನ್ಯ ಆಗಿಸಿ, ಸಾಮಾನ್ಯನಿಗಾಗಿ ಅನುಷ್ಠಾನಕ್ಕೆ ತಂದ ಬಸವಣ್ಣ. ಈ ಸಂಧಿಸಮಯವೂ ವೈದಿಕ ಧರ್ಮದ ಅರ್ಥ ಆಗದ ಡಂಭಾಚಾರದ ನಿಯ ಸಂಸ್ಕೃತ ಭೂಯಿಷ್ಠತೆ, ಜನಸಾಮಾನ್ಯರಿಗೆ ಬೇಸರತರಿಸಿದ್ದಂಥ ಸಮಯ. ವೀ ಮತಕ್ಕಿಂತ, ವೈದಿಕ ಮತವನ್ನು ಖಂಡಿಸುವುದು ಆದರ ಸಂಘಟನೆಯ ಬಲ ಕೊಳ್ಳಲು ಹೂಡಿದ ಉಪಾಯಗಳಲ್ಲೊಂದಾಗಿತ್ತು, ಎನ್ನಬಹುದು. ಪಾಮ ಸಾಮಾನ್ಯರು ತಮ್ಮ ನುಡಿಗೆ ಸನಿಹ ಆದ ನಡೆಗೆ, ಮತಕ್ಕೆ ಮಾರ್ಪಾಡಾಗಿ ಸೇರಿದವರು. ಆದರ ನಂತರವೆ ಎಲ್ಲ ಮತದವರಿಗೂ ಅರ್ಥ ಆಗಿದ್ದು, ಅನಿ ವೆಂದು ಕಂಡದ್ದು, ತಮ್ಮ ಮತ-ಧರ್ಮ ಉಳಿಯಲು ಜನಬಳಕೆಯ ನುಡಿಯ ವೆಂಬುದು ವಚನದ ಹೊಸ ಶೈಲಿ ಬಂದಂತೆಯೆ ನಂತರ ಹೊಮ್ಮಿದ ದಾಸ ಸಾಹಿ ಹೊಸ ಹೊಸ ಶೈಲಿ. ಪ್ರಯೋಗದ ಸಾಧನೆ ಮಾಡಿತು. ಈ ಕ್ರಾಂತಿ, ರಾಜಕಿ ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಕೂಡ ಗಾಢ ಆದ ಪ್ರಭಾವ ಬೀರಿತು.

ಇನ್ನೊಂದು ವಿಶಿಷ್ಟತೆ, ಬಸವಣ್ಣನಂಥ ವಚನಕಾರರು, ಹರಿದಾಸವರೇಣ್ಯರ ಯಾವ ಆಶ್ರಯ, ಹಂಗಿಗೂ ಒಳಗಾಗದ್ದು. ಯಶಸ್ಸು, ಅರ್ಥ, ಪ್ರಯೊ ಅರಸಲಿಲ್ಲ. ಸರ್ವರ ಬದುಕೂ ಹಸನಾಗಬೇಕು, ಧರ್ಮದ ವಿರಾಟ್ ಸ್ವರೂಪ ವಾಗಿ ಎಲ್ಲರಿಗೂ ಅರ್ಥ ಆಗಬೇಕು. ನೀತಿವಂತ ರಾಜಕೀಯಬೇಕು, ಸಂಗ್ರಹಬು ದುರಾಸೆ ಕಳೆದು ಹೋಗಬೇಕು. ಇದೇ ಅವರ ಹಂಬಲ, ತುಡಿತ, ಶ್ರಮ ಹಿರಿ ಬಯಕೆ. ಇದರಿಂದಾಗಿ ಅವುಗಳನ್ನು ಪ್ರತಿಬಿಂಬಿಸಿ ಪಡಿಮೂಡಿದ ಅವರ ವಚನ ಆಯಿತು, ಭಕ್ತ್ಯಾತ್ಮಕ ಭಾವಗೀತೆಯೆ ಆಯಿತು. "ಕೂಡಲ ಸಂಗಮದೇವ, ಕೇಡಿಲ್ಲವಾಗಿ ನೀನು ಒಲಿದಂತೆ ಹಾಡುವೆ"ನೆಂದುದರು. ಅವನಂತೆಯೆ ಇತರ ಕಾರ ಶರಣರು ಅಂದಂದಿನ ಅನುಭವ ಹಾಗೇ ಸಲೀಸಾಗಿ ವಚನ ರೂಪದಲ್ಲಿ ತಿಳಿಸಿದ ದಾಸರಲ್ಲಿ ಕೀರ್ತನೆಯೋ ಸುಳಾದಿಯೋ, ಉಗಾಭೋಗವೋ ಆಗಿ ಒಡಮೂಡಿ "ಶರಣರ ವಚನಗಳು" ಮಾತನ್ನು ಆಡಿದ ಹಾಗಿದ್ದರೆ, ದಾಸರ ಪದಗಳು ಮಾತ ಹಾಡಿದ ಹಾಗಿವೆ. ಈ ಮಾತುಗಳಲ್ಲಿ ಚಿತ್ರಕ ಶಕ್ತಿಯಿದೆ : ಜೀವಂತವಾದ, ಪ್ರಮಾ ವಾದ ಅನುಭವವಿದೆ" ಎಂಬ ಮಾತು ತುಂಬ ಒಪ್ಪುತ್ತವೆ. ಹರಿದಾಸರು ನವ ಭಕ್ತಿಗಳನ್ನು ಪ್ರತಿಪಾದಿಸಿದರೆ ಶರಣರು "ಶರಣಸತಿ-ಲಿಂಗಪತಿ" ಭಾವ, ಭೃತ್ಯಭ ಇವುಗಳ ಮೂಲಕ ಭಕ್ತಿಯ ಅನುಭವ ವಿಶೇಷವನ್ನು ಕಂಡರಿಸುತ್ತಾರೆ. ಶ್ರ ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ (ಗೆಳೆತ ಆತ್ಮನಿವೇದನ, ಮುಂತಾದ ಒಂಭತ್ತು ತೆರನಾದ ಭಕ್ತಿಯನ್ನು ಹರಿದಾ ಪರಂಪರಾನುಗತವಾಗಿ ನಿವೇದಿಸಿಕೊಂಡಿದಾರೆ. ಅದೇ ಹರಿದಾಸರ ಆಂದೋಲ ವೈಶಿಷ್ಟ್ಯ. "ಕೇಳನೋ ಹರಿತಾಳನೋ ತಾಳಮೇಳಗಳಿದ್ದು ಪ್ರೇಮವಿಲ್ಲದಗಾ ಎಂದು ಭಗವಂತನಲ್ಲಿ ಅರ್ಪಿಸುವ ನಿರ್ವ್ಯಾಜಪ್ರೇಮ. ನಿರ್ಹೇತುಕ ಪ್ರೇಮವ ಹರಿದಾಸರು ಅರ್ಪಿಸಿದರೆ, "ತಂದೆ ನೀನು, ತಾಯಿನೀನು, ಬಂಧು ನೀನು, ಬ

ನೀನು ನೀನಲ್ಲದೆ ವಂತ್ಯಾರೂ ಇಲ್ಲವಯ್ಯ ಕೂಡಲ ಸಂಗಮದೇವಾ ಹಾಲಲ್ಲದ್ದು ನೀರಲ್ಲದ್ದು'' ಎಂದು ಹಂಬಲದಿಂದ ಹೇಳಿಕೊಂಡಂತೆಯೇ, "ನಾದಪ್ರಿಯನೂ ಅಲ್ಲ ವೇದ ಪ್ರಿಯನೂ ಅಲ್ಲ ಭಕ್ತಿಪ್ರಿಯನು ನಮ್ಮ ಕೂಡಲ ಸಂಗಮದೇವಾ'' ಎಂದು ತಮ್ಮಲ್ಲಿನ ಭಕಂತಿ ನಿವೇದನ ಮಾಡುತ್ತಾರೆ ವಚನಕಾರರು (ಬಸವಣ್ಣನವರು). ಈ ಭಕ್ತಿಯ ಭಕ್ತಿಗಳಲ್ಲಿ ವಚನವಾಙ್ಮಯ-ದಾಸಸಾಹಿತ್ಯ ಕೆಲವೊಮ್ಮೆ ಒಂದೇ ಆಗುತ್ತವೆನಿಸುತ್ತದೆ. ದಾಸ-ಶರಣರ ಪಥ, ದೃಷ್ಟಿಭಿನ್ನವೆ. ಶಿವಶರಣರು, ಆದರೆ, ವೇದ, ವೈದಿಕಧರ್ಮ ಒಪ್ಪರು. ಇದರಿಂದ, ವೈದಿಕ ಧರ್ಮಕ್ಕೆ ಬಿದ್ದ ಪೆಟ್ಟು, ಆತಂಕ ಹಿಮ್ಮೆಟ್ಟಿಸಿ, ಮತ್ತೆ ವೈದಿಕ ಧರ್ಮ-ಮಂತ ಪುನಶ್ಚೇತನಗೊಳಿಸುವ ಆಚಾರ್ಯ ಪುರುಷನೊಬ್ಬ ಅವತರಿಸಲು ಹನ್ನೆಲೆ ಇದ್ದಿತು. ಇಂಥ ಪರ್ವ ಕಾಲದಲ್ಲಿ ಮಧ್ವಾಚಾರ್ಯರು ಜನಿಸಿ, ಒಂದದ್ದು. ಆಚಾರ್ಯ ಮಧ್ವರ ಅದ್ಭುತ ತರ್ಕ, ಅದ್ವೈತ-ಹಾಗೂ ಇತರ ಮತಗಳನ್ನು ಖಂಡಿಸಿ, ದ್ವೈತ ಸಿದ್ಧಾಂತವನ್ನು ದೃಢವಾಗಿ ಪ್ರತಿಷ್ಠಾಪಿಸಿತು. ಈ ಸಿದ್ಧಾಂತ, ತಾತ್ವಿಕವಾಗಿ ವಠಾತ್ರ ಅಲ್ಲ ತನ್ನಲ್ಲಿ ಅಡಕ ಮಾಡಿಕೊಂಡ ಭಕ್ತಿ ವಂಥದಿಂದಾಗಿ ಜನಪ್ರಿಯ ಆಯಿತು. ಹರಿಯ ಭಕ್ತರೆಲ್ಲ ಹರಿದಾಸರೆ ಈ ವಿಶಾಲಾರ್ಥದಲ್ಲಿ. ಅಂಭ್ರಣೀಸೂಕ್ತದ ಪ್ರಕಾರ, ಶ್ರೀಲಕ್ಷ್ಮೀ ದೇವಿಯೆ ಶ್ರೀಮನ್ನಾರಾಯಣನ ಪ್ರಥಮ ಹರಿದಾಸಿ; ಬ್ರಹ್ಮ, ರುದ್ರ, ಮೊದಲಾದ ದೇವತೆಗಳೆಲ್ಲ ಆಯಾಯ ಕಕ್ಷೆಗೆ ತಕ್ಕಂತೆ ಶ್ರೀಹರಿಯ ದಾಸರೆ. ಶ್ರೀಮನ್ನಾರಾಯಣನೆ ಸರ್ವತಂತ್ರ, ಸ್ವತಂತ್ರ, ನಿರ್ದೋಷಿ. ಇದೇ "ದಾಸಕೂಟಕ್ಕೆ'' ಮೂಲ ಪ್ರೇರಕ ಅಂಶ. ಮಧ್ವಾಚಾರ್ಯರು ತಮ್ಮ ತತ್ವವಾದ ಪ್ರತಿಪಾದನೆಗಾಗಿ, ಸಮರ್ಥನೆಗಾಗಿ ಅಳವಡಿಸಿ ಕೊಂಡ ಭಾಗವತ, ನಾರದ-ಶಾಂಡಿಲ್ಯರ ಭಕ್ತಿಸೂತ್ರಗಳು, ಎಲ್ಲ ರೀತಿಯ ವ್ಯಾಖ್ಯಾನ, ಉಪನಿಷದ್ಭಾಷ್ಯ ಇತ್ಯಾದಿಗಳನ್ನು ಹರಿದಾಸರು ಪ್ರಮೇಯಗಳಾಗಿ ಸ್ವೀಕರಿಸಿ ತಮ್ಮ ಕೃತಿಗಳಲ್ಲಿ ತಂದರು. ಇವರಲ್ಲಿ ವಿಜಯದಾಸರು ತುಂಬ ಪ್ರಸಿದ್ಧರು. ವಚನಕಾರರಂತೆಯೆ ಹರಿದಾಸರು ಬಳಸಿದ್ದು ಜನಸಾಮಾನ್ಯರ ಭಾಷೆ-ತಿಳಿಗನ್ನಡ. ಶ್ರೀಪಾದರಾಜರು ಹರಿ ದಾಸರಲ್ಲಿ ಮಠಾಧೀಶರಾಗಿದ್ದು, ಸಮಾಜ ಸುಧಾರಿತ ಪ್ರವೃತ್ತ ಮನೋಧರ್ಮದವರು. ಆಗಿನ ಕಾಲದಲ್ಲಿ ಸಮಾಜದ ಇತರ ಸ್ತರಗಳ ಜನರನ್ನು ಮಧ್ವ ಮತದಲ್ಲಿ ಸೇರಿಸಿಕೊಂಡ ಕ್ರಾಂತದರ್ಶಿಗಳು-ವ್ಯಾಸರಾಯರು, ಕನಕ-ಪುರಂದರರನ್ನು ಸೇರಿಸಿ, ಹರಿದಾಸ ಕೂಟ ಸಂಘಟಿಸಿದುದಲ್ಲದೆ, ಪುರಂದರರ ಕೃತಿಗಳನ್ನು "ಪುರಂದರೋಪನಿಷತ್'' ಎಂದೇ ಕರೆದು ಸನ್ಮಾನಿಸಿದರು. ವಾದಿರಾಜರು ದಕ್ಷಿಣ ಕನ್ನಡದ ಜನಬಳಕೆಭಾಷೆಯಾದ ತುಳುವಿನಲ್ಲೂ ಅನೇಕ ಕೀರ್ತನೆಗಳನ್ನು ಬರೆದಿದ್ದಾರೆ. ಕನಕದಾಸರ ಕೃತಿಗಳಲ್ಲಿ ಅವರ ಬದುಕಿನ ವಾಸನೆ, ಸಹಜದೇಸಿ, ಮೆರೆಯುತ್ತದೆ. ದಾಸರಲ್ಲಿ ಕವಿಗಳು ಕನಕದಾಸರು, ಆದೇ ಅವರ ವೈಶಿಷ್ಟ್ಯ, ಆದರೆ, ಒಂದು ವಚನಕಾರರಷ್ಟು ಜಾತ್ಯತೀತ ಸಮಾಜ ನಿರ್ಮಾಣ, ಸಂಘಟನೆ, ಒಂದಾಗಿ ಸೇರಿ ಬಂದ ಚಳವಳಿಯ ಕ್ರಾಂತಿ ಹರಿದಾಸರಲ್ಲಿಲ್ಲ; ಸೌಮ್ಯ ಸ್ವರೂಪದ ಆಂದೋಲನ. ಆವರಲ್ಲಿ ಸಮಾಜ ಸಂಧಾರಣ ಮನೋಭಾವ ಇಲ್ಲವೆಂದಲ್ಲ. ಮಡಿ, ಡಂಭಾಚಾರ, ತಾಂತ್ರಿಕ ದೇವತಾ ಉಪಾಸನೆ, ನೂರೆಂಟು ದೇವರ ಪೂಜೆ, ಜಾತಿ

ಕುಲದ ಬಗ್ಗೆ ಸಾಕಷ್ಟು ತಿಳಿಯ ಹೇಳಿದ್ದಾರೆ. ಪುರಂದರರು, ಕನಕ, ವಿಜಯದಾಸರಂತ ಹೊಲೆಯನೆಂದರೆ ಯಾರು, ಯಾವ ರೀತಿ ಜೀವನ ಮಾಡುವಾತನೆಂಬ ಪಟ್ಟಿ ನೀಡ ಕೃತಿಗಳನ್ನೆ ರಚಿಸಿದ್ದಾರೆ.

ವಚನಗಳ ರಚನೆಯಲ್ಲಿ ಸುಲಭವಾಗಿ ಗುರುತಿಸಬಹುದಾದದ್ದು ಸಂಕ್ಷಿಪ್ತತೆ, ಹೆ ಬೇಕಾದದ್ದು ಹೇಳುವ ಸ್ಪಷ್ಟತೆ, ವಚನದ ಕೊನೆಗೆ ವಚನಕಾರನ ಅಂಕಿತ, ನಿಯತ ಛಂದ ಕಟ್ಟುಪಾಡಿರದ ಮುಕ್ತಕ ರಚನೆ, ಹರಿದಾಸರ ಕೃತಿಗಳು ಹಾಗಲ್ಲ. ಅಲ್ಲಿ ಕೀರ್ತ ಸುಳಾದಿ, ಉಗಾಭೋಗ, ವೃತ್ತನಾಮಗಳಿಗೆ ಅದರದ್ದೆ ಪಲ್ಲವಿ, ಅನುಪಲ್ಲವಿ, ತಾ ಲಯ, ಮಟ್ಟು ಎಲ್ಲ ನಿಯತ ಆಗಿ ಇವೆ. ಕೊನೆಗೆ ಅಂಕಿತವೂ ಇದೆ. . ಗೇಯತೆ ವಚ ಕೀರ್ತನ ಎರಡರಲ್ಲಿಯೂ ಇರುವ ಸಾಧ್ಯತೆ ಇದ್ದರೂ ಹರಿದಾಸರ ಕೃತಿಗಳಲ್ಲಿ ಗೇಯ ಗುಣ ಅಗತ್ಯ. ಹೀಗಾಗಿ ತಾಳ, ಮಟ್ಟಗಾಗಿಯೆ ಹೊಸೆದಿರುವ ಕೆಲವು ಇತ್ತೀಚಿ ರಚನೆಗಳೂ ಇದ್ದು ಹರಿದಾಸ ಸಾಹಿತ್ಯದ ಮೊದಮೊದಲ ಸಹಜ ಕಾವ್ಯಗುಣ ಕಡಿ ಯಾದಂತೆ ಎನ್ನಿಸುವುದಾದರೂ ಹರಿದಾಸ ಆಂದೋಲನ ಮುಂದುವರಿದಿರುವುದ ಸೂಚನೆ ಇದೆ.

ವಚನ-ಕೀರ್ತನಗಳಲ್ಲಿ ಸಹಜ ಆಗಿ ಇರುವ ಆಂತರಿಕ ಲಯ ಅವುಗಳಿ ಸೊಗಸನ್ನು ತಂದೀಯುತ್ತವೆ. ಇದಕ್ಕೊಂದು ಉದಾಹರಣೆ :

ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ
ಅಂಬುಜಕೆ ಭಾನುವಿನ ಉದಯದ ಚಿಂತೆ
ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ
ಎನಗೆ ನಮ್ಮ ಕೂಡಲಸಂಗಮದೇವನ ನೆನೆವುದೆ ಚಿಂತೆ

ಎಂದಂತೆಯೆ,

ಮಡಕೆಯ ಮಾಡುವರೆ ಮಣ್ಣೆ ಮೊದಲು

ಎಂಬುದಾಗಲಿ,

ಮಾಡಿ ಮಾಡಿ ಕೆಟ್ಟರೂ ಮನವಿಲ್ಲದ
ನೀಡಿ ನೀಡಿ ಕೆಟ್ಟರೂ ನಿಜವಿಲ್ಲದ...

ಎಂದಿರಲಿ,

ಬೆಟ್ಟದ ಮೇಲೊಂದು ಮನೆಯ ಮಾಡಿ
ಮೃಗಗಳಿಗಂಜಿದೊಡೆಂತಯ್ಯ...... ಎನ್ನಲಿ,

ಇಲ್ಲಿ ಕೆಲವೆಡೆ ವಚನಕಾರರ ಪ್ರಭಾವ ಹರಿದಾಸರ ಮೇಲಾಗಿದೆಯೆಂದೆನ್ನಿಸುತ್ತದೆ. (ಈ ಬಗ್ಗೆ ಹಿಂದೆಯೆ ಚರ್ಚಿಸಿದೆ.) "ತಮ್ಮ ಧರ್ಮ ಸಮಾಜದಲ್ಲಿ ಆಳವಾಗಿ ಬೇರೂರ ಬೇಕಾದರೆ, ಅತ್ಯಂತ ಕೆಳಮಟ್ಟದ ಸಮಾಜದಲ್ಲಿ ಅದು ನೆಲೆಗೊಳ್ಳಬೇಕೆಂದು ವಚನ ಕಾರರು ಅರಿತಿದ್ದರು. ಹಾಗೆ ಅತ್ಯಂತ ಸಾಮಾನ್ಯನ ಮನಸ್ಸಿನಲ್ಲಿ ತಮ್ಮ ಅಭಿಪ್ರಾಯ ಗಳು ಮೂಡಬೇಕಾದರೆ ತಾವು ಬಳಸುವ ಭಾಷೆಯು ಸಾಮಾನ್ಯರ ಭಾಷೆಯಾಗ ಬೇಕಿತ್ತು......" ಎಂಬ ಮಾತು ಈ ದಿಸೆಯಲ್ಲಿ ಗಮನಾರ್ಹ. ಹರಿದಾಸ ಸಾಹಿತ್ಯ ಪ್ರವರ್ತಕರಾದ ಶ್ರೀಪಾದರಾಜರು ಇದನ್ನು ಮನಗಂಡರು ಹಾಗೂ ಒಂದು ರೀತಿಯಲ್ಲಿ ಹರಿದಾಸರು ತಮ್ಮ ಆಂದೋಲನದ, ಒಂದು ಪ್ರಮುಖ ಅಂಗವಾಗಿ ವಚನಕಾರರ ಈ ನಿಲುವನ್ನು ಅನುಸರಿಸಿರುವ ಸಾಧ್ಯತೆ ಇದೆ.

ಏನು ಬಂದಿರಿ. ಹದುಳವಿದ್ದಿರೆ ? ಎಂದರೆ
ನಿಮ್ಮ ಮನೆಯ ಸಿರಿ ಹಾಜಿಹೋಹುದೆ ?
ಕುಳ್ಳಿರೆಂದರೆ ನಿಮ್ಮ ನೆಲ ಕುಳಿ ಹೋಹುದೆ ?
ಒಡನೆ ನುಡಿದರೆ—ಸಿರ ಹೊಟ್ಟೆಯೊಡೆವುದೆ ?

ಎಂಬ ಬಸವಣ್ಣನವರ ಮಾತ್ತಲ್ಲಡಗಿರುವ ಸಂಸ್ಕೃತಿ, ಹಾಗೆಯೇ ದಾಸರ ಕೃತಿ ಹೀಗೆನ್ನುತ್ತದೆ :

ಮಾನಭಂಗವ ಮಾಡಿ ಮತ್ತೆ ಉಪಚಾರಗಳ ಏನು ಮಾಡಿದರೇನು ಇರಬಾರದು॥

ಅಷ್ಟೇ ನೇರವಮಾತು, ಹೇಳಬೇಕೆನ್ನಿಸಿದ್ದು ಹೇಳುವ ಕೌಶಲ್ಯ. ಹಾಗೆಯೆ ಶ್ರೀಪಾದ ರಾಜರಂಥವರು ನೀಡಿರುವ ವಿಶಿಷ್ಟ ತೆರನಾದ ಭೃಂಗಗೀತ, ಭಕ್ತಿಸಾಹಿತ್ಯಕ್ಕೇ ಒಂದು ಚಿರಂತನ ಕೊಡುಗೆ.

ಗಾದೆ, ನಾಣ್ಣುಡಿಗಳ ಬಳಕೆಯನ್ನು ವಚನಕಾರರು ಹರಿದಾಸರಿಬ್ಬರೂ ತಮ್ಮ ಕೃತಿ ಗಳಲ್ಲಿ ತಂದಿರುವುದು ಅವುಗಳ ಸಹಜ ಸೊಬಗನ್ನು ಹೆಚ್ಚಿಸುತ್ತದೆ. ಸಾಮಾನ್ಯನಿಗೆ ಸತ್ಯತೆಯ ಅರಿವು ಒಡಮೂಡಿಸುವುದರೊಂದಿಗೆ ತಾತ್ವಿಕ ನಿಲುವನ್ನೂ ತಿಳಿಯಪಡಿಸು ವಲ್ಲಿ ಸಮರ್ಥ ಆಗುತ್ತದೆ. ಇದರಂತೆಯೆ ವಚನ–ಕೀರ್ತನಗಳ ವಿಡಂಬನೆ ನಂಡಿಯ ಮೊನಚು, ಮನನೀಯ.

ವಚನಕಾರರ ತತ್ವ 'ಇಲ್ಲಿ ಸಲ್ಲುವವರಲ್ಲೂಸಲ್ಲುವರಯ್ಯ' ಎಂಬುದು ಇಹದ ಬದುಕನ್ನು ಅವರು ನಿಸ್ಸಾರ, ಸಂಸಾರವೆನ್ನಲಿಲ್ಲ. ಧರ್ಮವೆಂದರೆ ಅನುಸರಿಸಲಾಗದ ಪೆಡಂಭೂತವೆಂಬ ಭಾವನೆಯನ್ನೋಡಿಸಲು ಅವರು ಶ್ರಮಿಸಿದರು. 'ದಯೆಯಿಲ್ಲದ ಧರ್ಮವಾವುದಯ್ಯ' ಎಂದು ಉದ್ಘೋಷಿಸಿದರು. ಹರಿದಾಸರದ್ದು ನೇರ ಸುಲಭ ಭಕ್ತಿಮಾರ್ಗ. ಅದರೊಂದಿಗೆ ಹದಿನೈದು ದಿನಕ್ಕೊಮ್ಮೆ ಹರಿದಾಸ–ಹರಿಭಕ್ತರು ನಡೆಸುವ ನಡೆಸಬೇಕಾದ 'ಹರಿವಾಸರ' (ಏಕಾದಶಿ) ಶರೀರ–ಮನಸ್ಸಿನ ಸ್ವಾಸ್ಥ್ಯ ಕಾಪಾ

ಡುವ ಸಾಧನವೆಂದು ತಿಳಿಸಿದ್ದು ಒಂದು ವಿಶೇಷ–ಇದು ತತ್ವವೂ ಹೌದು. ಮತ ಹೌದು ಹಾಗೂ ಇದು ಅವರ ಮತೀಯ ಆಂದೋಲನದ ಒಂದು ಅಂಶ. ದಾಸರ ಕೂಡ ಬದುಕನ್ನು ನಿಸ್ಸಾರ, ಜಗತ್ತು ಮಿಥ್ಯ ಎನ್ನಲಿಲ್ಲ. ಈಸಬೇಕು, ಇದ್ದು ಜ ಬೇಕೆಂದುದೆ, ಸಂಸಾರ ನೆಚ್ಚಿ ನೀ ಕೆಡಬೇಡೆಂಬ ಕ್ಷಣಿಕತೆಯ ನಿತ್ಯ ಸತ್ಯವನ್ನು ಪದೇಪ ಮನಗಾಣಿಸಿದರು.

ವಚನಗಳನ್ನು ಹಾಡುತ್ತಿದ್ದರೆಂಬುದನ್ನು ಹರಿಹರಾದಿಗಳೆ ಹೇಳಿದ್ದಾ 'ಅಂದದನಂಚಿತಕ್ಕೆ ಗೀತವಂ ಪಾಡಂತಂ' 'ಎಂದು ವೈರಾಗ್ಯದಿಂ ಗೀತವಂ ಪಾಡಿ' ಎಂ ಹರಿಹರನ ಮಾತು ವಚನಕಾರರ ಭಾವನೆಯನ್ನು ಸೂಚಿಸುತ್ತವೆ. 'ವಚನಕಾರರು ವಚ ಗಳನ್ನು ಮುಂದೆ ಹರಿದಾಸರು ಬರೆದ ಉಗಾಭೋಗಗಳಂತೆಯೆ ಹಾಡುತ್ತಿದ್ದರೆಂಬು ಸ್ಪಷ್ಟ' ಎಂಬುದನ್ನ ಕುರಿತಂತೆ ವಚನಕಾರರಲ್ಲಿ ಒಬ್ಬನಾದ 'ಆಯ್ದಕ್ಕಿ ಮಾರಯ್ಯ ಪ್ರಸಂಗ ಹಿಂದೆಯೆ ಉದ್ಧರಿಸಿದೆ. ಹರಿದಾಸರಲ್ಲಿ ಅನುಸರಿಸಿದ ಬದುಕಿನ ವಿಶಿಷ್ಟ 'ಮಂಧುಕರ ವೃತ್ತಿ ಎನ್ನದು' ಎಂದೇ ಪುರಂದರದಾಸರು ಹಾಡಿದಂತೆಯೆ, ಅಲ್ಲಿನ ಬ ಗಳನ್ನೂ ಚಿತ್ರಿಸುತ್ತಾರೆ. ವಚನಕಾರ್ತಿಯಾದ ಮಹಾದೇವಿಯ ವಚನಕ್ಕೂ, ಹರಿದಾಸ ಕೃತಿಗೂ ಸಾಮ್ಯತೆ ಇಲ್ಲಿ ಕಾಣಬರುತ್ತದೆ :

> ಮನೆ ಮನೆ ತಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯ,
> ಬೇಡಿದೊಡೆ ಇಕ್ಕದಂತೆ ಮಾಡಯ್ಯ, ಇಕ್ಕಿದೊಡೆ ನೆಲಕ್ಕೆ ಬೀಳುವಂತೆ ಮಾಡಯ್ಯ,
> ನೆಲಕ್ಕೆ ಬಿದ್ದೊಡೆ, ನಾನೆತ್ತಿಕೊಂಬುದಕ್ಕೆ ಮುನ್ನವೆ ಶುನಿ ಎತ್ತಿಕೊಂಬಂತೆ
> ಮಾಡಯ್ಯ ಚೆನ್ನಮಲ್ಲಿಕಾರ್ಜುನಯ್ಯ

ಎಂಬುದಕ್ಕೆ ದಾಸರ ಕೃತಿ ಸಾಲು ಗಮನಿಸಿ :

> ಹರಿ ನೀನೊಲಿವಂತೆ ಮಾಡು
> ಒಲಿದರೆ ತಿರಿವಂತೆ ಮಾಡು
> ತಿರಿದೊಡೆ ದಾರು ನೀಡದಂತೆ ಮಾಡು
> ದಾರು ನೀಡಿದರೆ ಪೊಟ್ಟೆ ತುಂಬದಂತೆ ಮಾಡು
> ಪೊಟ್ಟೆ ತುಂಬಿದರೆ ಬಟ್ಟೆ ದೊರೆಯದಂತೆ ಮಾಡು
> ಬಟ್ಟೆ ದೊರೆತರೆ ಇಂಬು ದೊರೆಯದಂತೆ ಮಾಡು
> ಇಂಬು ದೊರೆಯದಿದ್ದರೆ ರಂಗನಿನ್ನ ಪಾದಾರವಿಂದದಲ್ಲಿ
> ಇಂಬಿಟ್ಟು ಸಲಹೊ ಪುರಂದರವಿಠಲ ॥

ಇಂಥ ತೌಲನಿಕ ವಿವಕ್ಷೆಗೆ ನಿದರ್ಶನ ಅನೇಕ ದೊರೆಯುತ್ತವೆ.

ವಚನ ಚಳವಳಿ ಪ್ರಧಾನವಾಗಿ ಮಠೀಯ ಆಂದೋಲನವೆಂದು ಹೇಳಿದೆ. ಹಾಗೂ ವೀರಶೈವ ಧರ್ಮದ ಧ್ಯೇಯ ಶಿವೋತ್ತಮತ್ವ ಪ್ರಸಾರ, ಮಾಹೇಶ್ವರ ನಿಷ್ಠೆ, ಅನುಷ್ಠಾನ ಇದಕ್ಕನುಗುಣವಾಗಿ ರೂಪಿಸಿರುವ ಷಟ್‌ಸ್ಥಲ ಸಿದ್ಧಾಂತದ ಅನುಸರಣೆ. ಮಾಹೇಶ್ವರ ನಿಷ್ಠೆಯನ್ನು ಶಿವಶರಣರು ತಮ್ಮ ಬದುಕಿನುಸಿರಾಗಿ ಭಾವಿಸಿದ್ದವರು. ಹರಿದಾಸ ಸಾಹಿತ್ಯದ ಅನುಯಾಯಿಗಳು ಪ್ರಧಾನತಃ ಮಧ್ವ ತತ್ವದ ಅನುಯಾಯಿಗಳು. ಮಾಧ್ವಾಚಾರ್ಯರ ಮಧ್ವಮತ ಪ್ರಭಾವ ಕನಕದಾಸರ ಮೇಲೆಯೂ ಇದೆ. ದಾಸಸಾಹಿತ್ಯ ಮಧ್ವ ತತ್ವಜ್ಞಾನ, ವ್ಯಾಪಕವಾದ ಭಾಗವತ ದೃಷ್ಟಿ ಇವುಗಳನ್ನು ಸಮನ್ವಯಗೊಳಿಸಿಕೊಂಡಿದೆ ಹಾಗೂ ಇದರಲ್ಲಿ ತನ್ನ ಪ್ರೇರಣೆಯನ್ನೂ ಕಂಡಕೊಂಡಿದೆ. ವಚನಕಾರರ ಆಂದೋಲನ ದೇಶವನ್ನೇ ಹೊಸ ಆಲೋಚನೆಗಳಿಗೆ ಕಿವಿಗೊಟ್ಟು ಜಾಗೃತ ಆಗುವಂತೆ ವಾತಾವರಣವನ್ನು ಸೃಜಿಸಿತ್ತು. ಸಾಮಾಜಿಕ ಜಾಗೃತಿಯು ವಚನ ಸಂಪದದ ಮೂಲಕ ಅಭಿವ್ಯಕ್ತಗೊಳ್ಳಲಾಗಿತ್ತು ಎಂಬುದು ಮರೆಯಲಾರದ ಅಂಶ. ಇದರಿಂದಾಗಿ ಹರಿದಾಸರಿಗೆ ಅನುಕೂಲವೆ ಆಯಿತು. ಈ ಆಂದೋಲನ ಪರಂಪರೆ ಶ್ರೀಪಾದರಾಜರಿಂದ ಬೆಳೆದು ಬಂದು, ಜಗನ್ನಾಥದಾಸಾರ್ಯರ ಕಾಲದಲ್ಲಿ ಪರಾಕಾಷ್ಠೆ ತಲುಪಿತು.

ಶಿವಮಾನಸ ಪೂಜೆ ಶರಣರ ತಪ. ಅಲ್ಲಿ ಯಾವುದೆ ಜಪ, ತಪ, ವ್ರತ ನಿಯಮ ಉಪವಾಸ ಅವರು ವಿಧಿಸರು. ಮಣಿಯನೆಣಿಸಿ ಕಾಲವ ಕಳೆಯಬೇಡ, ಅದೇ ರೀತಿ, ಅಂತರಂಗ ಶುದ್ಧಿಗೆ ಶರಣ–ದಾಸರಿಬ್ಬರೂ ಪ್ರಾಧಾನ್ಯ ನೀಡುತ್ತಾರೆ. ಶರಣರ ಇಷ್ಟಲಿಂಗಪೂಜೆಯಂತೆಯೆ, ಹರಿದಾಸರ ಒಂದು ವಿಶೇಷ ಮಾನಸ ಪೂಜೆ. ಇದನ್ನು 'ಬಿಂಬೋಪಾಸನೆ' ಎಂದೂ ಹರಿದಾಸರು ಪಾರಿಭಾಷಿಕವಾಗಿ ಕರೆದಿದ್ದಾರೆ. ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರಂತೂ ಈ ಮಾನಸಪೂಜೆ, ಬಿಂಬೋಪಾಸನೆಗೆ ತುಂಬ ಮಹತ್ವವಿತ್ತಿದ್ದಾರೆ. ತಮ್ಮ ಕೃತಿಗಳ ಮೂಲಕ, ಆ ವಿಧಾನವನ್ನೂ ತಿಳಿಸುತ್ತಾರೆ. ಹರಿದಾಸ ಆಂದೋಲನ, ಭಕ್ತಿಯ ಒಂದಂಶವಾದ ಬಿಂಬೋಪಾಸನೆಯನ್ನು ತನ್ನ ವೈಶಿಷ್ಟ್ಯವಾಗಿಸಿಕೊಂಡಿದೆ. ಈಶ–ಬಿಂಬ, ಜೀವರೆಲ್ಲ ಅವನ ಪ್ರತಿಬಿಂಬ. ಇದೇ ತತ್ವ. ಭಕ್ತಿಯೆ ಇಲ್ಲಿ ಸ್ಥಾಯೀಭಾವ. ಇದಕ್ಕೆ ಪೋಷಕ ಆದದ್ದು. ಎರಡೂ ಮತದವರು ರೂಪಿಸಿಕೊಂಡ ಸಂಚಾರೀ ಭಾವಗಳು.

ಮೇಲೆ ವಿವೇಚಿಸಿರುವ ಪ್ರೇರಣೆಗಳಿಗೆ ಅನುಸಾರ ಆಗಿ ವಚನ ಸಾಹಿತ್ಯದ ಆಂದೋಲನ ಹಾಗೂ ಹರಿದಾಸರಾಂದೋಲನಗಳಲ್ಲಿ ಇರುವ ಹಂಬಲ, ಆಶಯ-ಅಭಿವ್ಯಕ್ತಿ, ಶೈಲಿ, ಸಾಹಿತ್ಯ ಛಂದೋರೂಪ, ಇವುಗಳಲ್ಲಿ ಸಾಮ್ಯ-ವ್ಯತ್ಯಾಸ, ವೈವಿಧ್ಯ ಕಾಣಬರುತ್ತವೆನ್ನಬಹುದು. ಮೂಲತಃ ಭಕ್ತಿಯ ಸ್ಥಾಯಿಭಾವ ಸಮಾನವಾಗಿದ್ದರೂ ಕೂಡ ಅಭಿವ್ಯಕ್ತಿಯ ಆಶಯದಲ್ಲಿ ಸಾಮ್ಯ ಕಾಣಬರುವುದೇ ಅಚ್ಚರಿಯ ಅಂಶ. ಏಕೆಂದರೆ ವಚನಕಾರರು-ಹರಿದಾಸರ ನಡುವಣ ಕಾಲದ ಅಂತರ ಇನ್ನೂರು ವರ್ಷಗಳಿಗೂ ಹೆಚ್ಚು. ಆದರೆ, ಇಬ್ಬರ ಅಭಿವ್ಯಕ್ತಿಯ ಸಾಮ್ಯ ಕಂಡಾಗ ಹರಿದಾಸರ ಮೇಲೆ ವಚನಕಾರರ ಪ್ರಭಾವ ಕೂಡ ಕಾಣಬರುತ್ತದೆನ್ನಬಹುದು (ಇದು ಬೇರೆಡೆ ಕೂಡ ಪ್ರಸ್ತಾಪಿಸಿದೆ)

ಇನ್ನೊಂದು ವಿಚಾರ. ಎಲ್ಲಿ ಸಂಪರ್ಕ ಪ್ರಭಾವಗಳ ಸಾಧ್ಯತೆಯುಂಟೊ ಅಲ್ಲಿ ಸಾಮ್ಯ ಕಂಡು ಬಂದರೆ ಅದು ಆಕಸ್ಮಿಕವೆನ್ನಲಾಗದು. ವಚನ ಚಳವಳಿ ಹರಿದಾಸ ಆಂದೋಲನಗಳ ತುಲನಾತ್ಮಕ ವಿವೇಚನೆಯಲ್ಲಿ ಈ ಹಿನ್ನೆಲೆ ಅಗತ್ಯ. ಉದಾಹರಣೆಗೆ : ಉರಿಲಿಂಗ ಪೆದ್ದಿ ಎಂಬ ವಚನಕಾರನ ಒಂದು ಸಾಲಿನಂತೆ, "ಎನ್ನ ಮನಸ್ಸು ಮತ್ತೊಂದ ನೆನೆಯಲರಿಯದು–ನೀವು ನೆನಹು ರೂಪಾಗಿ ಎನ್ನ ಮನವನವಗ್ರಹಿಸಿದಿರಾಗಿ, ಆ ಮನಸ್ಸು ನಿಮ್ಮನವಗ್ರಹಿಸಿತ್ತಾಗಿ..." ಎಂದಂತೆಯೆ ಬಸವಣ್ಣನ ವಚನವೊಂದರ ಸಾಲೂ ಶಿವ ಸ್ಮರಣೆ ಕುರಿತೆ ತಿಳಿಸುತ್ತದೆ "ಎನಗೆ ನಿಮ್ಮ ನೆನಹಾದಾಗವೇ ಉದಯ. ಎನಗೆ ನಿಮ್ಮ ಮರಹಾದಾಗವೇ ಅಸ್ತಮಾನ. ಎನಗೆ ನಿಮ್ಮ ನೆನಹೇ ಜೀವನ. ಎನಗೆ ನಿಮ್ಮ ನೆನಹವೇ ಪ್ರಾಣ ಕಾಣಾ ತಂದೆ ಸ್ವಾಮಿ, ಎನ್ನ ಹೃದಯಂದಲ್ಲಿ ನಿಮ್ಮ ಚರಣ ದಂಡಿಗೆಯನೊತ್ತಯ್ಯಾ ವದನದಲ್ಲಿ ಷಡಕ್ಷರಿಯ ಬರೆಯಾಯ್ಯಾ ಕೂಡಲಸಂಗಮದೇವಾ" ಎಂಬುದರೊಂದಿಗೆ ಪುರಂದರದಾಸರ ಒಂದು ಕೃತಿ ನೆನಪಾಗುತ್ತದೆ.

ನಾರಾಯಣ ನಿನ್ನ ನಾಮದ ಸ್ಮರಣೆ
ಸಾರಾಮೃತವೆನ್ನ ನಾಲಿಗ್ಗೆ ಬರಲಿ ॥ ಪ ॥

ಕೊಡುವಾಗಲಿ ನಿಂತಾಡುವಾಗಲಿ ಮತ್ತೆ
ಹಾಡುವಾಗಲಿ ಹರಿದಾಡುವಾಗಲಿ
ಖೋಡಿ ವಿನೋದದಿ ನೋಡದೆ ನಾ ಬಲು
ಮಾಡಿದ ಪಾಪ ಬಿಟ್ಟೋಡಿ ಹೋಗೋಹಾಗೆ ॥ ೧ ॥

ಕಷ್ಟದಲಿರಲಿ ಉತ್ಕೃಷ್ಟದಲಿರಲಿ
ಎಷ್ಟಾದರೂ ಮತಿಗೆಟ್ಟಿರಲಿ
ಕೃಷ್ಣ ಕೃಷ್ಣಾ ಎಂದು ಶಿಷ್ಟರು ಪೇಳುವ
ಅಷ್ಟಾಕ್ಷರ ಮಹಾಮಂತ್ರ ನಾಮದ ॥೨॥

ಸಂತತ ಹರಿ ನಿನ್ನ ಸಾಸಿರನಾಮ
ಅಂತರಂಗದ ಒಳಗಿರಿಸಿ
ಎಂತೋ ಪುರಂದರವಿಠ್ಠಲರಾಯನೆ
ಅಂತ್ಯಕಾಲದಲ್ಲಿ ಚಿಂತಿಸೋಹಾಂಗೆ ॥

ಈ ವಚನ-ಕೀರ್ತನೆಗಳನ್ನು ಗಮನಿಸಿದಾಗ ಭಗವಂತನ ಸತತ ಧ್ಯಾನದ ಹಂಬಲ, ಅದೇ ಪ್ರಾಣ, ಅದಿರದುದೆ ಅಸ್ತಮಾನ ಎಂಬ ಭಾವನೆ ಬಲವತ್ತರವಾಗಿ ಅಭಿವ್ಯಕ್ತಗೊಂಡಿರುವುದನ್ನು ಕಾಣುತ್ತೇವೆ. ಹೀಗೆಯೆ "ಹಗಲುಹಸಿವೆಗೆ ಕುದಿದು, ಇರುಳು ನಿದ್ರೆಗೆಕುದಿದು, ಉಳಿದಾದ ಹೊತ್ತೆಲ್ಲ ಅಶನ ವ್ಯಸನಕ್ಕೆ ಕುದಿದು, ಅಯ್ಯ ನಿಮ್ಮನರಿಯದ ಪಾಪಿ ನಾನಯ್ಯ-ಅಯ್ಯ ನಿಮ್ಮನರಿಯದ ಕರ್ಮಿನಾನಯ್ಯ, ಮಹಾಲಿಂಗ ಕಲ್ಲೇಶ್ವರಾ,

ಆಶನ ನೀರಡಿಸಿ ಸತ್ತ ತೆರನಂತಾಯಿತೆನ್ನ ಯುಕ್ತಿ" ಎಂಬ ಸಾಲಿಗೂ ವಾದಿರಾಜರು ಭಕ್ತಿಭಾವದಿಂದೊಡಗೂಡಿ ಮಾಡುವ ಮನವಿಗೂ ಭಾವನೆಯಲ್ಲಿನ ಸಾಮ್ಯ ಕಾಣ ಬಹುದು :

ಹೋಗುತಿದೆ ಹೊತ್ತು ಕಳೆದೆ ವ್ಯರ್ಥವಾಗಿ
ಹರಿಗುರುಗಳ ನೆನೆಯದೆ
ಕೆಲಹೊತ್ತು ಚದುರಂಗ ಪಗಡೆ ಆಟಗಳಿಂದ
ಕೆಲಹೊತ್ತು ಹಸಿವಿ ನಿದ್ರೆಗಳಿಂದಲಿ
ಕೆಲಹೊತ್ತು ಕಾಕ ಪೋರರವ ಕಥೆಗಳಿಂದೆ ॥
...ಕಾಲವು ಕಡೆಯಾಗೆ ಹರಿ ನಿಮ್ಮನರ್ಚಿಸೆ
ವೇಳೆಯಿಲ್ಲದೆ ಹೋಯ್ತು ಬಂಜೆಯಾಗಿ
ಚಾಲಿಸಿ ಹೊತ್ತು ಈ ವಿಧದಿ ಪೋತ್ತು
ಪಾಲಿಸೋ ದಯಮಾಡಿ ಸಿರಿ ಹಯವದನ... ॥

ಇಲ್ಲೂ ಅಭಿವ್ಯಕ್ತ ಮಾಧ್ಯಮ, ಛಂದಸ್ಸಿನ ಸ್ವಸೂಪ ಬೇರೆ, ಭಾವನೆ ಒಂದೆ, ಎನಿಸುತ್ತದೆ, ಅಲ್ಲವೆ ? ಬಸವಣ್ಣನ ಮತ್ತೊಂದು ವಚನದಲ್ಲಿ ಬರುವಂತೆ, "ತನು ನಿಮ್ಮ ದೆಂದ ಬಳಿಕ, ಎನಗೆ ಬೇರೆ ತನುವಿಲ್ಲ. ಧನನಿಮ್ಮದೆಂದ ಬಳಿಕ ಎನಗೆ ಬೇರೆ ಧನವಿಲ್ಲ..." ಎಂಬುದೂ ಕನಕದಾಸರ :

ತನುನಿನ್ನದು ಜೀವನ ನಿನ್ನದಯ್ಯ
ಅನುದಿನದಲಿ ಬಾಹೊ ಸುಖದುಃಖನಿನ್ನದಯ್ಯಾ...

ಸಾಲುಗಳು ಪರಸ್ಪರ ಹೋಲುತ್ತವೆ. ಇಲ್ಲಿ ಯೋಜನೆಯ ದಿಕ್ಕು ಒಂದೆ ಎನ್ನಿಸಿದರೂ ಹೇಳುವ ಪರಿ ಭಿನ್ನ ಆಗಿದೆ. ಈ ರೀತಿಯ ಸಾಮ್ಯತೆ ಆಲೋಚನೆಗಳಲ್ಲಿ ಭಾವನೆ ಗಳಲ್ಲಿರುವುದು ವಚನ-ದಾಸಸಾಹಿತ್ಯಗಳಲ್ಲಿ ಕಾಣಬರುವ ಅಂಶವೆ. ಇಲ್ಲಿ ಪ್ರಭಾವ ಆಗಿದೆ ಎಂದು ಹೇಳಬರುವಂತಿಲ್ಲ. ಆದರೆ ಪ್ರಭಾವ ಸ್ಪಷ್ಟವಾಗಿ ಆಗಿದೆಯೆಂಬುದೂ ಕೆಲವೆಡೆ ಕಾಣಬರುತ್ತದೆ. ಭಕ್ತಿ ಪಂಥಕ್ಕೆ ಸೇರಿದ ಯಾರೇ ಸಾಧು ಸಂತರಾಗಲಿ ಅವರು ತವಗಿಂತ ಹಿಂದಿನ ವಾತ್ತು ತತ್ಕಾಲದ ಭಾವನೆಗಳನ್ನು ಸ್ವೀಕರಿಸಿ ತಮ್ಮದೆ ಅದ ರೀತಿ ಯಲ್ಲಿ ಅದನ್ನು ಅಭಿವ್ಯಕ್ತಗೊಳಿಸುವುದಿದೆ. ಇದು ಈ ಎರಡೂ ಸಾಹಿತ್ಯಗಳಿಗೆ ಹೊಂದುತ್ತದೆ. ಕನ್ನಡಿಗರ ಸಂಸ್ಕೃತಿ, ಮನೋವೈಶಾಲ್ಯದ ದರ್ಶನವೂ ಈ ಎರಡೂ ಸಾಹಿತ್ಯಗಳ ವಿವೇಚನೆಯಿಂದಾಗುತ್ತವೆ. ಶ್ರೀಪಾದರಾಜರೊಂದೆಡೆ ಧ್ಯಾನಿಸುವಂತೆ, ಗ್ರಾಸವಾಸಗಳಿಗೆ ಇಲ್ಲವೆಂದು ನಿನ್ನ (ಬೇಸರಿಸ) ಬೇಡ ಬಂದುದಿಲ್ಲ ವಾಸುದೇವನ ನಿನ್ನ ದಾಸರ ದಾಸರ ದಾಸ್ಯವ ಕೊಡು ಸಾಕೆಂದರೆ

ಆಗಬೇಕು ರಾಜ್ಯಭೋಗಗಳೆನಗೆಂದು
ಈಗ ನಾನು ಬೇಡ ಬಂದುದಿಲ್ಲ
ನಾಗಶಯನ ರಂಗವಿಠಲ ನಾನಿನ್ನ
ಬಾಗಿಲ ಕಾಯುವ ಭಾಗ್ಯ ಸಾಕೆಂದರೆ ॥

ಎಂಬುದರಂತೆಯೇ ಮುಪ್ಪಿನ ಷಡಕ್ಷರಿಯವರು ಹಾಡಿರುವ ಸಾಲು ಗಮನಿಸುವಂಥದು :

ಎನಗೆ ಭೋಗ ಭಾಗ್ಯ ಬೇಡ ಎನಗೆ ಜಪವು ತಪವು ಬೇಡ
ಎನಗೆ ನಿಮ್ಮ ತೊತ್ತ ಸೇವೆ ನಿತ್ಯವಾಗಲೈ ॥ ಪ ॥

ಎನ್ನ ಕಂದಿಸುತ್ತ ಬಹಳ ಎನ್ನ ಬಾಧಿಸುತ್ತ ಬಿಡದೆ
ಎನ್ನನೊಂದು ನೆವಗಳಿಂದ ಕಾಡಿದವರಿಗೆ
ಎನ್ನ ಕೊಂದೊಡವರಿಗೆಲ್ಲ ಎನ್ನಯ ಪೂಜೆಫಲಗಳೆಲ್ಲ
ಉನ್ನತದೊಳಗವರಿಗಾಗಿ ಸುಖದಿ ಬಾಳಲಿ... ॥

ಇದು ವೈರಾಗ್ಯದ ಪರಾಕಾಷ್ಠೆ ! ಇಬ್ಬರೂ ಭಕ್ತರೆ, ಇಬ್ಬರ ಆಲೋಚನಾ ಭಾವನೆಯೂ ಒಂದೇ ನಿಟ್ಟಿನಲ್ಲಿ ಸಾಗಿದೆ.

ಮೇಲ್ಕಂಡ ವಿವೇಚನೆಯಿಂದ, ರಾಜಮಾನ್ಯ-ಪಂಡಿತಮಾನ್ಯ ಆಗಿದ್ದ, ಕಂಕಣ ಕಡಗ ತೊಡಿಸುವುದರಲ್ಲಿ ನಿರತವಿದ್ದ ಸಾಹಿತ್ಯ ಹೇಗೆ ಕಿರಿ-ಕಣ (ಕಣ್ಣಿನ ಹನಿ) ಮಿಡಿಸುವ ಸಾಮಾನ್ಯ ಮಾನ್ಯ ಸಾಹಿತ್ಯ ಆಗಿ ಬರಲು ಹಾಗೂ ಆ ಮೂಲಕ ಕನ್ನಡ ಸಾಹಿತ್ಯಕ್ಕೆ ಹೊಸ ತಿರುವು ನೀಡುವಲ್ಲಿ ಮೊದಲಿಗೆ ವಚನಕಾರರ, ಅನಂತರ ಹರಿದಾಸರ ಆಂದೋಲನ ತನ್ನದೆ ಆದ ಕೊಡುಗೆ ನೀಡಿದವೆಂಬುದನ್ನು ಸಂಕ್ಷಿಪ್ತವಾಗಿ ಗುರುತಿಸುವ ಪ್ರಯತ್ನ ಮಾಡಿದೆವು. ಈ ಎರಡೂ ಸಾಹಿತ್ಯ ಸ್ವರೂಪ, ಕುರಿತಾದ ಕೆಲವು ಪ್ರತಿ ಕ್ರಿಯೆ, ಅಭಿಪ್ರಾಯ ವಿದ್ವಾಂಸರನೇಕರು ಮಾಡಿದಾರೆ. ವಿಶ್ವ ಸಂಸ್ಕೃತಿಗೆ ಈ ಎರಡು ಆಂದೋಲನಗಳ ವಿಶಿಷ್ಟ ಕೊಡುಗೆ ಕುರಿತ ವಿವೇಚನೆಯೂ ನಡೆದಿದೆ. ವಚನ ಸಾಹಿತ್ಯದ ಸಾರವನ್ನು ವಿಶೇಷವಾಗಿ ಅರ್ಥ ಮಾಡಿಕೊಂಡು ಬರೆದವರು (ವಚನಧರ್ಮಸಾರ) ಶ್ರೀ ಎಂ. ಆರ್. ಶ್ರೀ ಅವರು. ಹಾಗೆಯೆ ಅದರಲ್ಲಿ ಬಸವಣ್ಣನವರ ವಚನ ಕುರಿತಾದ "ಬಸವಣ್ಣನವರ ಪ್ರಭಾವ ಮುದ್ರೆ" ಎಂಬ ಅಧ್ಯಾಯದಲ್ಲಿ ಹರಿದಾಸ ಆಂದೋಲನ ಸಾಹಿತ್ಯಗಳ ಮೇಲೆ ವಚನವಾಙ್ಮಯದ ಪ್ರಭಾವವನ್ನು ಗುರುತಿಸಿದ್ದಾರೆ.

ಹರಿದಾಸರು, ವಚನಕಾರರನ್ನು ಧರ್ಮಬೋಧಕರು ಎಂದು ಹಲವರು ಗುರುತಿಸಿದರೆ, 'ದಾಸರಲ್ಲಿ ಕವಿಗಳೆ'ಂದು ಕನಕದಾಸರ ವಿಶಿಷ್ಟತೆಯನ್ನು ಗುರುತಿಸಿದವರು...... ಡಾ. ಜಿ. ಎಸ್. ಶಿವರುದ್ರಪ್ಪನವರು. ಅವರು ಹರಿದಾಸರ ಹಾಗೂ ವಚನಕಾರರ ಬಗ್ಗೆ ಬರೆದಿರುವ ಸಂಪ್ರಬಂಧ ಸ್ಮರಣೀಯ.

ಹರಿದಾಸರು ಸಾಹಿತಿಗಳಲ್ಲ, ಅನುಭಾವಿಗಳು ಎಂಬ ವಚನಕಾರರ ಹಾಗೆ ಎಂದು ಗುರುತಿಸುವ ಡಾ. ಜಿ. ಎಸ್. ಶಿವರುದ್ರಪ್ಪನವರ "ದಾಸ–ಶರಣರು ದರ್ಶಿಸಿದ ದಿವ್ಯ ಸೌಂದರ್ಯ" ಒಂದು ಮನೋಜ್ಞ ಲೇಖನ. ಇಲ್ಲಿ ಎರಡೂ ಭಕ್ತಿಯ ಆಂದೋಲನಗಳು ದರ್ಶಿಸಿದ ಸೌಂದರ್ಯ ಪ್ರಜ್ಞೆ ಕುರಿತ ವಿವೇಚನೆಯಿದೆ. ಇಲ್ಲಿ ಸೌಂದರ್ಯದ ಮೂಲಕ ಭಗವಂತನ ಕಾಣ್ಕೆ, ದಿವದರ್ಶನವಿದೆ. ದಾಸರಲ್ಲಿ ಪ್ರಧಾನವಾಗಿ ಕಾಣುವುದು ಸಾಕಾರ ಸೌಂದರ್ಯವಾದರೆ (ಸಗುಣೋಪಾಸನೆ) ಶರಣರಲ್ಲಿ ಪ್ರಧಾನವಾಗಿ ಗೋಚರಿಸತಕ್ಕದ್ದು ನಿರಾಕಾರದ ಸೌಂದರ್ಯ. ಇಲ್ಲಿ ಲೇಖಕರು ನೀಡಿರುವ ಅವತರಣಿಕೆಗಳೂ ಸಂದರ್ಭಕ್ಕೆ ತಕ್ಕಂತೆ ಸೊಗಸಾಗಿವೆ (ನಿರ್ಗುಣೋಪಾಸನೆ).

ಛಂದಸ್ಸು-ಶೈಲಿ ಬಗ್ಗೆ ಗಮನಿಸಿದಾಗ, ವಚನಗಳಲ್ಲಿ-ಹರಿದಾಸರ ಕೃತಿಗಳಲ್ಲಿ ಸಾದೃಶ್ಯ ಇನ್ನೂ ಇರುವುದು ಕೆಲವೆಡೆ ಕಾಣಬರುತ್ತದೆ. ವಚನಕಾರರು ಮುಖ್ಯವಾದ ತತ್ತ್ವಕ್ಕೆ ಬರುವಲ್ಲಿ ಹಲವು ಉಪಮೆ ಬಳಸಿದರೆ, ದಾಸರು ಕೀರ್ತನೆಗಳಲ್ಲಿ ಸಾರ ಆದ ಪಲ್ಲವಿ-ಅನುಪಲ್ಲವಿಗಳಲ್ಲಿ ತತ್ತ್ವ ತಿಳಿಯ ಹೇಳಿ, ಅನಂತರ ಉಪಮೆ, ದೃಷ್ಟಾಂತಗಳಲ್ಲಿ ಪುಷ್ಟೀಕರಿಸುತ್ತಾರೆ. ಇದಕ್ಕೆ ಒಂದೊಂದು ಉದಾಹರಣೆ ನೀಡಬಹುದು

ಗಿರಿಯಲ್ಲದೆ ಹುಲು ಮೊರಡಿಯಲ್ಲಾಡುವುದೇ ನವಿಲು ?
ಕೊಳನಲ್ಲದೆ ಕಿರುವಳ್ಳಕ್ಕೆಳಸುವುದೆ ಹಂಸೆ...

ಎಂಬಂತೆ ಕನಕದಾಸರ ಕೃತಿಯ ಕೆಲವು ಸಾಲು ಉಪಮೆಗೆ ನಿದರ್ಶನ :

ಬೆರೆಯದಿರು ಬೆರೆಯದಿರು ಎಲೆ ಮಾನವಾ
ಗರುವವೇತಕೊ ನಿನ್ನ ತೆರನಾವುದೋ ?...
ರೂಪದಲ್ಲಿ ಮನ್ಮಥನೊ ಶಾಪದಲ್ಲಿ ಗೌತಮನೊ
ಕೋಪದಲ್ಲಿ ದುರ್ವಾಸ ಋಷಿಯೊ ನೀನು ॥
ತಪದೊಳಗೆ ವ್ಯಾಸನೋ ಕೃಪೆಯಲಿ ಬಲೀಂದ್ರನೋ
ನಿಪುಣತೆಯ ನುಡಿಯೊಳಗೆ ನಾರದನೊ ನೀನು... ॥

ಸಮಾಜ ಸುಧಾರಣೆಯ ಮನೋಧರ್ಮ ದಾಸ-ಶರಣರಿಬ್ಬರಿಗೂ ಇದೆ. ಪುರಂದರ ದಾಸರ ಒಂದು ಪ್ರಸಿದ್ಧ ಹಾಡಿನಲ್ಲಿ ಬೂಟಾಟಿಕೆ ಡಂಭಾಚಾರಗಳ ವಿಡಂಬನೆ ಗಮನಾರ್ಹ:

ಉದರ ವೈರಾಗ್ಯವಿದು, ನಮ್ಮ
ಪದುಮನಾಭನಲಿ ಲೇಶ ಭಕುತಿಯಿಲ್ಲ ॥ ಪ ॥
ಉದಯಕಾಲದೊಳೆದ್ದು ಗಡಗಡ ನಡುಗುತ
ನದಿಯೊಳು ಮಿಂದೆನೆಂದು ಹಿಗ್ಗುತಲಿ

ಮದ ಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು
ಬದಿಯಲ್ಲಿದ್ದವರಿಗಾಶ್ಚರ್ಯವ ತೋರುವ...

ಹಾಗೆಯೆ 'ಗೂಟ ನಾಮವ ಬಡಿದು, ಧೋತರ ಉಟ್ಟವ ಹರಿದಾಸನೆ' ಎಂಬ ಪ್ರಶ್ನೆ ಕೂಡ ಮಾರ್ಮಿಕವಾಗಿದೆ. ಮೇಲಣ ಕೃತಿಯೊಂದಿಗೆ ಬಸವಣ್ಣನವರ ಕೆಲವು ಸಾಲು, ಗಮನಿಸಿದಾಗ ಹರಿದಾಸರು ಈ ಸಾಲಿನ ಸಾರ ಅನುಸರಿಸಿದರೆನಿಸುತ್ತದೆ :

ತೊರೆಯ ಮಿಾವಣ್ಣಗಳಿರಾ, ತೊರೆಯಮಿಾವ ಸ್ವಾಮಿಗಳಿರಾ
ತೊರೆಯಿಂಥೋ, ತೊರೆಯಿಂಥೋ
ಇಹ ತೊರೆಯದೆ ಹೋಗಿ ತೊರೆಯ ಮಿಂದರೆ
ಬರಿಯ ಹೋಹದು ಕೂಡಲಸಂಗಮದೇವಾ

ಇದರಿಂದಾಗಿ ಎರಡು ಪಂಥಗಳೂ ಆಯಾ ಕಾಲದ ಸಾಮಾಜಿಕ ಜೀವನವನ್ನು ಪ್ರತಿಬಿಂಬಿಸುವ ಸಾಹಿತ್ಯವನ್ನೊದಗಿಸಿವೆ. ಆ ಕಾಲದ ಕ್ರಾಂತಿಗೆ ಪ್ರಚೋದಕ, ಕಾರಕ ಆಗಿವೆ. ಹಾಗೂ ಭಕ್ತಿ ಪ್ರಸಾರಣವೂ ಇವುಗಳ ಧ್ಯೇಯ ಎನ್ನಬಹುದು.

ಶರಣ ದಾಸ ಸಾಹಿತ್ಯ ತುಲನಾತ್ಮಕ ಸಮೀಕ್ಷೆ ನಡೆಸಿರುವವರು ಡಾ. ಕೆ. ಎಂ. ಕೃಷ್ಣರಾಯರು. ಅಲ್ಲಿ ಹೇರಳವಾದ ಉದಾಹರಣೆ ಇವೆ. ಎರಡೂ ವಾಙ್ಮಯ ಆಂದೋಲನಗಳನ್ನು ಗುರುತಿಸುತ್ತಾ, ಹೇಳುವುದಿದು : ವಚನಕ್ಕೆ ಸೂಕ್ಷ್ಮಸ್ವಚ್ಛದ ಲಯದ ಗದ್ಯ ಕವನದಲ್ಲಿ ಭಾವಗೀತೆಯ ಮೂಲ ಪ್ರೇರಣೆಯಿಂದ ಆದರೆ, ಅಷ್ಟಾಗಿ ತಾಳ ಲಯಗಳ ಯೋಚನೆ ಇಲ್ಲದೆ ಹೊರಬಿದ್ದು, ಅಪಾರ ವಚನ ರಾಶಿಯ ತರುವಾಯ ತಾಳ, ಲಯ, ಪ್ರಾಸ ಛಂದೋಬದ್ಧವಾಗಿ ಗಂಗೆಯ ಅನುಕೂಲ ತರಂಗಿಣಿಯಂತೆ "ಓತಪ್ರೋತವಾಗಿ ಹರಿದು ಬಂದದ್ದು ಹರಿದಾಸ ವಾಙ್ಮಯ. ಜಾತಿ ಸೂತಕಗಳ ಬಗ್ಗೆ ವಚನಕಾರರ ಹರಿದಾಸ ಆಂದೋಲನದ ದೃಷ್ಟಿ ಒಂದೆ. ಅವು ವಿರೋಧಿಸುತ್ತವೆ. ಮನುಷ್ಯನ ಶ್ರೇಷ್ಠತೆ ಆವನ ಹುಟ್ಟಿನಿಂದ ಅಲ್ಲ : ಅವನವನ ಗುಣಕರ್ಮಕ್ಕನುಗುಣ ಸಾರ ಆಗಿ. ಹರಿದಾಸರು ಹೊಲೆಯ ಸುಳಾದಿಗಳನ್ನೆ ರಚಿಸಿದಾರೆ. ಅಲ್ಲಿ ಅವರ ಸುಧಾರಣೆಯ ಮನೋಭಾವದ ಕಳಕಳಿ ಇದೆ. 'ಹೊಲೆಯ ಊರ ಹೊರಗಿಹನೆ ಊರೊಳಗಿಲ್ಲವೆ' ಎಂದು ಪ್ರಶ್ನಿಸಿ ಹೊಲೆತನದ ಪಟ್ಟಿಯನ್ನೇ ನೀಡುತ್ತಾರೆ. ಹೊರಗಣ ಚರ್ಮ ತೊಳೆದರೆ ಕರ್ಮ ಹೋದೀತೆ ಎಂಬ ಮರ್ಮ ಅರಿಯದ ಪ್ರಾಣಿಯೆಂದು ಮಾನವರನ್ನು ಹಾಸ್ಯ ಮಾಡುತ್ತಾರೆ. ಹರಿದಾಸರನ್ನು ಜಾತ್ಯತೀತ ಮಾನವೋತ್ತಮ ರೆನ್ನಬಹುದು. ಅದಕ್ಕೆ ಅವರ ರಚನೆಗಳೆ ನಿದರ್ಶನ.

"ಶರಣರ ವಚನಗಳನ್ನೆ ಅನುಸರಿಸಿ ಪುರಂದರದಾಸಾದಿಗಳು ಬರೆದ ವಚನಗಳೇ ಉಗಾಭೋಗಗಳೆಂಬ" ಮಾತನ್ನು ಇಲ್ಲಿ ಪೂರಾ ಒಪ್ಪಲು ಕಷ್ಟವಾಗುತ್ತದೆ. ಏಕೆಂದರೆ

ಆವು ಆಯಾ ಕಾಲದವರ ಸ್ವತಂತ್ರ ಆಲೋಚನೆಗಳು, ಕವಿಹೃದಯ ಸ್ಫೂರ್ತಿಬಿಂದುಗಳು. ಇಬ್ಬರೂ ಒಂದೇ ರೀತಿಯಾಗಿ ಆಲೋಚಿಸುವ ಸಾಧ್ಯತೆ ಇದೆ. ಆದರೆ ಕೆಲವು ಉಗಾಭೋಗಗಳಿಗೂ, ವಚನಗಳಿಗೂ ಒಂದೇ ಎಂಬಂಥ ಸಾದೃಶ್ಯವಿದೆ. ಇದರಿಂದ ಹರಿಹರ ಕವಿ ಹೇಳಿದಂತೆ ವಚನಗಳನ್ನು ಹಾಡುತ್ತಿದ್ದರೇನೊ ಎಂದೆನ್ನಿಸುತ್ತದೆ (ಅಂದಂದಿನಂಚಿತಕ್ಕೆ ಗೀತವಂ ಪಾಡುತಂ.) ವಚನಗಳು ತಾಳ ಪ್ರಧಾನವಲ್ಲ. ಉಗಾಭೋಗ, ತಾಳ-ರಾಗ ಪ್ರಧಾನ. ಅನೇಕ ವಚನ ಉಗಾಭೋಗ ಹಾಡಲು ಚೆನ್ನಾಗಿ ಹೊಂದಿಕೊಳ್ಳುತ್ತವೆ. ಉಗಾಭೋಗಗಳು ಮತ್ತು ವಚನಗಳ ಬಗ್ಗೆ ಸಾಕಷ್ಟು ಬೆಳಕು ಚೆಲ್ಲುವ ಅಮೂಲ್ಯ ಲೇಖನವನ್ನು ಡಾ॥ ಎಂ. ಚಿದಾನಂದಮೂರ್ತಿಯವರು ಬರೆದಿದ್ದಾರೆ. (ಈ ಬಗ್ಗೆ ಆಗಲೇ "ಹರಿದಾಸರ ವಿಶಿಷ್ಟ ರಚನೆಗಳು" ಎಂಬ ಅಧ್ಯಾಯದಲ್ಲಿ ವಿವೇಚಿಸಲಾಗಿದೆ). ಅವರು ಅನೇಕ ನಿದರ್ಶನಗಳನ್ನೂ ತಮ್ಮ ಲೇಖನದ ಬೆಂಬಲಿಕೆಗೆ ನೀಡಿದಾರೆ. ಬಹುತೇಕ ಎಲ್ಲವೂ ಬಂಧದ ದೃಷ್ಟಿಯಿಂದ ವಚನಗಳನ್ನು ಹೋಲಂತ್ತವೆ : ಒಂದೆರಡಂತೂ ಅದೇ ಮಾದರಿಯ ಕೆಲವು ವಚನಗಳನ್ನು ನೆನಪಿಗೆ ತರುತ್ತವೆಂದಿದ್ದಾರೆ. ಬಸವಣ್ಣನ ವಚನದೊಂದಿಗೆ ಪುರಂದರದಾಸರ ಉಗಾಭೋಗವೊಂದನ್ನು ಹೋಲಿಸುತ್ತ (ಉರಿಗಂಜಿ ಸೆರಿಗಂಜಿ ಶರೀರದ ಭಯಂಕಂಜಿ-ಎಂಬ ಉಗಾಭೋಗ), ಎರಡರ ಪರಸ್ಪರ ಅನ್ಯೋನ್ಯತೆ, ಹಾಗೂ ಪುರಂದರದಾಸರ ಮೇಲೆ ಉಂಟಾಗಿರುವ ಸ್ಪಷ್ಟ ಪ್ರಭಾವ ಗುರುತಿಸಿದ್ದಾರೆ ಡಾ. ಎಂ. ಚಿದಾನಂದಾಮೂರ್ತಿಯವರು. ವ್ಯಾಸರಾಯರ ಒಂದು ಉಗಾಭೋಗ (ಇಂದಿಗೆಂತೋ ನಾಳೆಗೆಂತೋ)ವನ್ನು ಬಸವಣ್ಣನವರ ವಚನದೊಂದಿಗೆ (ಇಂತಿಗೆಂತು ನಾಳೆಗೆಂತು) ಹೋಲಿಸುತ್ತ ಡಾ. ಚಿದಾನಂದಮೂರ್ತಿಯವರು ಈ ವಚನವು ವ್ಯಾಸರಾಯರ ಮನದಲ್ಲಿ ಉಳಿದ್ದಿರಬಹುದೆಂದ ಅಭಿಪ್ರಾಯ ಪಟ್ಟಿರುವುದು ಇಂಥ ಅನೇಕ ಪ್ರೇರಣೆಗೆ ಇಂಬುಕೊಡುವ ಅಂಶ. ಈ ತರನಾದ ಪ್ರಭಾವವನ್ನು ಗುರುತಿಸುವುದರಿಂದಲೆ ಹರಿದಾಸ ಆಂದೋಲನ ತನ್ನ ಹಲವಾರು ಆಲೋಚನೆ, ಅಭಿವ್ಯಕ್ತಿ ಮುಂತಾದವುಗಳಲ್ಲಿ ವಚನ ಚಳುವಳಿಗೆ ಕೃತಜ್ಞ ಆಗಿರಬೇಕೆಂದೆನ್ನಿಸುವುದು. ತಮ್ಮ ಲೇಖನವನ್ನು ಮುಂದುವರಿಸುವ ಡಾ. ಚಿದಾನಂದ ಮೂರ್ತಿಯವರು ಹೇಳುವಂತೆ ಎಲ್ಲ ಹರಿದಾಸರಿಗಿಂತ ಪುರಂದರದಾಸರ ಮೇಲೆ ವಚನ ಸಾಹಿತ್ಯ ಪ್ರಭಾವ ಸ್ಪಷ್ಟವಿದೆ. ಪುರಂದರದಾಸರೂ ಬಸವಣ್ಣನವರು ಒಂದೇ ಗೊಂಚಲಿನ ಎರಡು ಹೂವುಗಳು : ಭಕ್ತಿವೃಕ್ಷದ ಪಕ್ವ ಫಲಗಳು" ಎಂಬ ಮಾತು ಗ್ರಾಹ್ಯ ಆಗುತ್ತದೆ. ಹನ್ನೆರಡನೆ ಶತಕದ ನಂತರ ಶ್ರೀಪಾದರಾಜರವರೆಗೂ ಹರಿದಾಸ ವಾಙ್ಮಯ, ವಚನಕಾರರ ಪ್ರಭಾವ ಈ ಬಗ್ಗೆ ಏನೂ ಆಧಾರ ಈವರೆಗೆ ದೊರೆತಿಲ್ಲ. ಶ್ರೀಪಾದರಾಜರ ರಚನೆಗಳನ್ನು ಗಮನಿಸಿದಾಗ, ಈ ೨೦೦ ವರ್ಷಗಳ ಅಂತರದ ಸಂಶೋಧನೆ ನಡೆಯಬೇಕೆಂದೆನ್ನಿಸುತ್ತದೆ.

ಉಗಾಭೋಗ ವಚನಗಳ ಪರಸ್ಪರ ಸ್ಸಾಮ್ಯ, ಪ್ರಭಾವ ಕಂಡಾಗ ವಿಚಾರ ಬೇರೆಯಾದರೂ ಭಾವ ಒಂದೆ, ದೊಡ್ಡವರ ಚಿಂತನೆಯೊಂದೆ ಎಂದೆನ್ನಿಸುತ್ತದೆ. ವಚನ

ಚಳವಳಿಯಲ್ಲಿಯಷ್ಟು ಉಗ್ರಕ್ರಾಂತಿ ಹರಿದಾಸ ಆಂದೋಲನದಲ್ಲಿ ಕಾಣದಾದರೂ, ಕನಕದಾಸರಂಥ ಹರಿದಾಸರ ಮೂಲಕ ಸಮಾಜ ಸುಧಾರಣಾ ಮನೋಭಾವ, ಕ್ರಾಂತಿಯ ಒಂದು ಕಿರಣದ ಬೆಳಕು ಪ್ರಸರಿಸುವುದನ್ನು ಕಾಣಬಹುದಾಗಿದೆ. ವಚನ–ಹರಿದಾಸರ ಆಂದೋಲನಗಳ ಕೆಲವು ಮೂಲಪ್ರೇರಣೆ ಒಂದೇ ಎನಿಸಿದಾಗ, ಷಡಕ್ಷರಿಯವರ 'ಅವರವರ ಭಾವಕ್ಕೆ ಅವರವರ ವೇಷದಲ್ಲಿ ಅವರಿವರಿಗೆಲ್ಲ ಗುರು ನೀನೊಬ್ಬನೆ' ಎಂಬ ಸಾಲು ನೆನಪಾಗುತ್ತದೆ. ವಚನಕಾರರು ತಮ್ಮ ಧ್ಯೇಯವನ್ನು ಚಳವಳಿಯ ಕ್ರಾಂತಿಯ ಮೂಲಕ, ಸಂಘಟಿತರಾಗಿ ಸಾಧಿಸಲು ಶ್ರಮಿಸಿದರೆ, ಹರಿದಾಸರು ತಮ್ಮದೆ ಆದ ರೀತಿಯಲ್ಲಿ ಆಂದೋಲನ ನಡೆಸಿದರು. ಹರಿದಾಸರ ಭಕ್ತಿ ಆಂದೋಲನದ ಬಗ್ಗೆ ಒಂದು ಮಾತು ಉದ್ಧರಿಸಿ ಈ ಸಮೀಕ್ಷೆಯನ್ನು ಇಲ್ಲಿಗೆ ಮುಗಿಸೋಣ : "The richest intellectual and religious life blossomed in a swamp of corruption and of vices. It was an effort not merely to acquire a knowledge of antiquity, in preaching and singing of Keerthanas. This was the dream of new Bhakti Movement."

### ತಮಿಳುನಾಡಿನ ಆಳ್ವಾರರು ಹಾಗೂ ಕರ್ನಾಟಕದ ಹರಿದಾಸರು

ಭಾರತದ ಉಳಿದ ಭಾಗಗಳಲ್ಲಿಯಂತೆಯೆ ತಮಿಳುನಾಡಿನಲ್ಲೂ ಬಹು ಹಿಂದಿನಿಂದ ಪ್ರಚಲಿತ ಆಗಿರುವ ಹಲವು ಧರ್ಮಗಳಲ್ಲಿ ಪ್ರಮುಖ ಆದದ್ದು ಭಕ್ತಿಪಂಥಗಳು ಎರಡು : ಶೈವ ಮತ್ತು ವೈಷ್ಣವ. ಎರಡು ಭಕ್ತಿಪಂಥಗಳಲ್ಲೂ ಕೆಲವು ಸಾಧು–ಸಂತರು ಆಗಿ ಹೋಗಿದ್ದಾರೆ. ದಾರ್ಶನಿಕ ದೃಷ್ಟಿ ಮಾತ್ರವಲ್ಲದೆ ಭಕ್ತಿ–ಅನುಷ್ಠಾನ ದೃಷ್ಟಿಯಲ್ಲೂ ಈ ಎರಡು ಧರ್ಮಗಳೂ ಪ್ರಧಾನವಾದವು. ಶೈವ ಭಕ್ತಿಪಂಥದ ಸಾಧುಗಳಿಗೆ ನಾಯನಾರ್ (Nayanars) ಎಂದೂ ವೈಷ್ಣವ ಭಕ್ತಿಪಂಥದ ಸಾಧುಗಳಿಗೆ ಆಳ್ವಾರ್ (Alwars) ಎಂದೂ ಕರೆಯುತ್ತಾರೆ. ಆಳ್ವಾರ್ ಎಂಬುದು ವೈಷ್ಣವ ಸಂತರಿಗೆ ಅಥವಾ ಶ್ರೀಮನ್ನಾರಾಯಣನ ಭಕ್ತರಿಗೆ ಮಾತ್ರ ವಿಹಾಸಲಾಗಿದೆ. ನಾಯನಾರ್ ಎಂದರೆ ನಾಯಕರು ಎಂದೂ ಅರ್ಥವಿದೆ (ಆಟ್–ಎಂದರೆ ತಮಿಳಿನಲ್ಲಿ ಮುಳುಗಿದವರು. ಭಗವದ್ಭಕ್ತಿಯಲ್ಲಿ ಮುಳುಗಿದವರು)–ಎಂದು ತಮಿಳು ಕನ್ನಡಗಳಲ್ಲಿರುವ ಅರ್ಥ. ಆಳ್ವಾರ್ ಎಂದರೆ, ಭಗವಂತನ ಸಾಮ್ರಾಜ್ಯವನ್ನು ಆಳುವವರು ಎಂದರ್ಥ. ಆಳ್ವಾರರು ಹಾಗೂ ನಾಯನಾರರಿಬ್ಬರೂ ತತ್ವಶಾಸ್ತ್ರಜ್ಞರಲ್ಲ. ಅವರು ಪ್ರಥಮತಃ ಜ್ಞಾನಿಗಳು. ಆಳ್ವಾರರು ಶ್ರೀಮನ್ನಾರಾಯಣ ಸ್ವರೂಪದಲ್ಲಿ ಪರಮಸತ್ಯವನ್ನು ಸಾಕ್ಷಾತ್ಕರಿಸಿಕೊಂಡು ದಿವ್ಯಾನುಭವ ಪಡೆದವರು. ನಾಯನಾರ್‌ರು ಶಿವನೇ ತಮ್ಮ ಪರದೈವನೆಂದು ಭಾವಿಸಿದವರು. ಇಬ್ಬರ ಭಕ್ತಿ ಗೀತೆಗಳನ್ನು 'ಪಾಶುರ'ಗಳೆಂದೂ 'ತೇವಾರ'ಗಳೆಂದೂ ಕರೆಯುತ್ತಾರೆ.

೧೧ನೇ ಶತಮಾನದ ರಾಮಾನುಜರು ಪರಿಷ್ಕರಿಸಿದ ತತ್ವ ವಿಶಿಷ್ಟಾದ್ವೈತ.— ವಿಷ್ಣುಭಕ್ತಿ ಪ್ರಧಾನ. ಪ್ರಪತ್ತಿ ಅಥವಾ ದೇವರಲ್ಲಿ ಶರಣಾಗತಿ ಭಾವವೇ ಈ ತತ್ತ್ವದ

ತಿರಂಳು. ಶ್ರೀವೈಷ್ಣವ ಸಂಪ್ರದಾಯ, ರಾಮಾನುಜರು ಅನುಸರಿಸಿದ ಭಕ್ತಿ ಸಂಪ್ರದಾಯ. ಇದರಲ್ಲಿ ಎರಡು ಗುರು ಪರಂಪರೆ : ಒಂದು ಆಳ್ವಾರರದ್ದು, ಇನ್ನೊಂದು ಆಚಾರ್ಯ ಪರಂಪರೆ. ಆಳ್ವಾರರು ಮೊದಲ ಪರಂಪರೆಗೆ ಸೇರಿದರೆ, ನಾಥ ಮುನಿಗಳು, ಯಾಮುನಾಚಾರ್ಯರು-(ಆಳವಂದಾರ್ ಎಂದೂ ಇವರಿಗೆ ಇನ್ನೊಂದು ಹೆಸರು) ಹಾಗೂ ಆಚಾರ್ಯ ರಾಮಾನುಜರು ಆಚಾರ್ಯ ಪರಂಪರೆಗೆ ಸೇರುವವರು. ಆಳ್ವಾರರು (ಅಥವಾ ತಮಿಳುನಾಡಿನ ವೈಷ್ಣವ ಸಂತರು) ಕಂಡು ಅನುಭವಿಸಿದ ವೈಷ್ಣವ ಭಕ್ತಿಯನ್ನು ತತ್ವ ದೃಷ್ಟಿಗಳಿಂದ ಪರಿಷ್ಕರಿಸಿ, ರೂಢಮೂಲಗೊಳಿಸಿ ಅದನ್ನು ಪ್ರಚಾರಕ್ಕೆ ತಂದವರು ರಾಮಾನುಜಾಚಾರ್ಯರು. ಆಳ್ವಾರರ ಹಾಗೂ ಹರಿದಾಸರ ಮುಂದಿನ ಸಾಲು ಭಕ್ತಿಪ್ರಸಾರ, ಹರಿಪಾರಮ್ಯ ಪ್ರತಿಪಾದನೆ ಕುರಿತ ವಿವೇಚನೆ, ಇಲ್ಲಿನ ಉದ್ದೇಶ.

ಆಳ್ವಾರ್ ಮಹನೀಯರು ಹಾಡಿದ ಮಧುರವಾದ ಗೀತೆಗಳು ಭಕ್ತಿಸಾಹಿತ್ಯಕ್ಕೇ ಒಂದು ಶಾಶ್ವತ ಕೊಡುಗೆ. ಅವುಗಳನ್ನು 'ನಾಲಾಯಿರ ದಿವ್ಯ ಪ್ರಬಂಧಮ್' 'ದ್ರಾವಿಡ ವೇದ', ಎದೆಲ್ಲ ಕರೆವ ರೂಢಿ ಇದೆ. ಭಕ್ತಿ ಎಂಬುದು ಷಡ್ಗುಣಪರಿಪೂರ್ಣ ನಾದ ಭಗವಂತನ ಒಂದು ಅನುಭವ ವಿಶೇಷ : ಆ ಅನುಭವದಲ್ಲಿ ಆಳವಾಗಿ ಮುಳುಗಿ ಅದರಿಂದುಂಟಾದ ಆನಂದಾನುಭವ ಅಭಿವ್ಯಕ್ತಿಗೊಂಡದ್ದೆ ನಾಲ್ಕು ಸಾವಿರ ಸಾಲಿನ ಭಕ್ತಿ ಗೀತಗಳು. ತಮಿಳುನಾಡಿನಲ್ಲಿ ಇಂದೂ ಇವು ಬಹು ಜನಪ್ರಿಯ : ಅಲ್ಲದೆ ಇವುಗಳ ಪ್ರಭಾವದಿಂದ ಅಲ್ಲಿಯ ನುಡಿಗೆ (ತಮಿಳಿಗೆ) ಸಂಸ್ಕೃತದಷ್ಟೆ ಗೌರವ ಸಂದಿತು. ಹರಿದಾಸರು, ವಚನಕಾರರು ಕೈಗೊಂಡ ಜನಭಾಷೆಯ ಬಳಕೆಯ ಕಾರ್ಯವನ್ನು ಕ್ರಿ. ಶ. ೭-೯ ಶತಕಗಳಲ್ಲಿದ್ದರೆಂದು ವಿದ್ವಾಂಸರು ಅಭಿಪ್ರಾಯಪಟ್ಟಿರುವ ಆಳ್ವಾರರು ನೆರವೇರಿಸಿದ್ದರು-ನಾಡಿನ ನುಡಿಗೆ ಮಾನ್ಯತೆಯೊದಗಿಸಿದರು. ವಿಶಿಷ್ಟಾದ್ವೈತ ತತ್ವದ ದೃಷ್ಟಿಯಲ್ಲಿ ಹಿಂದಿನಿಂದ ಹರಿದು ಬಂದಿರುವ ಭಕ್ತಿಯನ್ನು ಕುರಿತ ವಿವೇಚನೆ, ಹರಿಭಕ್ತಿ ಪಾರಮ್ಯ, 'ನಾರಾಯಣನೆ ನಮಕ್ಕೇ ಪರಂತರುವಾನ್' (ನಾರಾಯಣನೊಬ್ಬನೆ ನಮಗೆ ಪರದೈವ, ಪರವನ್ನು ತರುವವನು) ಅನಾದಿ, ಪುಣ್ಯಸ್ವರೂಪಿ, ಎಂಬ ಏಕೋದೇವ ಉಪಾಸನೆ, ಇವೆಲ್ಲವೂ ಹದಿನಾಲ್ಕನೇ ಶತಮಾನದಿಂದುದಯಿಸಿ ಬಂದ ಹರಿದಾಸರ 'ಭಕ್ತಿ ಸ್ವರೂಪ' (ಮಧ್ವಾಚಾರ್ಯರ ಹರಿಸರ್ವೋತ್ತಮತ್ವ)ಕ್ಕೆ ಹೇಗೆ ಹೊಂದುತ್ತವೆಂಬುದನ್ನು ಕಂಡರಿಸುವುದೆ ಈ ಸಾಲುಗಳ ಉದ್ದೇಶ. ಪುರಂದರರ ಕಾಲದಲ್ಲಿ ಹಾಗೂ ಅದಕ್ಕೂ ಹಿಂದೆ ನಡೆದ ನಡೆದ ತಮಿಳಿನ ಆಂದೋಲನ ಹೇಗೆ ಹರಿದಾಸರಿಗೆ ಆದರ್ಶವಾಯಿತು ಎಂಬುದನ್ನು ಕೂಡ ಮನಗಾಣಬಹುದು.

## ಆಳ್ವಾರರ ಹಿನ್ನೆಲೆ

ತಮಿಳುನಾಡಿನ ವೈಷ್ಣವ ಸಂತರೆಂದೆ ಪ್ರಖ್ಯಾತರಾದ ಆಳ್ವಾರರು ಅನುಭಾವಿ ಸಂತರು. ಪರಮಾತ್ಮನಲ್ಲಿ ತಲ್ಲೀನರಾಗಿ ತಮ್ಮನ್ನು ತಾವೇ ಮರೆವಂಥ ಸಾತ್ವಿಕ ಜೀವಿ

ಗಳು. ಆಚಾರ್ಯರು ತಮ್ಮ ಜ್ಞಾನಾನುಭವವನ್ನು ಲೋಕಕ್ಕಾಗಿ-ಜನತೆಯ ಉದ್ಧಾರಕ್ಕಾಗಿ ಧಾರೆ ಎರೆದಂಥವರು. ಆಳ್ವಾರರ ದಿವ್ಯ ಅನುಭವದ ಸೊಗಸನ್ನು ಜನತೆಗೆ ಉಣಬಡಿಸಿದವರು ಆಚಾರ್ಯರು. ತಮ್ಮ ವಿಶಿಷ್ಟಾದ್ವೈತ ತತ್ತ್ವದಿಂದ ಶ್ರೀವೈಷ್ಣವ ಧರ್ಮ-ವಿಷ್ಣು ಭಕ್ತಿ ಪಾರಮ್ಯವನ್ನು ವಿವರಿಸಿ ಪ್ರತಿಪಾದಿಸಿದರು. 'ವಿಷ್ಣುವನ್ನು ಬಿಟ್ಟು ಬೇರೆ ಪರದೈವವಿಲ್ಲ' ಎಂದು ಸಮರ್ಥಿಸಿದ ರಾಮಾನುಜರಿಗೆ ದೊರೆತ ಕೊಡುಗೆ ಶೈವ ಪಕ್ಷಪಾತಿಯಾದ ಚೋಳ, ದೇಶ ಬಿಟ್ಟು ಓಡಿಸಿದ್ದು. ತಮಿಳುನಾಡು ತೊರೆದ ಆಚಾರ್ಯರು ಕರ್ನಾಟಕಕ್ಕೆ ಬಂದು ಹೊಯ್ಸಳರಸು ಬಿಟ್ಟಿದೇವನಲ್ಲಿ ನೆಲೆನಿಂತರು. ಅಷ್ಟೆ ಅಲ್ಲ, ಅವನನ್ನು ವೈಷ್ಣವನನ್ನಾಗಿ ಪರಿವರ್ತಿಸಿದರು. ಇದು ಅವರ ಸಾಧನೆ, ವ್ಯಕ್ತಿತ್ವ ಪ್ರಭಾವ.

ದಕ್ಷಿಣದಲ್ಲಿ ಆಳ್ವಾರರಿಂದ ವೈಷ್ಣವ ಧರ್ಮವು ಪ್ರಾರಂಭವಾಯಿತೆಂಬುದು ಕೆಲವರ ಹೇಳಿಕೆ. ಇದು ಪೂರಾ ಸಮಂಜಸವೆನಿಸುವುದಿಲ್ಲ. ಆಳ್ವಾರರ ಕಾಲ (ಸಾಂಪ್ರದಾಯಿಕವಾಗಿ ಕ್ರಿ. ಪೂ. ೩೦೦೦-೪೦೦೦ ವರ್ಷ ಹಿಂದಿನವರೆಂದು ಹೇಳುವುದುಂಟು) ಕ್ಕಾಗಲಿ-ಆಂದರೆ ಕ್ರಿ. ಶ. ೭-೮ರ ಶತಮಾನಕ್ಕೆ ತುಂಬ ಮೊದಲೆ ದಕ್ಷಿಣದಲ್ಲಿ ಭಾಗವತ ಧರ್ಮ, ವಾಸುದೇವನ (ಕೃಷ್ಣನ ಇನ್ನೊಂದು ಹೆಸರು) ಉಪಾಸನೆಯೂ ಪ್ರಚಾರದಲ್ಲಿದ್ದಿತು. ಈ ಬಗ್ಗೆ ಹರಿದಾಸ ಸಾಹಿತ್ಯ-ಉಗಮ ಮತ್ತು ಸ್ವರೂಪದಲ್ಲಿ ವಿಶದವಾಗಿ ಚರ್ಚಿಸಲಾಗಿದೆ. ವಿಷ್ಣುಭಕ್ತಿ ಬೆಳೆದು ಬಂದ ನಿಡಿದಾದ ಹಾದಿಯನ್ನು ಗುರುತಿಸುವ ಪ್ರಯತ್ನ ಅಲ್ಲಿದೆ. ಆಳ್ವಾರರು ತಮ್ಮ ಸಾತ್ವಿಕ ಜೀವನ-ದಿವ್ಯ ಸಾರಸ್ವತ ಸಂಪತ್ತಿಯಿಂದ ವೈಷ್ಣವ ಧರ್ಮವನ್ನು ಇನ್ನೂ ಪುಷ್ಟಿಗೊಳ್ಳುವಂತೆ ಮಾಡಿ ಅದಕ್ಕೊಂದು ಸ್ವರೂಪ ವಿತ್ತರು, ವೈಶಿಷ್ಟ್ಯವಿತ್ತರೆಂದು ಹೇಳಬಹುದು. ಈ ಅರ್ಥದಲ್ಲಿ ಆಳ್ವಾರರನ್ನು ಶ್ರೀ ವೈಷ್ಣವವರ್ಧನ, ವಿಶಿಷ್ಟಾದ್ವೈತ ದರ್ಶನದ ಪ್ರವರ್ತಕರು ಎನ್ನಬೇಕು. ಹಾಗೂ ಅದರ ಭಕ್ತ್ಯನುಭವ ಶ್ರೀರಾಮಾನುಜರ ವಿಶಿಷ್ಟಾದ್ವೈತಕ್ಕೆ ತಳಹದಿಯಾಯಿತೆನ್ನಬಹುದು.

ಆಳ್ವಾರರು ಹನ್ನೆರಡು ಜನ. ಪೊಯಿಗೈ, ಪೂದತ್ತ, ಪೇಯರ್, ತಿರುಮಳಿಶೈ, ನಮ್ಮಾಳ್ವಾರ್, ಮಧುರಕವಿ, ಕುಲಶೇಖರ, ಪೆರಿಯಾಳ್ವಾರ್, ಆಂಡಾಳ್ (ಗೋದಾ ಎಂಬುದು ಇನ್ನೊಂದು ಹೆಸರು), ತೊಂಡರಡಿಪ್ಪೊಡಿ (ಭಕ್ತಾಂಘ್ರಿರೇಣು), ತಿರುಪಾಣಿ, ತಿರುಮಂಗೈ-ಹೀಗೆ, ಒಟ್ಟಾರೆ, ಇವರೆಲ್ಲರ ಕಾಲಾವಧಿ ಕ್ರಿ. ಶ. ೭ರ ರಿಂದ ೮ರ ರವರೆಗೆ ಅಂದರೆ ೭-೮ರ ಶತಮಾನದಲ್ಲಿದ್ದವರೆಂದಾಗುತ್ತದೆ.

ಆಳ್ವಾರರು ಭಾಗವತ ಧರ್ಮದ ಅನುಯಾಯಿಗಳು. ಇವರ ಮತಕ್ಕೆ ಪಾಂಚರಾತ್ರ ಮತವೆಂದೂ, ಏಕಾಂತಿಕ ಮತವೆಂದೂ ಹೆಸರುಂಟು

> ಸೂರಿಸುಹೃದ್ಭಾಗವತ ಸ್ಸಾತ್ವತಃ ಪಂಚಕಾಲವಿತ್ ।
> ಏಕಾಂತಿಕ ಸ್ತನ್ಮಯಶ್ಚ ಪಾಂಚರಾತ್ರಿಕ ಇತ್ಯಪಿ ॥

ಎಂಬ ಶ್ಲೋಕ, ಪಾಂಚರಾತ್ರಾಗಮಕ್ಕೆ ಸೇರಿದ-ವಿವಿಧ ಹೆಸರುಗಳನ್ನು ತಿಳಿಸುತ್ತದೆ.

ಭಾಗವತ ಧರ್ಮ, ಭಗವಂತನನ್ನು ಕುರಿತು ವಿವೇಚಿಸುವ ಧರ್ಮ. ಎಂದಿನಿಂದ ಭಗವಂತನ ವಿವೇಚನೆ ಅವನನ್ನರಿಯುವ ಹವಣು ನಡೆಯಲು ಆರಂಭ ಆಯಿತೊ ಅಂದಿನಿಂದ ಭಾಗವತ ಧರ್ಮ ಬೆಳೆದು ಬಂದಿದೆಯೆನ್ನಬಹುದು. ಪರಮಾತ್ಮನೊಬ್ಬನೆ ಎಂಬ ಏಕದೇವೋಪಾಸನೆ, ದೇವತೆಗಳನೇಕ ಎಂಬುದರ ಪರಿತ್ಯಾಗ, ಭಕ್ತಿ-ಪ್ರಪತ್ತಿಗಳ ಪಾರಮ್ಯ, ಭಗವಂತ ಪ್ರೇಮಾಪೂರಿತಾಕೃಪಾಳು, ಯಾವುದೆ ಜಾತಿ ಕುಲ ಗಂಡು-ಹೆಣ್ಣು ಭೇದವಿರದೆ ಎಲ್ಲರಿಗೂ ಒಲಿವನೆಂಬ ನಂಬಿಕೆ-ಇವೇ ಭಾಗವತ ಧರ್ಮದ ಮುಖ್ಯ ತತ್ವಗಳು. ಆಳ್ವಾರ್ ಮಹನೀಯರು ಬೋಧಿಸಿದ್ದು ಇದೇ ಭಾಗವತ ಮಂತದ ಸರ್ವಸಮಾನತ್ವ ಈ ಶ್ಲೋಕದಲ್ಲಿ ಉಕ್ತವಾಗಿದೆ :

> ಸರ್ವೇ ಸಮಾನಾಶ್ಚತ್ವಾರೋ ಗೋತ್ರಪ್ರವರ ವರ್ಜಿತಾ
> ಉತ್ಕರ್ಷೋ ನಾಪಕರ್ಷಶ್ಚ ಜಾತಿತಸ್ತೇಷು ಸಮ್ಮತಃ
> ಫಲೇಷು ನಿಸ್ಸ್ಪೃಹಾಸ್ಸರ್ವೇ ದ್ವಾದಶಾಕ್ಷರ ಚಿಂತಕಾ ॥
> ಮೋಕ್ಷೈಕ ನಿಶ್ಚಯಾಶ್ಚೈವ ಸೂತಕಾ ಶೌಚ ವರ್ಜಿತಾ॥

ನಾಲ್ಕು ವರ್ಣದವರೂ ಸಮಾನರು. ಗೋತ್ರ, ಪ್ರವರ, ಮೇಲು-ಕೀಳು ಜಾತಿ ಎಂಬ ಭೇದಭಾವವಿಲ್ಲ. ಮೋಕ್ಷವೊಂದೆ ಇವರ ಫಲಾಪೇಕ್ಷೆ. "ಓಂ ನಮೋ ಭಗವತೇ ವಾಸುದೇವಾಯ" ಎಂಬ ದ್ವಾದಶಾಕ್ಷರ ಮಂತ್ರದ ಚಿಂತನೆಯೆ ಸದಾ ಇವರಿಗೆ. ಯಾವುದೇ ಅಶೌಚ ಸೂತಕಗಳ ಸೋಂಕು ಇವರಿಗಿಲ್ಲ. ಆಳ್ವಾರರೊಬ್ಬರು ಪೇಲ್ಯಾಣಿಸಿದ ಶ್ಲೋಕದ ಭಾವನೆಯನ್ನೇ 'ಕುಲಂತರುಮ್ ಶೆಲ್ವಂ ತಂದಿಡುಂ' ಎಂದು ಹೇಳುತ್ತಾರೆ. ಅಂದರೆ, ಭಗವದ್ಭಕ್ತಿಯು ಕುಲವಿಲ್ಲದವನಿಗೆ ಕುಲವನ್ನೂ ಸಿರಿಯಿಲ್ಲದವನಿಗೆ ಸಿರಿಯನ್ನೂ ತಂದು ಕೊಡುತ್ತದೆಯೆಂದರ್ಥ. ಆಚಾರ್ಯ ಪರಂಪರೆಯಲ್ಲಿ ಬಂದ ನಿಗಮಾಂತ ದೇಶಿಕರಿಗೆ ವಿಜಯನಗರದ ವಿದ್ಯಾರಣ್ಯರು 'ಇಲ್ಲಿ ಬಂದು ಸುಖದಿಂದಿರಬಹುದಲ್ಲ' ಎಂದು ಹೇಳಿಕಳಿಸಿದಾಗ ದೇಶಿಕರು ಉತ್ತರವಾಗಿ 'ವೈರಾಗ್ಯ ಪಂಚಕ'ವೆಂಬ ಪದ್ಯ ಪಂಚಕವನ್ನು ಕಳಿಸಿಕೊಟ್ಟರು. ಅದರ ಒಂದು ಅರ್ಥದಂತೆ, "ನನಗೆ ತಾತವಂಶ್ಯಾತುದಿರ ನಿಧಿಯೊಂದಿದೆ. ಕಂಚಿ ವರದರಾಜಸ್ವಾಮಿಯೇ ಆ ಅಕ್ಷಯನಿಧಿ. ಹೀಗಿರುವಲ್ಲಿ ಬೇರೆ ನಿಧಿಯು ಅಗತ್ಯವೇಕೆ" ಎಂದು. ಭಾಗವತ ಧರ್ಮದಲ್ಲಿ ಭಕ್ತಿ, ಶರಣಾಗತಿಗಳಿಗೆ ಮೊದಲಸ್ಥಾನ, ಜಾತಿ ಕುಲಕ್ಕಲ್ಲ. ಇಲ್ಲಿ ತಿರುಪಾಣಿ ಆಳ್ವಾರರೆಂಬುವರ ನೆನಪಾಗುತ್ತದೆ. ಅವರು ಅಂತ್ಯಜರು. ಕಾವೇರಿ ನದಿಯ ತೀರದಲ್ಲಿ ಶ್ರೀರಂಗದ ಶ್ರೀರಂಗನಾಥ ಸ್ವಾಮಿಯ ದೇವಾಲಯದ ದಿಕ್ಕಿನಲ್ಲಿ ಗುಡಿಸಲು ಹಾಕಿಕೊಂಡು ವಾಸವಾಗಿದ್ದ ಪರಮ ವಿಷ್ಣು ಭಕ್ತ. ಪ್ರತಿದಿನ ಬೆಳಗ್ಗೆ ಎದ್ದು ಕಾವೇರಿಯಲ್ಲಿ ಸ್ನಾನ ಮಾಡಿ, ಶ್ರೀ ರಂಗನಾಥನನ್ನು ಕೊಂಡಾಡಿ ಸ್ತುತಿಸುತ್ತಿದ್ದ. ಒಂದು ದಿನ ಶ್ರೀರಂಗನಾಥನ ಕೈಂಕರ್ಯದಲ್ಲಿ ನಿರತರಾಗಿದ್ದ ಲೋಕಸಾರಂಗ ಮುನಿಗಳೆಂಬುವರು ದೇವರ ತಿರುಮಜ್ಜನಕ್ಕೆಂದು (ಅಭಿಷೇಕ)

ಕಾವೇರಿಯಿಂದ ನೀರು ತರುತ್ತಿದ್ದರು. ಹಾದಿಯ ಪಕ್ಕದಲ್ಲಿ ತಿರುಪಾಣ ದೇವಾಲಯಕ್ಕೆ ಅಭಿಮುಖವಾಗಿ ಧ್ಯಾನಸ್ಥನಾಗಿದ್ದ. ಆಗ್ಗೆ ಅಂತ್ಯಜ ದಾರಿಯಲ್ಲಿ ಹೋಗುವಾಗಲೇ 'ಬರುತ್ತಿದ್ದೇನೆ' ಎಂದು ಕೂಗಿಕೊಂಡು ಹೋಗಬೇಕು. ಮೇಲುವರ್ಗದವರ ಮೇಲೆ ಇವನ ನೆರಳೂ ಹಾಯುವಂತಿಲ್ಲ. ಲೋಕಸಾರಂಗರ ಜತೆಗಿದ್ದ ಅರ್ಚಕರು ತಿರುಪಾಣಗೆ ಸಾಕಷ್ಟು ದೂರದಿಂದಲೆ ದಾರಿಬಿಡಲು ಗಟ್ಟಿಯಾಗಿ ಕಿರಿಚಿದರು. ಭಕ್ತಿಯಲ್ಲಿ ತನ್ಮಯನಾದ ತಿರುಪಾಣಗೆ ಈ ಕೂಗು ಕೇಳಿಸಲಿಲ್ಲ. ತಾನು ಉನ್ನತ ಕುಲದವನೆಂಬ ಹಮ್ಮು ಲೋಕಸಾರಂಗರಿಗಿನ್ನೂ ಇತ್ತು. ದೂರದಿಂದಲೆ ಕಲ್ಲೊಂದನ್ನು ಬೀಸಿ ತಿರುಪಾಣಗೆಸೆದರು. ಅವನ ಹಣೆಗೆ ಕಲ್ಲು ಬಡಿದು, ರಕ್ತ ಸುರಿಯಲಾರಂಭಿಸಿತು. ಧ್ಯಾನ ತಿಳಿದು ಆತ ಕಣ್ತೆರೆದ. ತನ್ನ ಮುಂದೆ ಸ್ವಲ್ಪ ದೂರದಲ್ಲಿ ನಿಂತ ಅರ್ಚಕರನ್ನು ಕಂಡು, ಅಪಚಾರವಾಯ್ತೆಂದು ಕ್ಷಮೆ ಕೋರಿ, ಹಿಂದೆ ಸರಿದ. ಲೋಕಸಾರಂಗರಿಗೂ ಮನಸ್ಸಿಗೆ ಒಂದು ಜೀವವನ್ನು ನೋಯಿಸಿದನೆಂಬ ನೋವು. ಹಾಗೇ ದೇವಾಲಯಕ್ಕೆ ನಡೆದರು. ಅಂದು ಶ್ರೀರಂಗನಾಥನ ಸನ್ನಿಧಿಯಲ್ಲಿ ದಿವ್ಯ ಪ್ರಸನ್ನತೆ ಅವರಿಗೆ ತೋರಲಿಲ್ಲ. ತಿರುಪಾಣಯ ಹಾಡನ್ನು ಅವರು ಕೇಳಿದ್ದರು. ಭಕ್ತನೆಂದರೆ ಅವನಿಗೆ ಜಾತಿಯ ಕಟ್ಟು ಏಕೆ ? ಅಂಥ ಭಕ್ತನಿಗೆ ಅವಕಾಶವೀಯದ ಆಚಾರ ಎಂಥದು ! ಇವೇ ಲೋಕಸಾರಂಗರ ತುಮುಲ, ಚಡಪಡಿಕೆ. ಅಂದಿನ ರಾತ್ರಿಯೆ ಅವರಿಗೆ ಒಂದು ಕನಸಾಯಿತು. ಶ್ರೀರಂಗನಾಥನೆ ಬಂದು "ತಿರುಪಾಣ ನನ್ನ ಅಂತರಂಗ ಭಕ್ತ, ನೀನು ಅವನಿಗೆ ನೋವುಂಟು ಮಾಡಿದ್ದು, ನನಗೆ ಮಾಡಿದೆಯೆಂದೆ ಲೆಕ್ಕ, ಅದು ನಿನಗೆ ಗೊತ್ತೆ ? ಅವನನ್ನು ಕೀಳುಕುಲದವನು, ಅಂತ್ಯಜನೆಂದು ಭಾವಿಸಬೇಡ. ನನ್ನ ದಾಸನಾತ. ನೀನು ಅವನನ್ನು ಕಂಡು, ನಿನ್ನ ಹೆಗಲಿನ ಮೇಲೆ ಅವನನ್ನು ಹೊತ್ತು, ತಂದು ನನ್ನ ಸನ್ನಿಧಿಯ ದರ್ಶನ ಮಾಡಿಸು. ಇದು ಬಹಿರಂಗವಾಗೇ ನಡೆಯಬೇಕು, ತಿಳಿಯಿತೆ? ಇದೇ ನೀನು ಮಾಡಿಕೊಳ್ಳಬೇಕಾದ ಪ್ರಾಯಶ್ಚಿತ್ತ" ಎಂದು ಹೇಳಿದಂತಾಯಿತು.

ಬೆಳಗಾಗುತ್ತಲೆ ದುಗುಗೆದ್ದು ಲೋಕಸಾರಂಗರು ತಿರುಪಾಣಯೆಡೆಗೆ ಓಡಿದರು. ಎಂದಿನಂತೆ ತಿರುಪಾಣ ಅರೆಗಣ್ಣು ಮುಚ್ಚಿ ಹಾಡುತ್ತಾ, ನಿಂತಿದ್ದ ದಿವಾಕರನಲ್ಲಿಯೆ ಶ್ರೀಮನ್ನಾರಾಯಣನನ್ನು ಕಾಣುತ್ತ. ಲೋಕಸಾರಂಗರು ಮೆಲ್ಲನೆ ತಿರುಪಾಣಯನ್ನು ಸಮೀಪಿಸಿ ಅವರಿಗೆ ನಮಸ್ಕರಿಸಿದರು. ತಾವು ಮಾಡಿದ ತಪ್ಪಿಗೆ ಕ್ಷಮೆಯಾಚಿಸಿದರು. ತಿರುಪಾಣ, ಒಮ್ಮೆಲೆ ಕೂಗಿದ "ಇದೇನು ನನ್ನನ್ನು ನೀವು ಮುಟ್ಟುತ್ತಿದ್ದೀರಲ್ಲ ? ನಾನು ಪಂಚಮ ಸ್ವಾಮಿ, ಮುಟ್ಟಬಾರದು ನೀವು ನಮ್ಮನ್ನ" ಲೋಕಸಾರಂಗ ನಿರ್ಮಲ ನಗೆನಕ್ಕು, "ಅಲ್ಲವೆ ಅಲ್ಲ, ನನ್ನ ಸ್ವಾಮಿ ನಿಮ್ಮನ್ನು ಸನ್ನಿಧಿಗೆ ಕರೆತರಲು ಅಪ್ಪಣೆ ಮಾಡಿದಾನೆ" ಎಂದವರೆ ತಿರುಪಾಣಯ ಯಾವ ಮಾತಿಗೂ ಕಾಯದೆ, ಅವನನ್ನು ಎತ್ತಿ ಹೆಗಲ ಮೇಲೆ ಕುಳ್ಳಿರಿಸಿಕೊಂಡು ಉತ್ಸವದಿಂದಲೇ ಶ್ರೀರಂಗದ ದೇವಾಲಯಕ್ಕೆ ಕರೆತಂದರು. ದೇವಾಲಯದ ಹೊರವಲಯ ದಾಟಿ, ರಂಗಮಂಟಪದಲ್ಲಿ ತಿರುಪಾಣಯ ವರನ್ನಿಳಿಸಿದರು. ಅಂದಿನ ತನಕವೂ ಸ್ವಾಮಿಯ ದಿವ್ಯ ಮಂಗಳವಿಗ್ರಹತನುವನ್ನು

ಕಂಡಿರದ ತಿರುಪಾಣಿ ಭಕ್ತಿ ಪರವಶತೆಯಿಂದ ಮೈಮರೆದು ಹಾಡಿದ. ಅಂದೇ 'ಅಮಲ ನಾದಿ ಪಿರಾನ್' ಎಂಬ ದಿವ್ಯ ಪ್ರಬಂಧದ ಸಾಲುಗಳನ್ನು ರಚಿಸಿ ಹಾಡಿದರು. 'ರಂಗಧಾಮ, ನಿನ್ನ ಶ್ರೇಷ್ಠವಾದ ಪಾದಕಮಲ ಒಂದು ನನ್ನ ಕಣ್ಣಿನೊಳಹೊಕ್ಕಿದವಲ್ಲವೆ ?' ಎಂದು ಕಣ್ಣೀರ್ಗರೆದರು. ಇದು ಹರಿಜನರಿಗೆ ದೇವಾಲಯ ಪ್ರವೇಶವೊದಗಿ ಬಂದ ಸಂದರ್ಭ. ಅಂದು ನಡೆದ ಘಟನೆ ಇಂದೂ ಆಗಬಾರದೆ ? ಎಂದೆನಿಸುತ್ತದೆ. ಆದಾದ ನಂತರ (೧೫ನೆ ಕ್ರಿ. ಶ.) ರಾಮಾನುಜರು, 'ವೈರಮುಡಿ' ಉತ್ಸವದ ಸಂದರ್ಭದಲ್ಲಿ ಮೇಲು ಕೋಟೆಯ ಶ್ರೀ ಚೆಲುವನಾರಾಯಣನ ದರ್ಶನಕ್ಕೆ ಹರಿಜನರನ್ನು ಒಂದು ದಿನ ಬರಲು ಅವಕಾಶ ನೀಡಿದುದೂ ಒಂದು ಭಕ್ತಿಯ ಕ್ರಾಂತಿ, ಆಂದೋಲನವೆ.

ಆಳ್ವಾರರು ಅವತರಿಸಿದ ಸ್ಥಳಗಳ ತಮಿಳುನಾಡಿನ ನದೀ ತೀರ ಪ್ರದೇಶಗಳೆ ತಾಮ್ರಪರ್ಣಿ, ವೈಗ್ಯೆ (ಕೃತಮಾಲಾ), ಪಯಸ್ವಿನೀ (ಪಾಲಾರ್), ಕಾವೇರಿ, ಹೀಗೆ.- ಕಾವೇರಿ ಮುಂತಾದ ಜೀವ ನದಿಗಳು ದಕ್ಷಿಣ ಭಾರತದಲ್ಲಿ ಹರಿದು ಜನರ ತನು ಮನ ತಂಪಾಗಿರಿಸಿದಂತೆ ಆಳ್ವಾರರ ಭಕ್ತಿ ನದಿಯ ಹೊನಲು ಜನತೆಯ ಹೃದಯಗಳನ್ನೂ ತಂಪು ಮಾಡಿ, ವಿಷ್ಣುಭಕ್ತಿಯ ನೆಲೆಯಾಗಿಸಿತು.

ಆಳ್ವಾರರುಗಳಲ್ಲಿ ಎಲ್ಲ ಜಾತಿಯವರೂ ಇದಾರೆ. ಅವರಲ್ಲಿ ಒಬ್ಬರು ಕುಲಶೇಖರಾಳ್ವಾರ್, ಅದೇ ಹೆಸರಿನ ಗ್ರಾಮ, ಸಂತ್ರಮುತ್ತೂರು ಪ್ರದೇಶದ ರಾಜರು. ಒಬ್ಬಳೆ ಹೆಣ್ಣು ಗೋದಾದೇವಿ ಆಂಡಾಳ್ ಎಂದು ಹೆಸರು. ೧೨ನೆ ಶತಮಾನದ ಮಹಾದೇವಿಯಕ್ಕ ಶ್ರೀಶೈಲದ ಮಲ್ಲಿಕಾರ್ಜುನನನ್ನು ವರಿಸಿದರೆ, ಅದಕ್ಕೂ ತುಂಬ ಮುಂಚೆಯೆ ಬಂದ ಆಂಡಾಳ್, ಶ್ರೀರಂಗದ ರಂಗನಾಥನನ್ನೆ ವರಿಸಿದಳು. ಹಾಗೂ ಅವನಲ್ಲಿ ಐಕ್ಯಗೊಂಡಳೆಂದು ಪ್ರತೀತ. ತಿರುಪಾಣಿ, ಅಂತ್ಯಜ, ಆದರೆ ಪರಮಭಕ್ತ. ತಿರುಮಂಗೈ ಕಳ್ಳರ ಪಂಗಡದವನು. ತಿರುಮಳಿಶೈ ಆವರ ವಿವರ ತಿಳಿಯದು. ಉಳಿದವರಲ್ಲ ಬ್ರಾಹ್ಮಣ ವರ್ಗಕ್ಕೆ ಸೇರಿದವರೆ. ಇವರೆಲ್ಲರಿಗೂ ಪ್ರಾಮುಖ್ಯವೆಂದರೆ, ಭಗವಂತನಲ್ಲಿ ಭಕ್ತಿ. ಭಕ್ತಿಯೆ ಮುಕ್ತಿಗೆ ಹಾದಿ, ಅದಕ್ಕೆ ಎಲ್ಲರೂ ಅಧಿಕಾರಿಗಳಾಗುವ ಹಕ್ಕುಂಟು ಎಂಬ ಭಾಗವತ ತತ್ತ್ವ ಆಳ್ವಾರರದು. ಅದನ್ನೆ ತಮ್ಮ ಬದುಕಿನ ನಡೆನುಡಿಗಳ ಮೂಲಕ ಸಾದರಪಡಿಸಿದರು.

ಮೇಲೆ ತಿಳಿಸಿರುವ ಆಳ್ವಾರರು ಸಾಮಾನ್ಯವಾಗಿಯೆ ತಮ್ಮ ಇಹದ ಬದುಕಲ್ಲಿ ಇಷ್ಟ ದೈವವಾದ ವಿಷ್ಣು ಸಾಕ್ಷಾತ್ಕಾರದ ಅನುಭವ ಪಡೆದು ಭಕ್ತರು. ಭಗವಂತನಲ್ಲಿ "ಅನ್ಯಥಾಶರಣಂ ನಾಸ್ತಿ...." ಎಂದು ಶರಣಾಗತರಾಗುವುದೇ ಏಕೈಕ ಮಾರ್ಗವೆಂದು ಅಚಲವಾಗಿ ನಂಬಿ ತಮ್ಮನ್ನು ತಾವೇ ಭಗವಂತನಿಗೆ ಸಮರ್ಪಣೆ ಮಾಡಿಕೊಂಡವರು. ಇವರ ದೃಷ್ಟಿಯಲ್ಲಿ ಪರಲೋಕದಲ್ಲಿ ಸಿದ್ಧಿಸುವ ಮುಕ್ತಿಗಿಂತ ಇಹದಲ್ಲಿ ಗೈಯುವ ಶರಣಾಗತಿ ಮುಕ್ತಿಗಿಂತ ದೊಡ್ಡದು.

ಆಳ್ವಾರರು ಭಕ್ತ ಕವಿಗಳೆಂದು ತಿಳಿಸಿದ್ದೇವೆ. ಅವರು ಪ್ರಾಮುಖ್ಯ ಮತ್ತೊಂದು ದೇವರನ್ನು ಕಾಣಲು ಸಾಕಾರ ಅಥವಾ ನಿರಾಕಾರನೂ ಆಗಬಹುದೆಂದದ್ದು ಅವರ ನಂಬಿಕೆಯ ಪ್ರಕಾರ ಭಗವಂತನ ರೂಪ ಇವು.

1. ಪರವಾಸುದೇವ (ವೈಕುಂಠ)
2. ವ್ಯೂಹ ರೂಪಿ (ಹಾಲ್ಗಡಲು)
3. ರಾಮಕೃಷ್ಣರ ವೈಭವ
4. ಯೋಗಿಗಳ ಹೃದಯದಲ್ಲಿ ಅಂತರ್ಯಾಮಿ
5. ದೇವಸ್ಥಾನಗಳಲ್ಲಿ (ಅರ್ಚಾರೂಪ)

-ಇವೆಲ್ಲವೂ ಸತ್ಯರೂಪಗಳು. ಭಕ್ತಿಯ ಪರಾಕಾಷ್ಠೆಯಲ್ಲಿದ್ದ ಆಳ್ವಾರರಿಗೆ ಪರವಾಸುದೇವ, ದೇವಾಲಯದ ಅರ್ಚಾವಿಗ್ರಹ ಸ್ವರೂಪ, ಎರಡೂ ಸತ್ಯವೆ. ಎಲ್ಲೆಲ್ಲೂ ಅವರು ಇಷ್ಟರೂಪನಾದ ಅಪ್ರಮೇಯನನ್ನು ಕಾಣಬಲ್ಲರು. ಪರವಾಸುದೇವ ರೂಪವನ್ನು ನಿತ್ಯ ವಿಭೂತಿಯೆಂದೂ ಅರ್ಚಾವಿಗ್ರಹ ರೂಪವನ್ನು ಲೀಲಾವಿಭೂತಿ ಸ್ವರೂಪನೆಂದು ಕರೆದಿದ್ದಾರೆ. ಆಳ್ವಾರರ ದೈವಭಕ್ತಿ-ಸಾಕ್ಷಾತ್ಕಾರದಲ್ಲಿ ಪರಿಣಾಮ ಗೊಂಡ ದಿವ್ಯ ದರ್ಶನವೆ ವಿನಾ ಕೇವಲ ಬೌದ್ಧಿಕವಾದದ್ದೇನಲ್ಲ. ದೇವರನ್ನು ಪಾಠಾದಿ ಕುಣಿಸಿದವರು ಹರಿದಾಸರು. "ಅಪರೋಕ್ಷೀಕೃತ ಶ್ರೀಶಃ" ಎಂಬ ನೆಲೆಯನ್ನು ತಲುಪಿದ ಅಪರೋಕ್ಷಜ್ಞಾನಿಗಳು ಎನ್ನಿಸ್ತೇವೆಯೋ ಹಾಗೆಯೇ ಆಳ್ವಾರರೂ ಕೂಡ. ದೇವರಲ್ಲಿ ಅವರು, ಅವರಲ್ಲಿ ಅವನ ನಿತ್ಯಮಂಗಳ ಸ್ವರೂಪ. ಆಳ್ವಾರರ ಪರದೈವ ನಿರ್ಗುಣಬ್ರಹ್ಮನಲ್ಲ, ಸಗುಣಬ್ರಹ್ಮ, ಸಮಸ್ತ ಕಲ್ಯಾಣಗುಣಗಣ ಪರಿಪೂರ್ಣನಾದ ಶ್ರೀಮನ್ನಾರಾಯಣ. ತಮ್ಮ ನಾಲಾಯಿರ ದಿವ್ಯ ಪ್ರಬಂಧದ ಸಾವಿರಗಳಲ್ಲಿ ವಿಷ್ಣುವಿನ ಅರ್ಚಾವತಾರವನ್ನು ಆಳ್ವಾರರುಗಳೆಲ್ಲರೂ ಮನದಣಿಯೆ ಸ್ತುತಿಸಿದ್ದಾರೆ. ವೇದಗಳಲ್ಲಿ ರುವ ಜ್ಞಾನದ ಬೆಳಕು, ಉಪನಿಷತ್ತಿನ ಆಧ್ಯಾತ್ಮ ರಹಸ್ಯ ಎಲ್ಲವೂ ನಾಲಾಯಿರ ದಿವ್ಯ ಪ್ರಬಂಧದಲ್ಲಿ ಅಡಕವಾಗಿರುವುದರಿಂದ ಇವುಗಳನ್ನು "ದ್ರಾವಿಡ ವೇದ", "ತಿರುವಾಯ್ ಮೊಳಿ" (ಸಿರಿಬಾಯಿ ನುಡಿ) ಎಂದೇ ಕರೆದು ಗೌರವಿಸಿದ್ದಾರೆ. ಹರಿದಾಸರ ಜೀವನದಲ್ಲಿ ಅನೇಕ ಪವಾಡಗಳು ಬೆರೆತಿವೆ, ಆಳ್ವಾರರ ಬದುಕಿನಲ್ಲಿಯೂ ಹೀಗೆಯೇ ಅನೇಕ ಪವಾಡ ಸೇರಿವೆ. ಆದರೆ ಒಂದು, ಜನಸಾಮಾನ್ಯರ ಮನಸ್ಸನ್ನು ಆಳ್ವಾರರು ಗೆದ್ದರು. ಆಳ್ವಾರರ ಜೀವನ ವೃತ್ತಾಂತ, ಅವರ ಕೃತಿಗಳ ಬಿಡಿ ಪರಿಚಯ ನಿಬಂಧದ ವಿಸ್ತಾರಕ್ಕೆಡೆ ಗೊಟ್ಟಾತೆಂಬ ಭೀತಿಯಿಂದ ಕೈಬಿಡಲಾಗಿದೆ.

ಮೇಲೆ ತಿಳಿಸಿರುವ ಹನ್ನೆರಡು ಜನ ಆಳ್ವಾರರ ಪಂಥ ಭಕ್ತಿಪಂಥ. ಅವರು ಹಾಡಿದ್ದು ಭಕ್ತಿರಸಪೂರಿತ ಹಾಡುಗಳನ್ನು. ತಮಿಳಿನಲ್ಲಿ ಪ್ರಿಯವಾದ ವೆಣ್ಬಾ, ದಂಡ, ಛಂದೋರಚನೆ ಶ್ರೀವೈಷ್ಣವರು ನಿತ್ಯ ಪೂಜಾ ಸಮಯದಲ್ಲಿ ಹಾಡುವ "ತಿರುಪ್ಪ-ಲ್ಲಾಂಡು" (ಪೆರಿಯಾಳ್ವಾರ್ ಎಂಬುವ ಭಕ್ತರ ರಚನೆ. ದೇವರು ಅವರಿಗೆ ಪ್ರತ್ಯಕ್ಷ

ವಾದಾಗ ಅವನಿಗೆಲ್ಲಾದರೂ ದೃಷ್ಟಿಯಾದಾತು, ಅವನ ದಿವ್ಯ ಸೌಂದರ್ಯಕ್ಕೆ ಚ್ಯುತಿ ಬಂದಾತು ಎಂಬ ಮನುಷ್ಯ ಸಹಜ ಹೆದರಿಕೆಯಿಂದ ಮಂಗಳಾಶಾಸನ ಕೋರಿ ಹಾಡಿದ ಪಲಾಕು ಪದಗುಚ್ಛ.) ಇದನ್ನು ಸ್ಫೂರ್ತಿಯಿಂದ ಹಾಡಿದ ಪೆರಿಯಾಳ್ವಾರರದ್ದು ಪ್ರಗಲ್ಭ ಪಾಂಡಿತ್ಯ : ಅಷ್ಟೇ ಕವಿಹೃದಯವೂ ಉಳ್ಳ ಭಾವುಕರು. ಇದೇ ಆಳ್ವಾರರ ಮತ್ತೊಂದು ಪದ್ಯಮಾಲೆ "ತಿರುಮೊಳಿ" ಎಂಬುದು. ಈ ಪದ್ಯಗಳಲ್ಲಿ ತಾವು ಯಶೋದೆಯಂತೆ ಭಾವಿಸಿ ಕೃಷ್ಣನ ಬಾಲಲೀಲೆಯ ವಿವಿಧ ವಿನೋದಲಹರಿಗಳನ್ನು ವರ್ಣಿಸಿದ್ದಾರೆ. ದೇವರು, ಮನುಷ್ಯನ ಮಾತು, ಮನಸ್ಸು ಯಾವುದಕ್ಕೂ ನಿಲುಕದವನಾದರೂ ಭಕ್ತನ ಆರ್ತಭಾವ, ಭಕ್ತಿ, ಮಧುರ ಭಾವಕ್ಕೆ ಮನಸೋತು ಕಟ್ಟು ಬೀಳುತ್ತಾನೆ. ತನ್ನ ಸೌಶೀಲ್ಯ, ಸೌಲಭ್ಯಾದಿಗುಣಗಳಿಂದ ಭಕ್ತರೊಡನೆ ನಲಿಯುತ್ತಾನೆ. ಭಗವಂತನ ಅವತಾರಗಳಲ್ಲಿ ಭಕ್ತರು ಈ ಗುಣಗಳನ್ನು ಕಾಣುತ್ತಾರೆ. ಆಳ್ವಾರರಲ್ಲಿ ಕುಲಶೇಖರರು, ತಿರುವಾಂಕೂರಿನ ರಾಜರಾಗಿದ್ದರು. ರಾಜ್ಯವಾಳಿದರೂ, ಪಾರಮಾರ್ಥಿಕ ಚಿಂತನೆ, ಭಕ್ತಿ ಮಾರ್ಗದ ಅನುಸರಣೆ, ಜಯದೇವ ಕವಿಯ ಪ್ರಸಿದ್ಧ ಕಾವ್ಯ ಆದ "ಗೀತ ಗೋವಿಂದ"ದಂತೆ ಪ್ರಸಿದ್ಧವಾದ ಭಕ್ತಿ ಪದ್ಯಗುಚ್ಛ ಕುಲಶೇಖರರ "ಮುಕುಂದ ಮಾಲೆ". ಇದು ಶ್ರೀವೈಷ್ಣವರಿಗೆ ಮಾತ್ರ ಅಲ್ಲ, ಭಕ್ತರಿಗೆ-ಭಕ್ತಿ ಸಾಹಿತ್ಯಕ್ಕೇ ಒಂದು ಅಪೂರ್ವ ಕೊಡುಗೆ. ಅಷ್ಟೇ ಭಗವದನುಭವದ ಆನಂದ, ಇವರ "ಪೆರುಮಾಳ್-ತಿರುಮೊಳಿ" ಎಂಬ ೩೦೦ ಪದ್ಯಗಳಲ್ಲಿ ಕಾಣಬಹುದಾದದ್ದು.

ಕವಿಹೃದಯವುಳ್ಳ ಇನ್ನೊಬ್ಬ ಭಕ್ತರು, ತೊಂಡರಡಿಪ್ಪೊಡಿಯಾಳ್ವಾರ್. 'ತೊಂಡ' ಎಂದರೆ 'ಭಕ್ತ' ಎಂಬುದಾಗಿ ಅರ್ಥ. ಅವರ "ಅಡಿಪ್ಪೊಡಿ" ಅಂದರೆ "ಪಾದಧೂಳಿ" "ಭಕ್ತಾಂಘ್ರಿರೇಣು" ಎಂದು ಸಂಸ್ಕೃತದಲ್ಲಿ ಹೆಸರು ಇವರಿಗೆ. ತಾವು ಭಕ್ತರ ಪಾದದ ಹುಡಿಯೆಂದು ಭಾವಿಸುವ ವಿನಯ. ಇವರ ಪದ್ಯಗಳು, ತಿರುಮಾಲೈ, ತಿರುಪ್ಪಳ್ಳಿಯೆಳುಚ್ಚಿ. ಹಿರಿಯ ಸಾಹಿತಿಗಳಾದ ಮಾಸ್ತಿಯವರು ಹೇಳುವಂತೆ, "ಕೇವಲ ಸಾಹಿತ್ಯವೆಂದೇ ಬಗೆದರೂ ಈ ಕೃತಿ ಅತ್ಯುತ್ತಮವಾದ ಕವಿತೆ ಎಂದು ಒಪ್ಪಬೇಕು. ಇದರ ನೋಟ ಕವಿಯದು, ಇದರ ಮಾತು ಕವಿಯದು, ಇದರ ಕಲೆ ಸಂಪೂರ್ಣವಾಗಿ ಕಾವ್ಯದ್ದು."[೬]

ತಿರುಪಾಣಿಯ 'ಅಮಲನಾದಿ ಪಿರಾನ್' ಕಾವ್ಯವನ್ನು ಮೊದಲೆ ಹೆಸರಿಸಿದೆ. ಆಗಿನ ಕಾಲದಲ್ಲಿ (ಕ್ರಿ. ಶ. ೮-೯ರ ಶತಕ) ಸಮಾಜದಲ್ಲಿ ತಾಂಡವವಾಡುತ್ತಿದ್ದ ಜಾತಿ ಪದ್ಧತಿಯಲ್ಲಿ ಭಕ್ತ ಭಗವಂತರ ಅನ್ಯಾದೃಶ ಸಂಬಂಧ ಹಾಗೂ ದೇವರು ಈ ಮನುಷ್ಯ ಮಾಡಿಕೊಂಡ ಎಲ್ಲ ಕಟ್ಟು-ಕಟ್ಟಳೆ ಮೀರಿದವನೆಂದು ತೋರ್ಪಡಿಸುವ ಘಟನೆ, ತಿರುಪಾಣಿಯವರ ಕಾವ್ಯದ ಅನೇಕ ಪದ್ಯಗಳಲ್ಲಿ ಒಡಮೂಡಿ ಬಂದಿದೆ. (ಇಂದೂ ಸುಧಾರಿತ ಯುಗದಲ್ಲಿಯೂ ಇದೇ ಮುಂದುವರಿದಿದೆ, ಆಗಿನಷ್ಟಿರದಿದ್ದರೂ.) ತಿರುಮಂಗೈ ಆಳ್ವಾರ್, ಕಳ್ಳತನ ಸುಲಿಗೆಗಳಲ್ಲಿ ಹಾಗೂ ಯೌವ್ವನಕ್ಕೆ ಸಹಜವಾದ ಕಾಮಿನಿಯರ ಬೇಟದಲ್ಲಿ ಮುಳುಗಿದ್ದು, ಲಕ್ಷ್ಮೀನಾರಾಯಣರೇ ಪ್ರಯಾಣಿಕರಂತೆ ಬರುವಾಗ

ಅವರನ್ನೇ ಕೊಳ್ಳೆಹೊಡೆದನೆಂದೂ, ಅನಂತರ ಸುಲಿಗೆಯ ಗಂಟನ್ನು ಎತ್ತಲು ಭಾರವೆನಿಸಿದಾಗ, ಲಕ್ಷ್ಮೀನಾರಾಯಣರ ಅವನಿಗೆ ಅಷ್ಟಾಕ್ಷರೀಮಂತ್ರ ಓಂನಮೋ ನಾರಾಯಣಾಯ ತಿಳಿಸಿ, ಅದರ ನೆರವು ಪಡೆದು ಗಂಟನ್ನು ತೆಗೆದೊಯ್ಯಿರೆಂದರೆಂದೂ ಪ್ರತೀತಿ. ಗಂಟನ್ನೆತ್ತಲು ನೋಡಿದಾಗ, ಶಿರುವಂಗೈಗೆ ದೇವರ ದರ್ಶನವಾಯಿತಂತೆ. ಅವನ ಹೃದಯ, ಭಕ್ತ ಹೃದಯವಾಯಿತಂತೆ. ಭಗವಂತನ ಪ್ರೀತಿ, ಪ್ರೇಮಕ್ಕೆ ಸಮನಾದದ್ದು ಇನ್ನಿಲ್ಲವೆಂಬುದನ್ನು ಮನಗಂಡ. ಪೆರಿಯ ತಿರುಮೊಳಿ, ತಿರುಕ್ಕುರುನ್ದಾಂಡಗಮ್, ತಿರುನೆಡುಂದಾಂಡಗಮ್, ತಿರುವೆಳುಕ್ಕುಟ್ರಿರುಕ್ಕೈ, ಶಿರಿಯತಿರುಮಡಲ್, ಪೆರಿಯ ತಿರುಮಡಲ್ ಎಂಬುವು ಈ ಆಳ್ವಾರರ ಪ್ರಬಂಧಗಳು.

ಆಳ್ವಾರರಲ್ಲಿ ಗುರುಭಕ್ತಿ ಪ್ರಾಮುಖ್ಯ ಕುರಿತು ಹಾಡಿದವರು ಮಧುರ ಕವಿಯಾಳ್ವಾರ್ ತಮ್ಮ "ಕಣ್ಣಿನುಣ್ ಶಿರುತ್ತಾಂಬು" ಪದ್ಯ ಮಾಲಿಕೆಯಲ್ಲಿ ಗುರುಗಳಾದ ನಮ್ಮಾಳ್ವಾರರನ್ನು ತಮ್ಮ ಗುರುಗಳಾಗಿ ಸ್ವೀಕರಿಸಿ, 'ಆಚಾರ್ಯದೇವೋಭವ' ನಿಷ್ಠೆಯನ್ನು ತೋರಿದವರು. ಇಲ್ಲೂ ಅಷ್ಟೆ ನಮ್ಮಾಳ್ವಾರರು "ವೆಳ್ಳಾಳ" ಎಂಬ ಪಂಗಡ. ಕುಲಕ್ಕಿಂತ ಗಣ-ಭಕ್ತಿಯ ಬಗ್ಗೆ ಕೊಟ್ಟ ಹಿರಿಮೆ ಮಧುರ ಕವಿಯವರದ್ದು. ನಮ್ಮಾಳ್ವಾರ್ ಯೌಗಿಕ ಪ್ರಭೆಯನ್ನು ಮನಗಂಡ ಅವರು ಒಂದು ಪ್ರಶ್ನೆ ಹಾಡಿದರಂತೆ : "ಪ್ರಕೃತಿಯ ಉದರದಲ್ಲಿ ಉದಯಿಸಿದ ಜೀವನು ಯಾವುದನ್ನೂ ತಿಂದು ಹೇಗಿರುತ್ತಾನೆ ?" ಎಂದು. ಆನಕ್ಕೆ ನಮ್ಮಾಳ್ವಾರ್ "ಅದನ್ನೇ ತಿಂದು ಅಲ್ಲೇ ಇರುತ್ತಾನೆ" ಎಂದರು. ಈ ಆಧ್ಯಾತ್ಮ ಸಂಬಂಧ ಮುಂದುರಿಯಿತು.

ನಮ್ಮಾಳ್ವಾರ್, ಆಳ್ವಾರ್‌ರಲ್ಲಿ ನಿಷ್ಠ ತಪಸ್ವಿ. ಅವರ ದಿವ್ಯಪ್ರಬಂಧ, ತಿರುವಿರುತ್ತಮ್, ತಿರುವಾಶಿರಿಯಮ್, ಪೆರಿಯ ತಿರುವಂದಾದಿ, ತಿರುವಾಯಿಮೊಳಿ-- ಎಂಬ ನಾಲ್ಕು ಕೃತಿಗಳು. ಭಗವಂತನನ್ನು ಪ್ರಿಯನೆಂದು ಭಾವಿಸಿ, ಪ್ರೇಯಸಿಯಂತೆ ಭಾವಿಸುವ ಭಕ್ತಿ. ಈ ಮಧುರ ಭಕ್ತಿಭಾವ ನಮ್ಮಾಳ್ವಾರರಲ್ಲಿ ಸ್ಪಷ್ಟರೂಪತಾಳಿದೆ. ನಮ್ಮಾಳ್ವಾರರು, ಅವರ ಗಾಢವಾದ ಚಿಂತನೆ, ಭಗವದಾಲೋಚನೆಗಳಿಂದಾಗಿ ವಿಶಿಷ್ಟಾದ್ವೈತದಲ್ಲಿ ಒಂದು ವಿಶಿಷ್ಟ ಸ್ಥಾನ ಪಡೆದಿದ್ದಾರೆ. ತನ್ನ ಕವಿತೆಯನ್ನು ಯಾವತ್ತೂ ನರಸ್ತುತಿಗೆ ಬಳಸುವುದಿಲ್ಲವೆಂದೂ, ಪರಮಾತ್ಮನ ಸ್ತುತಿಗೆ ಮಾತ್ರ ಅದು ವಿಾಸಲೆಂದು ಹೇಳುವ ಸ್ವತಂತ್ರರು ಭಕ್ತರಿಗೆಯಾರದು ಹಂಗು ? ಹನ್ನೆರಡರ ಶತಮಾನದ ಪ್ರಸಿದ್ಧ ಕವಿ ಹರಿಹರ "ನರನನ್ನು ಹೊಗಳೆ, ಶಿವನನ್ನು ಮಾತ್ರ ಹೊಗಳುತ್ತೇನೆ"ಂದು ಸಾರಲಿಲ್ಲವೆ ? ನಮ್ಮಾಳ್ವಾರರ ತಿರುವಾಯ್‌ಮೊಳಿಯ ಪದ್ಯದ ಒಂದು ಸಾಲಲ್ಲಿ ಅವರು ಹೇಳಿರುವುದೆ ಹೀಗೆ: "ಎನ್ನಾ ವಿಲ್ ಕವಿಯಾ ನಿನ್ನೊರು ವರ್ಕ್ಕುವ್ ಕೊಡುಕ್ಕಿರ್ಲೆ" "ನನ್ನ ನಾಲಗೆಯ ಇನಿದಾದ ಕವಿತೆಯನ್ನು ಇನ್ನಾರಿಗೂ ಕೊಡುವುದಿಲ್ಲ." ೧೧೦೨ ಪದ್ಯಗಳಿವೆ. "ಭಗವಂತನ ಮಹಾಮಹಿಮತ್ವವನ್ನು ಮನಗಂಡು ಅವನನ್ನು ಭಜಿಸಬೇಕೆಂದು ಮನಸ್ಸಿಗೆ ಬೋಧಿಸುವುದು ಈ ಪ್ರಬಂಧದ ಗುರಿ." ಪರತತ್ವವು ಶ್ರೀಮನ್ನಾರಾಯಣನೇ ವಿನಾ ಬೇರೆಯವರಲ್ಲ" (ತಿರುವಂದಾದಿ ೭ನೇ ಶ್ಲೋಕ)

ಭಗವಂತನ ಭಕ್ತರಾದವರು ಯಾವುದೇ ಜಾತಿಯಲ್ಲಿ ಹುಟ್ಟಿರಲಿ, ಅವರು ಎಷ್ಟೇ ಜ್ಞಾನ ವಿಹೀನರಾಗಿರಲಿ, ದೃಢ ಭಕ್ತಿಯೊಂದು ಇದ್ದರೆ ಅಂಥವರ ದಾಸರ ದಾಸನಾಗಲು ತಾನು ಸಿದ್ಧನೆನ್ನುತ್ತಾರೆ ನಮ್ಮಾಳ್ವಾರರು.

ಆಂಡಾಳ್ ಅಥವಾ ಗೋದಾದೇವಿ, ಆಳ್ವಾರ್ ಪರಂಪರೆಯಲ್ಲಿ ಬಂದಿರುವ ವಿಷ್ಣು ಭಕ್ತೆ. ಈಕೆ ಶ್ರೀರಂಗದ ಶ್ರೀರಂಗನಾಥನನ್ನೆ ವರಿಸಿದಳು. ಶ್ರೀವೈಷ್ಣವರಿಗೆ ಪರಮ ಪ್ರಿಯ ಆದ ''ತಿರುಪ್ಪಾವೈ'', ''ವಾರಣಮಾಯಿರಮ್'' ಇವಳು ರಚಿಸಿದ ಪದ್ಯ ಮಾಲಿಕೆ. ತಿರುಪ್ಪಾವೈ ಎಂದರೆ ಸಿರಿನೋಂಪಿ ಎಂಬುದಾಗಿ ಅರ್ಥ. ನೋಂಪಿ ಎಂದರೆ ವ್ರತ. ಭಗವಂತನನ್ನು ಪಡೆವ ವ್ರತವೇ ಸಿರಿನೋಂಪಿ. ಆಂಡಾಳ್‌ಗೈದದ್ದು ಅದನ್ನೇ. ಇಂದಿಗೂ (ಧನುರ್ಮಾಸ) ಮಾಗಿಯ ಹೇಮಂತ ಋತುವಿನಲ್ಲಿ (ಮಾರ್ಗ ಶಿರ ಮಾಸ ತಮಿಳಿನಲ್ಲಿ) ಮುಂಜಾವಿನಲ್ಲಿ ಪ್ರತಿ ದಿನವೂ ಒಂದು ತಿಂಗಳು ಹಾಡುವ ಮೂವತ್ತು ಪದ್ಯಗಳ ಮಾಲಿಕೆ, ತಿರುಪ್ಪಾವೈ. ಇದರಲ್ಲಿ ಗೋದಾದೇವಿಯ ಭಕ್ತಿಯ ಜೊತೆಗೆ, ಅವಳ ಪದ್ಯಗಳಲ್ಲಿ ಅಡಕವಾಗಿರುವ ಪೌರಾಣಿಕ ಭಾಗವತ, ಉಪನಿಷತ್ತುಗಳ ಪ್ರಜ್ಞೆ ಸಹ ತಿಳಿಯಬರುತ್ತದೆ.

ಆಳ್ವಾರರುಗಳ ಹರಿಭಕ್ತಿ ಆಂದೋಲನ, ಅದಕ್ಕೆ ಮೊದಲು ಹತ್ತನೇ ಶತಮಾನ ದಲ್ಲಿ ಬಂದ ರಾಮಾನುಜಾಚಾರ್ಯರು ಆಳ್ವಾರರ ದಿವ್ಯ ಪ್ರಬಂಧಗಳನ್ನು ಎಲ್ಲ ವಿಷ್ಣು ದೇವಾಲಯಗಳಲ್ಲೂ ಪೂಜಾ ಸಮಯದಲ್ಲಿ ಹಾಡಬೇಕೆಂದು ಆಚರಣೆಗೆ ತಂದ ಪದ್ಧತಿ, ಮುಂದುವರೆದಿದೆ. ಈಗಲೂ ತಿರುಪ್ಪಲ್ಲಾಂಡು, ತಿರುಪ್ಪಾವೈಯ ಶ್ಲೋಕ ನಿತ್ಯ ಹಾಡುತ್ತಾರೆ.

ಒಂದೆರಡು ಉದಾಹರಣೆಗಳನ್ನೀಯುವುದರ ಮೂಲಕ ಆಳ್ವಾರರ ಭಕ್ತಿ ಕವಿತೆ ಗಳ ಸೇವೆ ಗುರುತಿಸಿ ಅನಂತರ ಹರಿದಾಸರ ಆಂದೋಲನ-ಕೃತಿಗಳಲ್ಲಿ ಬರುವ ಚಿಂತನೆ ಯಲ್ಲಿನ ಸಾದೃಶ್ಯ ಮನಗಾಣಬಹುದು.

ಪೊಯ್‌ಗೈ ಆಳ್ವಾರರು ಹಾಡಿದ ಪದ್ಯಮಾಲಿಕೆಯ ಮೊದಲ ಪಾಶುರ ಹೀಗಿದೆ :

ವೈಯಂ ತಗಳಿಯಾವಾರ್ ಕಡಲೇ ನೆಯ್ಯಾಯ್
ವೆಯ್ಯ ಕದಿರೋನ್ ವಿಳಕ್ಕಾಗ ಶಯ್ಯ
ಶುಡರಾ (ಳ್) ಯಾನಡಿಕ್ಕೇ ಶೂಟ್ಟಿನೇನ್ ಶೊನ್‌ಮಾಲೈ
ಇಡರಾ (ಳ್) ನೀಙ್ಗುವೇಯೆನ್ರು

ಇದರ ಕನ್ನಡ ಅನುವಾದವನ್ನು ಶಾಸ್ತ್ರಿಯವರು ಸರಳಗನ್ನಡದಲ್ಲಿ ತಂದಿರುವುದಿಂತು :

ನೆಲವೇ ಹಣತೆಯಾಗಿ ಹರಿವ ಕಡಲು ನೆಯ್ಯಾಗಿ
ಬಿಸುಗದಿರ ಸೂರ್ಯನೇ ಸೊಡರ ಕುಡಿಯಾಗಿರಲು
ಎಡರ ಕಡಲಾದ ಸಂಸಾರ ಅಳಿಯಲಿ ಎಂದು

ಸೊಡರಂತಚಕ್ರವನು ಹಿಡಿದವನ ಕೆನ್ನಡಿಗೆ
ನುಡಿಮಾಲೆಯಿದನು ತೊಡಿಸಿದೆನು

ಇಲ್ಲಿ ಪ್ರಕೃತಿಯನ್ನು ಆಳ್ವಾರರು ತಮ್ಮ ಭಕ್ತಿ ಕವಿತೆಯಲ್ಲಿ ಉಪಯೋಗಿಸಿರುವ ವೈವಿಧ್ಯ. 'ಎಡರ ಕಡಲಾದ ಸಂಸಾರ' ಎಂಬಲ್ಲಿ ದ್ವಿತೀಯಾಕ್ಷರ 'ಡ' ಕಾರ ತರಂವ ಅಡಚಣೆಯ ಹೋಲಿಕೆ, ಮನೋಜ್ಞವಾಗಿವೆ. ಜಗತ್ತೆ ಒಂದು ಹಣತೆ. ಈ ನೆಲ ಆಧರಿಸಿದ ಕಡಲೇ ತುಪ್ಪ. ಬಿಸಿಕಿರಣಗಳ ಸೂರ್ಯನೆ ಹಣತೆಯ ಕುಡಿ ಎಂದರೆ ಹಣತೆಯನ್ನು ಬೆಳಗಿಸು ವವನು. ಅಲ್ಲಿನ ಪ್ರಭೆ, ಸೃಷ್ಟಿಕರ್ತನಾದ ದೇವರನ್ನು ನಿರ್ದೇಶಿಸುತ್ತದೆ. ಸುದರ್ಶನ ಚಕ್ರವನ್ನು ಜ್ಯೋತಿಗೆ ಹೋಲಿಸಿರುವ ಉಪಮೆ ಸಹಜವಾಗಿದೆ. ಅಂಥ ಚಕ್ರವನ್ನು ಹಿಡಿದವನ ಕೆಂಪಾದ ಪಾದಕ್ಕೆ (ಕೆನ್ನಡಿಗೆ) (ಇಲ್ಲಿ ಚಿಗುರಂಥ ಕೆಂಪೆಂದು ಭಾವನೆ) ಆಳ್ವಾ ರರು ನುಡಿಮಾಲೆಯನ್ನು ಆಭರಣವಾಗಿ ತೊಡಿಸುತ್ತಿದ್ದಾರೆ ಅಥವಾ ಸಮರ್ಪಿಸು ತ್ತಿದ್ದಾರೆ.

ಇದೇ ರೀತಿ ಭಗವದಂತಸ್ಸತ್ವವನ್ನು ಪೂದತ್ತಾಳ್ವಾರ್ ತಮ್ಮ 'ತಿರುವಂದಾದಿ'ಯ ಮೊದಲ ಪಾಶುರದಲ್ಲಿ ಹೀಗೆ ಬಣ್ಣಿಸುತ್ತಾರೆ :

ಅನ್ಬೇ ತಗಳಿಯಾ ಆರ್ವಮೇ ನೆಯ್ಯಾಗ
ಇನ್ಬುರುಗಿ ಶಿನ್ದೈಯಿಡು ತಿರಿಯಾ ನನ್ಬುರುಗಿ
ಜ್ಞಾನಚ್ಚುಡರ್ ವಿಳಕ್ಕೇತ್ತಿನೇನ್ ನಾರಣರ್ಕ್ಕು
ಜ್ಞಾನತ್ತಮಿಳ್ ಪುರಿನ್ದನಾನ್.

ಇದರ ಕನ್ನಡಾನುವಾದ :

ಭಕ್ತಿಯೇ ಹಣತೆ ಮನದಾಸೆಯೇ ನೆಯ್ಯಾಗಿ
ಆನಂದ ಅರುಗಿ ಭಾವದ ವರ್ತಿಯಾಗಿರಲು
ಬೆಳಗಿ ಹಚ್ಚಿದೆನರಿವಸೊಡರ, ಆತುಮ ಕರಗಿ
ತಿಳಿವೀನ ತಮಿಳರಿತ ನಾನು ನಾರಾಯಣಗೆ—

ಇಲ್ಲಿ 'ತಿಳಿವೀವ ತಮಿಳ್' ಎಂಬಲ್ಲಿ ಜನರ ಆಡುಭಾಷೆಯ ಪ್ರೇಮ, ಹಾಗೂ ಅವರ ಮನೆ ತಲುಪಬಲ್ಲ ಆಳ್ವಾರ್ ಭಾವನೆ. ಉಕ್ತಿಗೊಂಡಿದೆಯೆನ್ನಿಸುತ್ತದೆ. ಭಕ್ತಿಯ ಹಣತೆಯನ್ನು ಆಳ್ವಾರ್ ಬೆಳಗಿದ್ದಾರೆ.

ಇನ್ನೊಂದು ನೂರು ಪದ್ಯಗಳನ್ನು ಹಾಡಿದವರು ಪೇಯಾಳ್ವಾರ್. ತಮಿಳಿನಲ್ಲಿ 'ಪೇಯ್' ಅಂದರೆ ಹುಚ್ಚು, ಉನ್ಮಾದ ಎಂದರ್ಥ. ಅಂದರೆ ಭಗವಂತನ ವಿಷಯದಲ್ಲಿ

ಸದಾ ಹಂಚ್ಚರಂತಿದ್ದವರೆಂದೂ ಅರ್ಥ. ಶ್ರೀಹರಿಯನ್ನು ತವಮ್ಮ ಅಕ್ಷಯಸಿರಿಯೆಂದು ಭಾವಿಸುವ ಅವರ ಪದ್ಯ ಹೀಗಿದೆ :

ತಿರುಕ್ಕಣ್ಡೇನ್ ಪೊನ್ ಮೇನಿ ಕಣ್ಡೇನ್ ತಿಗಿಮುಮ್
ಅರುಕ್ಕವಣಿನಿಜಮುಂ ಕಣ್ಡೇನ್ ಶೆರುಕ್ಕಿಳರುಮ್
ಪೊನ್ನಾಟಿ ಕಣ್ಡೇನ್ ಪುರಿಶಜ್ಗಜ್ಯ ಕಣ್ಡೇನ್
ಎನ್ನಾವಿವಣ್ಣನ್ ಪಾಲಿನ್ಕ,—

ಶ್ರೀನಿವಾಸರ ಅನುವಾದದ ಸೊಗಸಿದು

ಸಿರಿಯನ್ನು ಕಂಡೆನು ಹೊನ್ನೊಡಲ ಕಂಡೆನು
ತೊಳಿವ ಸೂರ್ಯನ ತೆರದ ಚೆಲುಹೊಗರ ಕಂಡೆನು
ರಣವೆ ಹೊಳೆಯುವ ಹೊನ್ನ ಚಕ್ರ ಮುರಿ ಶಂಖವನು,

ಕಡಲ ಬಣ್ಣದ ನನ್ನ ಹರಿಯಂ ಬಳಿ ಕಂಡೆನಂ, ಇಲ್ಲಿರುವ ಕವಿ ಹೃದಯ ಗವುನಿಸು ವಂಥದು.

ತಿರುವುಳಿಶೈ ಅವರಲ್ಲಿ ಭಕ್ತಿಯೊಂದಿಗೆ ತತ್ವ ಚಿಂತನೆ ಕೂಡ ಹೆಚ್ಚು. ಹಾಗೂ ಕ್ಷುದ್ರ ದೇವತೆಗಳ ಉಪಾಸನೆ ಅವರು ನಿರಾಕರಿಸಿ 'ಏಕೋ ವೈ ನಾರಾಯಣೋ ಹರಿಃ' ಎಂಬ ಉಪನಿಷತ್ ವ್ಯಾಖ್ಯೆಯನ್ನು ಸಮರ್ಥಿಸುತ್ತಾರೆ.

ನೋಟಕ್ಕೆ ಸೊಗಸಾದ ಕ್ಷುದ್ರದೇವತೆಗಳನ್ನು ಪೂಜಿಸುವಿರೇಕೆ
ಕಿವಿಗೆ ಕೇಳಲು ಸಹಿಸಲಾಗದ ಕಟ್ಟುಕತೆಗಳನ್ನು ಕೇಳುವುದೇಕೆ ?...
ಬೇಡಿದರೂ ವರವೀಯಲಾರದ ದೇವರುಗಳಿವು. ವರಗಳತ್ತರೂ
ನಿಮ್ಮನ್ನು ಬದುಕಿಸಲಾರದ ವರಗಳವೀಯುವಂತವು, ಇವುಗಳ
ತೊರೆದು ಜಗದೇಕನಾಥನಾದ ನನ್ನ ಸ್ವಾಮಿಯನ್ನು ಶರಣು ಹೊಂದಿ...

ಇದರಂತೆಯೇ ಅನೇಕ ಭಕ್ತಿಯಂತ ಭಾವಗೀತೆಗಳೆಂಬ ತೆರನಾದ ಗೀತಗಳು ತಿರುವುಳಿಶೈ ಅವರ ಕೊಡುಗೆಯಾಗಿವೆ. ತನ್ನಲ್ಲೆ ಎದ್ದು ಪ್ರಸರಿಸಿ, ತನ್ನಲ್ಲೇ ಲೀನವಾಗುವ ಅಲೆ ಗಳುಳ್ಳ ಬಿಳಿಫೇನವುಯ ಕಡಲಂತೆ ನಿನ್ನಲ್ಲಿ ಹುಟ್ಟಿದ (ನಿಚ್ಚುವುಮ್ ತಿರಿಬವುವ್ — ಚರಾಚರಗಳೆಲ್ಲವೂ ನಿನ್ನಲ್ಲ ಲೀನವಾಗುವುವು (ನಿನ್ನುಳೇಯಡಂಜ್ಗು ದಿನಲ್ಲಿ...).

ಕುಲಶೇಖರಾಳ್ವಾರ್ ಹಾಡಿದ ಪೆರುವಾಳ್ ತಿರುಮೊಳಿ (ಭಗವಂತನ ಸಿರಿನುಡಿ) ವುನ್ನೂರು ಪದ್ಯಗಳ ಗೊಂಚಲು. ಅವುಗಳಲ್ಲೊಂದರ ಭಾವಾನುವಾದ ವಾತ್ರ ನೀಡ ಲಾಗಿದೆ : ಇದರಿಂದ, ಅರಸರಾದರೂ ಕುಲಶೇಖರರು ಪ್ರಕೃತಿಗೆ ಎಷ್ಟು ಹತ್ತಿರಾಗಿ ದ್ದರು ಎಂಬುದನ್ನು ವ್ಯಕ್ತಪಡಿಸುತ್ತದೆ :

ಮಳೆಹುಯ್ಯದ ಮೇಘಗಳು ಎಷ್ಟು ಕಾಲದವರೆಗೆ ಮರೆತಿದ್ದರೂ
ಹಚ್ಚನೆಯ ಪಯಿರು ಮಾತ್ರ ಕಕ್ಕಿತ್ತಿ ಮುಗಿಲನ್ನೇ ಎದುರು
ನೋಡುವಂತೆ ಅನುಭವಿಸಿಯೇ ಕಳೆಯಬೇಕಾದ ದುಃಖವನು
ನೀನು ಹೋಗಲಾಡಿಸದಿದ್ದರೂ ನನ್ನ ಮನ ನಿನ್ನ ಕಡೆಗೇ ನೋಡುತ್ತಿದೆ.

ಅಟ್ಟಹಾಸದ ಅರಸನಾಗಿರುವುದಕ್ಕಿಂತ ತಿರುವೇಂಗಡದ ಬೆಟ್ಟಗಳಲ್ಲಿ ಸ್ವೇಚ್ಛೆಯಾಗಿ ಹರಿದಾಡಲು ಕಾಡುಹೊಳೆಯಾಗಿರುವುದು ಲೇಸೆನ್ನುತ್ತಾರೆ ಕಲಶೇಖರರು.

ಶ್ರೀವೈಷ್ಣವರಿಗೆ ನಿತ್ಯ ಅನುಸ್ಥಾನ ಮಂತ್ರ ಆದ, ಪೆರಿಯಾಳ್ವಾರ್ ಅವರ 'ತಿರುಪ್ಪಲ್ಲಾಂಡು' ಭಗವಂತನಿಗೆ ಹಾಡಿದ ಪರಾಕು ನುಡಿಗಳ ಸಂಕಲನ.

ಪಲ್ಲಾಂಡು ಪಲ್ಲಾಂಡು ಪಲ್ಲಾಯಿರತ್ತಾಂಡು
ಪಲಕೋಟಿ ನೂರಾಯಿರಂ
ಮಲ್ಲಾಂಡ ತಿಂಡೋಳ್ ಮಣಿವಣ್ಣಾವುನ್
ಶೆವ್ವಡಿ ಶೆವ್ವಿ ತಿರುಕ್ಕಾಪ್ಪು.

.ನಿವಾಸರ ಅನುವಾದ :

ಪಲಕಾಲ ಪಲಕಾಲ ಪಲವು ಸಾವಿರ ಕಾಲ ಪಲಕೋಟಿ ನೂರು ಕಾಲ
ಮಲ್ಲರನ್ನು ಗೆದ್ದ ನಿಡುದೋಳ ಮಣಿವರ್ಣಾ ನಿನ್ನ ಕೆನ್ನಡಿಯು
ಕೆಂಪಿಗೆ ರಕ್ಷೆ ಇರಲಿ.

ಪಂತನಲ್ಲಿ ದಾಸ್ಯ-ಕೈಂಕರ್ಯ ಭಾವವನ್ನೆ ಆಳ್ವಾರರು ಕೋರಿ, ತಳೆಯಲಿಚ್ಛಿಸುವುದು. ಡಾಳ್‌ದೇವಿ ಹಾಡಿದ ತಿರುಪ್ಪಾವೈ ಗೋಪಿ-ಕೃಷ್ಣರ ಸಖ್ಯ, ಮಧುರಭಾವ, ಹಾಗೂ ನೊಡನಿರೀವದನ್ನು ಕೋರುವುದನ್ನು ಉದ್ದೇಶವಾಗುಳ್ಳ ಪದ್ಯ ರಚನೆ. ''ಏಲೋ ಪಾವಾಯ್'' ಎಂಬುದು 'ತಿರುಪ್ಪಾವೈ' ಕೃತಿಯ ಮೂವತ್ತು ಹಾಡುಗಳ ಪಲ್ಲವಿ. ಏ ಓರ್ ಎಂ ಪಾವಾಯ್-(ಹೇಳಿದ್ದನ್ನು ಕೈಗೊಂಡು, ಆಲೋಚಿಸಿ, ಹೆಣ್ಣೆ ರ್ಥ ಮಾಡುತ್ತಾರೆ) ಆಳ್ವೆದುಂಪೇಳಿನ್ನ ಹೆಣ್ಣೆ ಎಂದು ಇಟ್ಟುಕೊಳ್ಳಬಹುದು. ರ ಮೂವತ್ತು ಪದ್ಯ, ಮೂವತ್ತು ದಿನ ಹಾಡುವಂಥ ವ್ರತ. ಪ್ರತಿ ಪದ್ಯದಲ್ಲೂ ಅನುಸರಿಸುವ ಶ್ರೀಮನ್ನಾರಾಯಣನೇ ಪರದೈವ ಎಂಬ ಭಾವನೆ, ಶ್ರೀವೈಷ್ಣವ ವೇ ಹಾಸುಹೊಕ್ಕಾಗಿವೆ. ಇದರ ಒಂದು ಅನುವಾದಿತ ಸಾಲು, ಆಂಡಾಳ್ ಮಳೆ ಪ್ರಕೃತಿಗೆ ಹೇಗೆ ಹಾಗೆ ಪರಮಾತ್ಮ ಕೃಪೆ ತಾನೆಂಬ ಧ್ವನಿಗೂಡಿಸಿಕ್ಕಲಿವೆ :

ಮಳೆಯ ಒರೆಯಾ ಇನಿತು ನಮ್ಮ ಕೈಯಾ ಬಿಡಬೇಡ, ಕಡಲೊಳು ಹೊಕ್ಕು
ನೀರನು ಹೀರಿ ಗುಡುಗಿ ಬಾನೆಲ್ಲವ ತುಂಬು. ನಮ್ಮೊಡೆಯನ ಒಡಲಂತೆ
ನಿನ್ನಮೈ ಶ್ಯಾಮಲವರ್ಣವಾಗಲಿ, ನಮ್ಮೊಡೆಯನ ತೋಳಿನಲಿ ಬೆಳಗುವ
ಚಕ್ರದಂತೆ ನಿನ್ನ ಮಿಂಚು ಮಿಂಚಲಿ, ನಮ್ಮೊಡೆಯನ ಬಲಮುರಿಶಂಖ
ದಂತೆ ನಿನ್ನ ಗುಡುಗು ಮೊಳಗಲಿ. ಇನ್ನು ತಾಳದೆ ಸ್ವಾಮಿಯ ಬಿಲ್ಲಿನಿಂದ
ಚಿಮ್ಮುವ ಶರವಳೆಯನು ಹೋಲುವಂತ ಮಳೆ ಹುಯ್ದು ಲೋಕವನು
ಬಾಳಿಸು. ನಾವುಗಳು ಮಾರ್ಗಳಿ ತಿಂಗಳಲಿ ನೀರಾಡಿ ಮುದಿಸಿ ನಮ್ಮ
ವ್ರತವನು ಮುಗಿಸಲ್ಬ್ಯ-ಎಲೋರೆಯಾವಾಯ್

ಇಂಥ ಮಧುರಭಾವ, ಶ್ರೀಪಾದರಾಜರ ಭ್ರಮರಗೀತ, ವ್ಯಾಸರಾಯರ ವೇಣುಗೀತ ಗಳ ಸಾಲುಗಳಲ್ಲೂ ಪ್ರತಿಬಿಂಬಿಸುತ್ತದೆ.

ತಿರುಪಾಣಾಳ್ವಾರ್' 'ಅಮಲನಾದಿ ಪಿರಾನ್' ಭಕ್ತಿಯಂತ ಭಾವಗೀತೆಯ ಬಗ್ಗೆ ಹಿಂದೆ ಒಂದು ಮಾತು ಹೇಳಿಸಿದೆ. ಅವನಿಗೆ ಹೋಲುವಂಥವರು ವಚನಕಾರ ಮಾದಾರ ಚೆನ್ನಯ್ಯ ಹರಿದಾಸರಾದ ಕನಕದಾಸರು, ಉತ್ತರದ ಕಬೀರ ಹೀಗೆ. ತೊಂಡರಡಿಪ್ಪೊಡಿ ಆಳ್ವಾರರು ಕುಲದ ಬಗ್ಗೆ ಮಾಡುವ ವ್ಯಾಖ್ಯೆ ಗಮನಿಸುವಂಥದು. ಭಕ್ತನಾದವನು ಹುಟ್ಟಿನಿಂದ ಯಾವುದೆ ನೀಚಕುಲಕ್ಕೆ ಸೇರಿದ್ದರೂ ಅವನ ಪಾದಸೇವೆ ಉತ್ತಮ ಆದದ್ದು. ಎಲ್ಲ ಭಕ್ತರಲ್ಲೂ ಭಗವಂತನಿರುವನೆಂಬುದೆ ಆಳ್ವಾರರು ಕಂಡುಕೊಂಡ ಸತ್ಯ.

ಅಡಿ ಮೈಯಿಲ್ ಕಡಿಮ್ಮೆಯಿಲ್ಲಾ ಅಯಲ್ ಶುದುಪ್ಪೇದಿ ಮಾರಿಲ್
ಮುಡಿಮೈಯಿಲ್ ಕಡಮ್ಮೆ ಪಟ್ಟಿ ಕುಕ್ಕರೀಲ್ ಪಿಜಪ್ಪರೇಲುಮೆ
ಮುಡಿಯಿನಲ್ ತುಳಬಮ್ ವೈತ್ತಾಯ್ ಮೊಯ್ಯಳನ್ನುತೆಯ್ಯುಮೆ
ಅಡಿಯರೇ ಉಹತ್ತಿಪ್ಪೋಲುಮ್ ಅರಂಗಮಾನಹರುಳಾನೇ॥

ಶಿರದಲಿ ತುಳಸಿ ಮಾಲೆ ಧರಿಸಿದ ರಂಗನಾಥ! ನಾಲ್ಕು ವೇದಗಳನ್ನು ಅಭ್ಯಾಸ ಮಾಡಿಯೂ ನಿನ್ನ ಕೈಂಕರ್ಯವೇ ಪುರುಷಾರ್ಥ ಎಂಬುದನ್ನರಿಯದವರಿಗಿಂತ, ಪಂಚಮ ಕುಲದಲ್ಲಿ ಜನಿಸಿರುವವರಾದರೂ ನಿನ್ನ ಭಕ್ತರಾಗಿ ನಿನ್ನ ಶ್ರೀಪಾದಗಳಲ್ಲಿ ಅಂತರಂಗ ಭಕುತಿ (ಕೈಂಕರ್ಯ-ಸೇವೆ) ಮಾಡಿಕೊಂಡಿರುವ ದಾಸರೇ ಮೇಲು ಅಲ್ಲವೆ ? ಇಲ್ಲಿ ಕುಲಮುಖ್ಯ ವಲ್ಲ. ಭಗವದ್ಭಕ್ತಿ ಮುಖ್ಯ. ಇಂಥದೇ ಇನ್ನೊಂದು ಪದ್ಯದಲ್ಲಿ ಬ್ರಾಹ್ಮಣ ಕುಲದಲ್ಲಿ ಹುಟ್ಟಿದವರಾದರೂ ಅಂಥ ಜನ ನಿನ್ನಕೈ ನಿಷ್ಠೆಯುಳ್ಳ ನಿನ್ನ ಭಕ್ತರ ಕುಲಹೀನತೆ, ನಡವಳಿ ಪ್ರಶ್ನಿಸುವರಲ್ಲ, ಆ ಕ್ಷಣದಲ್ಲೇ ಅವರೇ ಚಾಂಡಾಲರಾಗುವುದಿಲ್ಲವೆ ತಂದೆ ?' ಎಂದು ಪ್ರಶ್ನಿಸುತ್ತಾರೆ. ಆವರ ಮೇಲು ಜಾತಿಯವರಿಂದ ಅನುಭವಿಸಿರಬಹುದಾದ ನೋವು ಇಲ್ಲಿ ಕಾಣುತ್ತದೆ.

ತಿರುಮಂಗೈ ಆಳ್ವಾರರಂತೂ ತಾವು ಮೊದಲು ನಡೆಸಿದ ಕಳ್ಳತನ, ವಿಷಯಾಸಕ್ತ ಬದುಕನ್ನು ಮತ್ತೆ ಮತ್ತೆ ನೆನಸಿ ಪರಿತಪಿಸುತ್ತಾರೆ. ಒಳ್ಳೆಯ ಗತಿಗೆ ಬಾಳಿಸುವ ದಾರಿ ತೋರೆಂದು ಹಂಬಲಿಸುತ್ತಾರೆ. ಬೆಸ್ತರಿಗೆ ಒಡೆಯನಾದ ಗುಹನ ಮೇಲೆ ಕೃಪೆ ಮಾಡಿದೆ, ಕಪಿಯಾದ ಹನುಮಂತನನ್ನು ಪ್ರಾಣಸಖನೆಂದಪ್ಪಿದೆ ; ತಾವರೆಯ ಕೊಳದಲ್ಲಿ ತನಗೆ ಸಿಲುಕಿದ ಕಮಲದ ಹೂವನ್ನೆ ನಿನಗೆತ್ತಿ ಅರ್ಪಿಸಿ ಮೊರೆಯಿಟ್ಟ ಗಜೇಂದ್ರನಿಗೆ ಕರುಣಿಸಿ ಕಾಯ್ದೆ, ನಿನಗೆ ನನ್ನ ಮೇಲೆ ದಯೆಬಾರದೆ, ''ಕುಲಂ ತಾರುಂ ಶೆಲ್ವಂತಂದಿಡುಂ'' ''ಕುಲವನ್ನು ತರುವ ಸಿರಿಯನ್ನು'' ಭಕ್ತಿ ಭಾಗ್ಯ ಎಲ್ಲ ಕುಲದವರನ್ನೂ ಪಾಲಿಸುತ್ತ ದೆಂದರು ತಿರುಮಂಗೈ.

ಕೋಲೂರಿ ಮುಂದೆ ನಡೆಯುವಂಥ ಮುಪ್ಪು ನಮ್ಮ ಮೇಲೆ
ಸುಳಿಯುವ ಮುನ್ನ,
ಕಾಲೂರಿನಿಂತಾಗ ತೂರಾಡುವ ಗತಿ ನಮಗೆ ಬರುವ ಮುನ್ನ,
ಪೆತ್ತ ತಾಯಂತೆ ನಟಿಸಿ ಬಂದ ರಕ್ಕಸಿಯ
ಉಸಿರನ್ನು ಹೀರಿದ ನಮ್ಮ ಸ್ವಾಮಿಗೆ ತಲೆಬಾಗುವ

ಈ ಸಾಲುಗಳೊಂದಿಗೆ ಬಸವಣ್ಣನ ವಚನ ಸಾಲುಗಳನ್ನು ಅನ್ವಯಿಸಬಹುದು :

ನೆರೆ ಕೆನ್ನೆಗೆ ತೆರೆಗಲ್ಲಕೆ ಶರೀರಗೂಡು ಹೋಗದ ಮುನ್ನ
ಹಲ್ಲು ಹೋಗಿ ಬೆನ್ನುಬಾಗಿ ಅನ್ಯರಿಗೆ ಹಂಗಾಗದ ಮುನ್ನ
ಕಾಲಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ,
ಮುಪ್ಪಿಂದೊಪ್ಪವಳಿಯದ ಮುನ್ನ.
ಮೃತ್ಯು ಮುಟ್ಟದ ಮುನ್ನ ಪೂಜಿಸುವ ನಮ್ಮ ಕೂಡಲಸಂಗಮದೇವನ,

ಗುರುಭಕ್ತಿಯನ್ನು ಪ್ರಮುಖವಾಗಿ ಪರಿಗಣಿಸಿದವರು ಒಂಬತ್ತನೆ ಶತಮಾನದಲ್ಲಿದ್ದ ಮಧುರಕವಿಯಾಳ್ವಾರರು. ಅವರಿಗೆ ನಮ್ಮಾಳ್ವಾರರನ್ನು ಕಂಡರೆ ಅನನ್ಯ ಗುರುಭಕ್ತಿ. ದೇವರನ್ನು ಬಯಸುವ ಮಧುರ ಕವಿ, ನಮ್ಮಾಳ್ವಾರರನ್ನೆ ನಂಬಿ, ಶರಣಾದರು. 'ಕಣ್ಣಿನುಣ ಶಿರುತ್ತಾಂಬು' ಅಂಥ ಪಾಶುರಗಳ ಗುರುಸ್ತುತಿ. ಇದೇ ರೀತಿಯ ಪ್ರೇಮ ನಾವು ಕಾಣುವುದು ವಚನಕಾರರ ಗುರು–ಲಿಂಗ–ಜಂಗಮ ಸಂಬಂಧದಲ್ಲಿ. ಹಾಗೂ ''ಗುರುವಿನ ಗುಲಾಮನಾಗುದ ತನಕ ದೊರೆಯದಣ್ಣ ಮುಕುತಿ'' ಎಂದು ಹಾಡಿದ ಹರಿದಾಸರಲ್ಲಿ.

ನಮ್ಮಾಳ್ವಾರರ ಕೆಲವು ಸಾಲುಗಳು ಸಮಾಜದ ಆಗಿನ (ಹಾಗೂ ಈಗಲೂ ಇರುವ) ಜಾತಿ ಸಮಸ್ಯೆ–ನೋವನ್ನು ಕುರಿತು ಹಾಡಿದಂತಿವೆ. ಭಗವಂತನನ್ನು ಅರಿತವರ

ಅಡಿಯಾಳಂಗಳ ಅಡಿಯಾಳು ತಾನು ಎಂದು ವಿನಯ ಮೆರೆಯುವ ಆಳ್ವಾರರ ಕವಿ ಹೃದಯ ಒಂದೆಡೆ ಹೀಗೆ ಹಾಡುತ್ತದೆ :

ಕೋಗಿಲೆಗಳಿರಾ ಇಂಚರದ ಕೂಗು ನಿಮ್ಮದು
ಕೆಂದಾವರೆಯಂತಹ ಕಣ್ಣಿನ ಸೊಬಗಿನ ನನ್ನ ಸ್ವಾಮಿಯ ಕಡೆಗೆ ನನ್ನ
ದೂತಿಯರಾಗಿ ಹೋಗಬಾರದೇಕೆ ?
ಅದರಿಂದ ನಿಮಗೇನು ಕೆಡುಕುಂಟಾದೀತು ?

ಎಂಬುದಕ್ಕೆ ೧೨ ಶತಮಾನದ ಶಿವಶರಣೆ ಮಹಾದೇವಿಯಕ್ಕ ಆಡಿರುವ ಒಂದು ವಚನ ನೆನಪಾಗುತ್ತದೆ.

ಚಿಲಿಮಿಲಿ ಎಂದೋಡುವ ಗಿಳಿಗಳಿರಾ, ನೀವು ಕಾಣಿರೇ, ನೀವು ಕಾಣಿರೇ,
ಸರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೇ, ನೀವು ಕಾಣಿರೇ
ಎರಗಿ ಬಂದಾಡುವ ದುಂಬಿಗಳಿರಾ ನೀವು ಕಾಣಿರೇ, ನೀವು ಕಾಣಿರೇ
......ಚೆನ್ನಮಲ್ಲಿಕಾರ್ಜುನದೇವನೆನ್ನಿರ್ದಹನೆಂದು
ನೀವು ಹೇಳಿರೇ. ನೀವು ಹೇಳಿರೆ.

ಹೀಗೆಯೇ ಆಳ್ವಾರರು ಹಾಡಿರುವ

'ನನ್ನ ಹೃದಯದಲ್ಲಿ ನೀನಿರುವೆ ಎಂದು ಬಲ್ಲೆ. ನನ್ನ ಹೊರಗೂ ನೀನಿರುವೆ ಎಂದು ಬಲ್ಲೆ. ಇದನರಿತೂ ನನಗೆ ತೃಪ್ತಿಯಿಲ್ಲ. ನಿನ್ನನ್ನು ನನ್ನೆರಡು ಕಂಗಳಿಂದ ಕಾಣಬೇಕೆಂಬ ಚಪಲ ನನಗೆ. ಇದು ನನ್ನ ಹೃದಯದ ಆಸೆ. ಇದು ತೋರುವ ಬಗೆ ಹೇಗೆ ?'' ನಮ್ಮಾಳ್ವಾರರ, ಪ್ರಣಯಿಯ ಪಾತ್ರ, ನಿರ್ವಹಣೆ, ವಿರಹ, ಕುರಿತ-ಭಗವಂತನಿಗಾಗಿ, ಎಲ್ಲ ಅವರ ತಿರುವಿರುತ್ತಮ್, ತಿರುವಾಶಿರಿಯಮ್ ಪೆರಿಯ ತಿರುವಂದಾದಿ, ತಿರುವಾಯ್‌ಮೊಳಿ, ಪದ್ಯಗಳಲ್ಲಿ ಓತಪ್ರೋತವಾಗಿ ಹರಿದಿದೆ ಹಾಗೂ ಅವರ ಭಕ್ತ-ಭಗವಂತ ವಿರಹವೆ ಒಂದು ಭಾವಗೀತೆಯಾಗಿ ನಿಲ್ಲುತ್ತದೆ.

ಒಟ್ಟುಗೂಡಿ ದಟ್ಟವಾಗಿ ಗಾಳಿಗೆ ಹಾಟಾಡುತ
ನವಸೋನೆಯ ನೆರಚಿ ಯೆರಚಿಭೀತಿಯನ್ನೆ ಬೀಳುವ
ಬಾನಿನೊಳಗೆ ಹೋರುವ ಕರಿ ಗೂಳಿಗಳೇ ಏನಿವು ?
ಇಲ್ಲದಿರಲು ನನ್ನ ಪಾಡೆ ಚಳಿಗಾಲವೆ ಬಂದಿತೋ
ಹಿಂಗಾರಿನ ತಪ್ಪುವಾಗಿ ಅವನ ಚೆಲುವ ತಳೆದುದು...
ಆತನಿಂದ ದೂರವಾದ ವಿರಹ ದುಃಖವೆ

ಭಕ್ತಿಯನ್ನೆ ತಮ್ಮ ಸರ್ವಸ್ವವಾಗಿ ಉಳ್ಳ ನಮ್ಮಾಳ್ವಾರರಿಗೆ ಪ್ರಪಂಚವೇ ಒಂದು ದೇಗುಲವಾಗಿ ಕಾಣುತ್ತದೆ. ಪ್ರಕೃತಿಯ ಯಾವುದೆ ಚೆಲುವೂ ಆ ಪರಮ ಸೌಂದರ್ಯದ ಕುರುಹನ್ನು ತೋರುತ್ತದೆ. ನಮ್ಮಾಳ್ವಾರ್ ಬಳಸಿದ ತಮಿಳು, ಹೇಳಬೇಕಾದ್ದನ್ನು ಹೇಳುವ ರೀತಿ ಹೇಳಿ ನೇರ ಮನಸ್ಸಿಗೆ ತಲುಪಿಸಿ, ತನ್ನ ಉದ್ದೇಶ ಸಾರ್ಥಕ್ಯ ಮಾಡಿಕೊಳ್ಳುವಂಥ ಸರಳ, ಓಜಸ್ವಿ ಭಾಷೆ; ಅವರು ಸಂತರು ಮಾತ್ರ ಅಲ್ಲ ಒಬ್ಬ ಭಕ್ತ ಕವಿಯೂ ಕೂಡ.

ಇದಿಷ್ಟು ಆಳ್ವಾರರ ಭಕ್ತಿಯ ಆಂದೋಲನ. ಹೆದ್ದೊರೆಯಾಗಿ ಎದ್ದು ಹೆದ್ದೊರೆಯಾಗಿ ಹರಿದು, ಕಡಲಾಗಿನಿಂತ ವಿಶಾಲ ದರ್ಶನ. ಅವರಲ್ಲಿ ಭಕ್ತಿಗೆ ಪ್ರಾಧಾನ್ಯ, ತರ್ಕ ಬುದ್ಧಿಗಿಂತ ಭಾವಕ್ಕೆ ಹೆಚ್ಚು ಬೆಲೆ. ಜ್ಞಾನ ಮಾರ್ಗಕ್ಕಿಂತ ಭಕ್ತಿಮಾರ್ಗವು ಸುಲಭವೆಂದು ತೋರಿಕೊಟ್ಟವರು ಅವರು. ಭಗವಂತನಲ್ಲಿ ಶರಣಾಗತಿ, ಅವನೊಬ್ಬನೆ–ನಾರಾಯಣನೊಬ್ಬನೆ ಪರದೈವ-ಎಂಬ ಏಕದೇವೋಪಾಸಕರು. ಸಗುಣೋಪಾಸಕರು, ವಿಷ್ಣುವಿನ ಸಾಕಾರ ರೂಪಗಳನ್ನು ಒಲಿದು, ಸಾಕ್ಷಾತ್ಕರಿಸಿಕೊಂಡವರು. ಇಡೀ ಜಗತ್ತೆ ಭಗವಂತನ ಸೃಷ್ಟಿ, ಶರೀರ. ಚೇತನಾಚೇತನ ವಸ್ತುಗಳೆಲ್ಲ ಅವನ ಪ್ರಕಾರ ಹಾಗೂ ಅವನಿಗೆ ಶೇಷ ಭೂತ. ಪರಮಾತ್ಮ ಶೇಷ, ಜೀವಾತ್ಮ ಶೇಷಿ. ಅವನು ಸತ್ಯ ಸೌಂದರ್ಯಕ್ಕೆ ನೆಲೆ, ಸತ್ಯದಾನಂದ ಕಲ್ಯಾಣಗುಣ ಪರಿಪೂರ್ಣ, ಕೃಪಾಳು. ಸದಾ ನಿತ್ಯಾನಪಾಯಿನಿ, ಹಾಗೂ ಆತನ ವೃಕ್ಷಸ್ಥಲ ನಿತ್ಯವಾಸ ರಸಿಕೆಯಾಗಿರುವ ಕರುಣೆಗೆ ನೆಲೆ ಲಕ್ಷ್ಮೀದೇವಿಯೆ ಕೃಪೆಯ ಮೂರ್ತಿ. ಆಳ್ವಾರರಿಗೆ ಭಗವಂತನವತಾರಗಳಲ್ಲಿ ತುಂಬು ವಿಶ್ವಾಸ ತಂದೆ, ತಾಯಿ, ಸಖಿ, ಬಂಧು, ಗುರು, ಹೀಗೆಲ್ಲ ದೇವರು ಅವರಿಗೆ ಕಂಡಿದ್ದಾನೆ. ಆ ಭಕುತಿ ವೈವಿಧ್ಯ ಅವರು ಅನುಭವಿಸಿದ್ದಾರೆ.

ಆಳ್ವಾರರು ಮನುಜ ನಿರ್ಮಿತ ಜಾತಿ ಕುಲಕ್ಕೆ ಮಾನ್ಯತೆ ನೀಡಿಲ್ಲ. ಪರಮಾತ್ಮನನ್ನೊಲಿದ ಭಕ್ತರಿಗಾವ ಕುಲ ? ಎಂದು ತಮ್ಮ ಪದ್ಯಗಳ ಮೂಲಕ ಘೋಷಿಸಿದರು, ಆದರೆ, ಅವರು ವರ್ಣಾಶ್ರಮ ವ್ಯವಸ್ಥೆ ವಿರೋಧಿಸಿ ಕ್ರಾಂತಿ ಮಾಡಿದರೆಂಬುದು ತಿಳಿದು ಬಂದಿಲ್ಲ.

ಭಗವತ್ಕೈಂಕರ್ಯ-ಭಾಗವತ ಕೈಂಕರ್ಯ ಒಂದೇ ಎಂಬುದು ಆಳ್ವಾರರ ನಿಲುವು. 'ನಾನು ನನ್ನದು' ಎಂಬುದನ್ನು ತೊರೆದು ಅಹಂಕಾರ ಮಮಂತೆ ತೊರೆದು, ಫಲಾಪೇಕ್ಷೆ ಇರದೆ ಭಗವಂತನಲ್ಲಿ ಭಕ್ತಿ, ಸೇವೆಗೈಯುವುದೆ ಅವರ ಉದ್ದೇಶ, ಧ್ಯೇಯ. ಇದಕ್ಕೆ ಅವರು ಹೆಚ್ಚಿನ ಮಹತ್ವ ನೀಡಿದರು.

ಕರ್ಣಾಟಕದಲ್ಲಿ ಹರಿದಾಸರು ಬಂದದ್ದು ಆಳ್ವಾರರುಗಳಾದ ಐದು ಶತಕದ ನಂತರ. ದೇಶ, ಭಾಷೆ, ಬೇರೆಯಾದರೂ ಚಿಂತನೆ, ಭಾವನೆ ಒಂದೇ. ಭಕ್ತಿ, ದೇಶ ಕಾಲಾತೀತ. ಹರಿದಾಸರು ವಿಷ್ಣು ಭಕ್ತರು, ನಾರಾಯಣನೇ ಶ್ರೀಹರಿಯೇ ಸರ್ವತಂತ್ರ ಸ್ವರೂಪ, ಅನಂತಕಲ್ಯಾಣಗುಣಗಣಪರಿಪೂರ್ಣನೆಂದು ನಂಬಿದವರು. ಆಳ್ವಾರರು ವಿಶಿಷ್ಟಾದ್ವೈತ ಪ್ರತಿಪಾದಕರಾದರೆ, ಹರಿದಾಸರು ದ್ವೈತ ಮತ ಪ್ರತಿಪಾದಕರು. ಹರಿಸರ್ವೋತ್ತಮತ್ವ ಪ್ರತಿಪಾದನೆ, ಹರಿದಾಸರ, ಆಳ್ವಾರರ ಏಕಮೇವಾಧ್ಯೇಯ, ಆದರೆ,

ತಾತ್ವಿಕವಾಗಿ ಮಾತ್ರ ದ್ವೈತ ತತ್ವ-ಮಧ್ವಮತ ಪದ್ಧತಿಯನ್ನು ಬಿಡಬೇಡಿ, ಎಂದು ಅದ್ವೈತ-ವಿಶಿಷ್ಟಾದ್ವೈತ ತತ್ವ ದರ್ಶನಗಳನ್ನು ಖಂಡಿಸಿದರು.

ಆಳ್ವಾರರಂತೆಯೇ ಹರಿದಾಸರೂ ಜಾತಿ ಕುಲ ಭೇದ ಭಕ್ತಿಯೆದುರು ಗೌಣವೆಂದು ಸಾರಿದರು. ಆದರೆ, ಅವರು ವರ್ಣಾಶ್ರಮ ವಿರೋಧಿಗಳಲ್ಲ. ಅವರದ್ದು ಸೌಮ್ಯ ನಿರಾಕರಣವಾದ. ಇದ್ದುದರಲ್ಲಿ ಹೊಂದಿಕೊಂಡು ಹೋಗುವವರು. ಆಳ್ವಾರರಂತೆಯೆ ಪುರಾಣ-ವೇದಾಗಮ, ಉಪನಿಷತ್ತು, ಭಗವದ್ಗೀತೆ ಎಲ್ಲದರ ಪ್ರಮಾಣ ಹರಿದಾಸರು ಸ್ವೀಕರಿಸಿದವರು. ಹರಿದಾಸರ ಕೃತಿಗಳಲ್ಲಿ ಭಾಗವತ ಪ್ರಜ್ಞೆ ಹಾಸುಹೊಕ್ಕಾಗಿ ಒಡ ಮೂಡಿದೆ.

ಆಳ್ವಾರರ ಮಧುರ ಭಕ್ತಿಭಾವ, ಶ್ರೀಪಾದರಾಜರ ಭ್ರಮರಗೀತ, ವ್ಯಾಸ ರಾಯರ ಗೋಪಿಗೀತೆಯರ ವಿರಹಗೀತೆಗಳನ್ನು ನೆನಪಿಗೆ ಇರುತ್ತದೆ. ಮಧುರಭಾವವೆ ಎರಡೂ ಬಣದವರ ಒಂದೇ ಭಾವವಾಗಿದೆ.

ಆಳ್ವಾರರಲ್ಲಿ ತಿರುಪಾಣ, ತಿರುಮಂಗೈ, ನಮ್ಮಾಳ್ವಾರ್, ಅವರೆಲ್ಲ ಇರುವ ಹಾಗೆ ಹರಿದಾಸರಲ್ಲೂ ಕನಕದಾಸ, ಪುರಂದರ, ವೈಕುಂಠದಾಸ, ಹತ್ತೊಂಬತ್ತನೆ ಶತ ಮಾನದ ವೇಳೆಗೆ ಬರುವ ತಿಮ್ಮಪ್ಪದಾಸರು ಈಗ ಕೆಳದಿಯ ಗುಂಡಾ ಜೋಯಿಸರು ಪ್ರತಿಪಾದಿಸಿರುವ "ವೆಂಕಣ್ಣ ಕವಿಯ ಕೀರ್ತನೆಗಳ" ರಚಕರಾದ ವೆಂಕಣ್ಣ, ರಾಮದಾಸರು (ಮುಸ್ಲಿಮರಾಗಿದ್ದು ಹಿಂದೂಧರ್ಮ ಒಲಿದಾತ) ಇವರೆಲ್ಲ ವಿವಿಧ ಪಂಗಡದವರೆ ಬಂದಿದ್ದಾರೆ.

ಆಂಡಾಳ್ ಅಥವಾ ಗೋದಾದೇವಿಗೆ ರಂಗನಾಥನೊಲಿದಂತೆ, ಹದಿನೆಂಟರ ಶತಕದ (ಕ್ರಿ. ಶ. ೧೭೫೦) ಹೆಳವನ ಕಟ್ಟೆ ಗಿರಿಯಮ್ಮ, ಅದೇ ಊರಿನ ಅಧಿದೈವನಾದ ರಂಗನಾಥಸ್ವಾಮಿಯ ಪರಮಭಕ್ತೆಯಾಗಿದ್ದು, ಹರಿದಾಸರಲ್ಲಿ ಪ್ರಖ್ಯಾತರಾದ ಗೋಪಾಲದಾಸರಿಂದ ಅನುಗ್ರಹ ಪಡೆದು ಅನೇಕ ಕೃತಿ ರಚನೆ ಮಾಡಿದ್ದಾಳೆ. ಅಂತೆಯೆ (೧೯೦೩) ಹರಪನ ಹಳ್ಳಿ ಭೀಮವ್ವ.

ಭಕ್ತಿಭಾವ ಒಂದೇ ಎಂಬರ್ಥದಲ್ಲಿ ಆಳ್ವಾರರಲ್ಲಿ ಇರುವ ದಾಸ್ಯಭಕ್ತಿ, ಮಧುರ ಭಾವ, ಸಖ್ಯ, ಭೃತ್ಯಭಾವ ಸ್ಮರಣೆ, ಕೀರ್ತನೆ(ಸ್ತುತಿ) ಇವೆಲ್ಲ ಮುಂದರಿದು, ಹರಿದಾಸ ರಲ್ಲಿ ನವವಿಧ ಭಕ್ತಿಯ ವೈಶಿಷ್ಟ್ಯವೆ ಆಗಿದೆ. ಇಬ್ಬರ ಕೃತಿ ರಚನೆಗಳ ಕೆಲವು ಹೋಲಿಕೆ ಇದನ್ನು ದೃಢಪಡಿಸುತ್ತದೆ. ಆಳ್ವಾರರು (ಪೊಯ್‌ಗೈ) ಮುಂದಲ ತಿರುವಾಂದಾದಿಯಲ್ಲಿ ಹೇಳಿದಂತೆಯೆ, ಪುರಂದರದಾಸರೂ:

ಕಣ್ಣಿನೊಳಗೆ ನೋಡೂ ಹರಿಯ
ಒಳಗಣ್ಣಿನೊಳಗೆ ನೋಡೂ ಎಂದರೆ,

ವ್ಯಾಸರಾಯರು : 'ಅಂತರಂಗದಲಿ ಹರಿಯ ಕಾಣದವ ಹುಟ್ಟುಕುರುಡನೋ' ಎನ್ನು ತ್ತಾರೆ. ಇದನ್ನೆ ವಿಜಯದಾಸರು, "ಅಂತರಂಗದ ಕದವು ತೆರೆಯಿತೆಂದು, ಹೃದಯಕಮಲ ದೊಳಗಿನ ವಿಜಯವಿಠಲನ ಕಂಡೆ" ನೆಂದು ನುಡಿಯುತ್ತಾರೆ.

ತಿರುಮಳಿಶೈ ಆಳ್ವಾರರಲ್ಲಿ ಸಂಖ್ಯೆ ಬಳಸಿ ತತ್ವ ಪ್ರತಿಪಾದನೆ ಮಾಡುವ ಚಮತ್ಕಾರವಿದೆ. ಅದನ್ನೆ ಗೋಪಾಲದಾಸರ ತಮ್ಮ 'ಗುರುಗೋಪಾಲ ವಿಠಲ'ರು ವಾಯುದೇವರ ಅವತಾರತ್ರಯ ಬಣ್ಣಿಸುತ್ತ ಹೇಳುವ ಕೀರ್ತನೆಯ ಕೆಲವು ಸಾಲು ಗಮನಾರ್ಹ :

ಐದನೆ ತಿಂಗಳಲಿ ನಿಶ್ಚೈಸಿದೆ ॥ಪ॥
ಐದು ವರುಷದವನು ಮುಂದಾಹ ಶುಭಚರಿಸೆ ॥ಅ. ಪ.॥

ಐದರೊಳನೊಂದರ ತನಯ ನೆನಸಿಕೊಂಡು
ಐದರೊಳಗೊಂದು ಮಾರ್ಗವನೆ ಪಿಡಿದು
ಐದರೊಳಗೊಂದು ಹಾರಿ ರಕ್ಕಸರ
ಐದೆರಡು ವರುಷಗಳ ಮ್ಲಾನ ಮಾಡಿದನೆಂದು ॥೧॥

ತೊಂಡರಡಿಪ್ಪೊಡಿ ಆಳ್ವಾರರೊಂದೆಡೆ ತಾನು ದೈವ ಭಕ್ತನೆಂದು ಸೋಗು ಹಾಕಿ ಅಂತರಂಗದಲ್ಲಿ ದೈವಕ್ಕೇ ವಂಚಿಸಲು ಪ್ರಯತ್ನಿಸಿ ವಿಫಲರಾಗಿ ನಕ್ಕೆನೆಂದು ಒಂದೆಡೆ ಹಾಡಿದ್ದಾರೆ. ಪುರಂದರದಾಸರ "ನಗೆಯು ಬರುತಿದೆ ಎನಗೆ ನಗೆಯು ಬರುತಿದೆ ! ಜಗದೊಳಿರುವ ಜಾಣರೆಲ್ಲ ಹಗರಣ ಮಾಡುವುದ ಕಂಡು..." ಎಂಬ ಕೃತಿ ಆಳ್ವಾರರಂತೆಯೆ ಹೀಯಾಳಿಸುವ ಧಾಟಿಯಲ್ಲಿದೆ.

ಶ್ರೀರಂಗದ ರಂಗನಾಥನನ್ನು ಕಂಡ ತಿರುಪಾಣಿ ಆಳ್ವಾರ ಭಕ್ತಿಯಿಂದ ಸ್ವಾಮಿಯ ನಖಶಿಖಾಂತ ವರ್ಣನೆ ಮಾಡಿದರು. ಹರಿದಾಸರಲ್ಲಿ ಈ ರೀತಿಯ ಶ್ರೀಹರಿಯ ಸಂಪೂರ್ಣ ವರ್ಣನೆ ಅನೇಕ ಕೃತಿಗಳಲ್ಲಿ ಕಂಡು ಬರುತ್ತದೆ. ಶ್ರೀಪಾದರಾಜರ "ಕಂಗಳಿದ್ಯಾತಕೊ ಕಾವೇರಿ ರಂಗನ ನೋಡದ" ಎಂಬ ಕೃತಿಯಲ್ಲಿ ಅವರು ಬಣ್ಣಿಸುವಂತೆಯೆ ಅವರದೆ ಇನ್ನೊಂದು ಕೃತಿ "ಇಕ್ಕೊ ನೋಡೆ ರಂಗನಾಥನ ಚಿಕ್ಕಪಾದವ" ಎಂದು ಪಾದ ವರ್ಣನೆ ಮಾಡಿದೆ ; ಪುರಂದರದಾಸರ ಒಂದು ಸುಳಾದಿಯಲ್ಲಿ ಅವರು ಹೀಗೆನ್ನುತ್ತಾರೆ :

ಪಾದ ನಖ ಪರಿಪೂರ್ಣ, ಜಾನು ಜಂಘೆ ಪರಿಪೂರ್ಣ
ಊರುಕಟಿ ಪರಿಪೂರ್ಣ, ನಾಭಿಕುಕ್ಷಿ ಪರಿಪೂರ್ಣ
ಉರಕಂಠ ಪರಿಪೂರ್ಣ, ಅಂಬುಜಮುಖ ಪರಿಪೂರ್ಣ
ಶಿರೋಬಾಹು ಪರಿಪೂರ್ಣ, ಶಿರೋರುಹ ಪರಿಪೂರ್ಣ
ಸರ್ವಾಂಗ ಪರಿಪೂರ್ಣ ಪುರಂದರವಿಠಲ ॥

ಆಳ್ವಾರರು ಕೃಷ್ಣನ ವಿವಿಧ ಲೀಲೆಗಳನ್ನು ಮಾತೃವಾತ್ಸಲ್ಯದಿಂದ ಯಶೋದೆಯಾಗಿ ಭಾವಿಸಿ ವರ್ಣಿಸಿದಂತೆ, ಹರಿದಾಸರೆಲ್ಲರೂ ಕೃಷ್ಣನನ್ನು ಒಂದಿಲ್ಲೊಂದು ರೀತಿ

ಕಂಡಂ ಆಡಿಸಿ, ನಲಿದಿದ್ದಾರೆ. ಪುರಂದರದಾಸರಂತೂ ಅದರಲ್ಲಿ ಅಗ್ರಗಣ್ಯರೆಂದರೆ, ರಾಘವೇಂದ್ರತೀರ್ಥರ ಒಂದೇ ರಚನೆ ಅವರಿಗೆ ವೇಣುಗೋಪಾಲನಲ್ಲಿದ್ದ ಭಕ್ತಿಭಾವಕ್ಕೆ ಹೆಗ್ಗುರುತಾಗಿಂತ್ತದೆ. ಪುರಂದರದಾಸರ ಒಂದು ಕೃತಿ ಅವರ ನಾಟ್ಯ ಪ್ರಜ್ಞೆಗೂ ಕೃಷ್ಣ ದರ್ಶನವನ್ನು ಓದುಗರಿಗೂ ನೀಡುವ ಸೌಂದರ್ಯ ಪ್ರಜ್ಞೆಗೂ ನಿದರ್ಶನವಾಗುತ್ತದೆ.

ಆಡಿದನೋ ರಂಗ ಅದ್ಭುತದಿಂದಲಿ, ಕಾಳಿಂಗನ ಫಣೆಯಲಿ ॥ಪ॥
ಪಾಡಿದವರಿಗೆ ಬೇಡಿದ ವರಗಳ
ನೀಡುತಲಿ ದಯಮಾಡುತಲಿ ನಲಿ
ದಾಡುತಲಿ ಬೆಣ್ಣೆ ಬೇಡುತಲಿ ಕೃಷ್ಣ ॥ಅ.ಪ.॥
...ಅಂಬುರುಹೋದ್ಭವ ಅಖಿಲ ಸುರರು ಕೂಡಿ ಅಂಬರದಲಿ ನಿಂತು ಅವರ ಸುತ್ತಿಸೆ
ರಂಭೆ ಊರ್ವಸಿ ರಮಣಿಯರೆಲ್ಲರು ಚಂದದಿಂ ಭರತನಾಟ್ಯವ ನಟಿಸೆ
ಝಂ ತಟ ತಕ ಧಿಮಿ ತಧಿತೋ ಎಂದು ಝಂಪೆ ತಾಳದಿ ತುಂಬುರನೊಪ್ಪಿಸೆ ॥೧॥
ಚಿಕ್ಕವನಿವನಲ್ಲ ಪುರಂದರವಿಠ್ಠಲ ವೆಂಕಟರಮಣನ ಬೇಗ ಯಶೋದೆ
ಬಿಂಕದೊಳೆತ್ತಿ ಮುದ್ದಾಡೆ ಶ್ರೀಕೃಷ್ಣನ ॥

ಕೃಷ್ಣನ ಎಲ್ಲ ಲೀಲಾ ವಿನೋದಗಳನ್ನೂ ಪುರಂದರದಾಸರು ಹಾಡಿ ಹಾಡಿ ದಣಿದಿದ್ದಾರೆ. ಯಶೋದೆ ನಿನ್ನ ಕಂದಗೆ ಏನು ರೂಪವೆ ಶಿಶುವಲ್ಲ ನಿನ್ನ ಮಂಗ ಕೃಷ್ಣ ಜಗತ್ಪತಿಯೆ ಎಂದಿದ್ದಾರೆ ವೈಮಂತರೆ ಭಕ್ತರಾಗಿ.

ಶ್ರೀಹರಿಯ ಹತ್ತವತಾರಗಳನ್ನು ಹರಿದಾಸರು ತಮ್ಮ ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಬಣ್ಣಿಸಿದಾರೆ. ವಾದಿರಾಜರು ಈ ವಿಚಾರದಲ್ಲಿ ಅಗ್ರಗಣ್ಯರು. ಹಾಗೆಯೆ ಕನಕದಾಸರಿಗೆ ಇರುವ ಕವಿತಾ ಚಮತ್ಕೃತಿ-ಚಾತುರ್ಯ ಅವರ ಕೃತಿಗಳಿಂದ ತಿಳಿಯಬರುತ್ತದೆ. ಇದೇರೀತಿ, ದಾಸ ಸಾಹಿತ್ಯದ ದ್ವಿತೀಯ ಘಟ್ಟದ ಪ್ರಮುಖರಾದ ವಿಜಯದಾಸರಿಗೆ 'ಸಂಚಾರಿದಾಸ'ರೆಂದೆ ಕರೆವ ವಾಡಿಕೆ. ಗೋಪಾಲದಾಸರ ಕೃತಿಗಳಲ್ಲಿ ಬರುವ ಪ್ರಾಸವದ ಜೋಡಣೆ, ಜಗನ್ನಾಥದಾಸರಲ್ಲಿ ಕಂಡು ಬರುವ ಪದಸಮುಚ್ಚಯ, ಸಂಸ್ಕೃತ ಪಾಂಡಿತ್ಯ ಕೃತಿಗಳಲ್ಲೂ ಪ್ರತಿಬಿಂಬಿಸಿವೆ. ಪ್ರಸನ್ನರಲ್ಲಿ ಕಾಣಬರುವ ಜನಪದ-ಉತ್ತರ ಕರ್ನಾಟಕದ ಭಾಷೆಯ ಬಳಕೆ ಅದೇ ಒಂದು ಭಾಷೆಯ ಬಂಡನ್ನು ಪರಿಚಯಿಸುತ್ತವೆ.

ದಶಾವತಾರ ಸ್ತುತಿಗಳಲ್ಲಿ ವಾದಿರಾಜರದ್ದೊಂದು ಕೃತಿಯ ಸಾಲುಗಳು ಅವರು ಎಷ್ಟು ಸಂಕ್ಷಿಪ್ತವಾಗಿ ಹೇಳಬಲ್ಲರೆಂಬುದಕ್ಕೆ ಸಾಕ್ಷಿ :

ಕೇಳಲೊಲ್ಲನೆ ಎನ್ನ ಮಾತನು ರಂಗ
ಕಾಳೀಮರ್ದನ ಕೃಷ್ಣಗೆ ಹೇಳೆ ಗೋಪ್ಯಮ್ಮ ಬುದ್ಧಿ ॥ ಅ.ಪ. ॥

ಬಿಟ್ಟ ಕಣ್ಣನು ಮುಚ್ಚಲೊಲ್ಲನೆ ದೊಡ್ಡ
ಬೆಟ್ಟಕೆ ಬೆನ್ನೊತ್ತಿ ನಿಂದನೆ ಬಲು
ಸಿಟ್ಟಲಿಕೋರೆ ಹಲ್ಲ ಕಿರಿದನೆ ಈಗ
ಗಟ್ಟಿ ಉಕ್ಕಿನ ಕಂಬ ಪೊಡೆದು ಬಂದನೆ ರಂಗ
ಮೂರಡಿ ಭೂಮಿ ಬೇಡಿ ಬಂದನೆ ತಾಯಿ
ಶಿರವ ಕಡಿಯಲಿಕೆ ಕೊಡಲಿ ತಂದನೆ
ನಾರಸೀರೆಯನುಟ್ಟುಕೊಂಡನೆ ಬಲು
ಚೋರತನದಲಿ ಹರವಿಹಾಲ ಕುಡಿದನೆ ರಂಗ
ಬತ್ತಲೆ ನಾರಿಯರ ಅಪ್ಪಿದ ಹೋಗಿ
ಉತ್ತಮ ಅಶ್ವವ ಹತ್ತಿದ
ಹತ್ತವತಾರವ ತೋರಿದ ದಿಟ್ಟ
ಮೂರ್ತಿ ನಮ್ಮ ಚೆಲುವ ಶ್ರೀಹಯವದನ ॥

ಹರಿದಾಸರ ಆಂದೋಲನ ಮೂಡಿ ಬಂದ ಹದಿನೈದನೆ ಶತಮಾನದಲ್ಲಿ ತಮಿಳು ನಾಡಿನಲ್ಲೂ ವೈಷ್ಣವ ಭಕ್ತಿ ಪಂಥ ಮುಂದುವರೆದಿತ್ತು. ಕರ್ನಾಟಕದಲ್ಲಿ ಆಗ "ಭಕ್ತಿ, ಭಾವ್ಯೋऽ ಜನಾರ್ದನಃ" ಎಂದು ವಿಜಯನಗರದ ಸಾಮ್ರಾಜ್ಯದ ಅರಸರ ಪ್ರೋತ್ಸಾಹ ನಮ್ರತೆಗಳಿಂದ, ವ್ಯಾಸರಾಯರಂಥ ಕ್ರಾಂತದರ್ಶಿಗಳ ನೇತೃತ್ವದಲ್ಲಿ ಮುಂದರಿದ ಹರಿದಾಸ ಕೂಟ ಹರಿದಾಸರನ್ನು ಸಂಘಟಿಸಿದುದು ಈವರೆಗಿನ ಅಧ್ಯಯನದ ಮೂಲಕ ಸಂವಿದಿತವೇ ಆಗಿದೆ. "ದಾಸ್ಯೋऽಹಂ" ಭಾವ ಆಗ ವಿಷ್ಣು ಭಕ್ತಿಯನ್ನು ಎಲ್ಲೆಲ್ಲೂ ಹರಡಿತು. ಉತ್ತರ ಭಾರತದತನಕ, ಹಾಗೂ ದೂರದ ಅಸ್ಸಾಮಿನತನಕ ವಿಷ್ಣು ಭಕ್ತಿ ಪ್ರಭಾವ ಬೀರಿತು. ಭಾಗವತದಲ್ಲಿ ಬರುವಂತೆ,

ಕಲೌಖಲು ಭವಿಷ್ಯಂತಿ ನಾರಾಯಣ ಪರಾಯಣಾಃ ।
ಕ್ವಚಿನ್ಮಹಾಭಾಗ ದ್ರಮಿಡೇಶು ಭೂರಿಶಃ ।
ತಾಮ್ರಪರ್ಣೀ ನದೀ ಯತ್ರ ಕೃತಮಾಲಾ ಪಯಸ್ವಿನೀ
ಕಾವೇರೀ ಚ ಮಹಾಭಾಗಾ ಪ್ರತೀಚೀಚ ಮಹಾನದೀ ॥

ಈ ನದೀ ತೀರಗಳ ಆಳ್ವಾರರ ಬಗ್ಗೆ ಆಗಲೇ ತಿಳಿಸಿದೇವೆ. ಹರಿದಾಸರ ಕಾಲಕ್ಕೆ ಬಂದ ತಮಿಳುನಾಡಿನ ಭಕ್ತಿ ಆಂದೋಲನದ ಪ್ರಮುಖರು, ವೇದಾಂತದೇಶಿಕರೂ ಪಿಳ್ಳೈ ಲೋಕಾಚಾರ್ಯರು, ಮಣವಾಳ ಮಹಾಮುನಿಗಳು. ಇವರು ಹರಿದಾಸರ ಪಂಥದ ಸಮ ಕಾಲೀನರು ಎನ್ನಬಹುದು.

ಹರಿದಾಸ ಆಂದೋಲನಕ್ಕೂ, ಮೊದಲಿಂದ ನೆಲೆ ನಿಂತಿದ್ದ ತಮಿಳುನಾಡಿನ ವೈಷ್ಣವ ಭಕ್ತಿ ಆಂದೋಲನಕ್ಕೂ ಇರುವ ಸಾದೃಶ್ಯ ಅನೇಕ :

### ಜನ ಭಾಷೆಯ ಬಳಕೆ

ಕರ್ಣಾಟಕದ ಹರಿದಾಸ ಪಂಥದವರು ತಮಗೆ ಹಿಂದೆ ಆಗಿ ಹೋಗಿದ್ದ ವೀರಶೈವ ವಚನಕಾರರು ಹೇಗೆ ತಮ್ಮ ಸ್ಥಳೀಯ ಕನ್ನಡ ಭಾಷೆ ಬಳಸಿ, ಜನಸಾಮಾನ್ಯರಿಗೆ ತಮ್ಮ ಮತ-ಧರ್ಮ ಪರಿಚಯಿಸಿದರೊ, ಅದನ್ನು ಅರಿತಿದ್ದರು. ಶ್ರೀಪಾದರಾಜರಿಗಂತೂ ಶ್ರೀರಂಗದಲ್ಲಿದ್ದಾಗ ಕೇಳಿದ ಆಳ್ವಾರರ ದ್ರಾವಿಡ ದಿವ್ಯ ಪ್ರಬಂಧ, ಪೂಜಾ ಸಮಯದಲ್ಲಿ ತಾವೂ ಏಕೆ ಕನ್ನಡದಲ್ಲಿ ಪದ್ಯ ಕೃತಿ ರಚನೆ ಮಾಡಿ ಒಂದು ಭಕ್ತಿ ಪಂಥವನ್ನೇ ಸಂಘಟಿಸಬಾರದು ಎಂಬ ಆಲೋಚನೆ ಬಂದಿರುವುದು ಸಹಜವೆ. ಅವರ ಮೇಲೆ ಆಳ್ವಾರರ ಪ್ರಭಾವ ಆಗಿರುವುದು ನಿಶ್ಚಯವೆಂಬ ಮಾತನ್ನು ವಿದ್ವಾಂಸರೂ ಅನುಮೋದಿಸಿದ್ದಾರೆ. ಆದುವರೆವಿಗೆ ಪಂಡಿತರ ಪಾಲಾಗಿದ್ದ ಕಾವ್ಯ, ಅರಸೊತ್ತಿಗೆಯ ಮಾನ್ಯ ಆಗಿದ್ದ ಸಾಹಿತ್ಯ, ಸಾಮಾನ್ಯ ಮಾನ್ಯ ಸಾಹಿತ್ಯ ಆಗದಿದ್ದರೆ ವೈಷ್ಣವ ಭಕ್ತಿ ಪಂಥದ ಪ್ರಸಾರ ಕಷ್ಟವೆ ಆಗುತ್ತಿತ್ತು. ಜನಮನವರಿತ ಜನ ಬಳಕೆ ಭಾಷೆಯ ಮೂಲಕ ಭಕ್ತಿ-ಧರ್ಮ-ಮತ ಪ್ರಸಾರ ಸುಲಭವೆ ವಿನಾ ಸಾಮಾನ್ಯ ಜನ ಅರಿಯದ ಗೀರ್ವಾಣ ಭಾಷೆ ಹೆಚ್ಚು ಪ್ರಚಲಿತ ಆಗಿರಲಿಲ್ಲವೆಂಬುದನ್ನೂ ಶ್ರೀಪಾದರಾಜರು ಮನಗಂಡರು. ವೀರಶೈವ ವಚನಕಾರರ ಕನ್ನಡ ಸಮರ್ಥ ಬಳಕೆ, ಶಿವ ಭಕ್ತಿ ಪಾರಮ್ಯ, ವರ್ಣಾಶ್ರಮ ವಿರೋಧ, ಅದನ್ನೆಲ್ಲ ಪ್ರತಿಬಿಂಬಿಸಿದ ಸರಳ ವಚನಗಳ ಸಾಹಿತ್ಯ, ಎಲ್ಲವೂ ವೈದಿಕ ಧರ್ಮಕ್ಕೆ ಕಂಟಕವಾಗಿತ್ತೆಂಬುದೂ ಶ್ರೀಪಾದರಾಜರಂಥ ಮುಂದಾಲೋಚಕ ಮಹಾನುಭಾವರಿಗೆ ಮನ ಹಟ್ಟಿಗಿರಲು ಸಾಧ್ಯವಿದೆ. ವೈದಿಕಧರ್ಮ ಪುನಶ್ಚೇತನ-ಪುನರ್‌ಸ್ಥಾಪನ, ವೇದಾಗಮ ಪ್ರಾಮಾಣ್ಯ ಸಮರ್ಥನೆ, ಮಧ್ವಮತ ಪ್ರಸಾರ-ಭಕ್ತಿ ಮಾರ್ಗ ಪ್ರಚಲಿತಗೊಳಿಸುವ, ಹಾಗೂ ಶ್ರೀಸಾಮಾನ್ಯನನ್ನು ತಮ್ಮೊಂದಿಗೆ ಭಕ್ತಿಪಂಥದಲ್ಲಿ ಒಯ್ಯಲೆಂದ ಕಟ್ಟಿರೋ ಪಥವ ವೈಕುಂಠಕೆ ಎಂದದ್ದು, ಗುರುಗಳಿಗೆ ತಕ್ಕ, ಆಗ್ಗೆ ಇನ್ನೂ ಪ್ರಗತಿಶೀಲರೆನ್ನಬಹುದಾದ ವ್ಯಾಸರಾಯರು, ಹರಿದಾಸ ಪಂಥವನ್ನು ಇನ್ನೂ ಪ್ರೋತ್ಸಾಹಿಸಿದರು, ಪೋಷಿಸಿದರು.

ಗುರು-ಶಿಷ್ಯರು ತಾವೇ ಸ್ವಯಂ ಕನ್ನಡದಲ್ಲಿ ಕೃತಿರಚನೆ ಮಾಡಿದರು. ಹರಿದಾಸ ಪಂಥದವರು ಸಾಮಾನ್ಯರಿಗೆ ತಿಳಿಯುವಂಥ ಕನ್ನಡದಲ್ಲಿ ತಮ್ಮ ಭಕ್ತಿಗೀತ, ಕೀರ್ತನೆ, ಸುಳಾದಿ ಉಗಾಭೋಗ, ಇನ್ನೂ ಕೆಲವು ಸಾಹಿತ್ಯ ಪ್ರಕಾರಗಳನ್ನು ಬಳಕೆಗೆ ತಂದುದು, ಭಕ್ತಿಯ ಆಂದೋಲನಕ್ಕೆ ಹೊಸ ಸ್ಫೂರ್ತಿ, ತಿರುವು ನೀಡಿದ್ದು ಮಾತ್ರ ಅಲ್ಲ, ಕನ್ನಡ ಸಾಹಿತ್ಯಕ್ಕೇ ಹೊಸ ಆಯಾಮ ನೀಡಿತು. ವಚನಕಾರರು ಆಡಿದ್ದನ್ನು, ಇನ್ನೂ ಚೆನ್ನಾಗಿ ಸಾಮಾನ್ಯನಿಗೆ ಮನವರಿಕೆಯಾಗುವಂತೆ ಶ್ರುತಿಸಂಭಗ ರಚನೆಗಳ ಮೂಲಕ ಸುಶ್ರಾವ್ಯವಾಗಿ ಹರಿದಾಸರು ಹಾಡಿದ್ದು ಜನತೆಗೆ ಒಲವು ಮೂಡಿ, ದೃಢಭಕ್ತಿಯುಂಟಾಗಲು ಮೂಲ ಪ್ರೇರಣೆಯಾಯಿತು.

ತಮಿಳುನಾಡಿನ ಆಚಾರ್ಯರೂ ಮಾಡಿದ್ದು ಸ್ಥಳ ಭಾಷೆಯ ಸಮರ್ಥ ಬಳಕೆಯೆ. ಇದು ಆಳ್ವಾರರ ಕಾಲಕ್ಕೆ ಮೂಡಿ ಬರದ ಪ್ರಯೋಗ. ಅದಿನ್ನೂ ಈಗ ದೃಢಗೊಂಡಿತು, ಆಳ್ವಾರರ ಭಕ್ತಿಗೀತೆಗಳ ಆಧಾರದ ಮೇಲೆ ಅವುಗಳಿಗೆ ತಮಿಳಿನಲ್ಲಿ,

ಸಂಸ್ಕೃತ-ತಮಿಳು ಬೆರತ ಮಣಿಪ್ರವಾಳದಲ್ಲಿ ಶ್ರೀವೈಷ್ಣವ ಆಚಾರ್ಯರು ವ್ಯಾಖ್ಯಾ ಜನರಿಗೆ ಹೋದ ಹೋದಲ್ಲೆಲ್ಲ ಅವುಗಳ ಮಹತ್ವವನ್ನು ಸಾರಿದರು. ಪಿಳ್ಳೈ ಲೋ ಚಾರ್ಯರು, ತಾವು ಬರೆಯುವುದನ್ನೆಲ್ಲ ತಮಿಳಲ್ಲೇ ಬರೆಯುವೆನೆಂದು ವ್ರತ ತೊ ಇವರು ತಮಿಳಿನಲ್ಲಿ ಬರೆದ ಗ್ರಂಥಗಳಲ್ಲಿ ವಿಶಿಷ್ಟಾದ್ವೈತ ಸಿದ್ಧಾಂತ ಕುರಿತ ಗ್ರ 'ತತ್ತ್ವತ್ರಯ'. (ತತ್ತ್ವತ್ರಯವೆಂದರೆ—ಚಿತ್, ಅಚಿತ್ ಮತ್ತು ಈಶ್ವರ), ಶ್ರೀವ ಧರ್ಮ ಸಿದ್ಧಾಂತವನ್ನು ವಿವರಿಸಿರುವ ಗ್ರಂಥ. 'ಮುಮುಕ್ಷುಪ್ಪಡಿ'. ಇದರಲ್ಲಿ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರೀ ಮಂತ್ರದ ಅರ್ಥ ಕುರಿತು ವ್ಯಾಖ್ಯಾ ಸಿದ್ದಾರೆ. ಶ್ರೀವೈಷ್ಣವರಿಗೆ ಹಾಗೂ ವಿಷ್ಣು ಭಕ್ತರಿಗೆ ತಿರುಮಂತ್ರಗಳಲ್ಲಿ ಒಂದಾದ

"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ
ಅಹಂತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ"

ಎಂಬ ಶ್ಲೋಕದ ತಾತ್ಪರ್ಯ ವಿವರಿಸಿ, ಇದು ಧರ್ಮದ ಆನುಷ್ಠಾನ, ಹಾಗೂ ಶರ ಧರ್ಮವನ್ನೂ (ಪ್ರಪತ್ತಿ) ಬೋಧಿಸುವದೆಂಬುದನ್ನೂ ಸ್ಪಷ್ಟೀಕರಿಸಿದರು.

ತಮಿಳುನಾಡಿನ ಭಕ್ತಿ ಆಂದೋಲನ ದೇಶಿಕರಂಥ ಮಹಾಭಕ್ತ—ವಿದ್ವಾ ಮೂಲಕವೂ ಮುಂದುವರಿಯಿತು.

ಇವರೆಲ್ಲ ಸಾರಿದ್ದು ಒಂದೇ : ಪರಮಾತ್ಮನೊಬ್ಬನೆ ಸ್ವತಂತ್ರ. ಜೀವರೆಲ್ಲ ಆಧೀನರು, ಪರತಂತ್ರರು, ನಾರಾಯಣನೊಬ್ಬನೆ ಪರದೈವ, ಪರತತ್ತ್ವ.

ವೈಷ್ಣವ ಆಚಾರ್ಯರು ಹೇಳಿದ್ದು ಹೀಗೆ : ಭಗವತ್ ಪ್ರಾಪ್ತಿ ಕೇವಲ ಪಾಂಡಿತ್ಯದಿಂದಲೆ ಪ್ರಾಪ್ತ ಆಗುವುದಿಲ್ಲ. ಭಗವತ್ಪ್ರೇಮ, ಅವನಲ್ಲಿ ಇಡುವ ಅನುರಾಗದಿಂದ ಮಾತ್ರ ಪ್ರಾಪ್ತವಾಗುತ್ತದೆ.

ಹರಿದಾಸರ ಅಭಿಮತವೂ ಹೀಗೆಯೆ. ಭಕ್ತಿ, ಮಾಹಾತ್ಮ್ಯಜ್ಞಾನ, ಭಗವ ನಿರ್ವ್ಯಾಜ್ಯ ಪ್ರೇಮವೇ ಭಗವಂತನ ಸಾಕ್ಷಾತ್ಕಾರ ಎಂದು ಅವರು ಸಾರಿದರು.

ಶ್ರೀವೈಷ್ಣವ ಹಾಗೂ ಕರ್ಣಾಟಕ ದಾಸ ಪಂಥದವರಲ್ಲಿ ಕಂಡು ಬರುವ ಉ ಮನೋಧರ್ಮ, ಸಮದರ್ಶನ ದೃಷ್ಟಿ ಅನನ್ಯಾದೃಶವಾದದ್ದು. ವಿಷ್ಣುಭ ಪರಮೋದ್ದೇಶವಾಗುಳ್ಳ ಇವರು ಶಿವದ್ವೇಷಿಗಳಾಗಿರಲಿಲ್ಲವೆಂಬುದು ಹರಿದಾಸರ ಕೃತಿಗಳಿಂದ ಕಂಡು ಬರುವ ಅಂಶ. ಭಕ್ತಿ ಮಾರ್ಗವೊಂದೆ ಮುಕ್ತಿಗೆ ಸಾಧನವ ಇಬ್ಬರೂ ಸಾರಿದರು.

ಎರಡು ಪಂಥದವರೂ ತಿಳಿಸಿದ್ದು ಇದು : ಮಾನವನಿಗೆ ಬೆಲೆ, ಪ್ರಾವ ನೀಡುವುದು ಅವನ ಹುಟ್ಟಿದ ಕುಲವಲ್ಲ. ಅವನ ಪಾಂಡಿತ್ಯವಲ್ಲ. ಅ ಮೂಡಿರುವ ನೈಜಭಕ್ತಿಯೆ ಅವನ ಅಂತರಿಕ ಔನ್ನತ್ಯಕ್ಕೆ ಕಾರಣ. "ಮುಕ್ತಿ ಸಂಭೂತಿರವಲಾ ಭಕ್ತಿಸ್ತು ತತ್ಸಾಧನಮ್" ಎಂಬುದೇ ಹರಿದಾಸರ ವಾಕ್ಯವ ಅದನ್ನು ಬೇರೊಂದು ರೀತಿಯಲ್ಲಿ ವೈಷ್ಣವ ಆಚಾರ್ಯರು ಪ್ರತಿಪಾದಿಸಿದರಷ್ಟೆ. ಧನ ಮದ, ಆಭಿಜಾತಮದ ತೊಡೆಯುವುವೆ ಶ್ರೀವೈಷ್ಣವ ಲಕ್ಷಣ, ಹರಿದಾ

ಒಬ್ಬರಾದ ಜಗನ್ನಾಥದಾಸರು ಪೂರ್ವಾಶ್ರಮದಲ್ಲಿ ಇದ್ದ ಸಂಸ್ಕೃತ ಪಾಂಡಿತ್ಯ—ಎಲ್ಲವನ್ನೂ ಸಹ ಹರಿದಾಸರಾದ ಅನಂತರ ಕನ್ನಡ ಪದ ರಚನೆ ಹಾಗೂ ಭಕ್ತಿಗೇ ಪ್ರಾಮುಖ್ಯ ನೀಡಿದ್ದು ಹರಿದಾಸ ಪ್ರಿಯರು ಬಲ್ಲ ವಿಚಾರವೆ ಆಗಿದೆ.

ಮಣವಾಳ ಮುನಿಗಳೆಂಬ ಆಚಾರ್ಯರಂತೂ "ಭಕ್ತಿ ಮಂದಿರದ ಬಾಗಿಲು ಮ್ಲೇಚ್ಛನಿಗೂ ತೆರೆದಿದೆ"ಯೆಂದರು

ಭಕ್ತಿಂಷ್ಟ ವಿಧಾ ಹ್ಯೇಷಾ ಯಸ್ಮಿನ್ ಮ್ಲೇಚ್ಛೇಪಿ ವರ್ತತೇ ।
ತಸ್ಮೈದೇಯಂ ತತೋಗ್ರಾಹ್ಯಂ ಸಚಪೂಜ್ಯೋಯಥಾಹ್ಯಹಂ ।

(ಆಚಾರ್ಯ ಹೃದಯ—ಗ್ರಂಥದಲ್ಲಿ)

ಹರಿದಾಸ ಪಂಥದವರ ಹಾಗೆಯೇ ಶ್ರೀವೈಷ್ಣವ ಆಚಾರ್ಯರು ಮಾನವನಲ್ಲಿ ನೆಲಸಿರುವ ಆತ್ಮೋನ್ನತಿಯ ಗುಣಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಿದರು. ಇದಕ್ಕೆ ಕನಕದಾಸರು, ಪುರಂದರದಾಸರು, ತಿರುಪ್ಪಾಣಿ, ತಿರುಮಂಗೈ, ನಮ್ಮಾಳ್ವಾರರೂ ನಿದರ್ಶನ. ಹರಿದಾಸರು ಸಾರಿದ ಗುರುಭಕ್ತಿ ಪ್ರಾಮುಖ್ಯತೆಯನ್ನೇ ಮಧುರಕವಿಯಾಳ್ವಾರರು ತಮ್ಮ ದಿವ್ಯಪ್ರಬಂಧವಾದ 'ಕಣ್ಣಿ ನುಣ್ ಶಿರುತ್ತಾಂಬು' ಪಾಶುರಕಿಯಲ್ಲಿ ಪ್ರತಿಪಾದಿಸಿದ್ದು. ಕನಕದಾಸರು, ಪುರಂದರದಾಸರು, "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ" ಎಂದರೆ, ವಾದಿರಾಜರಂಥ ಶ್ರೇಷ್ಠ ಸನ್ಯಾಸಿಗಳೂ 'ಹರಿಪರದೇವತೆ ಎಂದರು ಪುತಲಿರು ಗುರುಮುಖದಿಂದ ಸಚ್ಛಾಸ್ತ್ರ ಪುರಾಣವ ನಿರುತದಿ ಕೇಳು". "ಗುರುಭಕುತಿಯಿರಬೇಕು ಹಿರಿಯರ ಕರುಣವು ಬೇಕು ಹರಿಕಥೆಗಳ ನಿತ್ಯದಲ್ಲಿ ಕೇಳುತಿರಬೇಕು ನಿರಕುತಿ ಬೇಕು ವಿಷುವಿನಾರಾಧನೆಬೇಕು. ಎಂದೇ ಘೋಷಿಸಿದರೂ ಹರಿದಾಸ ಪಂಥದವರೂ ಪ್ರಾಶಸ್ತ್ಯ ನೀಡಿದ್ದು ಮಾನವನಲ್ಲಿ ನೆಲಸಿರುವ ಆತ್ಮೋನ್ನತಿಯ ಗುಣಗಳಿಗೆ.

ಮಣವಾಳ ಮಹಾಮುನಿಗಳುಂ ತಮ್ಮ 'ಆಚಾರ್ಯ ಹೃದಯ'ದಲ್ಲಿ ಉಲ್ಲೇಖಿಸಿರುವಂತೆ,

ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಮಿಂದ್ರಿಯ ನಿಗ್ರಹಃ ।
ಸರ್ವಭೂತದಯಾ ಪುಷ್ಪಂ ಕ್ಷಮಾ ಪುಷ್ಪಂ ವಿಶೇಷತಃ ।
ಜ್ಞಾನ ಪುಷ್ಪಂ ತಪಃ । ಪುಷ್ಪಂ ಧ್ಯಾನ ಪುಷ್ಪಂ ತಥೈವಚ
ಸತ್ಯಂ ಅಷ್ಟವಿಧಂ ಪುಷ್ಪಂ ವಿಷ್ಣೋಃ ಪ್ರೀತಿಕರಂ ಭವೇತ್ ॥

ಎಂಬ ಮಾತೂ ಹರಿದಾಸ ಪಂಥದವರು ಸಾರಿದ ಕೃತಿಗಳ ಸಂದೇಶವೂ ಒಂದೇ ಎಂದೆನಿಸುತ್ತದೆ. ಮಹಾಪುರುಷರು, ಸಾಧುಸಂತರು, ಭಕ್ತರು ಎಲ್ಲೇ ಇರಲಿ, ಅವರ ಆಲೋಚನೆ-ಭಾವನೆ ಒಂದೇ ಆಗುವುದರಿಂದ ಅಲ್ಲಿ ಭಾಷೆಯ ಅಡ್ಡಿಯಾಗದೆನ್ನಲು ಈ

ಭಕ್ತಿ ಆಂದೋಲನ ನಿದರ್ಶನ ಆಗಿವೆ. ಎರಡೂ ಆಂದೋಲನಗಳೂ ಪರಮಾತ್ಮನ ಸೇವೆಯ, ವೈಷ್ಣವಾನುಷ್ಠಾನದ ಪರಾಕಾಷ್ಠೆ, ಭಕ್ತ–ಭಗವಂತ, ಹರಿದಾಸ ಸರ್ವೋತ್ತಮತ್ವಕ್ಕೆ ಮಹತ್ವವನ್ನೂ, ಪ್ರಾಮುಖ್ಯವನ್ನೂ ನೀಡಿವೆಯೆಂದು ಒಮ್ಮನದಿಂದ ಹೇಳಬಹುದು.

ಅಡಿಟಿಪ್ಪಣಿಗಳು

1 ವಚನ ಚಳುವಳಿ, ಡಾ. ಹಿ. ವಿ. ನಾರಾಯಣ(1981), ಪ್ರಕಾಶಕರು: ಶ್ರೀ ಸರ್ಪಭೂಷಣ ಶಿವಯೋಗೀಶ್ವರ ಗ್ರಂಥಮಾಲಿ, ಬೆಂಗಳೂರು, ಪುಟ 1.

2 ಈ ವಿಚಾರವನ್ನು ಡಾ. ಎಂ. ಚಿದಾನಂದಮೂರ್ತಿಯವರ 'Basaveswara and His contemporaries in Karnataka' 'ಬಸವೇಶ್ವರರು ಹಾಗೂ ಅವರ ಸಮಕಾಲೀನರು' ಲೇಖನ ಗಮನಾರ್ಹ Social contents of Indian Religious Reform Movements, Ed. D. S. P. Sen, Institute of Historical Studies, Culcutta.

3 ಇಲ್ಲೆಲ್ಲ ಪ್ರೊ. ಭೂಸನೂರಮಠ ಅವರು ಸಂಪಾದಿಸಿರುವ 'ವಚನ ಸಂಗ್ರಹ'ದಿಂದ ಉದ್ಧರಿಸಲಾಗಿದೆ (ಬಸವಣ್ಣನವರ ವಚನ, ಪು. 329).

4 ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ವತಿಯಿಂದ ವಚನ ಸಾಹಿತ್ಯದ ಬಗ್ಗೆ ಉತ್ತಮ ಪ್ರಕಟಣೆ ಬೆಳಕಿಗೆ ಬಂದಿದೆ.

5 ವಚನ ಚಳುವಳಿ, ಡಾ. ಹಿ. ವಿ. ನಾರಾಯಣ, ಪು. 48, ಪ್ರ ಸರ್ಪಭೂಷಣಮಠ, ಬೆಂಗಳೂರು.

6 ಪರಿಶೀಲನ, ಡಾ. ಜಿ.ಎಸ್.ಎಸ್. ಪು. 33 (ಎರಡನೆ ಮುದ್ರಣ-1972), ಉಷಾ ಸಾಹಿತ್ಯ ಮಾಲೆ, ಮೈಸೂರು.

7 ಇದನ್ನ ವಚನಕಾರರು "ಸಂಬಳಿಗೋಲು" ಎಂಬರ್ಥದಲ್ಲಿ ಒಂದು ಕೋಲು ಕಟ್ಟಿಕೊಂಡು ಹೋಗುವ ಪದ್ಧತಿಯಿದ್ದಿತೆಂದು ತಿಳಿಸುತ್ತಾರೆ.

8 ವಸ್ಸ್ಯರುವರ ಸಾಹಿತ್ಯ : ವಿಮರ್ಶೆ, ಭಾಗ-4, ಪು. 118.

# ಅಧ್ಯಯನ ನಡೆದು ಬಂದ ಹಾದಿಯ ಹಿನ್ನೋಟ

ಇದುವರೆವಿಗೂ ಹರಿದಾಸ ಆಂದೋಲನದ ಉಗಮ, ಸ್ವರೂಪ, ಸಾಹಿತ್ಯಾಭಿವ್ಯಕ್ತಿ, ಸಂಗೀತ, ಭಕ್ತಿ ಪ್ರಸರಣ, ಎಲ್ಲ ಕುರಿತು ವಿವೇಚಿಸಿದ್ದೇವೆ. ಹರಿದಾಸರ ಭಕ್ತಿ ಪಂಥ ಕ್ರಮೇಣ ಒಂದು ಆಂದೋಲನವೆ ಆಗಿ ಸಂಘಟಿತಗೊಂಡು ಬೆಳೆದು ಬಂದದ್ದರ ಸ್ವರೂಪ, ಪರಿ ಕುರಿತು ತಿಳಿಯಪಡಿಸಿದೆ. ಈ ಅಧ್ಯಯನದಿಂದ ತಿಳಿದು ಬಂದ ಕೆಲವು ಅಂಶಗಳನ್ನು ಮನಗಾಣಿಸಬಹುದಾಗಿದೆ :

1. ಹರಿದಾಸರನ್ನು–ಅವರ ಸಾಹಿತ್ಯವನ್ನೂ ಕುರಿತ ಬಿಡಿ ಬಿಡಿ ಅಧ್ಯಯನ ನಡೆದಿದ್ದು ಒಂದು ಆಂದೋಲನ (Movement) ಆಗಿ ಪರಿಗಣಿಸಿ ನಡೆಸಿರುವ ಪ್ರಯತ್ನ ಇದು, ಮೊದಲನೆಯದೆನ್ನಿಸುತ್ತದೆ.
2. ಹರಿದಾಸ ಆಂದೋಲನವನ್ನು ಜಗತ್ತಿನ, ಭಾರತದ ವಿವಿಧೆಡೆ ಇದೇ ಯುಗದಲ್ಲಿ (ಕ್ರಿ. ಶ. 14 ರಿಂದ 19 ನೇ ಶತಮಾನದವರೆಗೆ) ನಡೆದ ಇತರ ಧಾರ್ಮಿಕ ಚಳುವಳಿಗಳೊಂದಿಗೆ ತುಲನೆ ಮಾಡಲಾಗಿದೆ.
3. ಹರಿದಾಸ ಸಂಪ್ರದಾಯವೆಂಬುದು ಹೇಗೆ ವೈಶಿಷ್ಟ್ಯಪೂರ್ಣ ಆಗಿದೆ ಎಂದು ಪ್ರತ್ಯೇಕವಾಗಿ ವಿವೇಚಿಸಲಾಗಿದೆ.
4. ಹರಿದಾಸ ಆಂದೋಲನವನ್ನು ವಚನಕಾರ ಆಂದೋಲನ ಹಾಗೂ ತಮಿಳ್ ನಾಡಿನ ವೈಷ್ಣವ ಸಂತರಾದ ಆಳ್ವಾರ್ ಆಂದೋಲನದೊಂದಿಗೆ ಹೋಲಿಸಿ ತೌಲನಿಕ ಸಮೀಕ್ಷೆ ನಡೆಸಿದ್ದೇವೆ.
5. ಹರಿದಾಸ ಸಾಹಿತ್ಯದ ಆದ್ಯ ಪ್ರವರ್ತಕ ಶ್ರೀಪಾದರಾಜರೆಂಬಂಥ ಶ್ರೀ ಜಿ. ವರದರಾಜರಾಯರ ನಿಲುವನ್ನು ಸಮರ್ಥಿಸಿದೆ.

ಹರಿದಾಸ ಸಾಹಿತ್ಯ ಒಂದು ತವನಿಧಿ, ಅಕ್ಷಯನಿಧಿ ಕೂಡ. ಇದರ ಸಾಹಿತ್ಯ ಸಂಪತ್ತಿ, (ಕದಳಿ ಖರ್ಜೂರ ದ್ರಾಕ್ಷಿ ಇದಕ್ಕೆ ಮಿಗಿಲಾಗಿ ಎನ್ನುವ ವಾದಿರಾಜರ ನುಡಿಯಂತೆ) ಭಾಷೆಯ ಬಳಕೆ[1] ಸಂಗೀತವನ್ನು ಹಾಲಿನಲ್ಲಿರುವ ಮಧುವಿನಂತೆ ಒಳಕೊಂಡ ರೀತಿ ಎಲ್ಲ ಗಮನಿಸುವಲ್ಲಿ ಹಾಗೂ ಬಿಡಿ ಬಿಡಿಯಾಗಿ ಹರಿದಾಸರ ಕೃತಿ ಪರಿಶೀಲಿಸುವಲ್ಲಿ ಅಧ್ಯಯನ ನಡೆಸಲು ಇನ್ನೂ ಆಕರ ಬೇಕಾವಷ್ಟಿದೆಯೆಂದೆನ್ನಿಸುತ್ತದೆ ಸೃಜನಶೀಲತೆಯ ದೃಷ್ಟಿಯಿಂದ ಬರು ಬರುತ್ತಾ ಇತ್ತೀಚಿನ ಹರಿದಾಸರ ಕೃತಿಗಳು ಚರ್ವಿತಚರ್ವಣವೆನಿಸಿದರೂ, ಅಲ್ಲಿ ಸಾಹಿತ್ಯ, ಆಂದೋಲನದ (Spirit) ಸತ್ವ ಕಂಡುಬರುತ್ತದೆ.

ಈ ದೃಷ್ಟಿಯಿಂದ ಹರಿದಾಸ ಉಗಮವೂ ಅನಾದಿ, ಆಂದೋಲನವೂ ಅಪಾರವೆಂದೆನಿಸುತ್ತದೆ. (ಹರಿಭಕ್ತಿಯಿರುವ ತನಕ ಹರಿದಾಸರಿರುವರೆಂಬಂತೆ.)

ಸಾಹಿತ್ಯದ ಅಂಗವಾದ ಭಾಷೆ ಬೆಳೆಯಲು ಇರುವ ಕಾರಣಗಳಲ್ಲಿ ಮುಖ್ಯವಾದದ್ದು, ಸಾಹಿತ್ಯದ ಅಂತಃಪ್ರೇರಣೆ ಅಂತಸ್ಸತ್ವ, ಇದು ಹರಿದಾಸರಿಂದ ಸಾಧಿತ ಆಗಿದೆ. ಅವರಿಂದ ಹಳಗನ್ನಡ, ನಡುಗನ್ನಡ ಹೊಸಗನ್ನಡ ಆಗಿ ಕನ್ನಡ ಸಾಹಿತ್ಯ ಹೊಸತಿರುವನ್ನ ಪಡೆದಂತಾಗಿದೆಯೆಂಬುದು ಸುವಿದಿತ.

ಈ ಎಲ್ಲ ದೃಷ್ಟಿಗಳಿಂದ, ಹರಿದಾಸ ಆಂದೋಲನ-ಒಂದು ಅಧ್ಯಯನ ನಡೆಯಬೇಕಿದ್ದದ್ದು, ಪ್ರಾಮಾಣಿಕ ಪ್ರಯತ್ನ ಇಲ್ಲಿನದು. ಏಕೆಂದರೆ, ಸಂಶೋಧನೆ ಯಾವಾಗಲೂ ಸತ್ಯಾನ್ವೇಷಣೆಗಾಗಿ ನಡೆಸುವ ಪ್ರಾಮಾಣಿಕ ಪ್ರಯತ್ನ. ಇದೇ ಇಲ್ಲಿ ನಡೆದಿರುವಂಥದು. "ಫಲವಿದು ಬಾಳ್ದುದಕೆ, ಸಿರಿನಿಲಯನ ಗುಣಗಳ ತಿಳಿದು ಭಜಿಸುವುದ", 'ಫಲವಿದು ಬಾಳ್ದುದಕೆ'ಂದರು ಶ್ರೀ ಜಗನ್ನಾಥದಾಸರು. ಹರಿದಾಸರ ಹರಿಭಕ್ತಿಯ ಈ ಆಂದೋಲನ ಮುಂದುವರಿಯಲಿ ಇದರಿಂದ ಸತ್‌ಆಲೋಚನೆ ಸದಾ ನೆಲಸಲಿ, ಎಂಬುದೆ ಈ ನಿಬಂಧದ ಫಲಶ್ರುತಿ.

ಅಡಿಟಿಪ್ಪಣಿಗಳು

1 ಶ್ರೀ ಸಿ. ಎಸ್. ರಾಮಚಂದ್ರರು ಡಾ|| ಜಿ. ವರದರಾಜಾಚಾರ್ಯರ ನೇತೃತ್ವದಲ್ಲಿ ಹರಿದಾಸ ಸಾಹಿತ್ಯ ಭಾಷಿಕ ಅಧ್ಯಯನ(Linguistic Study) ಕೈಗೊಂಡು, ವಿಶ್ವವಿದ್ಯಾನಿಲಯದಿಂದ ಪಿಹೆಚ್.ಡಿ. ಪಡೆದಿರುವ ನಿಬಂಧ

# ಅನುಬಂಧ ೧

## ಹರಿದಾಸರು ತಮ್ಮ ಕೃತಿಗಳಲ್ಲಿ ಪ್ರಸ್ತಾಪಿಸಿರುವ ಸ್ಥಳ-ಕ್ಷೇತ್ರಗಳು

| | | |
|---|---|---|
| ತಿರುಪತಿ | ಪಂಢರಾಪುರ | ಬೇಲೂರು |
| ಮನ್ನಾರು | ಕುಂಭಕೋಣಂ | ಕಂಚಿ |
| ಬಂಕಾಪುರ | ಅಳಗಿರಿ | ಹಂಪೆ |
| ದ್ವಾರಕಾ-ದ್ವಾರಾವತಿ | ಶ್ರೀರಂಗಪಟ್ಟಣ-ಪಶ್ಚಿಮದ ರಂಗಧಾಮ | ಕಾಶೀಕ್ಷೇತ್ರ |
| ಬದರಿ | ಪ್ರಯಾಗ | ಗಯಾ |
| ಹೊಳೆಹೊನ್ನೂರು | ಕೂಡಲಿ | ತೊರವೆ |
| ಉಮ್ಮತ್ತೂರು | ಗೋರಂಟೆ | ಘಟಿಕಾಚಲ |
| ಶೃಂಗೇರಿ | ಹೊನ್ನಾಳಿ | ಕೊಂಚೆಯೂರು ಚೆನ್ನ |
| ಅಹೋಬಲ | ಕದರಮಂಡಲಗಿ | ಕಾಗಿನೆಲೆ |
| ಗೋಕರ್ಣ | ರಾಮೇಶ್ವರ | ಕಾಳಹಸ್ತಿ |
| ಬಾಡ | ಯಾದವಗಿರಿ | ಕದಳಿ ಕದಳಿರಂಗ |
| ಭಾಗ್ಯಪುರ | ಪೇರಣಪುರ | ಮಣಿಪುರ |
| ಶ್ರೀಮಂತ್ರಾಲಯ | ಕೊಲ್ಲಾಪುರ | ಶ್ರೀಮುಷ್ಣ |
| ಕದರಿ | ಸೋದಾಕ್ಷೇತ್ರ | ಮಳಖೇಡ |
| ಮುಹಿಷಿ | ನವವೃಂದಾವನ | |

## ತಿರುಪತಿಯ ಶ್ರೀ ಶ್ರೀನಿವಾಸನಿಗೆ ಹರಿದಾಸರು ಪ್ರೀತಿಯಿಂದ ಕರೆದಿರುವ ವಿವಿಧ ಹೆಸರುಗಳು

| | | |
|---|---|---|
| ವೆಂಕಟ | ತಿರುಮಲ | ಪನ್ನಗಾದ್ರಿ ನಿವಾಸ |
| ವೆಂಕಟೇಶ | ತಿಮ್ಮಸೆಟ್ಟಿ | ಪನ್ನಗಾಚಲನಿವಾಸ |
| ವೆಂಕಟರನ್ನ | ತಿಮ್ಮರಾಯ | ಶ್ರೀಪ್ರಸನ್ನವೆಂಕಟ |
| ವೆಂಕಟರಮಣ | ತಿರುಮಲೇಶ | ಶ್ರೀಶ್ರೀನಿವಾಸ |
| ವೆಂಕಟನಾಯಕ | ತಿರುಪತಿ ನೆಲೆಯಾದಿಕೇಶವ | ಶ್ರೀವಿಧಾತ ವಂದ್ಯ |
| ವೆಂಕಟೇಶಪ್ರಭು | ತಿರುವೆಂಕಟಪ್ಪ | ಮೂಡಲಗಿರಿಯಪ್ಪ |

| | | |
|---|---|---|
| ವೆಂಕಟಸಿರಿನಿಲಯಂ | ಬೆಟ್ಟದೊಡೆಯಂ | ವರೂಡವಾದ್ರೀಶ |
| ವೆಂಕಟಶೈಲಾಧಿಪ | ಬೆಟ್ಟದ ವೆಂಕಟ | ಸ್ವಾಮಿಪುಷ್ಕರಿಣೀಶ |
| ವೆಂಕಟಾಚಲನಿಲಯಂ | ಉರಗಾದ್ರಿವಾಸ | ಗೋವಿಂದಸೆಟ್ಟಿ |
| ವೈಕುಂಠಪುರವಾಸ | ಉರಗಗಿರಿ ವೆಂಕಟ | ಭೋ ವೈಕುಂಟೇಶ |
| ವೆಂಕಟಾದ್ರಿ ಮಾಧವ | ಉರಗಗಿರಿಯ ವೆಂಕಟಾದ್ರಿ | ಕೇಶವ ಪಾತಾಳನಗಿರಿಗಳಿದವ |
| ಶ್ರೀವೆಂಕಟ | ಶೇಷಗಿರೀಶ | ಅಲಮೇಲು ಮಂಗಾಪತಿ |
| ವೆಂಕಟಾದ್ರಿವರದ | ಶೇಷಾದ್ರಿವಾಸ | ಶೇಷಾದ್ರಿ ತಟವಾಸ |
| ತಿಮ್ಮಪ್ಪ | ಶೇಷಗಿರಿನಿವಾಸ | ಶೇಷಗಿರಿವರ ತಿಮ್ಮರಾಯಂ |
| ತಿಮ್ಮಯ್ಯ | ಶೇಷಾಚಲಘನ್ನ | |

' ಇಲ್ಲಿ ದಿ॥ ಡಾ. ಜಿ. ವರದರಾಜರಾಯರ ನೆರವು ಅತ್ಯಮೂಲ್ಯವಾದದ್ದು.

# ಅನುಬಂಧ ೨

## ನರಹರಿತೀರ್ಥರ ಕೂರ್ಮ ಶಾಸನ ಪಾಠ

(ಸಂಸ್ಕೃತ ಶಾಸನ : ಎಪಿಗ್ರಾಫಿಯ ಇಂಡಿಕಾ ೬ನೇ ಸಂಪುಟ : ಸಂಖ್ಯೆ೨೫)

**1. ಶಾಸನ ದೊರೆತ ಸ್ಥಳ :**

ಶ್ರೀಕೂರ್ಮ-ಸಿಂಹಾಚಲ ದೇವಾಲಯಗಳು, ಆಂಧ್ರಪ್ರದೇಶ. ನರಹರಿತೀರ್ಥರು ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾಗಿದ್ದರೆನ್ನುವುದನ್ನು ಶಾಸನ ಸ್ಪಷ್ಟೀಕರಿಸುವುದಲ್ಲದೆ', ಅವರು ಕಳಿಂಗ ರಾಜಾಸ್ಥಾನದಲ್ಲಿ ಮಂತ್ರಿಗಳಾಗಿದ್ದುದೂ, ಕಳಿಂಗ ರಾಜನಿಂದ ಪಡೆದ ಶ್ರೀ ಮೂಲರಾಮ-ಸೀತಾಮಾತೆಯ ವಿಗ್ರಹಗಳನ್ನು ತಮ್ಮ ಗುರುಗಳಾದ ಶ್ರೀಮಧ್ವಾಚಾರ್ಯರಿಗೆ ಸಮರ್ಪಿಸಿದುದೂ ಶ್ರೀನರಹರಿ ಯತಿ ಸ್ತೋತ್ರವೆಂಬ ಕೃತಿಯಲ್ಲಿ ಪ್ರಸ್ತಾಪಿತ ಆಗದೆ ಬಂದಿದೆ.

**2. ಶಾಸನದ ಕಾಲ : ಕ್ರಿ. ಶ. 1264–1294 ರವರೆಗೆ**

ಶ್ರೀನರಹರಿತೀರ್ಥರ ಕುರಿತು ಒಂಬತ್ತು ಶಾಸನಗಳು ದೊರೆತಿವೆಯೆನ್ನಲಾಗಿದೆ. ಕಳಿಂಗ ಆಂಧ್ರದ ಅನೇಕ ರಾಜ ಮನೆತನ-ಶ್ರೀಮಂತರನ್ನು ಮಧ್ವಮತದ ಪರಿವಲಯದೊಳಪಡಿಸಿದ ಯಶಸ್ಸು ನರಹರಿತೀರ್ಥರದು.

1. ದೇವಃ ಶ್ರೀ ಕಮಲಾವಿಲಾಸಲಹರೀಪಾತ್ರಂ ಕಲಿ ಪ್ರೋಲ್ಲಸತ್
ಕ್ಲೇಶಕ್ಲಿಷ್ಟಜನೇಖಿಲಕ್ಷಿತಿತಲೇ ಸಂಲೀನ ಬೋಧೋದಯೇ ।
ಸ್ವೀಯಂ ಶ್ರೀಪದ ಪಂಕಜೈಕಶರಣಾನ್ ಸಂರಕ್ಷಿತುಂ ಸನ್ಮುನಿ ।
ಜಾತಃ ಶ್ರೀ ಪುರುಷೋತ್ತಮಾಭಿಧ ಮಹಾತೀರ್ಥಃ ಸುಮಂತ್ಯಗ್ರಣೀ ।

2. ಯನ್ಮುನಿಭಾಷಿತಭಾಷ್ಯಂ ಭೂಷ್ಯಂ ಕಿಲ ತೀರ್ಥಿಕಪ್ರವರ ಸಂಘೇ ।
ಉನ್ಮದವಾದಿದ್ವಿರದ ಪ್ರತಿಕುಂಭಮಂಕುಶಂ ಭವತಿ

3. ಸತ್ಯ ಜ್ಞಾನಕಲಾ ಕಲೋದಯ ಪೈಯಾಸಿಕಂ ಗೋಗಣಂ
ಮಂದೈರ್ಭಿನ್ನಪಥಪ್ರದಾರಿತಮಲಂ ಸುವ್ಯಕ್ತಭೇದೇಪಥಿ ।
ನೇತುಂ ಸಂಧೃತದಂಡಮಂಡಿತ ಕರೋ ಯಃ ಪ್ರಾದುರಾಸೀನ್ಮುನಿ-
ವ್ರಾತ್ಯೈಃ ಸೇವ್ಯಪದಾರವಿಂದಯುಗಳಾದಾನಂದತೀರ್ಥೋ ಮುನಿಃ ॥

4. ಯನ್ಮುಖ ನೀಸ್ಸೃತಭಾಷಾ ಲಲಿತಾ ಲಲಿತಪ್ರಕಾರ ಪದವಿನ್ಯಾಸಾ
ಕಮಲಾಪತಿ ಪದಕಮಲಂ ಭಜತೇ ಭಜಮಾನಭವ ಭಯಾರಾತಿಂ ॥

5. ಆನಂದತೀರ್ಥಭಗವತ್ಪಾದಾಚಾರ್ಯ ಸರಸ್ವತೀ ।
ಲೋಕೇತ್ರ ಹರಿಪಾದಾಬ್ಜಯುಗಳ ಪ್ರಾಪ್ತಯೇನಂ ಸಾ ॥

6. ತಸ್ಮಾಲ್ಲೋಕ ಸುರಕ್ಷಣಾತಿ ನಿಪುಣಾತ್ ಸಂಪ್ರಾಪ್ತಕರ್ತವ್ಯವ್ಯಧೀ
ದ್ವೇಧಾಮಂತ್ರ ತಥಾತ್ರ ಯೋವತಿ ಜನಾನ್ ಕಾಳಿಂಗ ಭೂಸಂಭವಾನ್ ।
ಪಿತ್ರಾಚಾರ ಮಪ್ಯೈತಿ ಸೂನುರಿತಿ ಸನ್ನೀತಿಸ್ಥಿತೋ ಧರ್ಮತಃ
ಶತ್ರುಕ್ಷ್ಮಾಪತಿವರ್ಗದುರ್ಗ ನಿವಹಾನ್ ಭೀತಾನ್ ಅಭೀತಃ ಸ್ವಯಂ ॥

7. ಯಶ್ಚ ಶ್ರೀ ಕಮಠಾಧಿನಾಯಕ ಮಹಾಕಾರ್ಯೈಕ ಬದ್ಧವತಃ
ತಸ್ಯ ಪ್ರಚ್ಯುತಿವಾರಣಾಯ ಶಬರಾನೀಕಕ್ಷಿತಿ ಧ್ರಾಶನಿಂ
ಧತ್ತೇ ಸತ್ಕರವಾಲಮಸ್ಯ ತಟತಾ ಸಂತ್ಯಕ್ತ ಜೀವೇ ರಿಪೌ
ಹಂತವ್ಯಾನ್ ಅವಶೇಷಣಾನ್ ನಿಜವಿಧಿರ್ನೋ ಯಸ್ಯ ಬೋಧ್ಯಸ್ತರಾಂ ॥

8. ತೇನಾನೇನ ಶ್ರೀಮನ್ನರಿಹರಿತೀರ್ಥಾಖ್ಯಮುನಿವರೇಣ್ಯೇನ
ಕಲಿಸಮಯಂ ಪ್ರಹ್ಲಾದ ಪರಿತೋಷ್ಯ ನೃಹರಿರೂಪೇಣ ॥

9. ಸ್ವಸ್ತಿ ಶ್ರೀ ಶಕವತ್ಸರೇ ಹಂತವಹವ್ಯೋಮದ್ವಯಕ್ಷ್ಮಾಯಂತೇ
ಮೇಷೇ ಶುಕ್ಲಶಾಂಕಶೇಖರದಿನೇ ವಾರೇ ಚ ಸೌಮ್ಯೇವರೇ ।
ಪ್ರಾಸಾದಂ ಕಮಠಾಧಿಪಸ್ಯ ಪುರತೋ ನಿರ್ಮಾಯ ಶರ್ಮಪ್ರದೋ
ಯೋಗಾನಂದನೃಸಿಂಹ ಏಷ ಭಗವಾನ್ ಪ್ರೀತ್ಯಾ ಪ್ರತಿಷ್ಠಾಧಿಪಃ ॥

# ಅನುಬಂಧ ೩

## "ಜಯೇಶವಿಠಲ"ರ ಅಪ್ರಕಟಿತ ಕೃತಿ

ಮೈಸೂರಿನಲ್ಲಿ ಕಟ್ಟೇಮನೆ ಅಟ್ಟಾಚೀ ವೆಂಕಟರಾಯರು (೧೮೬೮-೧೯೩೨) ೨೦ನೇ ಶತಕದ ಹರಿದಾಸಸಾಹಿತ್ಯದಲ್ಲಿ ದೊಡ್ಡ ಹೆಸರು. ವಿಜಯದಾಸರ ಸಾಕು ಮಕ್ಕಳಾದ ಮೋಹನದಾಸರ ಪೀಳಿಗೆಯಲ್ಲಿ ಬಂದ ಹರಿದಾಸ ಶ್ರೇಷ್ಠರವರು. ಇವರ ಅನೇಕ ಕೃತಿಗಳು ಪ್ರಕಟಗೊಂಡಿಲ್ಲ. ಇಲ್ಲಿ ಉದಾಹರಣೆಗಾಗಿ ಒಂದು ಕೃತಿಯನ್ನು ಉದ್ಧರಿಸಲಾಗಿದೆ. ರಾಧಾಕೃಷ್ಣ ಮಧುರಭಕ್ತಿ, ಸ್ತುತಿಯೇ ಈ ಕೀರ್ತನಗಳ ಸಾರ. ಹಾಗೂ ಇವು ಹರಿದಾಸ ಆಂದೋಲನ ಮುಂದುವರಿದಂದರ ದ್ಯೋತಕವೆನಿಸುತ್ತವೆ.

ಪತಿತ ಪಾವನ ರಂಗ ಸತತ ಕಾಯೋ ।
ಗತಿಯಾರು ನಿನ್ನುಳಿದು ಶೃತಿವಿನುತ ಗೋಪಾಲ ॥ಪ॥

ಆದಿಮೂಲನು ನೀನು ಆದಿರಹಿತನೆ ಸ್ವಾಮಿ ।
ಸಾಧ್ಯ ಸಾಧಕ ಸೇವ್ಯ । ಸೇವಕನ ಕೃಷ್ಣಾ ।
ಭಾಧ್ಯ ಭಾಧಕ ರಮಾರಾಧ್ಯ ಚಿತ್ಸುಖ ಸುಖಸಿಂಧು
ಕಾದುಕೋ ನಿನ್ನವನ । ಆದಿರೋಗವ ಕಳೆದೂ ॥ 1 ॥

ನಾರಿ ದ್ರೌಪದಿ ಮಾನ ಕಾಯ್ದ ವಿಖ್ಯಾತನೆ ಶೌರಿ ।
ಕ್ರೂರ ನಕ್ರನ ಕೊಂದು ಕರಿಯ ಪೊರೆದೇ ।
ಹಾರಿ ಹಾವಿನ ಹೆಡೆಯ ಮೆಟ್ಟಿ ನರ್ತನಗೈದೆ ।
ಕ್ರೂರ ಫಣಿಯನು । ಪೊರೆದು ಅಕ್ರೂರ ಸನ್ನುತಪಾಹೀ ॥2॥

ಪೋತಧ್ರುವ ಪ್ರಹ್ಲಾದ ಪುಂಡರೀಕರ ಪಾಲ ।
ಖ್ಯಾತ ಅಜಮಿಳನ ವಿಜಯಸೂತ ॥
ಭೀತಿರಹಿತನ ಮಾಡು ಮಾತರೀಶ್ವನ ದೇವ ।
ದಾತ ಜಯೇಶ ವಿಠಲ ನೀಅಭಯ ಪಾಲಿಸೋ ದೊರೆಯೇ ॥3॥

# ಗ್ರಂಥಸೂಚಿ

## ಹರಿದಾಸರ ಪ್ರಕಟಿತ ಕೃತಿಗಳು

**ಸಮಗ್ರ ಹರಿದಾಸ ಕೀರ್ತನ ತರಂಗಿಣಿಯ ಭಾಗಗಳು**

ಹರಿದಾಸರ ಉಗಾಭೋಗಗಳು : ಹರಿದಾಸರ ಗೋಪಾಲದಾಸರು, ಚಾಮರಾಜಪೇಟೆ, ಬೆಂಗಳೂರು.

ಶ್ರೀ ಜಗನ್ನಾಥದಾಸರ ಶ್ರೀಮದ್ಧರಿಕಥಾಮೃತಸಾರ, ಶ್ರೀಹರಿವಿಠಲ ಪ್ರಕಾಶನ, ಬೆಂಗಳೂರು.

ಶ್ರೀಜಗನ್ನಾಥದಾಸರ ಕೃತಿಗಳು, ಡಾ|| ಕೆ. ಎಂ. ಕೃಷ್ಣರಾವ್, ಬೆಂಗಳೂರು.

ಶ್ರೀ ವಿಜಯದಾಸರ ಉಗಾಭೋಗಗಳು, ಡಾ|| ಕೆ: ಗೋಕುಲ್‌ನಾಥ್, ಬೆಂಗಳೂರು.

ಶ್ರೀ ಪುರಂದರದಾಸರ ಹಾಡುಗಳು, ಟಿ ಎನ್ ಕೃಷ್ಣಯ್ಯಶೆಟ್ಟಿ.

ಶ್ರೀ ಪುರಂದರದಾಸರ ಹಾಡುಗಳು, ಭಾಗ 1 ಮತ್ತು 4, ಪಾವಂಜೆ ಗುರುರಾವ್, ಉಡುಪಿ.

ಶ್ರೀ ಪುರಂದರ ದಾಸಸಾಹಿತ್ಯ, ಮಿಂಚಿನ ಬಳ್ಳಿ, ಧಾರವಾಡ.
ಪೂಜಾತತ್ತ್ವ, ಆರ್ತಭಾವ, ಮಹಾತ್ಮ್ಯಜ್ಞಾನ, ಶ್ರೀ ಕೃಷ್ಣಲೀಲೆ, ಲೋಕನೀತಿ ಸಂಕೀರ್ಣ ಸಂಗ್ರಹ : ಡಾ|| ಬೆಟಗೇರಿ ಕೃಷ್ಣ ಶರ್ಮ, ಬೆಟಗೇರಿ ಹುಚ್ಚೂರಾಯರ ಸಂಪಾದಿತ ಕೃತಿ ಸಂಪುಟ (1964–1965).

ಶ್ರೀ ಕನಕದಾಸರ ಕೀರ್ತನೆಗಳು, ಡಾ|| ಕೆ ಎಂ ಕೃಷ್ಣರಾವ್, ಕನಕದಾಸರ ಚತುರ್ಥ ಶತಮಾನೋತ್ಸವ ಸಮಿತಿ, ಬೆಂಗಳೂರು.

ಶ್ರೀ ಕನಕದಾಸರ ಭಕ್ತಿಗೀತೆಗಳು, ಬೆಟಗೇರಿ ಕೃಷ್ಣಶರ್ಮ, ಸಮಾಜ ಪುಸ್ತಕಾಲಯ, ಧಾರವಾಡ (1965).

ಹರಿದಾಸಭಕ್ತಿ ಸಾಧನೆ (ತಾರತಮ್ಯ ಗೀತಾವಳಿ) ಬುರ್ಲಿ ಬಿಂದು ಮಾಧವ, ಮಿಂಚಿನಬಳ್ಳಿ, ಧಾರವಾಡ.

ಹರಿಭಕ್ತಿವಾಹಿನಿ, ಡಾ|| ಜಿ ವರದರಾಜರಾವ್, ಪ್ರಥಮ ಕನ್ನಡ ವಿಶ್ವ ಸಮ್ಮೇಳನ ಸಮಿತಿ, ಬೆಂಗಳೂರು.

**ಮೈಸೂರು ವಿಶ್ವ ವಿದ್ಯಾನಿಲಯದ ಪ್ರಕಟಣೆಗಳು**

ಶ್ರೀಪಾದರಾಜರ ಕೃತಿಗಳು (ಪಂಡಿತ ಆವೃತ್ತಿ), (1973),
ಸಂ. ಡಾ|| ಜಿ ವರದರಾಜಾರಾವ್

ಶ್ರೀ ಗೋಪಾಲದಾಸರ ಕೃತಿಗಳು, ಡಾ॥ ಟಿ ವರದರಾಜಾರಾವ್.
ಶ್ರೀ ವಾದಿರಾಜರ ಕೃತಿಗಳು (ಪಂಡಿತ ಆವೃತ್ತಿ). ಸಂ, ಡಾ॥ ಟಿ ಎನ್ ನಾಗರತ್ನ
ಶ್ರೀ ಮಹೀಪತಿರಾಯರ ಕೃತಿಗಳು, ಡಾ॥ ಟಿ ವರದರಾಜಾರಾವ್
ಶ್ರೀ ಮಹೀಪತಿರಾಯರ ಹಾಡುಗಳು, ಸಂ, ಕಾವ್ಯಪ್ರೇಮಿ, ಸಮಾಜ ಪುಸ್ತಕಾಲಯ, ಧಾರವಾಡ.
ಶ್ರೀ ವ್ಯಾಸರಾಯರ ಹಾಡುಗಳು, ಸಂ : ಕಾವ್ಯಪ್ರೇಮಿ –,,–
ಶ್ರೀಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು –,,–
ಶ್ರೀ ಜಗನ್ನಾಥದಾಸರ ಹಾಡುಗಳು. –,,–
ಶ್ರೀ ಪ್ರಸನ್ನ ವೆಂಕಟದಾಸರ ಹಾಡುಗಳು, –,,–
ಶ್ರೀ ಜಗನ್ನಾಥದಾಸರ 'ತತ್ವ ಸುವ್ವಾಲಿ', ಸಂ. ಪ್ರಭಂಜನ ವ್ಯಾಸರಾಯರ ಕೆರೆ, ತುಮಕೂರು.
ಶ್ರೀಹರಿಕಥಾಮೃತಸಾರ, ಡಾ॥ ಕೆ ಎಂ ಕೃಷ್ಣರಾವ್, ಬೆಂಗಳೂರು.
ಶ್ರೀಹರಿಕಥಾಮೃತಸಾರ, ಕಲಮಂದಾನಿ, ಧಾರವಾಡ.
ಕನಕದಾಸರ ಹರಿಭಕ್ತಿಸಾರ, ಎನ್ ರಂಗನಾಥಶರ್ಮ
ಕನಕದಾಸರ ನಳಚರಿತ್ರೆ, ಸಂ. ಬಿ ಎಸ್ ಸಣ್ಣಯ್ಯ
ಕನಕದಾಸರ ಮೋಹನತರಂಗಿಣಿ, ಸಂ. ಆರ್ ಸಿ ಹಿರೇಮಠ
ಕನಕದಾಸರ ರಾಮಧಾನ್ಯ ಚರಿತ್ರೆ, ಸಂ. ದೇ ಜವರೇಗೌಡ
ಶ್ರೀ ವಿಜಯದಾಸರ ಸುಳಾದಿಗಳು, ಸು. ಹನುಮಂತರಾವ್ ಗೋರಬಾಳ, ಶ್ರೀ ವರದೇಂದ್ರ ಹರಿದಾಸಸಾಹಿತ್ಯ ಗ್ರಂಥಮಾಲೆ, ಲಿಂಗಸೂಗೂರು.
ವಿಜಯದಾಸರ ಪ್ರಾರ್ಥನಾ ಭಾಗ ಸುಳಾದಿಗಳು
ತೀರ್ಥಕ್ಷೇತ್ರ ಮಹಿಮಾ ಸುಳಾದಿಗಳು
ಸಾಧನ ಭಾಗ ಸುಳಾದಿಗಳು ಭಾಗ 1 ಮತ್ತು 2
ಪ್ರಮೇಯ ಭಾಗ ಸುಳಾದಿಗಳು
ಸ್ತೋತ್ರ ಭಾಗ ಸುಳಾದಿಗಳು
ಉಪಾಸನಾ ಭಾಗ ಸುಳಾದಿಗಳು
ಶ್ರೀ ಗೋಪಾಲವಿಠ್ಠಲರ ಮತ್ತು ಇತರ ಹರಿದಾಸರ ಸುಳಾದಿ
ಶ್ರೀ ವಿಜಯದಾಸರ ಸೃಷ್ಟಿಪ್ರಕರಣ ಸುಳಾದಿಗಳು
ಹರಿದಾಸರ ವಿವಿಧ ಆಧ್ಯಾತ್ಮಿಕ ನಿಬಂಧಗಳು
ಹರಿದಾಸರ ಪದ–ಸುಳಾದಿಗಳು
ಶ್ರೀ ಗೋಪಾಲದಾಸವರ್ಯಾದಿ ಹರಿದಾಸರ ಸ್ತೋತ್ರ ಪದಗಳು
ಶ್ರೀ ಪುರಂದರದಾಸರ ಸುಳಾದಿಗಳು
ಶ್ರೀ ಪ್ರಾಣೇಶದಾಸಕೃತ ಶ್ರೀ ರತ್ನಾಕರ ಸುತಾ ಸ್ತುತಿ

